





# "ಈಗೇನ್ ರೋಡ್ ಆಗ್ಯಾವಲ್ರೀ, ಭಾರಿ ಬೆಸ್ಟ್ ಆಗ್ಯಾವ ಹೋಗ್ಲಕ್ಕ, ಬರ್ಲಕ್ಕ ಭಾರಿ ಆನಂದ..."

## "ಗ್ರಾಮ ಸ್ವರಾಜ್ಯ - ಸ್ವಾವಲಂಬಿ ಭಾರತ"

ಇದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಕಂಡಿದ್ದ ಕನಸು. ಇದನ್ನು ನನಸಾಗಿಸ´
'ರ್ನಾಟಕ ಸರ್ಕಾರ ಹಲವು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸುತ್ತಿದೆ".

**ಸಿದ್ದರಾಮಯ್ಯ**
ಮುಖ್ಯಮಂತ್ರಿಗಳು

**ಎಚ್.ಕೆ. ಪಾಟೀಲ್**
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್‌ರಾಜ್ ಸಚಿವರು

**ಆರ್. ರೋಷನ್ ಬೇಗ್**
ಮೂಲಸೌಲಭ್ಯ ಅಭಿವೃದ್ಧಿ,
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಹಜ್ ಸಚಿವರು






## ಹಳ್ಳಿಗಳಿಗೆ ಸದೃಢ ಕಾಂಕ್ರೀಟ್ ರಸ್ತೆಗಳು

• **ಗ್ರಾಮ ವಿಕಾಸ್** ಯೋಜನೆಯಡಿ **1000** ಗ್ರಾಮಗಳ ವಿಕಾಸಕ್ಕೆ **750** ಕೋಟಿ ರೂ.ಗಳ ಅನುದಾನ. **375** ಕೋಟಿ ರೂ.ಗಳು ಗ್ರಾಮೀಣ ಕಾಂಕ್ರೀಟ್ ರಸ್ತೆ ನಿರ್ಮಾಣಕ್ಕೆ ಕ್ರಮ • **"ನಮ್ಮ ಗ್ರಾಮ ನಮ್ಮ ರಸ್ತೆ"** ಯೋಜನೆಗೆ **2676** ಕೋಟಿ ರೂ.ಗಳ ಅನುದಾನ. **3855**ಕಿ.ಮೀ. ಗ್ರಾಮೀಣ ರಸ್ತೆಗಳ ಉನ್ನತೀಕರಣ ಪ್ರಗತಿಯಲ್ಲಿ • ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹಭಾಗಿತ್ವದ **ಪ್ರಧಾನ ಮಂತ್ರಿ ಗ್ರಾಮ ಸಡಕ್** ಯೋಜನೆಗೆ **1044** ಕೋಟಿ ರೂ.ಗಳ ಅನುದಾನ. **2246**ಕಿ.ಮೀ. ಗ್ರಾಮೀಣ ರಸ್ತೆಗಳ ಉನ್ನತೀಕರಣಕ್ಕೆ ಕ್ರಮ

ಪ್ರಕಟಣೆ : ನಿರ್ದೇಶಕರು,
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

ಹೆಚ್ಚಿನ ಮಾಹಿತಿಗೆ ನಿಮ್ಮ ಗ್ರಾಮ ಪಂಚಾಯಿತಿಯನ್ನು ಸಂಪರ್ಕಿಸಿ
**ಸಹಾಯವಾಣಿ : 1800 425 8666**

ಕರ್ನಾಟಕ ವಾರ್ತೆ




# ಅತ್ಯಲ್ಪ ದರಕ್ಕೆ
## ಅತ್ಯುತ್ತಮ ಗುಣಮಟ್ಟದ
# ಕುಡಿಯುವ ನೀರು




**'ಗ್ರಾಮ ಸ್ವರಾಜ್ಯ - ಸ್ವಾವಲಂಬಿ ಭಾರತ'**

ಇದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಕಂಡಿದ್ದ ಕನಸು. ಇದನ್ನು ನನಸಾಗಿಸಲು ಕರ್ನಾಟಕ ಸರ್ಕಾರವು ಹಲವಾರು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸುತ್ತಿದೆ.

**ಸಿದ್ದರಾಮಯ್ಯ**
ಮುಖ್ಯಮಂತ್ರಿಗಳು

**ಎಚ್.ಕೆ. ಪಾಟೀಲ್**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು

**ಆರ್. ರೋಷನ್ ಬೇಗ್**
ಮೂಲಸೌಲಭ್ಯ ಅಭಿವೃದ್ಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಹಜ್ ಸಚಿವರು




7000 ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸುವ ಗುರಿ

ಈಗಾಗಲೇ 894 ಘಟಕಗಳ ಸ್ಥಾಪನೆ

ನದಿ, ಕಾಲುವೆ, ಕೆರೆಗಳ ನೀರನ್ನು ಶುದ್ಧೀಕರಿಸಿ ಪೂರೈಸಲು ಕ್ರಮ




ಹೆಚ್ಚಿನ ಮಾಹಿತಿಗೆ ನಿಮ್ಮ ಗ್ರಾಮ ಪಂಚಾಯಿತಿಯನ್ನು ಸಂಪರ್ಕಿಸಿ

ಸಹಾಯವಾಣಿ : **1800 425 8666**

ಪ್ರಕಟಣೆ : ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

ಕರ್ನಾಟಕ ವಾರ್ತೆ



ಕೆನರಾ ಬ್ಯಾಂಕ್
ಭಾರತ ಸರ್ಕಾರದ ಒಂದು ಉದ್ಯಮ

Canara Bank
A Government of India Undertaking
Together We Can

# ಜೀವನದ ಮಹೋನ್ನತ ಕ್ಷಣಗಳನ್ನು ಆನಂದಿಸಿರಿ

## ಕೆನರಾ ಗೃಹ ಸಾಲ

**9.65%** ವಾರ್ಷಿಕ
ಇಎಂಐ **₹852/-** ಪ್ರತಿ ಲಕ್ಷಕ್ಕೆ*

- ಕಡಿಮೆ ಬಡ್ಡಿದರ • ಶೀಘ್ರ ಸಂಸ್ಕರಣ
- ಮರುಪಾವತಿ: 30 ವರ್ಷಗಳವರೆಗೆ
- ಅವಧಿ ಪೂರ್ವ ಪಾವತಿಗೆ ದಂಡವಿಲ್ಲ* (ಷರತ್ತುಗಳು ಅನ್ವಯ)

## ಕೆನರಾ ವಾಹನ ಸಾಲ

**9.90%** ವಾರ್ಷಿಕ (ಮಹಿಳೆಯರಿಗೆ)
ಇಎಂಐ **₹1655/-** ಪ್ರತಿ ಲಕ್ಷಕ್ಕೆ*

**9.95%** ವಾರ್ಷಿಕ (ಪುರುಷರಿಗೆ)
ಇಎಂಐ **₹1658/-** ಪ್ರತಿ ಲಕ್ಷಕ್ಕೆ*

- ಹೊಸ ವಾಹನ ಖರೀದಿಗೆ 90% ರ ವರೆಗೆ ಸಾಲ
- ಮರುಪಾವತಿ: 7 ವರ್ಷಗಳ ವರೆಗೆ

**ಜನವರಿ 31, 2016ರವರೆಗೆ ಸಂಸ್ಕರಣಾ ಶುಲ್ಕವಿರುವುದಿಲ್ಲ.**

ಗೃಹ ಸಾಲ ಪಡೆಯುವುದರೊಂದಿಗೆ ರೂ. 2 ಲಕ್ಷಗಳವರೆಗೆ 2015–16 ನಿಯೋಜಿತ ವರ್ಷದ ಆದಾಯ ತೆರಿಗೆ ವಿನಾಯಿತಿ ಪಡೆಯಿರಿ*.






ದಯವಿಟ್ಟು ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆ / ರಿಟೇಲ್ ಅಸೆಟ್ ಹಬ್‌ಗೆ ಭೇಟಿ ಕೊಡಿ ಅಥವಾ **www.canarabank.com** ಮೂಲಕ ಆನ್‌ಲೈನ್ ಅರ್ಜಿ ಸಲ್ಲಿಸಿ.






ಶುಲ್ಕ ರಹಿತ ಸಂ: 1800 425 0018 | ಮರ ಉಳಿಸಿ. ನೀರು ಉಳಿಸಿ. ಪರಿಸರ ಉಳಿಸಿ. | www.canarabank.com



ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೬ ಜನವರಿ ೨೦೧೬





**■ ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

**■ ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಈ ತಿಂಗಳು



ದೆಹಲಿಯಲ್ಲಿ ಭಾಜಪವನ್ನು ಸೋಲಿಸಿ ಆಮ್ ಆದ್ಮಿ ಪಾರ್ಟಿ ಅಧಿಕಾರಕ್ಕೆ ಬಂದಾಗಿನಿಂದ ಕೇಂದ್ರ ಹಾಗೂ ರಾಜ್ಯ ಸರಕಾರಗಳ ನಡುವೆ ಜಟಾಪಟಿ ನಡೆಯುತ್ತಲೇ ಇದೆ. ಚುನಾವಣೆಯ ಸಮಯದಲ್ಲೇ ನರೇಂದ್ರ ಮೋದಿ ಆಪ್ ನಾಯಕ ಅರವಿಂದ ಕೇಜ್ರಿವಾಲ್‌ರನ್ನು 'ಅರಾಜಕ' ಎಂದು ಮೂದಲಿಸಿದ್ದರು. ಆಗಿನಿಂದ ಈ ಇಬ್ಬರ ಮಧ್ಯೆ ಕೆಸರೆರೆಚಾಟ ನಡೆದೇ ಇದೆ. ದೆಹಲಿ ಆಡಳಿತ ಇತರ ರಾಜ್ಯಗಳಂತೆ ಪೂರ್ಣವಾದ ಅಧಿಕಾರ ಹೊಂದಿಲ್ಲ. ಒಂದು ಬಗೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರ ಎರಡೂ ಅಧಿಕಾರ ಚಲಾಯಿಸುತ್ತವೆ. ಮುಖ್ಯವಾಗಿ ಲೆಫ್ಟಿನೆಂಟ್ ಗವರ್ನರ್‌ಗೆ ಅಧಿಕಾರ ಹೆಚ್ಚಾಗಿರುವುದರಿಂದ ರಾಜ್ಯ ಸರಕಾರಕ್ಕೆ ಇರಸುಮುರಸು. ಮುಖ್ಯವಾಗಿ ಪೊಲೀಸು ಇಲಾಖೆ ಕೇಂದ್ರದ ಸುಪರ್ದಿನಲ್ಲಿರುವುದು, ಅಧಿಕಾರಿಗಳ ನೇಮಕಾತಿಯಲ್ಲಿ ಕೇಂದ್ರ ಮೂಗು ತೂರಿಸುವುದು ಇನ್ನಷ್ಟು ಮುಜುಗರ. ಕೇಜ್ರಿವಾಲ್ ಮುಖ್ಯಮಂತ್ರಿಯಾದ ಮೇಲೆ ಲೆಫ್ಟಿನೆಂಟ್ ಗವರ್ನರ್ ಜೊತೆ ಒಂದು ಸುತ್ತಿನ ಜಗಳ ಮುಗಿಯಿತು, ಅಧಿಕಾರಿ ನೇಮಕಾತಿ ಕುರಿತು ಈಗ ಕೇಂದ್ರದ ಜೊತೆ ಇನ್ನೊಂದು ಸುತ್ತು ಕದನ ನಡೆದಿದೆ. ಕೇಂದ್ರದ ಭಾಜಪ ಸರಕಾರ ದೆಹಲಿ ಸರಕಾರಕ್ಕೆ ಒಂದಲ್ಲ ಒಂದು ಕಿರುಕುಳ ನೀಡುತ್ತಲೇ ಬಂದಿದೆ. ಅಧಿಕಾರ ಕೈಯಲ್ಲಿರುವುದರಿಂದ ಎದುರಾಳಿಗಳನ್ನು ಹಿಂಸಿಸಲು ಆದಾಯ ತೆರಿಗೆ ಇಲಾಖೆ, ಅದರ ಎನ್‌ಫೋರ್ಸ್‌ಮೆಂಟ್ ಡೈರೆಕ್ಟರೇಟ್, ಸಿಬಿಐ ಎರಡನ್ನೂ ಹರಿಬಿಡುತ್ತದೆ. ಈ ಎರಡೂ ಕೂಡ ಸ್ವಾಯತ್ತ ಸಂಸ್ಥೆಗಳು ಹೆಸರಿಗೆ. ಸಿಬಿಐ ಇರುವುದು ನೇರವಾಗಿ ಪ್ರಧಾನಿ ಕಚೇರಿಯ ಕೈಕೆಳಗೆ. ಈ ತನಿಖಾ ಏಜನ್ಸಿ ಅಸ್ತಿತ್ವಕ್ಕೆ ಬಂದಾಗಿನಿಂದ ಪ್ರಧಾನಿಯಾಗಿರುವವರು ಅದನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡಿದ್ದಾರೆ. ಈ ಬಾರಿ ಸಿಬಿಐ ಕೇಜ್ರಿವಾಲ್ ಆಪ್ತ ಕಾರ್ಯದರ್ಶಿ ಕಚೇರಿಯ ಮೇಲೆ ದಾಳಿ ನಡೆಸಿ ಕೆಲವು ದಾಖಲೆಗಳನ್ನು ವಶಪಡಿಸಿಕೊಂಡಿದೆ. ಕೇಜ್ರಿವಾಲ್ ಕಚೇರಿಯ ಮೇಲೂ ದಾಳಿ ನಡೆದಿದೆ ಎಂದು ಆರೋಪವೂ ಇದೆ. ಈ ಘಟನೆ ಪಾರ್ಲಿಮೆಂಟಿನಲ್ಲೂ ಪ್ರತಿಧ್ವನಿಸಿ, ವಿಪಕ್ಷಗಳನ್ನು ರೊಚ್ಚಿಗೆಬ್ಬಿಸಿದೆ. ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುವುದು, ರಾಜ್ಯಪಾಲರುಗಳನ್ನು ರಾಜಕೀಯ ದಾಳವಾಗಿ ಬಳಸಿಕೊಳ್ಳುವುದು ಕೇಂದ್ರ ಸರಕಾರದ ಜಾಯಮಾನ ಮೊದಲಿಂದಲೂ. ನರೇಂದ್ರ ಮೋದಿ ಸರಕಾರ ಈ ಪರಂಪರೆ ಮುಂದುವರಿಸಿದೆಯಲ್ಲದೆ ಎಲ್ಲದರಲ್ಲೂ ಒಂದು ಹೆಜ್ಜೆ ಮುಂದಿದೆ. ದೆಹಲಿ ಮುಖ್ಯಮಂತ್ರಿ ಕೇಜ್ರಿವಾಲ್ ಸಿಬಿಐ ದಾಳಿ ಕುರಿತು ಕೇಂದ್ರ ಸರಕಾರವನ್ನು ತರಾಟೆಗೆ ತೆಗೆದುಕೊಂಡಿದೆ. ಕೇಜ್ರಿವಾಲ್ ನರೇಂದ್ರ ಮೋದಿಯನ್ನು 'ಹುಚ್ಚ' ಎಂದು ಕರೆದು ದೂಳೆಬ್ಬಿಸಿದ್ದಾರೆ. ಮಾಧ್ಯಮಗಳಿಗೆ ಇದರಿಂದ ಖುಷಿ ಟಿಆರ್‌ಪಿ ವರ್ಧಿಸಿಕೊಳ್ಳಲು. ಇಷ್ಟಕ್ಕೂ ಈ ಎಲ್ಲ ಅಬ್ಬರಕ್ಕೆ ಮೂಲ ಕಾರಣ ಹಣಕಾಸಿನ ಸಚಿವ ಅರುಣ್ ಜೇಟ್ಲಿಯ ಮೇಲೆ ದೆಹಲಿ ಸರಕಾರ ನಡೆಸುತ್ತಿರುವ ಭ್ರಷ್ಟಾಚಾರದ ಆರೋಪ. ದೆಹಲಿ ಕ್ರಿಕೆಟ್ ಸಂಸ್ಥೆಯ ಅಧ್ಯಕ್ಷರಾಗಿದ್ದ ಅರುಣ್ ಜೇಟ್ಲಿಯ ಮೇಲೆ ಬಂದಿರುವ ಅವ್ಯವಹಾರದ ಆರೋಪ. ಇದು ಎಲ್ಲಿಗೆ ಮುಟ್ಟುತ್ತದೋ ನೋಡಬೇಕು.

* * *

ಅರುಣ್ ಜೇಟ್ಲಿ ಕೂಡ ಭಾಜಪದಲ್ಲಿ ಒಂದು ಕಾಲದಲ್ಲಿ




ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಸಂಚಿಕೆ | ₹ ೫೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಪ್ರಧಾನಿ ಅಭ್ಯರ್ಥಿ. ಈಗ ನರೇಂದ್ರ ಮೋದಿಯ ಆಪ್ತವಲಯದಲ್ಲಿರುವ ತ್ರಿಮೂರ್ತಿಗಳ ಪೈಕಿ ಒಬ್ಬರು, ಉಳಿದಿಬ್ಬರು ರಾಜನಾಥ ಸಿಂಗ್ ಮತ್ತು ವೆಂಕಯ್ಯ ನಾಯಿಡು. ಮೋದಿ ಸಂಪುಟದಲ್ಲಿ ಹಣಕಾಸಿನ ಸಚಿವ ಸ್ಥಾನ ಜೇಟ್ಲಿ ಗಿಟ್ಟಿಸಿ ಕೊಂಡಿದ್ದರೆ, ರಾಜನಾಥ ಸಿಂಗ್ ಗೃಹಸಚಿವರಾಗಿದ್ದಾರೆ. ದೇಶದಲ್ಲಿ ಏನೇ ದುರ್ಘಟನೆ ಸಂಭವಿಸಿದರೂ ಮೋದಿ ಪರವಾಗಿ ವಕಾಲತ್ತು ವಹಿಸುವವರು ಈ ಮೂರು ಮಂದಿ. ದಿವ್ಯ ಮೌನ ಅಭ್ಯಾಸ ಮಾಡಿಕೊಂಡಿರುವ ಮೋದಿ ಈ ತ್ರಿಮೂರ್ತಿಗಳಿಗೆ ನಾಲಿಗೆ ಹರಿಬಿಡಲು ಅಧಿಕಾರ ನೀಡಿದ್ದಾರೆ. ಪಾರ್ಲಿಮೆಂಟಿನಲ್ಲಿ ವಿಪಕ್ಷಗಳ ಟೀಕೆಗಳಿಗೆ ಉತ್ತರ ನೀಡುವವರು ಕೂಡ ಇವರೆ. ಅದರಲ್ಲೂ ಅರುಣ್ ಜೇಟ್ಲಿ ಈಗ ಮೋದಿಯ ಕಟ್ಟಾ ಅಭಿಮಾನಿಯಾಗಿಬಿಟ್ಟಿದ್ದಾರೆ. ವಕೀಲ ವೃತ್ತಿಯಲ್ಲಿ ಹೆಸರು ಮಾಡಿರುವ ಈತ ಚುರುಕು ನಾಲಿಗೆಗೆ ಹೆಸರುವಾಸಿ. ವಾಜಪೇಯಿ ಸರಕಾರದಲ್ಲೂ ಮಂತ್ರಿಯಾಗಿ ಅನುಭವ ಪಡೆದವರು. ಈಗ ನರೇಂದ್ರ ಮೋದಿ ಪರ ವಕಾಲತ್ತು ವಹಿಸಿದ್ದಾರೆ. ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆ ಕುರಿತಾಗಿ ಪ್ರತಿಕ್ರಿಯಿಸಿದಾಗ, ಪ್ರಶಸ್ತಿ ವಾಪಸಾತಿಯನ್ನು ಹೀಯಾಳಿಸಿದಾಗ 'ಕಾಂಗ್ರೆಸ್ ಪ್ರೇರಿತ' ಎಂದು ಕರೆದದ್ದು ಜೇಟ್ಲಿಯೆ. ೨೦೦೨ರಿಂದಲೂ ಮೋದಿ 'ಸೈದ್ಧಾಂತಿಕ ಅಸಹಿಷ್ಣುತೆ'ಗೆ ಬಲಿಯಾಗಿದ್ದಾರೆ ಎಂದು ವಾದಿಸಿರುವವರೂ ಕೂಡ ಜೇಟ್ಲಿ. ಫೇಸ್‌ಬುಕ್, ಟ್ವಿಟ್ಟರ್ ಮುಂತಾದ ಸೋಷಿಯಲ್ ಮೀಡಿಯಾಗಳಲ್ಲಿ 'ಸೊಸೈಟಲ್ ಇಂಟಾಲರನ್ಸ್', 'ಐಡಿಯಲಾಜಿಕಲ್ ಇಂಟಾಲರೆನ್ಸ್', 'ಆರ್ಕೆಸ್ಟ್ರೇಟೆಡ್ ಅಟೆಂಪ್ಟ್' ಮುಂತಾದ ಪದಗುಚ್ಛಗಳನ್ನು ಹೊಸೆದಿರುವ ಅರುಣ್ ಜೇಟ್ಲಿ ಕಾರ್ಪೊರೇಟ್ ವಲಯದ ಕಣ್ಮಣಿ.

✶ ✶ ✶

'ಕೆಟ್ಟಮೇಲೆ ಬುದ್ಧಿ ಬಂತು' ಎಂಬ ನುಡಿಕಟ್ಟು ಕನ್ನಡದಲ್ಲಿದೆ. ಇದನ್ನು ಯಾವುದೇ ವಿಚಾರಕ್ಕೂ ಅನ್ವಯಿಸಬಹುದು. ಸದ್ಯಕ್ಕೆ ಇದು ಅನ್ವಯವಾಗುವುದು ಇಂಡಿಯನ್ ಸೈನ್ಸ್ ಕಾಂಗ್ರೆಸ್ಸಿಗೆ. ಜನವರಿ ೨೦೧೬ರಲ್ಲಿ ಮೈಸೂರಿನಲ್ಲಿ ನಡೆಯುವ ವಿಜ್ಞಾನ ಸಮಾವೇಶದಲ್ಲಿ ಯಾವುದೇ ಬಗೆಯ ಪೌರಾಣಿಕ ಕಗ್ಗವನ್ನೂ ಹತ್ತಿರ ಸುಳಿಯದಂತೆ ನೋಡಿಕೊಳ್ಳಲಾಗುವುದು ಎಂದು ಸಂಘಟಕರು ಹೇಳಿರುವುದು ಸ್ವಾಗತಾರ್ಹ. ಇಂಡಿಯನ್ ಸೈನ್ಸ್ ಕಾಂಗ್ರೆಸ್ ಅಸೋಸಿಯೇಶನ್ನಿನ ಅಧ್ಯಕ್ಷ ಅಶೋಕ ಕುಮಾರ್ ಸಕ್ಸೇನ ವೈಜ್ಞಾನಿಕ ಆಧಾರವಿಲ್ಲದ ಯಾವುದೇ ಕಥಾನಕಕ್ಕೂ ಅವಕಾಶ ನೀಡುವುದಿಲ್ಲ ಎಂದು ಸ್ಪಷ್ಟವಾಗಿ ಘೋಷಿಸಿದ್ದಾರೆ. ಕಳೆದ ವರ್ಷ ಜರುಗಿದ ಇದೇ ವೈಜ್ಞಾನಿಕ ಮೇಳದಲ್ಲಿ 'ಸಂಸ್ಕೃತದ ಮೂಲಕ ಪುರಾತನ ವಿಜ್ಞಾನ' ಎಂಬ ವಿಶೇಷ ಕಲಾಪವನ್ನು ಈ ಸಲ ಕೈಬಿಡಲಾಗಿದೆ. ಈ ಭಾಗದ ಅಧಿವೇಶನವನ್ನು ೨೦೧೫ರಲ್ಲಿ ಪರಿಸರ ಸಚಿವ ಪ್ರಕಾಶ ಜಾವೇಡ್ಕರ್ ಉದ್ಘಾಟಿಸಿದ್ದರು. ಮುಂಬಯಿಯಲ್ಲಿ ಜರುಗಿದ ಈ ವೈಜ್ಞಾನಿಕ ಸಮ್ಮೇಳನವನ್ನು ಉದ್ಘಾಟನೆ ಮಾಡಿದ್ದು ಪ್ರಧಾನಿ ನರೇಂದ್ರ ಮೋದಿ. ಅಧಿಕಾರಕ್ಕೆ ಬಂದ ಹೊಸ ಹುರುಪಿನಲ್ಲಿ ದೇಸಿ ಹಾಗೂ ವಿದೇಶಿ ವಿಜ್ಞಾನಿಗಳ ಸಮ್ಮುಖದಲ್ಲಿ ಆಚಾರ್ಯ ಮೋದಿ ನಮ್ಮ ಪೂರ್ವಿಕರಿಗೆ ಕಾಸ್ಮೆಟಿಕ್ ಸರ್ಜರಿ, ಕೃತಕ ಗರ್ಭಧಾರಣೆ ಮುಂತಾದ ಚಿಕಿತ್ಸಾ ವಿಧಾನಗಳು ತಿಳಿದಿತ್ತು ಎಂಬುದಾಗಿ ಅಪ್ಪಣೆ ಕೊಡಿಸಿದರು. ಇದಕ್ಕೆ ಉದಾಹರಣೆಯಾಗಿ ವಿನಾಯಕನಿಗೆ ಆನೆ ತಲೆ ಜೋಡಿಸಿದ ವೃತ್ತಾಂತವನ್ನು, ಮಹಾಭಾರತದ ಕರ್ಣನ ಜನನವನ್ನು ಉದಾಹರಣೆಯಾಗಿ ನೀಡಿದ್ದರು. ಪಾಪ ವಿಜ್ಞಾನಿಗಳು ಈ ಶುದ್ಧ ಅವೈಜ್ಞಾನಿಕ ವಿತಂಡವಾದವನ್ನು ಮುಜುಗರಪಟ್ಟುಕೊಂಡು ತೆಪ್ಪಗೆ ನುಂಗಿಕೊಳ್ಳಬೇಕಾಗಿ ಬಂದಿತ್ತು. ಸಾರ್ವಜನಿಕ ವಲಯದಲ್ಲಿ ಇದು ಸಾಕಷ್ಟು ಕಸಿವಿಸಿ ಉಂಟುಮಾಡಿತ್ತು. ಎಲ್ಲಕ್ಕೂ ವೇದಗಳ ಕಾಲದಲ್ಲಿ ನಮ್ಮ ಭಾರತೀಯರು ಸರ್ವಜ್ಞರಾಗಿದ್ದರು, ವಿಜ್ಞಾನ, ತಂತ್ರಜ್ಞಾನದಲ್ಲಿ ಮೆರೆದಿದ್ದರು ಎಂದು ಕೊಚ್ಚಿಕೊಳ್ಳುವುದು ಹಿಂದುತ್ವವಾದಿಗಳ ಜಾಯಮಾನ. ಈಗ ಅವರೇ ಅಧಿಕಾರದಲ್ಲಿರುವುದರಿಂದ ಅದು ಆಧುನಿಕ ವಿಜ್ಞಾನದ ಪವಿತ್ರವಾದ ಮೆಟ್ಟಿಲನ್ನು ಏರಿತ್ತು.

✶ ✶ ✶

ಬಲಪಂಥೀಯ ಹಿಂದುತ್ವವಾದಿಗಳು ಅಧಿಕಾರಕ್ಕೆ ಬಂದಮೇಲೆ ಅವರ ಕೆಂಗಣ್ಣು ಮೊದಲು ಬೀಳುವುದು ಇತಿಹಾಸಕಾರರ ಮೇಲೆ. ಇತಿಹಾಸವನ್ನು ತಿರುಚಿ, ಕಾಲಮಾನವನ್ನು ಆದಷ್ಟು ಹಿಂದಕ್ಕೆ ತಳ್ಳಿ, ವೈದಿಕ ಸಂಸ್ಕೃತಿಯನ್ನು ವೈಭವೀಕರಿಸುವುದರಲ್ಲಿ ಆರೆಸ್ಸೆಸ್, ಭಾಜಪ ಸಿದ್ಧಾಂತಿಗಳು ನಿಸ್ಸೀಮರು. ವೈಜ್ಞಾನಿಕ ಆಧಾರವಿಲ್ಲದ, ಪುರಾಣ ಕತೆಗಳನ್ನೇ ಇತಿಹಾಸವೆಂದು ಸಾಬೀತು ಮಾಡುವುದೇ ಇವರ ಕೆಲಸ. ಭಾರತದಲ್ಲಿ ಮೊಗಲರ ಆಳ್ವಿಕೆಯನ್ನು ಕಪ್ಪುಚುಕ್ಕೆ ಎಂದು ಬಿಂಬಿಸುವ ಇವರು ಮೊದಲು ಹರಿಹಾಯುವುದು ಭಾರತೀಯ ಇತಿಹಾಸ ಸಂಶೋಧನಾ ಪರಿಷತ್ತು (ಐಸಿಎಚ್‌ಆರ್) ಸಂಸ್ಥೆಯ ಮೇಲೆ ಹಾಗೂ ವಿದ್ಯಾಸಂಸ್ಥೆಗಳ ಮೇಲೆ ಪಠ್ಯಪುಸ್ತಕಗಳನ್ನು ಪರಿಷ್ಕರಿಸಿ ಹಿಂದುತ್ವ ವಾದವನ್ನು ತುರುಕುವುದು, ಅಂತರರಾಷ್ಟ್ರೀಯ ಮಾನ್ಯತೆ ಪಡೆದಿರುವ ಇತಿಹಾಸಕಾರರನ್ನು ಮೂಲೆಗೊತ್ತುವುದು ಇವರ ಕಾಯಕ. ವಾಜಪೇಯಿ ಪ್ರಧಾನಿಯಾಗಿದ್ದಾಗಲೂ ಇಂಥದ್ದೇ ಕಾರುಬಾರು, ಮೋದಿ ಬಂದಮೇಲೆ ಉಗ್ರ ಹಿಂದುತ್ವವಾದ ಬಿರುಸಾಗಿದೆ. ಐಸಿಎಚ್‌ಆರ್‌ನ ಪದಾಧಿಕಾರಿಗಳನ್ನು ಬದಲಿಸುವುದರಿಂದ ಹಿಡಿದು ತಮ್ಮ ಸಿದ್ಧಾಂತಕ್ಕೆ ಒಗ್ಗದವರನ್ನು ಕಡೆಗಣಿಸುವುದು ಎಗ್ಗಿಲ್ಲದೆ ನಡೆದಿದೆ.

ನೂರು ವರ್ಷಗಳ ಹಿಂದೆ ೧೯೩೫ರಲ್ಲಿ ಇತಿಹಾಸ ಸಂಶೋಧನೆ ಮತ್ತು ಅಧ್ಯಯನ ಉದ್ದೇಶದಿಂದ ಖ್ಯಾತ ಇತಿಹಾಸ ತಜ್ಞರಾದ ಮೊಹಮ್ಮದ್ ಹಬೀಬ್, ಆರ್. ಪಿ. ತ್ರಿಪಾಠಿ, ಮಹೇಶ್ವರಿ ಪ್ರಸಾದ್ ಮತ್ತಿತರರು ಸ್ಥಾಪಿಸಿದ್ದ ಇತಿಹಾಸ ಕಾಂಗ್ರೆಸ್ ಈಗ ಮೋದಿ ಆಡಳಿತದ ಅವಗಣನೆಗೆ ಗುರಿಯಾಗಿದೆ. ಅದು ಪ್ರತಿ ವರ್ಷವೂ ನಡೆಸುತ್ತಿದ್ದ ಅಧಿವೇಶನಕ್ಕೆ ನೀಡುತ್ತ ಬಂದಿದ್ದ ಐದು ಲಕ್ಷ ರೂಪಾಯಿ ಅನುದಾನವನ್ನು ರದ್ದುಪಡಿಸಲಾಗಿದೆ. ಈ ಸಂಸ್ಥೆಗೆ ನೀಡಿದ್ದ ವಿಶೇಷ ಸ್ಥಾನಮಾನವನ್ನೂ ಸರಕಾರ ಹಿಂಪಡೆದಿದೆ. ರಾಷ್ಟ್ರೀಯ ಇತಿಹಾಸ ಸಮ್ಮೇಳನ ಸೇರಿದಂತೆ ಹಲವು ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸುತ್ತ ಬಂದಿರುವ ಭಾರತೀಯ ಇತಿಹಾಸ ಕಾಂಗ್ರೆಸ್ ಈಗ ಪೇಚಿನಲ್ಲಿದೆ. ಈ ವರ್ಷ ಅನುದಾನ ನಿಲ್ಲಿಸಿರುವುದರಿಂದ ಅಧಿವೇಶನ ನಡೆಸಲು ಹಣ ಹೊಂದಿಸುವುದು ಹೇಗೆ ಎನ್ನುವುದು ಸಂಸ್ಥೆಯ ಪದಾಧಿಕಾರಿಗಳಿಗೆ ಚಿಂತೆಯಾಗಿದೆ. ಭಾಜಪ ಸರಕಾರ ಮುಂದಿನ ದಿನಗಳಲ್ಲಿ ಇನ್ನೂ ಯಾವ ಯಾವ ಸಂಸ್ಥೆಗಳಿಗೆ ಅನುದಾನ ಕತ್ತರಿಸುವುದೊ ನೋಡಬೇಕು.

✶ ✶ ✶

ರಾಜ್ಯಪಾಲರ ಹುದ್ದೆ ಅಲಂಕಾರಿಕ, ದುಬಾರಿ ವೆಚ್ಚದ್ದು, ತೆರಿಗೆದಾರರ ಹಣದ ಪೋಲು ಎನ್ನುವುದರಲ್ಲಿ ಎರಡು ಮಾತಿಲ್ಲ. ಇದರ ವಿರುದ್ಧವಾಗಿ, ಇದನ್ನು ರದ್ದುಗೊಳಿಸಬೇಕೆಂದು ಎಡಪಕ್ಷಗಳು ಸಂವಿಧಾನದ ರಚನೆಯ ಸಂದರ್ಭದಲ್ಲೂ, ಆ ನಂತರವೂ ಸಾಕಷ್ಟು ಒತ್ತಾಯ ತಂದಿದ್ದುವು. ಈ ಹುದ್ದೆ ರಾಜಕೀಯವಾಗಿ ದುರುಪಯೋಗವಾಗುವ ಸಂಭವ ಹೆಚ್ಚು ಎಂದು ಅವು ಎಚ್ಚರಿಸಿದ್ದುವು. ಈಗ ಅದು ಅಕ್ಷರಶಃ ನಿಜವಾಗಿದೆ. ರಾಜ್ಯಪಾಲರ ಅಧಿಕಾರವನ್ನು ಬಳಸಿಕೊಂಡು ಕೇಂದ್ರ ಸರಕಾರ ಕೇರಳ ರಾಜ್ಯದ ಕಮ್ಯುನಿಸ್ಟ್ ಸರಕಾರವನ್ನು ಶಾಸನಸಭೆಯಲ್ಲಿ ಬಹುಮತ ಹೊಂದಿದ್ದರೂ ಪದಚ್ಯುತಗೊಳಿಸಿದ್ದು ಮೊದಲನೆಯ ಘಟನೆ. ಅನಂತರ ಆಂಧ್ರಪ್ರದೇಶದ ತೆಲುಗು ದೇಶಮ್ ಪಕ್ಷದ ಸರಕಾರದ ಸರದಿ. ಕರ್ನಾಟಕದಲ್ಲಿ ಜನತಾ ಪರಿವಾರದ ಬೊಮ್ಮಾಯಿ ಸರಕಾರ ವಜಾ ಆದ ಮೇಲೆ ಸುಪ್ರೀಮ್ ಕೋರ್ಟು ಎಚ್ಚತ್ತುಕೊಂಡಿದ್ದು, ಬಹುಮತ ಹೊಂದಿರುವ ಸರಕಾರವನ್ನು ಪದಚ್ಯುತಿಗೊಳಿಸುವಂತಿಲ್ಲ ಎಂದು ತಾಕೀತು ಮಾಡಿದ್ದು. ಈಗ ಅದೆಲ್ಲ ಹಳೆಯ ಕತೆ. ಆದರೆ ಈಗ ರಾಜ್ಯಪಾಲರನ್ನು ವಿಪಕ್ಷಗಳ ಸರಕಾರಕ್ಕೆ ಇಲ್ಲದ ಕಿರುಕುಳ ನೀಡಲು ಉಪಯೋಗಿಸಿಕೊಳ್ಳಲಾಗುತ್ತಿದೆ. ಕರ್ನಾಟಕದಲ್ಲಿ ಈಗಿರುವ ರಾಜ್ಯಪಾಲರು, ಹಿಂದೆ ಇದ್ದವರು ಇಬ್ಬರನ್ನೂ ಯುಪಿಎ ಸರಕಾರ ಮತ್ತು ಎನ್‌ಡಿಎ ಸರಕಾರ ಹೇಗೆ ಉಪಯೋಗಿಸಿಕೊಂಡಿದೆ ಎಂಬುದನ್ನು ನೋಡುತ್ತಿದ್ದೇವೆ. ರಾಜ್ಯಪಾಲರ ಹುದ್ದೆ ಇರುವುದೇ ಕಿತಾಪತಿ ಮಾಡುವುದಕ್ಕೆ ಎನ್ನುವಂತೆ ಕೇಂದ್ರದಲ್ಲಿ ಆಡಳಿತ ವಹಿಸಿಕೊಳ್ಳುವ ಪಕ್ಷ ತಮಗೆ ಬೇಕಾದವರನ್ನು ಹುದ್ದೆಗೆ ನೇಮಕ ಮಾಡಿಕೊಳ್ಳುತ್ತದೆ. ನಿರುದ್ಯೋಗಿ ರಾಜಕಾರಣಿಗಳಿಗೆ ಇದೊಂದು ಆಶ್ರಯ ತಾಣ. ಇತ್ತೀಚಿನ ಉದಾಹರಣೆ ಎಂದರೆ ಅರುಣಾಚಲ ಪ್ರದೇಶದ ರಾಜ್ಯಪಾಲರ ಅನುಚಿತ ವರ್ತನೆ. ಶಾಸನಸಭೆಯ ದಿನಾಂಕವನ್ನು ಏಕಪಕ್ಷೀಯವಾಗಿ ರಾಜ್ಯಪಾಲರು ಬದಲಾಯಿಸಿದ್ದು ಸರಕಾರದೊಂದಿಗೆ ಸಮಾಲೋಚಿಸದೆ, ಅಲ್ಲಿರುವ ಕಾಂಗ್ರೆಸ್ ಸರಕಾರವನ್ನು ಪಲ್ಲಟಗೊಳಿಸುವುದು ಭಾಜಪದ ಉದ್ದೇಶ. ಸದ್ಯಕ್ಕೆ

ನ್ಯಾಯಾಲಯದ ಮಧ್ಯಪ್ರವೇಶದಿಂದ ಪರಿಸ್ಥಿತಿ ಶಮನಗೊಂಡಿದೆ.

ರಾಜ್ಯಪಾಲರಿಗೆ ನೀಡುವ ವೇತನ, ನೀಡುವ ಸವಲತ್ತುಗಳು ಎಲ್ಲವೂ ಈಚೆಗೆ ತುಂಬಾ ದುಬಾರಿಯಾಗುತ್ತಿದೆ. ಬಂಗಲೆ, ಸಿಬ್ಬಂದಿ ಖರ್ಚು ಬೇರೆ. ಅಲ್ಲದೆ ಅದು ಭ್ರಷ್ಟಾಚಾರದ ಕೇಂದ್ರವೂ ಆಗುತ್ತಿದೆ. ರಾಜ್ಯ ವಿಶ್ವವಿದ್ಯಾನಿಲಯಗಳ ಉಪಕುಲಪತಿಗಳ ನೇಮಕಾತಿಯ ವಿಚಾರದಲ್ಲಿ ಅವ್ಯವಹಾರಗಳಾಗುತ್ತಿರುವುದು ತಿಳಿಯದ ಸಂಗತಿ ಏನಲ್ಲ. ಒಂದು ರೀತಿಯ ವ್ಯಾಪಾರವೇ ನಡೆದುಹೋಗುತ್ತದೆ ರಾಜಭವನಗಳಲ್ಲಿ ಎನ್ನುವ ಆರೋಪ ಇದೆ. ಅದು ಹೋಗಲಿ, ಏಕೆಂದರೆ ಭ್ರಷ್ಟಾಚಾರದಲ್ಲಿ ಹುಲುಮಾನವರಷ್ಟೇ ಭಗವಂತನೂ ಪಾಲುದಾರ. ಹಣ ಸುರಿದವರಿಗೇ ಹರಿಹರರ ಕೃಪೆ ಅಲ್ಲವೆ? ಒಬ್ಬೊಬ್ಬ ರಾಜ್ಯಪಾಲರು ಹೊಸದಾಗಿ ನೇಮಕಗೊಂಡಾಗಲೂ ರಾಜಭವನದ ದುರಸ್ತಿಗೆ, ಅಲಂಕರಣಕ್ಕೆ, ಪೀಠೋಪಕರಣಗಳಿಗೆ ಹಿಂದೆ ಲಕ್ಷಗಟ್ಟಲೆ ಖರ್ಚಾಗುತ್ತಿದ್ದುದು ಈಗ ಕೋಟಿಗಟ್ಟಲೆ ಆಗುತ್ತಿದೆ. ಕೆಲವು ರಾಜ್ಯಪಾಲರುಗಳು ನಿವೃತ್ತರಾದಾಗ ಪೀಠೋಪಕರಣಗಳನ್ನು ಸಾಗಿಸಿಕೊಂಡು ಹೋಗಿರುವ ಪ್ರಕರಣಗಳೂ ಇವೆ. ಕರ್ನಾಟಕದಲ್ಲಿ ಇಂಥವನ್ನು ನಾವು ಕಂಡಿದ್ದೇವೆ. ಹೇಗೆ ನೋಡಿದರೂ ಈ ಅಲಂಕಾರಿಕ ರಾಜ್ಯಪಾಲರ ಹುದ್ದೆ ಜನರ ಮೇಲೆ ಒಂದು ಹೊರೆಯೇ ಹೊರತು ಬೇರೇನೂ ಅಲ್ಲ.

* * *

ಭಾರತದ ಕೈಗಾರಿಕೋದ್ಯಮ ತಯಾರಿಸುವ ಸರಕುಗಳು ಯಾವತ್ತೂ ಪೈಪೋಟಿಯಲ್ಲಿ ಹಿಂದೆ. ನಮ್ಮ ಉದ್ಯಮಗಳು ತಯಾರಿಸುವ ಪದಾರ್ಥಗಳು ಅಂತರರಾಷ್ಟ್ರೀಯ ಮಟ್ಟದ್ದಾಗಿದ್ದು ಉತ್ಕೃಷ್ಟವಾಗಿದ್ದರೂ ವಿದೇಶೀ ಪೈಪೋಟಿಯನ್ನು ಎದುರಿಸಲಾಗದೆ ಇದೆ. ಇದು ದೀರ್ಘಕಾಲದ ವಸಾಹತು ಆಳ್ವಿಕೆಯ ಪರಿಣಾಮಗಳಲ್ಲಿ ಒಂದೇನೋ. ವಸಾಹತು ಆಡಳಿತದ ಕಾಲದಲ್ಲಿ ದೇಶೀ ಉದ್ಯಮಗಳು ಬೆಳೆಯುವುದಕ್ಕೆ ಅವಕಾಶವೇ ಇರಲಿಲ್ಲ ಎನ್ನುವುದು ನಿಜ. ಏನೇ ಬೆಳವಣಿಗೆಯಾಗಿದ್ದರೂ ಅದು ಹತ್ತೊಂಭತ್ತನೇ ಶತಮಾನದ ಅರವತ್ತರ ದಶಕದ ನಂತರ. ಸರಕಾರಿ ಕ್ಷೇತ್ರದಲ್ಲಿ ಭಾರಿ ಉದ್ಯಮಗಳ ಸ್ಥಾಪನೆ ಒಂದು ಕಡೆಯಾದರೆ, ಸಣ್ಣ ಕೈಗಾರಿಕೆಗಳಿಗೆ ನೀಡಿದ ಪ್ರೋತ್ಸಾಹ ಇನ್ನೊಂದು ಕಡೆ. ಸಾಕಷ್ಟು ನಿರ್ಬಂಧಗಳಿದ್ದುದರಿಂದ ದೇಸೀ ಮಾರುಕಟ್ಟೆಯಲ್ಲಿ ಅವಕ್ಕೆ ಬೇಡಿಕೆ ವ್ಯಾಪಕವಾಗಿತ್ತು. ಆದರೆ ಎಂಭತ್ತರ ದಶಕದಲ್ಲಿ ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳಕ್ಕೆ ಆದ್ಯತೆ ಮೊದಲಾದ ಸರಕಾರಿ ನೀತಿಗಳಿಂದಾಗಿ ಸಣ್ಣ ಕೈಗಾರಿಕೋದ್ಯಮ ಸೊರಗಿತಾದರೆ, ಉದ್ದೇಶಪೂರ್ವಕವಾಗಿ ಸರಕಾರೀ ಕ್ಷೇತ್ರದ ಉದ್ಯಮಗಳನ್ನು ಶಿಥಿಲಗೊಳಿಸಿ, ಅವುಗಳ ಪೈಕಿ ಅನೇಕವನ್ನು ಖಾಸಗಿಯವರಿಗೆ ವಿಕ್ರಯಿಸಲಾಯಿತು. ಇವೆಲ್ಲ ಹಳೆ ಕತೆ ಎನಿಸಿದರೂ ಅದರ ಪರಿಣಾಮ ಮಾತ್ರ ಅಭಿವೃದ್ಧಿಗೆ ಮಾರಕವಾಗಿದೆ. ಕಾರ್ಪೊರೇಟ್ ವಲಯ ಬೃಹದಾಕಾರವಾಗಿ ಬೆಳೆದಿದ್ದರೂ ಅಷ್ಟೇ ಪ್ರಮಾಣದಲ್ಲಿ ಬಿಕ್ಕಟ್ಟನ್ನೂ ಎದುರಿಸುತ್ತಿದೆ.

ಮೋದಿ ಸರಕಾರದ ಅಭಿವೃದ್ಧಿ ಮಂತ್ರದ ಮೋಡಿಗೆ, ಶುದ್ಧ ಉತ್ತಮ ಆಡಳಿತಕ್ಕೆ ಮಾರುಹೋದ ಕಾರ್ಪೊರೇಟ್ ವಲಯ ಭಾಜಪಕ್ಕೆ ನೀಡಿದ ಬೆಂಬಲ ರಹಸ್ಯವೇನಲ್ಲ. ಇನ್ನೂ ಎರಡು ವರ್ಷ ಮುಗಿದಿಲ್ಲ, ಆಗಲೇ ಭಾರತೀಯ ಉದ್ಯಮದಲ್ಲಿ ಆತಂಕ ಮೂಡತೊಡಗಿದೆ. 'ಮೇಕ್ ಇನ್ ಇಂಡಿಯ' ಘೋಷಣೆ ಭಾರತೀಯ ತಯಾರಿಕಾ ವಲಯಕ್ಕೆ ಮಾರಕವಾಗಲಿದೆ ಎಂಬ ಆತಂಕ ಉದ್ಯಮಿಗಳಲ್ಲಿ ಉಂಟಾಗುತ್ತಿದೆ. ಇದಕ್ಕೆ ಎರಡು ಕಾರಣಗಳು – ಒಂದು ವಿದೇಶೀ ಬಂಡವಾಳ ಕುರಿತು ಮೋದಿ ಸರಕಾರ ಪ್ರಕಟಿಸಿರುವ ಹೊಸ ನೀತಿ ಹಾಗೂ ಬೆಳೆಯುತ್ತಿರುವ ಆನ್‌ಲೈನ್ ಮಾರಾಟ. 'ಸೆಲ್ಫಿ' ವ್ಯಾಮೋಹದ ಮೋದಿ ಇ-ಕಾಮರ್ಸ್‌ಅನ್ನು ಸರ್ವವ್ಯಾಪಿಯಾಗಿ ಮಾಡಲು ನೋಡುತ್ತಿದೆ. ರಕ್ಷಣಾ ವಲಯ, ಗೃಹ ನಿರ್ಮಾಣ, ನಾಗರಿಕ ವಿಮಾನಯಾನ, ಎಫ್‌ಎಂ ರೇಡಿಯೋ, ಒಂದೇ ಬ್ರಾಂಡ್ ಸರಕಿನ ವ್ಯಾಪಾರ, ಖಾಸಗಿ ಬ್ಯಾಂಕುಗಳು ಮತ್ತು ತಯಾರಿಕಾ ಕ್ಷೇತ್ರ ಮೊದಲಾದ ಹದಿನೈದು ಉದ್ಯಮ ಕ್ಷೇತ್ರಗಳಲ್ಲಿ ವಿದೇಶೀ ಬಂಡವಾಳ ಹೂಡಿಕೆಗೆ ಎಲ್ಲ ನಿರ್ಬಂಧಗಳನ್ನು ತೊಡೆದುಹಾಕಿ, ನೂರಕ್ಕೆ ನೂರರಷ್ಟು ಪಾಲು ಅವಕಾಶ ನೀಡಿ ಈಚೆಗೆ ಹೊರಡಿಸಿರುವ ಸರಕಾರದ ಆಜ್ಞೆ ಉದ್ಯಮಿಗಳಲ್ಲಿ ಆತಂಕ ಮೂಡಿಸಿದೆ. ತಯಾರಿಕ ಕ್ಷೇತ್ರದಲ್ಲಿ ವಿದೇಶೀಯರ ಪೈಪೋಟಿ ಅಧಿಕವಾಗುವುದರಿಂದ ಭಾರತೀಯ ಉದ್ಯಮಿಗಳು ಕಳವಳ ವ್ಯಕ್ತಪಡಿಸಿದ್ದಾರೆ. ತಯಾರಿಕಾ ಕ್ಷೇತ್ರಕ್ಕೆ ಸಂಬಂಧಿಸಿದ ಹಾಗೆ ಸರಕಾರ ನೀಡಿರುವ ನಿರೂಪಣೆ ದೇಸೀ ಉದ್ಯಮಗಳಿಗೆ ಮಾರಕವಾಗುವುದೆಂಬ ಭೀತಿ ಆವರಿಸಿದೆ.

ಅದೇ ರೀತಿಯಲ್ಲಿ ಬೆಳೆಯುತ್ತಿರುವ ಆನ್‌ಲೈನ್ ಮಾರಾಟ ವ್ಯಾಪಾರಸ್ಥರಿಗೆ ತಲೆನೋವಾಗಿದೆ. ಸರಕಾರ ಈ ಬಗ್ಗೆ ಇನ್ನೂ ನಿಯಮಾವಳಿಯನ್ನು ರೂಪಿಸಿಲ್ಲ. ಇ-ಕಾಮರ್ಸ್ ವ್ಯವಹಾರದ ನಿಯಂತ್ರಣಕ್ಕೆ. ಅದು ನಿಯಮ ರೂಪಿಸುವಷ್ಟರಲ್ಲಿ 'ಊರು ಕೊಳ್ಳೆಯಾದ ಮೇಲೆ ಕೋಟೆ ಬಾಗಿಲು ಮುಚ್ಚಿದಂತಾಗುವುದು' ಎಂಬ ಕಳವಳ ಮಾರಾಟಗಾರರಲ್ಲಿ ಉಂಟಾಗಿದೆ. ಈಗಾಗಲೇ ಅಮೆಜಾನ್, ಫ್ಲಿಪ್‌ಕಾರ್ಟ್, ಮೈಂತ್ರ, ಹೋಮ್‌ಷಾಪ್-೧೮, ಇ-ಬೇ, ಉಬೆರ್ ಮುಂತಾದ ಕಂಪನಿಗಳು ದೊಡ್ಡ ಪ್ರಮಾಣದಲ್ಲಿ ಇ-ಕಾಮರ್ಸ್‌ನಲ್ಲಿ ತೊಡಗಿಕೊಂಡಿವೆ. ರೈಲ್ವೆ, ಏರ್‌ಲೈನ್ಸ್ ಬುಕಿಂಗ್‌ನಲ್ಲಿ ಈ ಕಂಪನಿಗಳು ಸಾಕಷ್ಟು ಮುಂದಿವೆ. ಇವು ಸರಕು ಕ್ಷೇತ್ರಕ್ಕೂ ಪ್ರವೇಶಿಸಿ ದಿನಬಳಕೆಯ ಪದಾರ್ಥಗಳು, ದಿನಸಿ ಮುಂತಾದವು, ಗೃಹೋಪಯೋಗಿ ವಸ್ತುಗಳು, ಇಲೆಕ್ಟ್ರಾನಿಕ್ ಉಪಕರಣಗಳು ಮೊದಲಾದವನ್ನು ಮನೆಯ ಬಾಗಿಲಿಗೇ ತಂದು ಒಪ್ಪಿಸುವ ವ್ಯವಸ್ಥೆ ರೂಪಿಸಿಕೊಂಡಿವೆ. ಮಾರುಕಟ್ಟೆಯ ದರಕ್ಕಿಂತ ಕಡಿಮೆ ದರದಲ್ಲಿ ಈ ಕಂಪನಿಗಳು ಪದಾರ್ಥಗಳನ್ನು ಮಾರಾಟ ಮಾಡುತ್ತಿವೆ. ದೊಡ್ಡ ಪ್ರಮಾಣದಲ್ಲಿ ತಯಾರಿಕಾ ಸಂಸ್ಥೆಗಳಿಂದ ಸರಕು ಪಡೆದುಕೊಳ್ಳುವುದರಿಂದ ಬೆಲೆ ಇಳಿಸುವುದು ಸುಲಭ, ಕೆಲವು ಕಂಪನಿಗಳು ನಷ್ಟವಾದರೂ ಚಿಂತೆ ಇಲ್ಲ ಎಂದು ಅಗ್ಗ ದರದಲ್ಲಿ ಸರಕು ಸರಬರಾಜು ಮಾಡುತ್ತಿವೆ, ಮಾರುಕಟ್ಟೆಯಲ್ಲಿ ಮೇಲುಗೈ ಪಡೆದುಕೊಳ್ಳಲು ಉಪಯೋಗಿಸುವ ತಂತ್ರಗಳಲ್ಲಿ ಇದೂ ಒಂದು. ಹಾಗಾಗಿ ಭಾರತೀಯ ವಣಿಕರಿಗೆ ಪೈಪೋಟಿ ಎದುರಿಸುವುದು ದುಸ್ತರವಾಗುತ್ತಿದೆ. ಆನ್‌ಲೈನ್ ಟ್ರೇಡಿಂಗ್‌ನಿಂದ ಗಿರಾಕಿಗಳು ಮಳಿಗೆಗಳಲ್ಲಿ ಕಡಿಮೆಯಾಗುತ್ತಿದ್ದಾರೆ. ಹೀಗೇ ಮುಂದುವರಿದರೆ ಗತಿಯೇನು ಎಂಬ ಚಿಂತೆ ವ್ಯಾಪಾರಿಗಳನ್ನೂ ಬಾಧಿಸತೊಡಗಿದೆ.

* * *

ಪ್ರಜಾಪ್ರಭುತ್ವದ ಹಾದಿ ತಪ್ಪುತ್ತಿರುವಂತೆ ಭಾಸವಾಗುವ ಅನೇಕ ಸಂಗತಿಗಳು ಜರುಗುತ್ತಿವೆ. ಇದು ಆತಂಕಕಾರಿ ಎನಿಸುತ್ತದೆ. ಹರ್ಯಾಣ ಸರ್ಕಾರವು ಈಗ ಭಾರತೀಯ ಜನತಾಪಕ್ಷದ ತೆಕ್ಕೆಯಲ್ಲಿದೆ. ಈಚಿನ ಆ ಸರ್ಕಾರದ ಒಂದು ಶಾಸನವನ್ನು ಅಲ್ಲಿಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿತ್ತು ಮತ್ತು ಅದನ್ನು ನ್ಯಾಯಾಲಯ ಎತ್ತಿಹಿಡಿಯಿತು. ಗ್ರಾಮಪಂಚಾಯಿತಿ ಮುಂತಾದ ಸ್ಥಳೀಯ ಸಂಸ್ಥೆಗಳಿಗೆ ಚುನಾವಣಾ ಅಭ್ಯರ್ಥಿಗಳು ಕನಿಷ್ಠ ಇಂತಿಷ್ಟು ವಿದ್ಯಾರ್ಹತೆ ಪಡೆದಿರಬೇಕೆಂಬುದು ಆ ಶಾಸನ. ಮುಂದಿನ ಹಂತದಲ್ಲಿ ಹರ್ಯಾಣ ಶಾಸನಸಭೆಯು ಶಾಸನಸಭೆ ಮತ್ತು ಲೋಕಸಭೆಗೆ ಅಭ್ಯರ್ಥಿಗಳಾಗ ಬಯಸುವವರು ಪದವೀಧರರು ಮತ್ತು ಸ್ನಾತಕೋತ್ತರ ಪದವಿ ಹೊಂದಿರಬೇಕೆಂದು ವಿಧಿಸುತ್ತದೆಂದು ನಿರೀಕ್ಷಿಸೋಣವೆ? ಸದ್ಯದ ಶಾಸನಸಭೆಯಲ್ಲಿ ಸದಸ್ಯರ ವಿದ್ಯಾರ್ಹತೆಯ ವಿವರಗಳನ್ನು ಮುಖ್ಯಮಂತ್ರಿಯವರು ಪ್ರಕಟಿಸುವುದು ಉಚಿತ. ಶಿಕ್ಷಣದ ಮಹಾನ್ ಅರ್ಹತೆಯು ಜನರ ಪ್ರತಿನಿಧಿಗಳಾಗಲು ಎಂತಹ ತರಬೇತಿ ನೀಡುತ್ತದೆಯೆಂಬುದರ ಚರ್ಚೆ ನಮ್ಮಲ್ಲಿ ಸಾಕಷ್ಟು ನಡೆದಿಲ್ಲ. ಬಹಳ ಹಿಂದೆ ತಮಿಳುನಾಡಿನಲ್ಲಿ ಕಾಮರಾಜ ನಾಡಾರ್ ಮತ್ತು ಸಿ. ಸುಬ್ರಹ್ಮಣ್ಯಂ ಇದ್ದರು. ಅವರಿಬ್ಬರಲ್ಲಿ ಜನಪ್ರತಿನಿಧಿಯಾಗಿ ಜನತೆಯ ಅಗತ್ಯಗಳನ್ನು ಯಾರು ಹೆಚ್ಚು ಸಮರ್ಥವಾಗಿ ನಿರ್ವಹಿಸಿದರೆಂಬುದು ಇತಿಹಾಸ: ಕಾಮರಾಜ್ ನಿಜವಾದ "ಮಣ್ಣಿನ ಮಗ" ಮತ್ತು ಸುಬ್ರಹ್ಮಣ್ಯಂ ಅಮೆರಿಕಾದ ಭಾರಿ ದಳ್ಳಾಳಿ. ಶಿಕ್ಷಣದ ಬದಲು ಹಣದ ಚೀಲಗಳು ಯಾವ ಅಭ್ಯರ್ಥಿಗಳಲ್ಲಿ ಎಷ್ಟು ದೊಡ್ಡದಾಗಿವೆ ಎಂಬುದನ್ನು ಹರ್ಯಾಣ ಸರ್ಕಾರವು ನಿಗದಿಗೊಳಿಸಿದ್ದರೆ ಹೆಚ್ಚು ಅರ್ಥವತ್ತಾಗಿರುತ್ತಿತ್ತು! ಮಾಧ್ಯಮಗಳಲ್ಲಿ ಶಿಕ್ಷಣದ ಅರ್ಹತೆಯ ಬಗ್ಗೆ ದೀರ್ಘ ಚರ್ಚೆ ನಡೆದಿದೆ. ಸಾಮಾನ್ಯ ಅಭಿಪ್ರಾಯವು ಅಂತಹ ನಿಯಮವು ಸಾಧುವಲ್ಲ, ಪ್ರಜಾಪ್ರಭುತ್ವ ವಿರೋಧಿ ಎಂದು. ಅದನ್ನು 'ಹೊಸತು' ಸರ್ವಥಾ ಅಂಗೀಕರಿಸುತ್ತದೆ ಮತ್ತು ಹರ್ಯಾಣದ ಶಾಸನವನ್ನು ಕಟುವಾಗಿ ಖಂಡಿಸುತ್ತದೆ. ದಿನೇದಿನೇ ಪ್ರಜಾಪ್ರಭುತ್ವವು ಆಯ್ದ ಶ್ರೀಮಂತರ ತಲೆಗೆ ತೋಚಿದ್ದು ಎಂಬಂತಾಗುತ್ತಿದೆ. ರಾಜ್ಯಸಭಾ ಸದಸ್ಯ ಸೀತಾರಾಂ ಯೆಚೂರಿ ಇತ್ತೀಚೆಗೆ ಅಮೆರಿಕಾ ಅಧ್ಯಕ್ಷ ಒಬಾಮಾಗೆ ಹೇಳಿದ್ದರಂತೆ: "ನಿಮ್ಮ ದೇಶದ ಪ್ರಜಾಪ್ರಭುತ್ವಕ್ಕಿಂತ ಹಿಂದಿನದು ನಮ್ಮ ದೇಶದ್ದು, ಏಕೆಂದರೆ ಆರಂಭದಿಂದಲೇ ನಮ್ಮ ದೇಶದ ಎಲ್ಲ ಪ್ರಜೆಗಳೂ

(೧೩ನೇ ಪುಟಕ್ಕೆ...)

ಸಂಪಾದಕೀಯ

# ನೆಮ್ಮದಿಯೆಡೆಗೆ ನಮ್ಮ ನಡೆ...

*ಇದು 'ಹೊಸತು' ಪ್ರಕಟಣೆಯ ಹದಿನೇಳನೇ ವರ್ಷ. ಜೀವಪರಚಿಂತನೆ, ಜನಪರ ಧೋರಣೆಗಳೊಂದಿಗೆ ಪ್ರಕಟವಾಗುತ್ತಿರುವ ಈ ಪತ್ರಿಕೆ ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಮಾಸಿಕ. ಕಳೆದ ಹದಿನಾರು ವರ್ಷಗಳಿಂದ ಜನಸಾಮಾನ್ಯರ ಹಿತಾಸಕ್ತಿಯ ವೇದಿಕೆಯಾಗಿ ಕೆಲಸ ಮಾಡುತ್ತಿದೆ. ಪ್ರಗತಿಪರ ಚಿಂತಕರೂ, ಬರಹಗಾರರೂ, ಓದುಗರೂ ಸೇರಿ ಬೆಳೆಸಿದ ಈ ಪತ್ರಿಕೆ ಅವರೆಲ್ಲರ ಆಶಯಗಳಿಗೆ ಬದ್ಧವಾಗಿದೆ. 'ಹೊಸತು' ಬೆಳವಣಿಗೆಗೆ ಮುಖ್ಯವಾಗಿ ಓದುಗರು, ಬರಹಗಾರರು, ಜಾಹೀರಾತುದಾರರು, ಪ್ರಕಟಣೆ ಮತ್ತು ಪ್ರಸಾರ ಹೆಚ್ಚಳಕ್ಕೆ ಶ್ರಮಿಸಿದವರೆಲ್ಲರೂ ಕಾರಣರಾಗಿದ್ದಾರೆ. ಈ ಎಲ್ಲರ ಶ್ರಮ ಮತ್ತು ಬೆಂಬಲಕ್ಕೆ ಹೊಸತು ಸಂಪಾದಕೀಯ ಬಳಗ ಆಭಾರಿಯಾಗಿದೆ. ಎಲ್ಲರಿಗೂ ಹೊಸತು ಬಳಗದ ವತಿಯಿಂದ ಹೊಸ ವರ್ಷದ ಶುಭಾಶಯಗಳು. ಜನಪರ, ಜೀವಪರ ಆಶಯಗಳನ್ನೇ ಕೇಂದ್ರವಾಗಿಟ್ಟುಕೊಂಡು ಒಂದು ನಿಯತಕಾಲಿಕವನ್ನು ನಿರಂತರವಾಗಿ ನಡೆಸಿಕೊಂಡು ಹೋಗುವುದು ಇಂದಿನ ಸಂದರ್ಭದಲ್ಲಿ ಸವಾಲಿನ ಕೆಲಸ. ಇಂಥ ಸವಾಲನ್ನು ನಿಭಾಯಿಸಲು ಈ ಹಿಂದಿನ ವರ್ಷಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಬೆಂಬಲಿಸಿದ ಎಲ್ಲರನ್ನು ಸ್ಮರಿಸುತ್ತ, ಮುಂದಿನ ದಿನಗಳಲ್ಲೂ ಇದೇ ರೀತಿಯ ಸಹಕಾರ ಕೊಟ್ಟು , ಪತ್ರಿಕೆ ಇನ್ನೂ ಹೆಚ್ಚಿನ ಸಾಮರ್ಥ್ಯ ಪಡೆದು, ಪ್ರಸಾರದ ವ್ಯಾಪ್ತಿ ವಿಸ್ತರಿಸಲು ನೆರವಾಗಬೇಕೆಂದು ಕೋರುತ್ತೇವೆ.*

*೨೦೧೬ರ ವಿಶೇಷ ಸಂಚಿಕೆ ನಿಮ್ಮ ಕೈಗಿಡುತ್ತಿದ್ದೇವೆ. ಓದಿ, ನಿಮ್ಮ ಪ್ರತಿಕ್ರಿಯೆಯ ನಿರೀಕ್ಷೆಯಲ್ಲಿದ್ದೇವೆ.*

* * *

ನೆಮ್ಮದಿಯ ನಾಳೆಯನ್ನು ನಿರೀಕ್ಷಿಸುವುದು ಪ್ರತಿ ಪ್ರಜೆಯ ಹಕ್ಕು. ಆದರೆ ನೆಮ್ಮದಿಯ ಬದುಕು ತಂತಾನೇ ಬರುವುದಿಲ್ಲ. ಅದಕ್ಕಾಗಿ ನೆಮ್ಮದಿಯನ್ನು ಬಯಸುವವರು ನಿರಂತರವಾಗಿ ಪ್ರಯತ್ನಿಸಬೇಕಾಗುತ್ತದೆ. ನೆಮ್ಮದಿಗೆ ಭಂಗ ತರುವ ಶಕ್ತಿಗಳ ವಿರುದ್ಧ ತಾವಿರುವ ನೆಲ–ನೆಲೆಯಿಂದ, ಸಾಧ್ಯವಾದ್ದಷ್ಟು ಪ್ರತಿರೋಧ, ಪ್ರತಿಭಟನೆ ವ್ಯಕ್ತಪಡಿಸಬೇಕಾಗುತ್ತದೆ. ಅದೂ ಇಂದಿನ ಸಂದರ್ಭದಲ್ಲಿ ಸಂಘಟಿತವಾಗಿಯೇ ಆ ಕ್ರಿಯೆ ನಡೆಯಬೇಕಾಗುತ್ತದೆ. ಕಳೆದ ಎರಡು ದಶಕಗಳಿಂದ ವಿಶ್ವದಲ್ಲಿ ಮತ್ತು ನಮ್ಮ ದೇಶದಲ್ಲಿ ಜಾರಿಯಾದ ಉದಾರವಾದಿ ನೀತಿಗಳು ಹುಟ್ಟುಹಾಕಿದ ಭ್ರಮೆ ಇಂದು ಕರಗಿಹೋಗುತ್ತಿದೆ. ಅಂದು ಕಾಂಗ್ರೆಸ್‌ನ ಪಿ. ವಿ. ನರಸಿಂಹರಾವ್ ಆರಂಭಿಸಿದ ಜಾಗತಿಕರಣದ ಪ್ರಕ್ರಿಯೆ ಇಂದು ಬಿ.ಜೆ.ಪಿ.ಯ ನರೇಂದ್ರ ಮೋದಿಯವರ ಕಾಲದಲ್ಲಿ ಉತ್ತುಂಗಕ್ಕೆ ಮುಟ್ಟಿ ಸ್ಥಗಿತಗೊಂಡಿದೆ. ಈ ಎರಡು ದಶಕಗಳ ಅವಧಿಯಲ್ಲಿ ದೇಶದ ಸಂಪತ್ತು ಹೆಚ್ಚಾಗಿದೆ. ಆದರೆ ಉದ್ಯೋಗ ಶೇ. ೫೦ರಷ್ಟು ಕುಸಿದಿದೆ. ಬೆಲೆ ಏರಿಕೆ ಏರುಹಂತದಲ್ಲಿಯೇ ಇದೆ. ಬಡತನ ಹೆಚ್ಚುತ್ತಿದೆ. ೧೯೯೫ರಿಂದ ಇಂದಿನವರೆಗೆ ಮೂರೂವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಸ್ಥಳೀಯ ಕೈಗಾರಿಕೆಗಳು ಮುಚ್ಚಿಹೋಗಿವೆ. ದೇಶದ ಆಂತರಿಕ ಒಟ್ಟು ಉತ್ಪನ್ನದಲ್ಲಿ ಕೃಷಿಯ ಪಾಲು ಶೇ. ೧೩ಕ್ಕಿಳಿದಿದೆ. ದೇಶದ ಸೇವಾ ವಲಯ, ಆರ್ಥಿಕ ಹಾಗೂ ಉತ್ಪಾದನಾ ವಲಯಗಳು ಖಾಸಗೀಕರಣಗೊಂಡಿವೆ. ಈ ಎಲ್ಲ ಪ್ರಕ್ರಿಯೆಗಳಿಂದ ದೇಶದ ಕಾರ್ಪೊರೇಟ್ ಕಂಪನಿಗಳ ಸಂಪತ್ತು ಹೆಚ್ಚಿದೆ, ಬಡವರ ಬದುಕು ಬೀದಿಗೆ ಬಂದಿದೆ. ಈಗ ನಮ್ಮದು ಸಿರಿವಂತರಿರುವ ಬಡ ದೇಶ. ಇಂಥ ಸ್ಥಿತಿಯಲ್ಲೂ ನಮ್ಮ ಪ್ರಧಾನಿಗಳು ಜೋಳಿಗೆ ಹಿಡಿದು ವಿವಿಧ ದೇಶಗಳಿಗೆ ಸುತ್ತಿ ಬಂಡವಾಳಗಾರರ ಮುಂದೆ, ಕಾರ್ಪೊರೇಟ್ ಕಂಪನಿಗಳ ಮುಂದೆ 'ಬಂಡವಾಳ ಹಾಕಿ' ಎಂದು ಅಂಗಲಾಚುತ್ತಿದ್ದಾರೆ. ಈ ಎಲ್ಲ ಸಂಗತಿಗಳು ನಮ್ಮ ಜನತೆಯ, ರಾಜಕೀಯ ಪಕ್ಷಗಳ, ಸಂಘಟನೆಗಳ ಆದ್ಯತೆಯ ವಿಷಯವಾಗಿ ತೀವ್ರವಾದ ಪ್ರತಿರೋಧ, ಪ್ರತಿಭಟನೆ ವ್ಯಕ್ತವಾಗಬೇಕಿತ್ತು. ಆದರೆ ಜನತೆಯ ಸೌಹಾರ್ದ ಬದುಕನ್ನು ನಾಶಮಾಡುವ ಕೋಮುಸಂಘರ್ಷದ ವಿಷಯಗಳೇ ಕಳೆದ ವರ್ಷವಿಡೀ ಚರ್ಚೆಯ, ಪ್ರತಿರೋಧದ ವಸ್ತುವಾಗಿದ್ದವು. ಇವೆಲ್ಲ ಆಕಸ್ಮಿಕವಾಗಿ ನಡೆದ ಘಟನೆಗಳಲ್ಲ. ಜನತೆಯನ್ನು ಬಾಧಿಸುವ ಮೂಲಭೂತ ಸಮಸ್ಯೆಗಳಿಂದ ಜನತೆಯ ದೃಷ್ಟಿಯನ್ನು ಬೇರೆಡೆಗೆ ತಿರುಗಿಸುವ ವ್ಯವಸ್ಥಿತ ಕುತಂತ್ರ ಇದರ ಹಿಂದಿದೆ.

ಕೋಮುವಾದಿಗಳು ಸೌಹಾರ್ದತೆ ಕದಡುವ ಚಟುವಟಿಕೆ ನಡೆಸುತ್ತಾರೆ. ನಂತರ ಒಂದು ಘಟನೆಯ ಸುತ್ತಲೇ ಪ್ರತಿಕ್ರಿಯೆ, ಪ್ರತಿರೋಧ ಆರಂಭವಾಗುತ್ತದೆ. ಅದಕ್ಕೊಂದು ವಿಶ್ಲೇಷಣೆ, ಅದಕ್ಕಿನ್ನೊಂದು ಪ್ರತಿಕ್ರಿಯೆ ಹೀಗೆ ನಿರಂತರ. ನಮ್ಮ ದೇಶದ ಆಳುವ – ವಿರೋಧ ಪಕ್ಷಗಳಿಗೂ ಬೇಕಿರುವುದು ಇದೇ. ದೇಶದ ಮೂಲಭೂತ ಸಮಸ್ಯೆಗಳ ಹೆಚ್ಚಳಕ್ಕೆ ಆಡಳಿತ ಪಕ್ಷವಾದ ಬಿ.ಜೆ.ಪಿ.ಯಂತೆ ವಿರೋಧ ಪಕ್ಷವಾದ ಕಾಂಗ್ರೆಸ್ ಸಹ ಕಾರಣವಾಗಿರುವುದರಿಂದ ಈ ಎರಡೂ ಪಕ್ಷಗಳು ದೇಶದ ಆರ್ಥಿಕ, ಕೈಗಾರಿಕೆ, ಕೃಷಿ, ಶಿಕ್ಷಣ, ಆರೋಗ್ಯದಂತಹ ಮೂಲಭೂತ ಕ್ಷೇತ್ರಗಳ ಕುರಿತು ಮಾತನಾಡುವುದಿಲ್ಲ. ಧರ್ಮಾಧಾರಿತ, ಹಿಂದೂ ಪ್ರಭುತ್ವದ ಸ್ಥಾಪನೆ ಇಂದಿನ ಆಡಳಿತ ಪಕ್ಷದ ಕಾರ್ಯಸೂಚಿಯಾದರೆ ಅದನ್ನು ಮೇಲ್ನೋಟಕ್ಕೆ ವಿರೋಧಿಸಿ ರಾಜಕೀಯ ಲಾಭ ಪಡೆಯುವುದು ವಿರೋಧ ಪಕ್ಷವಾದ ಕಾಂಗ್ರೆಸ್‌ನ ಕಾರ್ಯಕ್ರಮ. ಕಾಂಗ್ರೆಸ್ ಹಲವಾರು ಸಂದರ್ಭಗಳಲ್ಲಿ ಮೃದುಹಿಂದುತ್ವದ ನೀತಿಯನ್ನನುಸರಿಸಿದ್ದರಿಂದ ದೇಶದ ಹಲವಾರು ಕಡೆ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದೆ. ಆರ್ಥಿಕತೆ, ಭ್ರಷ್ಟಾಚಾರ, ಆಡಳಿತಾತ್ಮಕ ವಿಷಯಗಳಲ್ಲಿ ಎರಡೂ ಪಕ್ಷಗಳ ಕಾರ್ಯಕ್ರಮ ಒಂದೇ ಆಗಿರುವುದರಿಂದ ಇಂದು ವಿರೋಧ ಪಕ್ಷವಾದ ಕಾಂಗ್ರೆಸ್ 'ಜಾತ್ಯತೀತ' ಎಂಬ ಘೋಷಣೆಯನ್ನೇ ತನ್ನ ಅಸ್ತ್ರವನ್ನಾಗಿ ಮಾಡಿಕೊಂಡಿದೆ. ಜಾತ್ಯತೀತ ತತ್ವಗಳ ಕುರಿತು ಪ್ರಾಮಾಣಿಕ ಕಳಕಳಿ ಇಲ್ಲದಿದ್ದರೂ ಅದೇ ಘೋಷಣೆಯನ್ನು ಹೇಳುವ ಕಾಂಗ್ರೆಸ್ ತನ್ನ ವಿಶ್ವಾಸಾರ್ಹತೆಯನ್ನು ಕಳೆದುಕೊಂಡಿದೆ.



ದೇಶದ ಜನಪರ, ಪ್ರಗತಿಪರ ಪಕ್ಷ ಮತ್ತು ಸಂಘಟನೆಗಳು ಕೋಮುವಾದಿ ಶಕ್ತಿಗಳು ನಡೆಸುವ ಕ್ರಿಯೆಗಳಿಗೆ ಪ್ರತಿಕ್ರಿಯೆ ಕೊಡುವುದಕ್ಕಾಗಿಯೇ ಹೆಚ್ಚು ಸಮಯ ಕಳೆಯುತ್ತಿವೆ. ಎಡಪಕ್ಷಗಳು ಪ್ರಸ್ತಾಪಿಸುವ ಮೂಲಭೂತ ಸಮಸ್ಯೆಗಳ ಕುರಿತಾದ ಧ್ವನಿ ಕ್ಷೀಣ ವಾಗಿದೆ. ಏಕಸ್ವಾಮ್ಯತ್ವ ಹೊಂದಿರುವ ಕಾರ್ಪೊರೇಟ್

ಓದುಗರಿಗೆ, ಲೇಖಕರಿಗೆ,
ಜಾಹೀರಾತುದಾರರಿಗೆ, ಹಿತೈಷಿಗಳಿಗೆ
'ಹೊಸತು' ಬಳಗದ
ಹಾಗೂ
ನವಕರ್ನಾಟಕ ಪ್ರಕಾಶನದ
ಹೊಸವರ್ಷದ
ಶುಭಾಶಯಗಳು



ಸಂಪಾದಕೀಯ

ಮಾಧ್ಯಮ ಕ್ಷೇತ್ರ ಎಡಚಿಂತನೆ, ಚಟುವಟಿಕೆಗಳನ್ನು ಉದ್ದೇಶಪೂರಕವಾಗಿಯೇ ನಿರ್ಲಕ್ಷಿಸಿದೆ. ಇಂಥ ಪ್ರತಿಕೂಲ ವಾತಾವರಣದಲ್ಲಿಯೂ ನವ ಉದಾರವಾದಿ ಆರ್ಥಿಕ ನೀತಿಗಳಿಂದ ತೊಂದರೆಗೊಳಗಾದ ಜನತೆ ತಮ್ಮ ಮಿತಿಯಲ್ಲಿಯೇ ಪ್ರತಿರೋಧ ವ್ಯಕ್ತಪಡಿಸುತ್ತಿದ್ದಾರೆ. ಇಂದು ಕೋಮುವಾದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಲೇ ಪರ್ಯಾಯ ಕ್ರಿಯೆಗೆ ಇಳಿಯಬೇಕಾದದ್ದು ಜನಪರ, ಪ್ರಗತಿಪರ ಶಕ್ತಿಗಳ ಜವಾಬ್ದಾರಿ. ಈ ಪರ್ಯಾಯ ಕ್ರಿಯೆಯ ಕೇಂದ್ರದಲ್ಲಿ ಜನತೆಯ ಮೂಲಭೂತ ಸಮಸ್ಯೆಗಳಿರಬೇಕು. ೨೦೧೬ ಇಂಥ ಕ್ರಿಯೆಗಳಿಗೆ ಪೂರಕ ವಾಗಿರುತ್ತದೆಂಬ ಸೂಚನೆಗಳು ಈಗಾಗಲೇ ಗೋಚರಿಸಿವೆ. ಜನಪರ ಶಕ್ತಿಗಳು ಒಂದೊಂದು ನೆಲೆಯಿಂದ ಪ್ರತ್ಯೇಕವಾಗಿ ಪ್ರತಿಭಟಿಸುವುದಕ್ಕೆ ಬದಲಾಗಿ ಐಕ್ಯ ಹೋರಾಟಗಳನ್ನು ರೂಪಿಸುವ ಮೂಲಕ, ೨೦ನೇ ಶತಮಾನದ ಆರಂಭಿಕ ದಶಕಗಳಲ್ಲಿ ವಸಾಹತುಶಾಹಿ ವಿರುದ್ಧ ಮೂಡಿದ್ದ ಜಾಗೃತಿ, ಆಂದೋಲನಗಳಂತೆಯೇ ಇಂದಿನ ನವಸಾಮ್ರಾಜ್ಯಶಾಹಿಯ ವಿರುದ್ಧ ಕಾರ್ಯಾಚರಣೆ ನಡೆಸಿ, ಈಗಿರುವ ಪೂರಕ ವಾತಾವರಣವನ್ನು ಬಳಸಿಕೊಳ್ಳಬೇಕಿದೆ. ಅಂಥ ಕ್ರಿಯೆ ನಡೆಯುತ್ತಿದೆ, ಆ ಮೂಲಕ ನೆಮ್ಮದಿಯ ಬದುಕಿನೆಡೆಗೆ ನಮ್ಮ ನಡೆ ಇರುತ್ತದೆಂಬ ಆಶಾಭಾವನೆಯೊಂದಿಗೆ ಹೊಸ ವರ್ಷವನ್ನು ಸ್ವಾಗತಿಸೋಣ. ಸಿನಿಮಾ, ಲವ್ ಜಿಹಾದ್, ಗೋಡ್ಸೆ ದೇವಸ್ಥಾನ, ಮರಳಿ ಮನೆಗೆ ಕುರಿತು ಚರ್ಚೆ, ವಾದ, ಪ್ರತಿವಾದ, ಸಂವಾದ ಗಂಭೀರವಾಗಿ ನಡೆಯುತ್ತಿದೆ. ಇದು ಬಿ.ಜೆ.ಪಿ. ಆರ್.ಎಸ್.ಎಸ್. ತಯಾರಿಸಿರುವ ಕಾರ್ಯಸೂಚಿ.

ಹೊಸ ವರ್ಷದ ಸವಾಲುಗಳು ಗಂಭೀರವಾಗಿವೆ. ಹಳೆ ಕನಸುಗಳ ಜೊತೆ ಹೊಸ ಕನಸು ಕಾಣುವ ಹಕ್ಕು ಪ್ರತಿಯೊಬ್ಬರಿಗಿದೆ. ಆದರೆ ಕನಸು ನನಸಾಗಿಸಲು ಪೂರಕ ವಾತಾವರಣ ಬೇಕಿದೆ. ಅದನ್ನು ನಾವೇ ನಿರ್ಮಿಸಿಕೊಳ್ಳಬೇಕಿದೆ. ಮತಾಂಧತೆ, ಜಾತೀಯತೆ, ಪ್ರತ್ಯೇಕತಾವಾದ ಇವೆಲ್ಲ ಸಾಮ್ರಾಜ್ಯ ದಾಹಿಗಳು ತಮ್ಮ ಸುಲಿಗೆಗೆ ಪೂರಕವಾಗಲು ಹುಟ್ಟುಹಾಕಿ, ಬೆಂಬಲಿಸಿ ಬೆಳೆಸುವ ಕ್ರಿಯಾಯೋಜನೆಗಳು. ಅವರು ಅದನ್ನು ಮುಂದುವರಿಸುತ್ತಾರೆ. ಅದು ಅವರು ಪ್ರಜ್ಞಾಪೂರ್ವಕವಾಗಿ, ತಮ್ಮ ವರ್ಗ ಹಿತಾಸಕ್ತಿಗಾಗಿ ಮಾಡುವ ಕೆಲಸ. ಆದರೆ ಪ್ರಜೆಗಳು ಪ್ರಜ್ಞಾಪೂರ್ವಕವಾಗಿ, ಎಚ್ಚರದೊಂದಿಗೆ ಅದನ್ನು ಗಮನಿಸಿ ಪ್ರತಿರೋಧ ವ್ಯಕ್ತಪಡಿಸಬೇಕು. ಧರ್ಮದ ಹೆಸರಲ್ಲಿ ರಾಷ್ಟ್ರ ಕಟ್ಟಲು ಹೊರಟು ಧರ್ಮಾಂಧರಿಂದ ಅಪಾಯಕ್ಕೆ ಸಿಲುಕಿ, ಬಿತ್ತಿದ್ದನ್ನು ಬೆಳೆದು ಅನುಭವಿಸುತ್ತಿರುವ ಪಾಕಿಸ್ತಾನ ನಮಗೆ ಮಾದರಿಯಲ್ಲ. ನಮ್ಮ ನೆಲದ ಎಲ್ಲ ಜನತೆಯ ಬದುಕು ಸುಂದರವಾಗಬೇಕು, ಮನುಷ್ಯ ಘನತೆಯಿಂದ ಬದುಕಬೇಕು. ಕೊಲೆ, ಸುಲಿಗೆ, ಅಸಮಾನತೆ, ಅತ್ಯಾಚಾರವಿಲ್ಲದ ನಾಡು ಕಟ್ಟುವ ನಮ್ಮ ಕೆಲಸ ನಿರಂತರವಾಗಿರಲಿ. ವಾತಾವರಣ ಎಷ್ಟೇ ಪ್ರತಿಕೂಲವಾಗಿದ್ದರೂ ಮಾನವನ ಶಕ್ತಿಯ ಮೇಲೆ ನಂಬಿಕೆ ಇಡೋಣ. ನಮ್ಮ ನಮ್ಮ ನೆಲೆಯಲ್ಲಿ ಕಂಡ ಕನಸು ನನಸಾಗಿಸಲು ಯತ್ನಿಸೋಣ.

ಸಿದ್ಧನಗೌಡ ಪಾಟೀಲ.

---

*ಈ ತಿಂಗಳು... (೧೧ನೇ ಪುಟದಿಂದ)*

ಮತದಾರರು ಮತ್ತು ಅಭ್ಯರ್ಥಿಗಳಾಗಲು ಅರ್ಹರಾದರು; ಆದರೆ ನಿಮ್ಮ ದೇಶದ ಮಹಿಳೆಯರಿಗೆ ಮತದಾನದ ಹಕ್ಕು ದೊರೆತದ್ದು ಆರಂಭದಿಂದಲೂ ಅಲ್ಲ." ಈಗ ಹರಿಯಾಣ ನಮ್ಮ ಪ್ರಜಾಪ್ರಭುತ್ವದ ಲಕ್ಷಣವನ್ನು ಆಮೂಲಾಗ್ರವಾಗಿ ಬದಲಾಯಿಸಹೊರಟಿದೆ. ಇದು ಸರ್ವಥಾ ಪ್ರಶ್ನಾರ್ಹವಾದ್ದು. ಹೀಗಿರುವಾಗ ಹರಿಯಾಣದ ಉಚ್ಚ ನ್ಯಾಯಾಲಯವು ಆ ಆಜ್ಞೆಯನ್ನು ಎತ್ತಿಹಿಡಿದಿರುವುದು ಆಶ್ಚರ್ಯಕರವಾಗಿದೆ. ನಮ್ಮ ಗಣರಾಜ್ಯದ ಸಂವಿಧಾನಕ್ಕೆ ಹೊರತಾದ ಸೂತ್ರವನ್ನು ನ್ಯಾಯಾಲಯವು ಮಾನ್ಯ ಮಾಡಿದ್ದು ಹೇಗೆ? ಹಾಗೆ ಮಾಡುವುದು ತಾನೇ ಸಂವಿಧಾನವನ್ನು ತನ್ನಿಚ್ಛೆಯಂತೆ ತಿದ್ದುಪಡಿ ಮಾಡಿದಂತೆಯೇ ಸರಿ, ಆದರೆ ನ್ಯಾಯಾಲಯಕ್ಕೆ ಅಂತಹ ಹಕ್ಕಿಲ್ಲ. ಲೋಕಸಭೆಯು ಈ ವೇಳೆಗಾಗಲೆ ಇದನ್ನು ಗಮನಿಸಿ ತನ್ನ ಹಕ್ಕನ್ನು ಸ್ಥಾಪಿಸಿಕೊಳ್ಳಬೇಕಾಗಿತ್ತು. ಅದನ್ನು ಮಾಡದಿರುವುದಕ್ಕೆ ಲೋಕಸಭಾ ಸದಸ್ಯರ ಶ್ರೀಮಂತ ಹಿನ್ನೆಲೆಯೂ ಒಂದು ಕಾರಣವಿರಬಹುದು. ಸರ್ವೋಚ್ಚ ನ್ಯಾಯಾಲಯವು ಪ್ರಾಥಮಿಕ ಶಿಕ್ಷಣದ ಮಾಧ್ಯಮವನ್ನು ಕುರಿತು ನೀಡಿದ ತೀರ್ಪಿನಲ್ಲಿ ಜನಸಾಮಾನ್ಯರನ್ನು ಕಡೆಗಣಿಸಿ ಪ್ರತಿಷ್ಠಿತ ವರ್ಗದ ಆಸಕ್ತಿಯನ್ನು ಮಾನ್ಯ ಮಾಡಿತೆಂಬ ಭಾವನೆಯ ಹಿಂದೆಯೇ ಶಿಕ್ಷಣದ ಅರ್ಹತೆಯ ವಿಷಯ ಬಂದಿದೆ. ಅಂದರೆ, ಕ್ರಮೇಣ ಪ್ರಜಾಪ್ರಭುತ್ವದ ಪರಿಧಿಯನ್ನು ಸಂಕುಚಿತಗೊಳಿಸಲಾಗಿದೆ ಎಂದರ್ಥ. ಜನತೆಯು ಇದನ್ನು ಆಗುಮಾಡಲು ಅವಕಾಶ ನೀಡಕೂಡದು. ನಮ್ಮದೇ ದೇಶದ ಸೋದರ-ಸೋದರಿ ಪ್ರಜೆಗಳನ್ನು ಕೆಳದರ್ಜೆಗೆ ಇಳಿಸುವ ದುಷ್ಟ ತೀರ್ಮಾನವು ಸಂವಿಧಾನ ವಿರೋಧಿಯಾದ್ದು, ಜನ ವಿರೋಧಿಯಾದ್ದು. ನಾವದನ್ನು ಧಿಕ್ಕರಿಸೋಣ.

✶ ✶ ✶

ಸಮಾಜಶಾಸ್ತ್ರಜ್ಞರ ಮುಂದೆ ಹಳೆಯ ಒಂದು ಪ್ರಶ್ನೆಯು ಹೊಸ ರೂಪದಲ್ಲಿ ಕಾಣಿಸಿಕೊಳ್ಳುತ್ತಿದೆ. ಬಹುಹಿಂದೆಯೇ ಮಾನ್ಯ ಎಂ. ಎನ್. ಶ್ರೀನಿವಾಸ್ ಅವರು "ಸಂಸ್ಕೃತೀಕರಣ"ದ ಪ್ರಕ್ರಿಯೆಯನ್ನು ಕುರಿತು ಪ್ರಸ್ತಾಪಿಸಿದ್ದರು. ಅದರ ಬಗೆಗಿನ ಚರ್ಚೆ ಬಹುವಿಧದಲ್ಲಿ ನಡೆದಿದೆ. ಈಗ ಸಂಸ್ಕೃತೀಕರಣಕ್ಕೆ ಹೊಸ ಆಯಾಮಗಳು ಸೇರಿಕೊಳ್ಳುತ್ತಿವೆಯೇನೋ ಎನಿಸುತ್ತಿದೆ. ಡಿಸೆಂಬರ್ ೨೧ರಂದು ವೈಕುಂಠ ಏಕಾದಶಿ ಎಂದು ಆಚರಿಸಲಾಯಿತು. ವೈಕುಂಠದಲ್ಲೂ ಏಕಾದಶಿ ಉಂಟೆ ಎಂದು ಅಚ್ಚರಿ ಬೇಡ. ಅದು ನಾವು ವೈಕುಂಠಕ್ಕೆ ಹೋಗಲು ತಯಾರಿ ನಡೆಸಬೇಕಾದ ಏಕಾದಶಿ. ನಮ್ಮ ಟಿ.ವಿ. ಮಾಧ್ಯಮಗಳಿಗೆ ಮತ್ತು ವಿಷ್ಣುವಿನ ಬೇರೆಬೇರೆ ಹೆಸರುಗಳ ದೇವಸ್ಥಾನಗಳಿಗೆ ಸುಗ್ಗಿಯೋ ಸುಗ್ಗಿ. ಸದ್ಯದಲ್ಲೇ ಶಿವರಾತ್ರಿ ಬರಲಿದೆಯಾದ್ದರಿಂದ ಶಿವನ ದೇವಸ್ಥಾನಗಳಲ್ಲಿ ಸಹ ಕಾಣಿಕೆ ಡಬ್ಬಿಗಳು ತುಂಬಬಹುದು. ತಾವು 'ಮೇಲು' ಎಂದು ಭ್ರಮಿಸಿರುವ ವರ್ಣದವರ ಆಚರಣೆಗಳನ್ನು ಅನುಕರಿಸುವುದರಲ್ಲಿ ತಥಾಕಥಿತ ಕಡಿಮೆ ಮಟ್ಟದ ವರ್ಣದವರು ಪ್ರಚಂಡ ಸ್ಪರ್ಧೆಗೆ ಇಳಿದಿದ್ದಾರೆ. ಅಂದರೆ, ಶ್ರೀನಿವಾಸ್ ಅವರ ಸಿದ್ಧಾಂತದ ಆಯಾಮವು ಇನ್ನೂ ಹೆಚ್ಚುಹೆಚ್ಚಾಗಿ ಹಿಗ್ಗುತ್ತಿದೆ. ಅಂದು ಬೆಂಗಳೂರಿನ ಇಟ್ಟುಮಡುವಿನಂತಹ ಅರೆ-ಗ್ರಾಮೀಣ ಬಡಾವಣೆಯಲ್ಲಿ ಸಹ ನೂರಾರು ಮಂದಿ ವೈಕುಂಠದ ಹಾದಿ ತುಳಿಯಲು ಬೆಳ್ಳಂಬೆಳಿಗ್ಗೆ ದೇವಸ್ಥಾನಗಳಿಗೆ ಮುಗಿಬಿದ್ದರು. ಅದು ತಪ್ಪು, ಅವರು ದೇವಸ್ಥಾನಗಳಿಗೆ ಹೋಗಬಾರದು ಎಂಬುದು 'ಹೊಸತು'ವಿನ ನಿಲುವಲ್ಲ. ಆದರೆ ನಿನ್ನೆ ಇರದಿದ್ದ ಉತ್ಸಾಹ ಮತ್ತು ಉತ್ಕಟ ಒತ್ತಡ ಇಂದು ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಬೆಳೆದಿರಲು ಸಾಮಾಜಿಕ-ಸಾಂಸ್ಕೃತಿಕ ಕಾರಣಗಳೇನು ಎಂಬುದಷ್ಟೆ ಅದರ ಕುತೂಹಲ. ಹೊಸ ಮಾನಸಿಕ ಪ್ರೇರಣೆಗೆ ಸಮಾಜ ಶಾಸ್ತ್ರಜ್ಞರು ಬೌದ್ಧಿಕ-ಸಾಂಸ್ಕೃತಿಕ ವಿವರಣೆಯನ್ನು ಯಥಾವತ್ತಾಗಿ ನೀಡಲು ಮುಂದಾಗಬೇಕೆಂಬ ಆಶಯವು ಪ್ರಸ್ತುತವಾಗಿದೆ. ಶ್ರೀರಾಮ ನವಮಿ ಇನ್ನೂ ಬಹಳ ದೂರವಿರುವಾಗಲೇ ಬೆಂಗಳೂರಿನ ಆಸ್ತಿಕ ಮಹಾಶಯರು ಮೂರು ವಾರಗಳ ಕಾಲ "ಶ್ರೀರಾಮ ಪಟ್ಟಾಭಿಷೇಕ"ವನ್ನು ಅದ್ದೂರಿಯಿಂದ ಆಯೋಜಿಸಿದ್ದಾರೆ. ಅದರಲ್ಲೂ ಬಹುತೇಕ ತಾವು ಮೇಲೆಂದು ಭ್ರಮಿಸುವವರ ವರ್ಣದವರೇ ಪ್ರಮುಖ ಸಂಯೋಜಕರು. ಸಮಾಜದ ಆಂತರ್ಯದಲ್ಲಿ ಇಂತಹ ನೂತನ ಛಾಯೆಗಳು ತೋರ್ಪಡಿಸಿಕೊಳ್ಳುತ್ತಿರುವಾಗ ಸಮಾಜಶಾಸ್ತ್ರಜ್ಞರ ಚಿಂತನೆಗೆ ವಿಪುಲ ಸಾಮಗ್ರಿ ಲಭ್ಯವಾಗುತ್ತಿದೆಯಲ್ಲವೆ? ●





















# ಪರಿವಿಡಿ

# ಪರಿವಿಡಿ



***ಚುಟುಕಗಳು :*** ಡಾ॥ ವಿ. ಪುಗಳೇಂದಿ, ಸದಾನಂದ ನಾರಾವಿ, ಲಾಲಸಾಬ ಎಚ್. ನದಾಫ, ರಾಜುಗೌಡ ನಾಗಮಂಗಲ, ವ. ಉಮೇಶ ಕಾರಂತ, ಸೋಮನಾಥ ಗೀತಯೋಗಿ, ಶ್ರೀನಿವಾಸ ಕುಂಡಂತಾಯ, ಡಾ॥ ಬೋರೇಗೌಡ ಚಿಕ್ಕಮರಳಿ


***ಮುಖಚಿತ್ರ :*** ೨೦೧೬ರ 'ಚಿತ್ರಸಂತೆ'ಯಲ್ಲಿ ಪ್ರದರ್ಶನಗೊಂಡ ಕಲಾವಿದ ಸಂದೀಪ್ ಆಂಬಿಯವರ ಕಲಾಕೃತಿ

***ಭಾವಚಿತ್ರ :*** ಎ. ಬಿ. ಬರ್ಧನ್

***ವಿನ್ಯಾಸ :*** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು :***

ಕಮಲಂ ಅರಸು, ತನು, ಶ್ರೀಹರಿ, ವಿ. ಗೋಪಾಲ್, ಶ್ರೀಹರಿ, ಷಣ್ಮುಖ, ಜಿಎಂಬೊ, ರಾಂಚಂದ್ರ ಕೊಪ್ಪಲು, ಗೋಪಿ, ಡಿ. ಟಿ. ಲೋಹಿತ್

***ಕಚೇರಿ ಸಹಕಾರ :*** ಜಿ. ವಿ. ತೇಜೋವತಿ






















**ಪುರೋಗಾಮಿ ಚಳುವಳಿಯ ಒಂದು ಪಕ್ಷಿನೋಟ**

'ಪುರೋಗಾಮಿ ಚಳುವಳಿಯ ಒಂದು ಪಕ್ಷಿನೋಟ' – ಇದು ಮಹಾರಾಷ್ಟ್ರದ ರಾಜನ್ ಬಾವಡೇಕರ್ ಅವರ ಲೇಖನ. ಇದನ್ನು ಡಾ॥ ಜಿ. ರಾಮಕೃಷ್ಣ ಅವರು ಸ್ಫುಟವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಹಾಗಾಗಿ ಭಾಷೆಯ ಗಡಿ ಇಲ್ಲಿ ಉಳಿದಿಲ್ಲ. ವಿಚಾರಗಳ ನೆಲೆಯಲ್ಲಿ ಸಹ ಈ ಗಡಿ ಇಲ್ಲ. ಆದ್ದರಿಂದಲೇ 'ಹೊಸತು' ಓದುಗರಿಗೆ ಇದು ದಕ್ಕಿರುವುದು.

ಪ್ರಸ್ತುತ ಲೇಖನದಲ್ಲಿ ಮಹಾರಾಷ್ಟ್ರದ ಪುರೋಗಾಮಿ ಚಳುವಳಿ, ಅದರ ಸಂಘಟನೆಗಳು, ಪಕ್ಷಗಳು ಆಗಿರುವ ಹೋಳುಗಳು ಮತ್ತು ಆ ಹಿನ್ನೆಲೆಯಲ್ಲಿ ಪ್ರತಿಗಾಮಿ ಶಕ್ತಿಗಳು ರಾಜಕೀಯ ಬಲ, ಅಸ್ತಿತ್ವ ಪಡೆದಿರುವುದರ ಸಂಕ್ಷಿಪ್ತ ಇತಿಹಾಸ ಇದೆ. ಇದು ಇಲ್ಲಿಯ ವಿಸ್ತರಿತ ನೆಲೆಯಲ್ಲಿ ಭಾರತದ ಇಂದಿನ ರಾಜಕಾರಣದಲ್ಲಿ ಬಲಪಂಥೀಯ ಶಕ್ತಿಗಳು ರಾಜ್ಯಾಧಿಕಾರವನ್ನು ಪಡೆದ ಬಗೆಯನ್ನು ಸಹ ವಿಶ್ಲೇಷಿಸುತ್ತದೆ. ಇಲ್ಲಿ ಎಡಪಂಥೀಯ ಶಕ್ತಿಗಳು ಇಟ್ಟುಕೊಳ್ಳಬೇಕಾದ ಎಚ್ಚರ ಮತ್ತು ಕಳೆದುಹೋದ ವರ್ಷಗಳಲ್ಲಿ ಎಡವಿದ ಬಗೆಗಳನ್ನು ಗುರುತಿಸಲಾಗಿದೆ. ಈ ನೆಲೆಯಲ್ಲಿ ಮುಖ್ಯವಾಗಿ ಎಡಪಂಥೀಯ ಶಕ್ತಿಗಳು ರಾಜಕೀಯ ನೆಲೆಯಲ್ಲಿ ಒಂದಾಗಬೇಕಿದೆ. ಇದಕ್ಕೆ ಪೂರಕವಾಗಿ ಕಲಾವಿದರು, ಸಾಹಿತಿಗಳು, ಕಾರ್ಮಿಕರು, ರೈತರು ಮುಂತಾದ ಎಲ್ಲಾ ವಲಯಗಳ ಜನ ನಿಲ್ಲಬೇಕಾಗಿದೆ. ವಿಘಟಿತ ನೆಲೆಯಲ್ಲಿ ಈ ಯಾವೊಂದು ವಲಯವೂ ಸಾಮಾಜಿಕವಾಗಿ, ರಾಜಕೀಯವಾಗಿ ನಿರೀಕ್ಷಿಸಿದ್ದನ್ನು ಸಾಧಿಸಲಾಗುವುದಿಲ್ಲ. ಇದನ್ನು ಇತಿಹಾಸದಿಂದ ಸಹ ಅರಿಯಬೇಕಾಗಿದೆ. ಈ ನೆಲೆಯಲಿ 'ಭೂತ'ದ ಬಗೆಗಿನ ವರ್ತಮಾನದ ತಿಳಿವು ಮತ್ತು ಕಾರ್ಯಕ್ರಮಗಳು ಪ್ರಕಟಗೊಳ್ಳಬೇಕಿದೆ. ಇದಕ್ಕೆ ಬದಲಿಗೆ, ಮುಸುಕು ಹಾಕಿ ಅತ್ತರೆ ಉಪಯೋಗವಿಲ್ಲ. ಮೂಲೆ ಸೇರಿ ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಳ್ಳುವುದರಿಂದಲೂ ಹೆಚ್ಚಿನ ಉಪಯೋಗವಿಲ್ಲ. ಈ ನೆಲೆಯಲ್ಲಿ ಎಲ್ಲ ಜನಪರ ಅಥವಾ ಎಡಪಂಥೀಯ ರಾಜಕೀಯ, ಸಾಹಿತ್ಯಕ, ಕಲಾ ವಲಯಗಳು ಅರಿವು ಮತ್ತು ಕ್ರಿಯೆಯ ನೆಲೆಯಲ್ಲಿ ಒಂದುಗೂಡಿ ಕಾರ್ಯೋನ್ಮುಖವಾಗಬೇಕಿದೆ. ಇದು ಮಾತ್ರ ಭಾರತದ ಇಂದಿನ (ವಿಶೇಷವಾಗಿ ರಾಜಕೀಯ ದುರವಸ್ಥೆಯ) ಸನ್ನಿವೇಶಕ್ಕೆ ಸೂಕ್ತ ಪರ್ಯಾಯವನ್ನು ನಿರ್ಮಿಸಬಲ್ಲುದು. ಈ ಆಶಯದ ನೆಲೆಯಲ್ಲಿ ಮೂಡಿದ ರಾಜನ್ ಬಾವಡೇಕರ್ ಅವರ ಈ ಲೇಖನ ಇಂದು ಹೆಚ್ಚು ವಿಚಾರಯೋಗ್ಯ ಲೇಖನ. ಹಾಗಾಗಿಯೇ ಡಾ॥ ಜಿ. ಆರ್. ಅವರು ಇದನ್ನು ಕನ್ನಡದ ಓದುಗರಿಗೂ ಪ್ರಸ್ತುತಗೊಳಿಸಿದ್ದು ಎಂದು ಭಾವಿಸಿದ್ದೇನೆ. 'ಹೊಸತು' ತನ್ನ ಎಂದಿನ ನಡೆದು ಬಂದ ದಾರಿಗೆ ಇದು ಪೂರಕವಾಗಿದೆ. ಈ ದಾರಿ ನೆಮ್ಮದಿಯ ನಾಳೆ ನಮ್ಮದಾಗಲು ನೆರವಾಗುತ್ತದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ...

*ಬೆಂಗಳೂರು* ***ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ***






ಡಿಸೆಂಬರ್ ೨೦೧೫ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಪುರೋಗಾಮಿ ಚಳುವಳಿಯ ಒಂದು ಪಕ್ಷಿನೋಟ' (ಮೂಲ : ರಾಜನ್ ಬಾವಡೇಕರ್ – ಕನ್ನಡಕ್ಕೆ : ಜಿ. ಆರ್.) ಎಂಬ ಲೇಖನದ ಬಗ್ಗೆ ನನ್ನ ಒಂದೆರಡು ಅನಿಸಿಕೆಗಳು.

ಕೇವಲ ಶೇಕಡ ೩೧ರಷ್ಟು ಮತಗಳನ್ನು ಪಡೆದ ಮೋದಿ ಅವರ ಪಕ್ಷವು ಅಧಿಕ ಬಹುಮತವನ್ನು ಪಡೆದದ್ದು ಹೇಗೆ ಸಾಧ್ಯವಾಯಿತು ಎಂಬುದನ್ನು ಚರ್ಚಿಸುತ್ತಲೇ ನಮ್ಮ ಚುನಾವಣಾ ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ಲೇಖಕ ಬಾವಡೇಕರ್ ಬಯಲುಗೊಳಿಸಿದ್ದಾರೆ. ಬಲಪಂಥೀಯ ಪಕ್ಷ ಬಿ.ಜೆ.ಪಿ. ಜೊತೆಗೆ, ಸಂಘಪರಿವಾರ, ಶಿವಸೇನೆ ಮುಂತಾದ ಸಂಘಟನೆಗಳು ವ್ಯಾಪಕವಾದ ಹಿಂಸಾಕೃತ್ಯಗಳು ಮತ್ತು ದೌರ್ಜನ್ಯಗಳಲ್ಲಿ ತೊಡಗಿ ದೇಶದಲ್ಲಿ ಫ್ಯಾಸಿಸ್ಟ್ ಮನೋಭಾವ ಬೆಳೆಯಲು ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿವೆ; ಇವುಗಳ ವಿರುದ್ಧ ಹೋರಾಡಲು ಎಡಪಕ್ಷಗಳೂ ಸೇರಿದಂತೆ ೨೦೧೪ರ ಲೋಕಸಭಾ ಚುನಾವಣೆಯಲ್ಲಿ ಬಿ.ಜೆ.ಪಿ.ಗೆ ಮತ ಹಾಕದ ಮಿಕ್ಕ ಶೇಕಡ ೬೯ರಷ್ಟು ಜನರನ್ನು ಪ್ರತಿನಿಧಿಸುವ ಪಕ್ಷಗಳು ಏಕೆ ವಿಫಲವಾಗಿವೆ ಎಂಬುದರ ಬಗ್ಗೆ ಸಾಕಷ್ಟು ಬೆಳಕು ಚೆಲ್ಲಿದ್ದಾರೆ.

ಬಲಪಂಥೀಯ ಬಿ.ಜೆ.ಪಿ. ರಾಜಕೀಯ ಮುಖ್ಯವಾಹಿನಿಗೆ ಬರಲು ಶ್ರಾವಣ, ಭಾದ್ರಪದ, ಆಮೇಲೆ ಮಾರ್ಗಶಿರ, ಗಣೇಶನ ಹಬ್ಬ, ನವರಾತ್ರಿಯಷ್ಟೇ ಅಲ್ಲ, ಬಾಬ್ರಿ ಮಸೀದಿ ವಿವಾದವೂ ಸಾಲದೆಂಬಂತೆ ರಾಮಾಯಣ, ಮಹಾಭಾರತ ಟಿ.ವಿ. ಸೀರಿಯಲ್ಲುಗಳು, ಎಲ್ಲವೂ ಹೇಗೆ ಆ ಪಕ್ಷಕ್ಕೆ ನೆರವಾಗಿವೆ ಎಂಬುದನ್ನು ಬಾವಡೇಕರ್ ತಾರ್ಕಿಕವಾಗಿ ವಾದಿಸಿರುವುದು ಅರ್ಥಪೂರ್ಣವಾಗಿದೆ. ತುರ್ತು ಪರಿಸ್ಥಿತಿ ಸಂಬಂಧದಲ್ಲಿ ಸಮಾಜವಾದಿ ಲೋಕನಾಯಕ ಜಯಪ್ರಕಾಶ ನಾರಾಯಣ ಅವರು ಆರೆಸ್ಸೆಸ್‌ಗೆ ಅದ್ಭುತವಾದ ಸರ್ಟಿಫಿಕೇಟ್ ನೀಡಿರುವುದನ್ನು ಟೀಕಿಸಿರುವುದು ಸೂಕ್ತವಾಗಿದೆ. ಈ ದಿಶೆಯಲ್ಲಿ ನರಸಿಂಹರಾವ್, ರಾಜೀವ್ ಗಾಂಧಿಯಂಥವರೂ ಪರೋಕ್ಷವಾಗಿ ಜಡ್ಡು ಮನಸ್ಸಿನ ಹಿಂದುತ್ವವಾದಿಗಳ ಬೆಳವಣಿಗೆಗೆ ಹೇಗೆ ಕಾರಣರಾಗಿದ್ದಾರೆ ಎಂಬುದನ್ನೂ ಓದುಗರ ಗಮನಕ್ಕೆ ತಂದಿದ್ದಾರೆ ಬಾವಡೇಕರ್.

ಸ್ವತಃ ಪ್ರಗತಿಪರ ಚಿಂತಕರೂ, ಕ್ರಿಯಾಶೀಲ ಕಾರ್ಯಕರ್ತರೂ ಆಗಿರುವ ಬಾವಡೇಕರ್ ಪುರೋಗಾಮಿ ಚಳುವಳಿಯ ಮುಂಚೂಣಿಯಲ್ಲಿರುವ, ಶೋಷಣೆಯ ವಿರುದ್ಧ ಪ್ರಾಮಾಣಿಕವಾಗಿ ಹೋರಾಡುತ್ತಲೇ ಇರುವ ಎಡಪಕ್ಷಗಳು ಪ್ರಗತಿಗಾಮಿ ಬಿ.ಜೆ.ಪಿ.ಯಂತಹ ಪಕ್ಷವನ್ನು ಹಿಮ್ಮೆಟ್ಟಿಸಲು ಏಕೆ ಶಕ್ತವಾಗಿಲ್ಲ, ಏಕೆ ಆಗಾಗ್ಗೆ ಎಡವುತ್ತಲೇ ಇರುತ್ತವೆ, ಕಾಲಕಾಲಕ್ಕೆ ತಪ್ಪುಗಳನ್ನು ಎಸಗುತ್ತಲೇ ಇರುತ್ತವೆ ಎಂಬುದನ್ನು ವಿಶ್ಲೇಷಿಸಿರುವುದು ಸರಿಯಾಗಿಯೇ ಇದೆ.

ಲೇಖನದ ಕಡೆಯ ಪ್ಯಾರಾದಲ್ಲಿ ರಾಜನ್ ಬಾವಡೇಕರ್ ಅವರ "ಬಲಪಂಥೀಯ ಪಕ್ಷದ್ದು ಒಂದೇ ಚಿಹ್ನೆ, ಆದರೆ ಪುರೋಗಾಮಿ ಪಕ್ಷಗಳ ಚಿಹ್ನೆಗಳು ಹಲವು. ಎಲ್ಲ ಎಡ ಮತ್ತು ಪುರೋಗಾಮಿ ಪಕ್ಷಗಳು ಇನ್ನಾದರೂ ಒಂದೇ ಚಿಹ್ನೆಗೆ ಬದ್ಧರಾಗುವುದು ಅತ್ಯವಶ್ಯಕ. ನಾವೆಲ್ಲಾ ಒಂದು ಕುಟುಂಬದವರಾಗಲು ಇನ್ನೂ ಮೀನಾ–ಮೇಷ ಎಣಿಸುತ್ತಿರೋಣವೇ ?" ಎಂಬ ದೂರದೃಷ್ಟಿಯುಳ್ಳ ಮಾತುಗಳು ಎಲ್ಲ ಎಡಪಕ್ಷಗಳು, ಪ್ರಗತಿಪರ ಸಂಘಟನೆಗಳು, ಸಾಹಿತಿಗಳು, ಕಲಾವಿದರು, ನಾಟಕಕಾರರು ಈ ನೆಲದಲ್ಲಿ ಒಂದು ಸಂಯುಕ್ತ ರಾಜಕೀಯ ಪರ್ಯಾಯವನ್ನು ರೂಪಿಸಲು ಮುಂದಾಗಬೇಕು; ಹಾಗಾದಾಗ ಮಾತ್ರ ಭಾರತದಲ್ಲಿ ಪ್ರಜಾಪ್ರಭುತ್ವ, ಧರ್ಮನಿರಪೇಕ್ಷತೆ, ಆರ್ಥಿಕ ಸಮಾನತೆ ಮುಂತಾದ ಉದಾತ್ತ ಮೌಲ್ಯಗಳು ನೆಲೆಗೊಳ್ಳಲು ಸಾಧ್ಯ ಎಂದು ಸೂಚಿಸಿರುವುದು ಎಡಪಕ್ಷಗಳಿಗೇ ಅಲ್ಲದೆ ಎಲ್ಲ ಪ್ರಗತಿಪರ ಶಕ್ತಿಗಳಿಗೂ ಮಾರ್ಗಸೂಚಿಯಂತಿದೆ.

ಅತ್ಯಂತ ಸಂದರ್ಭೋಚಿತವಾಗಿರುವ ಈ ಲೇಖನವನ್ನು ಸಮರ್ಥವಾಗಿ ಭಾಷಾಂತರಿಸಿ 'ಹೊಸತು' ಓದುಗರಿಗೆ ಉತ್ತಮ ಕೊಡುಗೆ ನೀಡಿದ್ದಾರೆ ಜಿ. ಆರ್. ಅವರು.

*ಬೆಂಗಳೂರು* ***ವಿ. ಚಂದ್ರಶೇಖರ್***











ಸಿ. ಆರ್. ಕೃಷ್ಣರಾವ್

ಶೀತಯುದ್ಧ ತುದಿ ಮುಟ್ಟಿದ್ದ ಕಾಲ, ಕಳೆದ ಶತಮಾನದ ಉತ್ತರಾರ್ಧದಲ್ಲಿ ಮೂರನೇ ಮಹಾಯುದ್ಧದ ಸಾಧ್ಯತೆಯ ಕುರಿತು ಬಿರುಸಿನ ಚರ್ಚೆ ನಡೆಯುತ್ತಿತ್ತು. ಅದು ಭಯಂಕರವಾದ ನ್ಯೂಕ್ಲಿಯರ್ ಅಸ್ತ್ರಗಳ ಬಳಕೆಯದಾಗಿದ್ದು ಇಡೀ ಜಗತ್ತು ಭಸ್ಮವಾಗುವುದೆಂಬ ಭೀತಿ ಆವರಿಸಿತ್ತು. ಸಂಭವಿಸುತ್ತಿದ್ದ ಘಟನೆಗಳೂ ಅದಕ್ಕೆ ಪುಷ್ಟಿ ನೀಡುತ್ತಿದ್ದುವು. ಚೀಣಾದ ಮಾವೋತ್ಸೆ ತುಂಗರಂಥವರು ಮೂರನೇ ಮಹಾಯುದ್ಧ ಸಮಾಜವಾದಿ ವ್ಯವಸ್ಥೆಯನ್ನು ಪ್ರಪಂಚದಾದ್ಯಂತ ವಿಸ್ತರಿಸುವುದು ಎಂಬ ವಿತಂಡವಾದವನ್ನು ಮಂಡಿಸುತ್ತಿದ್ದರು. ನ್ಯೂಕ್ಲಿಯರ್ ಯುದ್ಧ ಸಂಭವಿಸಿದರೆ ಮನುಕುಲ ನಿರ್ನಾಮವಾಗುತ್ತದೆ ಎಂದು ವಿಜ್ಞಾನಿಗಳು ಹೇಳುತ್ತಿದ್ದರು. ಆ ದಿನಗಳಲ್ಲಿ ಈ ವಿಷಯ ಕುರಿತು ಬೇಕಾದಷ್ಟು ಲೇಖನಗಳು ಪ್ರಕಟವಾಗುತ್ತಿದ್ದುವು. ಅವುಗಳಲ್ಲಿ ಒಂದು ಲೇಖನ ಮೂರನೇ ಯುದ್ಧ ಪ್ರಪಂಚದಲ್ಲಿ ಮತ್ತೆ ಜರುಗಿದರೆ ಅದು ಇಸ್ಲಾಮ್ ಮತ್ತು ಕ್ರೈಸ್ತಧರ್ಮೀಯರ ನಡುವೆ ಆಗಿರುತ್ತದೆ ಎಂದು ವಾದಿಸಿತ್ತು. ಆ ಲೇಖಕನ ಹೆಸರು ಮುಂತಾದ ವಿವರಗಳು ಈಗ ನೆನಪಿಲ್ಲ. ಆದರೆ ಲೇಖನದಲ್ಲಿ ಹೇಳಿದ್ದ ಮಾತು ಮಾತ್ರ ಆಗಾಗ ನೆನಪಿನಲ್ಲಿ ಸುಳಿದು ಹೋಗುತ್ತದೆ. ಇಂದು ಜಾಗತಿಕ ಕ್ಷೇತ್ರದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ನೋಡುತ್ತಿದ್ದರೆ ಆ ಲೇಖನದ ಪ್ರತೀಕ್ಷೆ ಸರಿಯೇನೋ ಎನಿಸುತ್ತದೆ. ಅದರ ಸತ್ಯಾಸತ್ಯತೆ ಏನೇ ಇರಲಿ ಇಂದು ಧರ್ಮದ ಹೆಸರಿನಲ್ಲಿ, ಇಸ್ಲಾಮ್ ಮತಾಂಧರು ನಡೆಸುತ್ತಿರುವ ಭಯೋತ್ಪಾದಕ ಕೃತ್ಯಗಳು ಪ್ರಪಂಚದಾದ್ಯಂತ ಹರಡಿದೆ. ಭಯೋತ್ಪಾದನೆಯಿಂದ ಭಯದ ವಾತಾವರಣ ಇರುವುದಂತೂ ನಿಜ, ಹಾಗಾಗಿ ಹೆಚ್ಚುತ್ತಿರುವ ಭಯೋತ್ಪಾದಕತೆ ಮತ್ತು ಅಸಹಿಷ್ಣುತೆ ಉಂಟುಮಾಡಿರುವ ಅಭದ್ರತೆ ಆತಂಕಕಾರಿ. ಭಯೋತ್ಪಾದನೆ ಮತ್ತು ಅಸಹಿಷ್ಣುತೆ ಒಂದೇ ನಾಣ್ಯದ ಎರಡು ಮುಖಗಳು. ಒಂದು ಇನ್ನೊಂದಕ್ಕೆ ಪ್ರೇರಕ. ಅದು ಧಾರ್ಮಿಕವಾಗಿರಬಹುದು, ರಾಜಕೀಯ ಅಥವಾ ಆರ್ಥಿಕವಾಗಿರಬಹುದು. ಯಾವುದೇ ಆದರೂ ಅದನ್ನು ಅನುಭವಿಸುವವರು ಜನಸಾಮಾನ್ಯರು.

# ಹೆಚ್ಚುತ್ತಿರುವ ಭಯೋತ್ಪಾದನೆ, ಅಸಹಿಷ್ಣುತೆಯ ೨೦೧೫








ಇಪ್ಪತ್ತೊಂದನೇ ಶತಮಾನದ ಪ್ರಾರಂಭದಲ್ಲೆ ಅಮೆರಿಕದ ನ್ಯೂಯಾರ್ಕ್ ನಗರದ ವಿಶ್ವ ವಾಣಿಜ್ಯ ಸಂಸ್ಥೆಯ ಕಟ್ಟಡದ ಮೇಲೆ ವಿಮಾನ ಅಪ್ಪಳಿಸಿ ದುರಂತ ಸಂಭವಿಸಿದಾಗಲೇ ಭಯೋತ್ಪಾದನೆಯ ಅಬ್ಬರ ಅಂತರರಾಷ್ಟ್ರೀಯವಾಗಿ ಪ್ರಕಟವಾದದ್ದು, ಅಮೆರಿಕ ಭಯೋತ್ಪಾದಕರ ವಿರುದ್ಧ ಸಮರ ಸಾರಿದ್ದು. ಹಾಗೆಂದರೆ ಪ್ರಪಂಚದಲ್ಲಿ ಇದಕ್ಕೆ ಮುಂಚೆ ಭಯೋತ್ಪಾದನೆ ಎನ್ನುವುದು ಇರಲಿಲ್ಲವೆ ? ಖಂಡಿತ ಇತ್ತು, ಆದರೆ ಅದು ಜಗತ್‌ವ್ಯಾಪಿಯಾಗಿರಲಿಲ್ಲ, ಸೀಮಿತವಾಗಿತ್ತು. ಹಾಗೆ ನೋಡಿದರೆ, ಮನುಕುಲದ ಇತಿಹಾಸದಲ್ಲಿ ಮಾನವನಿಂದ ಮಾನವನ ಶೋಷಣೆ ಪ್ರಾರಂಭವಾದಾಗಲೇ ಭಯೋತ್ಪಾದನೆಯೂ ಹುಟ್ಟಿಕೊಂಡಿತು ಎನ್ನಬಹುದು. ಬಲಾಢ್ಯರ ಮೇಲುಗೈ, ದಬ್ಬಾಳಿಕೆ ಮತ್ತು ಅದರ ವಿರುದ್ಧ ಪ್ರತಿರೋಧವೇ ಮೂಲ ಎನ್ನಬಹುದು. ಇತಿಹಾಸದುದ್ದಕ್ಕೂ ಇದನ್ನು ಕಾಣುತ್ತ ಬಂದಿದ್ದೇವೆ. ವಿಸ್ತರಣಾಕಾಂಕ್ಷಿ ರಾಜ್ಯಗಳ ಮಧ್ಯೆ ನಡೆಯುತ್ತಿದ್ದ ಯುದ್ಧಗಳೂ ಕೂಡ ಒಂದು ರೀತಿಯ ಭಯೋತ್ಪಾದನೆಯೆ ಎಂದರೆ ತಪ್ಪಾಗದು. ಹಾಗೆಯೇ ಮತಧರ್ಮಗಳ ಶ್ರೇಷ್ಠತೆಯ ಅಸಹನೆಯೂ ಕೂಡ ಮಾರಣಹೋಮಕ್ಕೆ ಕಾರಣವಾಗಿದೆ. ರಾಷ್ಟ್ರ ಪ್ರಭುತ್ವಗಳು ನಡೆಸುವ ದಬ್ಬಾಳಿಕೆಯೂ ಕೂಡ ಭಯೋತ್ಪಾದನೆಯೇ. ಇದು ಬೇರೆಯದೇ ವಿಷಯ.

೨೦೧೫ರ ನವೆಂಬರ್ ೧೩ರಂದು ಪ್ಯಾರಿಸಿನಲ್ಲಿ ನಡೆದ ಭಯೋತ್ಪಾದಕರ ಸರಣೀ ದಾಳಿಯ ದುರಂತ ಇಡೀ ಪ್ರಪಂಚದ ಗಮನ ಸೆಳೆಯಿತು. ನೂರ ಮೂವತ್ತು ಮಂದಿ ಅಮಾಯಕರು ಅಸುನೀಗಿದರು. ಇದಕ್ಕೆ ಮುಂಚೆ ಅಲ್ಲೇ ವರ್ಷದ ಆರಂಭದಲ್ಲಿ 'ಚಾರ್ಲಿ ಹೆಬ್ಡೊ' ನಿಯತಕಾಲಿಕೆ ಮೇಲೆ ದಾಳಿ ನಡೆದಿತ್ತು. ಎರಡೂ ದಾಳಿಗಳು ಇಸ್ಲಾಮೀ ಉಗ್ರರು ನಡೆಸಿದ್ದು. ಅಕ್ಟೋಬರ್ ೧೦ರಂದು ಟರ್ಕಿಯ ರಾಜಧಾನಿ ಅಂಕಾಲಾದಲ್ಲಿ ನಡೆದ ದಾಳಿಯಲ್ಲಿ ೧೧೦ ಜನ ಆಹುತಿಯಾದರು. ಅದೇ ತಿಂಗಳ ೩೧ರಂದು ರಷ್ಯದ ವಿಮಾನವೊಂದರ ದುರಂತದಲ್ಲಿ ೨೨೪ ಮಂದಿ ಪ್ರಯಾಣಿಕರು ಹತರಾದರು. ಇಂಥ ದಾಳಿಗಳು ಬೈರೂತ್, ಲೆಬನಾನ್ ಮುಂತಾದ ಕಡೆಗಳಲ್ಲೂ ನಡೆದಿವೆ. ಇರಾಕ್-ಸಿರಿಯಾ ಗಡಿಯಲ್ಲಿ 'ಇಸ್ಲಾಮಿಕ್ ರಾಜ್ಯ' ಸ್ಥಾಪಿಸಲು ಹೊರಟಿರುವ ಉಗ್ರರ ಕೈವಾಡ ಈ ಎಲ್ಲ ದಾಳಿಗಳ ಹಿಂದೆ ಇದೆ. ಈ ಉಗ್ರರ ಸಂಘಟನೆ ಅಲ್‌ಖೈದಾ, ತಾಲಿಬಾನ್ ಮುಂತಾದ ಸಂಘಟನೆಗಳನ್ನೂ ಮೀರಿ, ಅವುಗಳನ್ನೂ ಒಳಗೊಂಡಂತೆ ಪ್ರಪಂಚದ ಹಲವೆಡೆಗಳಿಂದ ಇಸ್ಲಾಮಿಕ್ ಉಗ್ರರನ್ನು ಆಕರ್ಷಿಸುತ್ತಿದೆ. ಭಯೋತ್ಪಾದಕರ ವಿರುದ್ಧ ಅಮೆರಿಕ ಸಾರಿದ ಸಮರ ಈಗ ಐರೋಪ್ಯ ರಾಷ್ಟ್ರಗಳನ್ನು ಒಳಗೊಂಡು ಜಾಗತಿಕ ಸ್ವರೂಪ ತಳೆದಿದೆ. ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್, ರಷ್ಯ ಮುಂತಾದ ದೇಶಗಳೆಲ್ಲ ಇಸ್ಲಾಮಿಕ್ ರಾಜ್ಯದ ಮೇಲೆ ವೈಮಾನಿಕ ದಾಳಿ ನಡೆಸುತ್ತಿವೆ. ಇಂಥ ದಾಳಿಗಳಲ್ಲಿ ಉಗ್ರರಿಗಿಂತ ಅಮಾಯಕ ಜನರೇ ಹೆಚ್ಚು ಸಾವಿಗೀಡಾಗುತ್ತಿದ್ದಾರೆ. ಇದರಿಂದಾಗಿ ಸುರಕ್ಷಿತ ಸ್ಥಳಗಳಲ್ಲಿ ಆಶ್ರಯ ಪಡೆಯಲು ನಿರಾಶ್ರಿತರ ಸಂಖ್ಯೆ ವರ್ಧಿಸುತ್ತಿದೆ. ಯೂರೋಪಿನ ರಾಷ್ಟ್ರಗಳಲ್ಲಿ ಸಿರಿಯಾ-ಇರಾಕ್‌ಗಳಿಂದ ವಲಸೆ ಬರುತ್ತಿರುವ ಲಕ್ಷಾಂತರ ಮಂದಿ ನಿರಾಶ್ರಿತರ ಸಮಸ್ಯೆ ಬೃಹದಾಕಾರವಾಗಿ ಬೆಳೆದಿದೆ. ವಿಶ್ವ ಸಂಸ್ಥೆ ಕೂಡ ಈ ಅಪಾಯಕಾರಿ ಬೆಳವಣಿಗೆಯನ್ನು ಗಣನೆಗೆ ತೆಗೆದುಕೊಂಡು ಸಂಘಟಿತ ಪ್ರಯತ್ನಕ್ಕೆ ಒತ್ತು ನೀಡಿದೆ. ಇಸ್ಲಾಮಿಕ್ ರಾಜ್ಯ ಸ್ಥಾಪನೆಗೆ ಉದ್ಯುಕ್ತವಾಗಿರುವ ಉಗ್ರರು ಸಿರಿಯಾ-ಇರಾಕ್ ಗಡಿಯಲ್ಲಿ ಸಾಕಷ್ಟು ಪ್ರದೇಶವನ್ನು ಆಕ್ರಮಿಸಿಕೊಂಡಿದ್ದಾರೆ. ಅಫ್ಘಾನಿಸ್ತಾನದ ಆಕ್ರಮಣದೊಂದಿಗೆ ಅಮೆರಿಕ ಪ್ರಾರಂಭಿಸಿದ ಆಡಳಿತ ಬದಲಾವಣೆಯ ಪ್ರಕ್ರಿಯೆಯೇ ಇಂದಿನ ಎಲ್ಲ ಅಪಾಯಕಾರಿ ಬೆಳವಣಿಗೆಗಳಿಗೆ ಮೂಲ. ಪಶ್ಚಿಮ ಏಶಿಯಾದಲ್ಲಿ, ಮೇಲುಗೈ ಪಡೆಯಲು ಇರಾಕ್, ಲಿಬಿಯಾ ಮೊದಲಾದ ದೇಶಗಳಲ್ಲಿ ಆಡಳಿತಗಾರರನ್ನು ಪದಚ್ಯುತಗೊಳಿಸಿ, ಕೈಗೊಂಬೆ ಸರಕಾರಗಳನ್ನು ಸ್ಥಾಪಿಸಿದ ಅಮೆರಿಕ ಸಿರಿಯಾದಲ್ಲಿ ಅಸ್ಸಾದ್ ಆಡಳಿತವನ್ನು ಬದಲಿಸಲು ಕೈಹಾಕಿದ್ದೇ ಇಂದಿನ ಪರಿಸ್ಥಿತಿಗೆ ಕಾರಣ. ಇದು ಎಲ್ಲಿಗೆ ಮುಟ್ಟೀತೋ ನೋಡಬೇಕು. ಇದೊಂದು ಪ್ರಮುಖ ಅಂತರರಾಷ್ಟ್ರೀಯ ಬೆಳವಣಿಗೆ.

ಅರ್ಧ ಶತಮಾನದ ನಂತರ ಕ್ಯೂಬಾದ ಮೇಲೆ ಅಮೆರಿಕ ವಿಧಿಸಿದ್ದ ಆರ್ಥಿಕ ದಿಗ್ಬಂಧನ ಅಂತ್ಯಗೊಂಡಿದ್ದು, ಎರಡೂ ದೇಶಗಳ ಮಧ್ಯೆ ರಾಯಭಾರಿ ಸಂಬಂಧಗಳು ಪುನರಾರಂಭವಾದ್ದು ಗಮನಾರ್ಹವಾದ ವಿದ್ಯಮಾನ. ಕ್ಯೂಬಾದಲ್ಲಿ ಫೀಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಸಮಾಜವಾದಿ ಸಮಾಜ ಸ್ಥಾಪನೆಯ ಗುರಿಹೊಂದಿದ

ಆಡಳಿತ ಸ್ಥಾಪನೆಯಾದ ಮೇಲೆ ಅಮೆರಿಕದ ಕೆಂಗಣ್ಣಿಗೆ ಗುರಿಯಾಗಿತ್ತು. ಕಳೆದ ಶತಮಾನದ ಉತ್ತರಾರ್ಧದಲ್ಲಿ ಮೂರನೇ ಮಹಾಯುದ್ಧಕ್ಕೆ ಕಣವಾಗುವ ಸಾಧ್ಯತೆಯೂ ಈ ಪುಟ್ಟ ದ್ವೀಪಕ್ಕೆ ಇತ್ತು ಎನ್ನುವುದನ್ನು ನೆನಪಿಸಿಕೊಳ್ಳಬೇಕು. ಇದೇ ಬಗೆಯಲ್ಲಿ ಸ್ವಾಗತಾರ್ಹವಾದ ಇನ್ನೊಂದು ಬೆಳವಣಿಗೆ ಎಂದರೆ ಅಮೆರಿಕ ಮತ್ತು ಇರಾನ್‌ಗಳ ಮಧ್ಯೆ ಇದ್ದ ನ್ಯೂಕ್ಲಿಯರ್ ವಿವಾದದ ಅಂತ್ಯ. ಒಂದು ಹಂತದಲ್ಲಿ ಈ ವಿವಾದ ಎರಡೂ ದೇಶಗಳ ನಡುವೆ ಸಶಸ್ತ್ರ ಸಂಘರ್ಷಕ್ಕೂ ಎಡೆಯಾಗುವ ಸಂಭವವಿತ್ತು ಎನ್ನುವುದನ್ನು ಮರೆಯಲಾಗದು. ಭಾರತ ಉಪಖಂಡದ ಮಟ್ಟಿಗೆ ಹಿಮಾಲಯ ಪರ್ವತದ ತಪ್ಪಲಿನಲ್ಲಿರುವ ಚಿಕ್ಕ ದೇಶ ನೇಪಾಳ ಹೊಸ ಸಂವಿಧಾನ ಅನುಮೋದನೆಯೊಂದಿಗೆ ಜಾತ್ಯತೀತ ಗಣರಾಜ್ಯವಾಗಿರುವುದು ಸಂತಸದ ಸಂಗತಿ. ಪ್ರಪಂಚದಲ್ಲಿ ಇದುವರೆಗೆ ನೇಪಾಳ ಏಕೈಕ ಹಿಂದೂ ರಾಷ್ಟ್ರವಾಗಿತ್ತು. ಭಾರತದ ಗಡಿಯಲ್ಲಿರುವ ನೇಪಾಳದ ಮಾದೇಶಿ ಜನರ ಹೊಸ ಸಂವಿಧಾನದ ವಿರುದ್ಧ ನಡೆಸುತ್ತಿರುವ ಆಂದೋಳನ ಭಾರತ ನೇಪಾಳಗಳ ಮಧ್ಯೆ ವಿರಸ ಉಂಟುಮಾಡಿದೆ, ವಾಣಿಜ್ಯ ವ್ಯವಹಾರ ಸ್ಥಗಿತಗೊಂಡಿದೆ. ಆಡಳಿತ ವಹಿಸಿಕೊಂಡಿರುವ ಕಮ್ಯುನಿಸ್ಟ್ ಸರಕಾರ ಸಂವಿಧಾನದ ವಿವಾದಾತ್ಮಕ ಪ್ರಸ್ತಾಪಗಳನ್ನು ಬಗೆಹರಿಸುವುದರಲ್ಲಿ, ಈ ವರ್ಷ ಸಂಭವಿಸಿದ್ದ ಭೂಕಂಪನದ ಅವಘಡದ ಅನಾಹುತದ ಚೇತರಿಕೆಯಲ್ಲಿ ತೊಡಗಿದೆ. ನೆರೆಯ ರಾಷ್ಟ್ರ ಮ್ಯನ್ಮಾರ್‌ನಲ್ಲಿ ಚುನಾವಣೆಗಳು ಜರುಗಿ ಆಂಗ್ ಸಾನ್ ಸೂಕಿ ನೇತೃತ್ವದ ನ್ಯಾಷನಲ್ ಲೀಗ್ ಆಫ್ ಡೆಮಾಕ್ರಸಿ ಪ್ರಚಂಡ ಬಹುಮತ ಗಳಿಸಿದ್ದಾಗ್ಯೂ ದೇಶದಲ್ಲಿ ಪ್ರಜಾಪ್ರಭುತ್ವ ಸರಕಾರ ಅಧಿಕಾರಕ್ಕೆ ಬರುವುದು ಸುಲಭವಲ್ಲ. ಮಿಲಿಟರಿ ಸರ್ವಾಧಿಕಾರಿ ಆಡಳಿತ ತಂದಿರುವ ಸಂವಿಧಾನ ಸಾಕಷ್ಟು ನಿರ್ಬಂಧಗಳನ್ನು ವಿಧಿಸಿದೆ. ನಾಗರಿಕ ಸರಕಾರ ಅಧಿಕಾರಕ್ಕೆ ಬಂದರೂ ಮಿಲಿಟರಿಯ ಅನುಮೋದನೆ ಇಲ್ಲದೆ ಮುಂದೆ ಅಡಿ ಇರಿಸುವಂತಿಲ್ಲ. ಜಾಗತಿಕ ಮಟ್ಟದಲ್ಲಿ ಆರ್ಥಿಕ ಮುನ್ನಡೆ ಇನ್ನೂ ಬಲುದೂರ. ಚೀಣಾ, ಯೂರೋಪಿನ ರಾಷ್ಟ್ರಗಳು ಮತ್ತು ಅಮೆರಿಕದ ಆರ್ಥಿಕ ಪ್ರಗತಿ ಕುಂಠಿತವಾಗಿದೆ. ನಿರುದ್ಯೋಗ, ಆರ್ಥಿಕ ಹಿಂಜರಿಕೆ ಮುಂದುವರಿಯುತ್ತಿದೆ. ವರ್ಷಾಂತ್ಯದಲ್ಲಿ ಪ್ಯಾರಿಸ್‌ನಲ್ಲಿ ಪರಿಸರ ಮಾಲಿನ್ಯ ನಿಯಂತ್ರಣಕ್ಕಾಗಿ ಇನ್ನೊಂದು ಸುತ್ತಿನ ಮಾತುಕತೆ ನಡೆದಿದೆ. ಈ ಶೃಂಗಸಭೆಯಲ್ಲಿ ೧೯೫ ದೇಶಗಳು ಭಾಗವಹಿಸಿವೆ. ಪ್ರಪಂಚದ ಪ್ರಮುಖ ರಾಷ್ಟ್ರಗಳ ನಾಯಕರುಗಳ ಭಾಷಣದಲ್ಲಿ ಸದಾಶಯಗಳಿದ್ದುವೇ ಹೊರತು ಪ್ರಾಯೋಗಿಕವಾದ ಸಲಹೆಗಳೇನೂ ಇರಲಿಲ್ಲ. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಭೂಮಂಡಲದ ತಾಪವರ್ಧನೆಗೆ ಮೂಲ ಕಾರಣ ಎನ್ನುವುದು ಹೊಸ ವಿಷಯವೇನಲ್ಲ. ಸಾಕಷ್ಟು ಪರಿಸರ ಹಾನಿಮಾಡಿರುವ ಈ ದೇಶಗಳು ಅಭಿವೃದ್ಧಿಶೀಲ ದೇಶಗಳ ಮೇಲೆ ಒತ್ತಡ ತರುತ್ತಿವೆಯೇ ಹೊರತು ಪರಿಹಾರ ನೀಡಲು ಹಣ ಪಾವತಿಸಲು ತಯಾರಾಗಿಲ್ಲ. ಈ ಜಗ್ಗಾಟ ವರ್ಷಗಟ್ಟಳೆ ನಡೆಯುತ್ತಿದೆ. ಪ್ರತಿಸಲ ಶೃಂಗಸಭೆ ನಡೆದಾಗಲೂ ಒಂದು ಒಪ್ಪಂದವಾದೀತು ಎಂಬ ಪ್ರತೀಕ್ಷೆ ಇತ್ತು. ಈ ಸಲ ತೇಪೆಹಾಕುವ ಕಾರ್ಯ ನಡೆದಿದೆ. ಒಂದು ಒಪ್ಪಂದವೂ ಆಗಿದೆ. ಭೂಮಂಡಲದ ತಾಪಮಾನ ತಗ್ಗಿಸಲು. ಕಾರ್ಬನೀಕರಣ ನಿಯಂತ್ರಿಸಲು, ವಿಜ್ಞಾನಿಗಳು ಒಪ್ಪಂದದ ಕುರಿತು ಸಂಶಯ ವ್ಯಕ್ತಗೊಳಿಸಿದ್ದಾರೆ. ಒಪ್ಪಂದವಾದರೂ ಅದು ಕಾರ್ಯಗತ ವಾಗುವುದಂತೂ ದುಸ್ತರ.

ಭಾರತದಲ್ಲಿ ಭಾಜಪ ನೇತೃತ್ವದ ಮೋದಿ ಸರಕಾರ ಅಧಿಕಾರಕ್ಕೆ ಬಂದು ಎರಡು ವರ್ಷವಾಗುತ್ತ ಬಂದಿದೆ. ಇಪ್ಪತ್ತು ತಿಂಗಳಲ್ಲಿ ಇಪ್ಪತ್ತೈದು ದೇಶಗಳನ್ನು ಮೋದಿ ಪ್ರಧಾನಿಯಾಗಿ ಸುತ್ತಿ ಬಂದದ್ದೇ ಸಾಧನೆ. ಪ್ರಾಯಶಃ ಅತಿ ಹೆಚ್ಚು ವಿದೇಶೀ ಪ್ರವಾಸ ಕೈಗೊಂಡ ಭಾರತದ ಪ್ರಧಾನಿ ಎನಿಸಿಕೊಳ್ಳಬಹುದು. ಅಮೆರಿಕ, ಆಸ್ಟ್ರೇಲಿಯ, ಬ್ರಿಟನ್ ಹೀಗೆ ಹೋದಲ್ಲೆಲ್ಲ ಅನಿವಾಸಿ ಭಾರತೀಯರಿಂದ ಚಪ್ಪಾಳೆ ಗಿಟ್ಟಿಸಿಕೊಂಡಿದ್ದೇ ಬಂತು, ಬಂಡವಾಳ ಏನೂ ಹರಿದುಬರಲಿಲ್ಲ. ಒಪ್ಪಂದಗಳನ್ನು ಮಾಡಿಕೊಂಡು ಬಂದಿದ್ದರೂ ಅವು ಅಮಲಿಗೆ ಬರುವುದು ಖಚಿತವಿಲ್ಲ. ಉತ್ತಮ ಆಡಳಿತ, ಅಭಿವೃದ್ಧಿ, ಕಪ್ಪು ಹಣ ಹಿಂದಕ್ಕೆ ತರುವುದು, ಭ್ರಷ್ಟಾಚಾರಕ್ಕೆ ಮುಕ್ತಿ ಎಲ್ಲ ಘೋಷಣೆಗಳಾಗಿಯೇ ಉಳಿದಿವೆ. 'ಭಾರತದಲ್ಲೇ ತಯಾರಿಸಿ' ಎಂದು ಅಬ್ಬರ ಆಡಂಬರಗಳಿಂದ ಪ್ರಚುರಪಡಿಸಿದ ಯೋಜನೆ ಕಾಗದದ ಮೇಲೇ ಇದೆ. ಯೋಜನಾ ಆಯೋಗ ರದ್ದುಗೊಳಿಸಿದ್ದಾಯಿತು. ಅದರೊಂದಿಗೆ ಇನ್ನಿತರ ಸಂಸ್ಥೆಗಳನ್ನು ನಿಷ್ಕ್ರಿಯಗೊಳಿಸಲಾಯಿತು. ವಾಜಪೇಯಿ ಜನ್ಮದಿನವನ್ನು 'ಉತ್ತಮ ಆಡಳಿತ'ದ ದಿನವಾಗಿ ಆಚರಿಸುತ್ತಿರುವ ಸರಕಾರ (ಅದು ಕ್ರಿಸ್ಮಸ್ ದಿನ) ಆಡಳಿತ ನಡೆಸುತ್ತಿರುವ ವೈಖರಿ ಕಾಣುತ್ತಿದ್ದೇವೆ. ಕೋಟಿಗಟ್ಟಳೆ ಖರ್ಚು ಮಾಡಿ ಅಂತರರಾಷ್ಟ್ರೀಯ ಯೋಗ ದಿನಾಚರಣೆ ನಡೆಸಿದ್ದು ಮಹತ್ಸಾಧನೆ ಭಾಜಪ ಸರಕಾರಕ್ಕೆ. ಅಧಿಕಾರವನ್ನು ಕೇಂದ್ರೀಕರಿಸಿಕೊಂಡಿರುವ ಪ್ರಧಾನ ಮಂತ್ರಿ ನರೇಂದ್ರ ಮೋದಿ, ಬೇಕಾಬಿಟ್ಟಿ ಮಾತಾಡುವ ಕಿರಿಯ, ಹಿರಿಯ ಸಚಿವರುಗಳು, ಪಕ್ಷದ ಪ್ರಮುಖ ಎಂಪಿಗಳು ಹಾಗೂ ಸಂಘಪರಿವಾರದ ಇತರ ನಾಯಕರ ಪ್ರಚೋದನಾತ್ಮಕ ಹೇಳಿಕೆ ಗಳಿಗೆ ಕಡಿವಾಣ ಹಾಕುವ ಬದಲು ಗಂಭೀರವಾದ ಮೌನ ತಳೆಯುವುದನ್ನು ರೂಢಿಸಿ ಕೊಂಡಿದ್ದಾರೆ. ಇದು ಸಾಕಷ್ಟು ಅವಾಂತರವನ್ನು ಸೃಷ್ಟಿಸಿದೆ, ಆತಂಕ ಉಂಟುಮಾಡಿದೆ.

ಕಾರ್ಪೊರೇಟ್ ವಲಯವನ್ನು ಸಂತೈಸಲು ರೈತರಿಂದ ಭೂಮಿಯನ್ನು ವಶಪಡಿಸಿ ಕೊಂಡು ವಿತರಿಸಲು ಮೋದಿ ಸರಕಾರ ನಡೆಸಿದ ಪ್ರಯತ್ನ ವಿಫಲಗೊಂಡಿತು. ಮೂರು ಸಲ ಸುಗ್ರೀವಾಜ್ಞೆ ತಂದರೂ ದೇಶದ ರೈತ ಸಮುದಾಯ ಹಾಗೂ ಪ್ರತಿಪಕ್ಷಗಳ ವಿರೋಧ ಫಲಿಸಿತು. ಭೂಸ್ವಾಧೀನ ಕಾಯಿದೆಗೆ ತಂದಿದ್ದ ತಿದ್ದುಪಡಿ ಮಸೂದೆಯನ್ನು ಸರಕಾರ ತೆಪ್ಪಗೆ ಹಿಂತೆಗೆದುಕೊಳ್ಳಬೇಕಾಯಿತು. ಹಾಗೆಯೇ ಸರಕು ಸೇವಾ ತೆರಿಗೆ ಮಸೂದೆಯೂ ಕಗ್ಗಂಟಾಗಿದೆ. ಸರಕಾರ ಪಟ್ಟು ಸಡಿಲಿಸದಿದ್ದರೆ ಸದ್ಯಕ್ಕೆ ಅದು ಅನುಮೋದನೆಯಾಗುವುದು ಅನುಮಾನ. ವಿವಿಧ ಕ್ಷೇತ್ರಗಳಲ್ಲಿ, ಮುಖ್ಯವಾಗಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ವಿದೇಶೀ ಬಂಡವಾಳ ಹೂಡಿಕೆಯನ್ನು ನೂರಕ್ಕೆ ನೂರರಷ್ಟು ಹೆಚ್ಚಿಸಿದೆ. ಇದು ರಾಷ್ಟ್ರೀಕರಣಗೊಂಡಿರುವ ಬ್ಯಾಂಕಿಂಗ್ ವಲಯವನ್ನು ಶಿಥಿಲ ಗೊಳಿಸುವ ಹೆಜ್ಜೆಯಾಗಿದೆ. ಅದೇ ರೀತಿಯಲ್ಲಿ ಸರಕಾರ ಕಾರ್ಪೊರೇಟ್ ವಲಯಕ್ಕೆ ಅನುಕೂಲ ಕಲ್ಪಿಸಲು ಕಾರ್ಮಿಕ ಕಾಯಿದೆಯಲ್ಲಿ ಹಲವು ಮಾರ್ಪಾಟುಗಳನ್ನು ತಂದಿದೆ. ದೇಶದ ಕಾರ್ಮಿಕ ಸಂಘಟನೆಗಳು, ಸಂಘಪರಿವಾರದ ನಾಯಕತ್ವದಲ್ಲಿರುವ ಸಂಘಗಳೂ ಒಳಗೊಂಡಂತೆ ಪ್ರಬಲವಾಗಿ ಇದನ್ನು ವಿರೋಧಿಸಿವೆ. ಎಲ್ಲ ಕಾರ್ಮಿಕ ಸಂಘಟನೆಗಳು ಒಟ್ಟಾಗಿ ಸಾರ್ವತ್ರಿಕ ಮುಷ್ಕರ ನಡೆಸಿದ್ದು ಗಮನಾರ್ಹ. ಅಭಿವೃದ್ಧಿಗೆ ವಿಪಕ್ಷಗಳು ಅಡ್ಡಿಯಾಗಿವೆ ಎಂದು ಸರಕಾರ ಜಾರಿಕೊಳ್ಳಲು ನೋಡುತ್ತಿದೆ. ತನ್ನ ವೈಫಲ್ಯಗಳನ್ನು ಮರೆಮಾಚಲು ದೂಷಿಸುವುದಕ್ಕೆ ಪ್ರತಿಯಾಗಿ ಸರಕಾರ ತನ್ನ ಲೋಪವನ್ನು ತಿದ್ದಿಕೊಳ್ಳುವುದು ಅಗತ್ಯ.

ಮೋದಿ ಸರಕಾರ ಎರಡನೇ ವರ್ಷಕ್ಕೆ ಕಾಲಿರಿಸುತ್ತಿದ್ದಂತೆ ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆ ಒಂದು ಬಗೆಯ ಭೀತಿಯ ವಾತಾವರಣವನ್ನು ಸೃಷ್ಟಿಸಿದೆ. ಭಾಜಪ ಬಹುಮತ ಪಡೆದು ಅಧಿಕಾರ ವಹಿಸಿಕೊಂಡಾಗಲೆ ಸಂಘಪರಿವಾರ ಹಾಗೂ ಅದರ ಅಂಗಸಂಸ್ಥೆಗಳು ಚುರುಕುಗೊಂಡು ಭಾರತವನ್ನು ಹಿಂದೂರಾಷ್ಟ್ರವಾಗಿ ಮಾಡುವ ಕನಸನ್ನು ಸಾಕಾರಗೊಳಿಸುವುದಕ್ಕೆ ಸಿದ್ಧವಾದವು. ಆರೆಸ್ಸೆಸ್ ಮುಖಂಡರು, ಅಜ್ಞಾತದಲ್ಲಿದ್ದ ಹಿಂದೂ ಮಹಾಸಭಾ ನಾಯಕರು ಅಲ್ಪಸಂಖ್ಯಾತರನ್ನು ಎಚ್ಚರಿಸತೊಡಗಿದರು. ವಿಶ್ವ ಹಿಂದೂ ಪರಿಷತ್, ಭಜರಂಗ ದಳ, ಶ್ರೀರಾಮ ಸೇನೆ ಮುಂತಾದ ಹಿಂದೂ ಸಂಘಟನೆಗಳು ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿ ದಾಂಧಲೆ ನಡೆಸಲು ಆರಂಭಿಸಿದುವು. ನೈತಿಕ ಪೊಲೀಸ್‌ಗಿರಿ ತಾಂಡವವಾಡತೊಡಗಿತು. ಇವನ್ನೆಲ್ಲ ಹದ್ದುಬಸ್ತಿನಲ್ಲಿಡುವ ಬದಲು ಪ್ರಧಾನಿ ಮೋದಿ ಮೌನ ಸಮ್ಮತಿ ನೀಡುವಂತೆ ಪ್ರತಿಕ್ರಿಯಿಸದೆ ಸುಮ್ಮನಾದರು. ಸಂಪುಟ ಸಚಿವರುಗಳು, ಪಾರ್ಲಿಮೆಂಟ್ ಸದಸ್ಯರುಗಳು ಮನಬಂದಂತೆ ಮಾತನಾಡತೊಡಗಿದರು. ಇವೆಲ್ಲದರ ಪರಿಣಾಮವೇ ಉತ್ತರಪ್ರದೇಶದ ದಾದ್ರಿ ಕೊಲೆ ಪ್ರಕರಣ, ಕರ್ನಾಟಕದಲ್ಲಿ ವಿಚಾರವಾದಿ ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆ, ಮಹಾರಾಷ್ಟ್ರದ ಮುಂಬಯಿಯಲ್ಲಿ ಶಿವಸೈನಿಕರು ಮುಖಕ್ಕೆ ಮಸಿಬಳಿದ ಪ್ರಕರಣ, ಕ್ರಿಕೆಟ್ ಮಂಡಳಿಯ ಕಚೇರಿ ಮೇಲೆ ದಾಳಿ ಮುಂತಾದ ಘಟನೆಗಳು. ಇದಕ್ಕೆ ಮುಂಚೆ ಕಮ್ಯುನಿಸ್ಟ್ ನಾಯಕ ಗೋವಿಂದ ಪನ್ಸಾರೆ ಹಾಗೂ ಮೂಢನಂಬಿಕೆ ವಿರುದ್ಧ ಹೋರಾಡಿದ ದಾಭೋಲ್ಕರ್ ಕೊಲೆಯಾಗಿದ್ದುದನ್ನು ಗಣನೆಗೆ ತೆಗೆದುಕೊಳ್ಳಬೇಕು. ಇವಲ್ಲದೆ ಎಲ್ಲೆಲ್ಲೂ ಸರಕಾರಿ ಅನುದಾನಿತ ಸಂಸ್ಥೆಗಳಲ್ಲಿ, ಐಸಿಎಚ್ಆರ್, ಐಟಿಐ, ಐಐಎಮ್, ಎಫ್‌ಟಿಐಐ ಮುಂತಾದುವುಗಳಲ್ಲಿ ಸಂಘಪರಿವಾರದ ನಿಷ್ಠಾವಂತರನ್ನು ಹೇರಿ, ಈ ಸಂಘಟನೆಗಳ ಸ್ವಾಯತ್ತತೆಯನ್ನೇ ಕಸಿದುಕೊಳ್ಳಲಾಗುತ್ತಿದೆ. ಕ್ರಮಬದ್ಧವಾದ ರೀತಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಹಲ್ಲೆ ನಡೆಯುತ್ತಿದೆ, ಭಯದ ವಾತಾವರಣ ಸೃಷ್ಟಿಯಾಗಿದೆ. ಇವೆಲ್ಲದರ ವಿರುದ್ಧವಾಗಿ ಲೇಖಕರು, ಬುದ್ಧಿಜೀವಿಗಳು, ಕಲಾವಿದರು, ಸಿನಿಮಾ ನಟರು, ಇತರ ಪ್ರಭಾವಿ ವ್ಯಕ್ತಿಗಳು ಪ್ರತಿಭಟನೆ ವ್ಯಕ್ತಗೊಳಿಸುತ್ತಿರುವುದು ಸ್ವಾಗತಾರ್ಹವಾದ ಬೆಳವಣಿಗೆ. ಪದ್ಮ ಪ್ರಶಸ್ತಿಯನ್ನೂ ಒಳಗೊಂಡಂತೆ, ಸರಕಾರ ನೀಡುವ ಪ್ರಶಸ್ತಿಗಳನ್ನು, ಸರಕಾರಿ ಅನುದಾನಿತ ಸಂಸ್ಥೆಗಳಾದ ಸಾಹಿತ್ಯ ಅಕಾಡೆಮಿ ಮುಂತಾದವು ನೀಡಿದ್ದ ಪ್ರಶಸ್ತಿಗಳನ್ನು ಚಳುವಳಿಯೋಪಾದಿಯಲ್ಲಿ ಹಿಂದಿರುಗಿಸಲಾಗಿದೆ. ಇದನ್ನು ಮೋದಿ ಸರಕಾರದ



ಹಿರಿಯ ಸಚಿವ ಅರುಣ್ ಜೇಟ್ಲಿ ಆದಿಯಾಗಿ ಭಾಜಪ ನಾಯಕರುಗಳು ಕಾಂಗ್ರೆಸ್ ಪ್ರೇರಿತ ಎಂದು ಬಣ್ಣಿಸಿರುವುದು ಖಂಡನೀಯ. ಇದೂ ಕೂಡ ಅಸಹಿಷ್ಣುತೆಯ ಪರಮಾವಧಿಯೇ. ಲೋಕಸಭೆಯಲ್ಲಿ ಈ ಕುರಿತು ಚರ್ಚೆ ನಡೆದಾಗಲೂ ಭಾಜಪ ಸದಸ್ಯರು ಅದೇ ನಿಲುವನ್ನು ತಳೆದಿದ್ದಾರೆ. ದೇಶದಲ್ಲಿ ಹೆಚ್ಚುತ್ತಿರುವ ಅಸಹಿಷ್ಣುತೆ ಕುರಿತು ಆತಂಕ ವ್ಯಕ್ತಗೊಳಿಸಿದ ಸಿನಿಮಾ ನಟರನ್ನು ಪಾಕಿಸ್ತಾನಕ್ಕೆ ಹೋಗುವಂತೆ ತೆಗಳಿದ್ದು ಅಸಹಿಷ್ಣುತೆಯ ಇನ್ನೊಂದು ರೂಪ. ಬಿಹಾರ ಚುನಾವಣೆಯ ಸಂದರ್ಭದಲ್ಲಿ ಭಾಜಪ ಅಧ್ಯಕ್ಷ ಅಮಿತ್ ಷಾ ಭಾಜಪಗೆ ಮತ ಹಾಕದವರನ್ನು ಪಾಕಿಸ್ತಾನದ ಪರ ಎನ್ನುವ ಅರ್ಥದಲ್ಲಿ ಭಾಜಪ ಸೋತರೆ ಪಾಕಿಸ್ತಾನದಲ್ಲಿ ಪಟಾಕಿ ಸಿಡಿಸಿ ಸಂಭ್ರಮಿಸುತ್ತಾರೆ ಎಂದು ಹೇಳಿದ್ದು ಅಸಹನೆಯಲ್ಲದೆ ಮತ್ತೇನು ? ಅಂತೂ ಇಂದು ದೇಶದಲ್ಲಿ ಬೆಳೆಯುತ್ತಿರುವ ಅಸಹಿಷ್ಣುತೆಯ ವಿರುದ್ಧ ಎಚ್ಚೆತ್ತ ಜನ ಪ್ರತಿಭಟಿಸುತ್ತಿರುವುದು ವಾಸ್ತವ ಸಂಗತಿ. ಪೂನಾದ ಚಲನಚಿತ್ರ ಇನ್‌ಸ್ಟಿಟ್ಯೂಟಿನ ವಿದ್ಯಾರ್ಥಿಗಳು ನೂರನಲವತ್ತು ದಿನ ನಡೆಸಿದ ಮುಷ್ಕರ, ಹೋರಾಟ, ಅವರಿಗೆ ದೊರೆತ ಬೆಂಬಲ ಮೆಚ್ಚುವಂಥದ್ದು. ಸಂಘಪರಿವಾರಕ್ಕೆ ಬೇಕಾದ ವ್ಯಕ್ತಿ ಎಂಬ ಏಕೈಕ ಅರ್ಹತೆಯ ಮೇಲೆ ಸರಕಾರ ಇನ್‌ಸ್ಟಿಟ್ಯೂಟಿನ ಮೇಲೆ ಹೊರಿಸಿದ್ದನ್ನು ಪ್ರತಿಭಟಿಸಿ ವಿದ್ಯಾರ್ಥಿಗಳು ಮುಷ್ಕರ ಹೂಡಿದ್ದರು. ಈಗಲೂ ಅಲ್ಲಿನ ವಿದ್ಯಾರ್ಥಿಗಳು ತಮ್ಮ ಚಳವಳಿಯನ್ನು ಮುಂದುವರಿಸಿದ್ದಾರೆ ಬೇರೆ ರೀತಿಯಲ್ಲಿ. ಮುಂಬರುವ ದಿನಗಳಲ್ಲಿ ಇಂಥದೇ ಪರಿಸ್ಥಿತಿಯನ್ನು ಇತರ ಕೇಂದ್ರೀಯ ಉನ್ನತ ವಿದ್ಯಾಸಂಸ್ಥೆಗಳಲ್ಲೂ ನಿರೀಕ್ಷಿಸಬಹುದು. ಲೋಕಸಭೆಯಲ್ಲಿ ಅಸಹಿಷ್ಣುತೆ ಕುರಿತು ಚರ್ಚೆ ನಡೆದ ಸಂದರ್ಭದಲ್ಲೂ ಪ್ರಧಾನಿ ಮೋದಿ ಮೌನ ತಳೆದರು. ಗೃಹಸಚಿವ ರಾಜನಾಥ ಸಿಂಗ್ ಮಾತ್ರ ಪ್ರತಿಪಕ್ಷಗಳ ಆರೋಪಗಳನ್ನು ಅಲ್ಲಗಳೆದು ಪರೋಕ್ಷವಾಗಿ ಸಹನೆಗೆ ಕರೆ ನೀಡಿದರು.

ನ್ಯಾಯಾಧೀಶರ ನೇಮಕಾತಿಯ ವಿಚಾರದಲ್ಲಿ ಈಗಿರುವ ಕೊಲೀಜಿಯಮ್ ವ್ಯವಸ್ಥೆ ದೋಷಯುಕ್ತವಾಗಿದೆ, ನಿಗೂಢವಾದ್ದಾಗಿದೆ ಎನ್ನುವುದು ನಿಜ. ಅದನ್ನೇ ಆಧಾರವಾಗಿಸಿಕೊಂಡು ಸರಕಾರ ತನಗೆ ಬೇಕಾದ ರೀತಿಯಲ್ಲಿ ವ್ಯವಸ್ಥೆಯೊಂದನ್ನು ರೂಪಿಸಲು ನಡೆಸಿದ ಪ್ರಯತ್ನ ವಿಫಲಗೊಂಡಿತು. ನ್ಯಾಯಾಂಗ ವ್ಯವಸ್ಥೆಯಲ್ಲೂ ಮೂಗು ತೂರಿಸುವುದು ಮೋದಿ ಸರಕಾರದ ಉದ್ದೇಶವಾಗಿತ್ತು. ಅದಕ್ಕಾಗಿಯೇ ಸಂವಿಧಾನಕ್ಕೆ ತಿದ್ದುಪಡಿಯನ್ನೂ ಮಾಡಿತ್ತು. ಈಗ ಸರ್ವೋಚ್ಚ ನ್ಯಾಯಾಲಯವೇ ಕೊಲೀಜಿಯಮ್‌ಅನ್ನು ಪಾರದರ್ಶಕಗೊಳಿಸಲು ಪರದಾಡುತ್ತಿದೆ.

ಅಧಿಕಾರಕ್ಕೇರುತ್ತಿದ್ದ ಹಾಗೇ ನೆಹರೂ ಸಂಪುಟದಲ್ಲಿ ಗೃಹಸಚಿವರಾಗಿದ್ದ ಸರ್ದಾರ್ ಪಟೇಲರ ಜನ್ಮದಿನವನ್ನು 'ಭಾರತದ ಏಕತಾ ದಿನ'ವಾಗಿ ಆಚರಿಸಿದ ಮೋದಿ ಸರಕಾರ ಈಗ ಬಾಬಾ ಸಾಹೇಬ್ ಅಂಬೇಡ್ಕರ್ ಅವರನ್ನು ಹೈಜಾಕ್ ಮಾಡಲು ಹೊರಟಿದೆ. ಈಚೆಗೆ ಅವರ ನೂರ ಇಪ್ಪತ್ತೈದನೇ ಜನ್ಮದಿನವನ್ನು ಸರಕಾರ ವಿಜೃಂಭಣೆಯಿಂದ ಆಚರಿಸಿತು. ಇದ್ದಕ್ಕಿದ್ದ ಹಾಗೆ ಪಾರ್ಲಿಮೆಂಟಿನಲ್ಲಿ ಸಂವಿಧಾನ ದಿನ ಆಚರಿಸಿ, ಸರಕಾರ ಎರಡು ದಿನ ಚರ್ಚೆಗೆ ಅವಕಾಶ ಮಾಡಿಕೊಟ್ಟಿತು. ನವೆಂಬರ್ ೨೬ ಸಂವಿಧಾನ ಅಂಗೀಕಾರವಾದ ದಿನ ಎಂದು ಭಾಜಪ ವರಿಷ್ಠರು ನೆನಪು ಮಾಡಿಕೊಂಡು ಇನ್ನುಮೇಲೆ ಅದನ್ನು 'ಸಂವಿಧಾನ ದಿನಾಚರಣೆ' ಎಂದು ಆಚರಿಸಲು ನಿರ್ಧರಿಸಿದ್ದಾರೆ. ಚರ್ಚೆಯಲ್ಲಿ ಭಾಗವಹಿಸಿದ ಪ್ರಧಾನಿ ನರೇಂದ್ರ ಮೋದಿ ಸಂವಿಧಾನ ಕುರಿತು ಒಂದೂವರೆ ಗಂಟೆಕಾಲ ಸದಸ್ಯರಿಗೆ ಪಾಠ ಮಾಡಿದರು. ಅದರ ಮಹತ್ವ ಹಾಗೂ ಪಾವಿತ್ರ್ಯವನ್ನು ಕೊಂಡಾಡಿ ಸಂವಿಧಾನವೇ ಅನುಸರಿಸಬೇಕಾದ ದೇಶದ ಪರಮೋಚ್ಚ ಗ್ರಂಥ ಎಂದು ಘೋಷಿಸಿದರು. ಆದರೆ ಚರ್ಚೆಯಲ್ಲಿ ಪಾಲ್ಗೊಂಡ ಭಾಜಪ ಸದಸ್ಯರ ಧಾಟಿಯೇ ಬೇರೆಯಾಗಿತ್ತು. ಕೆಲಸಮಯದ ಹಿಂದೆ ವಿದೇಶಾಂಗ ಸಚಿವರು ಭಗವದ್ಗೀತೆಯನ್ನು ರಾಷ್ಟ್ರದ ಪೂಜ್ಯಗ್ರಂಥವಾಗಿ ಮಾಡಲು ಹೊರಟಿದ್ದುದನ್ನು ನೆನಪುಮಾಡಿಕೊಳ್ಳಬಹುದು. ಚರ್ಚೆಯಲ್ಲಿ, ಪ್ರಮುಖವಾಗಿ ಗೃಹಸಚಿವ ರಾಜನಾಥ ಸಿಂಗ್ ಭಾಷಣದಲ್ಲಿ ಒತ್ತುಕೊಟ್ಟ ವಿಚಾರ ದೇಶದಲ್ಲಿ ಅಂಗೀಕಾರವಾದಾಗ ಸಂವಿಧಾನದ ಪ್ರಸ್ತಾವನೆಯಲ್ಲಿ 'ಸೆಕ್ಯುಲರ್' ಹಾಗೂ 'ಸಮಾಜವಾದಿ' ಎಂಬ ಶಬ್ದಗಳಿರಲಿಲ್ಲ, ಅದನ್ನು ೧೯೭೭ರಲ್ಲಿ ಎಮರ್ಜೆನ್ಸಿ ಕಾಲದಲ್ಲಿ ತಿದ್ದುಪಡಿ ತಂದು ಸೇರಿಸಲಾಯಿತು ಎಂಬುದು. ಇದರಿಂದ ಭಾಜಪದ ಉದ್ದೇಶ ಏನು ಎಂಬುದನ್ನು ಊಹಿಸಿಕೊಳ್ಳಬಹುದು. ಅಭಿವೃದ್ಧಿ ಆಗಲಿ ಬಿಡಲಿ, ಮೋದಿ ಸರಕಾರ ಹೊಸ ಹೊಸ ದಿನಾಚರಣೆಗಳನ್ನು ಮಾತ್ರ ಹುಟ್ಟುಹಾಕುತ್ತಿದೆ. ಸ್ವಚ್ಛ ಭಾರತದಂತೆಯೇ ಸ್ವಚ್ಛ ಆಡಳಿತವೂ ಕೂಡ ಮುಗ್ಗರಿಸುತ್ತಿದೆ.

ದೆಹಲಿ ಚುನಾವಣೆಗಳಲ್ಲಿ ನೆಲಕಚ್ಚಿದ ಭಾಜಪ ಬಿಹಾರದಲ್ಲೂ ಮಣ್ಣುಮುಕ್ಕಿತು. ಅಧಿಕಾರಕ್ಕೆ ಬಂದಮೇಲೆ ಮೋದಿ ಸರಕಾರ ಸೋಲು ಕಂಡ ಎರಡನೆ ರಾಜ್ಯ ಅದು. ಬಹು ನಿರೀಕ್ಷಿತ ಬಿಹಾರದ ಚುನಾವಣೆಗಳಲ್ಲಿ ಮಹಾ ಮೈತ್ರಿಕೂಟ ಗಳಿಸಿದ ಪ್ರಚಂಡ ವಿಜಯದಿಂದ ಭಾಜಪಗೆ ಮುಖಭಂಗವಾಯಿತು, ಪಕ್ಷದೊಳಗೆ ಅತೃಪ್ತಿ ಪ್ರತ್ಯಕ್ಷವಾಗಿ ವ್ಯಕ್ತಗೊಂಡಿತು. ಮೋದಿ–ಅಮಿತ್ ಷಾ ಜೋಡಿಗೆ ಸವಾಲು ನೀಡಲು ಪ್ರತಿಪಕ್ಷಗಳು ಒಂದಾದರೆ ಸಾಧ್ಯ. ಮುಂದಿನ ಬೆಳವಣಿಗೆಗಳು ಯಾವ ರೀತಿ ಇರುವುದೆಂದು ನೋಡಬೇಕು. ೨೦೧೫ ಮುಗಿಯುತ್ತಿದ್ದ ಹಾಗೆ ಭಾರತ–ಪಾಕ್ ಸಂಬಂಧಗಳು ಸುಧಾರಿಸುವ ಸೂಚನೆಗಳು ಕಾಣುತ್ತಿವೆ. ಮೋದಿ–ನವಾಜ್ ಷರೀಫ್ ಮುಖಾಮುಖಿ ಎರಡು ಸಲ ಆಗಿದೆ. ಎರಡೂ ದೇಶಗಳ ಭದ್ರತಾ ಸಲಹೆಗಾರರು ಭೇಟಿಯಾಗಿ ಮಾತುಕತೆ ನಡೆಸಿದ್ದಾರೆ. ವಿದೇಶಾಂಗ ಸಚಿವರೂ ಪಾಕಿಸ್ತಾನಕ್ಕೆ ಭೇಟಿ ನೀಡಿದ್ದಾರೆ. ವಿವಾದಾತ್ಮಕ ಸಮಸ್ಯೆಗಳು ಬಗೆಹರಿಯುತ್ತವೆ ಎಂದೇನಲ್ಲ, ಆದರೂ ಮಾತುಕತೆಗಳ ಪ್ರಾರಂಭ ಶುಭಸೂಚನೆ.

ಚುನಾವಣೆ ಸಮಯದಲ್ಲಿ ಮೋದಿ ನಾಯಕತ್ವದಲ್ಲಿ ಭಾಜಪ ನೀಡಿದ ಭರವಸೆಗಳು ಈಡೇರುವ ಸೂಚನೆಗಳಿಲ್ಲದಿದ್ದರೂ ಸರಕಾರ ಅಧಿಕಾರಾವಧಿ ಪೂರೈಸುವುದು ಖಚಿತ. ವಿದೇಶಗಳಲ್ಲಿರುವ ಕಪ್ಪು ಹಣವನ್ನು ತರುವುದು ದುಸ್ಸಾಧ್ಯವಾಗಿದೆ. 'ಭಾರತದಲ್ಲೇ ತಯಾರಿಸಿ' ಎನ್ನುವುದು ಮೇಲೇಳಲೇ ಇಲ್ಲ. ಎಲ್ಲಕ್ಕೂ ವಿಪಕ್ಷಗಳನ್ನು ದೂರುವುದೊಂದೇ ಈಗ ಮೋದಿ ಸರಕಾರದ ಮಂತ್ರ. ಪಾರ್ಲಿಮೆಂಟ್ ಕಲಾಪ ಸುಸೂತ್ರವಾಗಿ ನಡೆಯಲು ವಿಪಕ್ಷಗಳು ಎಷ್ಟು ಹೊಣೆಯೂ ಅಷ್ಟೇ ಆಳುವ ಪಕ್ಷದ ಹೊಣೆಯೂ ಆಗಿದೆ. ಈಗಾಗಲೇ ಸಾಕಷ್ಟು ಕಲಾಪದ ಕಾಲ ವ್ಯರ್ಥವಾಗಿದೆ.

ನೆರೆಯ ರಾಜ್ಯ ತಮಿಳುನಾಡಿನಲ್ಲಿ ಈಚೆಗೆ ಸಂಭವಿಸಿದ ಮಳೆಯ ದುರಂತದಲ್ಲಿ ಸಾವಿಗೀಡಾದವರಿಗೆ 'ಹೊಸತು' ಸಂತಾಪ ಸೂಚಿಸುತ್ತದೆ. ವಾರಗಟ್ಟಳೆ ಸುರಿದ ಮಳೆ ಚೆನ್ನೈ, ಕಡಲೂರು, ಪುದುಚೇರಿ ಮುಂತಾದ ಕಡೆಗಳಲ್ಲಿ ಜನಜೀವನವನ್ನು ಅಸ್ತವ್ಯಸ್ತಗೊಳಿಸಿ ಸಾಕಷ್ಟು ಹಾನಿ ಉಂಟುಮಾಡಿದೆ. ಜಲಪ್ರಳಯವಾದಂತೆ ಲಕ್ಷಾಂತರ ಮಂದಿ ಎಲ್ಲವನ್ನೂ ಕಳೆದುಕೊಂಡು ನಿರಾಶ್ರಿತರಾಗಿದ್ದಾರೆ. ನಾಲ್ಕಾರು ದಿನ ಅನ್ನ ನೀರಿಲ್ಲದೆ ಜನ ಚೆನ್ನೈ ಮತ್ತಿತರ ನಗರಗಳಲ್ಲಿ ಕಷ್ಟ ಅನುಭವಿಸಿದ್ದಾರೆ. ಸಂಭವಿಸಿದ ಈ ಅನಾಹುತದಲ್ಲಿ ಪ್ರಕೃತಿ ವಿಕೋಪ ಒಂದು ಭಾಗವಾದರೆ, ಆಡಳಿತದ ವೈಫಲ್ಯ ಇನ್ನೊಂದೆಡೆ. ಚೆನ್ನೈನಲ್ಲಿ ಆದ ದುರಂತ ಯದ್ವಾತದ್ವಾ ಬೆಳೆಯುತ್ತಿರುವ ನಗರಗಳಿಗೆ ಎಚ್ಚರಿಕೆಯ ಗಂಟೆಯಾಗಿದೆ. ತಮಿಳುನಾಡಿನಲ್ಲಿ ಈ ಅನಾಹುತದಿಂದ ಹೆಚ್ಚುಕಡಿಮೆ ಹದಿನೈದು ಸಾವಿರ ಕೋಟಿ ನಷ್ಟ ಉಂಟಾಗಿದೆ ಎಂದು ಹೇಳಲಾಗುತ್ತಿದೆ. ಸಹಜ ಸ್ಥಿತಿಗೆ ಮರಳುತ್ತಿರುವ ತಮಿಳುನಾಡು ಶೀಘ್ರವಾಗಿ ಚೇತರಿಸಿಕೊಳ್ಳಲಿ ಎಂದು ಹಾರೈಸೋಣ, ನೆರವಿನ ಹಸ್ತ ಚಾಚೋಣ.

ಕರ್ನಾಟಕದ ಮಟ್ಟಿಗೆ ನಾಲ್ಕಾರು ತಿಂಗಳಿಂದ ಸುದ್ದಿ ಮಾಡುತ್ತಿದ್ದ ಲೋಕಾಯುಕ್ತ ಭಾಸ್ಕರರಾಯರು ಕೊನೆಗೂ ರಾಜೀನಾಮೆ ಕೊಟ್ಟಿದ್ದು ದೊಡ್ಡ ಸುದ್ದಿ. ಲೋಕಾಯತ ಸಂಸ್ಥೆಯ ಅಳಿವು–ಉಳಿವು ಈಗ ಚರ್ಚೆಗೆ ಗ್ರಾಸ. ಉಳಿದಂತೆ ಕಾಂಗ್ರೆಸ್ ಆಡಳಿತ ಬೆಂಗಳೂರಿನ ಕಸದ ರಾಶಿಯಂತೆಯೇ ಕಲುಷಿತಗೊಂಡು ಮುಂದುವರಿಯುತ್ತಿದೆ. ಮಂತ್ರಿಮಂಡಲದ ವಿಸ್ತರಣೆಯಾದರೂ ಮುಖ್ಯಮಂತ್ರಿ ಸಿದ್ದರಾಮಯ್ಯನವರ ತಾಪತ್ರಯ ಮುಗಿದಿಲ್ಲ. ಟಿಪ್ಪು ಜನ್ಮ ದಿನಾಚರಣೆಯ ವಿವಾದ, ಆ ಸಂಬಂಧ ನಡೆದ ಘಟನೆಗಳು ಸರಕಾರಕ್ಕೆ ಕಿಂಚಿತ್ತೂ ಗೌರವ ತರಲಿಲ್ಲ. ವರ್ಷಗಳು ಮುಗಿಯುತ್ತವೆ, ಹೋಗುತ್ತವೆ, ಜನಸಾಮಾನ್ಯರ ಜೀವನ ಮಾತ್ರ ಯಥಾಸ್ಥಿತಿ ಮುಂದುವರಿಯುತ್ತದೆ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಹದವಾಗಿದೆ ಭೂಮಿ ಬೀಜ ಬಿತ್ತೋರಿಲ್ಲ!

**ಸೂರ್ಯದೇವ**

ಕರ್ನಾಟಕದ ಸದ್ಯದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿ ಈಗ ಹೊಸ ರಾಜಕೀಯ ಶಕ್ತಿ ಉದಯಕ್ಕೆ ಹದವಾಗಿದೆ. ಮಳೆ ಬಂದು ಭೂಮಿ ಬಿತ್ತಲು ಅಣಿಯಾಗಿರುವಂತೆಯೇ ರಾಜ್ಯದ ಜನರ ಮನಸ್ಥಿತಿ ಕೂಡ ಹೊಸ ಕಾಲಮಾನಕ್ಕೆ ಸಿದ್ಧಗೊಂಡಿದೆ. ಆದರೆ ಬೀಜ ಬಿತ್ತುವವರು ಕಾಣುತ್ತಿಲ್ಲ. ಗಟ್ಟಿಯಾದ ದೇಸಿ ತಳಿಯ ಬೀಜವೂ ಕಾಣುತ್ತಿಲ್ಲ.

ಕಳೆದ ಒಂದು ವರ್ಷದ ವಿದ್ಯಮಾನವನ್ನು ಗಮನಿಸಿದರೆ ರಾಜ್ಯದ ಜನರ ಮನೋಗತ ಹೇಗಿದೆ ಎನ್ನುವುದು ಅರ್ಥವಾಗುತ್ತದೆ.

ಉದಾಹರಣೆಗೆ, ಡಿ. ಕೆ. ರವಿ ಆತ್ಮಹತ್ಯೆ ಪ್ರಕರಣವನ್ನೇ ತೆಗೆದುಕೊಳ್ಳಿ. ಇದು ಕೇವಲ ಮಾಧ್ಯಮಗಳು ಸೃಷ್ಟಿಸಿದ ಕೋಲಾಹಲವಲ್ಲ. ರಾಜ್ಯದ ಜನರ ಭಾವನೆಯೂ ಹಾಗೆಯೇ ಇತ್ತು. ಡಿ. ಕೆ. ರವಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎನ್ನುವುದನ್ನು ಒಪ್ಪಲು ಈಗಲೂ ನಮ್ಮ ಜನ ತಯಾರಿಲ್ಲ. ಯಾಕೆಂದರೆ ಅವರಿಗೊಬ್ಬ ದಕ್ಷ, ಪ್ರಾಮಾಣಿಕ, ಜೇಮ್ಸ್ ಬಾಂಡ್‌ನಂತಹ ಹೀರೋ ಬೇಕಾಗಿತ್ತು. ಜನರ ಮನಸ್ಸಿನಲ್ಲಿಯೇ ಅಂತಹ ಹೀರೋ ಒಬ್ಬ ತಯಾರಾಗಿದ್ದ. ರವಿ ಹಾಗಿದ್ದರೋ ಇಲ್ಲವೋ ಎನ್ನುವುದು ಬೇರೆ ವಿಷಯ. ಆದರೆ ಅಂತಹ ನಾಯಕನೊಬ್ಬನನ್ನು ಜನರು ರವಿಯಲ್ಲಿ ಕಂಡಿದ್ದರು. ಅದಕ್ಕೇ ಅವರು ರವಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂದರೆ ಅದನ್ನು ನಂಬುವುದಿಲ್ಲ. ಯಾರೋ ಅವರನ್ನು ಕೊಲೆ ಮಾಡಿದ್ದಾರೆ ಎಂದು ಹೇಳಿದರೇ ಅವರಿಗೆ ತೃಪ್ತಿ. ಸಿಬಿಐ ಕೂಡ ಯಾವುದೋ ಒತ್ತಡಕ್ಕೆ ಮಣಿದು ರವಿ ಪ್ರಕರಣವನ್ನು ಮುಚ್ಚಿಹಾಕಲು ಯತ್ನಿಸುತ್ತಿದೆ ಎಂದೇ ಜನರು ಭಾವಿಸುತ್ತಾರೆ.

ಇದೇ ರೀತಿ ಲೋಕಾಯುಕ್ತ ಭಾಸ್ಕರ್ ರಾವ್ ಪ್ರಕರಣದಲ್ಲಿಯೂ ಆಯಿತು. ಅಣ್ಣಾ ಹಜಾರೆ ಅವರು ಭ್ರಷ್ಟಾಚಾರದ ವಿರುದ್ಧ ಹೋರಾಟಕ್ಕೆ ಇಳಿದಾಗಲೂ ನಮ್ಮ ಯುವ ಜನತೆ ಕಿತ್ತು ಎದ್ದು ಬಂದಿದ್ದರು. ತೀರಾ ಇತ್ತೀಚೆಗೆ ಮೇಜರ್ ಜಯಪ್ರಕಾಶ ಎಂಬ ವ್ಯಕ್ತಿ ಕರ್ನಾಟಕ ಲೋಕಸೇವಾ ಆಯೋಗದಲ್ಲಿನ ಭ್ರಷ್ಟಾಚಾರವನ್ನು ವಿರೋಧಿಸಿ ತಮ್ಮ ಸೇವಾ ಪದಕಗಳನ್ನು ವಾಪಸು ಮಾಡುವ ನಿರ್ಧಾರ ಪ್ರಕಟಿಸಿದಾಗಲೂ ಜನರು ಬಹಳ ಉತ್ಸಾಹದಿಂದಲೇ ಅದನ್ನು ಸ್ವಾಗತಿಸಿದರು. ಇದೆಲ್ಲ ಏನನ್ನು ತೋರಿಸುತ್ತದೆ ಎಂದರೆ ಜನರು ತಮ್ಮ ಮನಸ್ಸಿನಲ್ಲಿ ಇರುವ ಭಾವನೆಯನ್ನು ವ್ಯಕ್ತಪಡಿಸುವ ಒಬ್ಬ ವ್ಯಕ್ತಿಗಾಗಿ ಕಾದಿದ್ದಾರೆ. ಅಲ್ಲದೆ ಸಮಾಜದಲ್ಲಿನ ಎಲ್ಲ ಅನಿಷ್ಟಗಳನ್ನು ಹೋಗಲಾಡಿಸುವ ಒಬ್ಬ ನಾಯಕನ ಹುಟ್ಟು ಅವರ ಸದ್ಯದ ಅಗತ್ಯವಾಗಿದೆ. ಅಂತಹ ಒಬ್ಬ ನಾಯಕನಿಗಾಗಿ ಅಥವಾ ಅಂತಹ ಒಂದು ವ್ಯವಸ್ಥೆಗಾಗಿ ಸಮಾಜ ಕಾಯುತ್ತಿದೆ.

ರಾಜ್ಯದಲ್ಲಿ ಬಿಜೆಪಿ ದುರಾಡಳಿತ ಮತ್ತು ಭ್ರಷ್ಟಾಚಾರವನ್ನು ವಿರೋಧಿಸಿ ಜನರು ಕಾಂಗ್ರೆಸ್ ಸರ್ಕಾರವನ್ನು ಆಯ್ಕೆ ಮಾಡಿದರು. ಆದರೆ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರ್ಕಾರ ಕಳೆದ ಎರಡೂವರೆ ವರ್ಷಗಳಲ್ಲಿ ಹೇಳಿಕೊಳ್ಳುವಂತಹ ಯಾವುದೇ ಸಾಧನೆಯನ್ನೂ ಮಾಡಿಲ್ಲ. ಅನ್ನಭಾಗ್ಯ, ಕ್ಷೀರಭಾಗ್ಯ ಮುಂತಾದ ಭಾಗ್ಯದ ಯೋಜನೆಗಳನ್ನು ಪ್ರಕಟಿಸಿತೇ ವಿನಾ ಸಾಮಾಜಿಕವಾಗಿ ದೂರಗಾಮಿ ಪರಿಣಾಮವನ್ನು ಬೀರುವ ಯಾವುದೇ ನಿರ್ದಿಷ್ಟ ಕ್ರಮಗಳನ್ನೂ ಕೈಗೊಳ್ಳಲಿಲ್ಲ. ಜನರ ಬದುಕು ಸಹನೀಯವಾಗುವಂತಹ ಕ್ರಮಗಳು ಇರಲಿಲ್ಲ. ಸಿದ್ದರಾಮಯ್ಯ ಸ್ವಭಾವತಃ ಸೋಮಾರಿ. ರಾಜಕೀಯ ನಾಯಕನೊಬ್ಬನಿಗೆ ಬೇಕಾದ ಚುರುಕುತನ ಅವರಲ್ಲಿ ಇಲ್ಲ. ಯಾವುದೇ ನಿರ್ಧಾರವನ್ನು ತಕ್ಷಣಕ್ಕೆ ಕೈಗೊಳ್ಳುವುದಿಲ್ಲ. ಸೂಕ್ತ ಕಾಲದಲ್ಲಿ ಸೂಕ್ತ ನಿರ್ಧಾರ ಕೈಗೊಳ್ಳದೇ ಇದ್ದರೆ ಏನೆಲ್ಲ ಆಗುತ್ತದೆ ಎನ್ನುವುದನ್ನು ಸಿದ್ದರಾಮಯ್ಯ ಸರ್ಕಾರದ ಆಡಳಿತದಲ್ಲಿ ನೋಡಬಹುದು. ಇದು ಡಿ. ಕೆ. ರವಿ ಆತ್ಮಹತ್ಯೆ, ಮೌಢ್ಯ ನಿಷೇಧ, ಅತ್ಯಾಚಾರ ಪ್ರಕರಣ, ಟಿಪ್ಪೂ ಜಯಂತಿ ಮುಂತಾದ ಹಲವಾರು ಸಂದರ್ಭಗಳಲ್ಲಿ ಸಾಬೀತಾಗಿದೆ.

ಸಿದ್ದರಾಮಯ್ಯ ಜನತಾ ದಳದಲ್ಲಿ ಇದ್ದಾಗ ಅವರಿಗೆ ಇದ್ದ ಹಲವಾರು ಅನುಕೂಲತೆಗಳು ಕಾಂಗ್ರೆಸ್‌ನಲ್ಲಿ ಇಲ್ಲ. ಜನತಾ ದಳದಲ್ಲಿ ಅವರಿಗೆ ಪಕ್ಷವನ್ನು ಅಧಿಕಾರಕ್ಕೆ ತರುವ ಯಾವುದೇ ಅನಿವಾರ್ಯತೆ ಇರಲಿಲ್ಲ. ಅದೆಲ್ಲವನ್ನೂ ದೇವೇಗೌಡರ ಕುಟುಂಬ ಮಾಡುತ್ತಿತ್ತು. ಅದಕ್ಕಾಗಿ ಹಣ



ಡಿ. ಕೆ. ರವಿ ಆತ್ಮಹತ್ಯೆ ಪ್ರಕರಣವನ್ನೇ ತೆಗೆದುಕೊಳ್ಳಿ. ಇದು ಕೇವಲ ಮಾಧ್ಯಮಗಳು ಸೃಷ್ಟಿಸಿದ ಕೋಲಾಹಲವಲ್ಲ. ರಾಜ್ಯದ ಜನರ ಭಾವನೆಯೂ ಹಾಗೆಯೇ ಇತ್ತು. ಡಿ.ಕೆ.ರವಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎನ್ನುವುದನ್ನು ಒಪ್ಪಲು ಈಗಲೂ ನಮ್ಮ ಜನ ತಯಾರಿಲ್ಲ. ಯಾಕೆಂದರೆ ಅವರಿಗೊಬ್ಬ ದಕ್ಷ, ಪ್ರಾಮಾಣಿಕ, ಜೇಮ್ಸ್ ಬಾಂಡ್‌ನಂತಹ ಹೀರೋ ಬೇಕಾಗಿತ್ತು. ಜನರ ಮನಸ್ಸಿನಲ್ಲಿಯೇ ಅಂತಹ ಹೀರೋ ಒಬ್ಬ ತಯಾರಾಗಿದ್ದ. ರವಿ ಹಾಗಿದ್ದರೋ ಇಲ್ಲವೋ ಎನ್ನುವುದು ಬೇರೆ ವಿಷಯ. ಆದರೆ ಅಂತಹ ನಾಯಕನೊಬ್ಬನನ್ನು ಜನರು ರವಿಯಲ್ಲಿ ಕಂಡಿದ್ದರು. ಅದಕ್ಕೇ ಅವರು ರವಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂದರೆ ಅದನ್ನು ನಂಬುವುದಿಲ್ಲ. ಯಾರೋ ಅವರನ್ನು ಕೊಲೆ ಮಾಡಿದ್ದಾರೆ ಎಂದು ಹೇಳಿದರೇ ಅವರಿಗೆ ತೃಪ್ತಿ.

ಹೊಂದಿಸುವ ಜರೂರು ಅವರಿಗಿರಲಿಲ್ಲ. ಒಂದು ಜನಾಂಗದ ನಾಯಕನಾಗಿ ಅವರಿಗೆ ಪಕ್ಷದಲ್ಲಿ ಉತ್ತಮ ಸ್ಥಾನ ಇತ್ತು. ಅದಕ್ಕೇ ಅವರು ಜನತಾ ದಳದಲ್ಲಿ ಹಣಕಾಸು ಸಚಿವರಾದಾಗ ನಡೆದುಕೊಂಡ ರೀತಿಯಲ್ಲಿ ಮುಖ್ಯಮಂತ್ರಿಯಾಗಿ ಈಗ ನಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಮುಖ್ಯಮಂತ್ರಿಯಾಗಲೂ ಅವರು ಸಾಕಷ್ಟು ಹೊಂದಾಣಿಕೆಯನ್ನು ಮಾಡಿಕೊಂಡಿದ್ದಾರೆ. ಅದೇ ಈಗ ಅವರ ಕೈಗಳನ್ನು ಕಟ್ಟಿ ಹಾಕಿದೆ. ತಮ್ಮ ಬಯಕೆಯಂತೆ ಆಡಳಿತ ನಡೆಸುವ ಸ್ವಾತಂತ್ರ್ಯವೂ ಅವರಿಗೆ ಪಕ್ಷದಲ್ಲಿ ಇದ್ದಂತೆ ಕಾಣುತ್ತಿಲ್ಲ.

ಅಹಿಂದ ಹೋರಾಟದ ಮೂಲಕ ತಾವು ಬಂದಿದ್ದಾಗಿ ಸಿದ್ದರಾಮಯ್ಯ ಹೇಳಿಕೊಳ್ಳುತ್ತಾರೆ. ಆದರೆ ಅಹಿಂದ ಹೋರಾಟಕ್ಕೆ ಯಾವುದೇ ರೀತಿಯ ತಾತ್ವಿಕ ತಳಹದಿಯೇ ಇರಲಿಲ್ಲ. ದೇಶದಲ್ಲಿ ನಡೆದ ಜೆಪಿ ಚಳವಳಿ, ತುರ್ತು ಪರಿಸ್ಥಿತಿಯ ವಿರುದ್ಧ ನಡೆದ ಚಳವಳಿ ಅಥವಾ ಆ ಮೂಲಕವೇ ರಾಜ್ಯದಲ್ಲಿ ಹುಟ್ಟಿಕೊಂಡ ರೈತ ಮತ್ತು ದಲಿತ ಚಳವಳಿಗೆ ಇದ್ದ ಕನಿಷ್ಠ ಮಟ್ಟದ ತಾತ್ವಿಕ, ಸೈದ್ಧಾಂತಿಕ ಹಿನ್ನೆಲೆಗಳೂ ಅಹಿಂದ ಚಳವಳಿಗೆ ಇದ್ದಂತೆ ಇರಲಿಲ್ಲ. ಕೇವಲ ರಾಜಕೀಯ ದಾಳವಾಗಿಯೇ ಅದು ಬಳಕೆಯಾಯಿತು. ಇದರಿಂದ ಅಹಿಂದ ಚಳವಳಿಯಲ್ಲಿ ಹುಟ್ಟಿದ ನಾಯಕರೂ ಗಟ್ಟಿಯಾಗಿರಲಿಲ್ಲ. ಸಿದ್ದರಾಮಯ್ಯ ಕೂಡ ಅದಕ್ಕೆ ಹೊರತಲ್ಲ.




ಅಧಿಕಾರಕ್ಕೆ ಬಂದ ನಂತರವಾದರೂ ರಾಜಕೀಯ ಮುತ್ಸದ್ದಿತನವನ್ನೂ ಅವರು ತೋರಲಿಲ್ಲ. ಅಹಿಂದ ವರ್ಗಕ್ಕೆ ಹೆಚ್ಚಿನ ಅನುಕೂಲತೆ ಮಾಡಿಕೊಡುವುದಾಗಿ ಬಾಯಲ್ಲಿ ಹೇಳಿದರೇ ವಿನಾ ಅದನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನವನ್ನೇ ಮಾಡಲಿಲ್ಲ. ಸಿದ್ದರಾಮಯ್ಯ ಅವರ ಸರ್ಕಾರವನ್ನು ಎಲ್ಲರೂ ಅಹಿಂದ ಸರ್ಕಾರ ಎಂದೇ ಕರೆಯುತ್ತಾರೆ. ಹಾಗಿದ್ದ ಮೇಲೆ ಅಹಿಂದ ವರ್ಗದವರಾದರೂ ರಾಜ್ಯದಲ್ಲಿ ಸುಖವಾಗಿರ ಬೇಕಾಗಿತ್ತಲ್ಲವೇ ? ಅವರ ಸ್ಥಿತಿ ಬದಲಾದಂತೆ ಕಾಣುತ್ತಿಲ್ಲ. ಸಿದ್ದರಾಮಯ್ಯ ಅವರ ಸುತ್ತ ಸಾಹಿತಿಗಳು, ಬುದ್ಧಿಜೀವಿಗಳು ಇದ್ದಾರೆ. ನಿಜ. ಆದರೆ ಅವರ ಆಡಳಿತವನ್ನು ನೋಡಿದರೆ ಇವರ ಯಾರ ಮಾತನ್ನೂ ಸಿದ್ದರಾಮಯ್ಯ ಕೇಳುತ್ತಿದ್ದಾರೆ ಎನ್ನಿಸುವುದಿಲ್ಲ. ಕನಿಷ್ಠ ರಾಜಕೀಯವಾಗಿ ಕೈಗೊಳ್ಳಬಹುದಾದ ತೀರ್ಮಾನವನ್ನೂ ಅವರು ಕೈಗೊಳ್ಳುತ್ತಿಲ್ಲ. ಸಿದ್ದರಾಮಯ್ಯ ಅವರ ಆಡಳಿತದಲ್ಲಿ ಬಹುದೊಡ್ಡ ಹಗರಣಗಳು ಇನ್ನೂ ಬಹಿರಂಗವಾಗಿಲ್ಲವಾದರೂ ಆಡಳಿತ ಉತ್ತಮ ವಾಗಿದೆ ಎನ್ನುವುದಕ್ಕೆ ಉದಾಹರಣೆಗಳೂ ಸಿಗುತ್ತಿಲ್ಲ. ಮುಖ್ಯವಾಗಿ ಸರ್ಕಾರ ಬದುಕಿದೆ ಎನ್ನುವ ಸೂಚನೆ ಕೂಡ ಕಾಣುತ್ತಿಲ್ಲ. ಸಿದ್ದರಾಮಯ್ಯ ಅವರ ಆಡಳಿತ ವೈಖರಿಯನ್ನು ಪಿ. ವಿ. ನರಸಿಂಹರಾವ್ ಅವರ ಆಡಳಿತದ ವೈಖರಿಗೆ ಹೋಲಿಸಬಹುದು. ಈ ಹೋಲಿಕೆ ಕೇವಲ ನರಸಿಂಹರಾವ್ ಅವರ ರಾಜಕೀಯ ನಿರ್ಧಾರಗಳಿಗೆ ಮಾತ್ರ ಸೀಮಿತ. ಯಾಕೆಂದರೆ ನರಸಿಂಹರಾವ್ ಆರ್ಥಿಕ ಸುಧಾರಣೆಗೆ ಒತ್ತು ನೀಡಿದ್ದರು. ಅವರ ಜೊತೆ ಡಾ॥ ಮನಮೋಹನ ಸಿಂಗ್ ಎಂಬ ಆರ್ಥಿಕ ತಜ್ಞ ಹಣಕಾಸು ಸಚಿವರಾಗಿದ್ದರು. ಆದರೆ ಅವರು ರಾಜಕೀಯ ನಿರ್ಧಾರಗಳನ್ನು ಮಾತ್ರ ಸರಿಯಾದ ಸಂದರ್ಭದಲ್ಲಿ ತೆಗೆದುಕೊಳ್ಳುತ್ತಿರಲಿಲ್ಲ. ಯಾವುದೇ ನಿರ್ಧಾರ ತೆಗೆದುಕೊಳ್ಳದೇ ಇರುವುದು ಕೂಡ ಒಂದು ನಿರ್ಧಾರ ಎಂಬ ಮಾತು ಆಗ




ಚಾಲ್ತಿಯಲ್ಲಿತ್ತು. ಈಗ ಸಿದ್ದರಾಮಯ್ಯ ಎಲ್ಲ ವಿಚಾರದಲ್ಲಿಯೂ ಇದನ್ನೇ ಅನುಸರಿಸುತ್ತಿರುವಂತೆ ಕಾಣುತ್ತಿದೆ.

ಒಬ್ಬ ರಾಜಕಾರಣಿಯ ದುರಂತ ಎಂದರೆ ಹಿಂದೆ ಇದ್ದ ಕೆಟ್ಟ ನಾಯಕನೇ ಈಗ ಅಡ್ಡಿ ಇಲ್ಲ ಎಂಬ ಭಾವನೆ ಜನರಲ್ಲಿ ಬರುವುದು. ಸಿದ್ದರಾಮಯ್ಯ ಅವರ ಆಡಳಿತವನ್ನು ನೋಡಿದ ಕರ್ನಾಟಕದ ಜನತೆ ಈಗ ಯಡಿಯೂರಪ್ಪ ಅವರೇ ಪರವಾಗಿಲ್ಲ ಎಂಬ ಮಾತನ್ನು ಹೇಳಲು ಆರಂಭಿಸಿದ್ದಾರೆ. ಇದಕ್ಕಿಂತ ಶೋಚನೀಯ ಸ್ಥಿತಿ ಮತ್ತೊಂದಿಲ್ಲ. ಒಂದೆಡೆ ಸಿದ್ದರಾಮಯ್ಯ ತಮ್ಮ ವರ್ಚಸ್ಸು ಕಳೆದುಕೊಳ್ಳುತ್ತಿದ್ದರೆ ಇನ್ನೊಂದೆಡೆ ಯಡಿಯೂರಪ್ಪ ಅವರು ತಮ್ಮ ಮೇಲಿನ ಒಂದೊಂದೇ ಆರೋಪಗಳಿಂದ ಹೊರ ಬರುತ್ತಿದ್ದಾರೆ. ಇದು ಮುಂದಿನ ರಾಜಕೀಯ ಪರಿಸ್ಥಿತಿಯ ಮುನ್ಸೂಚನೆಯಂತೆ ಕಾಣುತ್ತಿದೆ.

ಅಧಿಕೃತ ವಿರೋಧ ಪಕ್ಷವಾಗಿ ಬಿಜೆಪಿ ಕೂಡ ಉತ್ತಮ ಕೆಲಸವನ್ನೇನೂ ಮಾಡುತ್ತಿಲ್ಲ. ವಿಧಾನ ಸಭೆಯಲ್ಲಿ ವಿರೋಧ ಪಕ್ಷದ ನಾಯಕ ಜಗದೀಶ ಶೆಟ್ಟರ್ ಅವರು ಸಪ್ಪೆಯಾಗಿದ್ದಾರೆ. ಹೋರಾಟದ ಕಿಚ್ಚನ್ನು ತೋರುತ್ತಿಲ್ಲ. ಧರಣಿ, ಘೋಷಣೆಯಲ್ಲಿಯೇ ಬಿಜೆಪಿ ಸದಸ್ಯರು ಕಾಲ ಕಳೆಯುತ್ತಿದ್ದು ಮೋದಿ ಎಂಬ ದೇವಮಾನವನೇ ತಮ್ಮನ್ನು ಎಲ್ಲ ಕಾಲದಲ್ಲಿಯೂ ರಕ್ಷಣೆ ಮಾಡುತ್ತಾನೆ ಎಂಬ ಭ್ರಮೆಯಲ್ಲಿಯೇ ಇರುವಂತೆ ಕಾಣುತ್ತಿದೆ. ಶಾಸಕಾಂಗದ ಹೊರಗೆ ಗೋಮಾಂಸ, ಮಸೀದಿ, ಮಂದಿರಗಳಂಥ ವಿಷಯಗಳಲ್ಲಿ ಕ್ರಿಯಾಶೀಲರಾಗಿದ್ದಾರೆ. ರಾಜ್ಯದಲ್ಲಿ ೮೦೦ಕ್ಕೂ ಹೆಚ್ಚು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದರೂ ಅದನ್ನು ಹೋರಾಟವನ್ನಾಗಿ ಪರಿವರ್ತಿಸುವಲ್ಲಿ ವಿರೋಧ ಪಕ್ಷಗಳು ವಿಫಲವಾಗಿವೆ. ನೂರಾರು ದಿನಗಳಿಂದ ಕಳಸಾ ಬಂಡೂರಿ ಹೋರಾಟ ನಡೆಯುತ್ತಿದ್ದರೂ ಅಲ್ಲಿಯೂ ರಾಜಕೀಯ ಬೇಳೆಯನ್ನು ಬೇಯಿಸುವ ಕೆಲಸ ನಡೆಯುತ್ತಿದೆಯೇ ವಿನಾ ಅದಕ್ಕೊಂದು ಸ್ಪಷ್ಟ ರೂಪ ನೀಡಲು ಸಾಧ್ಯವಾಗುತ್ತಿಲ್ಲ. ಅದೇ ರೀತಿ ಎತ್ತಿನ ಹೊಳೆ ಯೋಜನೆ ಕೂಡ. ರಾಯಚೂರಿಗೇ ಐಐಟಿ ಬೇಕೇ ಬೇಕು ಎನ್ನುವ ಬಾಲಿಶ ಹೋರಾಟ ನಡೆಯುತ್ತಿದ್ದರೂ ಅದನ್ನು ತಹಬದಿಗೆ ತರುವ ನಾಯಕರೂ ಇಲ್ಲದ ಬರ ನಮ್ಮನ್ನು ಕಾಡುತ್ತಿದೆ.

ಜೆಡಿಎಸ್ ಪಕ್ಷ ಯಾವುದರಲ್ಲಿ ತಮ್ಮ ಮೈ ಕಾಯಿಸಿಕೊಳ್ಳಬಹುದು ಎನ್ನುವುದನ್ನು ಹುಡುಕುತ್ತಿದೆಯೇ ವಿನಾ ಬೇರೆ ರಾಜಕಾರಣದ ನೋಟವಿಲ್ಲ. ಇದೇ ಈಗ ರಾಜ್ಯದಲ್ಲಿ ರಾಜಕೀಯ ಶೂನ್ಯ ಪರಿಸ್ಥಿತಿ ಆವರಿಸಿಕೊಳ್ಳಲು ಕಾರಣವಾಗಿದೆ. ಒಟ್ಟಾರೆಯಾಗಿ ರಾಜ್ಯದಲ್ಲಿರುವ ಪ್ರಮುಖ ಮೂರೂ ಪಕ್ಷಗಳು ಜವಾಬ್ದಾರಿ ಅರಿತು ರಾಜಕೀಯ ಮಾಡುತ್ತಿಲ್ಲ. ಉಳಿದ ಪಕ್ಷಗಳು ಲೆಕ್ಕಕ್ಕೂ ಇಲ್ಲ. ಆಟಕ್ಕೂ ಇಲ್ಲ.

ಈಗ ಮತ್ತೆ ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿ ಚುನಾವಣೆ ಬಂದಿದೆ. ಇಲ್ಲಿಯೂ ಕೂಡ ಜಾತಿ ಮತ್ತು ಹಣವೇ ಪ್ರಮುಖವಾಗುತ್ತದೆ. ಕೆ. ಆರ್. ರಮೇಶಕುಮಾರ್ ನೇತೃತ್ವದ ಸಮಿತಿ ನೀಡಿದ ವರದಿಯ ಪ್ರಕಾರ ಪಂಚಾಯತ್‌ರಾಜ್ ಕಾಯ್ದೆಗೆ ತಿದ್ದುಪಡಿ ತರಲಾಗಿದೆ. ಅದರ ಆಧಾರದಲ್ಲಿಯೇ ಚುನಾವಣೆ ನಡೆಯುತ್ತದೆ. ಇಡೀ ದೇಶದಲ್ಲಿಯೇ ಮಾದರಿಯಾಗ ಬಹುದಾದ ಕಾಯ್ದೆಯನ್ನು ಕರ್ನಾಟಕ ಸರ್ಕಾರ ರೂಪಿಸಿದೆ. ಆ ಮಟ್ಟಿಗೆ ಈ ಸರ್ಕಾರವನ್ನು ಅಭಿನಂದಿಸಲೇ ಬೇಕು. ಆದರೆ ಈ ಕಾಯ್ದೆ ಎಷ್ಟರಮಟ್ಟಿಗೆ ಅನುಷ್ಠಾನಕ್ಕೆ ಬರುತ್ತದೆ ಎನ್ನುವುದನ್ನು ಕಾಯಬೇಕಾಗಿದೆ. ವಿರೋಧ ಪಕ್ಷಗಳ ಧರಣಿ ಪ್ರತಿಭಟನೆಗಳ ನಡುವೆ ಇಂತಹ ಕಾಯ್ದೆ ಯಾವುದೇ ಚರ್ಚೆ ಇಲ್ಲದೆ ವಿಧಾನ ಮಂಡಲದಲ್ಲಿ ಅಂಗೀಕಾರವಾಗಿದ್ದು ಮಾತ್ರ ವಿಧಾನ ಮಂಡಲ ಕಲಾಪಕ್ಕೊಂದು ಕಪ್ಪು ಚುಕ್ಕೆ.

ಶಾಸಕಾಂಗ ಮತ್ತು ಕಾರ್ಯಾಂಗಗಳು ಮೈಮರೆತಿರುವಾಗ ಅವುಗಳನ್ನು ಎಚ್ಚರಿಸುವ ಕೆಲಸವನ್ನು ಮಾಧ್ಯಮ ರಂಗ ಮಾಡಬೇಕು. ಆದರೆ ಈಗ ಮಾಧ್ಯಮವೂ ಎಚ್ಚರತಪ್ಪಿದೆ. ಈಗಿನ ದಿನಗಳಲ್ಲಿ ಮಾಧ್ಯಮ ಎಂದರೆ ವಿದ್ಯುನ್ಮಾನ ಮಾಧ್ಯಮಗಳು ಮಾತ್ರ. ಟಿವಿ, ವಾಟ್ಸಪ್, ಫೇಸ್‌ಬುಕ್, ಟ್ವಿಟರ್‌ಗಳೇ ಈಗ ಪರಿಣಾಮಕಾರಿ ಮಾಧ್ಯಮಗಳಾಗಿವೆ. ಆದರೆ ಇಲ್ಲಿಯೂ ಕಳೆದ ೨ ವರ್ಷಗಳಿಂದ ಜನಸಾಮಾನ್ಯರಿಗೆ ಅಗತ್ಯವಾದ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿಲ್ಲ.

ಇತ್ತೀಚಿನ ದಿನಗಳಲ್ಲಿ ಮಾಧ್ಯಮಗಳಲ್ಲಿ ಅತಿ ಹೆಚ್ಚು ಚರ್ಚೆಗೆ ಒಳಗಾಗುತ್ತಿರುವ ವಿಷಯಗಳನ್ನು ಗಮನಿಸಿ. ಭಗವದ್ಗೀತೆಯನ್ನು ಓದಬೇಕೋ ಅಥವಾ ಸುಡಬೇಕೋ, ಟಿಪ್ಪು ದೇಶಭಕ್ತ ಹೌದೋ ಅಲ್ಲವೋ, ಮೇಲುಕೋಟೆ ಚೆಲುವ ನಾರಾಯಣಸ್ವಾಮಿಗೆ ನಾಮ ಹೇಗೆ ಹಾಕಬೇಕು, ಗೋಮಾಂಸ ತಿನ್ನಬೇಕೋ ಬೇಡವೋ, ಹುಚ್ಚ ವೆಂಕಟ್ ಹುಚ್ಚ ಹೌದೋ ಅಲ್ಲವೋ ಇಂತಹ ವಿಷಯಗಳ ಬಗ್ಗೆಯೇ ಹೆಚ್ಚಿನ ಸಮಯ ಕಳೆದುಹೋಗಿದೆ. ಮಾರುಕಟ್ಟೆಯಲ್ಲಿ ಬೇಳೆ, ಅಕ್ಕಿಯ ಬೆಲೆ ಹೆಚ್ಚಾಗಿದ್ದು, ವಾಯುಮಾಲಿನ್ಯ ವಿಪರೀತವಾಗಿದ್ದು, ಕುಡಿಯಲು ನೀರು ಸಿಗದೇ ಇರುವುದು, ಬರಗಾಲ, ರೈತರ ಆತ್ಮಹತ್ಯೆ ಮುಂತಾದ ಯಾವ ವಿಷಯಗಳೂ ಮಾಧ್ಯಮಗಳ ಪಾಲಿಗೆ ಟಿಆರ್‌ಪಿ ವಿಷಯಗಳೇ ಆಗಿಲ್ಲದಿರುವುದು ಮಾತ್ರ ಅಚ್ಚರಿಯ ಅಂಶ.

ಹೀಗೆ ಎಲ್ಲರೂ ಜವಾಬ್ದಾರಿ ಮರೆತಿದ್ದಾರೆ. ಜನಸಾಮಾನ್ಯರೂ ಕೂಡ. ಆದರೆ ಅವರಿಗೆ ಒಂದು ಕನಸಿದೆ. ಮುಂದೊಂದು ದಿನ ಯಾರೋ ಒಬ್ಬ ನಾಯಕ ಬಂದು ಇಲ್ಲಿನ ಅವ್ಯವಸ್ಥೆಯನ್ನೆಲ್ಲಾ ಸರಿ ಮಾಡುತ್ತಾನೆ ಎಂಬ ವಿಶ್ವಾಸವಿದೆ. ಆದರೆ ರಾಜ್ಯದ ಚುಕ್ಕಾಣಿ ಹಿಡಿದಿರುವ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರಿಗೆ ಕನಸುಗಳೇ ಇಲ್ಲ. ಅವರು ಮುಖ್ಯಮಂತ್ರಿ ಆಗಬೇಕಿತ್ತು. ಆದರು. ಅವರಿಗೆ ಇನ್ನೇನೂ ಆಗಬೇಕಾಗಿಲ್ಲ. ಅದೇ ಅವರ ಜಡತ್ವಕ್ಕೆ ಕಾರಣ. ವಿರೋಧ ಪಕ್ಷವಾದ ಬಿ.ಜೆ.ಪಿ.ಯವರು ಹೇಗೂ ಮುಂದೆ ತಮ್ಮ ಪಕ್ಷ ಆಡಳಿತಕ್ಕೆ ಬರುತ್ತದೆಂದು ಮೇಕಪ್ ಮಾಡಿಕೊಳ್ಳುತ್ತಿದ್ದಾರೆ. ಮುಂದಿನ ಮುಖ್ಯಮಂತ್ರಿ ಯಾರು ಎಂಬುದೇ ಅವರ ಪ್ರಧಾನ ಚಿಂತೆ. ಜೆ.ಡಿ.ಎಸ್.ನ ರಾಷ್ಟ್ರಾಧ್ಯಕ್ಷ ದೇವೇಗೌಡರಿಗೆ ತಾವು ಕಣ್ಣುಮುಚ್ಚುವುದರೊಳಗೆ ತಮ್ಮ ಹುಡುಗರು ಮುಖ್ಯಮಂತ್ರಿ, ಮಂತ್ರಿಗಳಾಗುವುದನ್ನು ಕಣ್ಣ ತುಂಬ ನೋಡುವ ವ್ಯಸನ. ತುಂಡು ತುಂಡಾಗಿರುವ ರೈತ, ಕಾರ್ಮಿಕ, ದಲಿತ ಚಳುವಳಿಗಾರರಿಗೆ ವಿಧಾನಸೌಧದ ಕಡೆಗೆ ಸುಳಿವ ಕನಸೂ ಬೀಳುವುದಿಲ್ಲ. ಹೀಗಾದರೆ ಜನರ ಗತಿಯೇನು ?


**ಸೂರ್ಯದೇವ**
ನಂ. ೧೫, ಪೈಪ್‌ಲೈನ್
ವೈಯ್ಯಾಲಿಕಾವಲ್, ಬೆಂಗಳೂರು – ೫೬೦ ೦೦೩

ಹೊಸ ಓದು

## ಸೋಲೆಂಬುದು ಅಲ್ಪವಿರಾಮ

(ಬದುಕು ಬದಲಿಸಬಹುದು – ಭಾಗ–೩) ನೇಮಿಚಂದ್ರ

**ಪುಟ : ೨೪೮ ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

ಮುಖಪುಟದ ಒಣಗಿನಿಂತ ಮರ ಹಾಗೂ ಅಲ್ಲೊಬ್ಬ ವ್ಯಕ್ತಿ ಅದು ಚಿಗುರಬಹುದೆಂಬ ಆಶಾಭಾವನೆ ತಾಳಿ ನಿಂತಿರುವುದು ಅರ್ಥಪೂರ್ಣ. ಬದುಕಿನ ಯಾವ ಸಂದರ್ಭದಲ್ಲೂ ನಿರಾಶೆ ಸಲ್ಲದೆಂದು ಧ್ವನಿಸುವ ಈ ಚಿತ್ರ ನಮ್ಮಲ್ಲಿ ಸಕಾರಾತ್ಮಕ ಭಾವನೆ ಬೆಳೆಸಬಲ್ಲುದು. ಇಲ್ಲಿನ ಲೇಖನಗಳೂ ಇದಕ್ಕೆ ಪೂರಕವಾಗಿ ಒತ್ತು ನೀಡಿವೆ. ಹತ್ತು ಹಲವು ಸಂದರ್ಭಗಳನ್ನು ಉಲ್ಲೇಖಿಸುತ್ತ ಸೋಲು ಗೆಲುವುಗಳನ್ನು ತುಲನೆ ಮಾಡಿ ನಮ್ಮ ಮುಂದಿಟ್ಟು ಕಣ್ತೆರಸಿವೆ. ಸೋಲಿಗೆ ಹೆದರಿ ಹತಾಶೆಗೊಂಡು ಬದುಕನ್ನು ಕೊನೆಗೊಳಿಸುವ ಇಂದಿನ ಯುವ ಪೀಳಿಗೆಗೆ ಮಾರ್ಗದರ್ಶನ ಮಾಡಿವೆ. ಒಂದು ಸ್ವಾರಸ್ಯಕರ ಕತೆಯಂತೆ ಓದಿಸಿಕೊಂಡು ಹೋಗುವ ಹಲವಾರು ಜನರ ನೋವಿನ ನಿಜಸಂಗತಿಗಳಿವು. ಸೋಲಿನ ಸರಪಳಿಯಲ್ಲಿ ಬಂದಿಯಾದ ನೂರಾರು ಜನರ ವ್ಯಥೆಗಳಿವು. ಆದರೆ ಸೋಲು ಶಾಶ್ವತವಲ್ಲ; ತಾಳ್ಮೆಯಿಂದ ಕಾದರೆ ಗೆಲುವು ನಿಶ್ಚಿತವೆಂದು ಮನವರಿಕೆ ಮಾಡುವ ಲೇಖನಗಳು. ಈ ಬರಹಗಳಿಗೆ ಸಾಕಷ್ಟು ಸಹೃದಯ ಒಡನಾಡಿಗಳ ಅನುಭವದ ಸಾರವೂ ಲೇಖಕಿಗೆ ಲಭಿಸಿದೆ. ಎಲ್ಲರ ಬದುಕನ್ನು ಹತ್ತಿರದಿಂದ ಕಂಡು ಏಳುಬೀಳನ್ನು ಗುರುತಿಸಿ ಜನರಲ್ಲಿ ಧೈರ್ಯ ತುಂಬುವ ಕೆಲಸವನ್ನಿವು ಮಾಡಿವೆ. ಬದುಕು ದುರ್ಭರವಾದಾಗ ಪೂರ್ಣವಿರಾಮ ಬೇಡ, ಸಕಾರಾತ್ಮಕ ಭಾವನೆ – ಪ್ರಯತ್ನಗಳಿಂದ ಪುನಶ್ಚೇತನಗೊಳಿಸುವುದು ಅಗತ್ಯವೆಂಬ ಧ್ವನಿ ಇಲ್ಲಿದೆ.



## ಸಾವೇ, ಬರುವುದಿದ್ದರೆ ನಾಳೆ ಬಾ!

(ಬದುಕು ಬದಲಿಸಬಹುದು– ಭಾಗ–೨) ನೇಮಿಚಂದ್ರ

**ಪುಟ : ೨೫೨**

**ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

ತಾನಿನ್ನೂ ಬದುಕಿರಬೇಕೆಂಬ ಉತ್ಕಟ ಆಸೆಯನ್ನು ಧ್ವನಿಸುವ ಶೀರ್ಷಿಕೆಯ ಈ ಕೃತಿ ಹಲವು ಲೇಖನಗಳ ನ್ನೊಳಗೊಂಡಿದೆ. ಸಾವನ್ನು ಗೆಲ್ಲಲು ಸಾಧ್ಯವಿಲ್ಲದಿದ್ದರೂ ಅದನ್ನು ಮುಂದೂಡಿ ಆರೋಗ್ಯವಾಗಿ ಬದುಕ ಬಹುದಲ್ಲವೆ? ಆರೋಗ್ಯವಂತರ ಬಳಿ ಸಾವು ಸುಳಿಯುವುದು ಅಪರೂಪ. ಸದಾ ರೋಗಿಯಾಗಿದ್ದರೆ ಅದು ನಾಳೆ ಬರುವ ಬದಲು ಇಂದೇ ಬರಬಹುದು. ಅಲ್ಲದೆ ಆತ್ಮವಿಶ್ವಾಸ, ಹುಮ್ಮಸ್ಸು ಸರಳ–ಸಹಜ ನಡವಳಿಕೆ ವ್ಯಕ್ತಿಯ ಆಯುಸ್ಸನ್ನು ಹೆಚ್ಚಿಸಬಹುದು. ಹಲವು ಗಿಡಮೂಲಿಕೆಗಳ ಔಷಧೀಯ ಗುಣಗಳನ್ನೂ ತಿಳಿಸಿ ಹೇಳಿರುವ ಲೇಖಕಿ ತನ್ನ ಪ್ರವಾಸಾನುಭವಗಳ ದೇಶ ವಿದೇಶಗಳಲ್ಲಿನ ನೂರಾರು ಸನ್ನಿವೇಶಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ. ತಾವು ಭೇಟಿಯಾದ ಮಹನೀಯರ ದೀರ್ಘಾಯುಸ್ಸಿನ ಗುಟ್ಟನ್ನು ನಮಗೆ ಹೇಳಿದ್ದಾರೆ. ಕೆಲವಂತೂ ರೋಚಕವಷ್ಟೇ ಅಲ್ಲ, ಅಚ್ಚರಿಯ ಸಂಗತಿಗಳೂ ಕೂಡ. ಹೊಸ್ತಿಲ ಬಳಿ ಬಂದು ಕೂತಿರುವ ಸಾವನ್ನು ಕಂಡು "ನನಗೀಗ ನಿನ್ನೊಂದಿಗೆ ಬರಲು ಬಿಡುವಿಲ್ಲ" ಎಂದು ಸತಾಯಿಸಿ ಹಿಮ್ಮೆಟ್ಟಿಸಿದ ಕಥೆಗಳಿಲ್ಲಿ ಧಾರಾಳ ಇವೆ. ಆರೋಗ್ಯವನ್ನು ಕಾಪಾಡಿಕೊಳ್ಳುವ ಬಗ್ಗೆ ಸಲಹೆ ಸೂಚನೆಗಳಿವೆ. ಬಾಳಲ್ಲಿ ಎರಗಿ ಬಂದ ಆಘಾತಗಳನ್ನೆದುರಿಸಿಯೂ ಶಕ್ತರಾಗಿ ಎದುರಿಸಿ ಎದ್ದುನಿಂತ ಚೇತನಗಳೂ ನಮಗೆ ಮಾದರಿಯಾಗಿ ನಿಲ್ಲುತ್ತವೆ.

## ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಂವೇದನೆ (ಲೇಖನಗಳ ಸಂಚಯ)

ಡಾ॥ ಅಶೋಕ ನರೋಡೆ

**ಪುಟ : xvi+೨೪೬=೨೬೨ ಬೆಲೆ : ರೂ. ೨೫೦**

**ಅನುಪಮ ಪ್ರಕಾಶನ,** ಸಾವಿತ್ರಿ ಸದನ, ಸತ್ಯಪ್ರಮೋದ ನಗರ ಅಥಣಿ (ಬೆಳಗಾವಿ)–೫೯೧ ೩೦೪

ಕನ್ನಡದ ಸಾಹಿತ್ಯ ಕೃತಿಗಳಲ್ಲಿ ಮಹಿಳೆಯನ್ನು ಹೇಗೆ ಬಿಂಬಿಸಲಾಗಿದೆ ಎಂದು ವಿಮರ್ಶೆ ಮಾಡಿರುವ ಲೇಖನಗಳಿವು. ಹೆಚ್ಚಿನ ಸಂದರ್ಭಗಳಲ್ಲಿ ಒಬ್ಬ ಲೇಖಕ ನಿಜ ಜೀವನದಲ್ಲಿ ಮಹಿಳೆಯ ಬಗ್ಗೆ ತಾಳಿದ ಧೋರಣೆಯೇ ಅವನ ಕೃತಿಗಳಲ್ಲೂ ಪ್ರತಿಬಿಂಬಿತವಾಗಿರುತ್ತದೆ. ಇದಕ್ಕೆ ಉದಾಹರಣೆ ಎಸ್. ಎಲ್. ಭೈರಪ್ಪ ಅವರ ಕೃತಿ "ಮಂದ್ರ" ಇನ್ನು ಮಹಿಳೆಯರು ಮಹಿಳಾ ವಿರೋಧಿ ಸಾಹಿತ್ಯ ಸೃಷ್ಟಿಸಲು ಸಾಧ್ಯವೇ ಇಲ್ಲ. ಇಲ್ಲಿನ ಮೊದಲ ಲೇಖನದಲ್ಲಿ ಕಾದಂಬರಿ ಲೋಕದ ಕೆಲವು ಲೇಖಕರನ್ನು ಬಿಟ್ಟರೆ ಈ ಕೃತಿಯ ಲೇಖಕರು ವಿಮರ್ಶೆಗೆ ಆಯ್ದುಕೊಂಡದ್ದು ಲೇಖಕಿಯರ ಕೃತಿಗಳನ್ನು. ಹಾಗಾಗಿ ಲೇಖನಗಳಲ್ಲೆಲ್ಲ ಸ್ತ್ರೀಪರ ಧೋರಣೆಯೇ ಧಾರಾಳವಾಗಿ ಎದ್ದುಕಾಣುತ್ತದೆ. ಪುರಾಣಕಾಲ, ವಚನಸಾಹಿತ್ಯ, ನವೋದಯ, ನವ್ಯ, ಪ್ರಗತಿಶೀಲ, ದಲಿತ, ಬಂಡಾಯ ಮುಂತಾದ ಕಾಲಘಟ್ಟಗಳಲ್ಲಿ ಮಹಿಳೆಯನ್ನು ಚಿತ್ರಿಸಿರುವ ದೃಷ್ಟಿಕೋನ ಸಹಜವಾಗೇ ಭಿನ್ನ ರೀತಿಯದಾಗಿರುತ್ತದೆ. ಇತ್ತೀಚಿನ ಕೃತಿಗಳಲ್ಲಂತೂ ಮಹಿಳಾ ಪ್ರತಿಭಟನೆ ಮತ್ತು ಹೋರಾಟ ಯಾವ ಅಂಜಿಕೆಯೂ ಇಲ್ಲದೆ ಮುನ್ನಡೆಯುತ್ತಿದೆ. ಈಗ ಆಕೆಗೆ ಪರ ವಾದಿಸುವವರ ಹಂಗೇ ಬೇಕಾಗಿಲ್ಲವಾಗಿದೆ. ಕಾಲಘಟ್ಟಗಳಲ್ಲಿ ತೇಲಿಬಂದ ಬದಲಾವಣೆ ಆಕೆಗೆ ನವಜೀವನ ನೀಡಿ ಸಂತೈಸಿದೆ.

## ಮಂದಿರ ಅಪವಿತ್ರೀಕರಣ ಮತ್ತು ಇಂಡೊ–ಮುಸ್ಲಿಂ ಸಾಮ್ರಾಜ್ಯಗಳು

ರಿಚರ್ಡ್ ಎಂ. ಈಟನ್, ಅನು : ಸುರೇಶ ಭಟ್ ಬಾಕ್ರಬೈಲ್

**ಪುಟ : ೮೮ ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

ಚರಿತ್ರೆಯ ಆಳಕ್ಕೆ ಇಳಿದು ನೋಡಿದರೆ ಭಾರತದಲ್ಲಿ ಹಿಂದೂಗಳ ಮಂದಿರಗಳನ್ನು ಧ್ವಂಸಗೊಳಿಸಿದ್ದು ಮತ್ತು ಅಪವಿತ್ರೀಕರಣಗೊಳಿಸಿದ್ದನ್ನು ಉಲ್ಲೇಖಿಸಲಾಗಿದೆ. ಅದರಲ್ಲೂ ಮುಸ್ಲಿಂ ದೊರೆಗಳು ನಮ್ಮ ದೇಶಕ್ಕೆ ದಂಡೆತ್ತಿ ಬಂದು ನಮ್ಮ ಪವಿತ್ರ ದೇಗುಲಗಳಿಗೆ ದಾಳಿ ಮಾಡಿ ಸಂಪತ್ತನ್ನು ದೋಚಿದರೆಂದು ವಿಶೇಷವಾಗಿ ದಾಖಲಿಸಲಾಗಿದೆ. ಭಾರತದ ಮತೀಯವಾದಿ – ರಾಷ್ಟ್ರೀಯವಾದಿಗಳು ಇದನ್ನು ಇನ್ನಷ್ಟು ವೈಭವೀಕರಣಗೊಳಿಸಿದರು. ವ್ಯಾಪಕ ಪ್ರಚಾರ ನೀಡಿ ಹಿಂದೂ ಧರ್ಮವೇ ಜಗತ್ತಿನಲ್ಲಿ ಶ್ರೇಷ್ಠವೆಂದು ಬಿಂಬಿಸಿ ವ್ಯವಸ್ಥಿತವಾಗಿ ವಿದೇಶಿ ಮತಾನುಯಾಯಿಗಳನ್ನು ದ್ವೇಷಿಸುವಂತೆ ಜಾಲ ಹೆಣೆದರು. ಪರಮತ ಸಹಿಷ್ಣುತೆಯನ್ನು ಮರೆತರು. ಭಾರತದ ದೇಗುಲಗಳನ್ನು ಹಾಳುಗೆಡವಿದ ಯಾವುದೇ ಸಂದರ್ಭವನ್ನೂ ಪರ ಮತಗಳವರ ಕೆಲಸವೆಂದು ಬಿಂಬಿಸಿದರು. ಈಗ ವಿದೇಶಿ ಪ್ರಜೆಯಾದ ರಿಚರ್ಡ್ ಎಂ. ಈಟನ್ ಅವರು ಇಂಡೋ–ಮುಸ್ಲಿಂ ಸಾಮ್ರಾಜ್ಯಗಳ ಬಗ್ಗೆ ಏನು ಹೇಳುವರೆಂದು ನೋಡೋಣ. ಅವರ ದೃಷ್ಟಿಕೋನದಲ್ಲಿ ಪೂರ್ವಗ್ರಹವಿರಲಾರದೆಂಬ ನಂಬಿಕೆಯಿಂದ ಈ ಕೃತಿಯನ್ನೋದೋಣ. ಇದರಲ್ಲಿ ಭಾರತದ ಕೋಮುವಾದಿಗಳ ಪಾತ್ರ ಎಂಥದೆಂಬುದನ್ನೂ ನೋಡೋಣ. ಲೇಖಕ–ಅನುವಾದಕರ ವಿಸ್ತಾರವಾದ ಅಧ್ಯಯನದಿಂದ ಈ ಕೃತಿ ರೂಪುಗೊಂಡಿದೆ.

– **ಇಂದಿರಾ ಕುಮಾರಿ,** ಯಶವಂತಪುರ, ಬೆಂಗಳೂರು – ೫೬೦ ೦೨೨
















## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು - 570 009
ಫೋನ್ : 0821-2545774




## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : raghu202@bsnl.in
















### ಪುಸ್ತಕ ಬೆಲೆ ಪಟ್ಟಿ - 2015*

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:**

| | |
|---|---|
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 204.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 90.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 204.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 87.00 |
| ಫ್ಲೈಯಿಂಗ್ ಸಾಸರ್ಸ್ (1) | 87.00 |
| ಫ್ಲೈಯಿಂಗ್ ಸಾಸರ್ಸ್ (2) | 87.00 |
| ಕಾಡಿನ ಕತೆಗಳು 1 - ಬೆಳ್ಳಂದೂರಿನ ನರಭಕ್ಷಕ | 75.00 |
| ಕಾಡಿನ ಕತೆಗಳು 2 - ಪೆದ್ದಚೆರುವಿನ ರಾಕ್ಷಸ | 75.00 |
| ಕಾಡಿನ ಕತೆಗಳು 3 - ಜಾಲಹಳ್ಳಿಯ ಕುರ್ಕ | 75.00 |
| ಕಾಡಿನ ಕತೆಗಳು 4 - ಮುನಿಶಾಮಿ ಮತ್ತು ಮಾಗಡಿ ಚಿರತೆ | 75.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 99.00 |
| - ,, - (2) - ಹೆಜ್ಜೆ ಮೂಡದ ಹಾದಿ | 96.00 |
| ಹಕ್ಕಿ-ಪುಕ್ಕ | 396.00 |
| ಅಣ್ಣನ ನೆನಪುಗಳು | 210.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 90.00 |
| ಮಿಲನಿಯಮ್ (1) - ಹುಡುಕಾಟ | 87.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 87.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 87.00 |
| ಮಿಲನಿಯಮ್ (4) - ಚಂದ್ರನ ಚೂರು | 87.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 87.00 |
| ಮಿಲನಿಯಮ್ (6) - ಮಹಾಯುದ್ಧ (1) | 87.00 |
| ಮಿಲನಿಯಮ್ (7) - ಮಹಾಯುದ್ಧ (2) | 87.00 |
| ಮಿಲನಿಯಮ್ (8) - ಮಹಾಯುದ್ಧ (3) | 87.00 |
| ಮಿಲನಿಯಮ್ (9) - ದೇಶ ವಿದೇಶ (1) | 87.00 |
| ಮಿಲನಿಯಮ್ (10) - ದೇಶ ವಿದೇಶ (2) | 87.00 |
| ಮಿಲನಿಯಮ್ (11) - ದೇಶ ವಿದೇಶ (3) | 87.00 |
| ಮಿಲನಿಯಮ್ (12) - ದೇಶ ವಿದೇಶ (4) | 87.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 87.00 |
| ಮಿಲನಿಯಮ್ (14) - ಮಹಾಪಲಾಯನ | 87.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 87.00 |
| ಮಿಲನಿಯಮ್ (16) - ಅಡ್ವೆಂಚರ್ | 87.00 |
| ಮಾಯಾಲೋಕ - 1 | 216.00 |

* *ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.*

| | |
|---|---|
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 87.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 183.00 |
| 'ಮಾಯೆಯ ಮುಖಗಳು' (ಚಿತ್ರಲೇಖನ) | 690.00 |
| ಹೊಸ ವಿಚಾರಗಳು | 480.00 |
| ಕಾಡು ಮತ್ತು ಕ್ರೌರ್ಯ | 120.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಶ್ರೀ ಪ್ರದೀಪ ಕೆಂಜಿಗೆ:**

| | |
|---|---|
| ವಿಸ್ಮಯ (1) (2) (3) ಪ್ರತಿಯೊಂದೂ | 78.00 |
| ಪ್ಯಾಪಿಲಾನ್ (1) (2) (3) ಪ್ರತಿಯೊಂದೂ | 162.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಡಾ|| ವಿ. ವಿ. ಬೆಳವಾಡಿ :**

| | |
|---|---|
| ನಡೆಯುವ ಕಡ್ಡಿ ! ಹಾರುವ ಎಲೆ ! | 87.00 |

**ಶ್ರೀ ಪ್ರದೀಪ ಕೆಂಜಿಗೆ:**

| | |
|---|---|
| ಬರ್ಮುಡಾ ಟ್ರ್ಯಾಂಗಲ್ | 75.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |

**ಶ್ರೀ ಎಮ್. ಶಿವಕುಮಾರ್**

| | |
|---|---|
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು:**

| | |
|---|---|
| ಅಚ್ಚ ಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** ಸಾವಯವ ಕೃಷಿ | 51.00 |
| ತೇಜಸ್ವಿ ಪತ್ರಗಳು | 450.00 |

**ಶ್ರೀ ಕೃಪಾಕರ - ಸೇನಾನಿ:**

| | |
|---|---|
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 108.00 |

**ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :**

| | |
|---|---|
| ತರಗತಿಗಳಲ್ಲಿ ಕುವೆಂಪು | 198.00 |

**ಶ್ರೀ ದೇವನೂರು ಮಹಾದೇವ**

| | |
|---|---|
| ಕುಸುಮಬಾಲೆ | 90.00 |
| ದ್ಯಾವನೂರು ಹಾಗೂ ಒಡಲಾಳ | 96.00 |

**ಶ್ರೀಮತಿ ತಾರಿಣಿ ಚಿದಾನಂದ :**

| | |
|---|---|
| ಮಗಳು ಕಂಡ ಕುವೆಂಪು | 370.00 |

**ಶ್ರೀಮತಿ ಪದ್ಮಾಶ್ರೀರಾಮ :**

| | |
|---|---|
| ಗಿಡಗಂಟೆಯಾ ಕೊರಳು | 78.00 |

**ಡಾ|| ಕೆ. ಚಿದಾನಂದ ಗೌಡ:**

| | |
|---|---|
| ಬದುಕು.. ಬೆಳಕು... ಚುಟುಕು....! ಭಾಗ 1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ 2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ:** ನನ್ನ ತೇಜಸ್ವಿ | 369.00 |

ಅಂಚೆಮೂಲಕ ತರಿಸಿಕೊಳ್ಳುವವರಿಗೆ ವಿ. ಸೂ : ನಮ್ಮ ಯಾವ ಪುಸ್ತಕ ಬೇಕಾದರೂ ತಿಳಿಸಿ. ವಿ.ಪಿ.ಎಲ್. ಮಾಡುತ್ತೇವೆ. ಅಂಚೆಯವರು ತಿಳಿಸಿದಾಗ ಹಣ ಕಟ್ಟಿ ಪುಸ್ತಕ ಪಡೆಯಬೇಕು. ಅಂಚೆ ಮತ್ತು ಪ್ಯಾಕಿಂಗ್ ವೆಚ್ಚ ಉಚಿತ




ಜಾಗತಿಕ ಸ್ವರ್ಣ ಕೌನ್ಸಿಲ್‌ನ ಸದಸ್ಯರು

ಭಾರತದ ಏಕೈಕ ಚಿನ್ನದ ಉತ್ಪಾದಕರು

## ಶಿಲೆಯೊಳಗೆ ಅರಳಿದ ಕಾಂತಿಭರಿತ

# ಚಿನ್ನ

ಹಟ್ಟಿ ಚಿನ್ನದ ಗಣಿಯಲ್ಲಿ ಅಶೋಕನ ಕಾಲಕ್ಕಿಂತಲೂ ಮೊದಲೇ ಇಲ್ಲಿ ಗಣಿಗಾರಿಕೆ ನಡೆದಿರುವುದು ಪತ್ತೆಯಾಗಿದೆ. ದಾಖಲಾತಿಯ ಪ್ರಕಾರ ಹೇಳುವುದಾದರೆ, 1880-1920ರಲ್ಲಿ ಅಹೈದರಾಬಾದ್ ಡೆಕ್ಕನ್ ಕಂಪನಿಯೊಂದಿಗೆ ಜಾನ್ ಟೈಲರ್ಸ್ ಮತ್ತು ಮಕ್ಕಳು ಆಧುನಿಕ ಗಣಿಗಾರಿಕೆಯನ್ನು ಕೈಗೊಂಡರು. 1947ರಲ್ಲಿ ಅಹೈದರಾಬಾದ್ ಚಿನ್ನದ ಗಣಿ ಕಂಪನಿ ನಿಯಮಿತಅವನ್ನು ಸಂಘಟಿಸಿ ಕೆಲಸ ಮುಂದುವರೆಸಿತಾದರೂ, 1956ರಲ್ಲಿ ರಾಜ್ಯಗಳ ಪುನರ್ ವಿಂಗಡಣೆಯಿಂದ ಮೈಸೂರು (ಈಗಿನ ಕರ್ನಾಟಕ) ರಾಜ್ಯ ಉದಯವಾದಾಗ ಅದರ ಹೆಸರನ್ನು ಅದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತಅ ಎಂದು ಮರುನಾಮಕರಣ ಮಾಡಲಾಯಿತು. 1971ನೇ ವರ್ಷದಲ್ಲಿ ಉತ್ಪಾದನೆಯನ್ನು 300 ಟನ್ನುಗಳಿಂದ 910 ಟನ್ನುಗಳಿಗೆ ಹೆಚ್ಚಿಸಲಾಯಿತು. ಇಂದು ಹಟ್ಟಿ ಗಣಿಗಾರಿಕೆಯು 528.35 ಹೆಕ್ಟೇರ್ ಭೂ ಪ್ರದೇಶವನ್ನು ಆವರಿಸಿದ್ದು, 84,670ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದೆ. ಇಂದು ಹಟ್ಟಿ ಗಣಿಗಾರಿಕೆಯು 1,341 ಹೆಕ್ಟೇರ್ ಭೂ ಪ್ರದೇಶವನ್ನು ಆವರಿಸಿದ್ದು, 86,252ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದ್ದು ಇಲ್ಲಿಯವರೆಗೆ ಒಟ್ಟು 21.93 ಮಿಲಿಯನ್ ಟನ್‌ಗಳಷ್ಟು ಅದಿರು ಗಣಿಗಾರಿಕೆ ಮಾಡಿದೆ.

### ನಮ್ಮ ಪರಿಸರ ಕಾಳಜಿ



### ಭಾರತದಲ್ಲೇ ಪ್ರಮುಖ ಜೈವಿಕ-ಇಂಧನ ಆರಂಭಿಕದಾರರಾಗಿದ್ದೇವೆ

- ಚಿತ್ರದುರ್ಗ ಚಿನ್ನದ ಘಟಕದಲ್ಲಿ 11.40 ಮೆ.ವ್ಯಾ. ಸಾಮರ್ಥ್ಯದ ಗಾಳಿ ಯಂತ್ರವನ್ನು ಸ್ಥಾಪಿಸಿದೆ
- ಪರಿಸರ ನಿರ್ವಹಣೆಗಾಗಿ ಉದ್ಯಾನವನಗಳ ಅಭಿವೃದ್ಧಿ, ಅರಣ್ಯೀಕರಣ, ಪರಿಸರ ಪ್ರಯೋಗಾಲಯಗಳ ಸ್ಥಾಪನೆ ಮತ್ತು ಸೆಲ್‌ಗಳು
- ನೀರು, ಇಂಧನ, ಅರಣ್ಯ, ತ್ಯಾಜ್ಯ ನಿರ್ವಹಣೆ, ಮಳೆ ನೀರು ಕೊಯ್ಲು, ಇವುಗಳ ಬಗ್ಗೆ ಶಾಲಾಕಾಲೇಜುಗಳಲ್ಲಿ ಜಾಗೃತಿ ಅಭಿಯಾನವನ್ನು ನಡೆಸುವುದು
- ಉತ್ತರ ಕರ್ನಾಟಕಕ್ಕಾಗಿ 43.21 ಹೆಕ್ಟೇರಿನಲ್ಲಿ ಜೈವಿಕ ಇಂಧನ ಪಾರ್ಕ್‌ನ್ನು ಸ್ಥಾಪಿಸಿದೆ
- ಪಳೆಯುಳಿಕೆ ಇಂಧನಗೆ ಪರ್ಯಾಯವಾಗಿ ತ್ಯಾಜ್ಯವನ್ನು ಬಳಸಿ ಜೈವಿಕ ಡೀಸೆಲ್ ಉತ್ಪಾದನಾ ಸ್ಥಾವರವನ್ನು ಸ್ಥಾಪಿಸುವುದು

### ನಮ್ಮ ಸಾಮಾಜಿಕ ಜವಾಬ್ದಾರಿ



### ತೃಣಮೂಲದಿಂದಲೂ ಅಭಿವೃದ್ಧಿಯನ್ನು ಸಾಧಿಸುತ್ತ ಬಂದಿದೆ

- ಶೈಕ್ಷಣಿಕ ವಿದ್ಯಾಕೇಂದ್ರಗಳನ್ನು ನಿರ್ಮಿಸುವುದರೊಂದಿಗೆ 10,500 ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಒದಗಿಸಿದೆ
- ಹಟ್ಟಿ ಸುತ್ತಮುತ್ತಲಿನ ಗ್ರಾಮಗಳಿಗೆ ಕುಡಿಯುವ ನೀರಿನ ಸೌಕರ್ಯವನ್ನು ಒದಗಿಸಿದೆ
- ಹಟ್ಟಿಯಲ್ಲಿ ಸಮುದಾಯ ಶೌಚಾಲಯಗಳನ್ನು ನಿರ್ಮಿಸುವುದು ಮತ್ತು ಉಟಿ ಹಾಗೂ ಹಿರಾ-ಬುದ್ದಿನಿ ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ
- ಹಟ್ಟಿಯಲ್ಲಿ ಬಸ್ ನಿಲ್ದಾಣವನ್ನು ಸ್ಥಾಪಿಸಿದೆ
- ಪ್ರವಾಹ ಪೀಡಿತ ಸಂತ್ರಸ್ತರಿಗಾಗಿ 900 ಮನೆಗಳನ್ನು ನಿರ್ಮಿಸಿಕೊಟ್ಟಿದೆ
- ಹಟ್ಟಿಯಲ್ಲಿ ಕೇಂದ್ರೀಯ ವಿದ್ಯಾಲಯ ಶಾಲೆಯನ್ನು ಸ್ಥಾಪಿಸಿದೆ
- 250 ಕೋಟಿ ವೆಚ್ಚದಲ್ಲಿ 3 ತಾಲ್ಲೂಕುಗಳ ಅಭಿವೃದ್ಧಿಗೆ ಮಾಸ್ಟರ್ ಪ್ಲಾನ್ ರೂಪಿಸಿದೆ

India's only producer of Gold

## ದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ

(ಕರ್ನಾಟಕ ಸರ್ಕಾರದ ಒಂದು ಉದ್ಯಮ)
ಹಟ್ಟಿ 584115, ರಾಯಚೂರು ಜಿಲ್ಲೆ, ಕರ್ನಾಟಕ, ಭಾರತ.
ದೂರವಾಣಿ: +91-8537-275022
ನೋಂದಣಿ ಕಛೇರಿ:
3ನೇ ಮಹಡಿ, ಕೆಹೆಚ್‌ಬಿ ನ್ಯೂ ಶಾಪಿಂಗ್ ಕಾಂಪ್ಲೆಕ್ಸ್,
ರಾಷ್ಟ್ರೀಯ ಕ್ರೀಡಾ ಗ್ರಾಮ, ಕೋರಮಂಗಲ (ಅಂಚೆ),
ಬೆಂಗಳೂರು - 560047, ಭಾರತ.
ದೂರವಾಣಿ: +91-80-25705723/25705725
ಇ-ಮೇಲ್: hgml@vsnl.com

www.huttigold.co.in

ಮೂಲ : ಇಳಾ ದುಬೆ
ಕನ್ನಡಕ್ಕೆ : ಜಿ. ಆರ್.




# ಆಹಾರಕ್ಕಾಗಿ ತೈಲ

## ವಿಶ್ವಸಂಸ್ಥೆಯ ತೀವ್ರ ಸೋಲು

೧೯೯೬ರಲ್ಲಿ ವಿಶ್ವಸಂಸ್ಥೆಯು "ಆಹಾರಕ್ಕಾಗಿ ತೈಲ" ಎಂಬ ಕಾರ್ಯಕ್ರಮವನ್ನು ಕೈಗೊಂಡು ಇರಾಕಿನ ಮೇಲೆ ವಿಧಿಸಲಾಗಿದ್ದ ಆರ್ಥಿಕ ದಿಗ್ಬಂಧನದಿಂದ ಉಂಟಾಗಿದ್ದ ಹಾನಿಯನ್ನು ಪರಿಹರಿಸಲು ಹೆಜ್ಜೆ ಹಾಕಿತ್ತು. ಅದು ಅವ್ಯವಸ್ಥೆಯ ಮತ್ತು ಭ್ರಷ್ಟಾಚಾರದ ಆಗರವಾಯಿತೇ ವಿನಾ ಇರಾಕಿನ ಜನತೆಗೆ ಲಾಭದಾಯಕವಾಗಲಿಲ್ಲ. ಭದ್ರತಾ ಮಂಡಲಿಯಲ್ಲಿ ಮೇಲುಗೈ ಹೊಂದಿದ್ದ ಮತ್ತು ಈಗಲೂ ಹೊಂದಿರುವ ಅಮೆರಿಕಾದಂತಹ ದೇಶಗಳು ಅದಕ್ಕೆ ಕಾರಣ.

ಲೇಖಕಿ ಇಳಾ ದುಬೆ ನ್ಯೂಯಾರ್ಕಿನ ಕೊಲಂಬಿಯ ವಿಶ್ವವಿದ್ಯಾನಿಲಯದ ಪದವೀಧರೆ. ವ್ಯಾಸಂಗದ ಭಾಗವಾಗಿ ಆಕೆ ವಿಶ್ವಸಂಸ್ಥೆಯಲ್ಲಿ ಎರಡು ವರ್ಷ ಇಂಟರ್ನ್ ಆಗಿ ಕೆಲಸ ಮಾಡಿದ್ದರು ಮತ್ತು ವಿಶ್ವಸಂಸ್ಥೆಯ ವಿವಿಧ ಕಾರ್ಯಕ್ರಮಗಳ ಅಧ್ಯಯನ ಮಾಡಿ ವರದಿಗಳನ್ನು ಸಲ್ಲಿಸಿದ್ದಾರೆ. ಅಧಿಕೃತ ದಾಖಲೆಗಳನ್ನು ಆಧರಿಸಿ ನೀಡಿರುವ ವರದಿ ಅವರದು. ವರದಿಯ ಪೂರ್ಣಪಾಠ ಬೇಕಿದ್ದರೆ ಅನುವಾದಕರನ್ನು ಸಂಪರ್ಕಿಸಬಹುದು.

ವಿಶ್ವಸಂಸ್ಥೆಯ ಭದ್ರತಾ ಮಂಡಲಿಯು ಸದಸ್ಯ ರಾಷ್ಟ್ರಗಳ ಮೇಲೆ ಆರ್ಥಿಕ ದಿಗ್ಬಂಧನ ಹೇರುವ ಅಧಿಕಾರವನ್ನು ಹೊಂದಿದೆ. ಕುವೈತ್ – ಇರಾಕ್ ಯುದ್ಧದ ನಂತರ ಇರಾಕಿನ ಮೇಲೆ ಹಾಗೆ ದಿಗ್ಬಂಧನ ಹೇರಲಾಗಿತ್ತು. ಆಗ ಇರಾಕಿನ ಅಧ್ಯಕ್ಷ ಸದ್ದಾಂ ಹುಸೇನ್ ತನ್ನ ದೇಶದ ನಾಗರಿಕರ ಕನಿಷ್ಠ ಅಗತ್ಯಗಳನ್ನು ಪೂರೈಸಲು ಎಷ್ಟು ಹೆಣಗಿದರೂ ಸಾಧ್ಯವಾಗುವಂತಿರಲಿಲ್ಲ. ಇರಾಕಿನ ಮೂಲ ಸಂಪತ್ತು ತೈಲ. ಅದನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರದೆ ಇರಾಕ್‌ನ ಜೀವನ ನಿರ್ವಹಣೆ ಅಸಾಧ್ಯ. ಅಮೆರಿಕಾದ ದುಂಡಾವರ್ತಿಯಿಂದಾಗಿ ಇರಾಕಿನ ಜನತೆ ತೀವ್ರ ಬಿಕ್ಕಟ್ಟಿಗೆ ಸಿಲುಕಿದಾಗ ಭದ್ರತಾ ಮಂಡಲಿಯು ಮಧ್ಯ ಪ್ರವೇಶ ಮಾಡಿ ಜನತೆಗೆ ಕನಿಷ್ಠ ಅಗತ್ಯಗಳ ಪೂರೈಕೆಯನ್ನು ಮಾಡಲು ಸಾಧ್ಯವಾಗುವಂತೆ ಒಂದು ಯೋಜನೆ ಸಿದ್ಧಪಡಿಸಿತು. ಅದೇ "ಆಹಾರಕ್ಕಾಗಿ ತೈಲ" ಎಂಬುದು. ಭಾರತದ ವಿದೇಶಾಂಗ ಸಚಿವರಾಗಿದ್ದ ನಟವರ ಸಿಂಗ್ ಸಿಕ್ಕಿಹಾಕಿಕೊಂಡು ನಗ್ನ ಭ್ರಷ್ಟತೆಗೆ ಬೆಲೆ ತೆರಬೇಕಾಗಿ ಬಂದಿದ್ದು ಈ ಯೋಜನೆಯಡಿ ಇರಾಕ್ ಮಾರುತ್ತಿದ್ದ ತೈಲವನ್ನು ಕೊಳ್ಳುವ ಮೂಲಕವೇ. ಯೋಜನೆಯು ಇರಾಕಿನ ಜನತೆಗೆ ಅಗತ್ಯ ಸಾಮಗ್ರಿಗಳ ಕೊರತೆಯನ್ನು ನೀಗಿಸುವ ಉದ್ದೇಶ ಹೊಂದಿತ್ತು. ಅದು ಸಫಲವಾಗಲಿಲ್ಲ, ಆದರೆ ಲಾಭವನ್ನು ಹಿರಿದುಕೊಂಡವರು ಬೇರೆ ದೇಶಗಳ ಬಂಡವಳಿಗರು ಮತ್ತು ವ್ಯಾಪಾರಿಗಳು. ಇರಾಕಿನ ಸರ್ಕಾರ ಸಹ ಸಾಕಷ್ಟು ಲಾಭ ಗಳಿಸಿತು, ಆದರೆ ಜನತೆಯ ಅಗತ್ಯಗಳ ಪೂರೈಕೆಗೆ ಅದನ್ನು ತೊಡಗಿಸಲಾಗಲಿಲ್ಲ. ಯೋಜನೆಯು ವಿಫಲವಾಗಲು ಮತ್ತು ದುರುದ್ದೇಶಗಳಿಗೆ ಹಾದಿ ಮಾಡಿಕೊಡಲು ಕಾರಣಗಳು ಹಲವು. ಅವನ್ನು ವಿಶ್ಲೇಷಿಸಿಕೊಂಡರೆ ವಿಶ್ವಸಂಸ್ಥೆಯಲ್ಲಿ "ಯಜಮಾನ ಪಟ್ಟ"ದಲ್ಲಿರುವ ಅಮೆರಿಕಾ ಮತ್ತಿತರ ದೇಶಗಳ ಅಸಭ್ಯತೆ ಹಾಗೂ ಲಾಭಕೋರತನದ ಸಮಗ್ರ ಪರಿಚಯ ದೊರೆಯುತ್ತದೆ. ಆ ಯೋಜನೆಯ ರೂಪರೇಷೆಯನ್ನು ಭದ್ರತಾ ಮಂಡಲಿಯು ಪ್ರಜ್ಞಾಪೂರ್ವಕವಾಗಿ ತೂತುಗಳ ಜರಡಿ ಮಾಡಿಬಿಟ್ಟಿದ್ದಿತೇನೋ ಎನಿಸಿರುವುದೂ ಉಂಟು.

ಭದ್ರತಾ ಮಂಡಲಿಯು ಯೋಜನೆಯ ಅನುಷ್ಠಾನಕ್ಕೆ "ಸಮಿತಿ–೬೬೧" ಎಂಬುದನ್ನು ರಚಿಸಿತ್ತು. ಅದರ ಅನುಪಯುಕ್ತ ನಿರ್ಣಯಗಳು, ನಿಯಮಗಳು ಮತ್ತು ಕ್ರಿಯಾ ವಿಮುಖತೆಯು ಅಂತರರಾಷ್ಟ್ರೀಯ ತೈಲ ವ್ಯಾಪಾರಿಗಳಿಗೆ ಮತ್ತು ಇರಾಕ್ ಸರ್ಕಾರಕ್ಕೆ ಲಾಭ ಸುರಿದುವೇ ವಿನಾ ಆ ದೇಶದ ಜನತೆಗಲ್ಲ. ಸಮಿತಿಗೆ "೬೬೧" ಎಂಬ ಹೆಸರು ಬಂದಿದ್ದು ಭದ್ರತಾ ಮಂಡಲಿಯ ೬೬೧ನೆಯ ನಿರ್ಣಯದಿಂದಾಗಿಯೇ. ಇರಾಕ್ ೧೯೯೦ರಲ್ಲಿ ಕುವೈತ್‌ನ ಆಕ್ರಮಣ ನಡೆಸಿತ್ತೆಂಬ ಹಿನ್ನೆಲೆಯಲ್ಲಿ ಬಂದದ್ದು ಆ ನಿರ್ಣಯ. ನಿಜಕ್ಕೂ ಇರಾಕ್ ಆಕ್ರಮಣ ನಡೆಸಿತ್ತೇ ಅಥವಾ ಹಾಗೆ ತೋರುವಂತೆ ಮಾಡಲು ಕುವೈತನ್ನು ಅಮೆರಿಕಾ ಪುಸಲಾಯಿಸಿತ್ತೇ ಎಂಬ ಪ್ರಶ್ನೆಗಳಿಗೆ ಈವರೆಗೆ ಉತ್ತರಗಳಿಲ್ಲ. ಆದರೆ ಆರ್ಥಿಕ ದಿಗ್ಬಂಧನದ ಪರಿಣಾಮವು ಘೋರವಾದ್ದು ಜನತೆಗೆ. ಆಹಾರ, ಔಷಧಿ, ನೀರು, ವಿದ್ಯುಚ್ಛಕ್ತಿ, ಸ್ವಚ್ಛತಾ ವ್ಯವಸ್ಥೆ, ಹೀಗೆ ಎಲ್ಲ ಬಾಬ್ತುಗಳಲ್ಲೂ ಅವ್ಯವಸ್ಥೆಯು ನೂರ್ಮಡಿಯಾಗಿ

ಜನರು ಕಂಗಾಲಾಗಿದ್ದರು. ೧೯೯೬ರವರೆಗೆ ೫ ಲಕ್ಷ ಮಕ್ಕಳು ಅಸುನೀಗಿದ್ದರು. ಇನ್ನು ಬೇರೆಯವರ ಲೆಕ್ಕ ಊಹಿಸಿಕೊಳ್ಳಬಹುದು. ಆ ಹಿನ್ನೆಲೆಯಲ್ಲಿ ಭದ್ರತಾ ಮಂಡಲಿಯು ನಿರ್ಣಯ ೯೮೬ ಎಂಬುದನ್ನು ಅಂಗೀಕರಿಸಿ ಇರಾಕ್ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ವಲ್ಪ ತೈಲ ಮಾರಲು ಅವಕಾಶ ಕಲ್ಪಿಸಿತು. ಅದಕ್ಕೆ ಒಂದು ಷರತ್ತಿದ್ದಿತು: ಇಡೀ ಹಣವನ್ನು ಮಾನವನ ಇರುವಿಕೆಗೆ ಅಗತ್ಯವಾದ ಸರಕುಗಳನ್ನಷ್ಟೇ ಕೊಳ್ಳಬೇಕು, ಎಂದು. ಅಂದರೆ ಮಿಲಿಟರಿ ಶಸ್ತ್ರಾಸ್ತ್ರ, ರಸ್ತೆ ರಿಪೇರಿ, ಕಟ್ಟಡ ಕಟ್ಟುವುದು, ವಾಹನಗಳ ಕೊಳ್ಳುವಿಕೆ, ಮುಂತಾದವುಗಳಿಗೆ ಆ ಹಣವನ್ನು ಬಳಸುವಂತಿರಲಿಲ್ಲ. ೧೯೯೬ರ ಡಿಸೆಂಬರ್‌ನಿಂದ ೨೦೦೩ರವರೆಗೆ ಇದು ಜಾರಿಯಲ್ಲಿತ್ತು. ಇದರಡಿ ಸುಮಾರು ಎಪ್ಪತ್ತು ಸಾವಿರ ಕೋಟಿ ರೂಪಾಯಿಗಳ ವ್ಯವಹಾರ ನಡೆಯಿತು (ಅಂದರೆ, ಹತ್ತು ಬಿಲಿಯನ್ ಡಾಲರುಗಳು). ಇದು ಅಮೆರಿಕಾ ಮತ್ತು ಯೂರೋಪ್ ದೇಶಗಳಿಗೆ ಅದ್ಭುತ ಮಾರುಕಟ್ಟೆ ಮತ್ತು ಲಾಭ ಎಂದು ಬೇರೆ ಹೇಳಬೇಕಾಗಿಲ್ಲ. ಒಂದೊಂದು ಬಿಡಿಕಾಸೂ ಇರಾಕಿನ ತೈಲಸಂಪತ್ತಿನಿಂದ ಬಂದಿದ್ದು, ಅದನ್ನು "ಜೀವಪರ ಸಹಾಯ"ವೆಂದು ಕರೆಯುವುದೊಂದು ವಿಪರ್ಯಾಸ. ಯೋಜನೆಯು ೧೩ ಹಂತಗಳಲ್ಲಿ ಜಾರಿಯಾಯಿತು; ಪ್ರತಿ ಹಂತದಲ್ಲೂ ಆರು ತಿಂಗಳುಗಳು. ಎಲ್ಲವೂ ಭದ್ರತಾ ಮಂಡಲಿ ನಿರ್ಣಯ ೬೬೧ರ ಅಡಿಯಲ್ಲೇ. ವಿಶ್ವಸಂಸ್ಥೆಯ ಹಲವು ಅಂಗಸಂಸ್ಥೆಗಳು ಇದರಲ್ಲಿ ಭಾಗವಹಿಸಿದ್ದವು. "ಸಂತ್ರಸ್ತ ಇರಾಕಿಗಳ ಜೀವನ ಸುಧಾರಣೆಗಾಗಿ" ಎಂಬ ನಾಮಫಲಕ ಮಾತ್ರ ಸದಾ ಇರುತ್ತಿತ್ತು.

೧೯೯೦ರಲ್ಲಿ ಸಮಿತಿ-೬೬೧ ರಚನೆಗೊಂಡಾಗ ಅದರ ಜವಾಬ್ದಾರಿಯು ಆರ್ಥಿಕ ದಿಗ್ಬಂಧನವನ್ನು ಮೀರದೆ ಕಟ್ಟುನಿಟ್ಟಾಗಿ ಷರತ್ತುಗಳನ್ನು ಅನುಷ್ಠಾನಕ್ಕೆ ತರುವುದೆಂದಿತ್ತು. ಆದ್ದರಿಂದ ಎರಡು ಸ್ತರಗಳಲ್ಲಿ ಕೆಲಸ ಜರುಗಬೇಕಿತ್ತು: (ಅ) ದಿಗ್ಬಂಧನದ ಬಗ್ಗೆ ಕಟ್ಟೆಚ್ಚರ, ಮತ್ತು (ಆ) "ಆಹಾರಕ್ಕಾಗಿ ತೈಲ" ಎಂಬ ಬಾಬ್ತಿನಲ್ಲಿ ಎಷ್ಟು ತೈಲವನ್ನು ಮಾರಬಹುದೆಂದು ನಿಗದಿಗೊಳಿಸುವುದು. ಈ ಸಂಬಂಧದಲ್ಲಿ ಸಮಿತಿಯು ಪ್ರತಿ ತಿಂಗಳಲ್ಲೂ ತೈಲದ ಮಾರುಕಟ್ಟೆ ಬೆಲೆಯನ್ನು ನಿಗದಿಗೊಳಿಸಬೇಕಾಗಿತ್ತು. ಸಮಿತಿಯಲ್ಲಿ ಭದ್ರತಾ ಸಮಿತಿಯ ಎಲ್ಲ ೧೫ ಸದಸ್ಯ ರಾಷ್ಟ್ರಗಳೂ ಇರುತ್ತಿದ್ದವು. ಜೊತೆಗೆ ನಾಲ್ಕು ಮಂದಿ ತೈಲ ಉದ್ದಿಮೆಯ ಪರಿಣತರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ತಾಂತ್ರಿಕ ಅಂಶಗಳ ಬಗ್ಗೆ ಸಲಹೆ ನೀಡುವುದು ಅವರ ಕೆಲಸ. ಮೊದಲ ಮೂರು ವರ್ಷಗಳು (೧೯೯೭-೯೯) ಸಮಿತಿಯು ಈ ರೀತಿ ಕಾರ್ಯ ನಿರ್ವಹಿಸಿದ ನಂತರ ಬೇರೊಂದು ನಿರ್ಣಯವನ್ನು ಅಂಗೀಕರಿಸಲಾಯಿತು. ಅದನ್ನು ನಿರ್ಣಯ-೧೨೮೪ ಎನ್ನಲಾಗಿದೆ. ಅದು ಸಮಿತಿ-೬೬೧ರ ಜವಾಬ್ದಾರಿಯನ್ನು ಮೊಟಕುಗೊಳಿಸಿ, "ಎಷ್ಟು ತೈಲ ಮಾರಬೇಕಾಗುತ್ತದೆ" ಎಂಬುದನ್ನು ತೀರ್ಮಾನಿಸಲು "ಇರಾಕ್ ಯೋಜನೆಯ ಕಚೇರಿ"ಗೆ ಅಧಿಕಾರ ವರ್ಗಾಯಿಸಿತು. ಅದಕ್ಕಾಗಿ ವಿಶ್ವಸಂಸ್ಥೆಯಲ್ಲಿ ಅಂಥದೊಂದು ಕಚೇರಿಯನ್ನು ತೆರೆಯಲಾಯಿತು. ಇದನ್ನು "ಓಐಪಿ" ಎನ್ನುತ್ತಾರೆ.

ಸಮಿತಿ-೬೬೧ ಹಲವು ಒಪ್ಪಂದಗಳ ಮಾದರಿಗಳನ್ನು ಮೊದಲೇ ಜಾರಿಗೊಳಿಸಿತ್ತು. ಅಂದರೆ, ಎಷ್ಟು ತೈಲವನ್ನು ಯಾವ ಬೆಲೆಗೆ ಮಾರಬೇಕು ಮತ್ತು ಯಾರಿಗೆ ಮಾರಬೇಕು, ಎಂಬುದು; ಜೊತೆಗೆ, ಆ ಹಣದಿಂದ ಏನೇನನ್ನು ಇರಾಕ್ ಕೊಳ್ಳಬಹುದು ಎಂಬುದನ್ನು ಸಹ. ಎರಡು ವ್ಯವಹಾರಗಳಿಗೂ ಕಂಟ್ರಾಕ್ಟರುಗಳನ್ನು ಗುರುತಿಸುವ ಅಗತ್ಯವಿದ್ದಿತು. ಇರಾಕಿನಲ್ಲಿ "ತೈಲ ಮಾರಾಟದ ಸಂಸ್ಥೆ" ಸರ್ಕಾರದ ಅಂಗವಾಗಿತ್ತು. ಕಾಂಟ್ರಾಕ್ಟುದಾರರು ಅದರೊಡನೆ ಒಪ್ಪಂದ ಮಾಡಿಕೊಳ್ಳುತ್ತಿದ್ದರು. ಒಪ್ಪಂದಗಳೆಲ್ಲಾ ಸಮಿತಿ-೬೬೧ರ ಅನುಮತಿ ಇಲ್ಲದೆ ಜಾರಿಗೆ ಬರುವಂತಿರಲಿಲ್ಲ. ಇದೆಲ್ಲಾ ತೈಲಕ್ಕೆ ಸುಖಾಸುಮ್ಮನೆ ಹೆಚ್ಚಿನ ಬೆಲೆ ಕಟ್ಟಲು ಆಗದಿರಲಿ ಎಂಬುದರ ನಿಯಂತ್ರಣಕ್ಕಾಗಿ. ಪ್ರತಿ ತಿಂಗಳೂ ಬೆಲೆಯನ್ನು ನಿಗದಿಗೊಳಿಸುವ ಪದ್ಧತಿ ಇತ್ತು. ತೈಲವನ್ನು ಎರಡು ಬಂದರುಗಳಿಂದ ಮಾತ್ರವೇ ರವಾನಿಸಲು ಅವಕಾಶವಿತ್ತು: ಟರ್ಕಿಯ ಸೇಹಾನ್ ಇಲ್ಲವೆ ಪರ್ಷಿಯ ಕೊಲ್ಲಿಯ ಮಿನಾ ಅಲ್ ಬಕರ್.

ಇಷ್ಟೆಲ್ಲಾ ಬಿಗಿ ಷರತ್ತುಗಳಿದ್ದಾಗ್ಯೂ ಸಮಿತಿ-೬೬೧ ತನ್ನ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸದಿರಲು ಷರತ್ತುಗಳಲ್ಲಿ ಅನೇಕ ಲೋಪಗಳಿದ್ದವು. ಅಂತಹ ಒಂದು ನಿಬಂಧ ಹೀಗಿತ್ತು: "ಸಮಿತಿ-೬೬೧ರ ಎಲ್ಲ ೧೫ ಸದಸ್ಯರ ಸರ್ವಾನುಮತ ಇರಬೇಕು ಮತ್ತು ಯಾವ ತೀರ್ಮಾನಕ್ಕೇ ಆಗಲಿ ಒಂದು ಸದಸ್ಯ ರಾಷ್ಟ್ರವು ವಿರೋಧ ವ್ಯಕ್ತಪಡಿಸಿದರೂ ತೀರ್ಮಾನವು ಅಸಿಂಧುವಾಗುತ್ತದೆ." ಯಾವುದೇ ಸಂದರ್ಭದಲ್ಲಿ ಸರ್ವಾನುಮತ ಇಲ್ಲದಿದ್ದಲ್ಲಿ ಸಮಿತಿಯ ಅಧ್ಯಕ್ಷರು ಸದಸ್ಯರೊಡನೆ ಮಾತುಕತೆ ನಡೆಸಿ ಅಂಗೀಕಾರಕ್ಕೆ ಅರ್ಹವಾದ ಸೂತ್ರವನ್ನು ರಚಿಸಿಕೊಡಬೇಕೆಂಬ ಸೂಚನೆ ಇತ್ತು. ವಾಸ್ತವ ಸ್ಥಿತಿಯು ಇಷ್ಟು ಸಲೀಸಾದ ಮಾರ್ಗಕ್ಕೆ ಅನುವು ಮಾಡಿಕೊಡುವಂತಿರಲಿಲ್ಲ, ಏಕೆಂದರೆ ಭದ್ರತಾ ಮಂಡಲಿಯ ಐದು ಖಾಯಂ ಸದಸ್ಯರು ಕಿತಾಪತಿ ಮಾಡಲು ಬೇಕಾದಷ್ಟು ಅಪಾಮಾರ್ಗಗಳಿದ್ದವು. ಅದರಿಂದಾಗಿ ಕಾನೂನು ಮೀರಿದ ಕೃತ್ಯಗಳಿಗೇನೂ ಕೊರತೆ ಇರಲಿಲ್ಲ!

ಒಂದು ಉದಾಹರಣೆ ನೋಡೋಣ: ಹಂತ ಏಳರಲ್ಲಿ, ಅಂದರೆ ೨೦೦೦ದಲ್ಲಿ, ಇರಾಕ್ ತೈಲಬೆಲೆಯ ಮೇಲೆ ಬ್ಯಾರಲ್ ಒಂದಕ್ಕೆ ೧.೫ ಯೂರೋಗಳ (ಅಂದರೆ, ಸುಮಾರು ೧೧೦ ರೂಪಾಯಿಗಳು) ಸರ್ಚಾರ್ಜ್ ವಿಧಿಸಲು ಆರಂಭಿಸಿತು; ಯಂತ್ರೋಪಕರಣಗಳ ದುರಸ್ತಿಗೆ ಆ ಹಣ ಅಗತ್ಯವೆಂಬ ಕಾರಣ ನೀಡಲಾಗಿತ್ತು. ಇದನ್ನು ಅಮೆರಿಕಾ, ಬ್ರಿಟನ್ ಮತ್ತು ಫ್ರಾನ್ಸ್ ವಿರೋಧಿಸಿದವು. ಇರಾಕ್ ಈ ಸರ್ಚಾರ್ಜ್ ಪಡೆಯಲು ಬೇರೊಂದು ಖಾತೆ ತೆರೆಯುತ್ತದೆ ಮತ್ತು ಅದು ನಿರ್ಣಯ-೯೮೬ಕ್ಕೆ ವಿರೋಧವಾದ್ದು ಎಂಬುದು ಅವರ ವಾದ. ಈ ವಾದಕ್ಕೆ ಪ್ರತಿಯಾಗಿ ಇರಾಕ್ ಒಂದು ತಂತ್ರವನ್ನು ಹೂಡಿತು: ವಿಶ್ವಸಂಸ್ಥೆಯು ಅಧಿಕೃತವಾಗಿ ನಿಗದಿಗೊಳಿಸುವ ತೈಲದ ಬೆಲೆಯನ್ನು ಕಡಿಮೆ ಮಾಡುವುದು ಮತ್ತು ತೈಲ ಕೊಳ್ಳುವವರು ಅನಧಿಕೃತವಾಗಿ ಹೆಚ್ಚಿನ ಸರ್ಚಾರ್ಜ್ ನೀಡುವುದು. ಇದು ಗ್ರಾಹಕರಿಗೆ ಮಾನ್ಯವಾಗಿತ್ತು, ಏಕೆಂದರೆ ಕೊಂಡ ತೈಲವನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೇಕಾಬಿಟ್ಟಿ ಬೆಲೆಗೆ ಮಾರಿಕೊಳ್ಳಬಹುದಿತ್ತಲ್ಲ! ಈ ತಂತ್ರವು ಕ್ರಮೇಣ ಸಮಿತಿ-೬೬೧ರ ಗಮನಕ್ಕೆ ಬಂದಿತು. ಸಮಿತಿಯ ಸಲಹೆಗಾರರಾಗಿದ್ದ ಪರಿಣತರು ಈ ತಂತ್ರವನ್ನು ಸದಸ್ಯರಿಗೆ ತಿಳಿಯಹೇಳಿದರು. ಈ ಬಗ್ಗೆ ವಿವರವಾದ ವರದಿ ನೀಡುವಂತೆ




ಸಲಹೆಗಾರರನ್ನು ಅಮೆರಿಕಾ ಒತ್ತಾಯಿಸಿತು. ಇರಾಕ್ ವಿಧಿಸುತ್ತಿದ್ದ ಸರ್ಚಾರ್ಜ್ ವಿಷಯ ಬಗೆಹರಿಸಲು ಹಾದಿಯೊಂದನ್ನು ಕಂಡುಕೊಳ್ಳಬೇಕಿತ್ತು. ಸಲಹೆಗಾರರು ಹೇಳಿದ್ದು ತೈಲದ ಬೆಲೆಯನ್ನು ಕಡಿತಗೊಳಿಸಿದ್ದು ಮಾನ್ಯವಲ್ಲ, ಎಂದು. ಆದರೆ ಸಮಿತಿಯು ಬೇರೆ ಅಭಿಪ್ರಾಯ ಹೊಂದಿತ್ತು: ತೈಲದ ಬೆಲೆಯನ್ನು ತಗ್ಗಿಸಿರುವುದು ಸರಿ, ಅದಕ್ಕೆ ಕಡಿವಾಣ ಹಾಕಹೋದರೆ ಇರಾಕಿನ ಜನರ ಅಗತ್ಯಗಳ ಪೂರೈಕೆಗೆ ತೊಂದರೆಯಾಗುತ್ತದೆ; ಏಕೆಂದರೆ, ಇರಾಕ್ ತೈಲವನ್ನು ಮಾರುಕಟ್ಟೆಗೆ ಬಿಡದೆ ಹೋಗಬಹುದು, ಎಂದು.

ಸಲಹೆಗಾರರು ಇದಕ್ಕೆ ಸಮ್ಮತಿಸಲಿಲ್ಲ. ಯೋಜನೆಯು ಆರಂಭವಾದಾಗಿನಿಂದ ಇರಾಕಿನ ತೈಲ ಮಾರಾಟದಲ್ಲಿ ಉಂಟಾಗಿದ್ದ ಬದಲಾವಣೆಯನ್ನು ವಿವರಿಸಿ ಹೇಳಲಾಯಿತು: "ತೈಲದ ಅಂತಿಮ ಗ್ರಾಹಕರಿಗೆ ನೇರವಾಗಿ ಮಾರುವ ಬದಲು ಇರಾಕ್ ತನ್ನ ತಂತ್ರದಿಂದ ಮಧ್ಯವರ್ತಿಗಳ ಮುಖೇನ ಗ್ರಾಹಕರಿಗೆ ತೈಲ ಮುಟ್ಟಿಸುತ್ತಿದೆ" ಎಂಬುದು ಅದರ ಆಕ್ಷೇಪ. ಅಂದರೆ, ಕಾಂಟ್ರಾಕ್ಟ್ ಪಡೆಯುವವನು ತೈಲ ಪಡೆದು ಅದನ್ನು ವಿತರಿಸುವ ಕಂಪನಿಗೆ ಮಾರುತ್ತಾನೆ, ಕಂಪನಿಯು ಗ್ರಾಹಕನಿಗೆ ಮಾರುತ್ತದೆ. ಸರ್ಚಾರ್ಜನ್ನು ನಿಯಂತ್ರಿಸಲು ಮಾರ್ಗವಿಲ್ಲ, ಎಂದಾಯಿತು. ಅದರಿಂದ ಆಹಾರವಲ್ಲದ ಸರಕುಗಳನ್ನು ಕೊಳ್ಳಲು ಇರಾಕ್‌ಗೆ ಸಾಧ್ಯವಾಗಿಬಿಡುತ್ತದೆ! ಹಾಗಿದ್ದರೆ ಪರಿಹಾರವೇನು? ಸಲಹೆಗಾರರು ಒಂದು ಹೊಸ ನೀತಿಯನ್ನು ಪ್ರತಿಪಾದಿಸಿದರು: "ತೈಲವನ್ನು ಕೊಳ್ಳಲು ಯಾರು ಅರ್ಹರೆಂದು ಪಟ್ಟಿಯೊಂದನ್ನು ತಯಾರಿಸೋಣ. ಅಂಥವರಿಂದ ಮಾತ್ರ ಇತರರು ತೈಲ ಕೊಳ್ಳಬೇಕೇ ವಿನಾ ಮಧ್ಯವರ್ತಿ ಕಂಟ್ರಾಕ್ಟುದಾರರಿಂದ ಕೊಳ್ಳುವಂತಿಲ್ಲ ಎಂಬ ಷರತ್ತನ್ನು ಜಾರಿಗೆ ತರೋಣ," ಎಂದು.

ದ್ವಂದ್ವ ಉಂಟಾಗಿದ್ದು ಈ ಸಲಹೆಯಿಂದಾಗಿ. ಭದ್ರತಾ ಮಂಡಲಿಯ ಐದು ರಾಷ್ಟ್ರಗಳು ಈ ಸೂತ್ರವನ್ನು ಅಂಗೀಕರಿಸಲು ಸಿದ್ಧವಿರಲಿಲ್ಲ. ಫ್ರಾನ್ಸ್, ಚೀಣಾ ಮತ್ತು ರಷ್ಯಾ ಅದನ್ನು ವಿರೋಧಿಸಿದವು. ಹಾಗಾದರೆ ಪರಿಹಾರ ಏನೆಂಬುದನ್ನು ಆ ರಾಷ್ಟ್ರಗಳೇ ತಿಳಿಸಬೇಕೆಂದು ಅಮೆರಿಕಾ ಆಗ್ರಹಿಸಿತು. ಅದಕ್ಕೆ ಫ್ರಾನ್ಸ್ ಹೇಳಿದ್ದಿದು: "ಆ ಸೂತ್ರವನ್ನು ನಾವು ಒಪ್ಪುತ್ತೇವೆ, ಆದರೆ ಅದಕ್ಕೆ ಮುನ್ನ 'ಆಹಾರಕ್ಕಾಗಿ ತೈಲ' ಎಂಬ ಯೋಜನೆಯನ್ನು ಸಮಗ್ರವಾಗಿ ಪರಿಷ್ಕರಿಸಬೇಕು." ಅದರ ಒಳಗುಟ್ಟೇನು? ಇರಾಕ್ ಮೇಲಿನ ಆರ್ಥಿಕ ದಿಗ್ಬಂಧನವು ತಾನೂ ಸೇರಿದಂತೆ ಬೇರೆ ರಾಷ್ಟ್ರಗಳಿಗೆ ಮುಗ್ಗಟ್ಟು ತಂದಿದೆ; ಆದ್ದರಿಂದ ಸುತ್ತಿ ಬಳಸಿ ದಿಗ್ಬಂಧನವನ್ನು ತೆರವುಗೊಳಿಸಲು ಯತ್ನಿಸುವುದು ಸಾಧ್ಯ ಮತ್ತು ಸೂಕ್ತ ಎಂಬುದು ಫ್ರಾನ್ಸಿನ ಲೆಕ್ಕಾಚಾರ. ಅಮೆರಿಕಾಕ್ಕೆ ತಿರುಗೇಟು ನೀಡಲು ಫ್ರಾನ್ಸ್ ಕಂಡುಕೊಂಡ ಉಪಾಯ ಅದು. ಅದರಿಂದ ತನಗೆ ಉಸಿರಾಡಲು ಸಾಧ್ಯವಾಗುತ್ತದೆಂಬುದು ಅದರ ಹುನ್ನಾರ. ಫ್ರಾನ್ಸಿನ ಸಲಹೆಯನ್ನು ಅಮೆರಿಕಾ ಒಪ್ಪಲಿಲ್ಲ ಮತ್ತು ಬೇರಾವ ಪರ್ಯಾಯವನ್ನೂ ಮುಂದಿಡಲಿಲ್ಲ.

ಇರಾಕ್ ವಿಧಿಸುತ್ತಿದ್ದ ಸರ್ಚಾರ್ಜ್ ಪ್ರಶ್ನೆಯು ಭದ್ರತಾ ಮಂಡಲಿಯ ಖಾಯಂ ಸದಸ್ಯರ ಅನೈಕಮತ್ಯದಿಂದಾಗಿ ಬಗೆಹರಿಯದೆ ಉಳಿದು ಹೋಯಿತು. ಅಂತಹ ಸರಳ ವಿಷಯ ಬಗೆಹರಿಯದಿರಲು ಕಾರಣ ಆ ಸದಸ್ಯ ರಾಷ್ಟ್ರಗಳು ತಮ್ಮ ಲಾಭದ ಮೇಲೆ ದೃಷ್ಟಿಯನ್ನಿಟ್ಟುಕೊಂಡಿದ್ದುದು. ಅಂದರೆ, ಇರಾಕ್‌ನ ಸಂತ್ರಸ್ತ ಸ್ಥಿತಿಯಲ್ಲಿ ತಾವೇನು ಹಿರಿದುಕೊಳ್ಳಬಹುದೆಂಬ ಲೆಕ್ಕಾಚಾರ! ಇದು ಖಾಯಂ ಸದಸ್ಯ ರಾಷ್ಟ್ರಗಳ ಒಳ ರಾಜಕೀಯ! ಸಮಿತಿ–೬೬೧ ಕೇವಲ ಅಶಕ್ತವಾಗಿಬಿಟ್ಟಿತು. ನಿಯಮಗಳನ್ನು ಹೇಗೋ ಮಾಡಿ ಇರಾಕ್ ತಿರುಚಿದರೆ, ಭದ್ರತಾ ಮಂಡಲಿಯ ಸದಸ್ಯ ರಾಷ್ಟ್ರಗಳು ತಮ್ಮ ತಮ್ಮ ಹಿತದ ಲಾಭಕ್ಕೆ ಆದ್ಯತೆ ನೀಡಿದುವು. ಉದಾಹರಣೆಗೆ, ಇರಾಕ್ ಸರ್ಚಾರ್ಜ್ ವಿಧಿಸುತ್ತಿದೆಯೇ ಎಂಬುದರ ಬಗೆಗೆ ರಷ್ಯಾ ಅನುಮಾನ ವ್ಯಕ್ತಪಡಿಸಿತು, ಆದರೆ ರಷ್ಯದ ಕಂಪನಿಗಳು ಅತಿ ಹೆಚ್ಚು ತೈಲವನ್ನು ಕೊಂಡವು! ಅಮೆರಿಕಾ ಮಾತ್ರ ದಿಗ್ಬಂಧನಕ್ಕೆ ಮಾರಕವಾಗುವುದನ್ನು ತಡೆಯಬೇಕೆಂದು ಹೇಳುತ್ತಲೇ ಇತ್ತು, ಆದರೆ ಫ್ರಾನ್ಸಿನ ನಿಲುವನ್ನು ಸಮರ್ಥವಾಗಿ ಎದುರಿಸಲು ಅದಕ್ಕೆ ಸಾಧ್ಯವಿರಲಿಲ್ಲ. ಅದರಿಂದಾಗಿ, ಪರಿಷ್ಕೃತ ನಿಯಮವಾವುದೂ ಜಾರಿಗೆ ಬರುವಂತಿರಲಿಲ್ಲ. ಮುಖ್ಯಾಂಶವೇನೆಂದರೆ, ಭದ್ರತಾ ಮಂಡಲಿಯ ಐದು ಖಾಯಂ ಸದಸ್ಯ ರಾಷ್ಟ್ರಗಳು ತಮ್ಮದೇ ರಾಜಕೀಯದ ದಾಳವನ್ನಾಗಿ ಇರಾಕ್ ಮೇಲಿನ ಆರ್ಥಿಕ ದಿಗ್ಬಂಧನವನ್ನು ಬಳಸಿಕೊಳ್ಳುತ್ತಿದ್ದುವು ಎಂಬುದು. ಸಮಿತಿಯ ಅಧ್ಯಕ್ಷರಿಗೆ ಒಮ್ಮತವನ್ನು ಸ್ಥಾಪಿಸುವುದು ಸಾಧ್ಯವಾಗುವ ಸಂಭವವೇ ಇರಲಿಲ್ಲ. ಫ್ರಾನ್ಸ್ ಒಮ್ಮೆ ಇನ್ನೊಂದು ಸಲಹೆ ಮುಂದಿಟ್ಟಿತು: ಸರ್ವಾನುಮತದ ಬದಲು ಸಾಮಾನ್ಯ ಬಹುಮತವನ್ನು ಜಾರಿಗೊಳಿಸಬೇಕು, ಎಂದು. ಅದನ್ನು ಅಮೆರಿಕಾ ಎಂದಾದರೂ ಒಪ್ಪೀತೆ!

ಒಟ್ಟಿನಲ್ಲಿ ಸಮಿತಿ–೬೬೧ "ಹೇಳೋರಿಲ್ಲ, ಕೇಳೋರಿಲ್ಲ" ಎಂಬ ಸ್ಥಿತಿಯನ್ನು ತಲುಪಿತು. ತಾನೇ ವಿಧಿಸಿದ್ದ ನಿಯಮಗಳ ಉಲ್ಲಂಘನೆಯಾದಾಗಲೂ ಅದು ಮಧ್ಯಪ್ರವೇಶ ಮಾಡಲು ಅಶಕ್ತವಾಗಿಬಿಟ್ಟಿತು. ತೈಲ ಮಾರಾಟದ ನ್ಯಾಯಯುತವಲ್ಲದ ವ್ಯವಹಾರಗಳು ಯಾವುವು, ಅವನ್ನು ಗುರುತಿಸುವುದು ಹೇಗೆ, ಅದಕ್ಕೆ ಪರಿಹಾರವೇನು, ಎಂಬುದನ್ನು ಸಮಿತಿ–೬೬೧ ನಿರ್ದಿಷ್ಟವಾಗಿ ತೀರ್ಮಾನಿಸಲು ಸಾಧ್ಯವೇ ಇಲ್ಲದಂತಾಯಿತು. ಇನ್ನು ಸರ್ಚಾರ್ಜ್ ಮತ್ತು ಕಾಂಟ್ರಾಕ್ಟುದಾರರ ಲಪಟಾಯಿಸುವಿಕೆಗಳನ್ನು ತಡೆಯಲು ಹೇಗೆ ತಾನೆ ಸಾಧ್ಯವಿತ್ತು. (ಈ ಲಪಟಾಯಿಸುವಿಕೆಯನ್ನು 'ಕಿಕ್‌ಬ್ಯಾಕ್' ಎನ್ನುತ್ತಾರೆ. ನಮ್ಮ ದೇಶದ ನಟವರ ಸಿಂಗ್ ಅಪಾಮಾರ್ಗದಿಂದ ಲಾಭ ಗಳಿಸಿದ್ದು ಹಾಗೆ). ಈ ಮಧ್ಯೆ ಇರಾಕ್ ಬೇರೊಂದು ತೆರನ ತೆರಿಗೆ ವಿಧಿಸಲಾರಂಭಿಸಿತು: ಇರಾಕಿನ ಬಂದರುಗಳಿಗೆ ತೈಲ ಹೊರುವ ಹಡಗುಗಳು ಬಂದರೆ ಅದಕ್ಕೆ ಇಂತಿಷ್ಟು ಶುಲ್ಕ ಕೊಡಬೇಕು, ಎಂದು. ಅದು ನಿರ್ಣಯ–೬೬೧ಕ್ಕೆ ವಿರೋಧವಾದ್ದು, ಏಕೆಂದರೆ ಅದರಲ್ಲಿ ಇರಾಕ್ ನೇರವಾಗಿ ಹಣವನ್ನು ಸಂಗ್ರಹಿಸುವುದು ಸಾಧ್ಯವಿರುತ್ತಿತ್ತು. ಆ ಪ್ರಶ್ನೆಯು ಸಮಿತಿಯೆದುರು ಬಂದಾಗ ಬ್ರಿಟನ್ ನೀಡಿದ ಸಲಹೆ ಇದು: ಬಂದರು ಶುಲ್ಕವನ್ನು ತೈಲ ಕೊಳ್ಳುವ ಕಾಂಟ್ರಾಕ್ಟುದಾರನ ಲೆಕ್ಕಕ್ಕೆ ಸೇರಿಸಿಬಿಡಿ, ಅದು ವಿಶ್ವಸಂಸ್ಥೆಯ ವಹಿವಾಟಿನಡಿಯೇ ಬಂದುಬಿಡುತ್ತದೆ, ಎಂದು. ಬೇರೆ ಸದಸ್ಯರಾಷ್ಟ್ರಗಳು ಅದಕ್ಕೆ ಪ್ರತಿಕ್ರಿಯೆಯನ್ನೇ ನೀಡಲಿಲ್ಲ! ಒಟ್ಟಿನಲ್ಲಿ, ಕಾನೂನುಬಾಹಿರವಾಗಿ ಇರಾಕ್ ೯೦೦ ಕೋಟಿ ರೂಪಾಯಿಗಳನ್ನು (೧.೫ ಬಿಲಿಯನ್ ಡಾಲರುಗಳು) ಪಡೆದುಕೊಂಡಿತು. ವಿಶ್ವಸಂಸ್ಥೆಯ ಅಂದಿನ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನನ್ ಮೂಕಪ್ರೇಕ್ಷಕನಾಗಿದ್ದ! ಆತನಿಗೆ ಅಮೆರಿಕಾ ಹಾಕಿದ್ದ ಲಗಾಮು ಹೇಗೂ ಆತನನ್ನು ನಿಷ್ಕ್ರಿಯಗೊಳಿಸಿತ್ತು.

ಸಮಿತಿ–೬೬೧ ಸಾಕಷ್ಟು ಪರಿಣತರನ್ನು ಹೊಂದಿರಲಿಲ್ಲ; ಅಗಾಧ ಕಾಂಟ್ರಾಕ್ಟ್‌ಗಳನ್ನು ಪರೀಕ್ಷಿಸಿ ನಿಯಂತ್ರಿಸಲು ಅವರಿಗೆ ಸಾಧ್ಯವಾಗುವಂತಿರಲಿಲ್ಲ. ಪ್ರತಿ ತಿಂಗಳೂ ಅಷ್ಟೊಂದು ಕಾಂಟ್ರಾಕ್ಟುಗಳಿರುತ್ತಿದ್ದವು. ಆರಂಭದಲ್ಲಿ "ಸ್ವತಂತ್ರರಾದ ನಾಲ್ಕು ಅಂತರರಾಷ್ಟ್ರೀಯ ಮಟ್ಟದ ಪರಿಣತರಿರಬೇಕು" ಎಂದಿತ್ತು. ಕಾಂಟ್ರಾಕ್ಟುಗಳು ವಿಪರೀತವಾಗಿ ಹೆಚ್ಚಿದಾಗಲೂ ಆ ಸಂಖ್ಯೆಯನ್ನು ಭದ್ರತಾ ಮಂಡಲಿಯು ಪರಿಷ್ಕರಿಸಲಿಲ್ಲ. ಆ ಹೆಚ್ಚಳಕ್ಕೆ ನಿರ್ಣಯ–೧೨೮೪ ಅವಕಾಶ ಮಾಡಿಕೊಟ್ಟಿತ್ತು. ಎಷ್ಟೋ ಬಾರಿ ನಾಲ್ಕು ಪರಿಣತರು ಸಹ ಇಲ್ಲದ ಪರಿಸ್ಥಿತಿ ಉಂಟಾಗುತ್ತಿತ್ತು! ೧೯೯೬ರಲ್ಲಿ ಪರಿಣತರನ್ನು ಮೊದಲಿಗೆ ನೇಮಿಸಿದಾಗ ಅವರು ಫ್ರಾನ್ಸ್, ರಷ್ಯ, ಅಮೆರಿಕ ಮತ್ತು ನಾರ್ವೆ ದೇಶದವರಾಗಿದ್ದರು. ನಾರ್ವೆಯ ಪರಿಣತ ಬಹುಬೇಗ ನಿರ್ಗಮಿಸಿದ ಮತ್ತು ಅಮೆರಿಕಾದ ಪರಿಣತ

೧೯೯೮ರ ಮಧ್ಯಭಾಗದಲ್ಲಿ ನಿರ್ಗಮಿಸಿದ. ಅವರ ಜಾಗಗಳಿಗೆ ಯಾರನ್ನು ಆಯ್ಕೆ ಮಾಡಬೇಕೆಂದು ತೀರ್ಮಾನಿಸಲು ಭದ್ರತಾ ಮಂಡಲಿಯ ಒಡಕುಗಳು ಅಡ್ಡಿಬಂದವು. ಆದರೆ ತೈಲ ಮಾರಾಟದ ಕಾಂಟ್ರಾಕ್ಟ್‌ಗಳು ಮಾತ್ರ ಹೆಚ್ಚುತ್ತಲೇ ಇದ್ದವು. ಚೀಣಾ ತನ್ನ ಪರಿಣತನನ್ನು ಆಯ್ದುಕೊಳ್ಳಲು ಆಗ್ರಹಿಸಿತು, ಆದರೆ ಅಮೆರಿಕಾಕ್ಕೆ ರಷ್ಯ, ಫ್ರಾನ್ಸ್ ಮತ್ತು ಚೀಣಾದ ಪರಿಣತರನ್ನು ಆಯ್ಕೆ ಮಾಡುವುದು ಬೇಕಾಗಿರಲಿಲ್ಲ. ಅಮೆರಿಕಾ ಮತ್ತು ಚೀಣಾದ ದ್ವಂದ್ವವು ಹೀಗೆ ಮುಂದುವರಿಯುತ್ತಿದ್ದಾಗ ಕೋಟಿಗಟ್ಟಲೆ ಹಣವು ತೈಲ ಮಾರಾಟದ ಬಾಬ್ತಿನಲ್ಲಿ ಇರಾಕ್‌ಗೆ ಸಂದಾಯವಾಗುತ್ತಿತ್ತು. ವಿಶ್ವಸಂಸ್ಥೆಯ ಕಾರ್ಯ ಸಾಧುತ್ವವು ಅಷ್ಟು ಲಕ್ಷಣವಾದ್ದು! ೧೯೯೯ರ ಜೂನ್‌ನಲ್ಲಿ ಫ್ರಾನ್ಸಿನ ಪರಿಣತನು ರಾಜಿನಾಮೆ ನೀಡಿದ. ಆದ್ದರಿಂದ ರಷ್ಯದ ಒಬ್ಬನೇ ಪರಿಣತ ಉಳಿದುಬಿಟ್ಟ. ಆತನ ಹೆಸರು ಅಲೆಕ್ಸಾಂದ್ರ್ ಕ್ರಾಮರ್ ಎಂದು. ಒಂದು ವರ್ಷದ ನಂತರ ಅಮೆರಿಕಾ ಮತ್ತು ಚೀಣಾ ಒಮ್ಮತಕ್ಕೆ ಬಂದು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಯು ಹೊಸ ಪರಿಣತರನ್ನು ಆಯ್ಕೆಮಾಡಲು ಸಮ್ಮತಿ ನೀಡಿದವು. ಹಾಲೆಂಡ್ ಮತ್ತು ಡೆನ್ಮಾರ್ಕ್‌ನ ಮಿಶೆಲ್ ಟೆಲಿಂಗ್ಸ್ ಮತ್ತು ಮೋರ್ಟೆನ್ ಬೂರ್-ಯೆನ್‌ಸೆನ್ ಅವರನ್ನು ಆತ ನೇಮಿಸಿದ.

ಭದ್ರತಾ ಮಂಡಲಿಯು ನಿರ್ಣಯ-೯೮೬ನ್ನು ಅಂಗೀಕರಿಸಿದ ಮೇಲೆ ಸನ್ನಿವೇಶವು ಬಿಗಡಾಯಿಸಿತು. ತನ್ನ ಹಣದಿಂದ ಇರಾಕ್ ಏನೆಲ್ಲಾ ಕೊಳ್ಳಬಹುದೆಂಬುದಕ್ಕೆ ಸಮಿತಿ-೬೬೧ ಹೆಚ್ಚಿನ ಅಧಿಕಾರ ಪಡೆದದ್ದು ಅದಕ್ಕೆ ಕಾರಣ. ತನ್ನ ಮೂಗು ತೂರಿಸಲು ಅಮೆರಿಕಾ ಹೂಡಿದ ಹುನ್ನಾರ ಅದಾಗಿತ್ತು. ಇರಾಕನ್ನು ತನ್ನ ಅಧೀನದಲ್ಲಿರುವ ದೇಶವನ್ನಾಗಿ ಮಾಡುವುದು ಅಮೆರಿಕಾದ ಉದ್ದೇಶ. ಅದು ಸಾಧ್ಯವಾಗದಿದ್ದಾಗ ಅಮೆರಿಕಾ ಮತ್ತು ಬ್ರಿಟನ್ ಘೋರವಾದ ಒಬ್ಬ ಗುಮ್ಮನನ್ನು ಸೃಷ್ಟಿಸಿಬಿಟ್ಟವು. ಅದೇ ಇರಾಕಿನ ತಥಾಕಥಿತ "ಸರ್ವನಾಶಕಾರಿ ಆಯುಧಗಳ ಸಂಗ್ರಹ." ಅದನ್ನು ಆಗುಮಾಡಲು ಮಹಾ ಕಾರ್ಯದರ್ಶಿಯು ಹೊಸ ವಿಭಾಗ ಸ್ಥಾಪಿಸಿಕೊಂಡ. ಅದೇ "ಇರಾಕ್ ಕಾರ್ಯಕ್ರಮ ಉಸ್ತುವಾರಿ ಕಚೇರಿ." ಇದರ ಒಂದು ವಿಭಾಗವು ಕಾಂಟ್ರಾಕ್ಟ್‌ಗಳನ್ನು ಪರಿಗಣಿಸಿ ಅವು ಇರಾಕಿನ ಜನತೆಗೆ ಅಗತ್ಯ ಸರಕುಗಳ ಸರಬರಾಜಿಗೆ ಬಳಸಲಾಗುವುದನ್ನು ಖಾತ್ರಿಪಡಿಸಿಕೊಳ್ಳುವ ಜವಾಬ್ದಾರಿ ಹೊತ್ತಿತ್ತು. ಅವುಗಳ ಬೆಲೆಯನ್ನು ಸರಿಯಾಗಿ ನಮೂದಿಸಲಾಗಿದೆಯೇ ಎಂಬುದನ್ನು ನೋಡಿಕೊಳ್ಳಬೇಕಾಗಿತ್ತು. ಮೊದಲ ಎರಡು ವರ್ಷಗಳಲ್ಲಿ ಇದನ್ನು ಸಮರ್ಪಕವಾಗಿ ಮಾಡಲಾಯಿತು. ಆದರೆ ೧೯೯೮ರಲ್ಲಿ ಇವೆಲ್ಲದರ ವಿಧಿವಿಧಾನಗಳನ್ನು ಪರಿಷ್ಕರಿಸಿ, ಇರಾಕಿನ ಜನತೆಗೆ ಅನುಕೂಲ ಒದಗಿಸುವ ಹೆಸರಲ್ಲಿ ಎಷ್ಟು ತೈಲವನ್ನು ಬೇಕಾದರೂ ಇರಾಕ್ ಮಾರಬಹುದೆಂದು ಹೇಳಿ ಸಮಿತಿ-೬೬೧ರ ಸರ್ವೇಕ್ಷಣೆಯ ಹೊಣೆಯನ್ನು ರದ್ದುಗೊಳಿಸಲಾಯಿತು. ಅಂತೆಯೇ, ಇರಾಕ್ ಕೊಳ್ಳಬಹುದಾದ ಸರಕುಗಳ ಪಟ್ಟಿಯನ್ನು ಹಿಗ್ಗಿಸಲಾಯಿತು.

ಇರಾಕಿನ ಮೇಲಿನ ಆರ್ಥಿಕ ದಿಗ್ಬಂಧನವು ಇರಾಕಿನ ಕತ್ತು ಹಿಚುಕುವ ಉದ್ದೇಶ ಹೊಂದಿತ್ತು. ಅದು ಅಮೆರಿಕಾದ ಏಕಪಕ್ಷೀಯ ತೀರ್ಮಾನ. ಗೆದ್ದವರು ತಮ್ಮ ಅಹಂಕಾರ ಮೆರೆಯಲು ಆಯೋಜಿಸಿಕೊಂಡಿದ್ದ ಆಯುಧ ಅದು. ಇಂತಹ ಕಪಿಮುಷ್ಟಿಯಿಂದ ತಪ್ಪಿಸಿಕೊಳ್ಳಲು ಇರಾಕ್ ನಿರ್ಬಂಧಗಳನ್ನು ಹೇಗೋ ತಿರುಚಿ ಮುನ್ನಡೆಯಬೇಕಾದ ಪ್ರಮೇಯವಿದ್ದಿತು. ೧೯೯೯ರ ನವಂಬರ್ ವೇಳೆಗೆ ಕಾಂಟ್ರಾಕ್ಟ್‌ಗಳು ಸುಮಾರು ನಾಲ್ಕು ಸಾವಿರವನ್ನು ದಾಟಿತ್ತು. ಶಿಕ್ಷಣ, ವಸತಿ ಸೌಲಭ್ಯ, ಧಾರ್ಮಿಕ ವಿಚಾರಗಳು, ವಿದ್ಯುಚ್ಛಕ್ತಿ, ಮುಂತಾದುವಕ್ಕೂ ಅಗತ್ಯ ಸಾಮಗ್ರಿ ಕೊಳ್ಳಲು ಇರಾಕಿಗೆ ಅನುಮತಿ ನೀಡಲಾಗಿತ್ತು. ಇಷ್ಟೆಲ್ಲಾ ಸರಕುಗಳನ್ನು ಇರಾಕ್ ಕೊಳ್ಳಲಾರಂಭಿಸಿದಾಗ ಅವುಗಳ ಬೆಲೆಯನ್ನು ಪರಿಶೀಲಿಸುವುದು ಸಮಿತಿ-೬೬೧ಕ್ಕೆ ಆಗದ ಮಾತಾಗಿತ್ತು. ಹೀಗಾಗಿ ಕಾಂಟ್ರಾಕ್ಟ್‌ಗಳಲ್ಲಿ ಹೆಚ್ಚಿನ ಬೆಲೆ ನಮೂದಿಸಿದರೆ ಅದನ್ನು ತಡೆಯುವ ಪ್ರಕ್ರಿಯೆ ಇಲ್ಲವಾಯಿತು. ಸಮಿತಿ-೬೬೧ ಯಾವುದನ್ನು ಕಾನೂನುಬಾಹಿರವೆಂದು ಹೇಳುತ್ತಿದ್ದಿತೋ ಅಂಥದನ್ನು ತಡೆಯಲು ಅದಕ್ಕೆ ಸಾಮರ್ಥ್ಯ ನಶಿಸಿಹೋಯಿತು. ಹೀಗಾಗಿ ಇರಾಕ್ ಸರ್ಕಾರವು ಅಧಿಕ ಮೊತ್ತದ ಹಣವನ್ನು ಪಡೆಯಿತು, ಅದರಿಂದ ಬೇಕಾದಷ್ಟು ನಿಷೇಧಿತ ಸಾಮಗ್ರಿಗಳನ್ನು

ಖರೀದಿಸಿತು. ಭದ್ರತಾ ಮಂಡಲಿಯು ಅದನ್ನು ತಡೆಗಟ್ಟಲು ಅಸಮರ್ಥವಾದ್ದರಿಂದ ಅಮೆರಿಕಾದ ಆರ್ಥಿಕ ದಿಗ್ಬಂಧನವು ಅರ್ಥ ಕಳೆದುಕೊಂಡಿತು. ವಿಶ್ವಸಂಸ್ಥೆಯು ಅಸಹಾಯಕತೆ ಯಿಂದ ಕಣ್ಣುಗಳನ್ನು ಪಿಳಿಪಿಳಿ ಮಾಡಿಕೊಂಡು ಸುಮ್ಮನಾಯಿತು. ಚೀಣಾ, ಫ್ರಾನ್ಸ್ ಮತ್ತು ರಷ್ಯ ಸಂತೋಷದಿಂದ ವ್ಯಾಪಾರದ ಲಾಭವನ್ನು ತುಂಬಿ ಕೊಂಡವು. ತೈಲವನ್ನು ಅತ್ಯಧಿಕ ಮಟ್ಟದಲ್ಲಿ ಪಡೆದ ದೇಶಗಳು ಅವೇ. ಭಾರತದ ನಟವರ ಸಿಂಗ್ ಗಳಿಸಿದ ಲಾಭವು ರಷ್ಯಾದ ಲಾಭಕ್ಕೆ ಹೋಲಿಸಿದರೆ ನಗಣ್ಯವಾಗಿತ್ತು, ಆದರೆ ಆತನಂತೆ ನೂರಾರು ಮಂದಿ ತೈಲದ ವ್ಯಾಪಾರದಲ್ಲಿ ಹೇರಳ ಸಂಪತ್ತು ಪಡೆದುಕೊಂಡರು. ಭದ್ರತಾ ಮಂಡಲಿ ಮತ್ತು ಅಮೆರಿಕಾ ವಿಶ್ವದ ಮುಂದೆ ಇರಾಕಿನ ವಿರುದ್ಧ ಅನೇಕ ಆಪಾದನೆಗಳನ್ನು ಮಾಡಿದವು, ಆದರೆ ಎರಡು ಅಂಶಗಳು ಸ್ಪಷ್ಟವಾಗಿದ್ದವು : (ಅ) ಇರಾಕ್ ಮಾರುತ್ತಿದ್ದುದು ತನ್ನದೇ ತೈಲವನ್ನು, ಆದ್ದರಿಂದ ಯಾವುದೂ ಅಕ್ರಮ ಗಳಿಕೆ ಎನಿಸಿಕೊಳ್ಳುವಂತಿರಲಿಲ್ಲ, ಮತ್ತು (ಆ) ವಿಶ್ವಸಂಸ್ಥೆಯ ತೀವ್ರಸೋಲಿಗೆ ಕೇವಲ ಇರಾಕ್ ಕಾರಣವಾಗಿರಲಿಲ್ಲ. ಬೇರೆಷ್ಟೋ ಮಂದಿ ಲಾಭ ಗಳಿಸಿಕೊಂಡಿದ್ದರೆ ಅದಕ್ಕೆ ತನ್ನನ್ನು ದೂಷಿಸಿಕೊಳ್ಳುವ ಪೇಚಿನ ಪ್ರಸಂಗವನ್ನು ಇರಾಕ್ ಎದುರಿಸಬೇಕಾಗಿರಲಿಲ್ಲ. ನಟವರ ಸಿಂಗ್ ಕೊಂಡಿದ್ದು ೧೯ ಲಕ್ಷ ಬ್ಯಾರಲ್ ತೈಲ; ಆದರೆ ಬ್ರಿಟನ್ನಿನ ಪಾರ್ಲಿಮೆಂಟ್ ಸದಸ್ಯ ಜಾರ್ಜ್ ಗ್ಯಾಲೊವೇ ೬೫ ಲಕ್ಷ ಬ್ಯಾರೆಲ್ ಕೊಂಡಿದ್ದ. ರಷ್ಯಾದ ವ್ಲದಿಮೀರ್ ಜ಼ಿರಿನೋವ್‌ಸ್ಕಿ ೭೩ ಲಕ್ಷ ಬ್ಯಾರೆಲ್ ತೈಲ ಕೊಂಡಿದ್ದ. ಪಟ್ಟಿ ಇನ್ನೂ ಬಹಳ ದೊಡ್ಡದಿದೆ, ಅದನ್ನು ಪೂರ್ತಿಯಾಗಿ ದಾಖಲಿಸುವ ಅಗತ್ಯವಿಲ್ಲ.




ಇರಾಕಿನ ಮೇಲಿನ ಒತ್ತಡ ಬೇರೆ ರೀತಿಯಲ್ಲೂ ಹೆಚ್ಚುತ್ತಿತ್ತು. ಕುವೈತ್–ಇರಾಕ್ ಯುದ್ಧದಲ್ಲಿ ನಷ್ಟ ಅನುಭವಿಸಿದ್ದವರಿಗೆ ಇರಾಕ್ ನಷ್ಟ ತುಂಬಿಕೊಡಬೇಕೆಂಬ ಒತ್ತಾಯವನ್ನು ಹೇರಿ, ತೈಲ ಮಾರಿದ ಹಣದಲ್ಲಿ ಬಹಳ ದೊಡ್ಡ ಮೊತ್ತವನ್ನು ಇರಾಕಿನಿಂದ ಕಸಿಯಲಾಯಿತು. ವಿಶ್ವಸಂಸ್ಥೆಯ ಮೂಗಿನಡಿಯಲ್ಲಿ "ಸಿಕ್ಕಿದವರಿಗೆ ಸೀರುಂಡೆ" ಎಂದು ಅಮೆರಿಕಾದಿಂದ ಹಿಡಿದು ಹಲವು ದೇಶಗಳು ಮತ್ತು ವ್ಯಕ್ತಿಗಳು ಇರಾಕ್ ಎಂಬ ಉರಿಯುವ ಮನೆಯಿಂದ ಗಳುಗಳನ್ನು ಹಿರಿದುಕೊಂಡರು. ಎಲ್ಲಕ್ಕೂ ಅಮೆರಿಕಾದ್ದು ಒಂದೇ ಉತ್ತರ : ಇರಾಕ್ ಮಾರಕಾಸ್ತ್ರಗಳನ್ನು ತಯಾರಿಸಿಕೊಳ್ಳಲು ಸರ್ವಥಾ ಬಿಡಬಾರದು ಮತ್ತು ಬಿಡುವುದಿಲ್ಲ, ಎಂದು. ಇಂತಹ ಅವ್ಯವಹಾರಗಳ ಮಹಾಪೂರದಲ್ಲಿ ಇರಾಕಿನ ಮಕ್ಕಳಿಗೆ ಅತ್ಯಗತ್ಯವಾದ ಔಷಧಿಗಳ ಪೂರೈಕೆ ಸಹ ಆಗಲಿಲ್ಲ. ಡೆನಿಸ್ ಹ್ಯಾಲಿಡೆ ಇರಾಕಿಗೆ ಮಾನವೀಯ ನೆರವು ಒದಗಿಸುವ ಸಮಿತಿಯ ಸಂಯೋಜಕನಾಗಿ ವಿಶ್ವಸಂಸ್ಥೆಯಿಂದ ನೇಮಕಗೊಂಡಿದ್ದ ವ್ಯಕ್ತಿ. ಭದ್ರತಾ ಮಂಡಲಿಯ ನಕಾರಾತ್ಮಕ ಧೋರಣೆಯನ್ನು ಕುರಿತು ಅವನು ಹೇಳಿದ್ದಿದು : "ಒಂದು ಚಿಕ್ಕ ಉದಾಹರಣೆ ಕೊಡುತ್ತೇನೆ : ೧೯೯೭–೯೮ರಲ್ಲಿ ನಾನು ಇರಾಕಿನಲ್ಲಿದ್ದೆ. ಕೊಲ್ಲಿ (ಕುವೈತ್–ಇರಾಕ್) ಯುದ್ಧದ ವೇಳೆಯಲ್ಲಿ ಅಮೆರಿಕಾ ಕಡಿಮೆ ಶಕ್ತಿಯ ಯುರೇನಿಯಂ ಬಾಂಬುಗಳನ್ನು ಬಳಸಿದ್ದುದರ ಪರಿಣಾಮವಾಗಿ ಇರಾಕಿನ ನೂರಾರು ಮಕ್ಕಳು ಲುಕೀಮಿಯ (ರಕ್ತದ ಕ್ಯಾನ್ಸರ್) ಕಾಯಿಲೆಗೆ ತುತ್ತಾಗಿದ್ದರು. ಅವರಿಗೆ ೮–೯ ಸುತ್ತಿನ ಔಷಧಿ ಚಿಕಿತ್ಸೆ ಅಗತ್ಯವಾಗಿತ್ತು. ಔಷಧಿಯನ್ನು ಇರಾಕ್ ಕೊಳ್ಳಬೇಕಿದ್ದರೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಅನುಮತಿಯ ಅಗತ್ಯವಿತ್ತು. ಮಂಡಲಿಯು ಸವೇಳೆಗೆ ಅನುಮತಿಯನ್ನೇ ನೀಡಲಿಲ್ಲ. ಆದ್ದರಿಂದ ಮಕ್ಕಳಿಗೆ ಆರು ಸುತ್ತು ಔಷಧಿ ಚಿಕಿತ್ಸೆ ಮಾತ್ರ ನೀಡಲು ಸಾಧ್ಯವಾಯಿತು. ಅನೇಕ ಮಕ್ಕಳು ಸಾವನ್ನಪ್ಪಿದರು."

[ಮಾನವ ಹಕ್ಕುಗಳ ಬಗ್ಗೆ ದೊಡ್ಡದಾಗಿ ಡಂಗೂರ ಸಾರುವ ಅಮೆರಿಕಾಕ್ಕೆ ಈ ಬಗ್ಗೆ ಆಗಲೂ ನಾಚಿಕೆಯಾಗಲಿಲ್ಲ, ಈಗಲೂ ಇಲ್ಲ. ಇರಾಕಿನಲ್ಲಿ ಮಾಡಿದ್ದುದನ್ನು ಆಮೇಲೆ ಲಿಬ್ಯಾದಲ್ಲಿ ಮಾಡಿತು ಮತ್ತು ಈಗ ಸಿರಿಯಾದಲ್ಲಿ ಮಾಡುತ್ತಿದೆ. ಜನದ್ರೋಹವೆಂದರೆ ಇದಕ್ಕಿಂತಲೂ ಕೀಳಾದ್ದು ಏನಿರಲು ಸಾಧ್ಯ ? – ಅನು.]

ಇಂಥದೇ ಗೊಂದಲ ಮತ್ತು ಅಡಚಣೆ ಕೃಷಿ, ಆಹಾರ, ಶಿಕ್ಷಣ, ವಿದ್ಯುಚ್ಛಕ್ತಿ, ಮುಂತಾದ ಬಾಬ್ತುಗಳಲ್ಲೂ ಇದ್ದವು. "ದಿಗ್ಬಂಧನ ಸಮಿತಿಯು" ನೀರು ಮತ್ತು ನೈರ್ಮಲ್ಯಗಳಿಗಾಗಿ ಇರಾಕ್ ಪಡೆಯಬೇಕಾಗಿದ್ದ ಹಣದಲ್ಲಿ ಶೇ. ೩೨ರ ಕಡಿತ ಮಾಡಿತ್ತು. (ತೈಲ ಮಾರಿ ಇರಾಕ್ ಗಳಿಸಿದ್ದ ಹಣ ಅದು, ಯಾರದೂ ದಾನವಲ್ಲ). ಇದರಿಂದಾಗಿ ಸಾಂಕ್ರಾಮಿಕ ರೋಗಗಳು ಉಲ್ಬಣಗೊಂಡವು. ವಿಶ್ವಸಂಸ್ಥೆಯ ಅಂಗಸಂಸ್ಥೆ ಯುನಿಸೆಫ್ ಹೇಳಿದಂತೆ "ಐದು ಲಕ್ಷ ಟನ್‌ಗಳಷ್ಟು ಕೊಳೆತ ತ್ಯಾಜ್ಯಗಳನ್ನು ಪ್ರತಿದಿನವೂ ನೇರವಾಗಿ ನಿರ್ಮಲ ನೀರಿನ ಶೇಖರಣೆಯಾಗಿದ್ದುದರೊಳಕ್ಕೆ ಸುರಿಯಲಾಗುತ್ತಿತ್ತು. ಅದರಿಂದ ಸಾವಿರಾರು ಜನರು ಸಾವನ್ನಪ್ಪಿದರು." [ಇದಕ್ಕಿಂತಲೂ ಹೆಚ್ಚು ಮೃಗೀಯವಾದ ವರ್ತನೆ ಇರಬಲ್ಲುದೆ ? ಇಂತಹ ಪಾತಕಗಳಲ್ಲಿ ಅಮೆರಿಕಾದ ದಾಖಲೆಗಳನ್ನು ಮನುಷ್ಯರು ಯಾರೂ ಮುರಿಯುವುದಿಲ್ಲ. – ಅನು.] ಅಮೆರಿಕಾ ಮತ್ತು ಬ್ರಿಟನ್ ಯಾವಾಗಲೂ ಭದ್ರತಾ ಮಂಡಲಿಯಲ್ಲಿ ಇರಾಕ್ ವಿರುದ್ಧ ಕೊಕ್ಕೆ ಹಾಕುವುದು ಮತ್ತು ಕತ್ತಿ ಮಸಿಯುವುದು ಇದ್ದೇ ಇರುತ್ತಿತ್ತು. ಉದಾಹರಣೆಗೆ, ೨೦೦೦ದಲ್ಲಿ ಇರಾಕಿನ ೧.೯ ಬಿಲಿಯನ್ ಡಾಲರುಗಳ ಮೌಲ್ಯದ ಪದಾರ್ಥಗಳನ್ನು ತಡೆಹಿಡಿದಿದ್ದವು. ೨೦೦೨ರ ವೇಳೆಗೆ ಅದು ೫.೫ ಬಿಲಿಯನ್ ಡಾಲರುಗಳನ್ನು ದಾಟಿತ್ತು. ಇರಾಕಿನ ಜನತೆಯ ದಾರುಣತೆಯನ್ನು ಇದರಿಂದಲೇ ಊಹಿಸಿಕೊಳ್ಳಬಹುದು.

ಒಟ್ಟಿನಲ್ಲಿ, "ಆಹಾರಕ್ಕಾಗಿ ತೈಲ" ಯೋಜನೆಯ ಉದ್ದೇಶವು ಇರಾಕ್ ಮೇಲೆ ಅಮೆರಿಕಾ ದುರುಳತನದಿಂದ ವಿಧಿಸಿದ್ದ ದಿಗ್ಬಂಧನದಿಂದ ಉಂಟಾಗಿದ್ದ ಅನಾಹುತವನ್ನು ತಪ್ಪಿಸುವುದಾಗಿತ್ತು. ಆರಂಭದಲ್ಲಿ ಈ ಉದ್ದೇಶವನ್ನು ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳು ಸ್ವಾಗತಿಸಿದ್ದವು. ಆದರೆ ನಂತರದಲ್ಲಿ ವಿಶ್ವಸಂಸ್ಥೆ ಮತ್ತು ಇರಾಕ್, ಎರಡೂ ಪ್ರಶ್ನಾರ್ಹ ಭ್ರಷ್ಟತನದಲ್ಲಿ ಮುಳುಗಿಹೋದವು. ಅಮೆರಿಕಾ ಮತ್ತು ಬ್ರಿಟನ್ ಇರಾಕಿಗೆ ಮಣ್ಣುಮುಕ್ಕಿಸಲು ಭ್ರಷ್ಟತನಕ್ಕೆ ಬಿದ್ದವು ಮತ್ತು ಭ್ರಷ್ಟತನದಿಂದುಂಟಾಗಿದ್ದ ಪರಿಣಾಮವನ್ನು ನಿವಾರಿಸಿಕೊಳ್ಳಲು ಇರಾಕ್ ಭ್ರಷ್ಟತನದ ಹಾದಿಗಳನ್ನು ಹುಡುಕಿ ಕೊಳ್ಳುತ್ತಿತ್ತು. ವಿಶ್ವಸಂಸ್ಥೆಯು ಉತ್ತಮ ಮಟ್ಟದಲ್ಲಿ ಹೊಣೆಗಾರಿಕೆಯನ್ನು ನಿರ್ವಹಿಸ ಬಹುದಿತ್ತು, ಆದರೆ ಅದು ಅಮೆರಿಕಾದ ಕಪಿಮುಷ್ಟಿಯಿಂದ ಹೊರಬರಲಿಲ್ಲ. ಕಾರ್ಯದರ್ಶಿ ಅನ್ನನ್ ತೀರಾ ನಿರಾಶೆಯನ್ನುಂಟುಮಾಡಿದ ನಿಕೃಷ್ಟ ಆಡಳಿತಗಾರನಾಗಿ ಬಿಟ್ಟ. ಎಲ್ಲವೂ ಭದ್ರತಾ ಮಂಡಲಿಯ ಅಧೀನದಲ್ಲಿತ್ತು, ಆದರೆ ಆ ಮಂಡಲಿಯು ಅಮೆರಿಕಾ–ಬ್ರಿಟನ್‌ಗಳ ವೀಟೋ ಹಿಡಿತದಲ್ಲಿತ್ತು! ಆದ್ದರಿಂದ ಸಮಿತಿ–೬೬೧ ಯೋಗ್ಯವಾದ ರೀತಿಯಲ್ಲಿ ಕಾರ್ಯ ನಿರ್ವಹಿಸಲಿಲ್ಲ. ಮಂಡಲಿಯ ಐದು ಖಾಯಂ ಸದಸ್ಯ ರಾಷ್ಟ್ರಗಳು ತಮ್ಮ ಸ್ವಂತದ ರಾಜಕೀಯವನ್ನು ಇರಾಕಿನ ಜನತೆಯ ಹಿತ ಕಾಯುವುದಕ್ಕಿಂತಲೂ ಹೆಚ್ಚು ಪ್ರಮುಖ ಕಾರ್ಯಸೂಚಿಯನ್ನಾಗಿಸಿಕೊಂಡಿದ್ದವು. ಇರಾಕನ್ನು ಧ್ವಂಸಗೊಳಿಸುವ ಅಮೆರಿಕಾ–ಬ್ರಿಟನ್‌ಗಳ ಹುನ್ನಾರಕ್ಕೆ ಇದೆಲ್ಲಾ ಪೂರಕ ಶಕ್ತಿಯನ್ನೊದಗಿಸಿತು. ಇರಾಕಿನ ಮೇಲೆ ಇನ್ನೊಂದು ಯುದ್ಧ ಹೂಡಲು ಈ ಎರಡು ದೇಶಗಳ ಕಾಲುಗಳು ಕೆರೆಯುತ್ತಿದ್ದವು.

[ಅದರ ಮುಂದಿನ ಕತೆ ತಿಳಿದೇ ಇದೆ. ಇರಾಕಿನಲ್ಲಿ ಇರದಿದ್ದ ಮಾರಕಾಸ್ತ್ರಗಳ ಬಗೆಗೆ ಹುಯಿಲೆಬ್ಬಿಸಿದ್ದು, ಇರಾಕಿನ ಮೇಲೆ ಆಕ್ರಮಣ ನಡೆಸಿ ಪ್ರಾಚೀನ ಸಂಸ್ಕೃತಿಯ ತಾಣಗಳೂ ಸೇರಿದಂತೆ ಎಲ್ಲವನ್ನೂ ಸರ್ವನಾಶ ಮಾಡಿದ್ದು, ಲಕ್ಷಗಟ್ಟಲೆ ಜನರನ್ನು ಕೊಂದಿದ್ದು, ಇರಾಕಿನ ತೈಲವನ್ನು ಲೂಟಿ ಮಾಡಿದ್ದು, ಇರಾಕಿನಲ್ಲಿ ನಾಗರಿಕತೆಯ ಯಾವ ಲಕ್ಷಣವೂ ಉಳಿಯದಂತೆ ಆ ದೇಶವನ್ನು ಮರಳುಗಾಡು ಮಾಡಿದ್ದು, ಇರಾಕ್ ತನ್ನ ಖಾಸಗಿ ಆಸ್ತಿ ಎಂಬಂತೆ ನಡೆದುಕೊಂಡಿದ್ದು, ಕಡೆಗೆ "ಇರಾಕ್–ಸಿರಿಯ ಇಸ್ಲಾಮಿಕ್ ಸ್ಟೇಟ್" ಎಂಬ ಹೆಸರಿನ ಉಗ್ರ ಭಯೋತ್ಪಾದಕ ಸಂಘಟನೆಯು ಅಸ್ತಿತ್ವಕ್ಕೆ ಬರಲು ಬುನಾದಿ ಹಾಕಿಕೊಟ್ಟಿದ್ದು, ಇತ್ಯಾದಿ. ಅಮೆರಿಕಾ ಸರ್ಕಾರದ ಮೃಗೀಯತೆಗೆ ಎಣೆಯಿಲ್ಲ, ಪಾಪಕೂಪದ ಹೊಲಸಿಗೆ ಲೆಕ್ಕವಿಲ್ಲ. – ಅನು.]

---

**ಇಳಾ ದುಬೆ**, ನ್ಯೂಯಾರ್ಕ್
ಕನ್ನಡಕ್ಕೆ : **ಜಿ. ಆರ್.**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಆಹಾರ ಮತ್ತು ಆರೋಗ್ಯ
# ವ್ಯಾಪಾರ, ರಾಜಕೀಯ

ಆಹಾರವೇ ಎಲ್ಲಕ್ಕೂ ಕಾರಣ. ಎಲ್ಲ ಜೀವಿಗಳ ವಿಕಾಸಕ್ಕೆ, ವಾನರರಿಂದ ಮಾನವರಾಗುವುದಕ್ಕೆ, ಆಹಾರವೇ ಮೂಲ ಕಾರಣ. ನಮ್ಮ ನಾಗರಿಕತೆ ಹುಟ್ಟಿ, ಬೆಳೆಯುವುದಕ್ಕೆ, ನಮ್ಮ ಶ್ರಮ ವಿಭಜನೆಯಾಗಿ ಬೇರೆ ಬೇರೆ ವೃತ್ತಿಗಳು ಹುಟ್ಟುವುದಕ್ಕೆ, ಆಸ್ತಿ – ರಾಜ್ಯ – ರಾಜ – ಮಾಲಕರಾದುದಕ್ಕೆ, ಜಗಳ – ಯುದ್ಧಗಳಿಗೆ, ವ್ಯಾಪಾರಕ್ಕೆ, ರೋಗಕ್ಕೆ ಎಲ್ಲಕ್ಕೂ ಕಾರಣ ಆಹಾರವೇ. ಅಂತಹ ಆಹಾರಕ್ಕೆ ಜೈವಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಆಯಾಮಗಳು ಹಿಂದಿನಿಂದಲೂ ಇದ್ದವು, ಇಂದಿಗೂ ಇವೆ. ಮೇಲ್ವರ್ಗಗಳ ಆಹಾರ, ಕೆಳವರ್ಗಗಳ ಆಹಾರ; ಬಡವರಿಗೆ ಅಪರೂಪಕ್ಕೆ ಸಿಗುವ ಆಹಾರ, ಶ್ರೀಮಂತರಿಗೆ ತಿಂದಷ್ಟೂ ಮುಗಿಯದ ಆಹಾರ; ನಾವೇ ಬೆಳೆಸಿ ಅಥವಾ ಹುಡುಕಿ ತಿನ್ನಬಹುದಾದ ಆಹಾರ, ಮಾರುಕಟ್ಟೆಯಲ್ಲಿ ಖರೀದಿಸುವ ಆಹಾರ; ಆರೋಗ್ಯಕರ ಆಹಾರ, ಅನಾರೋಗ್ಯಕರ ಆಹಾರ... ಹೀಗೆ ಆಹಾರದಲ್ಲಿ ಭಿನ್ನತೆಗಳು ಹಿಂದೆಯೂ ಇದ್ದವು, ಈಗಲೂ ಇವೆ.

ಆಹಾರದ ಈ ಪರಿಯ ವಿಭಜನೆಯನ್ನು ಎಲ್ಲ ಸಾಹಿತ್ಯದಲ್ಲಿ, ಪ್ರಾಚೀನ ಕೃತಿಗಳಲ್ಲಿ, ಮಹಾಕಾವ್ಯಗಳಲ್ಲಿ, ಧಾರ್ಮಿಕ ಗ್ರಂಥಗಳಲ್ಲಿ, ವೈದ್ಯಕೀಯ ಸಂಹಿತೆಗಳಲ್ಲಿ ಕಾಣಬಹುದು. ಈ ಹಲವು ನೆಲೆಗಳ ನಡುವೆ ವೈರುಧ್ಯಗಳೂ, ತಿಕ್ಕಾಟಗಳೂ ಸಾರ್ವಕಾಲಿಕವೇ. ಸಸ್ಯಾಹಾರವೇ ಶ್ರೇಷ್ಠ, ಅದುವೇ ಆರೋಗ್ಯಕ್ಕೆ ಒಳ್ಳೆಯದು, ಅದುವೇ ಸಾತ್ವಿಕ ಎಂಬ ಹೊಗಳಿಕೆ; ಮಾಂಸಾಹಾರ ಕೆಟ್ಟದು, ಅದರಿಂದ ರೋಗ ಬರುತ್ತದೆ, ಅದು ತಾಮಸಿಕ ಎಂಬ ತೆಗಳಿಕೆ; ಮಾಂಸಾಹಾರಿಗಳನ್ನೂ, ಮದ್ಯಪಾನಿಗಳನ್ನೂ ಸಮೀಕರಿಸಿ ಅಂಥವರೊಡನೆ ಉಣ್ಣಲಾಗದೆಂಬ ಅಸ್ಪೃಶ್ಯತೆ ಈಗಲೂ ಪ್ರಚಲಿತವಾಗಿದೆ. ಕೆಲವು ನಿರ್ದಿಷ್ಟ ಮಾಂಸಗಳನ್ನು ಮತಧರ್ಮಗಳೊಂದಿಗೆ ಗಂಟು ಹಾಕಿ ಭಯೋತ್ಪಾದನೆಯೂ ಆಗುತ್ತಿದೆ. ಹೊಟ್ಟೆ ಸೇರಿ, ದೇಹವನ್ನು ಪೊರೆಯ ಬೇಕಾದ ಆಹಾರವು ಹೀಗೆ ಜಗಳದ ವಸ್ತುವಾಗಿ ಮುಂದುವರಿದಿದೆ.

ಆದರೆ ಇವೆಲ್ಲವನ್ನೂ ಮೀರಿ, ಮುಖ್ಯವಾಗುವ ಪ್ರಶ್ನೆಗಳು ಮೂರೇ : ಮನುಷ್ಯರು ಯಾರು ಎಂಬುದು ಮೊದಲನೆಯದು, ಮನುಷ್ಯರ ದೇಹಕ್ಕೆ ಹೊಂದಿಕೊಳ್ಳುವ ಆಹಾರ ಯಾವುದು ಎಂಬುದು ಎರಡನೆಯದು, ಇಂದು ಲಭ್ಯವಿರುವ ಆಹಾರಗಳಲ್ಲಿ ಒಳ್ಳೆಯ, ಆರೋಗ್ಯಕರ ಆಹಾರ ಯಾವುದು ಮತ್ತು ಅದು ಎಲ್ಲರಿಗೂ ದೊರೆಯುತ್ತಿದೆಯೇ ಇಲ್ಲವೇ ಎನ್ನುವುದು ಮೂರನೆಯದು.

ನಮ್ಮ ಅರಿಮೆಯು ಬಲಿಯುತ್ತಿರುವಂತೆ ಇವೆಲ್ಲಕ್ಕೆ ಉತ್ತರಗಳೂ ಸ್ಪಷ್ಟವಾಗುತ್ತಿವೆ. ಆದರೆ ಇಂದಿಗೆ ಐನೂರು ವರ್ಷಗಳ ಹಿಂದೆ, ಹದಿನಾರನೇ ಶತಮಾನದಲ್ಲಿ, ಬಾಳಿದ್ದ ಕನ್ನಡ ನಾಡಿನ ದಾಸಶ್ರೇಷ್ಠ ಕನಕದಾಸರ ಕೃತಿಗಳಲ್ಲೂ ಇವೇ ಉತ್ತರಗಳಿವೆ ಎನ್ನುವುದು ಅಚ್ಚರಿಯುಂಟುಮಾಡುವುದಷ್ಟೇ ಅಲ್ಲ, ಕನಕದಾಸರ ದಾರ್ಶನಿಕತೆಯನ್ನೂ ಎತ್ತಿ ತೋರಿಸುತ್ತದೆ. ಕುಲ ಕುಲ ಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ಎನ್ನುವ ಮೂಲಕ ಮನುಷ್ಯ ರೊಳಗಿನ ಭೇದ–ಭಾವಗಳನ್ನು ಕನಕದಾಸರು ಪ್ರತಿಭಟಿಸಿದ್ದರು. ಮೇಲ್ವರ್ಗಗಳ ಆಹಾರ, ಕೆಳವರ್ಗಗಳ ಆಹಾರವೆಂದು ತುಚ್ಛೀಕರಿಸುತ್ತಿದ್ದುದನ್ನು ತಮ್ಮ ರಾಮಧಾನ್ಯ ಚರಿತ್ರೆ ಎಂಬ ಕೃತಿಯ ವಸ್ತುವನ್ನಾಗಿಸಿ, ಇವೆರಡರಲ್ಲಿ ಪರಮಸಾರದ್ದು ಯಾವುದು ಎನ್ನುವುದಕ್ಕೆ ರಾಮನ ಆಸ್ಥಾನದಲ್ಲೇ ಉತ್ತರ ಹೇಳಿಸಿದ್ದರು. ಆಹಾರದ ಈ ಮಹಾಕಥೆಯು ಭೂಮಿಗಚ್ಚರಿಯಾಗಿ, ಜನಸ್ತೋಮಕ್ಕೆಲ್ಲಾ ಆದರಣೀಯವಾಗಿರುತ್ತದೆ ಎಂದಿದ್ದರು

**ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ**

ಹೊಟ್ಟೆ ಖಾಲಿಯಿರುವ ೮೦ ಕೋಟಿ ಜನರಲ್ಲಿ ೩೦ ಕೋಟಿ ನಮ್ಮಲ್ಲಿದ್ದಾರೆ, ಜಗತ್ತಿನಲ್ಲಿಂದು ವರ್ಷಕ್ಕೆ ೪ ಕೋಟಿ ಜನರು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆ. ನಮ್ಮಲ್ಲಿ ೩೯% ಮಕ್ಕಳಿಗೆ ನ್ಯೂನ ಪೋಷಣೆಯಿದೆ, ನಿತ್ಯ ೩೦೦೦ ಮಕ್ಕಳು ಅದರಿಂದಾಗಿ ಸಾಯುತ್ತಿದ್ದಾರೆ. ಜನಸಂಖ್ಯೆ ಹೆಚ್ಚಿದಂತೆ ಆಹಾರದ ಬೇಡಿಕೆ ಹೆಚ್ಚುತ್ತಿದೆಯಾದರೂ, ಪೂರೈಕೆ ಇಳಿಯುತ್ತಿದೆ, ಬೆಲೆ ಏರುತ್ತಿದೆ. ಬಡವರು ಹಾಗೂ ಮಕ್ಕಳ ಹೊಟ್ಟೆಗೆ ಊಟವಿಲ್ಲದಿರುವ ನಮ್ಮ ದೇಶದಿಂದಲೂ ವರ್ಷಕ್ಕೆ ೭೫ ಲಕ್ಷ ಟನ್ ಗೋಧಿ, ೮೦ ಲಕ್ಷ ಟನ್ ಅಕ್ಕಿ, ೧೫ ಲಕ್ಷ ಟನ್ ಮಾಂಸ, ೫ ಕೋಟಿ ಮೊಟ್ಟೆ, ೫ ಲಕ್ಷ ಟನ್ ಕೋಳಿ, ೬ ಲಕ್ಷ ಟನ್ ಮೀನನ್ನು ರಫ್ತು ಮಾಡುತ್ತಿದ್ದೇವೆ; ನಮ್ಮವರ ಜೀವಗಳಿಗಿಂತಲೂ ವಿದೇಶದಿಂದ ದೊರೆಯುವ ಚಿಕ್ಕಾಸೇ ನಮಗೆ ಮುಖ್ಯವಾಗಿದೆ. ಇದಲ್ಲದೆ, ಊಟಕ್ಕಿದ್ದವರು ತಿಂದೆಸೆಯುವ ಆಹಾರವು ೪೦%ರಷ್ಟಿದ್ದು, ಎಲ್ಲರ ಹೊಟ್ಟೆಯನ್ನು ತುಂಬಿ ಇನ್ನೂ ಮಿಕ್ಕುಳಿಯುವಷ್ಟಾಗುತ್ತದೆ. ಜಾತಿ, ಮತ, ಮತ್ತಿತರ ಸಾಮಾಜಿಕ, ಧಾರ್ಮಿಕ, ರಾಜಕೀಯ ನಿರ್ಬಂಧಗಳು ಕೂಡ ಜನರ ಆಹಾರವನ್ನು ಕಿತ್ತುಕೊಳ್ಳುತ್ತಿವೆ.






ಆಧಾರಗಳಿವೆ. ಸುಮಾರು ೧ ಲಕ್ಷ ವರ್ಷಗಳ ಹಿಂದೆ ಆಫ್ರಿಕಾದಿಂದ ಹೊರಕ್ಕೆ ಪಾದ ಬೆಳೆಸಿದ ಮಾನವರು ಭರತಖಂಡ, ಯೂರೋಪು, ಅಮೆರಿಕಗಳೆಲ್ಲೆಡೆಗೆ ತಲುಪಿದರು, ಅಲ್ಲಲ್ಲೇ ನೆಲೆ ನಿಂತು ಬೆಳೆದರು. ಇವತ್ತು ಭೂಮಿಯ ಮೇಲಿರುವ ಎಲ್ಲ ೭೦೦ ಕೋಟಿ ಮನುಷ್ಯರು ಆಫ್ರಿಕಾದ ಈ ಮೂಲ ಕುಟುಂಬದಿಂದ ಕವಲೊಡೆದ ೧೦ ಪುರುಷರು ಹಾಗೂ ೧೮ ಸ್ತ್ರೀಯರ ಸಂತಾನಗಳಿಗೆ ಸೇರಿದವರು ಎನ್ನುವುದು ವರ್ಣತಂತುಗಳಲ್ಲೂ, ಮೈಟೋಕಾಂಡ್ರಿಯಾಗಳಲ್ಲೂ ನಡೆಸಿದ ಪರೀಕ್ಷೆಗಳಲ್ಲಿ ದೃಢಗೊಂಡಿದೆ. ಆದ್ದರಿಂದ, ಕನಕದಾಸರು ಹೇಳಿದ್ದಂತೆ, ಮನುಷ್ಯರು ಹುಟ್ಟದ ಯೋನಿಗಳಿಲ್ಲ, ಮೆಟ್ಟದ ಭೂಮಿಗಳಿಲ್ಲ, ಕುಲ ಕುಲ ಕುಲವೆಂಬ ಹೊಡೆದಾಟಗಳೇಕೆ ?

ಕನಕದಾಸರು. ಆಹಾರದ ಒಳಿತು–ಕೆಡುಕುಗಳ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ಲಭ್ಯವಾಗುತ್ತಿರುವ ಮಾಹಿತಿಯೆಲ್ಲವೂ ಭೂಮಿಗಚ್ಚರಿಯಾಗಿಯೇ ಇದೆ !

**ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ?**

ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ಎಂಬ ಕನಕದಾಸರ ಪ್ರಶ್ನೆಗೆ ೧೯ನೇ ಶತಮಾನದೀಚೆಗಿನ ವಿಕಾಸವಾದದಲ್ಲಿ, ಆ ಬಳಿಕ ಹೊರಗೆತ್ತಿದ ಪಳೆಯುಳಿಕೆಗಳಲ್ಲಿ, ವಿಶ್ವದೆಲ್ಲೆಡೆಯ ಮನುಷ್ಯರ ವರ್ಣತಂತುಗಳಲ್ಲಿ ಇತ್ತೀಚೆಗೆ ನಡೆಸಿದ ಪರೀಕ್ಷೆಗಳಲ್ಲಿ ಉತ್ತರಗಳು ಲಭ್ಯವಾಗಿವೆ. ಆಫ್ರಿಕಾದ ಸೀಳು ಕಣಿವೆಗಳ ಪ್ರದೇಶವೇ ಮನುಕುಲದ ಮೂಲ ನೆಲೆ, ಸುಮಾರು ೨ ಲಕ್ಷ ವರ್ಷಗಳ ಹಿಂದೆ ಅಲ್ಲೇ ಮನುಷ್ಯನ ವಿಕಾಸವಾಯಿತು ಎನ್ನುವುದಕ್ಕೆ ಈಗ ಸಾಕಷ್ಟು

ಇಂದು ಮನುಕುಲವು ಬೇರೆ ಬೇರೆ ದೇಶಗಳಾಗಿ, ಜನಾಂಗಗಳಾಗಿ, ಮತಗಳಾಗಿ, ಜಾತಿಗಳಾಗಿ ವಿಭಜಿಸಲ್ಪಟ್ಟಿದ್ದರೂ, ಮನುಷ್ಯರೆಲ್ಲರ ದೇಹದ ರಚನೆ ಒಂದೇ ತೆರನಾಗಿದೆ; ಇರುವ ಪ್ರದೇಶ, ಬದುಕಿನ ಸ್ಥಿತಿಗತಿಗಳಿಗೆ ಅನುಗುಣವಾಗಿ ದೇಹದ ಬಣ್ಣ, ಚರ್ಯೆಗಳಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದಾದರೂ, ಉಳಿದಂತೆ ೯೯.೯% ಸಾಮ್ಯತೆಯಿದೆ. ಕನಕದಾಸರೆಂದಂತೆ, ಮನುಷ್ಯರೊಳಗೆ ಹಿರಿದೇನು, ಕಿರಿದೇನು, ಸಮಾನ ಅವಕಾಶಗಳು ದೊರೆತರೆ ಎಲ್ಲರೂ ನೆಟ್ಟನೆ ಸರ್ವಜ್ಞನ ನೆಲೆಯಾಗಬಹುದು !

ಜಲವೆ ಸಕಲ ಕುಲಕ್ಕೆ ತಾಯಲ್ಲವೆ ಎಂಬ ಕನಕವಾಣಿಯೂ ನಿಜವೇ. ಎಲ್ಲಾ ಮನುಷ್ಯರೊಳಗೆ ೫೩%ರಷ್ಟಿರುವುದು ಜಲಜನಕ–ಆಮ್ಲಜನಕಗಳ ಜಲ,

ಇನ್ನುಳಿದದ್ದು ಸಾರಜನಕ, ಇಂಗಾಲ, ಇತರ ಖನಿಜ–ಲವಣಗಳು. ಇವೂ ನಮ್ಮವೇನಲ್ಲ; ಕ್ಷಣ ಕಾಲ ಬ್ರಹ್ಮಾಂಡದಿಂದ ಎರವಲು ಪಡೆಯುವಂಥವು! ಈ ಅಣು–ಪರಮಾಣುಗಳೇ ಹರಿಯೆಂದು ತಿಳಿದರೆ, ಕನಕದಾಸರಂದಂತೆ ಹರಿಯೇ ಸರ್ವೋತ್ತಮ, ಹರಿಯೇ ಸರ್ವೇಶ್ವರ, ಎಲ್ಲವೂ ಹರಿಮಯ! ಎಲ್ಲಾ ಮನುಷ್ಯರೂ ಈ ಮಹಾ ಬ್ರಹ್ಮಾಂಡದ ತುಣುಕುಗಳು!

ಹೀಗೆ ಎಲ್ಲ ಮನುಷ್ಯರ ದೇಹರಚನೆಯು ಒಂದೇ ಎಂದ ಮೇಲೆ, ಎಲ್ಲರ ದೇಹಕ್ಕೂ ಸೂಕ್ತವಾದ ಆಹಾರವೂ ಒಂದೇ ಆಗಿರಬೇಕು. ಎಲ್ಲ ಮನುಷ್ಯರೂ ಮಾಂಸ ತಿನ್ನುವುದಕ್ಕೆಂದು ವಿಕಾಸಗೊಂಡ ಮಿಶ್ರಾಹಾರಿಗಳೇ, ಸಸ್ಯಾಹಾರಿ ಮನುಷ್ಯ ಯಾರಿಲ್ಲ. ಸುಮಾರು ೨೫ ಲಕ್ಷ ವರ್ಷಗಳ ಹಿಂದೆ ಹಿಮಯುಗದಿಂದ ಆಹಾರ ದುರ್ಲಭವಾದಾಗ ಜಲಚರಗಳನ್ನು ತಿನ್ನಬೇಕಾಯಿತು, ಅದಕ್ಕೆಂದು ಕೊಳಗಳೊಳಕ್ಕೆ ನಡೆಯಬೇಕಾಯಿತು; ಜಲಚರಗಳ ತೈಲಗಳಿಂದ ಮಿದುಳು ಬಲಿಯಿತು, ಕೌಶಲ್ಯಗಳು ಬೆಳೆದವು; ಇನ್ನಷ್ಟು ಬೇಟೆಯಾಡಿ, ಮತ್ತಷ್ಟು ಮಾಂಸ ತಿನ್ನಲಿಕ್ಕೆ ಸಾಧ್ಯವಾಯಿತು; ಅದರಿಂದ ಫಲವತ್ತತೆ ಹೆಚ್ಚಿ ಮನುಷ್ಯ ಸಂತತಿ ಬೆಳೆಯುತ್ತಲೇ ಹೋಯಿತು. ಹೀಗೆ ಆಧುನಿಕ ಮನುಷ್ಯರು ಬೀಜದಿಂದ ಕಾಂಡದವರೆಗೆ, ಮೊಟ್ಟೆಯಿಂದ ಆನೆಯವರೆಗೆ ಎಲ್ಲವನ್ನೂ ಆಹಾರವಾಗಿ ಬಳಸಬಲ್ಲ ಅತ್ಯಂತ ಬಲಿಷ್ಠ ಜೀವಿಗಳಾಗಿ ವಿಕಾಸ ಹೊಂದಿದರು. ಭೂಮಿಯ ಮೇಲಿನ ಬೇರಾವ ಪ್ರಾಣಿಗೂ ಇಲ್ಲದ ಆಹಾರದ ವೈವಿಧ್ಯತೆಯನ್ನು ಪಡೆದರು, ಮನುಷ್ಯರು ಅಟ್ಟು ಉಣ್ಣದ ವಸ್ತುಗಳಿಲ್ಲ ಅಂತ ಕನಕದಾಸರು ಹೇಳಿದ್ದು ಅದಕ್ಕೇ ಇರಬಹುದೇ ?!



**ಅಟ್ಟು ಉಣ್ಣದ ವಸ್ತುಗಳಿರಲಿಲ್ಲ, ಆದರೀಗ ಬಾಳು, ಕೂಳು ಎಲ್ಲವೂ ಬದಲಾಗಿವೆ**

ಕೃಷಿಗೆ ತೊಡಗುವ ಮೊದಲು ಮನುಷ್ಯರು ಅಲ್ಲಿಲ್ಲಿ ಅಲೆದಾಡಿ, ಬೇಟೆಯಾಡಿ, ಪ್ರಕೃತಿದತ್ತ ಆಹಾರವನ್ನು ಸಂಗ್ರಹಿಸಿ ತಿನ್ನುತ್ತಿದ್ದರು. ಅಂತಹ ಆಹಾರದಲ್ಲಿ ಮುಕ್ಕಾಲು ಭಾಗ ಮಾಂಸ, ಮೀನು, ಮೊಟ್ಟೆ, ಇನ್ನುಳಿದದ್ದು ತರಕಾರಿಗಳು, ಬೀಜಗಳು, ಹೂವುಗಳು, ಗೆಡ್ಡೆಗಳು ಹಾಗೂ ಅಪರೂಪಕ್ಕೊಮ್ಮೆ ಹಣ್ಣುಗಳಾಗಿರುತ್ತಿದ್ದವು. ಆಗಿನ ಸಸ್ಯಾಹಾರದಲ್ಲಿ ಧಾನ್ಯಗಳಿರಲೇ ಇಲ್ಲ. ಸುಮಾರು ೧೦–೧೫ ಸಾವಿರ ವರ್ಷಗಳ ಹಿಂದೆ ಈಗಿನ ಮಧ್ಯಪ್ರಾಚ್ಯದ ಪ್ರದೇಶದಲ್ಲಿ ಆಹಾರಕ್ಕಾಗಿ ಪ್ರಾಣಿಗಳನ್ನೂ ಧಾನ್ಯಗಳನ್ನೂ ಪಳಗಿಸಿ, ಸಾಕುವ ಕ್ರಮವು ಆರಂಭವಾಯಿತು. ಮಧ್ಯಪ್ರಾಚ್ಯ ಹಾಗೂ ಚೀನಾದ ಹಲವೆಡೆ ನಡೆಸಲಾಗಿರುವ ಉತ್ಖನನಗಳಲ್ಲಿ ದೊರೆತಿರುವ ಸಲಕರಣೆಗಳನ್ನು ಪರಿಶೀಲಿಸಿದಾಗ, ಅಷ್ಟು ಹಿಂದೆಯೇ ಧಾನ್ಯಗಳಿಂದ ಮದ್ಯವನ್ನು ತಯಾರಿಸುತ್ತಿದ್ದರೆನ್ನುವುದಕ್ಕೆ ಕುರುಹುಗಳು ದೊರೆತಿವೆ. ಕೆಲವು ತಜ್ಞರ ಪ್ರಕಾರ, ಈ ಮದ್ಯದಾಸೆಗಾಗಿಯೇ ಧಾನ್ಯಗಳ ಕೃಷಿಯು ಆರಂಭವಾಯಿತು.

ಕೃಷಿ ಹಾಗೂ ಪಶು–ಪಕ್ಷಿ ಸಾಕಣೆ ಹೆಚ್ಚಿದಂತೆ ಗೋಧಿ, ಬಾರ್ಲಿ, ಅಕ್ಕಿ, ರಾಗಿ ಮುಂತಾದ ಧಾನ್ಯಗಳು ಮತ್ತು ಸಾಕಿದ ಪಶು–ಪಕ್ಷಿಗಳು ನಮ್ಮ ಮುಖ್ಯ ಆಹಾರವಾದವು. ಧಾನ್ಯಗಳನ್ನು ಕುಟ್ಟಿ ರೊಟ್ಟಿ, ಬ್ರೆಡ್ಡು ಇತ್ಯಾದಿಗಳ ತಯಾರಿಯೂ ಆ ಕಾಲದಲ್ಲೇ ತೊಡಗಿತು, ಆಹಾರವನ್ನು ಹೆಚ್ಚು ರುಚಿಕರವಾಗಿಸುವ ಇಂತಹ ಆಹಾರ ಸಂಸ್ಕರಣೆ ನಿಧಾನಕ್ಕೆ ಹೆಚ್ಚಿತು. ಮೊದಮೊದಲು ಮಾಂಸಕ್ಕಾಗಿ ಸಾಕುತ್ತಿದ್ದ ಪ್ರಾಣಿಗಳಿಂದ ಹಾಲನ್ನು ಪಡೆದು, ಅವುಗಳ ಉತ್ಪನ್ನಗಳನ್ನು ಬಳಸುವ ಅಭ್ಯಾಸವೂ ಸುಮಾರು ೭೦೦೦ ವರ್ಷಗಳಿಂದ ಬೆಳೆಯಿತು. ಸುಮಾರು ೨೫೦೦ ವರ್ಷಗಳ ಹಿಂದೆ ಕಬ್ಬು ಹಾಗೂ ತದನಂತರ ಸಕ್ಕರೆ ಬಂತು, ಬರುಬರುತ್ತ ಅದರ ಬಳಕೆಯೂ ಹೆಚ್ಚಿತು.

ಹೀಗೆ ಹಳೇ ಶಿಲಾಯುಗದಲ್ಲಿ ಸೇವಿಸುತ್ತಿದ್ದ ೭೦% ಮಾಂಸಾಹಾರ, ೩೦% ತರಕಾರಿಗಳ ಬದಲು ಧಾನ್ಯಗಳು, ಸಕ್ಕರೆಗಳಿಂದ ತಯಾರಿಸಿದ ಆಹಾರ ವಸ್ತುಗಳ ಸೇವನೆಯು ಹೆಚ್ಚುತ್ತಾ ಹೋಯಿತು; ಆ ಹಿಂದೆ ತಿನ್ನದೇ ಇದ್ದ ಧಾನ್ಯಗಳು, ಸಕ್ಕರೆ ತಟ್ಟೆಯನ್ನೂ, ಹೊಟ್ಟೆಯನ್ನೂ ತುಂಬಿದವು, ಮೊದಲು ಮುಖ್ಯ ಆಹಾರಗಳಾಗಿದ್ದ ಮಾಂಸ ಹಾಗೂ ತರಕಾರಿಗಳು ಬದಿಗೆ ಸರಿದವು. ಧಾನ್ಯಗಳೇ ಮುಖ್ಯ ಆಹಾರವಾಗುವುದರೊಂದಿಗೆ ಬೊಜ್ಜು, ಮಧುಮೇಹ ಮುಂತಾದ ರೋಗಗಳೂ ತೊಡಗಿದವು. ಎರಡು–ಮೂರು ಸಾವಿರ ವರ್ಷಗಳ ಹಿಂದಿನ ದಾಖಲೆಗಳಲ್ಲೂ, ಚರಕಸಂಹಿತೆಯಂತಹ ವೈದ್ಯಕೀಯ ಗ್ರಂಥಗಳಲ್ಲೂ ಈ ರೋಗಗಳ ಬಗ್ಗೆ ಹೇಳಿರುವುದು ಇದಕ್ಕೆ ಸಾಕ್ಷಿಯಾಗಿದೆ. ಈಜಿಪ್ಟಿನ ಸಂಗ್ರಹಾಲಯದಲ್ಲಿರುವ ಮಮ್ಮಿಯೊಂದರೆದುರು 'ಫೆರೋ ಮೆರೆನ್ತಾ (ಕ್ರಿ. ಪೂ. ೧೨೦೩) ರಕ್ತನಾಳಗಳ ಕಾಯಿಲೆ, ಸಂಧಿನೋವು ಹಾಗೂ ದಂತ ಕ್ಷಯಗಳಿಂದ ೬೦ನೇ ವಯಸ್ಸಲ್ಲಿ ಸತ್ತರು' ಎಂದು ಬರೆದಿದ್ದುದನ್ನು ಗಮನಿಸಿದ ತಜ್ಞರೊಬ್ಬರು ಆ ಮಮ್ಮಿಯನ್ನು ಎಂಆರ್‌ಐ ಸ್ಕ್ಯಾನ್ ಮಾಡಿ ಆ ರೋಗಗಳ ಕುರುಹುಗಳಿದ್ದುದನ್ನು ದೃಢಪಡಿಸಿದುದು ಕೂಡ ಆಧುನಿಕ ರೋಗಗಳ ಮೂಲ ಕಾರಣವು ಅಷ್ಟು ಹಿಂದೆಯೇ ಇತ್ತು ಎನ್ನುವುದಕ್ಕೆ ಪುರಾವೆಯಾಗಿದೆ.

ನಮ್ಮ ಆಹಾರವನ್ನು ನಾವೇ ಬೆಳೆಯತೊಡಗಿದ ಬಳಿಕ, ಪ್ರಕೃತಿದತ್ತ ಆಹಾರವನ್ನು ಹುಡುಕಿ ತಿನ್ನುತ್ತಿದ್ದವನು ಆಹಾರದ ಉತ್ಪಾದಕನಾದ ಬಳಿಕ, ದೇಹಕ್ಕೆ ರೋಗಗಳು ಹತ್ತಿದ್ದಷ್ಟೇ ಅಲ್ಲ, ಬಾಳುವೆಯೂ ಬದಲಾಯಿತು. ಹಿಮಯುಗದಲ್ಲಿ ಆಹಾರದ ಅಲಭ್ಯತೆಯು ಮನುಷ್ಯನ ದೇಹವನ್ನು ಬದಲಿಸಿ ಜೈವಿಕ ವಿಕಾಸಕ್ಕೆ ಕಾರಣವಾದರೆ, ಕೃಷಿ ತೊಡಗಿ, ಆಹಾರ ಲಭ್ಯವಾದುದು ಮನುಷ್ಯನ ಮನಸ್ಸನ್ನೂ, ವೃತ್ತಿಯನ್ನೂ ಬದಲಿಸಿ ಸಾಮಾಜಿಕ ವಿಕಾಸಕ್ಕೆ ಕಾರಣವಾಯಿತು. ಕೃಷಿಯಲ್ಲಿ ತೊಡಗಿ, ಒಂದೆಡೆ ನೆಲೆ ನಿಂತದ್ದರಿಂದ ಅಂಡಲೆಯುವುದು ತಪ್ಪಿತು, ಊರು–ಕೇರಿ–ರಾಜ್ಯಗಳ ನಾಗರಿಕತೆ ಬೆಳೆಯಿತು. ವಿಜ್ಞಾನ–ತಂತ್ರಜ್ಞಾನಗಳ ಬೆಳವಣಿಗೆಯಂತಹ ಒಳಿತೂ ಆದವು, ರೋಗ–ರುಜಿನ, ಅಸಮಾನತೆಗಳಂತಹ ಕೆಡುಕುಗಳೂ ಆದವು.

ಎಲ್ಲರಿಗೂ ಸೇರಿದ ಭೂಮಿಯು ಖಾಸಗಿ ಆಸ್ತಿಯಾಗಿ ಒಡೆಯಲು ಆರಂಭಿಸಿತು, ರಾಜ್ಯ ಬಂತು, ದೇಶ ಬಂತು, ಗಡಿಗಳು ಬಂದವು, ಸರಕಾರಗಳು ಬಂದವು. ಅಲೆದು ಬೇಟೆಯಾಡಿ ಸಂಗ್ರಹಿಸುತ್ತಿದ್ದ ಆಹಾರವನ್ನು ಎಲ್ಲರೂ ಹಂಚಿ ತಿನ್ನುತ್ತಿದ್ದರೆ, ಬೆಳೆದ ಬೆಳೆ, ಸಾಕಿದ ಪಶು–ಪಕ್ಷಿ, ಎತ್ತಿದ ನೀರು ಕೆಲವರ ಸ್ವತ್ತಾಯಿತು, ದುಡಿದವರದು – ದುಡಿಸಿದವರದು ಬೇರೆಯಾಯಿತು, ದುಡಿಯುವವರು – ದುಡಿಸುವವರು ಬೇರೆಯಾದರು, ಅವರು ಮೇಲಾದರು, ಇವರು ಕೀಳಾದರು. ದುಡಿಯುವವರು ಕಪ್ಪಾದರು, ದುಡಿಸುವವರು

ಬಿಳಿಯಾದರು; ದುಡಿದವರು ತಾವು ಬೆಳೆದದ್ದನ್ನೆಲ್ಲ ದುಡಿಸಿದವರಿಗೆ ಕೊಡಬೇಕಾಗಿದ್ದುದರಿಂದ, ಮೇಲಿನವರು ಮರಳಿ ಒಂದಿಷ್ಟು ಕೊಟ್ಟರಷ್ಟೇ ಕೆಳಗಿನವರಿಗೆ ಊಟವೆಂಬ ಸ್ಥಿತಿಯುಂಟಾಯಿತು. ಅಂತಲ್ಲಿ, ದುಡಿಯುವವರು ಮತ್ತೆ ಅಂಡಲೆದು ಆಹಾರ ಹುಡುಕುವವರಾದರು. ಸಿಕ್ಕಿದ ಇಲಿ, ನಾಯಿ, ಏಡಿ, ಕಪ್ಪೆ, ಹಾವು, ಸಣ್ಣ ಮೀನು, ಬಸವನ ಹುಳು ಇತ್ಯಾದಿ ಪ್ರಕೃತಿದತ್ತ ಪ್ರಾಣಿ–ಪಕ್ಷಿಗಳೂ, ವನ್ಯ ಸೊಪ್ಪು–ತರಕಾರಿ–ಗೆಡ್ಡೆಗಳೂ ಅವರ ಆಹಾರ ವಾದವು. ಧಾನ್ಯ ತಿನ್ನುತ್ತಿದ್ದ ಧನಿಕರಿಗೆ ಬೊಜ್ಜು, ಮಧುಮೇಹಗಳಂತಹ ರೋಗಗಳು ತಪ್ಪಲಿಲ್ಲ; ಮತ್ತೆ ಪ್ರಕೃತಿಗೆ ಮೊರೆಹೋದ ಬಡವರನ್ನು ಈ ರೋಗಗಳು ತಟ್ಟಲಿಲ್ಲ.

**ಮೀರಿಸುವರಾರಿವರೊಳಗೆ ಗುಣಸಾರನಾವನು ?**

ದುಡಿಯುವವರು ಮತ್ತು ದುಡಿಸುವವರ ನಡುವಿನ ಆಹಾರಗಳಲ್ಲಿದ್ದ ಈ ಅಸಮಾನತೆಯನ್ನು ಕನಕದಾಸರು ತಮ್ಮ ರಾಮ ಧಾನ್ಯ ಚರಿತ್ರೆಯಲ್ಲಿ ಚರ್ಚೆಗೆಳೆದರು. ಕನಕದಾಸರ ಈ ರಾಮಾಯಣದ ಕಥೆಯಲ್ಲಿ, ಲಂಕೆಯನ್ನು ಗೆದ್ದು ಅಯೋಧ್ಯೆಗೆ ಮರಳುವ ದಾರಿಯಲ್ಲಿ ಶ್ರೀರಾಮನಿಗೂ, ಜೊತೆಗಿದ್ದ ಮಹಾ ಮುನೀಶ್ವರರಿಗೂ, ವಾನರ ಸೇನೆಗೂ ಸವಿಯಲೆಂದು ಸುಭಕ್ಷಗಳೆಲ್ಲವನು ರಾಮನೋಲಗಕೆ ತರುತ್ತಾರೆ. ಹೀಗೆ ಹೆಡಗೆಗಳಲ್ಲಿ ಜೋಡಿಸಿ ಹೊರಿಸಿ ತಂದಖಿಳ ವಸ್ತುಗಳಲ್ಲಿ ನವಧಾನ್ಯಗಳೆಲ್ಲವೂ ಇದ್ದವು; ಕಪ್ಪಗಿನ ದುಡಿಯುವ ಜನರು ತಿನ್ನಬೇಕಾಗಿದ್ದ ಕಪ್ಪಗಿನ ರಾಗಿ, ಬಿಳಿ ಬಣ್ಣದ ದುಡಿಸುವವರು ತಿನ್ನುತ್ತಿದ್ದ ಬಿಳಿಯ ಅನ್ನವೂ ಅಲ್ಲಿದ್ದವು. ಈ ಮೆರೆವ ರಾಸಿಯ ಕಂಡುಯಿದರೊಳು ಪರಮಸಾರದ ಹೃದಯ ನಾರೆಂದರಸಿ ಶ್ರೀರಾಮನು ಅಲ್ಲಿರುತಿಹ ಮಹಾ ಮುನೀಶ್ವರರ ಕೇಳಲು, ಗೌತಮ, ಮುನಿಯು ನಮ್ಮಯ ದೇಶಕತಿಶಯ ನರೆದಲೆಗನೇ (ರಾಗಿಯೇ) ಎಂದು ಯಾವ ಹಿಂಜರಿಕೆ ಇಲ್ಲದೆಯೇ ತೀರ್ಪಿತ್ತರು. ರಾಮನ ಒಡ್ಡೋಲಗದಲ್ಲಿ, ಗೌತಮ ಮುನಿಯ ಬಾಯಿಂದ, ದುಡಿಯುವ ಜನರ ಆಹಾರವಾಗಿದ್ದ ರಾಗಿಯನ್ನು ಕ್ಷಣ ಮಾತ್ರದಲ್ಲಿ ಗೆಲ್ಲಿಸಿದ ಬಳಿಕ ಕನಕದಾಸರು ಅಕ್ಕಿ–ರಾಗಿಗಳ ನಡುವೆ ವಾಗ್ಯುದ್ಧವನ್ನೇ ಏರ್ಪಡಿಸುತ್ತಾರೆ. 'ಮುನಿಪ ಗೌತಮ ಪಕ್ಷಪಾತವನೀಸು ಪರಿಯಲಿ ಮಾಡುವುದೇಕೆ' ಎಂದು ಆಕ್ಷೇಪಿಸುತ್ತಲೇ ಅಕ್ಕಿಯು ರಾಗಿಯ ಮೇಲೆ ದಾಳಿಯನ್ನು ಆರಂಭಿಸಿಬಿಡುತ್ತದೆ.



ಅಕ್ಕಿಯು ತನ್ನನ್ನು ಮೇಲ್ಮಟ್ಟದವರ ಆಹಾರವೆಂದು, 'ಕ್ಷಿತಿಯಮರರುಪನಯನದಲಿ ಸುವ್ರತ ಸುಭೋಜನ ಪರಮ ಮಂತ್ರಾಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ ಕ್ರತುಗಳೆಡೆಯೊಳಗರ ಮನೆಯಲಿ ಪ್ರತಿದಿನವು ರಂಜಿಸುವ ದೇವರಿಗತಿಶಯದ ನೈವೇದ್ಯ ತಾನಹೆನೆಂದು' ಹೊಗಳಿಕೊಳ್ಳುತ್ತದೆ, ಎಲ್ಲಾ ಶುಭ ಸಂದರ್ಭಗಳಲ್ಲೂ, ಹಬ್ಬ–ಹರಿದಿನಗಳಲ್ಲೂ, ಮದುವೆ, ಅರ್ಚನೆಗಳಲ್ಲೂ, ಮಂತ್ರ–ತಂತ್ರೋಚ್ಚರಣೆಯಲ್ಲೂ ತಾನು ಅತ್ಯಗತ್ಯವೆಂದು ಹೆಮ್ಮೆಪಡುತ್ತದೆ. ಅತ್ತ ರಾಗಿಯನ್ನು ನೀ ಶೂದ್ರಾನ್ನವಾದೆಯಲ ಎಂದು ಹಂಗಿಸಿ, ಕುಲಹೀನ, ಮತಿಹೀನ, ಒಣಗಿದ ಕಾಷ್ಠ, ಕುರಿಯ ಹಾಲು, ಮರದ ಕಪಿ, ಭ್ರಷ್ಟ, ಹಳ್ಳದ ನೀರು, ಹದ್ದು, ಬಕ, ಕಾಗೆ ಎಂಬಿತ್ಯಾದಿಯಾಗಿ ಕೀಳುಗಳೆಯುತ್ತದೆ. ಕೊನೆಗೆ, 'ಮಧುಪಾನವಾದೆಯಲಾ ದುರಾತ್ಮಕ ನಿನ್ನ ಸೇವಿಸಿದ ದಾನವರು ಮಾನವ ಕಿರಾತರು ಜ್ಞಾನವಳಿದು ವಿಕಾರದಲಿ ಮತಿಹೀನರಾದರು' ಎಂದು ತೆಗಳುತ್ತದೆ. ರಾಗಿಯಿಂದ ಶರಾಬು ಸಿದ್ಧಗೊಳ್ಳುತ್ತಿತ್ತು ಮಾತ್ರವಲ್ಲ, ಕನಕದಾಸರ ಕಾಲದಲ್ಲೂ ಬಡವರ ಮದ್ಯಪಾನವನ್ನು ಶ್ರೀಮಂತರು, ವೈದಿಕರು ಹಂಗಿಸುತ್ತಿದ್ದರೆನ್ನುವುದನ್ನು ಇದು ಸೂಚಿಸುತ್ತದೆ. ಮದ್ಯಪಾನ ಮಾಡುವವರು ಹಾಗೂ ಮಾಂಸಾಹಾರಿಗಳ ಜೊತೆಗೆ ತಾನು ಕುಳಿತುಕೊಳ್ಳಲಾರೆ ಎಂದು ಕೆಲವು ಮಠಾಧಿಪತಿಗಳು ಈಗಲೂ ದುಡಿಯುವ ಜನರನ್ನು ದೂರ ತಳ್ಳುವುದಿಲ್ಲವೇ ?

ರಾಮನ ಸಮ್ಮುಖದಲ್ಲಿ ತನಗಾದ ಅವಮಾನವನ್ನು ಕೇಳಿದ ನರೆದಲಗನಿಗೆ ಕೋಪ ನೆತ್ತಿಗೇರುತ್ತದೆ, ಅದೇ ಅವಕಾಶವನ್ನು ಬಳಸಿ ಅಕ್ಕಿಯ ಮೇಲೆ ಪ್ರಹಾರ ಮಾಡುತ್ತದೆ. 'ಭಂಡ, ಸತ್ಯಹೀನನು, ಬಡವರನು ಕಣ್ಣೆತ್ತಿ ನೋಡೆ ಧನಾಢ್ಯರನು ಬೆಂಬತ್ತಿ ನಡೆವವುಪೇಕ್ಷೆ ನಿನ್ನದು' ಎಂದು ಶ್ರೀಮಂತರ ಕೈ–ಬಾಯಿಗಳಿಗಷ್ಟೇ ಎಟಕುತ್ತಿದ್ದ ಅಕ್ಕಿಯನ್ನು ಚುಚ್ಚುತ್ತದೆ. 'ನೀನು ರೋಗಿಗೆ ಪಥ್ಯ, ಹೆಣದ ಬಾಯಿಗೆ ತುತ್ತು, ಪಿಂಡ, ವಾಯಸಕುಲದ ತುತ್ತು, ಕೀರ್ತಿಯ ಹೊತ್ತುಕೊಂಡ ದುರಾತ್ಮ' ಎಂದು ಅಕ್ಕಿಯನ್ನು ಹಳಿದು, 'ಬಲ್ಲಿದರು, ಬಡವರಲಿ ನಿನ್ನಲ್ಲಿಯುಂಟುಪೇಕ್ಷೆ' ಎಂದು ದೂರುತ್ತದೆ. ತನ್ನಲ್ಲಿ 'ಸಲ್ಲದೀ ಪರಿ ಪಕ್ಷಪಾತವದಿಲ್ಲ ಭಾವಿಸಲು ಬಲ್ಲಿದರು ಬಡವರುಗಳೆನ್ನದೆ ಎಲ್ಲರನು ರಕ್ಷಿಸುವೆ ನಿರ್ದಯನಲ್ಲ' ಎನ್ನುವ ರಾಗಿಯು, 'ಮಳೆದೆಗೆದು ಬೆಳೆಯಡಗಿ ಕ್ಷಾಮದ ವಿಲಯಕಾಲದೊಳನ್ನವಿಲ್ಲದೆ ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ' ಎಂದು ತನ್ನನ್ನು ಸಮರ್ಥಿಸಿಕೊಳ್ಳುತ್ತದೆ. ಕೊನೆಗೆ, 'ಸತ್ತವರ ಪ್ರತಿಬಿಂಬರೂಪನುಬಿತ್ತರಿಸಿ ಪಿತೃನಾಮಗಳ ನಿನಗಿತ್ತು ಮೂವರ ಪೆಸರಿನಲಿ ಕರಕರೆದು ದರ್ಭೆಯಲಿ ನೆತ್ತಿಯನು ಬಡಿ ಬಡಿದು ಕಡೆಯಲಿ ತುತ್ತನಿಡುವರು ಪಶುಗಳಿಗೆ ನೀನೆತ್ತಿದೆಯೆಲಾ ತನುವ ಸುಡಬೇಕು' ಎಂದು ರಾಗಿಯು ಅಕ್ಕಿಯನ್ನು ಜರೆಯುವ ಮೂಲಕ, ಕನಕದಾಸರು ಮೇಲ್ವರ್ಗಗಳಲ್ಲಿದ್ದ ಶ್ರಾದ್ಧಕರ್ಮದಂತಹ ಆಚರಣೆಗಳನ್ನು ಅಣಕಿಸುತ್ತಾರೆ.

ಹೀಗೆ ಬಡವರ ಆಹಾರ ಹಾಗೂ ಶ್ರೀಮಂತರ ಆಹಾರಗಳ ನಡುವಿನ ಈ ವ್ಯಾಜ್ಯವನ್ನು ಬಗೆಹರಿಸಲು ಶ್ರೀರಾಮನು 'ಪರಮ ಧಾನ್ಯದೊಳಿಬ್ಬರೇ ಇವರಿರಲಿ ಸೆರೆಯೊಳಗಾರು ತಿಂಗಳು, ಹಿರಿದು ಕಿರಿದೆಂಬಿವರ ಪೌರುಷವರಿಯ ಬಹುದಿನ್ನು' ಎಂದು ಎರಡೂ ಧಾನ್ಯಗಳನ್ನು ಸಮಾನವಾಗಿ ಶಿಕ್ಷಿಸಿ ಆರು ತಿಂಗಳ ಕಾಲ ಸೆರೆಗೆ ತಳ್ಳುತ್ತಾನೆ. ಸೆರೆವಾಸದ ಬಳಿಕ ಎರಡೂ ಧಾನ್ಯಗಳನ್ನು ಕರೆಸಿ ಪರೀಕ್ಷಿಸಿ, ತೀರ್ಪು ನೀಡುವಂತೆ ಶ್ರೀರಾಮನು ಕೇಳಿದಾಗ ಎಲ್ಲರೂ ಸರ್ವಾನುಮತದಿಂದ ರಾಗಿಯನ್ನೇ ಆಯ್ದುಕೊಳ್ಳುತ್ತಾರೆ. 'ಜಂಭಾರಿ (ಇಂದ್ರ) ನಸುನಗುತಸಾರಹೃದಯನು ನರೆದಲೆಗ ನಿಸ್ಸಾರನೀ ವ್ರಿಹಿಯೆಂದರೆ, ನರೆದಲೆಗನೆ ಸಮರ್ಥನು ಬಹಳ ಬಲಯುತ ಸೆರೆಗೆ ಕಾಂತಿಗೆಡಲಿಲ್ಲ, ವ್ರಿಹಿ ಕರಗಿ ಕಂದಿದನು ಸೆರೆಯಲಿ' ಎಂದು ನಾರದ ನುಡಿದರೆ, 'ಬಡವರ ಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ ನೆಲ್ಲಿನಲಿ ಗುಣವೇನು

ಭಾಗ್ಯದಿ ಬಲ್ಲಿದರ ಪತಿಕರಿಸುವನು ಅವನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ.' ಅಂತೂ ಕನಕದಾಸರೂ, ಅವರ ಶ್ರೀರಾಮನೂ, ಮತ್ತಿತರ ಋಷಿಮುನಿಗಳೆಲ್ಲರೂ ಬಡವರ, ದುಡಿಯುವ ಜನರ ಆಹಾರವೇ ಗಟ್ಟಿಮುಟ್ಟಾದುದು, ಸಾರವುಳ್ಳದ್ದು ಎಂದೂ, ಶ್ರೀಮಂತರ ಆಹಾರವು ದುರ್ಬಲವಾದುದು, ನಿಸ್ಸಾರವಾದುದು ಎಂದೂ ಒಮ್ಮತದ ತೀರ್ಪನ್ನು ಕೊಡುತ್ತಾರೆ.

**ಶೂದ್ರಾನ್ನವೂ, ಅತಿಶಯದ ನೈವೇದ್ಯವೂ**

ಕನಕದಾಸರು ಆರೇ ತಿಂಗಳಲ್ಲಿ ದಮನಿತರ ಪರ ತೀರ್ಪಿತ್ತರೂ, ಆಹಾರದ ಮೇಲು-ಕೀಳುಗಳ ವ್ಯಾಜ್ಯವು ಅಲ್ಲಿಗೇ ಮುಗಿಯಲಿಲ್ಲ. ಕನಕದಾಸರ ಕಾಲಾನಂತರ ತೊಡಗಿದ ಕೈಗಾರಿಕಾ ಕ್ರಾಂತಿಯು ಒಡೆತನದ ನಮೂನೆಗಳನ್ನು ಮತ್ತೆ ಬದಲಿಸಿತು. ಶ್ರೀಮಂತರ ಮೇಲೆ ಅತಿ ಶ್ರೀಮಂತರು ಬಂದರು, ಬಡವರು ಕಡು ಬಡವರಾದರು. ಬರುಬರುತ್ತಾ ಕೃಷಿ ಭೂಮಿಯು ದೊಡ್ಡ ಕಂಪೆನಿಗಳ ವಶವಾಗಿ, ಕೃಷಿಯು ಉದ್ಯಮವಾಯಿತು, ತಿನ್ನುವ ಆಹಾರವು ವ್ಯಾಪಾರದ ಸರಕಾಯಿತು. ಧಾನ್ಯಗಳನ್ನು ಸಂಸ್ಕರಿಸಿ, ಬ್ರೆಡ್ಡು, ಬಿಸ್ಕತ್ತು ತಯಾರಿಸಿ ಮಾರುವ ಉದ್ಯಮವೂ ಬಲು ದೊಡ್ಡದಾಗಿ ಬೆಳೆಯಿತು. ಭೂಮಿಯೊಳಗಿಂದ ತೆಗೆದ ತೈಲವೂ ಕಂಪೆನಿಗಳ ಪಾಲಾಯಿತು. ಆ ತೈಲದಿಂದ ತೆಗೆದ ರಾಸಾಯನಿಕಗಳು, ಆ ರಾಸಾಯನಿಕಗಳಿಂದ ತಯಾರಿಸಿದ ರಸಗೊಬ್ಬರಗಳು, ಔಷಧಗಳು, ಕೀಟನಾಶಕಗಳು, ಕಳೆನಾಶಕಗಳು, ಮದ್ದು ಗುಂಡುಗಳು ಎಲ್ಲವೂ ಈ ಕೆಲವೇ ಕಂಪೆನಿಗಳ ಕೈಸೇರಿದವು. ಕೃಷಿ, ರಸಗೊಬ್ಬರ, ತೈಲ, ಔಷಧ, ಯುದ್ಧಗಳೆಲ್ಲವೂ ಉದ್ಯಮಗಳಾಗಿ, ಒಂದಿನ್ನೊಂದನ್ನು ಪೋಷಿಸಿಕೊಂಡು ವಿಶ್ವದ ಸರಕಾರಗಳನ್ನೆಲ್ಲ ನಿಯಂತ್ರಿಸತೊಡಗಿದವು. ಇಪ್ಪತ್ತನೇ ಶತಮಾನದ ಮೊದಲಲ್ಲಿ ಜರ್ಮನಿಯ ಅತಿ ದೊಡ್ಡ ಕಂಪೆನಿಗಳು ಐ. ಜಿ. ಫಾಬೆನ್ ಎಂಬ ಹೆಸರಲ್ಲಿ ಜೊತೆಗೂಡಿ, ಹಿಟ್ಲರನಿಗೆ ೪ ಲಕ್ಷ ಮಾರ್ಕ್ ನೆರವಿತ್ತು, ಆತನ ಗೆಲುವಿಗೆ ಕಾರಣವಾದವು; ನಂತರ ಆತನನ್ನೇ ನಿಯಂತ್ರಿಸಿ ಲಕ್ಷಗಟ್ಟಲೆ ಜನರನ್ನು ಪ್ರಯೋಗಪಶುಗಳಾಗಿ ಬಳಸಿಕೊಂಡವು. ಕೊನೆಗೆ ಹಿಟ್ಲರ್ ಆತ್ಮಹತ್ಯೆ ಮಾಡಿಕೊಳ್ಳಬೇಕಾಯಿತು, ಈ ಕಂಪೆನಿಗಳು ಮತ್ತೆ ಬೆಳೆದು ಇಪ್ಪತ್ತು ಪಟ್ಟು ದೊಡ್ಡದಾದವು. ಇಂದು ಕೂಡ ಭೂಲೋಕದ ಹೆಚ್ಚಿನ ಸರಕಾರಗಳನ್ನು ಆಹಾರ, ತೈಲ, ಔಷಧ ಹಾಗೂ ಯುದ್ಧ ಉದ್ಯಮಗಳೇ ನಿಯಂತ್ರಿಸುತ್ತಿವೆ, ಆ ಮೂಲಕ ಆಹಾರ, ತೈಲ, ಔಷಧ ಇತ್ಯಾದಿಗಳ ಪೂರೈಕೆಯನ್ನೂ, ಬೆಲೆಗಳನ್ನೂ ನಿಯಂತ್ರಿಸುತ್ತಿವೆ.

ಎರಡನೇ ಮಹಾಯುದ್ಧದ ಬಳಿಕ ಆಹಾರದ ಕೊರತೆ ನೀಗಿತು, ಆದರೆ ವಿಶ್ವದ ಹಲವೆಡೆ ಬಡತನ ಹೆಚ್ಚಿತು. ಆಹಾರದ ಮಾರುಕಟ್ಟೆ ದೈತ್ಯ ಕಂಪೆನಿಗಳು ಧಾನ್ಯಗಳನ್ನು ಹೇರಳವಾಗಿ ಬೆಳೆದು, ಸಂಸ್ಕರಿಸಿ, ಬ್ರೆಡ್ಡು-ಬಿಸ್ಕತ್ತುಗಳಂತಹ ತಿನಿಸುಗಳನ್ನು ಸಿದ್ಧಪಡಿಸಿ ಮಾರುಕಟ್ಟೆಯನ್ನು ತುಂಬತೊಡಗಿದವು, ಅವಕ್ಕೆ ಸಕ್ಕರೆಯನ್ನೂ ಬೆರೆಸತೊಡಗಿದವು. ಈ ಕಂಪೆನಿಗಳ ನಿಯಂತ್ರಣದಡಿಯಲ್ಲಿ, ಶ್ರೀಮಂತ ದೇಶಗಳ ಜನರಿಗೆ ತಿಂದೆಸೆಯುವಷ್ಟು ಯಥೇಷ್ಟ ಆಹಾರ ದೊರೆಯತೊಡಗಿತು, ಬಡರಾಷ್ಟ್ರಗಳ ಜನರಿಗೆ ಊಟವೇ ಕಷ್ಟವಾಯಿತು. ಅಮೆರಿಕಾದಂತಹ ದೇಶಗಳಲ್ಲಿ ಈ ಕಂಪೆನಿಗಳು ಮಾರುವ ಸಕ್ಕರೆಭರಿತ ಸಂಸ್ಕರಿತ ಆಹಾರದ ಬಳಕೆಯು ಹೆಚ್ಚತೊಡಗಿತು, ಬಡ ದೇಶಗಳ ಜನರು ತಮ್ಮ ಕೈಗೆಟುಕಿದ ಸ್ಥಳೀಯ ಆಹಾರಗಳನ್ನೇ ಹುಡುಕಿ ಹೊಟ್ಟೆ ಹೊರೆಯಬೇಕಾಯಿತು. ಶ್ರೀಮಂತರು ಹಾಗೂ ಬಡವರ ಆಹಾರಗಳು ಬೇರೆಯಾಗಿ ಉಳಿದಂತೆ ಅವರ ರೋಗಗಳೂ ಬೇರೆಯಾದವು. ಇಂದು ೧೪೦ ಕೋಟಿ ಜನರು ಅಗತ್ಯಕ್ಕಿಂತ ಹೆಚ್ಚು ತಿಂದು ರೋಗಗ್ರಸ್ತರಾಗಿದ್ದಾರೆ. ಅತ್ತ ೮೦ ಕೋಟಿ ಜನರು ಊಟಕ್ಕಿಲ್ಲದೆ ನರಳುತ್ತಿದ್ದಾರೆ; ಆಸ್ತಿಪಾಸ್ತಿಯಿಲ್ಲದವರಿಗೆ




ಊಟಕ್ಕಿಲ್ಲದೆ ರೋಗ, ಆಸ್ತಿಪಾಸ್ತಿ ಯಿದ್ದವರಿಗೆ ಊಟ ಸರಿಯಿಲ್ಲದೆ ರೋಗ!

ಹೊಟ್ಟೆ ಖಾಲಿಯಿರುವ ೮೦ ಕೋಟಿ ಜನರಲ್ಲಿ ೩೦ ಕೋಟಿ ನಮ್ಮಲ್ಲಿದ್ದಾರೆ, ಜಗತ್ತಿನಲ್ಲಿಂದು ವರ್ಷಕ್ಕೆ ೪ ಕೋಟಿ ಜನರು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆ. ನಮ್ಮಲ್ಲಿ ೩೯% ಮಕ್ಕಳಿಗೆ ನ್ಯೂನ ಪೋಷಣೆಯಿದೆ, ನಿತ್ಯ ೩೦೦೦ ಮಕ್ಕಳು ಅದರಿಂದಾಗಿ ಸಾಯುತ್ತಿದ್ದಾರೆ. ಜನಸಂಖ್ಯೆ ಹೆಚ್ಚಿದಂತೆ ಆಹಾರದ ಬೇಡಿಕೆ ಹೆಚ್ಚುತ್ತಿದೆ ಯಾದರೂ, ಪೂರೈಕೆ ಇಳಿಯುತ್ತಿದೆ, ಬೆಲೆ ಏರುತ್ತಿದೆ. ಬಡವರು ಹಾಗೂ ಮಕ್ಕಳ ಹೊಟ್ಟೆಗೆ ಊಟವಿಲ್ಲದಿರುವ ನಮ್ಮ ದೇಶದಿಂದಲೂ ವರ್ಷಕ್ಕೆ ೦೫ ಲಕ್ಷ ಟನ್ ಗೋಧಿ, ೮೦ ಲಕ್ಷ ಟನ್ ಅಕ್ಕಿ, ೧೫ ಲಕ್ಷ ಟನ್ ಮಾಂಸ, ೫ ಕೋಟಿ ಮೊಟ್ಟೆ, ೫ ಲಕ್ಷ ಟನ್ ಕೋಳಿ, ೬ ಲಕ್ಷ ಟನ್ ಮೀನು, ಇವುಗಳನ್ನು ರಫ್ತು ಮಾಡುತ್ತಿದ್ದೇವೆ; ನಮ್ಮವರ ಜೀವಗಳಿಗಿಂತಲೂ ವಿದೇಶದಿಂದ ದೊರೆಯುವ ಚಿಕ್ಕಾಸೇ ನಮಗೆ ಮುಖ್ಯವಾಗಿದೆ. ಇದಲ್ಲದೆ, ಊಟಕ್ಕಿದ್ದವರು ತಿಂದೆಸೆಯುವ ಆಹಾರವು ೪೦%ರಷ್ಟಿದ್ದು, ಎಲ್ಲರ ಹೊಟ್ಟೆಯನ್ನು ತುಂಬಿ ಇನ್ನೂ ಮಿಕ್ಕುಳಿಯುವಷ್ಟಾಗುತ್ತದೆ. ಜಾತಿ, ಮತ, ಮತ್ತಿತರ ಸಾಮಾಜಿಕ, ಧಾರ್ಮಿಕ, ರಾಜಕೀಯ ನಿರ್ಬಂಧಗಳು ಕೂಡ ಜನರ ಆಹಾರವನ್ನು ಕಿತ್ತುಕೊಳ್ಳುತ್ತಿವೆ.

ಈ ಮಹಾ ಕೈಗಾರಿಕೆಗಳು, ರಸಗೊಬ್ಬರಗಳು, ಕೀಟನಾಶಕಗಳು, ವಾಹನಗಳು ಮುಂತಾದವುಗಳ ಅಬ್ಬರದಿಂದ ಹವೆ, ಪರಿಸರ ಕೆಡುತ್ತಿವೆ, ನೆರೆ-ಬರ ಬಂದು ಬೆಳೆಗಳು ನಾಶವಾಗುತ್ತಿವೆ. ಇನ್ನೊಂದೆಡೆ, ಮನುಷ್ಯರ ಆಹಾರ ಧಾನ್ಯಗಳು ಪಶು-ಪಕ್ಷಿ ಸಾಕಣೆಗೆ, ವಾಹನಗಳ ಇಂಧನಕ್ಕೆ ತಿರುಗಿಸಲ್ಪಡುತ್ತಿವೆ, ಕಾರು-ಬಸ್ಸುಗಳ ಟ್ಯಾಂಕುಗಳು ಮನುಷ್ಯರ ಹೊಟ್ಟೆಯ ಜೊತೆ ಸ್ಪರ್ಧಿಸುತ್ತಿವೆ. ಇಂದು ಎರಡು ಪೈಸೆ ಮೌಲ್ಯದ ಜೋಳದಿಂದ ಎರಡು ರೂಪಾಯಿ ಮೌಲ್ಯದ ತಿನಿಸುಗಳು, ಸಕ್ಕರೆ, ಶರಾಬು ಇತ್ಯಾದಿ ಸಿದ್ಧವಾಗುತ್ತಿವೆ, ಕಂಪೆನಿಗಳಿಗೆ ಹೇರಳ ಲಾಭವನ್ನು ತರುತ್ತಿವೆ. ಮತ್ತೊಂದೆಡೆ, ಆಹಾರ ಧಾನ್ಯಗಳ ಬದಲು ಸೂರ್ಯಕಾಂತಿ, ನೆಲಗಡಲೆ, ಸೋಯಾ, ಹೂವುಗಳು, ಹಣ್ಣುಗಳು ಮುಂತಾದ ನಗದು ಬೆಳೆಗಳಿಗೆ ಪ್ರಾಶಸ್ತ್ಯ ನೀಡಲಾಗುತ್ತಿದೆ. ಕಂಪೆನಿಗಳೂ, ಅವುಗಳ ನಿಯಂತ್ರಣದಲ್ಲಿರುವ ಸರಕಾರಗಳೂ ಸೃಷ್ಟಿಸಿರುವ ಇಂತಹಾ ಆಹಾರ ಸಮಸ್ಯೆಗೆ ಪರಿಹಾರವಾಗಿ ಅದೇ ಕಂಪೆನಿಗಳು ಸಿದ್ಧಪಡಿಸಿರುವ ಕುಲಾಂತರಿ ಬೆಳೆಗಳೂ, ಅಂತಕ ಬೀಜಗಳೂ ಹೊರಬರಲಾರಂಭಿಸಿವೆ. ಒಟ್ಟಿನಲ್ಲಿ ಪರಂಪರಾಗತ ಆಹಾರವು ಎಲ್ಲೋ ಮಾಯವಾಗಿ, ಬೆರಳೆಣಿಕೆಯ ಕಂಪೆನಿಗಳು ಬೆಳೆಸಿದ, ಸಂಸ್ಕರಿಸಿ ಎಸೆದ, ನಿಸ್ಸಾರವಾದ, ನಿರ್ಜೀವವಾದ ತಿನಿಸುಗಳನ್ನು ನಾವಿಂದು ತಿನ್ನಬೇಕಾಗಿದೆ.

ಕೃತಕ ರಸಗೊಬ್ಬರಗಳು ಹಾಗೂ ಕೈಗಾರಿಕಾ ತ್ಯಾಜ್ಯಗಳು, ಕ್ಯಾಡ್ಮಿಯಂ, ಸೀಸ, ಪಾದರಸ, ಆರ್ಸೆನಿಕ್, ನಿಕಲ್, ಯುರೇನಿಯಂ ಮುಂತಾದವು, ಕಳೆ-ಕೀಟನಾಶಕಗಳ ಬಗೆಬಗೆಯ ರಾಸಾಯನಿಕಗಳು ನಮ್ಮ ನೆಲ-ಜಲ-ಗಾಳಿಯನ್ನೆಲ್ಲ ಕೆಡಿಸಿವೆ; ಇವುಗಳಿಂದಾಗಿ ಸಕಲ ಜೀವರಾಶಿಯ ಮೇಲೆ, ಆಹಾರಸಂಕಲೆಯ ಮೇಲೆ, ಸಸ್ಯ-ಮಾಂಸಾಹಾರಗಳ ಗುಣಮಟ್ಟದ ಮೇಲೆ, ಹಲಬಗೆಯ ದುಷ್ಪರಿಣಾಮಗಳಾಗಿವೆ. ರಸಗೊಬ್ಬರ-ಕೀಟನಾಶಕ ಹಾಕಿ ಬೆಳೆದ ಆಹಾರಗಳು ಸತ್ವಹೀನವಾಗಿರುವುದರಿಂದ ಸಿಗುತ್ತಿರುವ ಒಂದಿಷ್ಟು ಆಹಾರವೂ ಉಪಯೋಗಕ್ಕಿಲ್ಲದಂತಾಗಿದೆ. ಇದರಿಂದಾಗಿ ೩೦೦ ಕೋಟಿ ಜನರಿಗೆ ನ್ಯೂನ ಪೋಷಣೆಯಾಗುತ್ತಿದೆ, ಲವಣ, ಖನಿಜಾಂಶಗಳು, ಅನ್ನಾಂಗಗಳ ಕೊರತೆಯಿಂದ ರೋಗರಕ್ಷಣಾ ಸಾಮರ್ಥ್ಯ, ಮಕ್ಕಳ ಮನೋದೈಹಿಕ ಬೆಳವಣಿಗೆ, ಬುದ್ಧಿಮತ್ತೆ, ಏಕಾಗ್ರತೆ ಎಲ್ಲವೂ ಬಾಧಿತವಾಗುತ್ತಿವೆ. ನೆಲ-ಜಲಗಳ ಸಾರವನ್ನೆಲ್ಲ ಕಿತ್ತು, ಆಹಾರವನ್ನು ನಿಸ್ಸಾರವಾಗಿಸಿ, ನಂತರ ಉಪ್ಪಿಗೆ

ಅಯೊಡಿನ್ ಹಾಕಿ, "ರಾಮಣ್ಣಾ, ನಿನ್ನ ಹೆಂಡ್ತಿ ಗರ್ಭದಲ್ಲಿರೋ ಮಗುವಿನ ಬುದ್ಧಿ ಸರಿಯಾಗಬೇಕಿದ್ರೆ ಅಯೋಡೀನ್ ಮಿಶ್ರಿತ ಉಪ್ಪನ್ನೇ ಕೊಡು" ಎಂಬಂತಹ ಜಾಹೀರಾತು ಹಾಕುತ್ತಿದ್ದೇವೆ!

ಇತ್ತ ಆಹಾರೋತ್ಪಾದನೆಯು ಬೆರಳೆಣಿಕೆಯ ಅತಿ ಶ್ರೀಮಂತರ ಕೈಯೊಳಗಾಗಿ, ದುಡ್ಡಿದ್ದು ತಿನ್ನಲಿಕ್ಕೆ ಸಾಧ್ಯವಿರುವ ಸಣ್ಣ ಶ್ರೀಮಂತರಿಗೂ ಬೇರೆಯೇ ರೀತಿಯ ಗೋಳಾಟವಾಗಿದೆ. ತಾವೇ ಆಹಾರವನ್ನು ಹುಡುಕಲಾಗದೆ, ಅತ್ತ ಬೆಳೆಯಲೂ ಆಗದೆ, ಸಿಕ್ಕಿದ್ದನ್ನು ತಿನ್ನ ಬೇಕಾದಂತಹ ಸ್ಥಿತಿಯು ಅವರದ್ದಾಗಿದೆ. ಹಾಗೊಮ್ಮೆ ಧಾನ್ಯ-ತರಕಾರಿ ಇತ್ಯಾದಿ ಸಿಕ್ಕರೂ ಅಡುಗೆ ಮಾಡಲು ಪುರುಸೊತ್ತಿಲ್ಲದೆ, ಮಾರುಕಟ್ಟೆಯಲ್ಲಿ ದೊರೆಯುವ ಸಿದ್ಧ ಸಂಸ್ಕರಿತ ಆಹಾರವನ್ನೇ ತಿನ್ನಬೇಕಾಗಿ ಬಂದಿದೆ; ಕೆಲವೊಮ್ಮೆ ತಿನ್ನುವುದಕ್ಕೂ ಪುರುಸೊತ್ತಿಲ್ಲದೆ, ಸಿಕ್ಕಸಿಕ್ಕಾಗ, ಹೊತ್ತು-ಗೊತ್ತಿಲ್ಲದೆ ತಿನ್ನಬೇಕಾದ ದುಸ್ಥಿತಿಯೊದಗಿದೆ. ಜೊತೆಗೆ, ಸಾಮಾಜಿಕ, ಧಾರ್ಮಿಕ ಅಡಚಣೆಗಳು ಹಾಗೂ ವೈದ್ಯಕೀಯ ಸಲಹೆಗಳ ಕಾಟವನ್ನು ಅವರೂ ಅನುಭವಿಸಬೇಕಾಗಿದೆ.

ಈ ದೈತ್ಯ ಕಂಪೆನಿಗಳು ಹಾಗೂ ಅವಕ್ಕೆ ಗೋಣಾಡಿಸುವ ಸರಕಾರಗಳು ಯಾರು ಎಷ್ಟು ತಿನ್ನಬೇಕು ಎಂಬುದನ್ನು ನಿರ್ಧರಿಸಿದ್ದಷ್ಟೇ ಅಲ್ಲ, ತಿನ್ನುವವರೂ ಏನು ತಿನ್ನಬೇಕು ಎಂಬುದನ್ನೂ ನಿರ್ಧರಿಸಿದವು. ಎರಡನೇ ಮಹಾಯುದ್ಧದ ಬಳಿಕ ಆಹಾರೋತ್ಪಾದನೆ ಹೆಚ್ಚಿ, ಕಂಪೆನಿಗಳ ಹಿಡಿತ ಬಿಗಿಯಾದ ಹಾಗೆ, ಈ ಎರಡನೇ ಪ್ರಶ್ನೆಗೆ ಕೈ ಹಾಕಲಾಯಿತು. ಅಮೆರಿಕದ ಜನರು ಕೊಬ್ಬು, ಮಾಂಸ, ತೆಂಗಿನೆಣ್ಣೆ ಮುಂತಾದ ಪ್ರೋಟೀನು-ಮೇದಸ್ಸು ಭರಿತವಾದ ಆಹಾರವನ್ನು ಹೆಚ್ಚು ತಿನ್ನುತ್ತಿರುವುದೇ ಅಲ್ಲಿ ಹೃದಯಾಘಾತ, ಬೊಜ್ಜು ಇತ್ಯಾದಿ ಹೆಚ್ಚುತ್ತಿರುವುದಕ್ಕೆ ಕಾರಣ ಎಂಬ ಸಿದ್ಧಾಂತವನ್ನು ೧೯೫೩ರಲ್ಲಿ ಮಿನೆಸೊಟ ವಿವಿಯ ಪ್ರೊಫೆಸರ್ ಕೀಸ್ ಮುಂದಿಟ್ಟರು.

ಜನತೆಯ ಸಂಪತ್ತು ಹೆಚ್ಚಿದಂತೆ ಕೊಬ್ಬಿನ ಸೇವನೆಯಷ್ಟೇ ಅಲ್ಲ, ಸಕ್ಕರೆಯ ಸೇವನೆಯೂ ಹೆಚ್ಚುತ್ತದೆ; ಆದ್ದರಿಂದ ಪರ್ಯಾಪ್ತ ಮೇದಸ್ಸಿನಿಂದ ರೋಗವುಂಟಾಗುತ್ತದೆ ಎಂಬ ಆನ್ಸೆಲ್ ಕೀಸ್ ಅವರ ತೀರ್ಮಾನವು ತಪ್ಪು ಎಂದು ಲಂಡನ್‌ನ ಕ್ವೀನ್ಸ್ ಕಾಲೇಜಿನ ಜಾನ್ ಯುಡ್ಕಿನ್ ಆ ಕೂಡಲೇ ಖಂಡಿಸಿದ್ದರು. ಆದರೆ ಆಹಾರೋದ್ಯಮವು ಕೀಸ್ ಬೆನ್ನಿಗಿತ್ತು, ಅವರೇ ಗೆದ್ದರು. ೧೯೬೧ರಲ್ಲಿ ಟೈಮ್ಸ್ ಪತ್ರಿಕೆಯ ಮುಖಪುಟಕ್ಕೇರಿದರು. ಅತ್ತ ಜಾನ್ ಯುಡ್ಕಿನ್ ಅವರು ಉಪನ್ಯಾಸಗಳಿಗೆ ಕರೆಯಲ್ಪಡದೆ, ಲೇಖನಗಳು ಪ್ರಕಟಗೊಳ್ಳದೆ ಬಹಿಷ್ಕೃತರಾದರು; ೧೯೭೨ರಲ್ಲಿ ಸಕ್ಕರೆಯ ಹಾನಿಗಳ ಬಗ್ಗೆ 'ಪ್ಯೂರ್ ವೈಟ್ ಅಂಡ್ ಡೆಡ್ಲಿ' ಎಂಬ ಪುಸ್ತಕವನ್ನು ತಾವೇ ಪ್ರಕಟಿಸಿ ನಿವೃತ್ತರಾದರು.

ಅಮೆರಿಕದ ಹೃದ್ರೋಗ ಸಂಘವು ಕೀಸ್ ಸಿದ್ಧಾಂತವನ್ನು ಗಟ್ಟಿಯಾಗಿ ಹಿಡಿದುಕೊಂಡು ದೊಡ್ಡ ಹೇಳಿಕೆಯನ್ನೇ ಕೊಟ್ಟಿತು, ಆದರೆ ತಮ್ಮಲ್ಲಿ ಅದಕ್ಕೆ ಸಾಕಷ್ಟು ಆಧಾರಗಳಿಲ್ಲ ಅಂತಲೂ ಹೇಳಿತು. ಅಂದರೆ ಯಾವುದೇ ಆಧಾರಗಳಿಲ್ಲದೆ ಮಾಂಸ, ಮೊಟ್ಟೆ, ತೆಂಗಿನೆಣ್ಣೆ ಬಿಡಬೇಕೆಂದು ಅಮೆರಿಕನ್ನರಿಗೆ, ಆ ಮೂಲಕ, ಲೋಕದ ಜನರಿಗೆಲ್ಲ ಸೂಚಿಸಲಾಯಿತು. ನಂತರ ೧೯೮೦ರಲ್ಲಿ ಅಮೆರಿಕದ ಆಡಳಿತವು ಕೂಡ ಕೊಬ್ಬಿನಿಂದಲೇ ಕಾಯಿಲೆಯೆಂಬ ಸಿದ್ಧಾಂತವನ್ನು ಬೆಂಬಲಿಸಿತು; ಖಾದ್ಯ ತೈಲ, ಕೊಬ್ಬು, ಮಾಂಸಗಳನ್ನು ಕಡಿತಗೊಳಿಸ ಬೇಕೆಂದೂ, ಕೊಲೆಸ್ಟರಾಲ್ ದಿನಕ್ಕೆ < ೩೦೦ಮಿ.ಗ್ರಾಂ ಇರಬೇಕೆಂದೂ ಹೇಳಿ, ಧಾನ್ಯಗಳು, ಹಣ್ಣುಗಳು, ಹಾಲಿನ ಉತ್ಪನ್ನಗಳು ಹೆಚ್ಚಿನ ಪ್ರಮಾಣದಲ್ಲಿರ ಬೇಕೆಂದು ಸೂಚಿಸಿತು. ಅಲ್ಲಿಂದ ೨೦೧೦ರವರೆಗೆ ಅಮೆರಿಕ ಸರಕಾರದ ಆಹಾರ ಮಾರ್ಗದರ್ಶಿಯಲ್ಲಿ ಮಾಂಸ, ಮೊಟ್ಟೆ, ತೆಂಗಿನೆಣ್ಣೆ ಕಡಿಮೆಯಿರುವ ಆಹಾರವನ್ನೇ ಸೂಚಿಸಲಾಯಿತು.

ಹೀಗೆ ಹಳೆ ಶಿಲಾಯುಗದ ಮನುಷ್ಯರು ೭೦% ಮಾಂಸ, ೩೦% ತರಕಾರಿ ತಿನ್ನುತ್ತಿದ್ದರೆ, ಕಳೆದ ೫೦ ವರ್ಷಗಳಿಂದ ನಾವು ೭೦% ಧಾನ್ಯ, ಹಾಲು, ಹಣ್ಣುಗಳೆಂಬ ಸಸ್ಯಾಹಾರವನ್ನು ತಿನ್ನುವಂತಾಯಿತು, ಮಾಂಸ, ಮೀನು, ಮೊಟ್ಟೆ ಹಾಗೂ ತರಕಾರಿಗಳ ಪ್ರಮಾಣವು ೩೦% ಅಥವಾ ಅದಕ್ಕೂ ಕಡಿಮೆಯಾಯಿತು. ಕಡಿಮೆ ಕೊಬ್ಬಿನ ಪ್ರಚಾರವು ಹೆಚ್ಚಿದಂತೆ ಕಡಿಮೆ ಕೊಬ್ಬು-ಅಧಿಕ ಸಕ್ಕರೆಯ ತಿನಿಸುಗಳನ್ನು ತಯಾರಿಸುವ ಉದ್ಯಮವೂ ಜೋರಾಗಿ ಬೆಳೆದು ವರ್ಷಕ್ಕೆ ೪ ಲಕ್ಷ ಡಾಲರ್ ಗಳಷ್ಟಾಯಿತು. ಕಡಿಮೆ ಕೊಬ್ಬಿನ ಹಾಲು, ಕಡಿಮೆ ಕೊಬ್ಬಿನ ಎಣ್ಣೆ ಇತ್ಯಾದಿಗಳು ಬಂದವು. ಮಾಂಸ ಬೇಡವೆಂದ ಮೇಲೆ ಬ್ರೆಡ್ಡು, ಬಿಸ್ಕತ್ತು, ಜೋಳದ ಫ್ಲೇಕ್ಸ್ ಇತ್ಯಾದಿ ಬಂದವು. ಇಂದು ಸುಮಾರು ೮೦ ಸಾವಿರದಷ್ಟು ಸಂಸ್ಕರಿತ ಆಹಾರೋತ್ಪನ್ನಗಳು ಮಾರುಕಟ್ಟೆ ಯಲ್ಲಿದ್ದು, ಅವುಗಳಲ್ಲಿ ೮೦%ರಷ್ಟು ಉತ್ಪನ್ನಗಳು ಕಡಿಮೆ ಕೊಬ್ಬು, ಹೆಚ್ಚು ಸಕ್ಕರೆಯುಳ್ಳದ್ದಾಗಿವೆ. ಹೀಗೆ ನಮ್ಮ ಆಹಾರವು ತಿರುಗುಮುರುಗಾಗಿದೆ; ನಾವು ವಿಕಾಸ ಹೊಂದುವಾಗಲೂ, ಆ ನಂತರದ ೧,೯೦,೦೦೦ ವರ್ಷಗಳಲ್ಲೂ ತಿನ್ನುತ್ತಿದ್ದ ಹಲಬಗೆಯ ಮಾಂಸಾಹಾರ - ತರಕಾರಿಗಳನ್ನು ಕೆಟ್ಟದ್ದೆಂದೋ, ಸಿಗಲಾರದ್ದೆಂದೋ ತ್ಯಜಿಸಿದ್ದೇವೆ, ನಾವು ಆಗೆಲ್ಲ ತಿನ್ನದೇ ಇದ್ದ ಧಾನ್ಯಗಳು, ಸಕ್ಕರೆ, ಪಶುವಿನ ಹಾಲೆಂಬ ಸಸ್ಯಾಹಾರವನ್ನೇ ಅಮೃತವೆಂದು ಸೇವಿಸುತ್ತಿದ್ದೇವೆ. ಆಗ ಅಟ್ಟು ಉಣ್ಣದ ವಸ್ತುಗಳಿಲ್ಲದಂತೆ ಎಲ್ಲವನ್ನೂ ತಿನ್ನಬಲ್ಲವರಾಗಿದ್ದವರು ಈಗ ಸೀಮಿತ ಬಗೆಯ ಧಾನ್ಯ, ಹಣ್ಣು, ಮಾಂಸಗಳನ್ನು ಸೇವಿಸುವವರಾಗಿದ್ದೇವೆ. ಪ್ರಕೃತಿ ಕೊಟ್ಟ ಜೀವಂತ ಆಹಾರಗಳನ್ನು ಹುಡುಕಿ ತಿನ್ನುವ ಬದಲಿಗೆ, ಬೇಕಾದದ್ದನ್ನು ಬೆಳೆಯುವ ಬದಲಿಗೆ, ಕಂಪೆನಿಗಳು ಕೊಟ್ಟ ನಿರ್ಜೀವ ಆಹಾರವನ್ನು ಹೆಕ್ಕಿ ತಿನ್ನುತ್ತಿದ್ದೇವೆ. ಇಂದಿನ ಮಕ್ಕಳಿಗಂತೂ ಸಿದ್ಧ ತಿನಿಸುಗಳೇ ಮುಖ್ಯ ಆಹಾರಗಳಾಗಿಬಿಟ್ಟಿವೆ. ಹಿಂದೆ ತಿನ್ನುತ್ತಿದ್ದ ಆಹಾರವು ನೈಸರ್ಗಿಕವಾಗಿ, ಜೀವಂತವಾಗಿ, ಕರುಳಲ್ಲಿ ನಿಧಾನಕ್ಕೆ ಸಾಗಿ, ಪೋಷಕಾಂಶಗಳನ್ನು ಒದಗಿಸಿ, ಸಂತೃಪ್ತಿಯನ್ನುಂಟುಮಾಡಿ, ಹಸಿವನ್ನು ತಣಿಸುತ್ತಿತ್ತು. ಇಂದಿನ ಆಹಾರವು ನಿರ್ಜೀವವಾಗಿ, ಕರುಳಲ್ಲಿ ವೇಗವಾಗಿ ಸಾಗಿ, ರುಚಿಯನ್ನಷ್ಟೇ ಹೆಚ್ಚಿಸಿ, ಸಂತೃಪ್ತಿಯನ್ನುಂಟುಮಾಡದೆ, ಹಸಿವನ್ನು ಹೆಚ್ಚಿಸಿ, ಪೋಷಕಾಂಶಗಳಿಂದ ವಂಚಿಸುತ್ತಿದೆ.

ಇಂತಹ ಆಧುನಿಕ ಆಹಾರವೇ ಇಂದು ಆಧುನಿಕ ರೋಗಗಳ ಹೆಚ್ಚಳಕ್ಕೆ ಕಾರಣವಾಗುತ್ತಿದೆ. ದಂತಕ್ಷಯದಿಂದ ಮೂಳೆಸವೆತ – ಗಂಟುಬೇನೆಗಳು, ಬೊಜ್ಜು, ಮಧುಮೇಹ, ಮೇದಸ್ಸಿನ ಸಮಸ್ಯೆಗಳು, ಹೃದ್ರೋಗ, ಪಾರ್ಶ್ವವಾಯು, ರಕ್ತದ ಏರೊತ್ತಡ, ಪಾರ್ಕಿನ್‌ಸನ್ಸ್ ಕಾಯಿಲೆ, ಅಲ್ಜೀಮರ್ಸ್ ಕಾಯಿಲೆ ಇತ್ಯಾದಿಗಳು, ಬಗೆಬಗೆಯ ಕ್ಯಾನ್ಸರ್‌ಗಳು ಮುಂತಾದ ಆಧುನಿಕ ರೋಗಗಳು ಹೆಚ್ಚುತ್ತಿರುವುದಕ್ಕೆ, ೮-೧೦ ವಯಸ್ಸಿನ ಮಕ್ಕಳನ್ನೂ ಕಾಡತೊಡಗಿರುವುದಕ್ಕೆ ಆಧುನಿಕ ಆಹಾರವೇ ಕಾರಣ ಎನ್ನುವುದಕ್ಕೆ ಬಲವಾದ ಆಧಾರಗಳೀಗ ದೊರೆಯತೊಡಗಿವೆ. ಅತ್ತ, ಧಾನ್ಯಗಳೂ ಸಾಕಷ್ಟು ದೊರೆಯದೆ, ಸಂಸ್ಕರಿತ ಆಹಾರಗಳೂ ದೊರೆಯದೆ, ತೀರಾ ವಂಚಿತರಾಗಿ, ಹೊಲ-ಗದ್ದೆ-ಕಾಡುಗಳಲ್ಲಿ ಇಲಿ, ಹಾವು, ಇರುವೆ, ಏಡಿ, ಮೀನು ಇತ್ಯಾದಿಯಾಗಿ ಭೂಮಿ ತಾಯಿ ಕೊಟ್ಟ ಪ್ರೋಟೀನು-ಮೇದಸ್ಸುಭರಿತವಾದ ಮೂಲಾಹಾರವನ್ನೇ ಹುಡುಕಿ ತಿನ್ನುತ್ತಿರುವ ಅದೆಷ್ಟೋ ದಲಿತರು, ಅಸ್ಪೃಶ್ಯರು ಹಾಗೂ ಮೂಲನಿವಾಸಿಗಳನ್ನು ಈ ಆಧುನಿಕ ರೋಗಗಳಾವುವೂ ತಟ್ಟುವುದಿಲ್ಲ ಎನ್ನುವ ಸತ್ಯವೂ ನಮ್ಮ ಕಣ್ಣ ಮುಂದಿದೆ.

**ಕನಕದಾಸರ ಶ್ರೀರಾಮ, ಇಂದ್ರ, ನಾರದ, ಗೌತಮ, ಕಪಿಲರು ಇಂದೆಲ್ಲಿ ?**

ಒಂದೆಡೆ ಹಳೆಯ, ಪರಂಪರಾಗತವಾದ, ಸುತ್ತಲಲ್ಲೇ ಲಭ್ಯವಿರುವ ಆಹಾರಗಳು. ಇನ್ನೊಂದೆಡೆ, ನಾವೇ ಉತ್ಪಾದಿಸಿ, ಸಂಸ್ಕರಿಸಿ ಸೇವಿಸುತ್ತಿರುವ ಆಧುನಿಕ ಆಹಾರ – ಇವುಗಳ ನಡುವೆ ಯಾವುದೊಳ್ಳೆಯದು ಎಂದು ನಿರ್ಧರಿಸುವುದೆಂತು ? ಅಂಥ ತೀರ್ಪನ್ನು ನೀಡಲು ಕನಕದಾಸರ ಶ್ರೀರಾಮ, ಇಂದ್ರ, ನಾರದ, ಗೌತಮ, ಕಪಿಲರು ಇಂದೆಲ್ಲಿ ಸಿಗಬೇಕು ? ನಮ್ಮ ಸರಕಾರಗಳು, ನ್ಯಾಯಾಲಯಗಳು, ವೈದ್ಯರುಗಳು, ಮಾಧ್ಯಮಗಳು ಎಲ್ಲವೂ ಪ್ರಭಾವಿತವಾದಂತಿರುವಾಗ ನ್ಯಾಯಕ್ಕೆಲ್ಲಿ ಹೋಗಬೇಕು ?

ಪ್ರೊಟೀನು – ಮೇದಸ್ಸುಭರಿತವಾದ ಮೂಲಾಹಾರ ಹಾಗೂ ಪಶು ಹಾಲು–ಸಕ್ಕರೆಭರಿತವಾದ ಆಧುನಿಕ, ಸಂಸ್ಕರಿತ ಆಹಾರಗಳಲ್ಲಿ ಯಾವುದು ಹೆಚ್ಚು ರೋಗಕಾರಕವೆನ್ನುವುದಕ್ಕೆ ಬಹು ಹಿಂದಿನಿಂದಲೂ ಸಾಕಷ್ಟು ಸಾಕ್ಷ್ಯಾಧಾರಗಳಿದ್ದವು. ಆನ್ಸೆಲ್ ಕೀಸ್ ಹಾಗೂ ಜಾನ್ ಯುಡ್ಕಿನ್ ಅವರು ಐವತ್ತರ ದಶಕದ ಮಧ್ಯದಲ್ಲಿ ತದ್ವಿರುದ್ಧವಾದ ನಿಲುವುಗಳನ್ನು ವ್ಯಕ್ತಪಡಿಸಿದಾಗಲೂ ಈ ಸಾಕ್ಷ್ಯಗಳು ಲಭ್ಯವಿದ್ದವು. ಆಧುನಿಕ ರೋಗಗಳಿಗೆ ಪ್ರೊಟೀನು–ಮೇದಸ್ಸುಗಳು ಕಾರಣವೆಂಬ ಕೀಸ್ ಸಿದ್ಧಾಂತಕ್ಕೆ ಸಾಕಷ್ಟು ಆಧಾರಗಳಿಲ್ಲ, ಆದರೂ ತಾವದನ್ನು ಬೆಂಬಲಿಸುತ್ತಿದ್ದೇವೆಂದು ಅಮೆರಿಕದ ಹೃದ್ರೋಗ ಸಂಘವೇ ಹೇಳಿತ್ತು. ಅದೇ ಸಮಯದಲ್ಲಿ, ಆಧುನಿಕ ರೋಗಗಳಿಗೆ ಸಕ್ಕರೆಯೇ ಮುಖ್ಯ ಕಾರಣ ಎನ್ನುವುದಕ್ಕೆ ಯುಡ್ಕಿನ್ ಒದಗಿಸಿದ ಆಧಾರಗಳಲ್ಲದೆ, ಇನ್ನೂ ಹಲವು ಲಭ್ಯವಿದ್ದವು, ಆದರೆ ಅವನ್ನೆಲ್ಲ ಕಡೆಗಣಿಸಲಾಯಿತು. ಹೀಗೆ ಅಮೆರಿಕದ ಸರಕಾರವು ಮೇದಸ್ಸಿಗೆ ವಿರುದ್ಧವಾಗಿ, ಸಕ್ಕರೆಯ ಪರವಾಗಿ ನಿಂತು, ಕಳೆದ ಮೂವತ್ತೈದು ವರ್ಷಗಳಲ್ಲಿ ಸಕ್ಕರೆಭರಿತ ಸಸ್ಯಾಹಾರವೇ ಆರೋಗ್ಯಕರವೆಂದು ಮುಂದೊತ್ತಿತು; ಮಾಂಸ, ಮೊಟ್ಟೆಗಳೇ ಆಧುನಿಕ ರೋಗಗಳಿಗೆ ಕಾರಣವೆಂದು ದೂರಿತು.

ವಿಶ್ವ ಆರೋಗ್ಯ ಸಂಸ್ಥೆ ಹಾಗೂ ಆಹಾರ ಮತ್ತು ಕೃಷಿ ಸಂಸ್ಥೆಗಳ ತಜ್ಞರ ಜಂಟಿ ಸಮಿತಿಯು ೨೦೦೩ರಲ್ಲಿ ಪ್ರಕಟಿಸಿದ ೯೧೬ನೇ ತಾಂತ್ರಿಕ ವರದಿಯಲ್ಲಿ ಬೊಜ್ಜಿನಂತಹ ಆಧುನಿಕ ಕಾಯಿಲೆಗಳ ಹೆಚ್ಚಳಕ್ಕೆ ಸಕ್ಕರೆ ಮತ್ತು ಸಕ್ಕರೆಯುಕ್ತ ಪೇಯಗಳು ಹಾಗೂ ತಿನಿಸುಗಳ ಅತಿಸೇವನೆಯೇ ಕಾರಣವೆಂದು ಸ್ಪಷ್ಟವಾಗಿ ಹೇಳಲಾಯಿತು. ಆದರೆ ಅಮೆರಿಕದ ಸಕ್ಕರೆ ಸಂಘ, ರಾಷ್ಟ್ರೀಯ ಲಘು ಪೇಯ ಸಂಘ, ಹಾಗೂ ಬುಷ್ ಆಡಳಿತಗಳು ವಿಶ್ವ ಆರೋಗ್ಯ ಸಂಸ್ಥೆಗೆ ಅಮೆರಿಕದ $ ೪೦೬ ದಶಲಕ್ಷ ವಾರ್ಷಿಕ ನೆರವನ್ನು ನಿಲ್ಲಿಸುವ ಬೆದರಿಕೆಯೊಡ್ಡಿದವು. ಜಾರ್ಜ್ ಬುಷ್ ಆಡಳಿತದಲ್ಲಿ ಆರೋಗ್ಯ ಹಾಗೂ ಮಾನವ ಸೇವೆಗಳ ವಿಭಾಗದಲ್ಲಿ ವಿಶೇಷ ಸಹಾಯಕರಾಗಿದ್ದ ವಿಲಿಯಂ ಸ್ಟೀಗರ್ ೨೦೦೪, ಜನವರಿ ೫ರಂದು ವಿಶ್ವ ಆರೋಗ್ಯ ಸಂಸ್ಥೆಯ ಮಹಾ ನಿರ್ದೇಶಕರಿಗೆ ಪತ್ರವನ್ನು ಬರೆದು, ಅಮೆರಿಕ ಸರಕಾರವು ಆಹಾರದ ಬಗ್ಗೆ ತಳೆದಿರುವ ಧೋರಣೆಗೆ ಹಾಗೂ ವೈಜ್ಞಾನಿಕ ಸಾಕ್ಷ್ಯಗಳ ಬಗ್ಗೆ ಅಮೆರಿಕ ಸರಕಾರದ ವ್ಯಾಖ್ಯಾನಗಳಿಗೆ ಸಮಿತಿಯ ಈ ವರದಿಯು ತಾಳೆಯಾಗುವುದಿಲ್ಲ ಎಂದು ಕಟುವಾಗಿಯೇ ತಿಳಿಸಿದರು. ಇದರೊಂದಿಗೆ, ಸಕ್ಕರೆಯ ಅಪಾಯಗಳ ಬಗ್ಗೆ ೨೦೦೩ರಷ್ಟು ಹಿಂದೆಯೇ ವಿಶ್ವ ಆರೋಗ್ಯ ಸಂಸ್ಥೆಯು ನೀಡಿದ್ದ ಎಚ್ಚರಿಕೆಯು ಅಲ್ಲಿಗೇ ಮುಚ್ಚಿಹೋಯಿತು.

ಆ ನಂತರ ಇನ್ನಷ್ಟು ವರದಿಗಳು ಪ್ರಕಟವಾಗಿದ್ದು, ಅಮೆರಿಕ ಸರಕಾರವು ಮೇದಸ್ಸನ್ನು ಕಡಿತಗೊಳಿಸಿ, ಸಕ್ಕರೆಯುಕ್ತ ಸಸ್ಯಾಹಾರವನ್ನು ಹೆಚ್ಚು ತಿನ್ನಬೇಕೆಂದು ಸೂಚಿಸಿದ ಬಳಿಕ ಬೊಜ್ಜು ಹಾಗೂ ಮಧುಮೇಹಗಳು ಮೂರು ಪಟ್ಟು ಹೆಚ್ಚಾಗಿವೆ, ಮಾತ್ರವಲ್ಲ, ಇವಕ್ಕೆ ಸಕ್ಕರೆಯ ಅತಿ ಸೇವನೆಯೇ ನೇರವಾದ ಕಾರಣ ಎನ್ನುವುದನ್ನು ಸ್ಪಷ್ಟವಾಗಿ ತೋರಿಸಿವೆ. ಸಕ್ಕರೆಯಲ್ಲಿರುವ ಹಾಗೂ ಹಣ್ಣುಗಳಲ್ಲಿರುವ ಫ್ರಕ್ಟೋಸ್ ನಮ್ಮ ಉಪಾಪಚಯದಲ್ಲಿ ಸಮಸ್ಯೆಗಳನ್ನುಂಟುಮಾಡಿ, ರಕ್ತದಲ್ಲಿ ಟ್ರೈಗ್ಲಿಸರೈಡ್, ಎಲ್‌ಡಿಎಲ್ ಕೊಲೆಸ್ಟರಾಲ್, ಯೂರಿಕಾಮ್ಲಗಳನ್ನು ಹೆಚ್ಚಿಸುತ್ತದೆ, ಎಚ್‌ಡಿಎಲ್ ಕೊಲೆಸ್ಟರಾಲ್ ಪ್ರಮಾಣವನ್ನು ಇಳಿಸುತ್ತದೆ, ಇನ್ಸುಲಿನ್ ರೋಧವನ್ನೂ, ಉರಿಯೂತವನ್ನೂ ಹೆಚ್ಚಿಸುತ್ತದೆ ಎಂದು ಹಲವು ಅಧ್ಯಯನಗಳು ತೋರಿಸಿವೆ. ಹೀಗೆ, ಸಸ್ಯಾಹಾರದಲ್ಲಿರುವ ಫ್ರಕ್ಟೋಸ್ ಹಾಗೂ ಗ್ಲೂಕೋಸ್ ಅತಿ ಸೇವನೆಯಿಂದ ಬೊಜ್ಜು, ಮಧುಮೇಹ, ರಕ್ತದ ಏರೊತ್ತಡ, ಹೃದ್ರೋಗ, ಪಾರ್ಶ್ವವಾಯು, ಯಕೃತ್ತಿನಲ್ಲಿ ಕೊಬ್ಬು ಮುಂತಾದ ಸಮಸ್ಯೆಗಳಿಗೆ ದಾರಿಯಾಗುತ್ತದೆ ಎನ್ನುವುದೀಗ ಸ್ಪಷ್ಟವಾಗತೊಡಗಿದೆ. ಅಷ್ಟೇ ಅಲ್ಲ ಆತಂಕ, ಖಿನ್ನತೆ, ಇಚ್ಛಿತ್ತ ವಿಕಲತೆ, ಗಮನ ಕೊರತೆ ಮುಂತಾದ ಮಾನಸಿಕ ಸಮಸ್ಯೆಗಳಿಗೂ ಧಾನ್ಯಗಳು, ಸಂಸ್ಕರಿತ ಆಹಾರಗಳು, ಸಕ್ಕರೆ, ಸಿಹಿ ತಿನಿಸುಗಳು ಹಾಗೂ ಲಘು ಪೇಯಗಳು ಕಾರಣವಾಗುತ್ತವೆ ಎನ್ನುವುದಕ್ಕೆ ಹಲವು ಆಧಾರಗಳು ಲಭ್ಯವಾಗಿವೆ. ಧಾನ್ಯ, ಹಣ್ಣುಗಳ ಸಕ್ಕರೆಯು ಶರಾಬಿನ ಮೂಲವಾಗಿದ್ದು, ಶರಾಬಿನಂತೆಯೇ ವರ್ತಿಸುತ್ತದೆ; ಹಸಿವನ್ನು ಹೆಚ್ಚಿಸಿ ಚಟವನ್ನುಂಟು ಮಾಡುವುದಷ್ಟೇ ಅಲ್ಲದೆ, ಮನಸ್ಸಿನ ಮೇಲೂ, ಯಕೃತ್ತಿನ ಮೇಲೂ ಶರಾಬಿನಂತೆಯೇ ಪರಿಣಾಮ ಬೀರುತ್ತದೆ ಎನ್ನಲಾಗುತ್ತಿದೆ. 'ಮಧುಪಾನವಾದೆಯಲಾ ದುರಾತ್ಮಕ, ನಿನ್ನ ಸೇವಿಸಿದ ದಾನವರು, ಮಾನವ ಕಿರಾತರು ಜ್ಞಾನವಳಿದು ವಿಕಾರದಲಿ ಮತಿಹೀನರಾದರು' ಎಂದು ಕನಕದಾಸರು ರಾಗಿಯ ಕುರಿತು ಹೇಳಿದ್ದರಾದರೂ, ರಾಗಿಯಷ್ಟೇ ಅಲ್ಲ, ಇನ್ನುಳಿದ ಧಾನ್ಯಗಳೂ, ಹಣ್ಣುಗಳೂ, ಸಕ್ಕರೆಯೂ ಹೀಗೆ ಶರಾಬಿನಂತೆಯೇ ವರ್ತಿಸುತ್ತವೆ !

ಇದಕ್ಕಿದಿರಾಗಿ, ಸಕ್ಕರೆ ಹಾಗೂ ಧಾನ್ಯಗಳ ಸಸ್ಯಾಹಾರ ಸೇವನೆಯನ್ನು ಕಡಿತಗೊಳಿಸಿದರೆ ರಕ್ತದ ಗ್ಲೂಕೋಸ್ ಇಳಿಕೆಯಾಗುತ್ತದೆ, ಮಧುಮೇಹ ನಿಯಂತ್ರಿಸಲ್ಪಡುತ್ತದೆ, ಟ್ರೈಗ್ಲಿಸರೈಡ್, ಎಲ್‌ಡಿಎಲ್ ಕೊಲೆಸ್ಟರಾಲ್, ಯೂರಿಕಾಮ್ಲಗಳೂ ಇಳಿಯುತ್ತವೆ, ಎಚ್‌ಡಿಎಲ್ ಕೊಲೆಸ್ಟರಾಲ್ ಏರುತ್ತದೆ, ರಕ್ತದೊತ್ತಡ ಹಾಗೂ ದೇಹ ತೂಕಗಳೂ ಇಳಿಯುತ್ತವೆ ಎಂದು ಹಲವು ಅಧ್ಯಯನಗಳು ತೋರಿಸಿವೆ. ಮಾಂಸ, ಏಡಿ, ಮೀನು, ಮೊಟ್ಟೆ, ತರಕಾರಿಗಳಂತಹ ಮೂಲಾಹಾರವನ್ನೇ ತಿಂದು ಬದುಕುಳಿದಿರುವ ಜನಸಮುದಾಯಗಳಲ್ಲಿ ಆಧುನಿಕ ರೋಗಗಳಿಲ್ಲ ಎನ್ನುವುದೂ ಸುಸ್ಪಷ್ಟವಾಗಿದೆ. ಮೇದಸ್ಸು ಹಾಗೂ ಪ್ರೊಟೀನುಗಳಿಂದ ಆಧುನಿಕ ರೋಗಗಳು ಹೆಚ್ಚುತ್ತವೆನ್ನುವುದಕ್ಕೆ ಐವತ್ತರ ದಶಕದ ಮಧ್ಯದಿಂದ ಇಂದಿನವರೆಗಿನ ಈ ೬೦ ವರ್ಷಗಳಲ್ಲಿ ಯಾವುದೇ ಪ್ರಬಲ ಆಧಾರಗಳೂ ದೊರಕಿಲ್ಲ.

**ಬಡವರಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ ?**

ಕನಕದಾಸರ ಶ್ರೀರಾಮಚಂದ್ರನು ಶೂದ್ರಾನ್ನ ಹಾಗೂ ಧನಾಢ್ಯರನು ಬೆಂಬತ್ತಿ ನಡೆವ ಅನ್ನಗಳಲ್ಲಿ ಶೂದ್ರಾನ್ನವೇ ಮೇಲೆಂದು ಆರೇ ತಿಂಗಳಲ್ಲಿ ತೀರ್ಪು ನೀಡಿದರೆ, ಮೊಟ್ಟೆ–ಮಾಂಸಗಳ ಪ್ರೊಟೀನು–ಮೇದಸ್ಸುಭರಿತ ಆಹಾರ ಹಾಗೂ ಸಸ್ಯಾಹಾರವೇ ಹೆಚ್ಚಿರುವ ಶರ್ಕರಭರಿತ ಆಧುನಿಕ ಆಹಾರಗಳಲ್ಲಿ ಯಾವುದು ಒಳ್ಳೆಯದೆನ್ನುವ ತೀರ್ಪಿಗೆ ಆರು ದಶಕಗಳ ಕಾಲ ನಾವು ಕಾಯ ಬೇಕಾಯಿತು. ಮೇದಸ್ಸು ರೋಗಕಾರಕವೆಂದು ಆಧಾರವಿಲ್ಲದೇ ಹೇಳಿದ್ದ ಅಮೆರಿಕದ ಸರಕಾರವು ಇದೀಗ ತನ್ನ ನಿಲುವನ್ನು ಬದಲಿಸಿ, ಸಕ್ಕರೆಯೇ ಎಲ್ಲ ರೋಗಗಳಿಗೆ ಕಾರಣವೆಂದು ಹೇಳಿದೆ. ಹೀಗೆ, ಕನಕದಾಸರು 'ಬಡವರ ಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ' ಎಂದು ಹೇಳಿದ್ದಂತೆ, ಬಡವರು ತಿನ್ನುತ್ತಿರುವ ಮಾಂಸ–ಏಡಿ–ಮೀನು–ತರಕಾರಿಗಳ ಮೂಲಾಹಾರವೇ ಆರೋಗ್ಯಕರವೆಂದೂ, 'ಬಲ್ಲಿದರ ಪತಿಕರಿಸುವನು ಅವನಲ್ಲಿ ಸಾರವ ಕಾಣೆ' ಎಂದು ಹೇಳಿದ್ದಂತೆ, ಶ್ರೀಮಂತರಿಗಾಗಿ ಕಂಪೆನಿಗಳು ತಯಾರಿಸಿ ಮಾರುತ್ತಿರುವ ಆಧುನಿಕ ಆಹಾರವು ನಿಸ್ಸಾರವೂ, ರೋಗಕಾರಕ ವೆಂದೂ ಮತ್ತೆ ಸಾಬೀತಾಗಿದೆ.

ಅಮೆರಿಕ ಸರಕಾರವು ೨೦೧೫ರ ಫೆಬ್ರವರಿಯಲ್ಲಿ ಪ್ರಕಟಿಸಿದ ಆಹಾರ ಮಾರ್ಗದರ್ಶಿಯ ಕರಡಿನಲ್ಲಿ ಆಹಾರದಲ್ಲಿರುವ ಕೊಲೆಸ್ಟರಾಲ್ ಪ್ರಮಾಣಕ್ಕೂ, ರಕ್ತದ ಕೊಲೆಸ್ಟರಾಲ್ ಪ್ರಮಾಣಕ್ಕೂ ಸಂಬಂಧವಿಲ್ಲವೆಂದೂ, ಆಹಾರದ ಕೊಲೆಸ್ಟರಾಲ್ ಪ್ರಮಾಣವನ್ನು ದಿನಕ್ಕೆ ೩೦೦ ಮಿ.ಗ್ರಾಂ.ಗೆ ಮಿತಿಗೊಳಿಸಬೇಕೆಂದು ಈ ಹಿಂದೆ ನೀಡಿದ್ದ ಸಲಹೆಯನ್ನು ಇನ್ನು ಮುಂದೊತ್ತುವುದಿಲ್ಲವೆಂದೂ,



ಕೊಲೆಸ್ಟರಾಲ್‌ಅನ್ನು ಎಷ್ಟೇ ಪ್ರಮಾಣದಲ್ಲಾದರೂ ಸೇವಿಸಬಹುದೆಂದೂ ಸ್ಪಷ್ಟವಾಗಿ ಹೇಳಲಾಗಿದೆ. ಹಾಗೆಯೇ, ಸಕ್ಕರೆಭರಿತ ತಿನಿಸುಗಳು ಹಾಗೂ ಪೇಯಗಳು ಬಹುತೇಕ ಆಧುನಿಕ ರೋಗಗಳಿಗೆ ಕಾರಣವೆನ್ನುವುದಕ್ಕೆ ಪ್ರಬಲ ಆಧಾರಗಳಿರುವುದರಿಂದ ಸಕ್ಕರೆ ಹಾಗೂ ಸಂಸ್ಕರಿತ ಧಾನ್ಯಗಳ ಸೇವನೆಯನ್ನು ಮಿತಿಗೊಳಿಸಬೇಕೆಂದೂ ಹೇಳಲಾಗಿದೆ.

ಕನಕದಾಸರು ಶ್ರೀಮಂತರ ಆಹಾರವನ್ನು 'ದೀನರಲಿ ದಾರಿದ್ರ ಜನದಲಿ ನೀನು ನಿರ್ದಯನೆಂದೆವಲ್ಲದೆ, ಹೀನಗಳೆದವರಲ್ಲ ನಿನ್ನನು ನಾವು ಸಭೆಯೊಳಗೆ' ಎಂದರು, ತಮ್ಮ ಹೃದಯ ವೈಶಾಲ್ಯತೆಯನ್ನು ಮೆರೆದರು. ಆದರೆ ನಾವಿಂದು ಹಾಗೆ ಮಾಡಬೇಕಾಗಿಲ್ಲ; ಕೋಟಿಗಟ್ಟಲೆ ಜನರಿಗೆ, ಅದರಲ್ಲೂ ಮಕ್ಕಳಿಗೆ, ಬಗೆಬಗೆಯ ರೋಗಗಳನ್ನುಂಟುಮಾಡುತ್ತಿರುವ ಆಧುನಿಕ ಆಹಾರವನ್ನು ಖಂಡಿತಕ್ಕೂ ಹೀನಗಳೆಯುವೆವು ನಾವು ಸಭೆಯೊಳಗೆ. ಇದೇ ಕಾರಣಕ್ಕೆ, ೨೦೧೫, ಅಕ್ಟೋಬರ್ ೧೪ರಂದು ಕೇಂದ್ರ ಸರಕಾರದ ಆಹಾರ ಸುರಕ್ಷೆ ಹಾಗೂ ಮಾನಕಗಳ ಪ್ರಾಧಿಕಾರವು ಶಾಲಾ ಮಕ್ಕಳ ಆಹಾರ ಮಾರ್ಗದರ್ಶಿಯ ಕರಡನ್ನು ಪ್ರಕಟಿಸಿದ್ದು, ಅದರಲ್ಲಿ ಸಕ್ಕರೆಭರಿತ ತಿನಿಸುಗಳು ಹಾಗೂ ಸಂಸ್ಕರಿತ ಧಾನ್ಯಗಳಿಂದ ತಯಾರಿಸಿದ ತಿನಿಸುಗಳನ್ನು ಕೆಂಪು ಪಟ್ಟಿಗೆ ಸೇರಿಸಲಾಗಿದೆ, ಮಕ್ಕಳಿಗೆ ಅವು ದೊರೆಯದಂತೆ ಮಾಡಬೇಕೆಂದು ಹೇಳಲಾಗಿದೆ. ಬದಲಿಗೆ, ಮಾಂಸ, ಮೊಟ್ಟೆ, ಮೀನು, ತರಕಾರಿಗಳು ಹಾಗೂ ಇಡೀ ಧಾನ್ಯಗಳ ಆಹಾರವನ್ನೇ ನೀಡಬೇಕೆಂದು ಸಲಹೆ ನೀಡಲಾಗಿದೆ.

ಪೌಷ್ಟಿಕವಾದ, ಆರೋಗ್ಯಕ್ಕೆ ಪೂರಕವಾದ ಆಹಾರವು ಎಲ್ಲರಿಗೂ ದೊರೆಯುವಂತಾಗಬೇಕು; ಅದಕ್ಕಿರುವ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಅಡ್ಡಿ–ಆತಂಕಗಳು ನಿವಾರಣೆಯಾಗಬೇಕು. ಕನಕದಾಸರು ತಮ್ಮ ರಾಮಧಾನ್ಯ ಚರಿತ್ರೆಯಲ್ಲಿ ಬಡವರ ಆಹಾರವನ್ನು ಗೆಲ್ಲಿಸಿ, ಶ್ರೀಮಂತರ ಆಹಾರವನ್ನೂ, ಅವರ ಆಚರಣೆಗಳನ್ನೂ ಅಣಕಿಸಿದ್ದರೆ, ಬುದ್ಧ, ಬಸವಣ್ಣ, ವಿವೇಕಾನಂದರಂತಹ ಮಾನವತಾವಾದಿಗಳೆಲ್ಲರೂ ಪೌಷ್ಟಿಕವಾದ ಆಹಾರದ ಸೇವನೆಯನ್ನು ಬೆಂಬಲಿಸಿದ್ದರು. ಬಸವಣ್ಣನವರು ಬಡವರ ಆಹಾರಕ್ರಮಕ್ಕೆ ಸಹಾನುಭೂತಿ ವ್ಯಕ್ತಪಡಿಸಿದ್ದರು. ರಾಜಸಿಕ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಮಾಂಸಾಹಾರವೊಂದೇ ದಾರಿಯಾಗಿದೆ, ಹಗಲಿರುಳು ದುಡಿಯುವ ಜನರನ್ನು ಸಸ್ಯಾಹಾರಿಗಳಾಗುವಂತೆ ಬಲಾತ್ಕರಿಸಿದರೆ ದೇಶದ ಸ್ವಾತಂತ್ರ್ಯವೇ ನಾಶವಾಗುತ್ತದೆ ಎಂದು ವಿವೇಕಾನಂದರು ಎಚ್ಚರಿಸಿದ್ದರು. ಇನ್ನಾದರೂ ನಮ್ಮ ಜನರೆಲ್ಲರಿಗೂ ಆರೋಗ್ಯಕ್ಕೆ ಪೂರಕವಾದ ಊಟ ದೊರೆಯಲಿ, ಅವರು ಬಯಸಿದ್ದನ್ನು ತಿನ್ನುವ ಸ್ವಾತಂತ್ರ್ಯವಿರಲಿ.

***ಮಂಗಳೂರು ವಿಶ್ವವಿದ್ಯಾನಿಲಯದ ಕನಕದಾಸ ಸಂಶೋಧನ ಕೇಂದ್ರ ಆಯೋಜಿಸಿರುವ 'ಹೀನಗಳೆದವರಲ್ಲ ನಿನ್ನನ್ನು ನಾವು ಸಭೆಯೊಳಗೆ : ಆಹಾರ ರಾಜಕಾರಣ – ಸಮಕಾಲೀನ ಸಂವಾದ' ಸರಣಿಯಲ್ಲಿ ಡಿಸೆಂಬರ್ ೭, ೨೦೧೫ರಂದು ಮಂಗಳೂರಿನಲ್ಲಿ ನೀಡಿದ ಉಪನ್ಯಾಸದ ಲೇಖನ ರೂಪ.***

ಡಾ॥ ಶ್ರೀನಿವಾಸ ಕಕ್ಕಿಲ್ಲಾಯ
'ಅಕ್ಷಯ', ಕದ್ರಿ, ಕೈಬಟ್ಟಲ್, ಆಳ್ವಾರಿಸ್ ರಸ್ತೆ, ಮಂಗಳೂರು –೫೭೫ ೦೦೨

# ಸಮಕಾಲೀನ ಸಂದರ್ಭದಲ್ಲಿ ಶಿಕ್ಷಣ ಮತ್ತು ಭಾಷೆ ಎದುರಿಸುತ್ತಿರುವ ಸವಾಲುಗಳು

ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ಸ್ವಾರ್ಥಕ್ಕಾಗಿ ಹುಟ್ಟುಹಾಕಿದ ಶಿಕ್ಷಣ ವ್ಯವಸ್ಥೆಯಿಂದಾಗಿ, ತಮ್ಮ ನೆಲದಲ್ಲೆ ಅನ್ಯರಾಗುವ ಪ್ರಕ್ರಿಯೆ ಏರ್ಪಟ್ಟು 'ಮೆಕಾಲೆಯ ಮಕ್ಕಳು' ವಿವಿಧ ತಲೆಮಾರುಗಳಲ್ಲಿ ಎರಕದಂತೆ ರೂಪುಗೊಂಡಿದ್ದಾರೆ. ಇದೀಗ ಜಾಗತೀಕರಣ – ಖಾಸಗೀಕರಣ – ಉದಾರೀಕರಣಗಳ ಫಲವಾಗಿ 'ಎಲ್.ಪಿ.ಜಿ. ಮಕ್ಕಳು' – ಇನ್ನು ಮುಂದಿನ ತಲೆಮಾರುಗಳಲ್ಲಿ ರೂಪುಗೊಳ್ಳುತ್ತಾರೆ. ಈ ಮೆಕಾಲೆಯ ಮಕ್ಕಳು ಮತ್ತು ಎಲ್. ಪಿ. ಜಿ. ಮಕ್ಕಳು ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆಯುವುದನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ.

ವಿ. ಚಂದ್ರಶೇಖರ ನಂಗಲಿ

**ಮಾ**ತೃಗರ್ಭ; ಮಾತೃಭೂಮಿ; ಮಾತೃಭಾಷೆ – ಎಂಬ ಬಳಕೆಯ ನುಡಿಗಟ್ಟುಗಳನ್ನು ಗಮನಿಸಿದರೆ, ಹೆಣ್ಣು – ಭೂಮಿ – ಭಾಷೆಗಳನ್ನು 'ತಾಯಿ' ಎಂಬ ಸಮಾನ ಧರ್ಮದಲ್ಲಿ ಕರೆದಿರುವುದು ಸ್ಪಷ್ಟವಾಗುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಹೆತ್ತ ತಾಯಿ ಕಡೆಗಣನೆಗೊಳಗಾದಂತೆಯೇ ತಾಯಿನಾಡು ಮತ್ತು ತಾಯಿನುಡಿಗಳು ಕೂಡ ಮೂಲೆಗುಂಪಾಗುವುದುಂಟು. ಈ ಜಾಡಿನಲ್ಲೆ ಆಲೋಚನೆ ಮಾಡಿದರೆ ಭಾಷೆ ಮತ್ತು ಶಿಕ್ಷಣಗಳ ನಡುವೆ 'ತಾಯಿ–ಮಗು ನ್ಯಾಯ'ದ ಅರಿವಾಗುತ್ತದೆ. ಭಾಷೆಯನ್ನು ತಾಯಿ ಎಂದೂ ಶಿಕ್ಷಣವನ್ನು ಮಗು ಎಂದೂ ತಿಳಿದರೆ, ತಾಯಿ – ಮಗು ಸಂಬಂಧ ಹೇಗಿರಬೇಕೆಂಬುದನ್ನು ಅರಿತುಕೊಳ್ಳಬಹುದು. ಅಂದರೆ, ತಾಯಿಗೆ ಮಗು ಹುಟ್ಟುವಂತೆಯೇ ಭಾಷೆಗೆ ಅನುಗುಣವಾದ ಶಿಕ್ಷಣ ಹುಟ್ಟಿರಬೇಕು. ಈ ದೃಷ್ಟಿಯಿಂದ ವಿಮರ್ಶಿಸಿದರೆ ಕನ್ನಡ ಭಾಷೆಗೆ ಹುಟ್ಟಿದ ಶಿಕ್ಷಣ ವ್ಯವಸ್ಥೆ ನಮ್ಮಲ್ಲಿ ಇಲ್ಲದಿರುವುದು ಎದ್ದು ಕಾಣುತ್ತದೆ. ಕನ್ನಡ ಮಾಧ್ಯಮದಲ್ಲಿ ಚಾಲ್ತಿ ಇರುವ ಬಿ. ಎ. ಕೋರ್ಸು ಗಮನಿಸಿದರೆ, ಇದು ದೃಷ್ಟಿ ವಂಚಿತ ಶಿಶುವಿನಂತೆ ಭಾಸವಾಗುತ್ತದೆ. ಉನ್ನತ ಶಿಕ್ಷಣ ಮತ್ತು ವೈದ್ಯಕೀಯ – ಇಂಜಿನಿಯರಿಂಗ್ – ತಾಂತ್ರಿಕ ಶಿಕ್ಷಣಗಳು ಇಂಗ್ಲಿಷ್ ಮಾಧ್ಯಮದಲ್ಲಿ ಮೆರೆಯುತ್ತಿರುವುದನ್ನು ಕಂಡರೆ ಕನ್ನಡ ಮಾಧ್ಯಮ ಮೂಲೆಗುಂಪಾಗಿರುವುದು ಯಾರಿಗಾದರೂ ಮನದಟ್ಟು ಆಗುತ್ತದೆ. ವಿಶೇಷವಾಗಿ ವಸಾಹತುಶಾಹಿಗೊಳಪಟ್ಟ ದೇಶಗಳಲ್ಲಿ ಅನ್ಯಭಾಷೆಯ ಅಟ್ಟಹಾಸ ಇದ್ದೇ ಇದೆ. ಅಮೆರಿಕಾ ದೇಶದಲ್ಲಿ



'ನೇಟಿವ್ಸ್' (= ಸ್ಥಳೀಯರು) ವಂಶನಾಶಕ್ಕೆ ಸಂದಿದ್ದಾರೆ. ಆಫ್ರಿಕಾದಲ್ಲಿ 'ನೇಟಿವ್ ಲಾಂಗ್ವೇಜಸ್' (ಸ್ಥಳೀಯ ಭಾಷೆಗಳು) ವಂಶನಾಶಕ್ಕೆ ಸಂದಿವೆ. ಭಾರತದಲ್ಲಿ ಸ್ಥಳೀಯರೂ ಇದ್ದಾರೆ; ಸ್ಥಳೀಯ ಭಾಷೆಗಳೂ ಇದ್ದಾವೆ. ಆದರೆ, ಸ್ಥಳೀಯ ಭಾಷೆಗಳಿಗೆ ಹುಟ್ಟಿದ ಈ ನೆಲದ ಶಿಕ್ಷಣ ವೈವಿಧ್ಯತೆ ನಮ್ಮಲ್ಲಿಲ್ಲ.

ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ಸ್ವಾರ್ಥಕ್ಕಾಗಿ ಹುಟ್ಟುಹಾಕಿದ ಶಿಕ್ಷಣ ವ್ಯವಸ್ಥೆಯಿಂದಾಗಿ, ತಮ್ಮ ನೆಲದಲ್ಲೆ ಅನ್ಯರಾಗುವ ಪ್ರಕ್ರಿಯೆ ಏರ್ಪಟ್ಟು 'ಮೆಕಾಲೆಯ ಮಕ್ಕಳು' ವಿವಿಧ ತಲೆಮಾರುಗಳಲ್ಲಿ ಎರಕದಂತೆ ರೂಪುಗೊಂಡಿದ್ದಾರೆ. ಇದೀಗ ಜಾಗತೀಕರಣ – ಖಾಸಗೀಕರಣ – ಉದಾರೀಕರಣಗಳ ಫಲವಾಗಿ 'ಎಲ್. ಪಿ. ಜಿ. ಮಕ್ಕಳು' – ಇನ್ನು ಮುಂದಿನ ತಲೆಮಾರುಗಳಲ್ಲಿ ರೂಪುಗೊಳ್ಳುತ್ತಾರೆ. ಈ ಮೆಕಾಲೆಯ ಮಕ್ಕಳು ಮತ್ತು ಎಲ್. ಪಿ. ಜಿ. ಮಕ್ಕಳು ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆಯುವುದನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಸರ್ಕಾರಿ ಶಾಲೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಓದಿದವರು ಬಿ. ಎ. ಕೋರ್ಸಿನವರೆಗೂ ಅಧ್ಯಯನ ನಡೆಸಿ ನಂತರ ಮೇಲೇರಲು ದಾರಿ ಕಾಣದೆ 'ಪದಕುಸಿಯೆ ನೆಲವಿಹುದು' ಎಂಬಂತೆ ಈ ನೆಲದಲ್ಲಿ ತೆವಳುವ ಕಂಬಳಿ ಹುಳುಗಳಂತೆ ಒದ್ದಾಡುತ್ತಿರುತ್ತಾರೆ. 'ಇಂದು ನಮ್ಮೀ ನಾಡು' ಎಂಬ ಕವನದಲ್ಲಿ ಗೋಪಾಲಕೃಷ್ಣ ಅಡಿಗರು ಬರೆದಿರುವ ಸಾಲುಗಳಿವು ;

ಪಶ್ಚಿಮದ ಗಾಳಿ ಬೀಸಿದರೆ ತೂಗುವುದು ಅಟ್ಟೆ
ಎಂಥ ಮಾರ್ದನಿ ! ಎಂಥ ನಕಲು ಕುಣಿತ !

'ಉತ್ತಮಾಂಗ'ವೆನಿಸಿದ ತಲೆಯಿಲ್ಲದ ಮುಂಡವನ್ನೇ 'ಅಟ್ಟೆ' ಎಂದು ಕರೆಯುತ್ತಾರೆ. ಭಾರತ ದೇಶದ ಶಿಕ್ಷಣ ವ್ಯವಸ್ಥೆಯ ಕಟು ವಿಡಂಬನೆಯಾಗಿ ಮೇಲಿನ ಸಾಲುಗಳನ್ನು ವ್ಯಾಖ್ಯಾನಿಸಬಹುದು. ಪದವೀಧರರಾಗುವುದು ಎಂದರೆ, ಈ ನೆಲಕ್ಕೆ ಅನ್ಯರಾಗುವುದು ಎಂದೇ ಅರ್ಥ. ಈ ನೆಲದ ಭಾಷೆಗಳು ಮತ್ತು ಈ ನೆಲದ ಶಿಕ್ಷಣಗಳು ಮೂಲೆಗುಂಪಾಗುತ್ತಿರುವುದು ಸರಿಯಲ್ಲ. ದಾಸಿಯಾಗಿದ್ದ ತಾಯ ಸೆರೆಯನ್ನು ಬಿಡಿಸಲು 'ಅನುರು'ಗಳ ಕೈಯ್ಯಲ್ಲಿ ಸಾಧ್ಯವಿಲ್ಲ. ವಿನತೆಯ ದಾಸ್ಯವನ್ನು ಕಿತ್ತೊಗೆಯಲು ಅಮೃತಕ್ಕೆ ಹಾರಿದ ವೈನತೇಯರಿಂದ ಮಾತ್ರ ಸಾಧ್ಯ ! ಈಗ ಭಾರತೀಯರೆಲ್ಲ ಒಂದಾಗಿ ಸ್ಥಳೀಯ ಭಾಷೆಗಳಲ್ಲಿರುವ ಅಮೃತಕ್ಕೆ ಹಾರುವ ವೈನತೇಯರಾಗಿ ರೂಪುಗೊಳ್ಳಬೇಕಾಗಿದೆ. ಕಳೆದ ತಿಂಗಳು ೧೫, ಆಗಸ್ಟ್ ೨೦೧೫ರಂದು ನಾವೆಲ್ಲರೂ ೬೯ನೇ ಸ್ವಾತಂತ್ರ್ಯ ದಿನಾಚರಣೆ ಆಚರಿಸಿದ್ದಾಗಿದೆ. ಈ ಬಗೆಯಲ್ಲಿ "ಝುಂಡಾ ಊಂಚ ರಹೇ ಹಮಾರ"ವನ್ನು ಎಷ್ಟು ಸರ್ತಿ ಆಚರಿಸಬೇಕು ? ದೇಶಭಾಷೆಗಳನ್ನು ಮೂಲೆಗುಂಪು ಮಾಡಿದ ಜಗತ್ತಿನ ಏಕೈಕ ರಾಷ್ಟ್ರ ಭಾರತ ಎಂಬ ಸತ್ಯ ಅರಿವಾಗುವುದೆಂದಿಗೆ ?

'ಸ್ವಾತಂತ್ರ್ಯ'ವೆಂಬುದು ಏಕರೂಪಿ ಪರಿಕಲ್ಪನೆಯಲ್ಲ! ಇದೊಂದು 'ಬಹುರೂಪಿ' ತತ್ವ. ರಾಜಕೀಯ ಗುಲಾಮಗಿರಿಯಿಂದ ಪಾರಾಗುವ ರಾಜಕೀಯ ಸ್ವಾತಂತ್ರ್ಯ, ಜಾತಿಪದ್ಧತಿಯ ಗುಲಾಮಗಿರಿಯಿಂದ ಪಾರಾಗುವ ಸಾಮಾಜಿಕ ಸ್ವಾತಂತ್ರ್ಯ, ಪುರೋಹಿತ ಶಾಹಿಯ ಗುಲಾಮಗಿರಿಯಿಂದ ಪಾರಾಗುವ ಆಧ್ಯಾತ್ಮಿಕ ಸ್ವಾತಂತ್ರ್ಯ, ಭಾಷಿಕ ಗುಲಾಮಗಿರಿ ಯಿಂದ ಪಾರಾಗುವ ಭಾಷಿಕ ಸ್ವಾತಂತ್ರ್ಯ – ಹೀಗೆ ಸ್ವಾತಂತ್ರ್ಯದ ಗರ್ಭದಲ್ಲಿ ಬಹುರೂಪಿಯಾದ ಶಕ್ತಿ ಮತ್ತು ಸತ್ವಗಳಿವೆ. ಕೇವಲ 'ರಾಜಕೀಯ ಸ್ವಾತಂತ್ರ್ಯ'ದಿಂದ ಮಾತ್ರ 'ಸ್ವತಂತ್ರ ಭಾರತ' ಅಥವಾ 'ಸ್ವತಂತ್ರ ಪ್ರಜೆ' ಎನ್ನಲು ಸಾಧ್ಯವಿಲ್ಲ. ಆಧುನಿಕ ಭಾರತದ ಇತಿಹಾಸದಲ್ಲಿ ೧೯೪೭ ಒಂದು ನಿರ್ಣಾಯಕ ಘಟ್ಟವೇ ಸರಿ. ಇದರಿಂದ ಭಾರತೀಯರು ರಾಜಕೀಯ ಗುಲಾಮಗಿರಿ ಯಿಂದ ಪಾರಾದರು. ಆದರೆ, ಇದು ಸಾರ್ಥಕವಾಗ ಬೇಕಾದರೆ, ಸ್ವಾತಂತ್ರ್ಯದ ಬಹುರೂಪಿ ತತ್ವ ಅನುಷ್ಠಾನಗೊಳ್ಳಬೇಕು. ಹೀಗೆ ಅನುಷ್ಠಾನಗೊಳ್ಳಲು ಅಗತ್ಯವಾದ ಮೂರು ಹೆಜ್ಜೆಗಳಲ್ಲಿ, ಭಾರತವು ಒಂದೇ ಒಂದು ಹೆಜ್ಜೆಯನ್ನಿಟ್ಟು ತಟಸ್ಥವಾಗಿ ಉಳಿದುಬಿಟ್ಟಿದೆ. ಆ ಮೂರು ಹೆಜ್ಜೆಗಳಿವು :

೧. ಭಾಷಾವಾರು ಪ್ರಾಂತಗಳ ರಚನೆ: ೨೬ ಜನವರಿ, ೧೯೫೬.
೨. ಭಾಷಾವಾರು ಶಿಕ್ಷಣ ಮಾಧ್ಯಮಗಳು.
೩. ಭಾಷಾವಾರು ಪ್ರಭುತ್ವಗಳು.

ಈ ಮೂರು ಹೆಜ್ಜೆಗಳನ್ನು ವಾಮನರೂಪಿಯ ಮೂರು ಹೆಜ್ಜೆಗಳೆನ್ನಬಹುದು. ದೇಶಭಾಷೆಗಳೆಂಬ ವಾಮನರು ತ್ರಿವಿಕ್ರಮರಾಗಿ ಬೆಳೆದು ಮೇಲ್ಕಂಡ ಮೂರು ಹೆಜ್ಜೆಗಳಿಂದ ತ್ರಿಭುವನಗಳನ್ನು ಅಳೆಯ ಬೇಕಾಗಿದೆ, ಇಂಗ್ಲಿಷ್ ದಾನಗುಣಕ್ಕೆ ಹೆಸರಾದ ಬಲಿ ಚಕ್ರವರ್ತಿಯಿದ್ದಂತೆ. ಬಲಿಯು (ಇಂಗ್ಲಿಷ್ ಭಾಷೆಯು) ದುಷ್ಟನಲ್ಲ! ಆದರೆ, ದೇಶಭಾಷೆಗಳ ಧರ್ಮ ಸಂಸ್ಥಾಪನೆಗಾಗಿ ಮಹಾವಿಷ್ಣು ಬಲಿ ಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದಂತೆ ಇಂಗ್ಲಿಷ್‌ಅನ್ನು ತುಳಿಯಬೇಕಾಗಿದೆ. ಬಲಿಯನ್ನು ಪಾತಾಳಕ್ಕೆ ತುಳಿದರೂ ಮಹಾವಿಷ್ಣು ಬಲಿಯ ಅರಮನೆಗೆ ಕಾವಲುಗಾರನಾಗಿ ಉಳಿದು ಕೊಂಡನು. ಕನ್ನಡ ಮತ್ತಿತರ ದೇಶಭಾಷೆಗಳು ತಮ್ಮ ಶ್ರೇಯಸ್ಸಿಗಾಗಿಯೇ ಇಂಗ್ಲಿಷೆಂಬ ಬಲಿಚಕ್ರವರ್ತಿಯ ಅರಮನೆಗೆ ಕಾವಲುಗಾರನಾಗಿ ಉಳಿದು ಲೋಕಹಿತವನ್ನು ಸಾಧಿಸಬೇಕಾಗಿದೆ. ಇದನ್ನು ಒಂದೇ ಮಾತಿನಲ್ಲಿ ಹೀಗೆ ಹೇಳಬಹುದು : ಕನ್ನಡ ದೀಪಾವಳಿಗೆ ಇಂಗ್ಲಿಷಿನ ಬಲಿಪಾಡ್ಯಮಿ ಆಗಲೇಬೇಕು. ಇಂಗ್ಲಿಷಿನ ಬಲಿಪಾಡ್ಯಮಿ ಜೊತೆ ಗೂಡದಿದ್ದರೆ, ಕನ್ನಡ ದೀಪಾವಳಿಗೆ ಎಡೆಯಿಲ್ಲ.

**ವಿ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀಗೌರಿ', ೪ನೇ ಕ್ರಾಸ್
ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾಮಾಂತರ – ೫೬೨ ೧೧೪






# ಅವ್ವನ ಕೌದಿ

ಕಣ್ಣು ಮಂಜಾಗಿ ಸೂಜಿ ಚುಚ್ಚುತ್ತಿದೆ ಬೆರಳುಗಳಿಗೆ
ಪಿಸುಕಾದ ದಾರ ಹರಿಯುತ್ತಿದೆ ಟಿಬ್ಬಿ ಟಿಬ್ಬೆಗೆ
ಹರಿದರಿವೆಗಳ ತೇಪೆ ತೇಪೆ ಹೊಂದುತ್ತಲೇ ಇಲ್ಲ;
ಶ್ರಮ ಬಿಟ್ಟಿಲ್ಲ ಆದರೂ ಮಕ್ಕಳಿಗೊಂದು
ಬೆಚ್ಚಗಿನ ಹೊಚ್ಚಿಗೆಯಪೇಕ್ಷೆಯ ಅವ್ವ,
ಹೊಲಿಯುತ್ತಲೇ ಇದ್ದಾಳೆ –
ಕಾಲಕಾಲಾಂತರದಿಂದ ಕೌದಿ.

ಜರತಾರಿ ಶಾಲು, ರೇಷ್ಮೆ ರುಮಾಲು,
ಕುತನಿಯ ಜಂಪರು, ಕೈಮಗ್ಗದ ಖಾದಿ,
ಕಾಟನ್ ಸೀರೆ, ಮಂಜರಪಾಟ, ನೈಲಾನು,
ಟೆರಿವೂಲ್, ಟೆರಿಕಾಟ್, ಶಿಫಾನ್
ಕುರಿತುಪ್ಪಳ – ಹತ್ತು ಹದಿನೆಂಟು
ತರಹೇವಾರಿ ಅರಿವೆ.
ಒಂದಕ್ಕೊಂದು ಸಂಧಿಸದ, ಸ್ಪಂದಿಸದ,
ಒಂದೊಂದೂ ಹೊಂದಿಕೊಳ್ಳದ
ಅಂದಗೆಟ್ಟರಿವೆಯಂಚುಗಳ ನೀವಿ,ನಿಗಚಿ
ಹೊಲಿಗೆಗೆ ಹೊಂದಿಸುವ ದಂದುಗ
ಅವ್ವನ ನಿತಾಂತ ಕ್ರಮ, ಶ್ರಮ; ನಿರಂತರ.

ಪಗಡೆಗೌದಿಯಪೇಕ್ಷೆಗೆಲ್ಲಿ ಅವಕಾಶ!
ನಾಲ್ಕೂ ಮೂಲೆಗಳ ಬಣ್ಣ–ಬಟ್ಟೆ
ಆಕಾರಗಳಿಗೇಕರೂಪ
ಕೊಡುವ ಶ್ರಮಕ್ಕೆಷ್ಟು ಬೆಲೆ–ಬೆವರು ?
ಹೊಟ್ಟೆಯೊಳಗಿನಂದ ಹೆಚ್ಚಿಸುವ
ಸಮವಸ್ತ್ರಗಳನ್ವೇಷಣೆಗೆಲ್ಲಿ ನೆಲ–ನೆಲೆ ?
ಹೊಂದಿಕೊಂಡಾವೇ ರಬ್ಬುರಂಗಿನ ಬಟ್ಟೆ
ಮಬ್ಬು–ಮಸಕು ಬಣ್ಣಗಳ ಜೊತೆ–ಅನುಮಾನ!
ಮತ್ತೆ ಏರು–ಪೇರಾಗುವ ಚಿಂತೆ
ಏನೂ ತೋಚದ ಹುಲಗೂರ ಸಂತೆ
ಚುಚ್ಚಿಕೊಳ್ಳುತ್ತಲೇ ಇದ್ದಾಳೆ ಸೂಜಿ ಅವ್ವ
ಬೀಳದ ಹೊಲಿಗೆಯ ನಿರಂತರ ಗೋಳಿನಲ್ಲಿ.

ಸೋಲೊಪ್ಪದ ಅವ್ವನೆದೆಯಲ್ಲಿ
ಈ ಕ್ಷಣಕ್ಕೂ ಹಟಕ್ಕಿಂತ ಮಿಗಿಲಾದ ಕಕ್ಕುಲಾತಿ–
ಪಿಸುಕಾಗಿ ಹೋದ ಅಪ್ಪನ ಧೋತರ,
ತೂತಾನು ತೂತಾದ ತವರ ಬಾಗಿನದ ಸೀರೆ,
ಅಟ್ಟದ ಮೇಲೆ ಕಟ್ಟಿಟ್ಟ ತಲೆತಲಾಂತರದ
ಧಸಕು–ಮುಗ್ಗಸಿನ ಲ್ಯಾವಿಯ ಗಂಟು–
ಏನೆಲ್ಲ ಬಿಚ್ಚಿ, ತೊಳೆದು, ಚಿಂದಿಯಲ್ಲೇ
ಚಿತ್ತಾರ ಬಿಡಿಸುವಪೇಕ್ಷೆಯ ಅವ್ವ
ಚುಚ್ಚುತ್ತಲೇ ಇದ್ದಾಳೆ ಸೂಜಿ;
ಒಂದು ಬೆಚ್ಚಗಿನ ಕೌದಿಯಪೇಕ್ಷೆಯಲ್ಲಿ – ಮಕ್ಕಳಿಗಾಗಿ.

ರಗ್ಗು ಹೊದ್ದವರ ಎಗ್ಗಿಲ್ಲದೆದೆಗೆ
ಅರ್ಥವಾದೀತು ಹೇಗೆ ಕೌದಿಯ ಕರುಳು ?
ಅಲ್ಲ, ಅವ್ವನೆದೆಯಾವರಿಸಿದಕ್ಕರೆ ಎಂದೂ ಮರುಳು.

**ಡಾ॥ ಬಸವರಾಜ ಸಾದರ**
ನಂ. ೨೨೭/ಎ, ೧ನೇ ಮಹಡಿ
೩೭ನೇ ಕ್ರಾಸ್, ೭ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦




# ಅಂಕಿತ ಪುಸ್ತಕ




ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು

53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು–560 004

☎: 2661 7100, 2661 7755

## ಇತ್ತೀಚಿನ ನಮ್ಮ ಕೆಲವು ಪ್ರಮುಖ ಪ್ರಕಟಣೆಗಳು



































**ಕರ್ನಾಟಕ ಸರ್ಕಾರ - ಕಾರ್ಮಿಕ ಇಲಾಖೆ**





RSBY

# ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನೆ

**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು



**ಶ್ರೀ ಪಿ. ಟಿ. ಪರಮೇಶ್ವರ ನಾಯ್ಕ**
ಸನ್ಮಾನ್ಯ ಕಾರ್ಮಿಕ ರಾಜ್ಯ ಸಚಿವರು ಮತ್ತು
ಬಳ್ಳಾರಿ ಜಿಲ್ಲಾ ಉಸ್ತುವಾರಿ ಸಚಿವರು



## ಉಚಿತ ಆರೋಗ್ಯ ಸೌಲಭ್ಯ ನಾಡಿಗೆ ಅಭಿವೃದ್ಧಿಯ ಭಾಗ್ಯ

- RSBYಯೋಜನೆಯಡಿ ಸ್ಮಾರ್ಟ್‌ಕಾರ್ಡ್ ಪಡೆದ ಫಲಾನುಭವಿ ಕುಟುಂಬದ ಅರ್ಹ 5 ಸದಸ್ಯರುಗಳವರೆಗೆ ವಾರ್ಷಿಕ ಗರಿಷ್ಠ ರೂ. 30,000/- ವಿಮಾ ಸೌಲಭ್ಯ.
- ರಾಜ್ಯದಾದ್ಯಂತ 811 ನೋಂದಾಯಿತ ಆಸ್ಪತ್ರೆಗಳಲ್ಲಿ 1516ಕ್ಕೂ ಹೆಚ್ಚು ಚಿಕಿತ್ಸಾ ಕ್ರಮಗಳಿಗೆ ಉಚಿತ ಹಾಗೂ ನಗದು ರಹಿತ ಚಿಕಿತ್ಸೆ.
- ಆಸ್ಪತ್ರೆಗೆ ದಾಖಲಾಗುವ ಫಲಾನುಭವಿಗಳಿಗೆ ಪ್ರತಿ ಭೇಟಿಗೆ ರೂ. 100/-ರಂತೆ ವಾರ್ಷಿಕ ಗರಿಷ್ಠ ರೂ. 1000/- ಮಿತಿಗೊಳಪಟ್ಟು ಪ್ರಯಾಣ ವೆಚ್ಚ ನೀಡಲಾಗುವುದು.
- ಈಗಾಗಲೇ ಅಸ್ತಿತ್ವದಲ್ಲಿರುವ ಎಲ್ಲಾ ಖಾಯಿಲೆಗಳು (Pre-Existing Diseases) ಮತ್ತು ಹೆರಿಗೆ ಚಿಕಿತ್ಸೆ ವೆಚ್ಚ ಹಾಗೂ ವಿಮಾ ಅವಧಿಯಲ್ಲಿ ಜನಿಸುವ ಶಿಶುಗಳಿಗೂ ಸಹ ಉಚಿತ ವಿಮಾ ಸೌಲಭ್ಯ ದೊರಕಲಿದೆ.
- ಒಂದೇ ಕುಟುಂಬದ ಸದಸ್ಯರು ಬೇರೆ ಬೇರೆ ಸ್ಥಳಗಳಲ್ಲಿ ವಾಸವಿದ್ದಲ್ಲಿ, ಅಂತಹ ಸಂದರ್ಭದಲ್ಲಿ ರೂ. 30,000/- ಮೀರದಂತೆ ಹೆಚ್ಚುವರಿಯಾಗಿ ಮತ್ತೊಂದು ಕಾರ್ಡ್ (Split Card) ನೀಡಲು ಅವಕಾಶವಿದೆ.
- ಭಾರತ ಸರ್ಕಾರ ಹಾಗೂ ಕರ್ನಾಟಕ ರಾಜ್ಯ ಸರ್ಕಾರ ಇವುಗಳ ಸಂಯುಕ್ತ ಆಶ್ರಯದಲ್ಲಿ ಯೋಜನೆಯ ಅನುಷ್ಠಾನ.




**ಪಿ.ಬಿ. ರಾಮಮೂರ್ತಿ,** ಭಾ.ಅ.ಸೇ.
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಕಾರ್ಮಿಕ ಇಲಾಖೆ

**ಡಾ. ಡಿ. ಎಸ್. ವಿಶ್ವನಾಥ್,** ಭಾ.ಅ.ಸೇ.
ಕಾರ್ಮಿಕ ಆಯುಕ್ತರು ಹಾಗೂ ಅಧ್ಯಕ್ಷರು
ಕ.ರಾ.ರಾ.ಸ್ವಾ.ಬಿ.ಯೋ. ಸೊಸೈಟಿ, ಕಾರ್ಮಿಕ ಇಲಾಖೆ

**ಕರ್ನಾಟಕ ರಾಜ್ಯ ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನಾ ಸೊಸೈಟಿ**

**ಉಚಿತ ಸಹಾಯವಾಣಿ: 1800 425 2646**
ಹೆಚ್ಚಿನ ಮಾಹಿತಿಗಾಗಿ ಆಯಾ ಜಿಲ್ಲೆಯ ಕಾರ್ಮಿಕ ಅಧಿಕಾರಿ / ಸಹಾಯಕ ಕಾರ್ಮಿಕ ಆಯುಕ್ತರನ್ನು ಸಂಪರ್ಕಿಸಬಹುದಾಗಿದೆ.

ಕಾರ್ಮಿಕ ಭವನ, ಡೈರಿ ಸರ್ಕಲ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560029.
ದೂರವಾಣಿ ಸಂಖ್ಯೆ : 080-26654884 / 26650154, ಫ್ಯಾಕ್ಸ್ : 080-26654884, ವೆಬ್‌ಸೈಟ್ : www.rsby.gov.in ಇ-ಮೇಲ್ : ceorsbykarnataka@gmail.com

# ಜೋಗ



ವಿಮಾ ಅಧಿಕಾರಿ ಕೊಟ್ಟ ಚೆಕ್ ಹಿಡಿದು ಆ ತಾಯಿ ಮೂಗು ಬಾಯಿ ಒರೆಸಿಕೊಳ್ಳುತ್ತ ಮುಂದೆ ಕುಳಿತು ನನ್ನನ್ನೆ ದಿಟ್ಟಿಸುತ್ತಿದ್ದಳು... ಆರಲೊಲ್ಲದ ಉರಿ. ಕಣ್ಣಿಂದ ನೀರು ಹೊಳಿಯಾಗಿ ಹರಿತಿತ್ತು. ಜೀವಕ್ಕೆ ಬೆಲೆನೇ ಇಲ್ಲ. ಬಿದ್ದುಹೋಗುವ ಜೀವ. ಸತ್ರೆ ಹಳೇ ನಾಯಿನೂ ಮೂಸಿ ನೋಡಲ್ಲ ಎಂಬುದೆಲ್ಲ ಹಳಸಿದ ಮಾತು. ಮಾನವ ಇದ್ದರೂ ಬೆಲೆ ಬಿದ್ದು ಹೋದರೂ ಬೆಲೆ ಅನ್ನೋದಕ್ಕೆ ಸಾಕ್ಷಿಯಾಗಿ. ಕೈಯೊಳಗಿನ ಚೆಕ್ ಮುಖವನ್ನೇ ನೋಡಿದೆ. ಅದರಲ್ಲಿ ತೇಲಿಬಂದ ಆ ಮುಗ್ಧ ಅರಳುವ ಪ್ರತಿಭೆ ಹೀಗೆ ಅರ್ಧದಲ್ಲಿಯೇ ದಡ ಮುಟ್ಟದ್ದೇ ಮುಳುಗಿದ್ದಾ? ಮುಳುಗಿಸಿದ್ದಾ...? ಹ್ಞೂಂ...ಹ್ಞೂಂ... ಮನಸ್ಸು ಭಾರವಾಗಿ ಒದ್ದಾಡತೊಡಗಿತು. ಒಮ್ಮೊಮ್ಮೆ ಹೀಗೆ ಕರಳ ನೆಂಟಸ್ತನ ಇಲ್ಲದೇ ಇದ್ದರೂ ಹಚ್ಚಿಕೊಂಡವರ ನೆನೆದು ಹನಿಯಾಗ್ತಿವಿ. ಯಾವ ಜನ್ಮದ ಋಣಾನುಬಂಧವೋ ದುಃಖ ಉಮ್ಮಳಿಸಿ ಗಂಟಲು ಕಟ್ಟಿತು. ಮೆಲ್ಲಗೆ ಆ ಚೆಕ್‌ಮೇಲೆ ಸವರಿದೆ. ಅವನೇ ಬೆನ್ನ ಕೊಟ್ಟು ಬಾಗಿ ನಿಂತಂತೆನಿಸಿತು. ಜೋಗನೊಂದಿಗೆ ಎದುರು ಬದುರಾದೆ. "ಏ... ಜೋಗ ಏ... ಜೋಗ...!" ಅವನು ಕೇಳಿಸಿಕೊಳ್ಳದಾದ.

✶ ✶ ✶

ಆಫೀಸ್ ಛೇಂಬರಿನ ಮುಂದೆ ನೆರಳು ಗಡಿಯಾರದ ಲೋಲಾಕು ಆಕಡೆ ಈಕಡೆ ಟಕ್–ಟಕ್ ಅಂತ–ತಿರುಗುವಂಗ, ಚಪ್ಪಲಿ ಸಪ್ಪಳದ ಜೊತೆಗೆ ಆಕಡೆ ಈಕಡೆ ತಿರುಗುವ ನೆರಳನ್ನು ಕಂಡ ಆ ಕಾಲೇಜಿನ ಪ್ರಿನ್ಸಿಪಾಲ್ ಮೇಡಂ ಆದ ನಾನು ಸ್ವಲ್ಪ ತಲೆ ಮುಂದೆ ಮಾಡಿ ಬಾಗಿ "ಯಾರು ?" ಎಂದೆ.

ಉತ್ತರ ಬರಲಿಲ್ಲ. ಮತ್ತೆ ಮುಂದೆ ಟೇಬಲ್ ಮೇಲಿದ್ದ ಪೇಪರಗಳಿಗೆ ಸಹಿ ಹಾಕತೊಡಗಿದೆ. ಮತ್ತೇ ಅದೇ ನೆರಳು. ಈ ಸಾರೆ ಕಾಲಿಂಗ್ ಬೆಲ್ಲ ಒತ್ತಿದೆ...ಓಡಿ ಬಂದ ಪ್ಯೂನ್... "ಮೇಡಂ...!" ಎಂದು ಆಜ್ಞೆಗೆ ಕಾದವನಂತೆ ನಿಂತುಕೊಂಡವನಿಗೆ, ಸ್ವಲ್ಪ ಸಿಡುಕಿನಿಂದಲೇ, "ಯಾರು ನೋಡು"? ಎಂದಾಗ, ಹೊರಗ ಹೋದ ಪ್ಯೂನ್ ಆಳೆತ್ತರ ಹುಡುಗನೊಂದಿಗೆ ಒಳಗೆ ಬಂದ. ಕೈಯಲ್ಲಿ ಸುರುಳಿ ಸುತ್ತಿ ಪೇಪರಗಳನ್ನು ಹಿಡಿದುಕೊಂಡು ನಿಂತವನ, "ಏನೋ...? ಯಾಕ ಹಂಗ ಮಾಡತಿದ್ದಿ...! ಒಳಗ ಬರಬೇಕಲ್ಲ...!" ಗತ್ತಿನಿಂದ ಕೇಳಿದೆ.

"...ಟಿಸಿಎಚ್‌ಕ್ಕೆ ಎಡ್ಮಿಶನ್ ಮಾಡಸಾಕ ಬಂದೀನಿ !" ಮಾತಿನಲ್ಲಿ ಒರಟುತನ. ನಯ ವಿನಯ ಕಾಣಲಿಲ್ಲ... ಅವನ ಮಾತಿನ ವರಸೆಗೆ

■ ಲಲಿತಾ ಕೆ. ಹೊಸಪ್ಯಾಟಿ

ಹೌಹಾರಿ ...ಅವನನ್ನೊಮ್ಮೆ ದಿಟ್ಟಿಸಿದೆ. ಉದ್ದನೆಯ ಗುಂಗುರು ಕೂದಲು ಭುಜ ಮುಟ್ಟಿತ್ತು. ನೀಲಿ ಕಂಗಳ ಕೆಳಗೆ ಅದೇ ತಾನೇ ಚಿಗುರುತ್ತಿದ್ದ ಮೀಸೆ ಕಣ್ಣಿಗೆ ಹೊಡೆಯುವಂತಿದ್ದ ಕೆಂಪು ಬಣ್ಣದ ಟೀ ಶರ್ಟ. ಕೆಳಗೊಂದು ಗಾಢ ನೀಲಿ ಜೀನ್ಸ್. ಯಾವುದೋ ಒಂದು ಸಿನಿಮಾದ ಮಿನಿ ರೌಡಿಯಂತೆ ಕಂಡ. ಅವನ ಮಾತು, ವೇಷಭೂಷಣ, ನಿಂತ ರೀತಿ ನೋಡಿ ಗಡಿಬಿಡಿಗೊಂಡು... "ನೀನಾ...! ಡಿಇಡಿ ಮಾಡತಿ...!" ಗಾಬರಿಯಿಂದ ಕೇಳಿದೆ. ಹ್ಞೂಂ...! "ಇಲ್ಲೇ ಸೀಟು ಸಿಕ್ಕದ. ಅದಕ್ಕೆ ಹೆಸರ ಹಚ್ಚಾಕ ಬಂದೀನಿ...!" ಅದೇ ಮಾತು. ಆಗಲೇ ಕ್ಲರ್ಕ ಗಿರಿಜಾ ಕೊಟ್ಟು ಕಳಿಸಿದ್ದ ಎಡ್ಮಿಶನ್ ಫಾರ್ಮ ಮತ್ತು ಸೆಲ್‌ನವರ ಸಿಲೆಕ್ಸನ್ ಫಾರ್ಮನ್ನು ನನ್ನ ಮುಂದೆ ಟೇಬಲ್ ಮೇಲೆ ಇಟ್ಟು "ಸಹಿ ಮಾಡ್ರಿ...!" ಎಂದ. ಆ ಫಾರ್ಮ ಮತ್ತು ಫೋಟೋ ನೋಡಿ...

ಹೆಸರ ಕಡೆ ಕಣ್ಣಾಡಿಸಿದಾಗ... ಜೋಗಪ್ಪ ಎಂದಿತ್ತು. ಅವನನ್ನೊಮ್ಮೆ, ಆ ಪೇಪರನ್ನೊಮ್ಮೆ ಮೇಲೆ ಕೆಳಗೆ ನೋಡಿದಾಗ ಜೋಗಿ ಸಿನಿಮಾ ನೆನಪಾಯಿತು. ಮಾರ್ಕ್ಸ್ ನೋಡಿದರೆ ಎಂಭತ್ತಕ್ಕೂ ಅಧಿಕ ಪರ್ಸೆಂಟೇಜ್ ಪಡೆದಿದ್ದ... ಅವನ ರೀತಿ ಸರಿಬರದಿದ್ದಾಗ, "ಮೊದಲು ನಿನ್ನ ಆಕಾರ ಚೇಂಜ್ ಆಗಬೇಕು. ಈ ಡ್ರೆಸ್ ಇಲ್ಲಿ ನಡೆಯಂಗಿಲ್ಲ. ಕೂದಲಿಗೆ ಕತ್ತರಿ ಹಾಕ್ಕೊ" ಎಂದೆ. ನನ್ನನ್ನೇ ದುರುಗುಟ್ಟಿ ನೋಡಿದ. "ಹ್ಞೂಂ ಆಗಲಿ... ಹ್ಞೂ...ಹ್ಞೂ... ಆಗಲಿ" ಎಂದು ಹೇಳದೆ ಸಹಿ ಹಾಕಿಸಿಕೊಳ್ಳಾಕ ಎದುರಿಗಿ ನಿಂತೇ ಇದ್ದ ಜೋಗಪ್ಪ.

✶ ✶ ✶

ಎರಡು ದಶಕ ಪೂರೈಸಿದ ಸರ್ವಿಸನೊಳಗ ಕೈಕಟ್ಟಿಕೊಂಡು ದೂರ ನಿಂತು ಮುಖಕ್ಕ ...ಮುಖ ಕೊಟ್ಟು ಮಾತಾಡಾಕೂ ಹಿಂದುಮುಂದು ನೋಡಿ ನೆಲ ನೋಡಿ, ತುಟಿ ತೆರೆತಿದ್ದ ಟ್ರೇನಿಂಗ್ ಕಾಲೇಜು ಹುಡುಗರನ್ನ ಕಂಡಿದ್ದ ಪ್ರಿನ್ಸಿಪಾಲ ಮೇಡಂ... ನಾ...!...ಅಂತದ್ರಾಗ... ಬೆಳ್ಳಂಬೆಳಗ್ಗೆ ಎದುರಿಗಿ, ಎದಿ ಸೆಟೆಸಿ, ಅದೂ ಏಕವಚನದಾಗ ಮಾತಾಡಿದ್ದು ಕೇಳಿ ಸಿಟ್ಟು ಒಮ್ಮೆಲೇ ನೆತ್ತಿಗೇರಿತು.

"...ಹುಚ್ಚನಂಗ ಹಿಂಗ್ಯಾಕ ನಿಂತಿ...! ಹಾದಿಗೀದಿ ತಪ್ಪಿ ಬಂದಿಯೇನು ? ನೋಡ ... ಇದು ಟ್ರೇನಿಂಗ್ ಕಾಲೇಜು. ಇಲ್ಲಿ ನಿಂತ್ರು ನೇಮ. ಕುಂತ್ರು ನೇಮ. ನಾಳೆ ಸಾಲೀ ಮಾಸ್ತಾರ ಆಗಬೇಕು. ನಿನ್ನ ನೋಡಿ ಮಕ್ಕಳು ಕಲಿಬೇಕು. ಈಗಿಂದಲೇ ಮಕ್ಕಳ ತಯಾರಿ ಮಾಡು. ಪಾಠ ನಡೀತದ. ಹಿಂಗ ಎಡಬಿಡಂಗಿ ಹಂಗ ಬಂದ್ರ ನಡೆಯಂಗಿಲ್ಲ. ನೋಡಾಕ ಬಣ್ಣ ಚಂದ ಐತಿ. ಗುಣಾನೂ ಚಂದ ಇರಬೇಕು. ಇದು ಬೇರ ಕಾಲೇಜುಗಳಂಗಲ್ಲ...ನಾವು ಸುದ್ದ ಆದ್ರ ...ಮುಂದ ಸಾಲಿ ... ಸುದ್ದ ಆಗತಾವ ತಿಳೀತಾ...!" ಅಂದೆ. ಎದುರಿಗಿ ಎರ್ರಾಬಿರ್ರಿ ತಲೆ ಕೆದರಕೊಂಡು ನಿಂತಿದ್ದ ಹುಡುಗನಿಗೆ. ಪ್ರಿನ್ಸಿಪಾಲಳಾಗಿ ಜವಾಬ್ದಾರಿಯಿಂದ ಎರಡು ಮಾತಾಡಿ ಮುಂದಿದ್ದ ಪೇಪರದೊಳಗ ಕಣ್ಣಾಡಿಸುತ್ತಾ, "...ಈ ಸಡಗರಕ ಯಾಕಾದರೂ ಶಿಕ್ಷಕರಾಗಾಕ ಬರತಾರೋ ಪುಣ್ಯಾತ್ಮರು... ಇಂತವರನ್ನ ತಿದ್ದಿ, ಪಾಠ ಹೇಳಾಕ ತಯಾರಮಾಡಿ, ನಾಲ್ಕು ಗೋಡಿ ಮಧ್ಯ ಅರಳುವ ಮಕ್ಕಳ ಭವಿಷ್ಯಕ್ಕ ಬುನಾದಿ ಹಾಕೋದು ಅಂದರ, ಅದೇನು ತಿಪ್ಯಾಗಿನ ಮಣ್ಣ ಕೆದರಿ ಹುಳ ತಿನ್ನು ಕೋಳಿ ಹಂಗ ಅಲ್ಲೀಟು ಇಲ್ಲೀಟು ಕೆದರುದಲ್ಲ. ಜೀವ ಜೀವನ ಒತ್ತಿ ಇಡಬೇಕು. ಪಾಠ ಮಾಡೋರು ಮತ್ತ ಪಾಠ ಮಾಡಿಸಿಕೊಳ್ಳೋರು... ಅಲ್ಲಾ... ಗಿರಿಜಾ...!" ಎದುರಿಗಿ ಬಂದು ನಿಂತ ಕ್ಲರ್ಕ ಗಿರಿಜಾಳ ನೋಡಿ ಹೇಳಿದೆ.

"ಹೌದ್ರಿ ಮೇಡಂರೀ ! ಅವ ನೋಡ್ರಿ, ಹೆಂಗ ದೇವರಿಗಿ ಬಿಟ್ಟ ಗೂಳಿ ಹಂಗ ಬುಸಗುಟತಾನ. ಒಂದೀಟು ಸಾಹೇಬರ ಮುಂದ ತಗ್ಗಿ ಬಗ್ಗಿ ಮಾತಾಡಬೇಕಪ್ಪ ...!" ಬುದ್ಧಿಮಾತನ್ನು ಆಕೀನೂ ಹೊರಹಾಕಿದಳು.

ಅದೇ ವೇಳೆಗೆ ಇಂಗ್ಲಿಷ ಮೇಡಂ ರಜಾ ಹಾಕಿ ಹೋಗಿದ್ದಕ್ಕಾಗಿ ತಮ್ಮ ಇಂಗ್ಲಿಷ ಲೆಸನ್ ನೋಟ್ಸ್ ತಿದ್ದಿಸಿಕೊಂಡು, "ಇನ್ನ ಪಕ್ಕಾ ಲೆಸನ್ ನೋಟ್ಸ್ ಬರೀಬೇಕು ಇಲ್ಲಾಂದ್ರ...! ಪಕ್ಕಾಕ್ಕ ಸಹಿ ಇಲ್ಲದ ಹೋದರ ಪಾಠ ಕೊಡಾಕ ಹೋದ ಕನ್ನಡ ಸಾಲಿನೋರು ನೀವು ಪಾಠ ತಯಾರಿಯಿಲ್ಲದ ಹಂಗ ಬಂದೀರಿ. ಪಾಠ ಕ್ಯಾನ್ಸಲ್ ಮಾಡೀವಿ ಹೋಗ್ರಿ ಅಂತ ಕಳಿಸ್ತಾರ...!" ಎಂದು ಗಟ್ಟಿ ಸಬೂಬಿನೊಂದಿಗೆ ಇಂಗ್ಲಿಷ ಮೆಥೆಡ್ ತೆಗೆದುಕೊಂಡಿದ್ದ ಐದಾರು ಹುಡುಗರು ಪಾಠ ಯೋಜನೆ ಹಿಡಿದು ಅಲ್ಲೇ ಬಾಗಿಲ ಹೊರಗ ಪ್ರಿನ್ಸಿಪಾಲರಿಂದ ಚೆಕ್ ಮಾಡಿಸಿಕೊಳ್ಳಬೇಕು ಎಂದು ಅನುಮತಿಗೆ ಕಾಯ್ದುಕೊಂಡು ನಿಂತಿದ್ದರು. ಈ ಒಳಗ ನಿಂತ ಹುಡುಗನ ವಿಚಿತ್ರ ನಡವಳಕಿ ಕಂಡು... ಇನ್ನ ಮತ್ತ ತಮಗೆಲ್ಲಿ ಸುತಗೊಂಡೀತು, ಈ ಸಿಟ್ಟಿನ ವೇಳಾದೊಳಗ ಯಾವ ಪಾಠಾನೂ ಬೇಡ ಏನೂ ಬೇಡ ಅಂದುಕೊಂಡ ಹುಡುಗರು ಹೆಜ್ಜೆ ಸಪ್ಪಳ ಮಾಡದಂಗ ಮೆಲ್ಲಗೆ ಅಲ್ಲೇ ತಾವೇ ಬೆಳೆಸಿದ ಗಾರ್ಡನ್‌ನೊಳಗಿನ ಹಸಿರು ಹುಲ್ಲಿನ ಮೇಲೆ ಹೋಗಿ ಕುಂತರು.

✶ ✶ ✶

ಹೊರಗ ನಿಂತ ತನ್ನ ವಾರಗಿ ಹುಡುಗರ ಮುಂದ ಅಸಹ್ಯ ಆತು ಅಂತ ಅನಕೊಂಡ ಹುಡುಗ... "ಏನು ಹೆಸರ ಹಚಕೋತೀರ..! ಇಲ್ಲಾ

ಅಪ್ಪ ಹೇಳಿರಿ...! ನನಗೆ ರಗಡ ಕೆಲಸ ಅದಾವು. ಏನ್ ಸುಮ್ನ ಕಲೀಬೇಕಂತ ಬಂದೀನಿ" ಅಂದಾಗಲೇ ತಿಳಿದದ್ದು, ಇವನೂ ಎಲ್ಲಿ ಸಲ್ಲದವರು ಇಲ್ಲಿ ಸಲ್ಲತಾರ ಅನ್ನುವಂಗ ಕೊನೀ ಪ್ರಯತ್ನ ಅಂತ ಬಂದ ಅಸಾಮಿ ಅಂತ. ಯಾರದೋ ಒತ್ತಾಯಕ್ಕೆ ಬಂದಿರಬೇಕು ಅನಿಸಿತು.

ಅದೇ ಹೊತ್ತಿಗೆ ಅವನ ಸರ್ಟಿಫಿಕೇಟ್ ನೋಡಿದಾಗ ಅಪ್ಪನ ಹೆಸರಿನ ಮುಂದ ಖಾಲಿ... ತಾಯಿ ಹೆಸರಿನ ಮುಂದೆ ಮಾತ್ರ ರೇಣುಕಾ ಅಂತ ಬರೆದಿತ್ತು. ಆದರ...ಯಾಕೋ ಮನಸು ಕಲಕಿದಂತಾಗಿ ಬಿಸಿ ನಿಟ್ಟುಸಿರು ಹೊರಬಂತು.

✳ ✳ ✳

ಎಡ್ಮಿಶನ್ ಆದ ಮೇಲೆ ಆ ಜೋಗಪ್ಪ ಹೋಗಿಬಿಟ್ಟಿದ್ದ. ಯಾಕೊ ಏನೋ ಆ ಹುಡುಗನ ಬಗ್ಗೆ ಅನುಕಂಪನೋ, ಸಹಾನುಭೂತಿಯೋ, ಅಂತಃಕರಣವೋ ಏನೋ ಪದೇ ಪದೇ ಮನಸ್ಸು ಯೋಚಿಸತೊಡಗಿತು. ಹೋಗಲಿ ಬಿಡು...! ಎಂದು ತಾತ್ಸಾರ ಮಾಡಲಿಲ್ಲ. ಮರುದಿನ ಪ್ರಾರ್ಥನೆ ವೇಳೆಯಲ್ಲಿ ಶಿಸ್ತಿನಿಂದ ಸಮವಸ್ತ್ರದಲ್ಲಿ, ನಿಂತಿದ್ದ ಪ್ರಶಿಕ್ಷಣಾರ್ಥಿಗಳತ್ತ ಒಮ್ಮೆ ಕಣ್ಣಾಡಿಸಿದೆ. ಅವನೆಲ್ಲೂ ಕಾಣಲಿಲ್ಲ. "ನಿನ್ನೆ ಎಡ್ಮಿಶನ್ ಆಗಿದ್ದನಲ್ಲ...ಆ ಜೋಗಪ್ಪ ಬರಲಿಲ್ಲ? ಎಲ್ಲಿದ್ದಾನ...! ಹಾಸ್ಟೆಲ್ನಲ್ಲಿ ಯಾವ ರೂಮು" ಎಂದೆ. ಹಾಸ್ಟೆಲ್ ವಾರ್ಡನ್ ಪ್ರಾರ್ಥನೆ ಸಾಲಿನಲ್ಲಿ ನಿಂತವರು "ಮೇಡಂ, ಸೆಕೆಂಡ್ ರೂಮ್" ಎಂದರು. ಆ ಸೆಕೆಂಡ್ ರೂಮ್ ಹುಡುಗರನ್ನು ಕೇಳಬೇಕು ಎನ್ನುವ ಮೊದಲೇ ಜೋಗಪ್ಪ ಕೈ ಬೀಸಿಕೊಂಡು ಬಂದು ಸಾಲಿನೊಳಗ ಸೇರಿಕೊಂಡ. ಎಲ್ಲರ ಮುಂದೆ ಬಯ್ಯುವುದು ಬೇಡ ಎಂದು ಥೇಂಬರಿಗಿ ಬಂದು ಆ ಹುಡುಗನ ವಿಚಿತ್ರ ನಡವಳಿಕೆ ಬಗ್ಗೆ ಯೋಚಿಸತೊಡಗಿದೆ.

✳ ✳ ✳

ಮರುದಿನದಿಂದಲೇ ಕಾಣೆಯಾಗಿದ್ದ ಜೋಗಪ್ಪ ಎಂಟು ದಿನ ಬಿಟ್ಟು ಬಂದವನೇ, "ಐದುನೂರು ರೂಪಾಯಿ ಬೇಕು. ಕೊಡ್ರಿ !" ಎಂದು ನೇರವಾಗಿ ಕೇಳಿದ್ದ. ಈ ಸಾರೆ ಅವನ ಮಾತು ಏಕವಚನದಿಂದ ಬಹುವಚನಕ್ಕೆ ಇಳಿದಿತ್ತು ಯಾಕೆ...? ಎಂದು ಕೇಳಿದ ಕಣ್ಣಿನ ಭಾಷೆ ಅರ್ಥವಾದಂತೆ ತಾನೆ, "ರೊಕ್ಕ...ಇಲ್ಲ...! ನೋಟ್ ಪುಸ್ತಕ. ಡ್ರೆಸ್ ಎಲ್ಲ ತೊಗೋಬೇಕು" ಎಂದ. ಅವನ ಮುಖದಲ್ಲಿ ಈಗ ಕಳೆ ಎದ್ದು ಕಾಣುತ್ತಿತ್ತು. ಒರಟು ಸ್ವಭಾವವಿದ್ದರೂ ಅವನ ನಿಷ್ಕಲ್ಮಶವಾದ ನೇರಮಾತು ಕೇಳಿ..., "ಯುನಿಫಾರ್ಮ್ಂ ನಾನೇ ಕೊಡಸ್ತೀನಿ. ಬುಕ್ಸ್ ಎಲ್ಲ ಲೈಬ್ರರಿಯಲ್ಲಿವೆ ತೊಗೋ. ಖರ್ಚಿಗೆ ಬೇಕಿದ್ರೆ ದುಡ್ಡು ತೊಗೋ. ಆಮೇಲೆ ಕೊಡವಿಯಂತೆ" ಎಂದು ಆಜ್ಞೆಯಂತೆ ಹೇಳಿ ಐದು ನೂರು ರೂಪಾಯಿ ಕೊಟ್ಟು ಕಳಿಸಿದೆ. ಅವನು ಹೋದಮೇಲೆ ತಂದೆಯಿಲ್ಲದ ಈ ತಬ್ಬಲಿ ಎರಡು ವರ್ಷ ಡಿ. ಇಡಿ. ಮುಗಿಸಿಕೊಂಡು ಹೋಗುವಂತಾಗಲಿ, ನಮ್ಮ ಕೈಲಾದಷ್ಟು ಹೆಲ್ಪ ಮಾಡಿದರಾಯಿತೆಂದು, ಮನಸ್ಸಿನೊಳಗೆ ಯೋಚಿಸುತ್ತಾ ಕೆಲಸದಲ್ಲಿ ಮಗ್ನವಾದೆ.

✳ ✳ ✳

ಎಂಟು ಹತ್ತು ದಿನ ಕಳೆದಿರಬೇಕು. ಕಾಲೇಜಿಗೆ ಬಂದಿರಲಿಲ್ಲ. ರೂಮ್‌ಮೇಟ್ ಗಳಾಗಿದ್ದ ಕಲ್ಲೇಶ, ಫಕೀರಪ್ಪರನ್ನು ವಿಚಾರಿಸಿದಾಗ, "ಅವರವ್ವಗ ಹುಷಾರಿಲ್ಲಂತರೀ. ನೋಡಿಕೊಂಡು ಬರಾಕ ಹೋಗ್ಯಾನ" ಅಂದರು, ಮತ್ತೆ ಬಂದು ಎದುರಿಗೆ ನಿಂತ. "ಇಷ್ಟು ದಿನ ಎಲ್ಲಿ ಹಾಳಾಗಿ ಹೋಗಿದ್ದೀ...! ಇಲ್ಲಿ ಒಂದು ದಿನ ಬಿಟ್ಟರೂ ಅಭ್ಯಾಸ ಮುಂದೆ ಹೋಗುತ್ತೆ. ಬುದ್ಧಿ ಇಲ್ಲ?" ಎಂದೆ. ಬೈದರೂ ತುಟಿಪಿಟಿಕ್ಕೆನ್ನದೇ ತಲೆತಗ್ಗಿಸಿ



## ಕುಮುದಿನಿ

ಆಗಸದಲ್ಲಿರುವ ಚಂದಿರನ ಅಂದ ಚಂದಕ್ಕೆ
ಆತ ನೀಡುವ ಬೆಳದಿಂಗಳ ಹಿತಾನುಭವಕ್ಕೆ
ಅರಳಿದಳು ಸರೋವರದ ಚಂದ್ರಕಮಲಿನಿ
ಚಂದ್ರ ಮರೆಯಾದಂತೆ ವಿರಹದಿ ಮುನಿಸಿಕೊಳ್ಳುತ್ತಾ
ಇರುಳನೊಂದಿಗೆ ನಾಳೆ ಬರುವನೆಂದು ಕಾಯುತ್ತ
ಮೆಲ್ಲಮೆಲ್ಲನೆ ಮುದುಡಿಕೊಳ್ಳುತ್ತಾಳೆ ಈ ಕುಮುದಿನಿ

**ಸದಾನಂದ ನಾರಾವಿ**
ಮೂಡುಬಿದಿರೆ, ಮಂಗಳೂರು (ದ.ಕ.)

ನಿಂತುಕೊಂಡಿದ್ದ. "ಹಾಳಾಗಿ ಹೋಗು, ನನಗೇನು?" ಎಂದು ಅಸಹನೆಯಿಂದ ಹೇಳಿದಾಗ ತಲೆ ತಗ್ಗಿಸಿಕೊಂಡೇ ಹೊರಟುಹೋಗಿದ್ದ. ಅವನಿಗೆ ಅದು ದಿನಚರಿ ಯಾಯಿತು. ಪಾಠ ಯೋಜನೆ ಬರೆಯದೆ ಪಾಠ ಕೊಡಲು ಹೋಗಿ ಒಮ್ಮೆ ಬೈಸಿಕೊಂಡ ಮೇಲೆ, ಮತ್ತೊಮ್ಮೆ ಟೆಸ್ಟಿಗೆ ಕೂತಿರಲಿಲ್ಲ. ಅಸಾಯಿನ್‌ಮೆಂಟ್ ಕೊಟ್ಟಿಲ್ಲವೆಂದು ವಿಜ್ಞಾನ ವಿಭಾಗದ ಉಪನ್ಯಾಸಕರು ಇಂಟರ್‌ನಲ್ ಮಾರ್ಕ್ಸ್ ಬರುವುದಿಲ್ಲವೆಂದು ಕಂಪ್ಲೇಂಟ್ ಹೇಳಿದರು. ಬೇಜವಾಬ್ದಾರಿ ಹುಡುಗ ಶಿಕ್ಷಕನಾದರೆ ಎಷ್ಟು ಮಕ್ಕಳ ಜೀವನ ಹಾಳುಮಾಡತಾನೋ ದೇವರೇ ಬಲ್ಲ. ಫೇಲಾಗಲೀ ಬಿಡಿ ಎಂದೆನಾದರೂ ಮನಸ್ಸಿನಲ್ಲಿ ಅವನನ್ನು ಸರಿದಾರಿಗೆ ತಂದು ಎರಡು ವರ್ಷ ಪರೀಕ್ಷೆ ಮುಗಿಸಿಕೊಂಡೇ ಹೋಗುವಂತೆ ಮಾಡಬೇಕು ಎಂದು ಅವನನ್ನು ಬಂದು ಕಾಣಲು ಹೇಳಿ ಕಳಿಸಿದಾಗ ಜೋಗಪ್ಪ ಮತ್ತೆ ನಾಪತ್ತೆ.

✳ ✳ ✳

"ಅವ್ವಾ ...!" ಸಣ್ಣನೆಯ, ಧ್ವನಿಯೊಂದಿಗೆ ಒಳ ಬಂದವಳನ್ನು ಒಮ್ಮೆ ಮೇಲಿಂದ ಕೆಳಗೆ ದಿಟ್ಟಿಸಿದೆ. ಎದುರಿಗೆ ನಿಂತವಳ ಸೀರೆ ಹಳೆಯದಾಗಿದ್ದರೂ ಲಕ್ಷಣವಾಗಿ ಉಟ್ಟುಕೊಂಡಿದ್ದಳು. ಹಳದಿ ಮಾಸದ ಮುಖ, ಕೊರೆದಂತಿದ್ದ ಹುಬ್ಬು, ಕಾಡಿಗೆ ಹಚ್ಚಿದಂತಿದ್ದ ಕಾಸಿನಗಲ ಕಣ್ಣು, ನೀಳ ನಾಸಿಕ, ಬಣ್ಣ ಮೆತ್ತದಿದ್ದರೂ ಕೆಂಪಾಗಿದ್ದ ತುಟಿ. ಸೆರಗನ್ನು ತಲೆಮೇಲೆ ಹೊದ್ದಾಕೊಂಡು ಕೈಯೊಳಗೆ ಮಾಸಿದ ಪ್ಲಾಸ್ಟಿಕ್ ಕ್ಯಾರಿಬ್ಯಾಗ್ ಹಿಡಿದು ಬಾಗಿಲಲ್ಲಿ ನಿಂತಿದ್ದಳು. ಕಾಲೇಜಿಗೆ ಆಗಾಗ ಇಂಥವರು ಬರುತ್ತಿದ್ದರು. "ದಾರಿ ತಪ್ಪಿ ಬಂದಿನಿ, ಮಗ ಹೊಡೆದು ಹೊರ ಹಾಕ್ಯಾನ, ಮಗಳ ಮದುವೆ ಮಾಡಬೇಕು. ರೊಕ್ಕ ಕಳಕೊಂಡೀನಿ. ಬಸ್ ಚಾರ್ಜ ಕೊಡ್ರಿ. ದೂರದಿಂದ ಬಂದೀನಿ. ಮೂಕಿ. ಗಂಡನ ಆಪರೇಶನ್ ಮಾಡಿಸಬೇಕು. ಇವತ್ತ ಹಡದ ಹಸಿಕೂಸು ತಿನ್ನಾಕ ಇಲ್ಲಾ. ರೊಕ್ಕ ಕೊಡ್ರಿ ಅವ್ವಾರ. ನಿಮ್ಮ ಕಾಲ ಬೀಳತೀನಿ" ಎಂದು ಬಂದಾಗ ನಾನು ನನ್ನ ಜೊತೆಗೆ ನನ್ನ ಸಿಬ್ಬಂದಿಯೂ ಹತ್ತು ಇಪ್ಪತ್ತು ರೂಪಾಯಿ ಎತ್ತಿ ಕೊಟ್ಟರೂ ಅದು ಐದಾರು ನೂರು ರೂಪಾಯಿ ಆಗುತಿತ್ತು. ಅವರು, "ಯವ್ವಾ ..., ನಿನ್ನ ಹಡೆದ ಹೊಟ್ಟಿ ತಣ್ಣಗಿರಲಿ" ಅಂತ ಹಾರೈಸಿ ಹೋಗೋದು. ತಿಂಗಳಿಗೆ ಎರಡು ತಿಂಗಳಿಗೆ ಇಂತೋರು ಬರೋದು ವಾಡಿಕೆಯಾಗಿತ್ತು.

ಹಾಗೇ ಈಕೇನೂ ಬಂದಾಳೆಂದು ತಿಳಿದು, "ಹೇಳು...! ಏನ ಬೇಕು?" ಎಂದಾಗ ಆ ಹೆಣಮಗಳು, "ಇಲ್ಲ ರೀ. ನಿಮ್ಮ ಹತ್ರ ಮಗನ್ನ ಸಮಂದ ಬಂದೇನ್ರಿ...! ಇಲ್ಲೇ ಕಲೀತಾನರೀ. ಅವನನ್ನು ಕರಕೊಂಡು ಬಂದೇನ್ರಿ ಎಂದು ನಡುಗುವ ಸ್ವರದಲ್ಲಿ ಹೇಳಿದಳು. ಅವಳ ಕಣ್ಣೊಳಗೆ ಆಗಲೇ ನೀರು ಮಡುಗಟ್ಟಿತ್ತು. ಇವರು ಪಾಲಕರು ಎಂದ ತಕ್ಷಣ ನನ್ನ ಜವಾಬ್ದಾರಿ ಹೆಚ್ಚಾಗಿ, "ಬರ್ರಿ ಬರ್ರಿ. ಒಳಗ ಕೂಡ್ರಿ" ಎಂದು ಕುರ್ಚಿ ಕಡೆ ಕೈ ತೋರಿಸಿದೆ. ಹಳೆಯ ಥೇಟ್ ಸಿನಿಮಾ ನಟಿಯಂತೆ ಕಂಡ ಅವಳ ಚೆಲುವಿಗೆ ನಾನೇ ಮಾರುಹೋದೆ. ಕಣ್ಣು, ತುಟಿ, ಬಣ್ಣ, ಕೂದಲು ಬಣ್ಣಿಸುವಂತಿದ್ದ ರೂಪದಂತೆ ಅವಳ ಧ್ವನಿಯೂ ಮಧುರ ವಾಗಿತ್ತು. ಅವಳೇ ಹೇಳತೊಡಗಿದಳು.

"ಹುಟ್ಟಿನಿಂದಲೂ ಇಂದಿನವರೆಗೂ ಸುಖ ಎಂದರೇನು ಅಂತ ಗೊತ್ತಿಲ್ಲರೀ. ತೊಗಲ ಚೆಂದ ಐತಿ ಅಂತ–ಅಪ್ಪ ಅವ್ವ ಮುತ್ತ ಕಟ್ಟಿಸಿದರಿ. ಹಾಂಗss ಬದುಕೊಂಡೆರೀ. ಪ್ರಾಣ ಅಂದ್ರ ಈ ಗಂಡಸ ಮಗ ಜೋಗಪ್ಪರೀ, ಈಗ ನಿಮ್ಮಲ್ಲಿಯೇ ಕಲಿಯಾಕ ಬಂದಾನರೀ. ಈಗ

ಗರ್ಭಕೋಶದ ತೊಂದರಿಯಾಗೇದ, ಆಪರೇಶನ್ ಮಾಡಿಸಿಕೋಬೇಕು. ಸೊರಗಿದ್ದಕ್ಕ ಮಂದಿ ಏಡ್ಸ್ ಆಗೇದ ಅಂತ ಸುದ್ದಿ ಹಬ್ಬಿಸಾರ, ಯಾರೂ ಕೂಲಿ ಕೆಲಸಾನೂ ಕೊಡಾಕ ಹತ್ತಿಲ್ಲ. ಮಣ್ಣಾಗ ಮಣ್ಣಾಗಾಕೂ ಮನಸಿಲ್ಲ. ಬದುಕಿ ಮಾಡಬೇಕಾದ್ದು ಏನೂ ಇಲ್ಲ. ಆದ್ರ ಇನ್ನ ಮೂರ ಮಂದಿ ಹೆಣಮಕ್ಕಳ ಆದಾರ. ಅವರ ಜವಾಬ್ದಾರಿ ಐತಿ. ಇದ್ದೊಂದ ಮನಿ ಕೃಷ್ಣಾ ನದಿಯಾಗ ಮುಳಗಡೆ ಆಗೇದ." ಮಾತು ಮುಗಿಸಿ ನಿಂತ ಅವಳನ್ನೊಮ್ಮೆ ದಿಟ್ಟಿಸಿದಾಗ, ಮುಳುಗಿ ನಿಂತ ಆ ನದಿಯೊಳಗಿನ ಹಳೇ ಮನೆಯಂತೆ ಕಂಡಳು. ಇವಳ ಮಾತು ಮುಗಿದ ಮೇಲೆ ಜೋಗಪ್ಪ ಮೆಲ್ಲಗೆ ಮುಖಕೊಟ್ಟ. ತಕ್ಷಣ ಖಾತ್ರಿಯಾಯ್ತು ಇವನೇ ಕರಕೊಂಡ ಬಂದಾನ ಎಂದು. "ನಿನ್ನ ಮಗನಿಗೀ ಬುದ್ದಿ ಇಲ್ಲ...! ಅವನೇನು ಸಾಲಿ ಕಲಿಯಾಕ ಬಂದಾನ...? ಇಲ್ಲ ಊರ ಊರ ತಿರಗಾಕ ಬಂದಾನ? ನಾಳೇ ಹಾಜರಿ ಕಡಿಮಿ ಬಿದ್ರ ಹೆಂಗ ಪರೀಕ್ಷೆಗೆ ಕೂಡತಾನ. ಅವ ನಾಳೆ ಕಾಲೇಜ ಮುಗಿಸಿ ಮಾಸ್ತರ ಆದರ ನಿನಗೂ ಒಂದು ಆಧಾರ. ಅವಗೂ ಒಳ್ಳೇ ಹೆಸರು." ಒಳಗಿದ್ದ ಅವನ ಮೇಲಿನ ಕಳಕಳಿಯನ್ನು ಅಸಹನೆಯಿಂದ ಹೊರಹಾಕಿದೆ. ಒಂದು ಕ್ಷಣ ಸುಮ್ಮನಾಗಿ ಬಿಕ್ಕಳಿಸಿ ಅಳತೊಡಗಿದಳು. "ಹ್ಞೂಂರ್ರೀ...ಯವ್ವ, ಏನ ಮಾಡಲೀ? ಮೊದಲ ಆದ್ರ ಕೂಲೀಗೆ ಹೋಗುತಿದ್ದೆ, ಮನೀನೂ ಸಾಕತಿದ್ದೆ. ಯಾವತ್ತ ಈ ಬ್ಯಾನಿ ನನಗ ಗಂಟಬಿತ್ತ ಆವತ್ತಿನಿಂದ ಪರದೇಶಿಯಾಗೇನಿರೀ...! ಒಬ್ಬರೂ ಹೊಲಕ್ಕೆ ಕರೆಂಗಿಲ್ಲ. ಕೂಲಿಗೂ ಬಾ ಅನ್ನಂಗಿಲ್ಲ. ಮೊದಲೇ ದಂದೆ ಮಾಡೋ ಹೆಣಮಗಳು ಅಂತ ಸಿಟ್ಟ ಇತ್ತರೀ. ಈಗ ಅದೊಂದು ಈಗ ಆರಾಮ ತಪ್ಪಿದ ಮೇಲೆ ತ್ರಾಸ ಆಗೇದರೀ. ಮನೆಯಾಗ ಮೂರು ಸಣ್ಣಮಕ್ಕಳು, ಇವನೇ ದೊಡ್ಡಾವರೀ... ಮುಂಜಾನಿದ್ರ ಸಂಜೀಕಿಲ್ಲ, ಸಂಜೀಕಿದ್ರ ಮುಂಜಾನೆಯಿಲ್ಲ. ಇವ ಆ ಕಡೆ ಗೋವಾ ಕಡೆ ಕಟ್ಟಡ ಕೆಲಸಕ್ಕೆ ಹೋಗಿದ್ದ. ಛಲೋ ಇತ್ತು. ತಿಂಗಳಿಗೊಮ್ಮೆ ಕಳಿಸ್ತಿದ್ದ. ಈಗ ಮನಸಿನಾಗ ಬಂದದ. ಸಾಲಿ ಅರ್ಧಕ ಬಿಡಿಸಿದ್ದೆ. ಅವ... ಕಲಿತು ಮಾಸ್ತರ ಆಗಲೀ ಅಂತ, ನಾಲ್ಕು ಮಂದಿಯೊಳಗೆ ಚಂದ್ಯಾಂಗ ಇರಲಿ ಅಂತ. ನಾ ಏನೂ ಇವತ್ತ ಅಂದ್ರ ಇವತ್ತ, ನಾಳೆ ಅಂದ್ರ ನಾಳೆ ಬಿದ್ದಹೋಗು ಮರ, ಆಪರೇಶನ್ ಮಾಡಸಾಕ ನನಗೆಲ್ಲಿ ಆಗತ್ತ ಹೇಳ್ರೀ? ಏನಾರ ಆಗಲೀ ಅಂತ ಕಲಿಯಾಕ ಕಳಿಸೀನ್ರಿ...!" ಎಂದು ಮತ್ತೆ ಸೀರಿ ಸೆರಗ ಬಾಯಿಗೆ ಹಿಡಿದು ದುಃಖಿಸಿದಳು. ಆಕೇನೇ ಮಾತು ಮುಂದುವರಿಸಿದಳು.

"ಇದರದ್ದು ಬಾಳ ಹೆಣಗರಳು ನೋಡ್ರಿ...! ನನಗ ತ್ರಾಸ ಆಗತದಂತ ಅಂತ ಇಲ್ಲೇ ಅವಾಗೊಮ್ಮೆ ಇವಾಗೊಮ್ಮೆ ಸಾಲಿ ಬಿಟ್ಟು ದುಡಿಯಾಕ ಹೋಗತಾನಂತ ರೀ. ಮೊನ್ನೆ ಇಲಕಲ್ಲ ಕಲ್ಲು ಕ್ವಾರಿಗೆ ಹೋಗಿ ದುಡಿದು ಹದಿನೈದು ನೂರು ರೂಪಾಯಿ ಕಳಿಸಿದ್ದ. ಅಮೀನಗಡ ಸಂತ್ಯಾಗ ಏನ ಕೆಲಸ ಮಾಡಿ ಐದುನೂರು ರೂಪಾಯಿ ಕಳಿಸಿದ್ದ. ಊರಾಗ ಈಗ ಜೋಳ ಕಿತ್ತು ಸುಗ್ಗಿರೀ. ಜೋಳ ಕಿತ್ತಾಕ ಬ್ಯಾಡಂದರೂ ಊರಿಗಿ ಬಂದಿದ್ದ. ನನ ಮಗ ಇಲ್ಲೀ ಒಂದ... ಹೊತ್ತು ಗೆಳೆಯರ ಕಡಿ ಊಟ ಮಾಡಿ ಇನ್ನೊಂದ ಹೊತ್ತು ನೀರ ಕುಡಿದು ಮಲಗಿ ಸಾಲಿ ಕಲಿತಾನರ್ರೀ." ಮುಂದೆ ಅವಳಿಂದ ಮಾತೇ ಹೊರಡಲಿಲ್ಲ. ಬಿಕ್ಕಳಿಸಿ ಅಳತೊಡಗಿದಳು. ಹಾಳಾಗೀ ಹೋಗ್ತಿ, ಜವಾಬ್ದಾರಿ ಇಲ್ಲದ ಹುಡುಗನೆಂದು ಬೈಸಿಕೊಂಡವನ ದೊಡ್ಡ ಜವಾಬ್ದಾರಿ ಕಂಡು ದಂಗಾಗಿ ಹೋದೆ. ರೊಟೇಟರ್ ಛೇರ್‌ನಿಂದ ದಿಗ್ಗನೇ ಎದ್ದು ಅವನ ಹತ್ತಿರ ಬಂದೆ. ಜೋಗಯ್ಯ ನಾನೆಲ್ಲಿ ಹೊಡೆಯಲು ಬಂದೆನೇನೋ ಅಂದುಕೊಂಡು ದೂರ ಸರಿದ.

"ಬಾ ಇಲ್ಲಿ! ಎಂದು ಹತ್ತಿರ ಹೋದೆ. ನಾನು ನಿನಗ ತಾಯಿ ಇದ್ದಂಗ" ಎಂದು ಅವನ ಭುಜದ ಮೇಲೆ ಕೈ ಹಾಕಿದೆ. ಕೈ ಕಟ್ಟಿ ತಲೆ ತಗ್ಗಿಸಿ ನಿಂತವನ ಕಣ್ಣಿಂದ ಜಾರಿದ ಹನಿಗಳು ಕೆಳಗೆ ಉದುರಿದವು. ಅವನೂ ಅಳತೊಡಗಿದ. ಜೊತೆಗೆ ನನ್ನ ಕಣ್ಣಂಚಿನಲ್ಲೂ ನೀರು.

✶ ✶ ✶

ಇದಾದ ಮೇಲೆ ಜೋಗಪ್ಪ ಕಾಲೇಜು ತಪ್ಪಿಸಲಿಲ್ಲ. ಬುದ್ಧಿವಂತ. ಹುಡುಗನೆಂಬುದು ಸ್ವಲ್ಪ ದಿನದಲ್ಲೇ ಅವನು ಬರೆದ ಉತ್ತರ ಪತ್ರಿಕೆ, ಮಾಡಿದ ಭಾಷಣ, ಕೊಟ್ಟ ಪಾಠ, ಗೆದ್ದ ಬಹುಮಾನಗಳಿಂದ ತಿಳಿದುಹೋಯಿತು. ಅವನು ಬರೆದ ಉತ್ತರ ಪತ್ರಿಕೆ ಅಲ್ಲಿದ್ದ ಪ್ರಶಿಕ್ಷಣಾರ್ಥಿಗಳಿಗೆ ಮಾದರಿ ಉತ್ತರ ಪತ್ರಿಕೆಯಾಯಿತು. ಜೋಗಪ್ಪ ಎಲ್ಲರ ನೆಚ್ಚಿನ ವಿದ್ಯಾರ್ಥಿಯಾಗಿದ್ದ. ಬೇಕಾದಾಗ ಐದಾರು ನೂರು ರೂಪಾಯಿ ತೆಗೆದುಕೊಂಡು ಹೋಗುತ್ತಿದ್ದ. ಮತ್ತೇ ತಂದು ಕೊಡುತ್ತಿದ್ದ. ಮೊದಲಿನ ಪೀರಿಯಡ್ಡು ಮಾತ್ರ ಲೇಟಾಗಿ ಬರುತ್ತಿದ್ದ. ಎಲ್ಲೋ ಕೆಲಸಕ್ಕೆ ಹೋಗಿ ಬರುವುದಾಗಿಯೂ ತಿಳಿಸಿದ್ದ. ಒಂದು ದಿನ ಎಲ್.ಆಯ್.ಸಿ. ಕಟ್ಟಲು ಕಂತು ಬಾಕಿ ಉಳಿಸಿಕೊಂಡಿರುವೆ. ಎಂದು ಮತ್ತೆ ಸಾವಿರ ರೂಪಾಯಿ ಪಡೆದುಕೊಂಡಿದ್ದ. ಆ ಹಣವನ್ನು ಮರಳಿ ತಂದುಕೊಟ್ಟಿದ್ದ.

ಇನ್ನೇನು ಆ ವರ್ಷ ಮುಗಿಯಲು ಬಂತು. ಪ್ರಶಿಕ್ಷಣಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ. ಅದರಲ್ಲೂ ಅವರಿಗೆ ಇಂಟರ್ನಲ್ ಮಾರ್ಕ್ಸ್. ಪ್ರವಾಸ ವಿಂಗದವರು ಶೈಕ್ಷಣಿಕ ಪ್ರವಾಸಕ್ಕೆ ಜೋಗಕ್ಕೆ ಹೋಗುವುದು ಎಂದು ನಿರ್ಧರಿಸಿದರು. ಪ್ರವಾಸ ರೊಕ್ಕದ ಬಗ್ಗೆ ವಿಚಾರಿಸಿದೆ. "ರೊಕ್ಕ ಇತ್ತರೀ ಆಗಲೇ ಕೊಟ್ಟೇನ್ರಿ" ಅಂತ ಹೇಳಿದ. ಬಸ್ಸಿನಲ್ಲಿ ಅವರಾರೂ ಭಾವಿ ಶಿಕ್ಷಕರು ಅನಿಸಲಿಲ್ಲ. ಅಷ್ಟೊಂದು ಖುಷಿಯಲ್ಲಿ ಕುಣಿತ ಹಾಡು ಜೋಕು ಸಾಗಿತ್ತು. ಆಗಾಗ ಜೋಗಪ್ಪನೂ ಹಾಡಿನ ಬಂಡಿಗೆ ಧ್ವನಿ ಕೊಟ್ಟ. ಅವನ ಹುರುಪು ಕಂಡು ಅವನನ್ನೇ ನೋಡಿದೆ. ತಕ್ಷಣ ನಾಲಿಗೆ ಕಚ್ಚಿಕೊಂಡು ತಲೆತಗ್ಗಿಸಿದ.

ಜೋಗದ ಎದುರಿಗೆ ನಾವೆಲ್ಲ ನಿಂತೆವು.

*ಮಾನವನಾಗಿ ಹುಟ್ಟಿದ ಮೇಲೆ ಏನೇನ ಕಂಡಿ*
*ಸಾಯೋದರೊಳಗೆ ಒಮ್ಮೆ ನೋಡು ಜೋಗದ ಗುಂಡಿ.*

– ಎಂಬ ಹಾಡು ನೆನಪಾಯಿತು. ತಾತ್ವಿಕವಾಗಿ ಎಷ್ಟು ಅರ್ಥಪೂರ್ಣ! ಮಂಜು ಮುಸುಕಿದ ಆಕಾಶ. ಆಳೆತ್ತರದಿಂದ ಧುಮುಕುತ್ತಿದ್ದ ನೀರು – ಅದರೊಂದಿಗೆ ಕೆಳಗಿಳಿಯುತ್ತಿದ್ದ ಮೋಡ. ಬಿಳಿ ನೊರೆ ಹಾಲಿನಂತಿದ್ದ, ಸಮೃದ್ಧವಾಗಿ ಇಳಿಯುತ್ತಿದ್ದ ರಾಜಾ, ರೋವರ್, ರಾಕೇಟ್, ರಾಣಿ. ಕಣ್ಣು ತುಂಬಿಕೊಂಡು ಖುಷಿಯಿಂದ ಪ್ರಶಿಕ್ಷಣಾರ್ಥಿಗಳು ಹೋ! ಹೋ! ಎಂದು ಚೀರಿ ಆನಂದಿಸುತ್ತಿದ್ದರು.

ತಂಟೆಯ ವಯಸ್ಸು. ತುಂಟಾಟದ ಹುಡುಗರು ನಮ್ಮೆಲ್ಲರ ಕಣ್ಣು ತಪ್ಪಿಸಿ

ಕಾವ್ಯಲೋಕ

# ರಕ್ತ ಮುಕ್ಕಳಿಸುತ ಬಂದ...



೧

ಬಯಲನಾಯಿ ನೆತ್ತರವ ನೆಕ್ಕಿ...

ಕಣ್ಣಕಾಡಿಗೆಯಲ್ಲಿ ಕಾಮಕೇಳಿ
ಹುತ್ತಗಳ ಹುಡುಕುತ್ತ ಹಾವುಗಳು ಹರಿದಾಡಿ
ಕರುಳ ಕುಡಿಯನು ಈಜಿ ಕುದುರೆಗಳು ಕೆನೆದಾಡಿ
ನಿತ್ರಾಣ ನರಗಳಲಿ ನೆತ್ತರು ನೆಗೆದಾಡಿ
ಒಡೆದ ಹನಿಯಾಗಿ ಮೈಯ ಬೆವರು
ಎದೆಯ ಕುಲುಮೆಗೆ ತಿದಿಯೊತ್ತುವ ಉಸಿರು

ಜಗದ ಕತ್ತಲೆ ಕೂಡ ಬೆತ್ತಲಾಗಿ
ಕತ್ತಲೆಗೆ ಹೆಸರಿಲ್ಲದ ಬಸಿರು

೨

ಬಯಲನಾಯಿ ನೆತ್ತರವ ನೆಕ್ಕಿ
ಕರಿನೆರಳ ಮೈಯಿಂದ ಮಂಜು ತೊಟ್ಟಿಕ್ಕಿ...

ಮಟಮಟ ಮಧ್ಯಾಹ್ನ ಹೋಗದಿರು ಹೊರಗೆ
ಸುಡುವುದು ಬಿಸಿಲು ನಿನ್ನ
ತೆಂಗಿನಗರಿಗಳ ನಡುವೆ ಇಣುಕಿ ನೋಡುತ್ತಿರುವ
ಚಂದ್ರನು ಈಗೀಗ ನಂಬಿಕೆಗೆ ಅರ್ಹನಲ್ಲ
ಆದರವೋ... ಹಾದರವೋ...
ನಾಚಿಕೆಯಾಗುತ್ತಿದೆ ನೆಲದವ್ವನಿಗೆ
ಮುಖ ತೋರಿಸಲು
ಬೆದೆಯ ಬೆರಗಿನಲಿ ನಗುನುಂಗಿ
ತುಟಿಯ ಅಳಲು
ಸೀರೆ ಸೆರಗಿನ ಚುಂಗು ಚೀಪುತ್ತಿರುವ
ಬೆತ್ತಲೆ ಫಕೀರ

೩

ಬಯಲನಾಯಿ ನೆತ್ತರವ ನೆಕ್ಕಿ
ಕರಿನೆರಳ ಮೈಯಿಂದ ಮಂಜು ತೊಟ್ಟಿಕ್ಕಿ
ನೀರಾವಿ ಕಿರಣಗಳ ಬಿಳಲನೇರಿ...

ಮಳೆಬಿದ್ದ ನೆಲದಲ್ಲಿ ಹರಿವ ಇರುವೆ ಸಾಲು
ಪಿಸುಗುಡುತ ನಿಂತಲ್ಲೆ ಬಾಯಿಗಂಟಿದ ಜೊಲ್ಲು
ಸುಡುವ ಕುಲುಮೆಯಲಿ ಕುಣಿವ ಚೂರಿ
ಸುಲಿದ ತೊಗಲಿಗೆ ಸವರಿದುಪ್ಪಿನ ಉರಿಯುರಿ
ಉರಿಪಾದ ಊರಿದಂತೆಲ್ಲಾ ನೆಲದಮುಳ್ಳು
ಕಣ್ಣೀರ ಕೋಡಿಯಲಿ ಜೀವಸೆಲೆ ಉಸಿರಾಡಿ
ಕರಿನೆರಳ ಮೈಯಿಂದ ಮಂಜು ತೊಟ್ಟಿಕ್ಕಿ
ಗಿರಿಕಂದರ ಬೆಟ್ಟಗುಡ್ಡ ಕಾಡು ನದಿ ಊರು ಬಯಲು
ಮಣ್ಣ ಮೈಯೊಳಗಿಂದ ಬುಗ್ಗನೆದ್ದು
ಕೆನ್ನವಿಲು ಕರಿನವಿಲು ನೀಲಿನವಿಲು ನೆಲದನವಿಲು
ಉರಿವ ಹೊಸ್ತಿಲ ಕೆನ್ನಾಲಿಗೆಯಲಿ ಕುಣಿಯುತ್ತಿರಲು
ಗೋರಿ ಸಮಾಧಿ ಶಿಲುಬೆಗಳ ದಾಟಿ
ಸೀಮೆಯಿಲ್ಲದ ನಿಸ್ಸೀಮ ರಾಜ್ಯದಲಿ
ಕೆಂಗುಲಾಬಿ ನಗುತಿದೆ ಕೈಬೀಸಿ ಕರೆಯುತಿದೆ

೪

ಬಯಲನಾಯಿ ನೆತ್ತರವ ನೆಕ್ಕಿ
ಕರಿನೆರಳ ಮೈಯಿಂದ ಮಂಜು ತೊಟ್ಟಿಕ್ಕಿ
ನೀರಾವಿ ಕಿರಣಗಳ ಬಿಳಲನೇರಿ
ಸೂರ್ಯನಿಗೆ ಮುತ್ತಿಕ್ಕಿ ಸುಟ್ಟಾಯಿತೋ...

ರಕ್ತ ಮುಕ್ಕಳಿಸುತ ಬಂದ ಸೂರ್ಯ
ತಣ್ಣಗೆ ಸುಡುತ್ತಿದ್ದ
ಗೊತ್ತಾಗಲೇ ಇಲ್ಲ

**ಎಸ್. ಕೆ. ಮಂಜುನಾಥ್,** ಶಿವರ, ಗುರುಗದಹಳ್ಳಿ ಅಂಚೆ, ತಿಪಟೂರು ತಾಲೂಕು, ತುಮಕೂರು ಜಿಲ್ಲೆ – ೫೭೨ ೨೦೨

ಜೋಗದ ಗುಂಡಿಯೊಳಗೆ ಇಳಿದಿದ್ದರು. ಆವೇಶದೊಳಗ ನಾ ಜಿಗಿತೀನಿ, ನೀ ಜಿಗಿತೀಯ, ಅಂತ ಜಿಗಿದು ಈಜಾಡತೊಡಗಿದ್ದರು. ಅಲ್ಲೇ ಇವರಿಗಿಂತ ಮೊದಲೇ ಜೋಗ ಹೋಗಿ ಬಂಡಿಮೇಲೆ ಒಬ್ಬನೇ ಕುಳಿತಿದ್ದ. ತುಟಿ ತೆರೆಯದೆ ಮೌನಕ್ಕೆ ಇಳಿದಿದ್ದ. ಒಬ್ಬರ ಕೈ ಹಿಡಿದು ಒಬ್ಬರು ಜಗ್ಗಿದರು. ನೀರಿನ ರಭಸ ಒಮ್ಮೆಲೇ ಮೇಲಿಂದ ಜೋರಾಗಿ ಕೆಳಗೆ ಇಳಿದ ರಭಸಕ್ಕೆ ಒಮ್ಮೆಲೇ ಎಲ್ಲರೂ ಮಗ್ಗಲಲ್ಲಿದ್ದ ಗುಂಡಿಗಿ ಜರಿದರು. ನೋಡನೋಡುತ್ತಿದ್ದಂತೆ ಮುಳುಗತೊಡಗಿದರು. ಇವರು ಬೀಳೋದನ್ನು ಮೇಲೆ ನಿಂತ ನಾವು ಪ್ರವಾಸಿಗರು ಒಮ್ಮೆಲೇ ನೋಡಿ ಹೌಹಾರಿ ಬಾಯಿ ಬಾಯಿ ಬಡಿದುಕೊಂಡೆವು. "ಅಯ್ಯ ...ಯಪ್ಪಾ ... ಅನಾಹುತ ಆತು... ಯಾರರ ಕಾಪಾಡ್ರಿ. ಹುಡುಗರು ಮುಳಗತಾವ ನೀರಿನ ಸೆಳತ ಬಾಳ ಐತಿ. ಹುಡುಗರು ಉಳಿಯೋದು ಬಾಳ ಕಷ್ಟ ಐತಿ" ಎನ್ನುತ್ತ ನಾನು ಕೈಕಾಲು ಆಡದೆ ಬಾಯಿ ಬಾಯಿ ಬಡಕೊಳ್ಳತೊಡಗಿದೆ. ಎಲ್ಲರೂ ಬರ ಬರ ಮೆಟ್ಟಿಲಿಳಿದು ಓಡಿದರು.

ನೀರಿನ ಸೆಳವಿನೊಳಗೆ ನೋಡುತ್ತಿದ್ದಂತೆ ಜೋಗಪ್ಪ ಟಂಗನೇ ಜಿಗಿದು ಒಬ್ಬಬ್ಬರನ್ನೂ ಎತ್ತಿ ಮೇಲೆ ಎಳೆಯತೊಡಗಿದ. ಕೊರಳ ಪಟ್ಟಿ, ಕೂದಲು ಪ್ಯಾಂಟು ಕೈಗೆ ಸಿಕ್ಕಿದ್ದನ್ನು ಹಿಡಿದು ಎಳಕೊಂಡು ನಾಲ್ಕು ಗೆಳೆಯರ ಜೀವ ಉಳಿಸಿದ, ಜೋಗಪ್ಪನ ಸಾಹಸಕ್ಕೆ ಹೆಮ್ಮೆಪಟ್ಟೆ. ಎಂಥ ಮಗ! ತನ್ನ ಪ್ರಾಣದ ಹಂಗ ಇಲ್ಲದ ಹುಡುಗರನ್ನ ಕಾಪಾಡಿದ. ಮೇಲೆ ಬರಲಿ.. ಅವನಿಗೆ ಸನ್ಮಾನ ಮಾಡೋಣ...ಅಂತ ಮಗ್ಗಲು ನಿಂತ ಸಿಬ್ಬಂದಿಗೆ ಹೇಳತೊಡಗಿದೆ. ಇನ್ನೇನು ಜೋಗಪ್ಪ ಮೇಲೆ ಎದ್ದ ಬರತಾನ. ಬಾಗಿ ದೃಷ್ಟಿ ನೆಟ್ಟು ಕೆಳಗೆ ಇಣಿಕಿದೆ. ನೀರಿನ ಮಡುವಿನೊಳಗೆ ಒಮ್ಮೆಲೇ ನಿಂತು ಒಮ್ಮೆ ಕೈ ಮೇಲೆ ಮಾಡಿದ... ನಾನೂ ಬಾ... ಮೇಲೆ... ಬಾ... ಎಂದು ಮೇಲಿನಿಂದಲೇ ಕೈ ಮಾಡಿದೆ. ಮತ್ತೊಮ್ಮೆ ಜೋರಾಗಿ ಕೈ ಬೀಸಿ ಮುಳುಗಿ ತಲೆ ಝಾಡಿಸಿ ಎದ್ದು ಮತ್ತೆ ಮುಳುಗಿದ. ಗಾಬರಿ ಬಿದ್ದು. "ಜೋಗಯ್ಯ ...! ಜೋಗಯ್ಯ ...!" ಹುಡುಗರೂ ಎಲ್ಲ ಸಿಬ್ಬಂದಿ, ನಾನೂ ಕೂಗತೊಡಗಿದೆವು.

ಸುತ್ತು ಸುತ್ತು ಅಲೆ ಎದ್ದು ನೀರು ಒಮ್ಮೆಲೇ ಶಾಂತವಾಯಿತು. ಅದರೊಂದಿಗೆ ಜೋಗಪ್ಪನ ಜೀವವೂ. ಅವನು ಮೇಲೆ ಬರಲಿಲ್ಲ. ಮುಳುಗಿಹೋದ... ಏನೂ ತೋಚದ ನಾನು ಗಾಬರಿಯಿಂದ ಜೋಗ... ಜೋಗ... ಎನ್ನುತ್ತಿದ್ದೆ. ಕೈ ಕಾಲು ಮಾತು ಆಡದಂತಾಯಿತು... ಅವನು ಮುಳುಗಿಯೇ ಬಿಟ್ಟ. ಆಳ ಬಲು ಆಳ. ನಾವ್ಯಾರು ಎಳೆದು ತಾರದಷ್ಟು ಆಳ. ಎಳೆಯ ಜೀವ ಮುಳುಗಿದ್ದರ ಹಿಂದಿನ ಕಟುಸತ್ಯವನ್ನು ಅರಗಿಸಿಕೊಳ್ಳಲಾಗದ ನಾನು ಬಿಕ್ಕಳಿಸಿದೆ. ನನ್ನ ಬಿಕ್ಕಳಿಕೆ ಅವನಿಗೆಲ್ಲಿ ಕೇಳಿಸಬೇಕು. ಅವನು ನನ್ನ ಮುಂದೆ ದೈನ್ಯದಿಂದ ನಿಂತಂತೆ ಭಾಸವಾಯಿತು. ಅವನು ಬಾರದ ಲೋಕಕ್ಕೆ ಹೋಗಿದ್ದ. ಅವನ ತಾಯಿ ಮುಖ ಮುಂದೆ ಬಂದಾಗ ಇನ್ನಿಷ್ಟು ಅಧೀರಳಾದೆ, ಕಾಲು ದೇಹ ಕಂಪಿಸತೊಡಗಿದವು.

**ಲಲಿತಾ ಕೆ. ಹೊಸಪ್ಯಾಟಿ**
ಕ್ಷೇತ್ರ ಸಮನ್ವಯಾಧಿಕಾರಿಗಳು, ಹುನಗುಂದ – ೫೮೭ ೧೧೮
ಬಾಗಲಕೋಟೆ ಜಿಲ್ಲೆ

# ನವ ಉದಾರವಾದ ಮತ್ತು ಕೃಷಿ ಬಿಕ್ಕಟ್ಟು

ಕೃಷಿ ಬಿಕ್ಕಟ್ಟು ಮತ್ತು ರೈತರ ಆತ್ಮಹತ್ಯೆ ನಡುವಿನ ಸಂಬಂಧವನ್ನು ಈ ಲೇಖನದಲ್ಲ ಚರ್ಚಿಸಿದ್ದೇನೆ. ಕೃಷಿ ಬಿಕ್ಕಟ್ಟು ಹಿಂದಿನಿಂದಲೇ ಇತ್ತು ಮತ್ತು ರೈತರ ಆತ್ಮಹತ್ಯೆಯೂ ಇತ್ತು. ಆದರೆ ತೊಂಬತ್ತರ ನಂತರ ಈ ಎರಡೂ ಹಿಂದಿಗಿಂತ ಹೆಚ್ಚಿನ ಪ್ರಮಾಣದಲ್ಲ ಪ್ರಕಟಗೊಂಡಿವೆ. ಇದಕ್ಕೆ ತೊಂಬತ್ತರ ನಂತರ ನಮ್ಮ ಸರಕಾರಗಳು ಅನುಸರಿಸುತ್ತಿರುವ ಆರ್ಥಿಕ ನೀತಿಗಳು ಕಾರಣವೆಂದು ವಾದಿಸುವ ಉದ್ದೇಶ ಈ ಲೇಖನದ್ದು. ಲೇಖನದ ವಿವರಗಳನ್ನು ಎರಡು ಭಾಗಗಳಲ್ಲ ನೀಡಿದ್ದೇನೆ. ಮೊದಲ ಭಾಗದಲ್ಲಿ ನವ ಉದಾರವಾದಿ ಆರ್ಥಿಕ ನೀತಿಗಳು ಮತ್ತು ತಳಸ್ತರದ ಜನರ ಸಮಸ್ಯೆಗಳ ನಡುವಿನ ಸಂಬಂಧವನ್ನು ವಿಶ್ಲೇಷಿಸಿದ್ದೇನೆ. ನವ ಉದಾರವಾದಿ ಆರ್ಥಿಕ ನೀತಿ ಎಲ್ಲರನ್ನು ಪ್ರಭಾವಿಸುತ್ತದೆ. ಆದರೆ ಎಲ್ಲರನ್ನೂ ಒಂದೇ ರೀತಿಯಲ್ಲಿ ಪ್ರಭಾವಿಸುವುದಿಲ್ಲ. ಈ ನೀತಿಯಿಂದ ನಷ್ಟ ಅನುಭವಿಸಿದವರು ಇದ್ದಂತೆಯೇ ಲಾಭ ಅನುಭವಿಸಿದವರೂ ಇದ್ದಾರೆ. ಕೃಷಿ ಕ್ಷೇತ್ರದಲ್ಲೂ ಇದೇ ಸ್ಥಿತಿ ಇರಬಹುದು. ಈ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ನವ ಉದಾರವಾದಿ ಆರ್ಥಿಕ ನೀತಿಗಳನ್ನು ಲೇಖನದ ಮೊದಲ ಭಾಗದಲ್ಲಿ ವಿಶ್ಲೇಷಿಸಿದ್ದೇನೆ. ಲೇಖನದ ಎರಡನೇ ಭಾಗದಲ್ಲಿ ಕೃಷಿ ನೀತಿ ಮತ್ತು ರೈತರ ಆತ್ಮಹತ್ಯೆ ನಡುವಿನ ಸಂಬಂಧವನ್ನು ವಿಶ್ಲೇಷಿಸಿದ್ದೇನೆ.

■ **ಡಾ॥ ಎಂ. ಚಂದ್ರ ಪೂಜಾರಿ**



**ಭಾಗ – ೧**

**ಪ**ಶ್ಚಿಮದಲ್ಲಿ ರಾಜಕೀಯ ಪಕ್ಷಗಳು ಮತ್ತು ಅವುಗಳ ಆರ್ಥಿಕ ನೀತಿಗಳ ನಡುವೆ ನೇರ ಹಾಗೂ ಸ್ಪಷ್ಟ ಸಂಬಂಧ ಇದೆ. ಅಲ್ಲಿ ಸ್ಥೂಲವಾಗಿ ಎರಡು ರಾಜಕೀಯ ದೃಷ್ಟಿಕೋನಗಳು ಅರ್ಥವ್ಯವಸ್ಥೆಯನ್ನು ಪ್ರಭಾವಿಸುತ್ತಿವೆ. ಒಂದು, ಮುಕ್ತ ಮಾರುಕಟ್ಟೆ ನೀತಿಗಳು. ಮತ್ತೊಂದು, ವೆಲ್‌ಫೇರಿಸ್ಟ್ ಆರ್ಥಿಕ ನೀತಿಗಳು. ಮುಕ್ತ ಮಾರುಕಟ್ಟೆ ನೀತಿಯು ಸರಕುಸೇವೆಗಳ ಪೂರೈಕೆ ಹೆಚ್ಚಿಸುವ ಮೂಲಕ ಜನರ ಅಭಿವೃದ್ಧಿಗೆ ಪ್ರಯತ್ನಿಸಿದರೆ ವೆಲ್‌ಫೇರಿಸ್ಟ್ ನೀತಿಗಳು ಜನರ ಶಿಕ್ಷಣ, ಆರೋಗ್ಯ, ವಸತಿ ಮುಂತಾದವುಗಳನ್ನು ಸುಧಾರಿಸುವ ಅಭಿವೃದ್ಧಿಗೆ ಹೆಚ್ಚು ಮಹತ್ವ ನೀಡುತ್ತವೆ. ಪಶ್ಚಿಮದಲ್ಲಿ ಈ ಎರಡು ಪ್ರತ್ಯೇಕ ಅಭಿವೃದ್ಧಿ ನೀತಿಗಳನ್ನು ಪ್ರತಿಪಾದಿಸುವ ಪ್ರತ್ಯೇಕ ರಾಜಕೀಯ ಪಕ್ಷಗಳಿವೆ. ಅಮೆರಿಕಾದಲ್ಲಿ ಡೆಮಾಕ್ರಟಿಕ್ ಪಕ್ಷ ವೆಲ್‌ಫೇರಿಸ್ಟ್ ನೀತಿಯನ್ನು ಪ್ರತಿಪಾದಿಸಿದರೆ, ರಿಪಬ್ಲಿಕನ್ ಪಕ್ಷ ಮುಕ್ತ ಮಾರುಕಟ್ಟೆ ಆರ್ಥಿಕ ನೀತಿಗಳನ್ನು ಜಾರಿಗೆ ತರುತ್ತದೆ. ಇಂಗ್ಲೆಂಡ್‌ನಲ್ಲಿ ಲೇಬರ್ ಪಕ್ಷ ವೆಲ್‌ಫೇರಿಸ್ಟ್ ನೀತಿಗಳನ್ನು ಅನುಷ್ಠಾನಗೊಳಿಸಿದರೆ, ಕನ್‌ಸರ್ವೇಟಿವ್ ಪಕ್ಷ ಮುಕ್ತ ಮಾರುಕಟ್ಟೆ ನೀತಿಗಳನ್ನು ಪ್ರತಿಪಾದಿಸುತ್ತದೆ.

ನಮ್ಮಲ್ಲೂ ಎರಡು ದೊಡ್ಡ ಪಕ್ಷಗಳಿವೆ. ಅವೆಂದರೆ ಕಾಂಗ್ರೆಸ್ ಮತ್ತು ಬಿಜೆಪಿ. ಎರಡೂ ಪಕ್ಷಗಳು ಮೇಲ್ನೋಟಕ್ಕೆ ಕಾಂಗ್ರೆಸ್ ವೆಲ್‌ಫೇರಿಸ್ಟ್ ನೀತಿಗಳನ್ನು ಜಾರಿಗೆ ತರುವ ಪಕ್ಷ ಮತ್ತು ಬಿಜೆಪಿ ಮುಕ್ತ ಮಾರುಕಟ್ಟೆ ನೀತಿಗಳನ್ನು ಪ್ರತಿಪಾದಿಸುವ ಪಕ್ಷ ಎನ್ನುವ ಇಮೇಜ್ ಇದೆ. ಆದರೆ ಇದು ನಿಜ ಚಿತ್ರಣವಲ್ಲ. ಏಕೆಂದರೆ ಈ ಎರಡೂ ಪಕ್ಷಗಳು ಪ್ರತಿಪಾದಿಸುವ ಆರ್ಥಿಕ ನೀತಿಗಳಲ್ಲಿ ವಿಶೇಷವಾದ ವ್ಯತ್ಯಾಸ ಯಾವುದೇ ಇಲ್ಲ. ಎರಡೂ ಪಕ್ಷಗಳು ಅಧಿಕಾರಕ್ಕೆ ಬಂದ ನಂತರ ನವ ಉದಾರವಾದಿ ಆರ್ಥಿಕ ನೀತಿಗಳನ್ನು ಜಾರಿಗೆ ತರುತ್ತಿವೆ. ನವ ಉದಾರವಾದಿ ಆರ್ಥಿಕ ನೀತಿಗಳ ಮುಖ್ಯ ಗ್ರಹಿಕೆಗಳು ಇಂತಿವೆ : ೧. ಸರಕು ಸೇವೆಗಳ ಉತ್ಪಾದನೆ ಹಾಗೂ ಪೂರೈಕೆಯನ್ನು ಹೆಚ್ಚಿಸುವುದು ಸರಕಾರದ ಮುಖ್ಯ ಗುರಿ. ೨. ಸರಕು ಸೇವೆಗಳ ಉತ್ಪಾದನೆ ಹೆಚ್ಚಾದರೆ ಬಡವರಿಗೂ ಕಡಿಮೆ ಬೆಲೆಗೆ ಸರಕು ಸೇವೆಗಳು ಲಭ್ಯವಾಗುತ್ತವೆ, ಆ ಮೂಲಕ ಬಡತನ ನಿವಾರಣೆಯಾಗುತ್ತದೆ. ೩. ಸರಕು ಸೇವೆಗಳ ಉತ್ಪಾದನೆಗೆ ಶ್ರಮ ಬಳಕೆಯಾಗುವುದರಿಂದ ಉದ್ಯೋಗ ಸೃಷ್ಟಿಯಾಗುತ್ತದೆ, ಇದರಿಂದ ನಿರುದ್ಯೋಗ ಸಮಸ್ಯೆ ಪರಿಹಾರವಾಗುತ್ತದೆ. ೪. ಸರಕುಸೇವೆಗಳ ಉತ್ಪಾದನೆ ಮತ್ತು ಪೂರೈಕೆ ಹೆಚ್ಚಾದರೆ ವಿವಿಧ ರೂಪದ ತೆರಿಗೆ ಸಂಗ್ರಹ ಹೆಚ್ಚಾಗುತ್ತದೆ, ಇದರಿಂದ ಆದಾಯ ಅಥವಾ ರೆವಿನ್ಯೂ ಹೆಚ್ಚಾಗುತ್ತದೆ. ೫. ಸರಕಾರದ ರೆವಿನ್ಯೂ ಹೆಚ್ಚಾದರೆ, ಅದನ್ನು ಸರಕಾರ ಶಿಕ್ಷಣ, ಆರೋಗ್ಯ, ವಸತಿ ಇತ್ಯಾದಿಗಳ ಮೇಲೆ ವಿನಿಯೋಜಿಸಲು ಸಾಧ್ಯವಾಗುತ್ತದೆ. ಈ ಎಲ್ಲ ಗ್ರಹಿತಗಳೊಂದಿಗೆ ನವ ಉದಾರವಾದಿ ಆರ್ಥಿಕ ನೀತಿಗಳು ಜಾರಿಗೊಳ್ಳುತ್ತಿವೆ.

### ಸರಕಾರದ ಪಾತ್ರ

ನವ ಉದಾರವಾದಿ ಆರ್ಥಿಕ ನೀತಿಗಳು ಬಂದ ನಂತರ ಸರಕಾರದ ಪಾತ್ರವೂ ಬದಲಾಗಿದೆ. ಸರಕಾರದ ಮುಖ್ಯ ಜವಾಬ್ದಾರಿಗಳು ಬದಲಾಗಿವೆ. ಸರಕಾರ ಹಿಂದಿನ ರೀತಿಯಲ್ಲಿ ಮೂಲಸೌಕರ್ಯಗಳನ್ನು ಉತ್ಪಾದಿಸುವ ಮತ್ತು ಪೂರೈಸುವ ಜವಾಬ್ದಾರಿಯಿಂದ ಸಂಪೂರ್ಣ ಹಿಂದಕ್ಕೆ ಸರಿದಿದೆ. ಉತ್ಪಾದನಾ ಪರಿಕರಗಳ (ಭೂಮಿ, ಹಣಕಾಸು, ಪ್ರಾಕೃತಿಕ ಸಂಪನ್ಮೂಲ ಇತ್ಯಾದಿಗಳ) ಪೂರೈಕೆ ಮತ್ತು ಸರಕು ಸೇವೆಗಳ ಉತ್ಪಾದನೆ ಮತ್ತು ಪೂರೈಕೆಯಲ್ಲೂ ಸರಕಾರ ಮಧ್ಯಪ್ರವೇಶಿಸುವ ಕ್ರಮ ಇಲ್ಲದಾಗಿದೆ. ಇವುಗಳ ಬದಲು ಉದ್ದಿಮೆಗಳಿಗೆ ಕಡಿಮೆ ಬೆಲೆಗೆ ಭೂಮಿ ಪೂರೈಸುವುದಕ್ಕಾಗಿ ಭೂಸುಧಾರಣೆ ಮಸೂದೆಗಳನ್ನು ತಿದ್ದುಪಡಿ ಮಾಡುವುದು, ಭೂ ಸ್ವಾಧೀನ ಮಸೂದೆಗೆ ತಿದ್ದುಪಡಿ ತರುವುದು ಸರಕಾರದ ಜವಾಬ್ದಾರಿಯಾಗಿದೆ. ಉದ್ದಿಮೆಗಳಿಗೆ ಕಡಿಮೆ ಬಡ್ಡಿಗೆ ಹಣಕಾಸು ಪೂರೈಕೆ ಮಾಡಲು ಹಣಕಾಸು ನೀತಿಗಳನ್ನು ಬದಲಾಯಿಸುವುದು, ಸಂಘಟಿತ ಸಾಲದ ಶೇ. ೬೦ರಷ್ಟನ್ನು ಸಾಮಾನ್ಯ ವಲಯಕ್ಕೂ, ಶೇ. ೪೦ರಷ್ಟನ್ನು ಆದ್ಯತಾ ವಲಯಕ್ಕೂ ನೀಡುವ ಸಾಲ ನೀತಿಯನ್ನು ಜಾರಿಗೆ ತರುವುದು, ಉದ್ದಿಮೆಗಳಿಗೆ ಅಸಂಘಟಿತ ಕಾರ್ಮಿಕರನ್ನು ಪೂರೈಕೆ ಮಾಡುವ ಉದ್ದೇಶದಿಂದ ಕಾರ್ಮಿಕ ಕಾಯಿದೆಗಳನ್ನು ತಿದ್ದುಪಡಿ ಮಾಡಿ ತಾತ್ಕಾಲಿಕ, ಗುತ್ತಿಗೆ, ಹೊರಗುತ್ತಿಗೆ ಕಾರ್ಮಿಕ ಪದ್ಧತಿಗಳನ್ನು ಜಾರಿಗೆ ತರುವುದು, ಶಾಶ್ವತ ಉದ್ಯೋಗಿಗಳ ಸಂಖ್ಯೆ ಕಡಿಮೆ ಮಾಡುವುದು, ಕಾರ್ಮಿಕರು ಸಂಘಟಿತರಾಗಿ ತಮ್ಮ ಬೇಡಿಕೆಯನ್ನು ಮುಂದಿಡದ ಸ್ಥಿತಿ ನಿರ್ಮಾಣ ಮಾಡುವುದು, ಶಿಕ್ಷಣ ಆರೋಗ್ಯ, ವಸತಿ, ಕುಡಿಯುವ ನೀರು ಇವನ್ನು ಸರಕಾರ ಪೂರೈಕೆ ಮಾಡುವ ಬದಲು ಖಾಸಗಿ ಉದ್ದಿಮೆಗಳೇ ಪೂರೈಕೆ ಮಾಡುವುದು, ಈ ಕ್ರಮಗಳಿಂದ ಇಂತಹ ಮೂಲಸೌಕರ್ಯಗಳ ಮೇಲೆ ಜನರು ತಮ್ಮ ಜೇಬಿನಿಂದ ಖರ್ಚು ಮಾಡುವುದು ಹೆಚ್ಚಾಗುವ ಸ್ಥಿತಿ ನಿರ್ಮಾಣ ಮಾಡುವುದು. ಇವೆಲ್ಲ ಇಂದು ಸರಕಾರದ ಕೆಲಸವಾಗಿದೆ.

### ಪರಿಣಾಮಗಳು

ಮೇಲಿನ ಆರ್ಥಿಕ ನೀತಿಗಳು ಜಾರಿಗೆ ಬಂದ ನಂತರ ಸರಕಾರಗಳು ಬಡವರ ಪರ ಕಾರ್ಯ ನಿರ್ವಹಿಸುವುದನ್ನು ಕಡಿಮೆ ಮಾಡಿವೆ. ಬಡವರ ಬದಲು ಸರಕಾರಗಳು ಉದ್ದಿಮೆಗಳ ಪರ ಹೆಚ್ಚು ಹೆಚ್ಚು ಕೆಲಸ ಮಾಡುತ್ತಿವೆ. ಇವು ಸಮಾಜದ ಎಲ್ಲರನ್ನೂ ವಿವಿಧ ರೂಪದಲ್ಲಿ ಕಾಡಿವೆ. ಆದರೆ ಒಂದೇ ರೀತಿಯಲ್ಲಿ ಕಾಡಿಲ್ಲ. ಕೆಲವರು ಈ ನೀತಿಗಳಿಂದ ಲಾಭ ಮಾಡಿಕೊಂಡರೆ ಹಲವರು ನಷ್ಟ ಅನುಭವಿಸಿದ್ದಾರೆ. ನಮಗಿಂತ ಹೆಚ್ಚು ಜನಸಂಖ್ಯೆ ಇರುವ ಚೈನಾದಲ್ಲಿ ಪ್ರಪಂಚದ ಬಡವರ ಶೇ. ೩೦ರಷ್ಟು ಮಾತ್ರ ಇದ್ದರೆ ಪ್ರಪಂಚದ ಬಡವರಲ್ಲಿ ಶೇ. ೨೦ರಷ್ಟು ಬಡವರು ಭಾರತದಲ್ಲಿದ್ದಾರೆ. ಸರಕಾರ ಬಡತನ ರೇಖೆಯನ್ನು ಬದಿಗಿಟ್ಟು ಅಂತರರಾಷ್ಟ್ರೀಯ ಬಡತನ ರೇಖೆಯಿಂದ (೧.೨೫ ಡಾಲರ್) ಮಾಪನ ಮಾಡಿದರೆ ಶೇ. ೪೦ರಷ್ಟು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಇದೇ ಮಾನದಂಡವನ್ನು ಎರಡು ಡಾಲರ್‌ಗೆ ಏರಿಸಿದರೆ ಶೇ. ೭೭ರಷ್ಟು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ವರ್ಲ್ಡ್ ವೆಲ್ತ್ ರಿಪೋರ್ಟ್ (೨೦೧೪)ನ ಪ್ರಕಾರ ೨೦೦೦ದಲ್ಲಿ ಭಾರತದ ಶೇ. ೧ರಷ್ಟು ಶ್ರೀಮಂತರು ದೇಶದ ಸಂಪತ್ತಿನ ಶೇ. ೩೭ರಷ್ಟನ್ನು ಹೊಂದಿದ್ದರು. ೨೦೧೪ರಲ್ಲಿ ಇವರು ಹೊಂದಿರುವ ಸಂಪತ್ತಿನ ಪ್ರಮಾಣ ಶೇ. ೪೯ಕ್ಕೆ ಏರಿದೆ. ಶೇ. ೧೦ರಷ್ಟಿರುವ ಅನುಕೂಲಸ್ಥರು ೨೦೦೦ದಲ್ಲಿ ದೇಶದ ಸಂಪತ್ತಿನ ಶೇ. ೬೦ರಷ್ಟನ್ನು ಹೊಂದಿದ್ದರು. ೨೦೧೪ರಲ್ಲಿ ಇವರು ಹೊಂದಿರುವ ಸಂಪತ್ತಿನ ಪ್ರಮಾಣ ಶೇ. ೭೪ಕ್ಕೆ ಏರಿದೆ. ಉಳಿದ ಶೇ. ೯೦ರಷ್ಟು ಜನರು ಶೇ. ೨೫ರಷ್ಟು ಸಂಪತ್ತನ್ನು ಹಂಚಿಕೊಳ್ಳುತ್ತಿದ್ದಾರೆ.

ಇಂದಿನ ಅಭಿವೃದ್ಧಿಯನ್ನು ಜೀರ್ಣಿಸಿಕೊಳ್ಳಬೇಕಾದರೆ ಒಂದೋ ಭೂಮಿ ಬೇಕು, ಇಲ್ಲವೇ ಬಂಡವಾಳ ಬೇಕು, ಇಲ್ಲವೇ ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ಸ್ಕಿಲ್ ಬೇಕು ಎನ್ನುವುದನ್ನು ಮೇಲಿನ ಅಂಕಿಅಂಶಗಳು ತೋರಿಸುತ್ತವೆ. ಭೂಮಿ,





ಬಂಡವಾಳ, ಸ್ಕಿಲ್ ಈ ಮೂರರಲ್ಲಿ ಒಂದೂ ಇಲ್ಲದವರು ಆತ್ಮಹತ್ಯೆ ಮಾಡಿಕೊಳ್ಳುವುದು ಅಥವಾ ಸರಕಾರದ ಬಡತನ ನಿವಾರಣಾ ಕಾರ್ಯಕ್ರಮಗಳನ್ನು ನಂಬಿ ಬದುಕುವುದು ಬಿಟ್ಟರೆ ಬೇರೆ ದಾರಿಯೇ ಇಲ್ಲ ಎನ್ನುವ ಸ್ಥಿತಿಯನ್ನು ಇಂದಿನ ಅಭಿವೃದ್ಧಿ ಸೃಷ್ಟಿಸಿದಂತಿದೆ. ನಮ್ಮಲ್ಲಿ ಮೂರನೇ ಒಂದರಷ್ಟು ಜನರಿಗೆ ಭೂಮಿಯೇ ಇಲ್ಲ. ಭೂಮಿ ಇರುವ ಮೂರನೇ ಎರಡರಷ್ಟು ಕೃಷಿಕರಲ್ಲಿ ಮುಕ್ಕಾಲು ಭಾಗ ಸಣ್ಣ ಮತ್ತು ಅತೀ ಸಣ್ಣ ಕೃಷಿಕರು. ಬಹುತೇಕ ಸಣ್ಣ ಮತ್ತು ಅತೀ ಸಣ್ಣ ಕೃಷಿಕರು ಒಂದರಿಂದ ಒಂದೂವರೆ ಎಕರೆ ಭೂಮಿಯ ಮಾಲೀಕರು. ಇವರ ಸ್ವಾಧೀನ ಇರುವ ಭೂ ಹಿಡುವಳಿ ಕರ್ನಾಟಕದಲ್ಲಿ ಶೇ. ೩೭.೪, ದೊಡ್ಡ ಮತ್ತು ಮಧ್ಯಮ ರೈತರಲ್ಲಿರುವ ಭೂ ಹಿಡುವಳಿ – ಶೇ. ೬೨.೬ ಅತೀ ಹೆಚ್ಚು ರೈತರ ಆತ್ಯಹತ್ಯೆ ನಡೆದಿರುವುದು ನಾಲ್ಕು ರಾಜ್ಯಗಳಲ್ಲಿ – ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ (ಎಪಿ) ಮತ್ತು ಮಧ್ಯಪ್ರದೇಶ (ಎಂಪಿ) ರಾಜ್ಯಗಳಲ್ಲಿ. ಈ ರಾಜ್ಯಗಳಲ್ಲಿ ಸಣ್ಣ ರೈತರ ಸ್ವಾಧೀನ ಇರುವ ಭೂಮಿ ಕೂಡ ಕಡಿಮೆ ಇದೆ. ಎಪಿ – ಶೇ. ೩೮.೬, ಮಹಾರಾಷ್ಟ್ರ ಶೇ. ೩೧.೭, ಎಂ.ಪಿ. ಶೇ. ೩೪.೩ರಷ್ಟು ಭೂಮಿ ಸಣ್ಣ ರೈತರ ಸ್ವಾಧೀನದಲ್ಲಿವೆ.

ಈಶಾನ್ಯ ಭಾರತದ ತ್ರಿಪುರಾ, ಮಣಿಪುರ, ನಾಗಲ್ಯಾಂಡ್ ರಾಜ್ಯಗಳಲ್ಲಿ ಹೆಚ್ಚು ಕಡಿಮೆ ಶೇ. ೯೦ರಷ್ಟು ಭೂ ಹಿಡುವಳಿ ಸಣ್ಣ ರೈತರ ಸ್ವಾಧೀನದಲ್ಲಿದೆ. ಇಲ್ಲಿ ರೈತರ ಆತ್ಮಹತ್ಯೆ ಇಲ್ಲ. ನೀರಾವರಿ ಇರುವ ಪ್ರದೇಶದಲ್ಲಿ ಇಂತಹ ಸಣ್ಣ ಭೂಮಿಯಲ್ಲೂ ಸಣ್ಣ ಕುಟುಂಬಗಳು ಉಸಿರಾಡಬಹುದು. ಆದರೆ ನಮ್ಮ ರಾಜ್ಯದಲ್ಲಿ ಮೂರನೇ ಎರಡರಷ್ಟು ಭಾಗದಲ್ಲಿ ನೀರಾವರಿ ಇಲ್ಲ. ನೀರಾವರಿ ಇಲ್ಲದ ಭಾಗದ ಸಣ್ಣ ಮತ್ತು ಅತೀ ಸಣ್ಣ ರೈತರು ಮತ್ತು ಭೂರಹಿತರ ನಡುವೆ ವಿಶೇಷ ವ್ಯತ್ಯಾಸವಿಲ್ಲ. ಭೂರಹಿತರು ಮೂರು ಹೊತ್ತಿನ ಊಟಕ್ಕಾಗಿ ಮತ್ತೊಬ್ಬರಲ್ಲಿ ವರ್ಷಪೂರ್ತಿ ಕೂಲಿ ಮಾಡಿದರೆ ಸಣ್ಣ ಮತ್ತು ಅತೀ ಸಣ್ಣ ರೈತರು ವರ್ಷದ ಬಹುಭಾಗ ಕೂಲಿ ಮಾಡಬೇಕು. ಇದು ನಮ್ಮ ರಾಜ್ಯದ ಕತೆ ಮಾತ್ರವಲ್ಲ, ದೇಶದ ಎಲ್ಲ ರಾಜ್ಯಗಳ ಕತೆಯೂ ಹೆಚ್ಚುಕಡಿಮೆ ಇದೇ ರೀತಿಯದು. ರೈತರ ಆತ್ಮಹತ್ಯೆ ಮೇಲಿನ ಅಂಕಿಅಂಶಗಳು ಕೂಡ ಇದೇ ಅಂಶದತ್ತ ಬೊಟ್ಟು ಮಾಡುತ್ತಿವೆ. ಆತ್ಮಹತ್ಯೆ ಮಾಡಿಕೊಂಡವರಲ್ಲಿ ಶೇ. ೨೮ರಷ್ಟು ಅತೀ ಸಣ್ಣ ರೈತರಾದರೆ, ಶೇ. ೪೫ ರಷ್ಟು ಸಣ್ಣ ರೈತರಿದ್ದಾರೆ. ಅಂದರೆ ಆತ್ಮಹತ್ಯೆ ಮಾಡಿಕೊಂಡ ರೈತರಲ್ಲಿ ಮುಕ್ಕಾಲು ಭಾಗ (ಶೇ. ೭೩) ಸಣ್ಣ ಮತ್ತು ಅತೀ ಸಣ್ಣ ರೈತರು.

ತೊಂಬತ್ತರ ದಶಕದಲ್ಲಿ ಮುಕ್ತ ಮಾರುಕಟ್ಟೆ ಅಭಿವೃದ್ಧಿ ನೀತಿಗಳು ಜಾರಿಗೊಳ್ಳುವುದರೊಂದಿಗೆ ಬ್ಯಾಂಕ್ ನೀತಿಗಳು ಬದಲಾದವು. ಸಂಘಟಿತ ಮೂಲದ ಸಾಲದ ಅಲ್ಪಭಾಗವನ್ನು (ಶೇ. ೪೦) ಆದ್ಯತಾ ವಲಯಕ್ಕೆ ನೀಡಿ ಬಹುಭಾಗವನ್ನು (ಶೇ. ೬೦) ಸಾಮಾನ್ಯ ವಲಯಕ್ಕೆ ನೀಡಬೇಕೆಂದು ಸರಕಾರವೇ ತೀರ್ಮಾನಿಸಿತು. ಆದ್ಯತಾ ವಲಯದ ಶೇ. ೪೦ರಷ್ಟು ಸಂಘಟಿತ ಸಾಲವನ್ನು ಕೃಷಿಕರು, ಸಣ್ಣ ಉದ್ದಿಮೆಗಳು ಮತ್ತು ಬಡವರು ಹಂಚಿಕೊಳ್ಳಬೇಕಾಗಿದೆ. ಕೃಷಿಕರು, ಸಣ್ಣ ಉದ್ದಿಮೆದಾರರು ಮತ್ತು ಬಡವರು ಇವರೆಲ್ಲ ಸೇರಿದರೆ ಹೆಚ್ಚು ಕಡಿಮೆ ನಮ್ಮ ಸಮಾಜದ ಶೇ. ೯೦ರಷ್ಟು ಇವರೇ ಇದ್ದಾರೆ. ಅಂದರೆ ಸಂಘಟಿತ ಸಾಲದ ಅಲ್ಪಭಾಗವನ್ನು (ಶೇ. ೪೦) ಶೇ. ೯೦ರಷ್ಟು ಜನರು ಹಂಚಿಕೊಳ್ಳಬೇಕಾಗಿದೆ. ಇದೇ ಸಂದರ್ಭದಲ್ಲಿ ಅಲ್ಪಸಂಖ್ಯೆಯಲ್ಲಿರುವ (ಅಂದಾಜು ಶೇ. ೧೦ರಷ್ಟಿರುವ) ದೊಡ್ಡ ಕೃಷಿಕರು, ದೊಡ್ಡ ಉದ್ದಿಮೆಗಳು, ದೊಡ್ಡ ವ್ಯಾಪಾರಿಗಳು ಸಂಘಟಿತ ಸಾಲದ ಬಹುಭಾಗವನ್ನು (ಶೇ. ೬೦) ಅನುಭವಿಸುತ್ತಿದ್ದಾರೆ. ನಮ್ಮ ಸಾಲ ನೀತಿಯು ದೊಡ್ಡ ಬಂಡವಳಿಗರ, ದೊಡ್ಡ ಕೃಷಿಕರ ಪರ ಇರುವುದು ಮೇಲಿನ ಅಂಕಿಅಂಶಗಳಿಂದ ಸ್ಪಷ್ಟವಾಗುತ್ತದೆ. ಬಂಡವಾಳ ಹೂಡಿಕೆ ಮತ್ತು ಭೂ ಹಿಡುವಳಿ ಹೆಚ್ಚಾದಂತೆ ಲಭ್ಯವಾಗುವ ಸಂಘಟಿತ ಸಾಲದ ಪಾಲು ಕೂಡ ಹೆಚ್ಚಾಗುತ್ತಾ ಹೋಗುತ್ತದೆ.

ಈ ಕಾರಣದಿಂದಲೇ ಸಣ್ಣಪುಟ್ಟ ಉದ್ದಿಮೆಗಳು, ಸಣ್ಣಪುಟ್ಟ ಕೃಷಿಕರು ತಮ್ಮ ಹಣಕಾಸು ಅಗತ್ಯತೆಗಳಿಗೆ ಅಸಂಘಟಿತ ಮೂಲಗಳನ್ನು ಅವಲಂಬಿಸಬೇಕಾಗಿದೆ. ಆರ್‌ಬಿಐ ಮೂಲಗಳ ಪ್ರಕಾರ ೧೯೯೧ರಲ್ಲಿ ಶೇ. ೩೬ರಷ್ಟಿದ್ದ ಅಸಂಘಟಿತ ಮೂಲದ ಸಾಲದ ಪ್ರಮಾಣ ೨೦೦೨ರ ವೇಳೆಗೆ ಶೇ. ೪೩ಕ್ಕೆ ಏರಿದೆ. ೫೯ನೇ ಸುತ್ತಿನ ನ್ಯಾಷನಲ್ ಸ್ಯಾಂಪಲ್ ಸರ್ವೇ ಪ್ರಕಾರ ಒಟ್ಟು ಕೃಷಿಕರಲ್ಲಿ ಶೇ. ೨೭ರಷ್ಟು ಕೃಷಿಕರು ಅಧಿಕೃತ ಮೂಲಗಳಿಂದ ಸಾಲ ಪಡೆದರೆ ಶೇ. ೨೨ರಷ್ಟು ಕುಟುಂಬಗಳು ಅನಧಿಕೃತ ಮೂಲಗಳಿಂದ ಸಾಲ ಪಡೆಯುತ್ತಾರೆ. ಇನ್ನುಳಿದ ಶೇ. ೫೧ರಷ್ಟು ಕುಟುಂಬಗಳಿಗೆ (ಅವುಗಳಲ್ಲಿ ಬಹುತೇಕ ಸಣ್ಣ ಮತ್ತು ಅತೀ ಸಣ್ಣ ಕೃಷಿಕ ಕುಟುಂಬಗಳು) ಯಾವುದೇ ಮೂಲದಿಂದ ಸಾಲ ಪಡೆಯಲು ಸಾಧ್ಯವಾಗುತ್ತಿಲ್ಲ. ಆತ್ಮಹತ್ಯೆ ಕೂಡ ಮೇಲಿನ ಅಂಕಿಅಂಶಗಳು ಕೂಡ ಈ ಅಂಶವನ್ನು ದೃಢೀಕರಿಸುತ್ತವೆ. ಒಂದು ಲಕ್ಷಕ್ಕಿಂತ ಕಡಿಮೆ ಆದಾಯ ಇರುವವರು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಶೇ. ೭೦ರಷ್ಟಿದ್ದಾರೆ. ಉಳಿದವರು (ಶೇ. ೩೦) ಕೂಡ ಶ್ರೀಮಂತರಲ್ಲ. ಅವರ ವಾರ್ಷಿಕ ಆದಾಯ ಒಂದು ಲಕ್ಷಕ್ಕಿಂತ ಹೆಚ್ಚಿದೆ, ಆದರೆ ಐದು ಲಕ್ಷಕ್ಕಿಂತ ಕಡಿಮೆ ಇದೆ. ಮುಂದಿನ ಭಾಗದಲ್ಲಿ ಕೃಷಿ ನೀತಿ ಮತ್ತು ರೈತರ ಆತ್ಮಹತ್ಯೆ ನಡುವಿನ ಸಂಬಂಧವನ್ನು ಚರ್ಚಿಸಿದ್ದೇನೆ.

## ಭಾಗ – ೨

ರೈತರ ಆತ್ಮಹತ್ಯೆ ಬಗ್ಗೆ ಎರಡು ನಿಲುವುಗಳಿವೆ. ಒಂದು, ಇದೇನು ಹೊಸತಲ್ಲ, ಹಿಂದಿನಿಂದಲೂ ಆತ್ಮಹತ್ಯೆಗಳು ನಡೆಯುತ್ತಿದ್ದವು. ಹಿಂದೆ ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಟಿವಿ, ಪತ್ರಿಕೆಗಳಿರಲಿಲ್ಲ. ಆದುದರಿಂದ ಆತ್ಮಹತ್ಯೆಗಳು ದೊಡ್ಡ ಸುದ್ದಿಯಾಗುತ್ತಿರಲಿಲ್ಲ. ಆದರೆ ಇಂದು ಟಿವಿ, ಪತ್ರಿಕೆಗಳ ಸಂಖ್ಯೆ ಹೆಚ್ಚಾಗುತ್ತಿದೆ. ಟಿವಿ ಚಾನಲ್ಲುಗಳು ತಮ್ಮ ಟಿಆರ್‌ಪಿ ರೇಟ್ ಹೆಚ್ಚಿಸಿಕೊಳ್ಳಲು, ಪತ್ರಿಕೆಗಳು ತಮ್ಮ ಸರ್ಕ್ಯುಲೇಶನ್ ಹೆಚ್ಚಿಸಿಕೊಳ್ಳಲು ರೈತರ ಆತ್ಮಹತ್ಯೆಯನ್ನು ರೋಚಕವಾಗಿ ಪ್ರಸಾರ ಮಾಡುತ್ತಿವೆ ಅಷ್ಟೆ. ಅಂದರೆ ಇದೊಂದು ದೊಡ್ಡ ಸಮಸ್ಯೆಯಲ್ಲ, ಮಾಧ್ಯಮಗಳು ಇವನ್ನು ಸಮಸ್ಯೆ ಮಾಡುತ್ತಿವೆ ಎನ್ನುವ ನಿಲುವು.

ಎರಡನೇ ನಿಲುವು ಹೊಸ ಆರ್ಥಿಕ ನೀತಿಗಳಿಗೆ ಸಂಬಂಧಿಸಿದೆ. ಆತ್ಮಹತ್ಯೆ ಹಿಂದೆ ಕೂಡ ಇತ್ತು. ಆದರೆ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿರಲಿಲ್ಲ. ತೊಂಬತ್ತರ ದಶಕದ ಉದಾರೀಕರಣ, ಖಾಸಗೀಕರಣ, ಜಾಗತೀಕರಣ (ಎಲ್‌ಪಿಜಿ) ನೀತಿಗಳು ರೈತರ ಬದುಕನ್ನು ಗಾಢವಾಗಿ ಪ್ರಭಾವಿಸಿವೆ. ಮೂರು ಹೊತ್ತಿನ ಊಟಕ್ಕೆ ಬೆಳೆ ಬೆಳೆಯುತ್ತಿದ್ದ ಸಣ್ಣಪುಟ್ಟ ರೈತರನ್ನು ಹೊಸ ಆರ್ಥಿಕ ನೀತಿಗಳು ಮಾರುಕಟ್ಟೆಯಲ್ಲಿ ವ್ಯವಹರಿಸಲು ಬಲಾತ್ಕರಿಸುತ್ತಿವೆ. ಹೊಸ ಆರ್ಥಿಕ ನೀತಿಗಳು ಬರುವ ಮುನ್ನ ಅವರ ಮಾರುಕಟ್ಟೆ ವ್ಯವಹಾರಗಳು ಊರ ಸಂತೆ, ಎಪಿಎಮ್‌ಸಿ, ತಾಲ್ಲೂಕು ಕೇಂದ್ರದ ಸಗಟು ವ್ಯಾಪಾರಿಗಳಿಗೆ ಸೀಮಿತವಾಗಿದ್ದವು.

ಅವರು ಕೃಷಿಯಲ್ಲಿ ಕಾಣುತ್ತಿದ್ದ ಏರುಪೇರುಗಳಿಗೂ ಅವರು ವ್ಯವಹರಿಸುತ್ತಿದ್ದ ಮಾರುಕಟ್ಟೆಯ ಏರುಪೇರುಗಳಿಗೂ ವಿಶೇಷ ವ್ಯತ್ಯಾಸವಿರಲಿಲ್ಲ. ಆದರೆ ತೊಂಬತ್ತರ ದಶಕದ ಆರ್ಥಿಕ ನೀತಿಗಳು ಸಣ್ಣಪುಟ್ಟ ಕೊಳದಲ್ಲಿ ಈಜಾಡುತ್ತಿದ್ದವರನ್ನು ಎತ್ತಿ ಸಮುದ್ರಕ್ಕೆ ಬಿಸಾಕಿದ ಅನುಭವವನ್ನು ರೈತರಿಗೆ ನೀಡುತ್ತಿವೆ. ತಮ್ಮ ಊರು, ಹೆಚ್ಚೆಂದರೆ ತಾಲ್ಲೂಕು ಕೇಂದ್ರಗಳಲ್ಲಿ ಆಗುವ ಬದಲಾವಣೆಗಳನ್ನು ಅರ್ಥಮಾಡಿಕೊಂಡು ವ್ಯವಹರಿಸುವ ರೈತರನ್ನು ಒಮ್ಮಿಂದೊಮ್ಮೆಲೇ ಪ್ರಪಂಚದ ಯಾವುದೋ ಮೂಲೆಯಲ್ಲಿ ಆಗುವ ಬದಲಾವಣೆಗಳನ್ನು ಅರ್ಥಮಾಡಿಕೊಂಡು ವ್ಯವಹರಿಸಬೇಕೆಂದು ಅವರೇ ಚುನಾಯಿಸಿದ ಸರಕಾರಗಳು ಒತ್ತಾಯಿಸುತ್ತಿವೆ. ಅಷ್ಟು ಮಾತ್ರವಲ್ಲ, ಹಿಂದೆ ಹಣ ಕೊಡದೆಯೂ ಅಲ್ಪಸ್ವಲ್ಪ ಕೆಲಸಗಳಾಗುತ್ತಿದ್ದವು. ಇಂದು ಹಣ ಕೊಡದೆ ಯಾವ ಕೆಲಸವೂ ಆಗುವುದಿಲ್ಲ. ಈ ನಿಯಮ ಕಚೇರಿ ವ್ಯವಹಾರಗಳಿಗೆ ಮಾತ್ರ ಸೀಮಿತವಲ್ಲ, ಸಾಮಾಜಿಕ ಸಂಬಂಧಗಳಿಗೂ ಅನ್ವಯವಾಗುತ್ತಿದೆ. ಈ ಎಲ್ಲವೂ ಸಣ್ಣಪುಟ್ಟ ರೈತರನ್ನು ದೊಡ್ಡ ಪ್ರಮಾಣದಲ್ಲಿ ಕಾಡುತ್ತಿವೆ. ಈ ಬದಲಾವಣೆಯನ್ನು ಜೀರ್ಣಿಸಿಕೊಳ್ಳಲಾರದ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ ಎನ್ನುವುದು ಎರಡನೇ ನಿಲುವು.



ಆತ್ಮಹತ್ಯೆಗೆ ಸಂಬಂಧಿಸಿದ ಅಂಕಿಅಂಶಗಳು ಕೂಡ ಈ ನಿಲುವನ್ನು ಸಮರ್ಥಿಸುತ್ತವೆ. ಹೊಸ ಆರ್ಥಿಕ ನೀತಿಗಳು ಬರುವ ಮುನ್ನ ಒಂದು ಲಕ್ಷ ಜನಸಂಖ್ಯೆಗೆ ೫ ಜನರ ಆಸುಪಾಸಿನಲ್ಲಿದ್ದ ರೈತರ ಆತ್ಮಹತ್ಯೆ ತೊಂಬತ್ತರ ದಶಕದ ಕೊನೆಗೆ ೧೪ಕ್ಕೆ, ೨೦೦೫ಕ್ಕೆ ೧೫ಕ್ಕೆ ಮತ್ತು ೨೦೧೧ರ ವೇಳೆಗೆ ೧೬ಕ್ಕೆ ಏರಿದೆ. ತೊಂಬತ್ತರ ದಶಕದಿಂದಲೇ ಹೊಸ ಆರ್ಥಿಕ ನೀತಿಗಳನ್ನು ಹೆಚ್ಚು ಹೆಚ್ಚು ಜಾರಿಗೆ ತಂದ ಕೀರ್ತಿ ದಕ್ಷಿಣ ಭಾರತದ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ ರಾಜ್ಯಗಳಿಗೆ ಸಲ್ಲುತ್ತದೆ. ಉತ್ತರದ ಮಧ್ಯಪ್ರದೇಶವನ್ನು ಕೂಡ ದಕ್ಷಿಣದ ರಾಜ್ಯಗಳ ಸಾಲಿಗೆ ಸೇರಿಸಬಹುದು. ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ಕೂಡ ಈ ರಾಜ್ಯಗಳಲ್ಲಿ ಹೆಚ್ಚಿದೆ. ೧೯೯೯ರಲ್ಲಿ ದೇಶವ್ಯಾಪಿ ಆತ್ಮಹತ್ಯೆ ಮಾಡಿಕೊಂಡ ರೈತರಲ್ಲಿ ಅರ್ಧಕ್ಕಿಂತಲೂ ಹೆಚ್ಚಿನ (ಶೇ. ೫೮ರಷ್ಟು) ಸಂಖ್ಯೆಯ ರೈತರು ಈ ನಾಲ್ಕು ರಾಜ್ಯಗಳಿಗೆ ಸೇರಿದ್ದರೆ ೨೦೧೩ರಲ್ಲಿ ಈ ರಾಜ್ಯಗಳ ಪಾಲು ಶೇ. ೬೯ಕ್ಕೆ ಏರಿದೆ. ಈ ನಾಲ್ಕು ರಾಜ್ಯಗಳಲ್ಲಿ ಪುನಃ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳು ಪ್ರತ್ಯೇಕವಾಗಿ ನಿಲ್ಲುತ್ತವೆ. ಮಹಾರಾಷ್ಟ್ರ ಭಾರತದ ಫಿನಾನ್ಸಿಯಲ್ ಕ್ಯಾಪಿಟಲ್ ಎಂದು ಮತ್ತು ಆಂಧ್ರ ವಿದೇಶಿ ಬಂಡವಾಳ ಆಕರ್ಷಿಸುವಲ್ಲಿ ಅಗ್ರಗಣ್ಯರಾಜ್ಯವೆಂದೂ ಹೆಸರುವಾಸಿಯಾಗಿವೆ.

ಈ ಎರಡು ರಾಜ್ಯಗಳ ಖಾಸಗಿ ಬಂಡವಾಳಪರ ಧೋರಣೆಯ ಪರಿಣಾಮ ರೈತರ ಆತ್ಮಹತ್ಯೆ ಸಂಖ್ಯೆಯಲ್ಲೂ ಪ್ರತಿಫಲನಗೊಂಡಿದೆ. ೨೦೧೨ರಲ್ಲಿ ದೇಶವ್ಯಾಪಿ ಆತ್ಮಹತ್ಯೆ ಮಾಡಿಕೊಂಡ ಒಟ್ಟು ರೈತರಲ್ಲಿ ಶೇ. ೨೭ರಷ್ಟು ಮಹಾರಾಷ್ಟ್ರದವರು ಮತ್ತು ಶೇ. ೧೯ರಷ್ಟು ಆಂಧ್ರದವರು. ಆತ್ಮಹತ್ಯೆ ಹೆಚ್ಚಲು ಎಲ್‌ಪಿಜಿ ನೀತಿಗಳು ಕಾರಣ ಎನ್ನುವುದು ಆತ್ಮಹತ್ಯೆ ಮಾಡಿಕೊಂಡವರ ಹಿನ್ನೆಲೆ ನೋಡಿದರೆ ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ. ಆತ್ಮಹತ್ಯೆ ಮಾಡಿಕೊಂಡವರಲ್ಲಿ ಶೇ. ೨೮ರಷ್ಟು ಅತೀ ಸಣ್ಣ ರೈತರಾದರೆ ಶೇ. ೪೫ರಷ್ಟು ಸಣ್ಣ ರೈತರಿದ್ದಾರೆ. ಒಂದು ಲಕ್ಷಕ್ಕಿಂತ ಕಡಿಮೆ ಆದಾಯ ಇರುವವರು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಶೇ. ೭೦ರಷ್ಟಿದ್ದಾರೆ. ಉಳಿದವರು (ಶೇ. ೩೦) ಕೂಡ ಶ್ರೀಮಂತರಲ್ಲ. ಅವರ ಆದಾಯ ಒಂದು ಲಕ್ಷಕ್ಕಿಂತ ಹೆಚ್ಚಿದೆ ಆದರೆ ಐದು ಲಕ್ಷಕ್ಕಿಂತ ಕಡಿಮೆ ಇದೆ. ಹೈಸ್ಕೂಲ್ ಮತ್ತು ಅದಕ್ಕಿಂತಲೂ ಕಡಿಮೆ ಶಿಕ್ಷಣ ಹೊಂದಿದವರು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಶೇ. ೭೪ರಷ್ಟಿದ್ದಾರೆ.

**ಮಾರುಕಟ್ಟೆ ಸುಧಾರಣೆ**

ಹಾಗಾದರೆ ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ರೈತರ ಪರ ಇಲ್ಲವೇ ಎನ್ನುವ ಪ್ರಶ್ನೆ ಹುಟ್ಟುತ್ತದೆ. ಮಾರುಕಟ್ಟೆ ಪ್ರಕೃತಿ ಸೃಷ್ಟಿಯಲ್ಲ. ಅದು ಕೂಡ ಮನುಷ್ಯರೇ ಸೃಷ್ಟಿಸಿದ ಒಂದು ಸಂಸ್ಥೆ. ತೊಂಬತ್ತರ ಎಲ್‌ಪಿಜಿ ನೀತಿಗಳು ದೊಡ್ಡ ಬಂಡವಳಿಗರು, ವ್ಯಾಪಾರಸ್ಥರು ಮತ್ತು ಶ್ರೀಮಂತ ಕೃಷಿಕರ ಪರ ಇದ್ದಷ್ಟು ಮಾರುಕಟ್ಟೆ ಸುಧಾರಣೆ ಪರ ಇರಲಿಲ್ಲ. ಭೂಸ್ವಾಧೀನ ಮಸೂದೆ ತಿದ್ದುಪಡಿ ಮಾಡಿ ದೊಡ್ಡ ಉದ್ದಿಮೆಗಳಿಗೆ ಭೂಮಿ ಒದಗಿಸುವುದು, ಬ್ಯಾಂಕ್ ಕಾಯಿದೆಗಳನ್ನು ಸುಧಾರಿಸಿ ಸಂಘಟಿತ ಸಾಲದ ಬಹುಪಾಲು ಬೃಹತ್ ಉದ್ದಿಮೆಗಳಿಗೆ ಹರಿಯುವಂತೆ ಮಾಡುವುದು, ಕಾರ್ಮಿಕ ಕಾಯಿದೆಗಳಿಗೆ ತಿದ್ದುಪಡಿ ತಂದು ಅಸಂಘಟಿತ ಕಾರ್ಮಿಕರ ದೊಡ್ಡ ಸೈನ್ಯವನ್ನೇ ಸೃಷ್ಟಿಸುವುದು, ಪ್ರಾಕೃತಿಕ ಸಂಪನ್ಮೂಲಗಳಿಗೆ ಸಂಬಂಧಪಟ್ಟ ಕಾನೂನುಗಳಿಗೆ ತಿದ್ದುಪಡಿ ತಂದು ದೊಡ್ಡ ಉದ್ದಿಮೆಗಳಿಗೆ ಆದ್ಯತೆ ಮೇಲೆ ಕಚ್ಚಾ ಸಾಮಗ್ರಿ ಪೂರೈಸುವುದು – ಇವೆಲ್ಲ ತೊಂಬತ್ತರ ನಂತರ ಅಧಿಕಾರಕ್ಕೆ ಬಂದ ಬಹುತೇಕ ಪಕ್ಷಗಳ ಆದ್ಯತೆಯಾಗಿತ್ತು. ಇದೇ ಸಂದರ್ಭದಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರ ಉತ್ಪನ್ನ ಮಾರುಕಟ್ಟೆ, ಹಣಕಾಸು ಮಾರುಕಟ್ಟೆ, ಮೂಲಸೌಕರ್ಯಗಳ ಮಾರುಕಟ್ಟೆ ಸುಧಾರಣೆಗಳು, ಇವು ಆದ್ಯತೆ ಸ್ಥಾನ ಪಡೆಯಲೇ ಇಲ್ಲ. ಸಣ್ಣಪುಟ್ಟ ಉತ್ಪಾದಕರು ವ್ಯವಹರಿಸುವ ಮಾರುಕಟ್ಟೆ ಸುಧಾರಣೆಯ ಕೊರತೆ ಹೇಗೆ ಸಣ್ಣಪುಟ್ಟ ರೈತರ ಸ್ವರ್ಧಾಶಕ್ತಿಯನ್ನೇ ಉಡುಗಿಸಿವೆಯೆಂದು ಲೇಖನದ ಮುಂದಿನ ಭಾಗದಲ್ಲಿ ವಿವರಿಸಿದ್ದೇನೆ.

ಸರಿಯಾದ ಬೆಲೆ ಸಿಕ್ಕಿಲ್ಲವೆಂದು ರೈತರು ಟೊಮಾಟೋ ಅಥವಾ ಇತರ ತರಕಾರಿಗಳನ್ನು ಬೀದಿಗೆ ಚೆಲ್ಲಿ ಪ್ರತಿಭಟಿಸುವುದನ್ನು ನೋಡಿದ್ದೇವೆ. ಈ ಬಗೆಯಲ್ಲಿ ಪ್ರತಿಭಟಿಸುವ ರೈತರ ಹತಾಶೆಯನ್ನು ಅವರು ಮಾತ್ರ ಅರ್ಥ ಮಾಡಿಕೊಳ್ಳಲು ಸಾಧ್ಯ. ಇಂತಹ ಕ್ರಮದಿಂದ ಅವರ ಸಮಸ್ಯೆ

ಪರಿಹಾರವಾಗುವುದಿಲ್ಲ, ನಿಜ. ಆದರೆ ಹೊಸ ಆರ್ಥಿಕ ನೀತಿಗಳು ಸೃಷ್ಟಿಸಿದ ಅವಾಂತರಗಳನ್ನು ಹೇಗೆ ಎದುರಿಸಬೇಕೆಂದು ತೋಚದೆ ಇಂತಹ ಪ್ರತಿಭಟನೆಗಳು ನಡೆಯುತ್ತಿವೆ. ಮಾರುಕಟ್ಟೆಯಲ್ಲಿ ಬೇಡಿಕೆ ಪೂರೈಕೆಗಳು ಸರಕಿನ ಬೆಲೆಯನ್ನು ತೀರ್ಮಾನಿಸುತ್ತವೆ. ಉತ್ಪಾದಕರಿಗೆ ಅವರು ಬಯಸಿದ ಬೆಲೆ ಸಿಗಬೇಕಾದರೆ, ಒಂದೋ ಅವರಿಗೆ ಬೇಡಿಕೆಯ ಮೇಲೆ ನಿಯಂತ್ರಣ ಬೇಕು ಅಥವಾ ಪೂರೈಕೆಯ ಮೇಲೆ ನಿಯಂತ್ರಣ ಬೇಕು. ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಲು ಸಾಧ್ಯವಾದರೆ ಬೇಡಿಕೆಯ ಮೇಲೆ ನಿಯಂತ್ರಣ ಹೊಂದಬಹುದು. ಮಾತ್ರವಲ್ಲ, ಹೊಸ ಬೇಡಿಕೆಗಳನ್ನು ಸೃಷ್ಟಿಸಬಹುದು. ಆದರೆ ಮೂರು ಹೊತ್ತಿನ ಊಟಕ್ಕೆ ಪರದಾಡುವ ಸಣ್ಣಪುಟ್ಟ ರೈತರು ಬೇಡಿಕೆ ಮೇಲೆ ನಿಯಂತ್ರಣ ಹೊಂದುವುದು ದೂರದ ಮಾತು. ಆದರೆ ಪೂರೈಕೆಯ ಮೇಲೆ ಹಿಡಿತ ಸಾಧಿಸಬಹುದು.

ಪೂರೈಕೆ ಮೇಲೆ ಹಿಡಿತ ಸಾಧಿಸಬೇಕಾದರೆ ನಮ್ಮಲ್ಲಿ ಬೆಳೆಯುವ ಬೆಳೆಗಳ ಬಗ್ಗೆ ನಿಖರವಾದ ಮಾಹಿತಿ ಬೇಕು. ಇಂದು ರೈತರನ್ನು ಬಿಡಿ, ಸರಕಾರಕ್ಕೆ ಅಥವಾ ಕೃಷಿ ಇಲಾಖೆಗೂ ರಾಜ್ಯದಲ್ಲಿ ಬೆಳೆಯುವ ವಿವಿಧ ಬೆಳೆಗಳ ಬಗ್ಗೆ ನಿಖರವಾದ ಮಾಹಿತಿ ಇದೆ ಎನ್ನಲು ಸಾಧ್ಯವಿಲ್ಲ. ಇದಕ್ಕೆ ಬಹುಮುಖ್ಯ ಕಾರಣ ವಿವಿಧ ಬೆಳೆಗಳನ್ನು ಬೆಳೆಯುವ ಪ್ರದೇಶಗಳನ್ನು ನಿರ್ಧರಿಸುವ ವಿಧಾನ. ಬೆಳೆಗಳನ್ನು ಬೆಳೆಯುವ ವಿಸ್ತೀರ್ಣವನ್ನು ನಿರ್ಧರಿಸಲು ಅಧಿಕಾರಿಗಳು ರೈತರ ಪಹಣಿ ಮತ್ತು ಸ್ಯಾಂಪಲ್ ಸರ್ವೇಗಳನ್ನು ಅವಲಂಬಿಸಿದ್ದಾರೆ. ಆದರೆ ಎಷ್ಟೋ ಬಾರಿ ಈ ಎರಡೂ ಮೂಲಗಳು ಕೂಡ ಸರಿಯಾದ ಮಾಹಿತಿ ನೀಡುವುದಿಲ್ಲ. ಏಕೆಂದರೆ ರೈತ ತಾನು ಪಹಣಿಯಲ್ಲಿ ಸೂಚಿಸಿದ ಬೆಳೆಯನ್ನು ಬೆಳೆಯುವುದಿಲ್ಲ. ಕಾಲಕಾಲಕ್ಕೆ ಬದಲಾಯಿಸುತ್ತಾನೆ. ಈ ಬದಲಾವಣೆಗಳು ಪಹಣಿಯಲ್ಲಿ ದಾಖಲಾಗುವುದಿಲ್ಲ. ಇದೇ ರೀತಿ ಇಲಾಖೆಗಳು ಸ್ಯಾಂಪಲ್ ಸರ್ವೇ ಮೂಲಕ ಸಂಗ್ರಹಿಸುವ ಮಾಹಿತಿ ಕೂಡ ನಿಖರವಾಗಿಲ್ಲ. ಈ ಎಲ್ಲ ಕಾರಣಗಳಿಂದ ನಿರ್ದಿಷ್ಟ ಬೆಳೆಯ ಪೂರೈಕೆ ಬಗ್ಗೆ ನಮ್ಮಲ್ಲಿ ಮಾಹಿತಿ ಇಲ್ಲ. ಈ ಲೆಕ್ಕಾಚಾರ ಸರಿ ಹೋಗುವ ತನಕ ಬೇಡಿಕೆ ಮತ್ತು ಪೂರೈಕೆ ನಡುವೆ ಹೊಂದಾಣಿಕೆ ಅಸಾಧ್ಯ.

ಇಡೀ ದೇಶದಲ್ಲೇ ಅತೀ ಹೆಚ್ಚು ಒಣ ಭೂ ಪ್ರದೇಶ ಇರುವ ರಾಜ್ಯಗಳಲ್ಲಿ ಕರ್ನಾಟಕ ಮೂರನೇ ಸ್ಥಾನದಲ್ಲಿದೆ. ಇದೇ ಸಂದರ್ಭದಲ್ಲಿ ನಮ್ಮಲ್ಲೂ ಮೂರನೇ ಒಂದರಷ್ಟು ನೀರಾವರಿಯುಳ್ಳ ಕೃಷಿಕರಿದ್ದಾರೆ. ನೀರಾವರಿಯುಳ್ಳ ಕೃಷಿಕರು ಮತ್ತು ಒಣ ಭೂಪ್ರದೇಶದ ಕೃಷಿಕರು ಒಂದೇ ಬೆಳೆಯನ್ನು ಬೆಳೆಯಲು ವಿನಿಯೋಗಿಸಬೇಕಾದ ಬಂಡವಾಳದಲ್ಲಿ ಸಾಕಷ್ಟು ಅಂತರವಿದೆ. ನೀರಾವರಿ ಇರುವ ಪ್ರದೇಶದ ರೈತರು ಕೆಲವು ನೂರು ರೂ.ಗಳ ನೀರಾವರಿ ಶುಲ್ಕ ಸಂದಾಯ ಮಾಡಿದರೆ ವರ್ಷಪೂರ್ತಿ ನೀರಾವರಿ ಲಭ್ಯ. ಆದರೆ ಒಣ




ಭೂಪ್ರದೇಶದಲ್ಲಿ ಒಂದು ಎಕರೆ ಭೂಮಿಗೆ ನೀರುಣಿಸಬೇಕಾದರೆ ಕನಿಷ್ಠ ಒಂದೆರಡು ಸಾವಿರ ರೂ.ಗಳನ್ನು ವಿನಿಯೋಜಿಸಬೇಕು. ಇವರಿಬ್ಬರ ಒಟ್ಟು ವೆಚ್ಚದಲ್ಲಿ ಇಷ್ಟೊಂದು ವ್ಯತ್ಯಾಸವಿದ್ದರೂ ಮಾರುಕಟ್ಟೆ ಬೆಲೆ ನಿರ್ಧಾರವಾಗುವುದು ನೀರಾವರಿಯುಳ್ಳ ರೈತನ ಬೆಳೆಯ ಆಧಾರದ ಮೇಲೆ. ಅಂದರೆ ವೆಚ್ಚ ಜಾಸ್ತಿ ಆದ ಕಾರಣ ಸ್ವಂತ ನೀರಾವರಿ ಮಾಡಿಕೊಂಡ ರೈತ ನಷ್ಟಕ್ಕೆ ಅಥವಾ ಕಡಿಮೆ ಲಾಭಕ್ಕೆ ಮಾರಲೇಬೇಕಾದ ಸ್ಥಿತಿ ಇದೆ. ನೀರಾವರಿ ಮಾರುಕಟ್ಟೆ ಸುಧಾರಣೆ ಆಗದಿರುವುದರಿಂದ ಈ ಪರಿಸ್ಥಿತಿ ನಿರ್ಮಾಣವಾಗಿದೆ.

ಇದೇ ಬಗೆಯಲ್ಲಿ ಮೂಲಸೌಕರ್ಯಗಳ ಮಾರುಕಟ್ಟೆ ಕೂಡ ಸುಧಾರಣೆ ಕಂಡಿಲ್ಲ. ಕೃಷಿಗೆ ಬೇಕಾದ ಯಂತ್ರೋಪಕರಣಗಳು, ಗೊಬ್ಬರ, ಬೀಜ, ಕ್ರಿಮಿನಾಶಕ ಇತ್ಯಾದಿಗಳು ದೂರದ ಪೇಟೆಯಿಂದ ಬರಬೇಕು. ಅದೇ ರೀತಿ ರೈತ ಬೆಳೆದ ಬೆಳೆಗೆ ಹೆಚ್ಚು ಬೆಲೆ ಸಿಗಬೇಕಾದರೆ ಮಾರುಕಟ್ಟೆಗೆ ಸಾಗಿಸಿ ಮಾರಾಟ ಮಾಡಬೇಕು. ಇದಕ್ಕೆ ಕೆಲವು ಕನಿಷ್ಠ ಸೌಲಭ್ಯಗಳ ಅಗತ್ಯವಿದೆ. ಅದರಲ್ಲಿ ಮುಖ್ಯವಾಗಿ ಬೇಕಾಗಿರುವುದು ರಸ್ತೆ, ವಿದ್ಯುತ್ ಸಂಪರ್ಕ ಮತ್ತು ಮಾಹಿತಿ. ನಮ್ಮಲ್ಲಿ ಇಂದು ಕೂಡ ಸರ್ವಋತು ರಸ್ತೆ ಇಲ್ಲದ ಸಾಕಷ್ಟು ಹಳ್ಳಿಗಳಿವೆ. ಅದೇ ರೀತಿ ವಿದ್ಯುತ್ ಸಂಪರ್ಕ ಇಲ್ಲದ ಹಳ್ಳಿಗಳೂ ಇವೆ. ವಿದ್ಯುತ್ ಇದ್ದ ಕಡೆ ಈ ಸವಲತ್ತು ಪಡೆಯಲು ಅಧಿಕೃತ ಶುಲ್ಕ ಕಟ್ಟುವುದರ ಜೊತೆಗೆ ತಂತಿ, ಕಂಬ ಸಾಗಿಸುವ ಖರ್ಚು, ಕುಣಿ ತೋಡಿ ಕಂಬ ನಿಲ್ಲಿಸುವ ಖರ್ಚು ಎಲ್ಲವನ್ನು ಕೃಷಿಕರು ಭರಿಸಬೇಕು. ಇಷ್ಟೆಲ್ಲ ಖರ್ಚು ಮಾಡಿದ ಕೂಡಲೇ ವಿದ್ಯುತ್ ಸಂಪರ್ಕ ದೊರೆಯುತ್ತದೆ ಎನ್ನಲಾಗುವುದಿಲ್ಲ. ಹಲವು ಬಾರಿ ಅದಕ್ಕೂ ಕಾಯಬೇಕು. ವಿದ್ಯುತ್ ಸಂಪರ್ಕ ದೊರೆತ ಕೂಡಲೇ ಸತತ ವಿದ್ಯುತ್ ಪೂರೈಕೆ ಇದೆ ಎಂದೇನಿಲ್ಲ. ನಮ್ಮ ರಾಜ್ಯದಲ್ಲಂತೂ ರೈತರ ಗೋಳನ್ನು ಬಂಡವಾಳ ಮಾಡಿಕೊಂಡು ಅಧಿಕಾರಕ್ಕೆ ಬರುವ ಎಲ್ಲ ಪಕ್ಷಗಳು ರೈತರಿಗೆ ದಿನದ ೨೪ ಗಂಟೆ ವಿದ್ಯುತ್ ಪೂರೈಕೆ ಮಾಡುವ ಭರವಸೆ ನೀಡುತ್ತವೆ. ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ವಿದ್ಯುತ್ ಪೂರೈಕೆ ೧೦ ಗಂಟೆಗಳಿಗೆ ಇಳಿಯುತ್ತದೆ. ಇನ್ನೂ ಕೆಲವು ತಿಂಗಳು ದಾಟಿದಾಗ ೬ ಅಥವಾ ೪ ಗಂಟೆಗೆ ಇಳಿಯುತ್ತದೆ. ಇದು ಗ್ರಾಮೀಣ ಪ್ರದೇಶದ ವಿದ್ಯುತ್ ಪೂರೈಕೆಯ ಸ್ಥಿತಿ. ಈ ಕನಿಷ್ಠ ಪ್ರಮಾಣದ ವಿದ್ಯುತ್ ಕೂಡ ನಿಗದಿತ ಅವಧಿಯಲ್ಲಿ ಪೂರೈಕೆ ಯಾಗುವುದಿಲ್ಲ. ಬೇರೆಲ್ಲೂ ವಿದ್ಯುತ್ ಬಳಕೆ ಇಲ್ಲದ ಸಂದರ್ಭದಲ್ಲಿ ರೈತ ಪಂಪನ್ನು ಚಾಲನೆ ಮಾಡಬೇಕು.

ಕೃಷಿ ಉತ್ಪನ್ನಗಳಿಗೆ ಬೇಡಿಕೆ ಇಲ್ಲದ ಸಂದರ್ಭದಲ್ಲಿ ಅವನ್ನು ಕಾದಿರಿಸಿ ಬೇಡಿಕೆ ಅಥವಾ ಉತ್ತಮ ಬೆಲೆ ಬಂದ ಸಂದರ್ಭದಲ್ಲಿ ಮಾರುವುದು ಮಾರುಕಟ್ಟೆ ಧರ್ಮ. ಈ ಮಾರುಕಟ್ಟೆ ಧರ್ಮ ಆಚರಣೆಗೆ ಬರಬೇಕಾದರೆ ಬಹುಬೇಗ ಕೊಳೆತುಹೋಗುವ ತರಕಾರಿ, ಹಣ್ಣುಹಂಪಲು, ದವಸಧಾನ್ಯಗಳನ್ನು ಕೆಡದಂತೆ ರಕ್ಷಿಸಲು ಶೈತ್ಯಾಗಾರಗಳು ಬೇಕು. ಆದರೆ ಈ ಸವಲತ್ತುಗಳು ಇನ್ನೂ ಗ್ರಾಮೀಣ ಪ್ರದೇಶಕ್ಕೆ ಬಂದಿಲ್ಲ; ಪೇಟೆ ಪಟ್ಟಣಗಳಲ್ಲೇ ಇವೆ. ಅಂದರೆ ರೈತರೆಲ್ಲ ಪೇಟೆ ಪಟ್ಟಣಗಳ ಸಮೀಪ ಕೃಷಿ ಮಾಡಬೇಕು ಅಥವಾ ತಾವು ಬೆಳೆದುದನ್ನು ಕೆಡದಂತೆ ರಕ್ಷಿಸಲು ಪೇಟೆ ಪಟ್ಟಣಗಳಿಗೆ ಸಾಗಿಸಬೇಕು. ಈ ಸಮಸ್ಯೆಯನ್ನು ಸರಕಾರ ಕೂಡ ಮನಗಂಡಿದೆ. ಪ್ರತಿ ಪಂಚಾಯತ್ ವ್ಯಾಪ್ತಿಯಲ್ಲಿ ಕನಿಷ್ಠ ಒಂದಾದರೂ ಶೈತ್ಯಾಗಾರವನ್ನು ಸ್ಥಾಪಿಸಬೇಕೆನ್ನುವ ಚರ್ಚೆ ಹಲವಾರು ವರ್ಷಗಳಿಂದ ನಡೆಯುತ್ತಿದೆ. ಆದರೆ ಈ ಯೋಜನೆ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ. ನಮ್ಮಲ್ಲಿ ಗ್ರಾಮೀಣಾಭಿವೃದ್ಧಿ ಬಗ್ಗೆ ಕಾಳಜಿ ತೋರಿಸದ ಪಕ್ಷಗಳನ್ನು ಮತ್ತು ರಾಜಕಾರಣಿಗಳನ್ನು ನೋಡಲು ಸಾಧ್ಯವಿಲ್ಲ. ಆದರೆ ವರ್ಷದಿಂದ ವರ್ಷಕ್ಕೆ ಗ್ರಾಮೀಣಾಭಿವೃದ್ಧಿ ಮೇಲೆ ಮಾಡುವ ವಿನಿಯೋಜನೆ ಮಾತ್ರ ಕಡಿಮೆಯಾಗುತ್ತಲೇ ಇದೆ. ತೊಂಬತ್ತರ ದಶಕದಲ್ಲಿ ನಮ್ಮ ಜಿಡಿಪಿಯ ಶೇ. ೧.೬ರಷ್ಟು ಸಂಪನ್ಮೂಲ ಗ್ರಾಮೀಣಾಭಿವೃದ್ಧಿ ಮೇಲೆ ವಿನಿಯೋಜನೆಯಾಗುತ್ತಿತ್ತು. ೨೦೦೧-೦೨ ರಲ್ಲಿ ಈ ಮೊತ್ತ ಶೇ. ೧.೩ಕ್ಕೆ ಇಳಿದಿದೆ. ಈಗ ಅದು ನಮ್ಮ ಜಿಡಿಪಿಯ ಶೇ. ೦.೪ಕ್ಕೆ ಇಳಿದಿದೆ.

### ಸಾಲ ವ್ಯವಸ್ಥೆ

ರೈತರಿಗೆ ದೊರೆಯುವ ಸಾಲದ ವ್ಯವಸ್ಥೆ ಯಂತೂ ತುಂಬ ತಾರತಮ್ಯದಿಂದ ಕೂಡಿದೆ. ತೊಂಬತ್ತರ ನಂತರ ಬ್ಯಾಂಕ್‌ಗಳು ತಮ್ಮ ಸಾಲ ನೀತಿಯನ್ನು ಬದಲಾಯಿಸಿಕೊಂಡಿವೆ. ಅವುಗಳು ಕೂಡ ಮಾರುಕಟ್ಟೆಯಲ್ಲಿ ವ್ಯವಹರಿಸಿ ಲಾಭ ಗಳಿಸುವುದು ಅನಿವಾರ್ಯವಾಗಿದೆ. ಲಾಭ ಗಳಿಸುವ ಉದ್ದೇಶ ಅವುಗಳ ವ್ಯವಹಾರಗಳನ್ನು ಗಾಢವಾಗಿ ಪ್ರಭಾವಿಸಿವೆ. ಬ್ಯಾಂಕುಗಳು ಇಂದು ಸಾಲ ನೀಡುವಾಗ ಗ್ರಾಹಕರ ಅಗತ್ಯಗಳಿಗಿಂತ ಹೆಚ್ಚಾಗಿ ಅವರ ಸಾಲ ಕಟ್ಟುವ ಸಾಮರ್ಥ್ಯವನ್ನು ನೋಡುತ್ತಿವೆ. ಯಾರಿಂದ ಸುಲಭವಾಗಿ ಮತ್ತು ಖಂಡಿತವಾಗಿ ನೀಡಿದ ಸಾಲ ಹಿಂದಕ್ಕೆ ಬರಬಹುದೋ

ಅಂಥವರಿಗೆ ಮಾತ್ರ ಸಾಲ ನೀಡುವ ನೀತಿಯನ್ನು ಅನುಸರಿಸುತ್ತಿವೆ. ತಿಂಗಳು ತಿಂಗಳು ಸಂಬಳ ಬರುವ ಸಂಘಟಿತ ವಲಯದ ನೌಕರರಿಗೆ ಮನೆ, ಕಾರು, ಗೃಹೋಪಯೋಗಿ ವಸ್ತುಗಳ ಖರೀದಿಗೆ ಸಾಲ ನೀಡುವುದು, ಮಧ್ಯಮ ಮತ್ತು ದೊಡ್ಡ ಉದ್ದಿಮೆಗಳಿಗೆ ಸಾಲ ನಿಡುವುದು, ಮಧ್ಯಮ ಮತ್ತು ದೊಡ್ಡ ಕೃಷಿಕರಿಗೆ ಸಾಲ ನೀಡುವುದು, ಬ್ಯಾಂಕುಗಳಿಗೆ ಹೆಚ್ಚು ಲಾಭದಾಯಕ. ಅದುಬಿಟ್ಟು ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಕೆಲವು ಸಾವಿರ ಸಾಲ ಕೊಟ್ಟು ಅದರ ಲೆಕ್ಕಾಚಾರ ಇಡುವುದು, ಕಲೆಕ್ಷನ್‌ಗಾಗಿ ಒದ್ದಾಡುವುದನ್ನು ಬ್ಯಾಂಕುಗಳು ಇಷ್ಟಪಡುವುದಿಲ್ಲ. ಸರಕಾರವೇ ಲಾಭ ಗಳಿಸಿ ಎಂದು ಒತ್ತಾಯಿಸುವಾಗ ಬ್ಯಾಂಕುಗಳನ್ನು ದೂರಿ ಏನು ಪ್ರಯೋಜನ ?

ಹೀಗೆ ಮಾರುಕಟ್ಟೆ ವ್ಯವಸ್ಥೆಯಲ್ಲಿ ವ್ಯವಹರಿಸಲು ಅಗತ್ಯವಿರುವ ಪೂರಕ ಸಂಗತಿಗಳು ಸಮರ್ಪಕವಾಗಿ ಬೆಳೆಯುವ ಮುನ್ನವೇ ರೈತರನ್ನು ಮಾರುಕಟ್ಟೆಯಲ್ಲಿ ವ್ಯವಹರಿಸಿ ಎಂದು ಒತ್ತಾಯಿಸಲಾಗುತ್ತಿದೆ. ಸಣ್ಣಪುಟ್ಟ ಉತ್ಪಾದಕರು ವ್ಯವಹರಿಸುವ ಉತ್ಪನ್ನ, ಹಣಕಾಸು, ಮೂಲಸೌಕರ್ಯಗಳ ಮಾರುಕಟ್ಟೆಗಳನ್ನು ಸುಧಾರಿಸುವ ಮುನ್ನವೇ ರೈತರನ್ನು ಮಾರುಕಟ್ಟೆಯಲ್ಲಿ ವ್ಯವಹರಿಸಿ ಎಂದು ಒತ್ತಾಯಿಸಲಾಗುತ್ತಿದೆ. ಈ ಎಲ್ಲ ಸುಧಾರಣೆಗಳ ಕೊರತೆಯಿಂದ ಸಣ್ಣಪುಟ್ಟ ಉತ್ಪಾದಕರ ಉತ್ಪಾದನೆ ಮತ್ತು ವ್ಯವಹಾರ ವೆಚ್ಚಗಳು ಹೆಚ್ಚಾಗುತ್ತಿವೆ. ಮೀಟರ್ ಬಡ್ಡಿಗೆ ಪಡೆಯುವ ಸಾಲ, ಸಾಲ ಮಾಡಿದ ಹಣದಲ್ಲಿ ಕೊರೆಯುವ ಬೋರ್‌ವೆಲ್‌ಗಳು, ಕೊರೆದ ಬೋರ್‌ವೆಲ್‌ಗಳಿಗೆ ವಿದ್ಯುತ್ ಸಂಪರ್ಕಕ್ಕಾಗಿ ಮಾಡಬೇಕಾದ ಅನಧಿಕೃತ ವೆಚ್ಚ, ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಮಾಡುವ ಅಗತ್ಯಕ್ಕಿಂತ ಹೆಚ್ಚಿನ ಖರ್ಚು, ಶೈತ್ಯಾಗಾರಗಳ ಕೊರತೆಯಿಂದಾಗುವ ನಷ್ಟ ಇವೆಲ್ಲವೂ ಉತ್ಪಾದನಾ ವೆಚ್ಚವನ್ನು ಹೆಚ್ಚಿಸುತ್ತಿವೆ. ಇವುಗಳೊಂದಿಗೆ ಎಲ್ಲ ಕಚೇರಿಗಳಲ್ಲೂ ನೀಡಬೇಕಾದ 'ಸ್ಪೀಡ್ ಮನಿ' (ಲಂಚ) ವ್ಯವಹಾರ ವೆಚ್ಚವನ್ನು ಹೆಚ್ಚಿಸುತ್ತಿವೆ. ವೆಚ್ಚಗಳು ಹೆಚ್ಚಾದಂತೆ ಉತ್ಪಾದಕರ ಸ್ಪರ್ಧಾಶಕ್ತಿ ಕಡಿಮೆಯಾಗುತ್ತದೆ ಮತ್ತು ಆತ್ಮಹತ್ಯೆ ಮಾಡಿಕೊಳ್ಳುವವರ ಸಂಖ್ಯೆ ಹೆಚ್ಚಾಗುತ್ತದೆ.

**ಪರಿಹಾರವೇನು ?**

ದೊಡ್ಡ ಉದ್ದಿಮೆ, ದೊಡ್ಡ ಕೃಷಿಪರ ಇರುವ ಅಭಿವೃದ್ಧಿ ನೀತಿಗಳು ಭೂಮಿ, ಬಂಡವಾಳ, ಮಾರುಕಟ್ಟೆಯಲ್ಲಿ ಬೇಡಿಕೆಯುಳ್ಳ ಸ್ಕಿಲ್ ಇಲ್ಲದ ಎಲ್ಲರ ಬದುಕನ್ನು ದುಸ್ತರಗೊಳಿಸಿವೆ. ಹಾಗೆಂದು ಒತ್ತಡಕ್ಕೆ ಒಳಗಾದವರೆಲ್ಲ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆಂದಲ್ಲ. ಆದರೆ ಆತ್ಮಹತ್ಯೆ ಮಾಡಿಕೊಂಡವರಲ್ಲಿ ಬಹುತೇಕರು ಇವರೇ. ೨೦೧೪ರಲ್ಲಿ ಒಟ್ಟು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರು (೭೩%), ಒಂದು ಲಕ್ಷಕ್ಕಿಂತ ಕಡಿಮೆ ಆದಾಯವುಳ್ಳವರು (೭೦%) ಮತ್ತು ಅತ್ಯಂತ ಕಡಿಮೆ ಶಿಕ್ಷಣವುಳ್ಳವರು (೭೪%) ಹೆಚ್ಚಿದ್ದಾರೆ. ಆದುದರಿಂದ ಇದು ಕೇವಲ ರೈತರ ಸಮಸ್ಯೆಯಲ್ಲ. ಇದು ತಳಸ್ತರದಲ್ಲಿರುವ ಎಲ್ಲರ ಸಮಸ್ಯೆ. ವಾಸ್ತವ ಹೀಗಿರುವಾಗ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ಪರಿಹಾರ ನೀಡುವುದು, ಸಾಂತ್ವನ ನೀಡುವುದು, ಬಡ್ಡಿ ವ್ಯಾಪಾರಗಳನ್ನು ಬಂಧಿಸುವುದು ಇತ್ಯಾದಿ ಸಣ್ಣಪುಟ್ಟ ಕ್ರಮಗಳಿಂದ ಈ ಸಮಸ್ಯೆಗೆ ಪರಿಹಾರ ಸಾಧ್ಯವಿಲ್ಲ. ಇವೆಲ್ಲ ಅಭಿವೃದ್ಧಿ ಸೃಷ್ಟಿಸುವ ನೋವನ್ನು ತಾತ್ಕಾಲಿಕವಾಗಿ ಶಮನಪಡಿಸಬಹುದು. ನವ ಉದಾರವಾದಿ ಆರ್ಥಿಕ ನೀತಿಗಳು ಸೃಷ್ಟಿಸುವ ರೋಗವನ್ನು ಈ ಕ್ರಮಗಳಿಂದ ಗುಣಪಡಿಸಲು ಸಾಧ್ಯವಿಲ್ಲ. ಈ ಸಮಸ್ಯೆಗೆ ದೂರಗಾಮಿ ಪರಿಹಾರ ಬೇಕಾದರೆ ಒಣಭೂಮಿ ಕೃಷಿಗೆ ಆದ್ಯತೆ ನೀಡುವ, ಹಣಕಾಸು ಮಾರುಕಟ್ಟೆ ಸುಧಾರಣೆ, ಅದರಲ್ಲೂ ಸಣ್ಣಪುಟ್ಟ ಕೃಷಿ, ಉದ್ದಿಮೆಗಳಿಗೆ ಸಂಘಟಿತ ಸಾಲ ಹರಿಯುವ ಸುಧಾರಣೆ, ಕೃಷಿ ಮಾರುಕಟ್ಟೆ ಸುಧಾರಣೆ ಅಥವಾ ಕೃಷಿ ಉತ್ಪನ್ನಗಳ ಬೆಲೆ ತೀರ್ಮಾನಿಸುವ ಸುಧಾರಣೆ, ರಸ್ತೆ, ವಿದ್ಯುತ್, ಶೈತ್ಯಾಗಾರ ಮಾಹಿತಿ ಇತ್ಯಾದಿ ಮೂಲಸೌಕರ್ಯಗಳ ಮಾರುಕಟ್ಟೆ ಸುಧಾರಿಸುವ ಹಾಗೂ ಎಲ್ಲರಿಗೂ ಗುಣಮಟ್ಟದ ಶಿಕ್ಷಣ, ಆರೋಗ್ಯ ಲಭ್ಯವಾಗುವ ಅಭಿವೃದ್ಧಿ ನೀತಿಗಳನ್ನು ಸರಕಾರಗಳು ಆದ್ಯತೆ ಮೇಲೆ ರೂಪಿಸಿ ಜಾರಿಗೆ ತರಬೇಕಾಗಿದೆ.

ನವ ಉದಾರವಾದಿ ಆರ್ಥಿಕ ನೀತಿಗಳು ಸೃಷ್ಟಿಸುವ ಅವಾಂತರಗಳನ್ನು ಪರಿಹರಿಸುವ ಅಭಿವೃದ್ಧಿ ನೀತಿಗಳನ್ನು ಈಗ ಕಾರುಬಾರು ಮಾಡುವ ದೊಡ್ಡ ಪಕ್ಷಗಳು ಜಾರಿಗೆ ತರಬೇಕೆಂದು ಬಯಸುವುದು ಬಿಳಿ ಮೋಡದಿಂದ ಮಳೆ ನೀರಿಕ್ಷಿಸಿದಂತೆ. ಲೇಖನದ ಮೊದಲ ಪುಟದಲ್ಲಿ ಹೇಳಿದಂತೆ ಈ ಎರಡು ಪಕ್ಷಗಳ ಆರ್ಥಿಕ ನೀತಿಗಳಲ್ಲಿ ಏನೇನೂ ವ್ಯತ್ಯಾಸವಿಲ್ಲ. ವ್ಯತ್ಯಾಸವಿರುವುದು ಇವರ ರಾಜಕೀಯ ಘೋಷಣೆಗಳಲ್ಲಿ ಮಾತ್ರ. ಆದುದರಿಂದ ಈ ಪಕ್ಷಗಳಿಂದ ಅವರ ಮೂಲ ಉದ್ದೇಶಕ್ಕೆ ಭಿನ್ನವಾದ ಆರ್ಥಿಕ ನೀತಿಗಳನ್ನು ನಿರೀಕ್ಷಿಸುವುದು ಸರಿಯಾಗುವುದಿಲ್ಲ. ಅಂದರೆ ಇದು ಕೇವಲ ಅಭಿವೃದ್ಧಿ ಸಮಸ್ಯೆ ಮಾತ್ರವಲ್ಲ; ರಾಜಕೀಯದ ಸಮಸ್ಯೆ ಕೂಡ. ಇದನ್ನೇ ಇನ್ನೊಂದು ವಿಧದಲ್ಲಿ ಹೇಳುವುದಾದರೆ ಇದು ಅಭಿವೃದ್ಧಿ ರಾಜಕಾರಣದ ಅಥವಾ ರಾಜಕೀಯ ಅರ್ಥಶಾಸ್ತ್ರದ ಪ್ರಶ್ನೆ ಕೂಡ. ಬದಲಾವಣೆ ಬಯಸುವವರು ಆರ್ಥಿಕ ನೀತಿಗಳ ರಾಜಕೀಯ ಆಯಾಮವನ್ನು ಬಿಟ್ಟು ಸಮಸ್ಯೆ ಪರಿಹಾರಕ್ಕೆ ಪ್ರಯತ್ನಿಸಿದರೆ ಯಶಸ್ಸು ಸಿಗುವುದಿಲ್ಲ. ಬದಲೀ ಅಭಿವೃದ್ಧಿಯನ್ನು ಪ್ರತಿಪಾದಿಸುವ ರಾಜಕೀಯ ಪಕ್ಷಗಳನ್ನು ಬೆಂಬಲಿಸುವುದು ಈ ಸಮಸ್ಯೆಗೆ ಶಾಶ್ವತ ಪರಿಹಾರ ಹುಡುಕುವ ದೃಷ್ಟಿಯಿಂದ ಮಾಡಬೇಕಾದ ಮೊದಲ ಕೆಲಸ. ಇದು ಹೇಳಿದಷ್ಟು ಸುಲಭವಲ್ಲ. ಈಗ ಕಾರುಬಾರು ಮಾಡುತ್ತಿರುವ ಪಕ್ಷಗಳು ಜಾತಿ, ಧರ್ಮ, ಪ್ರದೇಶ, ಭಾಷೆಯಂತಹ ಸಮಸ್ಯೆಗಳನ್ನು ಹುಟ್ಟುಹಾಕಿ ಜನರ ನಡುವೆ ಕಂದಕಗಳನ್ನು ಸೃಷ್ಟಿಸಿವೆ. ಅಷ್ಟು ಮಾತ್ರವಲ್ಲ, ತಳಸ್ತರದ ಜನರು ತಮ್ಮ ಹೊಟ್ಟೆಬಟ್ಟೆ, ಶಿಕ್ಷಣ, ಆರೋಗ್ಯ ಪ್ರಶ್ನೆಗಳನ್ನು ಪರಿಹರಿಸಲು ಬಳಸಬೇಕಾದ ಶ್ರಮವೆಲ್ಲವನ್ನು ಪರಸ್ಪರ ಕಚ್ಚಾಡುವುದಕ್ಕೆ ಬಳಸುವಂತೆ ಈ ಪಕ್ಷಗಳು ತರಬೇತು ನೀಡಿವೆ. ತಳಸ್ತರದ ಜನರನ್ನು ಇಂತಹ ಸ್ಥಿತಿಯಿಂದ ಹೊರತಂದು ಅವರ ಅಸ್ತಿತ್ವದ ಹೋರಾಟಕ್ಕೆ ಸಜ್ಜುಗೊಳಿಸುವುದು ಮಹತ್ವದ ಕೆಲಸ. ಇದು ಸಾಧ್ಯವಾದರೆ ಮಾತ್ರ ಬದಲೀ ಅಭಿವೃದ್ಧಿ ರಾಜಕಾರಣದ ಕನಸು ನನಸಾಗಬಹುದು.

**ಡಾ॥ ಎಂ. ಚಂದ್ರ ಪೂಜಾರಿ**
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ, ವಿದ್ಯಾರಣ್ಯ, ಬಳ್ಳಾರಿ – ೫೮೩೨೭೬

ಮಾನವ ಹಕ್ಕು, ಲಿಂಗ ಸಮಾನತೆಯ ಪ್ರತಿಪಾದನೆಗಳು ಹೆಚ್ಚೆಚ್ಚು ಆಗುತ್ತ ಹೋದಹಾಗೆ ಜೀವವಿರೋಧಿ, ಮಹಿಳಾ ವಿರೋಧಿ ಘಟನೆಗಳೂ ಸಾಕಷ್ಟು ಜರುಗುತ್ತಿವೆ. ಹೆಂಗಸರು ಹೆರುವುದಕ್ಕಷ್ಟೆ ಲಾಯಕ್ಕು, ಲೋಕವ್ಯಾಪಾರಗಳನ್ನು ಗಂಡೇ ನೋಡಿಕೊಳ್ಳಬೇಕು ಎಂದು ಧರ್ಮಗುರುವೊಬ್ಬರು ಹೇಳಿರುವುದರ ಬೆನ್ನಿಗೆ ಮಹಾರಾಷ್ಟ್ರದ ಶನಿ ಸಿಂಗ್ನಾಪುರದ ಮಹಿಳಾ ನಿಷೇಧಿತ ದೇವಳಕ್ಕೆ ಹೆಣ್ಣು ಹೋದಳೆಂದು ಶುದ್ಧತಾ ಕಾರ್ಯ ನಡೆದಿದೆ.

ಹೀಗಿರುತ್ತ ಮಹಿಳಾ ಚಳುವಳಿ ಜಗತ್ತಿನ ಅತ್ಯಂತ ದೀರ್ಘ ವಿಮೋಚನಾ ಹೋರಾಟವಾಗಲಿರುವ ಬಗೆಗೆ ಯಾವುದೇ ಅನುಮಾನವಿಲ್ಲ. ಹಾಗಾದರೆ ಮಹಿಳಾ ಹೋರಾಟದ ಅಂತಿಮ ಬಿಂದು ಯಾವುದು ಎಂಬ ಪ್ರಶ್ನೆಯೂ ಕೇಳಬರುತ್ತಿದೆ. ಹೆಣ್ಮಕ್ಕಳ ಕನಸಿನ ಆದರ್ಶ ಸಮಾಜ ಹೇಗಿರಬೇಕು ? ಕೊನೆಗೂ ಹೆಣ್ಣಿಗೆ ಬೇಕಿರುವುದಾದರೂ ಏನು ? ಹೆಣ್ಣಿನ ಜೈವಿಕ ಹಾಗೂ ಸಾಮಾಜಿಕ ಪಾತ್ರಗಳ ನಿಭಾವಣೆಗೆ ಸಹಕರಿಸುವಲ್ಲಿ ಗಂಡಸಿನ ಪಾತ್ರವೇನು ? ಲಿಂಗಾಧಾರಿತ ಪಾತ್ರಗಳ ತಿರುವು ಮುರುವು ಮಹಿಳಾ ಹೋರಾಟದ ತುದಿಯಿರಬಹುದೆ ? ಎಂಬಿತ್ಯಾದಿ ಚರ್ಚೆಯೂ ನಡೆಯುತ್ತಿದೆ.

# ಬಂಗಾಳದ ಅಕ್ಷರದೀಪ
# ಬೇಗಂ ರುಖಿಯಾ ಶಖಾವತ್ ಹುಸೇನ್

**ಡಾ॥ ಎಚ್. ಎಸ್. ಅನುಪಮಾ**



ಈ ಎಲ್ಲ ಒಳಸೂಕ್ಷ್ಮಗಳ ನಡುವೆ ೧೦೭ ವರ್ಷ ಕೆಳಗೆ ನಮ್ಮ ಪೂರ್ವಮಾತೆಯೊಬ್ಬರು ಬರೆದ ಬರಹವನ್ನು ಇತ್ತೀಚೆಗೆ ಓದಿದೆ. ಒಂದು ಜಾಗೃತ ಸ್ತ್ರೀ ಮನಸು ಬರೆದ ಆ ಬರಹ ಸ್ತ್ರೀವಾದದ ನಾಳೆಯ ಕನಸು ಇರಬಹುದೆ ಎಂಬ ಚರ್ಚೆ ಹುಟ್ಟುಹಾಕಿದೆ. ಅದು ೧೯೦೫ರಲ್ಲಿ ಬರೆಯಲ್ಪಟ್ಟ 'ಸುಲ್ತಾನಾಳ ಕನಸು' ಎಂಬ ಕಥೆ ಅಥವಾ ಲಘು ಪ್ರಬಂಧ. ಅದರಲ್ಲಿ ಸುಲ್ತಾನಾ ಎಂಬ ಹೆಣ್ಣುಮಗಳು ತನ್ನ ಕನಸಿನಲ್ಲಿ ಮಹಿಳಾ ರಾಜ್ಯಕ್ಕೆ (ಲೇಡಿ ಲ್ಯಾಂಡ್) ಹೋಗಿಬರುತ್ತಾಳೆ. ಆ ರಾಜ್ಯದಲ್ಲಿದ್ದ ತನ್ನ ಬಾಲ್ಯ ಸ್ನೇಹಿತೆಯೊಂದಿಗೆ ಮಾತಾಡುತ್ತ, ತಿರುಗಾಡುತ್ತ ಕಂಡ ಅಚ್ಚರಿಗಳು ಅವರ ಸಂಭಾಷಣೆಯಲ್ಲಿ ಬಿಚ್ಚಿಕೊಳ್ಳುತ್ತವೆ. ವೈಜ್ಞಾನಿಕ ಜ್ಞಾನ ಹೊಂದಿ ಸಂಪೂರ್ಣ ನಿರ್ಭಯರಾಗಿ ಬದುಕುವ ಹೆಣ್ಣುಮಕ್ಕಳ ಆ ರಾಜ್ಯ ಕನಸಿನ ರಾಜ್ಯವೇ ಸರಿ ಎಂದು ಸುಲ್ತಾನಾಳಿಗೆ ಅನಿಸುವ ಹೊತ್ತಿಗೆ ನಿದ್ರೆ ತಿಳಿದು ಎಚ್ಚರವಾಗುತ್ತದೆ !

**ಸಂ**ಕ್ಷಿಪ್ತವಾಗಿ ಆ ಕತೆ ಹೀಗಿದೆ : ಸುಲ್ತಾನಾ ರಾತ್ರಿಯ ಕನಸಿನಲ್ಲಿ ಬಾಲ್ಯದ ಗೆಳತಿ ಸಾರಾ ಜೊತೆಗೆ ಒಂದು ರಾಜ್ಯಕ್ಕೆ ಹೋದಳು. ಅಲ್ಲಿ ಗಂಡಸರು ರಸ್ತೆ ಮೇಲೆಲ್ಲೂ ಕಾಣದೇ ಹೋದಾಗ ಗೆಳತಿಯು ಗಂಡಸರು ಅಡಿಗೆ, ಮನೆಗೆಲಸ, ಮಕ್ಕಳ ಕಾಳಜಿ ನೋಡಿಕೊಳ್ಳುತ್ತಿದ್ದಾರೆಂದೂ; ಅದು ಮಹಿಳಾ ರಾಜ್ಯ ಎಂದೂ ತಿಳಿಸುತ್ತಾಳೆ. ಅದು ಹೇಗೆ ಈ ಪರಿಸ್ಥಿತಿ ನಿರ್ಮಾಣವಾಯಿತು ಎಂದು ಅಚ್ಚರಿಗೊಂಡ ಸುಲ್ತಾನಾ ಕೇಳಿದಾಗ ಸಾರಾ ತನ್ನ ರಾಜ್ಯದ ಪೂರ್ವೇತಿಹಾಸ ಬಿಚ್ಚಿಡುತ್ತಾಳೆ: ಅವರದು ರಾಣಿ ಆಳುತ್ತಿದ್ದ ರಾಜ್ಯ. ಮಹಿಳಾ ಶಿಕ್ಷಣಕ್ಕೆ ಅಲ್ಲಿ ಬಹು ಪ್ರಾಮುಖ್ಯತೆ. ಅವರ ರಾಜ್ಯದಲ್ಲಿ ಎರಡು ಮಹಿಳಾ ವಿಶ್ವವಿದ್ಯಾಲಯಗಳಿದ್ದು ಅತ್ಯಾಧುನಿಕ ವಿಜ್ಞಾನ ಪರಿಕರಗಳನ್ನು ಸಂಶೋಧನೆ ಮೂಲಕ ಅಭಿವೃದ್ಧಿಗೊಳಿಸಿರುತ್ತವೆ. ಅದರಲ್ಲಿ ಒಂದು ಸೂರ್ಯನ ಶಾಖ ಹೀರಿ ಶಕ್ತಿಯಾಗಿ ಸಂಗ್ರಹಿಸಿಟ್ಟು ಅಡುಗೆ, ವಾಹನ ಚಾಲನೆ, ಯಂತ್ರೋಪಕರಣ ಚಾಲನೆ ಮತ್ತಿತರ ಕೆಲಸಗಳಿಗೆ ಬೇಕಾದಾಗ ಬೇಕಾದಷ್ಟು ಬಳಸುವಂತಹದು. ಮತ್ತೊಂದು, ಮೋಡದಲ್ಲಿನ ಮಳೆನೀರನ್ನು ಮೊದಲೇ ಹೀರಿ ಸಂಗ್ರಹಿಸುವುದು. ಈ ಎರಡೂ ಸಂಶೋಧನೆಗಳು ನೆರೆ-ಬರವನ್ನು ತಡೆಗಟ್ಟಬಲ್ಲವಾಗಿದ್ದರೂ ಗಂಡಸರಿಂದ 'ಅತಿಭಾವುಕ ಕನಸು' ಎಂಬ ಹೀಯಾಳಿಕೆಗೆ ಒಳಗಾಗಿರುತ್ತವೆ. ಒಮ್ಮೆ ನೆರೆರಾಜ್ಯದ ದಾಳಿಗೆ

ಈ ರಾಜ್ಯದ ಸೇನೆ ಹತಗೊಂಡು ಗಾಯಗೊಳ್ಳುತ್ತದೆ. ಇನ್ನೇನು ರಾಜ್ಯವು ಶತ್ರುಗಳ ಕೈಸೇರಬೇಕು, ಆಗ ರಾಣಿ ಯುದ್ಧ ಗೆಲ್ಲುವ ಮೊದಲ ಅವಕಾಶ ಮತ್ತು ಕೊನೆಯ ಪ್ರಯತ್ನವನ್ನು ಹೆಂಗಸರಿಗೆ ವಹಿಸಿಕೊಡುವ ನಿರ್ಧಾರಕ್ಕೆ ಬರುತ್ತಾಳೆ. ಆ ವೇಳೆಗಾಗಲೇ ಗಾಯಗೊಂಡು ದಣಿದಿದ್ದ ಗಂಡಸರು ಅಡುಗೆ, ಮನೆಗೆಲಸ, ಮಕ್ಕಳನ್ನು ನೋಡಿಕೊಳ್ಳುವುದಾಗಿ ಮಾತುಕೊಟ್ಟು ತಾವು 'ಮರ್ದಾನಾ'ಗೆ ತೆರಳಿ ರಣರಂಗಕ್ಕೆ ಮಹಿಳೆಯರನ್ನು ಕಳಿಸುತ್ತಾರೆ. ಎರಡು ಸಾವಿರ ವಿದ್ಯಾರ್ಥಿನಿಯರೊಂದಿಗೆ ಯುದ್ಧ ರಂಗಕ್ಕೆ ತೆರಳಿದ ಮಹಿಳಾ ವಿಶ್ವವಿದ್ಯಾಲಯದ ಮುಖ್ಯಸ್ಥೆ ತಾವು ಸಂಗ್ರಹಿಸಿಕೊಂಡ ಸೂರ್ಯ ಶಕ್ತಿಯ ಬೆಳಕು, ಶಾಖವನ್ನು ಶತ್ರುಗಳ ಮೇಲೆ ಹರಿಸಿ ರಕ್ತಪಾತವಿಲ್ಲದೆ ಅವರನ್ನು ಹಿಮ್ಮೆಟ್ಟಿಸುತ್ತಾರೆ. ಇವರ ಹೊಸ ತೆರನ ಅಸ್ತ್ರಕ್ಕೆ ಹೆದರಿದ ನಂತರ ಯಾವ ಶತ್ರುವೂ ಅವರ ಮೇಲೆ ಯುದ್ಧಕ್ಕೆ ಬರುವುದಿಲ್ಲ !

ಹೀಗೆ ಸುಲಭದಲ್ಲಿ ಯುದ್ಧ ಗೆದ್ದು 'ಶಕ್ತಿ'ವಂತೆಯರಾದ ಹೆಂಗಸರು ಎಲ್ಲ ಕಚೇರಿ, ಶಾಲಾ ಕಾಲೇಜು, ಕೃಷಿ, ಕೂಲಿ ಕೆಲಸಗಳನ್ನು ಮಾಡುತ್ತ ಸಾರ್ವಜನಿಕ ಬದುಕಿಗಿಳಿಯುತ್ತಾರೆ. ಅಡುಗೆಮನೆ ಸೇರಿದ ಗಂಡಸರು ಒಂದಷ್ಟು ಕಾಲ ಗೊಣಗುಟ್ಟಿದರೂ ಕ್ರಮೇಣ ಅದಕ್ಕೆ ಹೊಂದಿಕೊಂಡುಬಿಡುತ್ತಾರೆ. ಆ ರಾಜ್ಯದ ಚಿತ್ರಣವೇ ಬದಲಾಗುತ್ತದೆ. ಅಲ್ಲೀಗ ಸೊಳ್ಳೆಯಿಲ್ಲ, ರೋಗವಿಲ್ಲ. ಅಡುಗೆಮನೆಯಲ್ಲಿ ಕಣ್ಣೀರು ಸುರಿಯಲು ಕಾರಣವಾದ ಹೊಗೆಯಿಲ್ಲ, ಕರಿಮಸಿಯಿಲ್ಲ. ಕಾರಣ ಹಣ್ಣು ಅವರ ಮುಖ್ಯ ಆಹಾರ. ಸೂರ್ಯನ ಶಾಖದಿಂದ ಅಡುಗೆಯನ್ನೂ ಸುಲಭ, ಸರಳಗೊಳಿಸಲಾಗಿರುತ್ತದೆ. ಗಂಡಸರು ಏಳು ತಾಸು ಕೆಲಸ ಮಾಡಿದರೂ ಮುಗಿಯದಿದ್ದ ಕಚೇರಿ ಕೆಲಸ ಹೆಂಗಸರ ಎರಡೇ ತಾಸಿನ ಕೆಲಸಕ್ಕೆ ಮುಗಿಯುತ್ತಿರುತ್ತದೆ. ಸೂರ್ಯಶಕ್ತಿ ಮತ್ತು ಹೈಡ್ರೋಜನ್ ಬಲೂನಿನ ಸಹಾಯದಿಂದ ನೆಲದಿಂದ ಎಂಟ್ಪತ್ತು ಅಡಿ ಮೇಲೆ ಅವರ ಓಡಾಟ. ಅವರಿಗೆ ರಸ್ತೆ, ರೈಲುಹಳಿಗಳ ಮೇಲೆ ಚಲಿಸುವ ಅವಶ್ಯಕತೆಯೇ ಇಲ್ಲವಾದ್ದರಿಂದ ಅಪಘಾತವೇ ಇಲ್ಲ. ಅಪರಾಧ ಮಾಡುವವರು ಹಾಗೂ ಅಪರಾಧ ತಡೆಯದೆ ಸುಮ್ಮನಿರುವವರು ಮರ್ದಾನಾದಲ್ಲಿ ಒಳಗಿರುವುದರಿಂದ ಅಪರಾಧವಿಲ್ಲ. ಪೊಲೀಸ್ ಸ್ಟೇಷನ್ನೂ ಇಲ್ಲ, ನ್ಯಾಯಾಲಯವೂ ಬೇಕಿಲ್ಲ. ಅಕಸ್ಮಾತ್ ಒಮ್ಮೆ ತಪ್ಪೆಸಗಿದರೆ ಎಚ್ಚರಿಸಿ ಕ್ಷಮಿಸಲಾಗುತ್ತದೆ, ಮತ್ತೆಮತ್ತೆ ತಪ್ಪು ಮಾಡಿದರೆ ಗಡೀಪಾರು ಮಾಡಲಾಗುತ್ತದೆ. ದೇವರ ಸೃಷ್ಟಿಯನ್ನು ಕೊಲ್ಲುವ ಅಧಿಕಾರ ಯಾರಿಗೂ ಇಲ್ಲವೆಂದು ನಂಬಿರುವುದರಿಂದ ಮರಣದಂಡನೆ ಶಿಕ್ಷೆ ಅಲ್ಲಿ ಇಲ್ಲವೆ ಇಲ್ಲ. ಯಾವ ಅತಿಗಳೂ ಇರದ, ನೋವಿರದ, ಸಂಕಟವಿರದ ಕನಸಿನ ರಾಜ್ಯ ಆ ಮಹಿಳಾ ರಾಜ್ಯ. ಅಂದಹಾಗೆ ಆ ರಾಜ್ಯದ ರಾಜಧರ್ಮ ಸತ್ಯ ಮತ್ತು ಪ್ರೀತಿ ! ಆಹಾ ಕಲ್ಪನೆಯೇ ! ಈ ಕನಸ ರಾಜ್ಯಕ್ಕೆ ಹೋಗಿಬಂದೆನೆಂದು ಬರೆದಾಕೆ ಯಾರು ಗೊತ್ತೆ ? ಬಾಂಗ್ಲಾದೇಶದ ಸ್ತ್ರೀವಾದಿ, ಲೇಖಕಿ, ಶಿಕ್ಷಣತಜ್ಞೆ ಬೇಗಂ ರುಖಿಯಾ ಶೆಖಾವತ್ ಹುಸೇನ್.

ಬಾಂಗ್ಲಾದೇಶ ಎಂದ ಕೂಡಲೇ ನಮಗೆ ಭಾರತದ ಮೆಟ್ರೋಪಾಲಿಟನ್ ನಗರಗಳಲ್ಲಿ ಅರೆಹೊಟ್ಟೆ, ಅರೆಸೂರಿನ ಕಷ್ಟಜೀವನ ನಡೆಸುತ್ತಿರುವ ನಿರಾಶ್ರಿತರು ಕಣ್ಣೆದುರು ಬರುತ್ತಾರೆ. ಅತ್ಯಂತ ಫಲವತ್ತಾದ ನದಿಬಯಲು ಹೊಂದಿಯೂ ಅಸಂಖ್ಯ ದೇಶವಾಸಿಗಳನ್ನು ನಿರಾಶ್ರಿತರಾಗಿಸುತ್ತಲೇ ಇರುವ ಆ ದೇಶದ ಬಡತನ ವಾದರೂ ಎಂಥದು ಎಂದು ಆಶ್ಚರ್ಯವಾಗುತ್ತದೆ. ಕಳೆದ ಎರಡು ದಶಕಗಳಿಂದ ಇಬ್ಬರು ಮಹಿಳೆಯರು ಒಬ್ಬರಾದ ಮೇಲೊಬ್ಬರು ಬಾಂಗ್ಲಾದೇಶವನ್ನಾಳುತ್ತಿದ್ದಾರೆ. ಈಗ ಪ್ರಧಾನಿಯಾಗಿರುವ ಶೇಕ್ ಹಸೀನಾ ನಾಲ್ಕು ದಶಕಗಳಿಂದ ಬಾಂಗ್ಲಾ ರಾಜಕಾರಣದಲ್ಲಿ ಸಕ್ರಿಯರಾಗಿದ್ದಾರೆ. ಆದರೇನು ? ಇಬ್ಬರು ಹೆಣ್ಣುಮಕ್ಕಳು ಆಳುವವರೆಂದು ಹೆಣ್ಣಿನ ದನಿ ಗಟ್ಟಿಯಾಗಿಲ್ಲ. ಹದಿನೇಳು ಕೋಟಿ ಜನಸಂಖ್ಯೆಯ ಬಾಂಗ್ಲಾದೇಶ ತಸ್ಲೀಮಾ ನಸ್ರೀನ್ ಎಂಬ ಬರಹಗಾರ್ತಿಗೆ ತನ್ನದೇ ನೆಲದಲ್ಲಿ ಜಾಗ ಕೊಡದೆ ಆಕೆ ರ್‍ಗಳಿಂದ ದೇಶಭ್ರಷ್ಟಳಾಗಿ ತಿರುಗುವಂತಾಗಿದೆ. ಬರಬರುತ್ತ ಬಾಂಗ್ಲಾ ಸಮಾಜವು ಧಾರ್ಮಿಕ ಮೂಲಭೂತವಾದದತ್ತ ಸಾಗುತ್ತಿದೆ.

ಇತ್ತೀಚೆಗೆ ಮುಕ್ತವಾಗಿ ಬರೆಯುವುದು, ಮಾತನಾಡುವುದೇ ಕಷ್ಟವಾಗಿರುವ ಅಲ್ಲಿ ಹತ್ತಾರು ಅಂತರ್ಜಾಲ ಬ್ಲಾಗ್ ನಡೆಸುವ ಬ್ಲಾಗರುಗಳು ಹತ್ಯೆಯಾಗಿದ್ದಾರೆ.

ಆದರೆ ಬಾಂಗ್ಲಾದೇಶ ಇವತ್ತು ಹೀಗಿದೆ. ಮೊದಲು ಅದು ಜಾಗೃತಿ ಅಂತರ್ಗತವಾಗಿ ಹರಿದ ನೆಲ. ಆ ಸಮಾಜ ಎಷ್ಟು ಆರೋಗ್ಯಕರವಾಗಿತ್ತು ಎನ್ನಲು ಶತಮಾನದ ಹಿಂದೆ ತೀವ್ರ ನಿರ್ಬಂಧ, ಪ್ರತಿಕೂಲ ಪರಿಸ್ಥಿತಿಗಳ ನಡುವೆ ಹೆಣ್ಣುಮಕ್ಕಳಿಗಾಗಿ ಶಾಲೆ ತೆರೆದ, ದಿಟ್ಟವಾಗಿ ಬರೆದ, ಮಹಿಳೆಯರನ್ನು ಸಂಘಟಿಸಿದ ಬೇಗಂ ರುಖಿಯಾ ಶೆಖಾವತ್ ಹುಸೇನ್ (೧೮೮೦–೧೯೩೨) ಅವರೇ ಉದಾಹರಣೆ. ಅವರು ತೆರೆದ ಶೆಖಾವತ್ ಮೆಮೋರಿಯಲ್ ಗರ್ಲ್ಸ್ ಹೈಸ್ಕೂಲ್ ಇವತ್ತಿಗೂ ಕೋಲ್ಕತಾದಲ್ಲಿ ನಡೆಯುತ್ತಿದೆ. ಆಕೆ ಕೇವಲ ಶಾಲೆ ತೆರೆದು ಸುಮ್ಮನಿರಲಿಲ್ಲ, ೨೦ನೇ ಶತಮಾನದ ಅವಿಭಜಿತ ಬಂಗಾಳದ ಪ್ರಮುಖ ಲೇಖಕಿಯಾಗಿ ಹೊಮ್ಮಿದರು. ವಿಧವೆಯಾಗಿದ್ದ, ಮಕ್ಕಳಿರದ ರುಖಿಯಾ ವಿಸ್ತೃತ ಬರವಣಿಗೆ ಮಾಡಿದರು. ಪತ್ರಿಕೆಗಳಲ್ಲಿ ಕತೆ, ಕವಿತೆ, ಕಾದಂಬರಿ, ಲೇಖನ ಬರೆದರು. ಮುಸ್ಲಿಂ ಮಹಿಳೆಯರ ಸಂಘಟನೆ ಶುರು ಮಾಡಿದರು. ಭಾರತೀಯ ಮುಸ್ಲಿಂ ಮಹಿಳೆಯರ ಪಾಲಿಗೆ ಹಾಗೂ ಮುಸ್ಲಿಂ ಸಹೋದರಿಯರಿಗಾಗಿ ಮಿಡಿಯುವ ಉಳಿದವರ ಪಾಲಿಗೆ ಅವರ ಬದುಕಿನ ವಿವರಗಳು ಸ್ಫೂರ್ತಿದಾಯಕವಾಗುವಂತಿವೆ.

✶ ✶ ✶

ಇವತ್ತಿನ ಬಾಂಗ್ಲಾದಲ್ಲಿರುವ ರಂಗಾಪುರ ಜಿಲ್ಲೆಯ ಪೈರಾಬೊಂದ್ ಹಳ್ಳಿಯ ಸಾಂಪ್ರದಾಯಿಕ ಮುಸ್ಲಿಂ ಕೂಡು ಕುಟುಂಬದಲ್ಲಿ ತನ್ನ ತಂದೆಯ ನಾಲ್ಕನೇ ಹೆಂಡತಿಯ ಆರು ಮಕ್ಕಳಲ್ಲಿ ಒಬ್ಬಳಾಗಿ ರುಖಿಯಾ ಹುಟ್ಟಿದಳು. ಆ ಮನೆಯ ಹೆಣ್ಮಕ್ಕಳನ್ನು ಉರ್ದು, ಅರೇಬಿಕ್ ಶಾಲೆಗೆ ಕಳಿಸಿದರೆ ಹುಡುಗರನ್ನು ಬಂಗಾಳಿ, ಇಂಗ್ಲಿಷ್ ಶಾಲೆಗೆ ಕಳಿಸುತ್ತಿದ್ದರು. ಪರ್ದಾ ಪದ್ಧತಿಯನ್ನು ಕಟ್ಟುನಿಟ್ಟಾಗಿ ಅನುಸರಿಸಲಾಗುತ್ತಿತ್ತು. ರುಖಿಯಾಳ ಸೋದರರು ತಮ್ಮ ಸೋದರಿಯರಿಗೆ ಕದ್ದು ಮುಚ್ಚಿ ನಡುರಾತ್ರಿಯಲ್ಲಿ ಬಂಗಾಳಿ ಮತ್ತು ಇಂಗ್ಲಿಷ್ ಹೇಳಿಕೊಡುತ್ತಿದ್ದರು. ರುಖಿಯಾ ಅಕ್ಕ ಕರೀಮುನ್ನೀಸಾ ಬಂಗಾಳಿ ಕವಯಿತ್ರಿಯಾದಳು.

ರುಖಿಯಾಗೆ ೧೬ ವರ್ಷವಾದಾಗ ಮದುವೆಯಾಯಿತು. ಆಕೆಯನ್ನು ಮದುವೆಯಾದವರು ಖಾನ್ ಬಹಾದುರ್ ಶೆಖಾವತ್ ಹುಸೇನ್ ಎಂಬ ೩೬ ವರ್ಷದ ವಿಧುರರು. ಇಂದಿನ ಬಿಹಾರದ ಭಾಗಲ್ಪುರದ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಆಗಿದ್ದ ಅವರು ಉದಾರ ಮನಸ್ಸಿನವರು. ತಮ್ಮ ಪತ್ನಿ ಬುರ್ಖಾ ತೊಡುವುದು ಬೇಡವೆಂದು ಹೇಳಿದಾಗ ರುಖಿಯಾ ತಲೆಮೇಲೆ ಸೆರಗೆಳೆದುಕೊಂಡು ವ್ಯವಹರಿಸ ತೊಡಗಿದರು. ಅರ್ಧ ಕಲಿತು ಬಿಟ್ಟ ಇಂಗ್ಲಿಷ್ ಮತ್ತು ಬಂಗಾಳಿಯನ್ನು ಹೆಂಡತಿಗೆ ಕಲಿಸುವ ವ್ಯವಸ್ಥೆ ಮಾಡಿದ ಶೆಖಾವತ್ ರುಖಿಯಾಗೆ ಬರೆಯಲು, ಅದರಲ್ಲೂ ಎಲ್ಲರಿಗೂ ಅರ್ಥವಾಗುವಂತೆ ಬಂಗಾಳಿಯಲ್ಲೇ ಬರೆಯಲು ಪ್ರೋತ್ಸಾಹಿಸಿದರು. ಹೀಗೆ ಗಂಡನ ಒತ್ತಾಸೆಯಿಂದ ೧೯೦೨ರಲ್ಲಿ ರುಖಿಯಾ ಬರೆದ ಮೊದಲ ಬಂಗಾಳಿ ಬರಹ ಪಿಪಾಸಾ ಪ್ರಕಟವಾಯಿತು. ನಂತರ ಅವರ ಪೆನ್ನು ವಿಶ್ರಾಂತಿ ಪಡೆಯಲೇ ಇಲ್ಲ. ಅಂದಿನ ಪ್ರಮುಖ ಪತ್ರಿಕೆಗಳಲ್ಲಿ ನಿರಂತರವಾಗಿ ಲೇಖನಗಳನ್ನು ಬರೆದರು. ೧೯೦೫ರಲ್ಲಿ ಮೋತಿಚೂರ್, ೧೯೦೮ರಲ್ಲಿ ಸುಲ್ತಾನಾಸ್ ಡ್ರೀಂ ಎಂಬ ಇಂಗ್ಲಿಷ್ ಕೃತಿ, ಪದ್ಮರಾಗ ಎಂಬ ಕಾದಂಬರಿ ಪ್ರಕಟವಾದವು.

೧೯೦೯ರಲ್ಲಿ ಪತಿ ತೀರಿಕೊಂಡಾಗ ಅವರಿಚ್ಛೆಯಂತೆ ಭಾಗಲ್ಪುರದಲ್ಲಿ ಮುಸ್ಲಿಂ ಹುಡುಗಿಯರ ಪ್ರಾಥಮಿಕ ಶಾಲೆ ತೆರೆದರು. ಕೇವಲ ಐದು ಹೆಣ್ಣುಮಕ್ಕಳು ದಾಖಲಾದರು. ನಂತರ ಮಲಮಗಳ ತಗಾದೆಗಳಿಂದ ಬೇಸತ್ತು ಎರಡೇ ವರ್ಷದಲ್ಲಿ ಶಾಲೆಯನ್ನು ಕೋಲ್ಕತ್ತಾಗೆ ಸ್ಥಳಾಂತರಿಸಿದರು. ಶೆಖಾವತ್ ಮೆಮೋರಿಯಲ್ ಗರ್ಲ್ಸ್ ಹೈಸ್ಕೂಲ್ ಕೋಲ್ಕತ್ತಾದಲ್ಲಿ ಶುರುವಾಯಿತು. ಮೊದಲು ಕೇವಲ ಎಂಟು ಹುಡುಗಿಯರು ಬಂದರಾದರೂ ನಂತರ ಹೆಚ್ಚೆಚ್ಚು ಸಂಖ್ಯೆಯ ಹೆಣ್ಣುಮಕ್ಕಳು ದಾಖಲಾಗುತ್ತ ಹೋದರು. ತೀವ್ರ ಟೀಕೆ, ಕಟಕಿ, ಕಾಲೆಳೆಯುವವರ ನಡುವೆಯೇ ಶಾಲೆ ನಡೆಸಿದರು.

ಅದೇನೂ ಆ ಕಾಲದ ಮೊದಲ ಮಹಿಳಾ ಶಾಲೆಯಾಗಿರಲಿಲ್ಲ. ಅವರಿಗಿಂತ ಮುನ್ನ ನವಾಬ್ ಬಿರುದನ್ನು ವಿಕ್ಟೋರಿಯಾ ರಾಣಿಯಿಂದ ಪಡೆದ ಮೊದಲ ಮಹಿಳೆ ಫೈಜುನ್ನಿಸಾ ಚೌಧುರಿ (೧೮೩೪–ಜನನ) ಮುಸ್ಲಿಂ ಮಹಿಳಾ ಶಿಕ್ಷಣದ ಸಲುವಾಗಿ ಕೆಲಸ ಮಾಡಿದ್ದರು. ಅದನ್ನು ರುಖಿಯಾ ವಿಸ್ತೃತವಾಗಿ, ವ್ಯವಸ್ಥಿತವಾಗಿ ಮುಂದುವರಿಸಿದರು. ಅವರ ಶಾಲೆಯಲ್ಲಿ ಹೆಣ್ಮಕ್ಕಳನ್ನು ಆಕರ್ಷಿಸಲು ಕರಕುಶಲ ತರಬೇತಿ, ಗೃಹವಿಜ್ಞಾನ, ತೋಟಗಾರಿಕೆ ಹೇಳಿಕೊಡುವುದೇ ಅಲ್ಲದೆ ದೈಹಿಕ ಕಸರತ್ತುಗಳನ್ನೂ ಕಲಿಸಲಾಗುತ್ತಿತ್ತು. ಆದರೆ ಶಾಲೆಯಲ್ಲಿ ಪರ್ದಾ ಇಲ್ಲದೆ ಕಲಿಸುವುದು ಮಾತ್ರ ಸಾಧ್ಯವಾಗಲಿಲ್ಲ. ಶಾಲೆಗೆ ಕರೆತರಲು ಕಿಟಕಿ ಮುಚ್ಚಿದ ವಾಹನ ಕಳಿಸಬೇಕಿತ್ತು. ಬುರ್ಖಾ ಬದಲು ತಲೆ ಮೇಲೆ ಹೊದೆವಸ್ತ್ರ ಹೊದೆಯುವಂತೆ ಮಕ್ಕಳನ್ನು, ಅವರ ಪಾಲಕರನ್ನು ಮನವೊಲಿಸಲು ಹರಸಾಹಸ ಪಡಬೇಕಾಯಿತು. ಕೊಂಚ ರಾಜಿಯಾಗದಿದ್ದರೆ ಮಕ್ಕಳನ್ನು ಶಾಲೆಗೆ ಕಳಿಸುತ್ತಲೇ ಇರಲಿಲ್ಲ. ಹೀಗಾಗಿ ಪುರುಷರ ಸಂಪರ್ಕಕ್ಕೆ ಬರದಂತೆ ಹೆಣ್ಮಕ್ಕಳನ್ನು ಕಟ್ಟುನಿಟ್ಟಾಗಿ ದೂರವೇ ಇಡಬೇಕಾಯಿತು.

ಶಾಲೆಯಲ್ಲಿ ಜಾರಿಗೊಳಿಸಲು ಆಗದಿದ್ದರೂ ತಮ್ಮ ಬರವಣಿಗೆಗಳಲ್ಲಿ ವ್ಯಂಗ್ಯವಾಗಿ, ವಿಡಂಬನಾತ್ಮಕವಾಗಿ ಅವರು ಪರ್ದಾ ಪದ್ಧತಿಯನ್ನು ಟೀಕಿಸಿದರು. ಬುರ್ಖಾ ಧರಿಸಿದ್ದ ಕಾರಣ ರೈಲಿನಡಿ ಸಿಕ್ಕಿಕೊಂಡರೂ ಸಹಾಯಕ್ಕೆ ಕೂಗಲು ಸಾಧ್ಯವಾಗದೆ ತನ್ನ ಚಿಕ್ಕಮ್ಮ ತೀರಿಕೊಂಡಿದ್ದನ್ನು ಎಳೆಯವರಾಗಿದ್ದಾಗ ರುಖಿಯಾ ನೋಡಿದ್ದರು. ಆ ಅನುಭವದ ಹಿನ್ನೆಲೆಯಲ್ಲೋ ಏನೋ, ತಮ್ಮ ಬರವಣಿಗೆಗಳಲ್ಲಿ ಹಾಗೂ ವೈಯಕ್ತಿಕವಾಗಿ ಬುರ್ಖಾ ಧರಿಸುವುದನ್ನು ವಿರೋಧಿಸುತ್ತಿದ್ದರು. ತಮಾಷೆ, ವ್ಯಂಗ್ಯ, ವಿಡಂಬನೆಗಳ ಮೂಲಕ ತಮ್ಮ ಬರಹಗಳಲ್ಲಿ ಬಂಗಾಳಿ ಮುಸ್ಲಿಂ ಹೆಣ್ಮಕ್ಕಳು ಅನುಭವಿಸುವ ತಾರತಮ್ಯವನ್ನು ವಿವರಿಸಿದರು.

ಅರ್ಧಾಂಗಿ, ಬುರ್ಖಾ, ಗೃಹ ಮೊದಲಾದ ತಮ್ಮ ಪ್ರಬಂಧಗಳಲ್ಲಿ ಗಂಡಸರ ಪ್ರತಿಷ್ಠೆ ಮತ್ತು ಅನುಕೂಲಕ್ಕೆ ತಕ್ಕಂತೆ ಹೇಗೆ ಪರ್ದಾ ಒಳಗೆ ಹೆಣ್ಣನ್ನು ಬಂಧಿಸಲಾಗಿದೆ; ಹೇಗೆ ಆರ್ಥಿಕ ಸ್ವಾವಲಂಬನೆ ಸಾಧಿಸದಿರುವುದು ಹೆಣ್ಮಕ್ಕಳು ಮುಂದುವರಿಯದಂತೆ ತೊಡಕಾಗಿದೆ ಎಂದು ಚರ್ಚಿಸಿದರು. ಸುಗೃಹಿಣಿ ಪ್ರಬಂಧದಲ್ಲಿ ಬುರ್ಖಾ ಧಾರಣೆ ಮತ್ತು ಪುರುಷರಿಂದ ಬೇರ್ಪಡಿಸುವಿಕೆ ಕುರಾನಿನಲ್ಲಿ ಉಲ್ಲೇಖಿಸಲ್ಪಟ್ಟಿಲ್ಲ ಹಾಗೂ ಷರಿಯಾದಲ್ಲಿ ಹೇಳಿಲ್ಲ ; ಲಿಂಗಾಧಾರಿತ ಬೇರ್ಪಡಿಸುವಿಕೆ ಮಾಯದ ಗಾಯದಂತಲ್ಲ; ಅದು ನಿಧಾನ ಕೊಲ್ಲುವ ಕಾರ್ಬನ್ ಮೊನಾಕ್ಸೈಡ್ ವಿಷದಂತೆ ಎಂದು ಬರೆದರು. ಶಿಕ್ಷಣ ನೀಡಿದರೆ ಹೆಣ್ಮಕ್ಕಳು ಕೆಟ್ಟುಹೋಗುತ್ತಾರೆ ಎಂಬ ವಾದ ಆಗ ಚಾಲ್ತಿಯಲ್ಲಿತ್ತು. ಆದರೆ ಕುರಾನಿನಲ್ಲಿ ಮಹಿಳಾ ಶಿಕ್ಷಣ ಕುರಿತು ಒತ್ತು ನೀಡಿದ ಮಾತುಗಳಿದ್ದವು. ಇವತ್ತಿನ ಇಸ್ಲಾಂ ವಿರೂಪಗೊಂಡಿರುವುದಷ್ಟೇ ಅಲ್ಲ, ಭ್ರಷ್ಟಗೊಂಡಿದೆ ಎಂದು ಅವರಿಗೆ ಅನಿಸಿತು. 'ಶಿಕ್ಷಣ ನೀಡಿದರೆ ಮಹಿಳೆಯರು ತಮ್ಮ ಪಾತ್ರವನ್ನು ಜ್ಞಾನದಿಂದಲೂ, ವೃತ್ತಿಪರವಾಗಿಯೂ ನಿಭಾಯಿಸಲು ಸಾಧ್ಯವಾಗಿ ದೇಶ ಅಭಿವೃದ್ಧಿಯಾಗುತ್ತದೆ; ಗಂಡಸರ ಸಮಸಮ ಹೆಜ್ಜೆ ಹಾಕಲು ಸಹಾಯವಾಗುತ್ತದೆ. ಹೆಣ್ಣುಮಕ್ಕಳು ಓದಿದರೆ ಕೆಟ್ಟುಹೋಗುತ್ತಾರೆನ್ನುವುದು ಸುಳ್ಳು. ತಮ್ಮನ್ನು ಮುಸ್ಲಿಂ ಎಂದು ಕರೆದುಕೊಳ್ಳುವ ಗಂಡಸರು ಮಹಿಳೆಯರಿಗೂ ಸಮಾನ ಶಿಕ್ಷಣದ ಹಕ್ಕು ನೀಡಿದ ಇಸ್ಲಾಮಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದಾರೆ. ಶಿಕ್ಷಣ ಪಡೆದ ಗಂಡಸು ಹಾಳಾಗಿಹೋಗುವುದಿಲ್ಲ ಎಂದಾದರೆ ಹೆಣ್ಣೇಕೆ ಹಾಳಾಗುತ್ತಾಳೆ ?' ಎಂದು ಪ್ರಶ್ನಿಸಿದರು. ಗಾಡ್ ಗಿವ್ಸ್, ಮೆನ್ ರಾಬ್ಸ್ ಎಂಬ ಪುಸ್ತಕ (೧೯೨೭) ಬರೆದರು.

ಶಾಲೆ ನಡೆಸುತ್ತ, ಬರವಣಿಗೆ ಮಾಡುತ್ತಲೇ ಇಸ್ಲಾಮಿಕ್ ಮಹಿಳಾ ಸಂಘಟನೆ ಆದ 'ಅಂಜುಮನ್–ಇ–ಖವಾತೀನ್–ಇ–ಇಸ್ಲಾಂ' ಶುರು ಮಾಡಿದರು. ಹೆಣ್ಣುಮಕ್ಕಳ ಶಿಕ್ಷಣ ಮತ್ತು ಪರಿಸ್ಥಿತಿಯ ಕುರಿತು ಚರ್ಚೆ, ಸಮ್ಮೇಳನ, ಸಂವಾದ ಏರ್ಪಡಿಸಿದರು. ಬ್ರಿಟಿಷ್ ಭಾರತದಲ್ಲಿ ಅತಿ ಸಾಂಪ್ರದಾಯಿಕತೆ ಮತ್ತು ಅತಿ ಧಾರ್ಮಿಕ ನಿಷ್ಠೆಯೇ ಮುಸ್ಲಿಂ ಸಮಾಜವು ಉಳಿದೆಲ್ಲ ಸಮಾಜಗಳಿಗಿಂತ ಹಿಂದುಳಿಯಲು ಕಾರಣವಾಗಿದೆ ಎಂದು ಪ್ರತಿಪಾದಿಸಿದರು.

ಆದರೆ ಇಷ್ಟು ನೇರವಾಗಿ ಮತ್ತು ದಿಟ್ಟವಾಗಿ ಬರೆದ ಬಂಗಾಳದ ಮುಸ್ಲಿಂ ಮಹಿಳಾ ಧ್ವನಿ ತನ್ನ ಕಾಲದಲ್ಲಿ ಜನಪ್ರಿಯವಾಗಲಿಲ್ಲ. ಅವರನ್ನು ಕ್ರೈಸ್ತಪರ, ಪಶ್ಚಿಮಪ್ರೇಮಿ, ಯೂರೋಪಿಯನ್ ಮನಸ್ಥಿತಿ ಎಂದೆಲ್ಲ ಬಣ್ಣಿಸಲಾಯಿತು. ಆದರೆ ಯಾವ ಹಿಂಜರಿಕೆಗೂ ಮಣಿಯದೆ ಜೀವಮಾನವಿಡೀ ಬರಹ, ಸಂಘಟನೆ, ಶಾಲಾ ಚಟುವಟಿಕೆಗಳಲ್ಲಿ ತೊಡಗಿದ್ದ ರುಖಿಯಾ ತಮ್ಮ ೫೨ನೇ ಹುಟ್ಟುಹಬ್ಬದ ದಿನವೇ ತೀರಿಕೊಂಡರು. ಈಗಲೂ ಆ ದಿನವನ್ನು

ಬಾಂಗ್ಲಾದೇಶದಲ್ಲಿ 'ರುಖಿಯಾ ದಿನ' ಎಂದು ಆಚರಿಸಲಾಗುತ್ತದೆ.

ಒಟ್ಟಾರೆ ಬೇಗಂ ರುಖಿಯಾ ಅವರ ಒಟ್ಟೂ ಪ್ರತಿಪಾದನೆ ಮತ್ತು 'ಸುಲ್ತಾನಾಳ ಕನಸು' ಬರಹದ ಹಿನ್ನೆಲೆಯಲ್ಲಿ ಕೆಲ ವಿಷಯಗಳನ್ನು ಚರ್ಚಿಸಬಹುದಾಗಿದೆ :

- ಇವತ್ತು ಭಾರತವೂ ಸೇರಿದಂತೆ ವಿಶ್ವದ ಬಹುತೇಕ ದೇಶಗಳಲ್ಲಿ ಧಾರ್ಮಿಕ ಮೂಲಭೂತವಾದವು ಜಾಗೃತ ಸಮಾಜವನ್ನು ಸಂಪ್ರದಾಯವಾದಿ ಚೌಕಟ್ಟಿನಲ್ಲಿ ಬಂಧಿಸಿ ಹಿಂದಕ್ಕೊಯ್ಯುತ್ತಲಿದೆ. ಅದಕ್ಕೆ ನೆರೆಯ ಬಾಂಗ್ಲಾವೂ ಒಂದು ಉದಾಹರಣೆಯಾಗಿದೆ. ಬಂಗಾಳ ಮತ್ತು ಬಂಗಾಳಿ ಎರಡೂ ಜಾಗೃತ ಸ್ಥಿತಿಯ ರೂಪಕಗಳಾಗಿದ್ದ ಹೊತ್ತಿನಲ್ಲಿ ಬಂಗಾಳದ ವಿಭಜನೆ ನಡೆಯಿತು. ಧರ್ಮಾಧಾರಿತ ವಿಭಜನೆ ಗಡಿಗಳನ್ನು ಹಿರಿದುಗೊಳಿಸಿ ಇಡೀ ಪ್ರದೇಶವನ್ನು ಧಾರ್ಮಿಕ ಮೂಲಭೂತವಾದವು ನುಂಗಿಹಾಕಿತು. ಇವತ್ತು ತಸ್ಲೀಮಾ ಎಂಬ ಮಹಿಳೆಯ ಸಂಕಷ್ಟ ನೋಡಬೇಕಾಗಿರುವುದು ಕೇವಲ ನೆಲೆ ಸಿಗದ ಒಬ್ಬ ಮಹಿಳೆಯ ಬದುಕಿನ ಕಷ್ಟವಾಗಿ ಅಲ್ಲ, ಬದಲಾಗಿ ಭಿನ್ನಮತವನ್ನು ಗಡೀಪಾರು ಮಾಡುವ ಅಸಹಿಷ್ಣುತೆಯಲ್ಲಿ.
- ವಿಜ್ಞಾನ ತಂತ್ರಜ್ಞಾನ ಬಳಕೆ, ಶಿಕ್ಷಣ, ಉದ್ಯೋಗ, ಮೀಸಲಾತಿ ಮೊದಲಾದವು ಹೆಣ್ಣಿನ ಅವಕಾಶಗಳ ಪರಿಧಿಯನ್ನು ವಿಸ್ತರಿಸುವುದು ನಿಜವೇ. ಆದರೆ ಸ್ವಾವಲಂಬನೆ ಸಾಧಿಸಲು ಪೂರಕವಾದ ಈ ಎಲ್ಲ ಕ್ರಮಗಳ ಹೊರತಾಗಿಯೂ ಮಹಿಳೆ ಸ್ವಾಯತ್ತ ಬದುಕನ್ನು ಪಡೆಯಲಾಗಿಲ್ಲ ಎಂಬುದೂ ನಿಜವೇ. ಕುಟುಂಬದಲ್ಲಿ ವಿಧಿಸಲ್ಪಟ್ಟ ಲಿಂಗಾಧಾರಿತ ಪಾತ್ರವು ಈಗಲೂ ಅವಳು ಸಾಮಾಜಿಕ ಜವಾಬ್ದಾರಿಗಳನ್ನು ನಿಭಾಯಿಸುವಲ್ಲಿರುವ ಕಾಲ್ತೊಡಕೇ ಆಗಿದೆ. ಅಡುಗೆ, ಸಂಸಾರ ನಿಭಾವಣೆ, ಮಕ್ಕಳ ಸಾಕುವಿಕೆ ಎಂಬ ಕೊನೆಮೊದಲಿರದ ಗಹನ ಜವಾಬ್ದಾರಿಗಳು ಹೆಣ್ಣಿಗೆ ಒಂದಲ್ಲ ಒಮ್ಮೆ ಹೊರೆಯೆನಿಸಿ ಅವು ಕಳಚಿಕೊಳ್ಳಬೇಕಾದವು ಎನಿಸಿದರೆ ಆಶ್ಚರ್ಯವಿಲ್ಲ. ಹೀಗೆ ಜವಾಬ್ದಾರಿಗಳನ್ನು ಕಳೆದುಕೊಂಡ ಸ್ಥಿತಿ ಮಹಿಳೆಯ ಕನಸೇ? ವೈಜ್ಞಾನಿಕ ಆವಿಷ್ಕಾರಗಳ ಕಾರಣವಾಗಿ ಸುಗಮಗೊಂಡ, ಅಪರಾಧಗಳೇ ಇಲ್ಲದ ಬದುಕು ಅವಳ ಕನಸೇ? ಗಂಡಸರ ಕೆಲಸಗಳು ಹೆಂಗಸಿನ ಜವಾಬ್ದಾರಿಯೊಂದಿಗೆ ಅದಲುಬದಲಾಗುವುದು ಮಹಿಳಾವಾದದ ಗುರಿಯೆ? ಹಾಗಾದರೆ ಇವತ್ತಿನ ಸ್ತ್ರೀವಾದಿಗಳ ಹೋರಾಟದ ತುದಿಬಿಂದು ಯಾವುದು?

ಮತ್ತೆಮತ್ತೆ ಕೇಳಿಬರುವ ಈ ಪ್ರಶ್ನೆಗಳಿಗೆ ಉತ್ತರ ಸ್ಪಷ್ಟವೂ ಇಲ್ಲ, ಸುಲಭವೂ ಅಲ್ಲ. ಮಹಿಳಾವಾದಕ್ಕೆ ಅಪರಾಧವಿರದ, ಯುದ್ಧವಿರದ ನಾಡಿನ ಕನಸಿರುವುದು ನಿಜ. ಸಮನಾಗಿ ಜವಾಬ್ದಾರಿ ಹಂಚಿಕೊಳ್ಳುವ ಸಂಗಾತಿಯ ಹಂಬಲವಿರುವುದೂ ನಿಜ. ಸತ್ಯ ಮತ್ತು ಪ್ರೀತಿಯೇ ಧರ್ಮವಾಗಿರುವ; ಸುಭಿಕ್ಷವೂ ಶಾಂತಿಯುತವಾಗಿಯೂ ಆಗಿರುವ ಒಂದು ನಾಡು ಅವಳ ಕನಸೆಂಬುದೂ ನಿಜ. ಆದರೆ ಅವಳ ಸಾಮಾಜಿಕ ಚಹರೆಗಿಂತ ಕೌಟುಂಬಿಕ ಮೌಲ್ಯವೇ ವಿಜೃಂಭಿಸಲ್ಪಡುವಾಗ ಲಿಂಗಾಧಾರಿತ ಜವಾಬ್ದಾರಿ ಅದಲುಬದಲಾಗುವ ಅಥವಾ ಸಮಸಮನಾಗಿ ಹಂಚಿಕೊಳ್ಳುವ 'ಸುಲ್ತಾನಾಳ ಕನಸು' ನಮ್ಮ ಕನಸೂ ಆಗಿದೆ. ಬಹುಶಃ ತನ್ನ ಜೈವಿಕ ಅನನ್ಯತೆ ಕೊಡುವ ಜವಾಬ್ದಾರಿಯನ್ನು ತಾನು ನಿಭಾಯಿಸುತ್ತ ಮಿಕ್ಕ ಜವಾಬ್ದಾರಿಗಳನ್ನು ಸಮನಾಗಿ ಹಂಚಿಕೊಳ್ಳುವಂತೆ ಬದಲಾವಣೆ ತರುವುದು ಸ್ತ್ರೀವಾದದ ಅಂತಿಮ ಗುರಿಯಾಗಿದೆ.

- ಯಾವುದೇ ತೆರನ ಧಾರ್ಮಿಕ ಮೂಲಭೂತವಾದವು ಮೊದಲು ಮಹಿಳೆಯರ ಬಾಯಿ ಕಟ್ಟಲು ಯತ್ನಿಸುತ್ತದೆ. ಮಹಿಳೆಯರಿಗೆ ಆಸ್ತಿ ಹಕ್ಕು ಮತ್ತು ವಿಚ್ಛೇದನೆಯ ಹಕ್ಕನ್ನು ಮೊದಲು ನೀಡಿದ, ಮಹಿಳಾ ಶಿಕ್ಷಣಕ್ಕೆ ಒತ್ತು ನೀಡಿದ ಇಸ್ಲಾಂ ಧರ್ಮ ಅನುಸರಿಸುವೆವೆಂದು ಹೇಳುವ ಮೂಲಭೂತವಾದಿಗಳು ಕೂಡ ಇದರಿಂದ ಹೊರತಲ್ಲ. ಎಳೆ ಹುಡುಗಿಯರನ್ನು ಅಪಹರಿಸಿ ಅವರನ್ನು ಆತ್ಮಹತ್ಯಾ ಬಾಂಬರುಗಳಾಗಿ ಬಳಸಿಕೊಳ್ಳುವ ಐಸಿಸ್ ಮತ್ತು ನೈಜೀರಿಯಾದ ಬೋಕೊ ಹರಾಂ; ೨೦೧೨ರಲ್ಲಿ ಶಾಲಾ ಬಾಲಕಿ ಮಲಾಲಾ ಯೂಸುಫ್ ಝೈ ಹತ್ಯೆ ಯತ್ನ ನಡೆಸಿದ ತಾಲಿಬಾನ್ ಸೇರಿದಂತೆ ಅಂತಾರಾಷ್ಟ್ರೀಯ ಜಿಹಾದಿ ಸಂಘಟನೆಗಳ ಮಹಿಳಾ ವಿರೋಧಿ ನಡೆಗಳು ಇದಕ್ಕೆ ಪುಷ್ಟಿ ಕೊಡುತ್ತವೆ. ಬೋಕೋ ಹರಾಂ ಎಂದರೆ 'ಪಾಶ್ಚಾತ್ಯ ಆಧುನಿಕ ಶಿಕ್ಷಣ ವರ್ಜ್ಯ' ಎಂದೇ ಆಗಿದೆ. ಆ ಸಂಘಟನೆ ಶಾಲೆಗಳಿಂದ, ವಸತಿ ಶಾಲೆಗಳಿಂದ ಎಳೆಮಕ್ಕಳನ್ನು, ಅದರಲ್ಲೂ ಎಳೆಯ ಹೆಣ್ಣುಮಕ್ಕಳನ್ನು ಅಪಹರಿಸಿ ದುರ್ಬಳಕೆ ಮಾಡಿಕೊಳ್ಳುತ್ತಿದೆ. ಮಾರುಕಟ್ಟೆ ಆಧಾರಿತ ಆರ್ಥಿಕ ನೀತಿಯ ತಂತ್ರಗಳು ಹೆಣ್ಣನ್ನು ಹಳೆಯ ಚೌಕಟ್ಟಿನೊಳಗೇ ಇಡಲೆತ್ನಿಸುತ್ತಿದ್ದರೆ, ಪುರುಷ ಮನಸುಗಳು ಅತಿ ಧಾರ್ಮಿಕತೆಯನ್ನು ಪ್ರತಿಪಾದಿಸುತ್ತ ಸಂಪ್ರದಾಯಗಳ ಹೊರಗೆ ನಲುಗುತ್ತಿವೆ. ಹೀಗಿರುತ್ತ ಇಸ್ಲಾಂ ಮತ್ತು ಸ್ತ್ರೀವಾದ ಎರಡೂ ವಿರುದ್ಧ ಪದಗಳೇನೋ ಎಂಬಂತೆ ಭಾಸವಾಗುತ್ತಿರುವಾಗ ಇಸ್ಲಾಮಿನ ಮಹಿಳಾ ದನಿಗಳನ್ನು ಕೇಳಿಸಿಕೊಳ್ಳುವುದು ತುಂಬ ಮುಖ್ಯವಾಗಿದೆ. ಮಹಿಳೆಯರು ದಿಟ್ಟವಾಗಿ ಸುಲ್ತಾನಾ ಕಂಡಂತಹ ದೂರದ ಕನಸನ್ನು ಕಂಡದ್ದೇ ಆದಲ್ಲಿ ಅದು ಅವರನ್ನಷ್ಟೆ ಅಲ್ಲ, ಇಡೀ ಸಮುದಾಯವನ್ನೇ ಮೇಲೆತ್ತಲು ಶಕ್ತವಾಗುತ್ತದೆ.
- ಒಂದೆಡೆ ಅಂತಾರಾಷ್ಟ್ರೀಯ ಮುಸ್ಲಿಂ ಮೂಲಭೂತವಾದದಿಂದ ಮುಸ್ಲಿಮೇತರರು ಮುಸ್ಲಿಮರ ಬಗೆಗೆ ಹೊಂದಿರುವ ಭಾವನೆ; ಇನ್ನೊಂದೆಡೆ ಬೆಳೆಯುತ್ತಿರುವ ಹಿಂದೂತ್ವ ಭಯೋತ್ಪಾದಕರಿಂದ ಸೃಷ್ಟಿಯಾಗಿರುವ ಅಭದ್ರತೆ – ಈ ಎರಡೂ ಭಾರತದ ಮುಸ್ಲಿಂ ಮಹಿಳೆಯರನ್ನು ಮತ್ತಷ್ಟು ಪರದೆಯೊಳಗೆ ತಳ್ಳಿ ಅಸಹಾಯಕರನ್ನಾಗಿಸಿವೆ. ಝೋಯಾ ಹಸನ್ – ರಿತು ಮೆನನ್ ಅವರ ಅಧ್ಯಯನ ವರದಿ ಪ್ರಕಾರ ಭಾರತದ ಮುಸ್ಲಿಂ ಹೆಣ್ಣುಮಕ್ಕಳ ಸಾಕ್ಷರತೆ ಶೇ. ೪೦.೬. ಇವರಲ್ಲಿ ಶೇ. ೧೭.೨ರಷ್ಟು ಹುಡುಗಿಯರು ೭ನೇ ತರಗತಿಯ ನಂತರ ಹಾಗೂ ಶೇ. ೧೦ರಷ್ಟು ಹುಡುಗಿಯರು ೧೦ನೇ ತರಗತಿಯ ನಂತರ ಓದು ಮುಂದುವರಿಸುತ್ತಾರೆ. ಅದರಲ್ಲೂ ಗ್ರಾಮೀಣ ಮುಸ್ಲಿಂ ಹೆಣ್ಣುಮಕ್ಕಳಲ್ಲಿ ಶೇ. ೧.೫ರಷ್ಟು ಮಾತ್ರ ೧೦ನೇ ತರಗತಿಯ ನಂತರ ವಿದ್ಯಾಭ್ಯಾಸ ಮುಂದುವರಿಸುತ್ತಾರೆ. ಮುಸ್ಲಿಂ ಮಹಿಳೆಯರ ಸಾಕ್ಷರತೆಯನ್ನು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಪ್ರತ್ಯೇಕವಾಗಿ ಪರಿಗಣಿಸಿದರೆ ಅದು ಶೇ. ೧೩.೫ ಹಾಗೂ ಶೇ. ೭೦ರಷ್ಟು ಇವೆ! ಕೋಟ್ಯಂತರ ಮುಸ್ಲಿಂ ಹೆಣ್ಣುಮಕ್ಕಳು ಬಡತನದ ಕಾರಣವಾಗಿ ಶಾಲೆಗೆ ಹೋಗಲಾರದ ಪರಿಸ್ಥಿತಿ ಒಂದು ಕಡೆಯಿದ್ದರೆ; ಶಾಲೆಗೆ ಹೋಗುವವರೂ ಉರ್ದು ಶಾಲೆಗೆ ಹೋಗುವುದು ಸ್ಥಳೀಯ / ಇಂಗ್ಲಿಷ್ ಭಾಷೆಯ ಸಂವಹನಕ್ಕೆ ತೊಡಕಾಗಿ ಸಂಭವಿಸಿದೆ. ಧರ್ಮಕ್ಕೊಂದು ಭಾಷೆಯೆನ್ನುವಂತೆ ಉರ್ದುವು ಮುಸ್ಲಿಮರ ಭಾಷೆಯಾಗತೊಡಗಿರುವುದು ಆ ಭಾಷಾ ಉನ್ನತಿಯ ದೃಷ್ಟಿಯಿಂದಲೂ, ಅದನ್ನು ಬಳಸುವವರ ದೃಷ್ಟಿಯಿಂದಲೂ ಹಿನ್ನಡೆ ಎನ್ನಬಹುದಾಗಿದೆ. ಈಗಲೂ ಮುಸ್ಲಿಂ ಹೆಣ್ಮಕ್ಕಳಿಗೆ ಕೇವಲ ಅರೆಬಿಕ್, ಉರ್ದು ಕಲಿಸುವ ಗಂಡು ಹುಡುಗರನ್ನು ಸ್ಥಳೀಯ ಭಾಷೆ / ಇಂಗ್ಲಿಷ್ ಶಾಲೆಗಳಿಗೆ ಕಳಿಸುವ ಪರಿಪಾಠ ಮುಸ್ಲಿಂ ಸಮುದಾಯದಲ್ಲಿದ್ದು, ಸಾಮೂಹಿಕ ಶಿಕ್ಷಣದ ಭಾಗವಾಗಿ ಸರ್ವ ಸಮುದಾಯಗಳ ಜೊತೆಗೆ ಮುಸ್ಲಿಂ ಹುಡುಗ–ಹುಡುಗಿಯರು ಕಲಿಯುವ ಅವಶ್ಯಕತೆ ಅಸಹಿಷ್ಣುತೆ ತಡೆಯುವ ಒಂದು ವಿಧಾನವಾಗಿ ಅವಶ್ಯವಾಗಿದೆ.

ಹೀಗಿರುತ್ತ ಬೇಗಂ ರುಖಿಯಾ ಈಗ್ಗೆ ೧೧೦ ವರ್ಷ ಕೆಳಗೆ ಬಂಗಾಳದಲ್ಲಿ ಬಂಗಾಳಿ, ಇಂಗ್ಲಿಷ್ ಭಾಷೆ ಕಲಿತು; ಅದರಲ್ಲೇ ಬರೆದು; ತನ್ನಂತೆಯೇ ಇತರ ಹೆಣ್ಮಕ್ಕಳೂ ಕಲಿಯಲೆಂದು ಶಾಲೆ ತೆರೆದದ್ದು ದೊಡ್ಡ ಸಾಧನೆಯೇ ಸರಿ. ಮುಸ್ಲಿಂ ಮಹಿಳಾ ಶಿಕ್ಷಣ ಕುರಿತು ಕೆಲಸ ಮಾಡುತ್ತಿರುವ ಹಲವರಿಗೆ ಅವರು ಆದರ್ಶಪ್ರಾಯರಾಗಿದ್ದಾರೆ. ಜೊತೆಗೆ ಮಹಿಳೆ ಬಯಸುವ ಯುಟೋಪಿಯಾದ ರೂಪರೇಷೆಗಳನ್ನು ಸೃಜನಶೀಲ ಕೃತಿಯೊಂದರಲ್ಲಿ ಬಿಚ್ಚಿಟ್ಟು ಮಹಿಳಾ ಮಾರ್ಗ ಅರಸುವವರಿಗೂ ಅವರು ದಾರಿದೀಪವಾಗಿದ್ದಾರೆ. ಆ ಚೇತನ ನಮ್ಮೆಲ್ಲರಲ್ಲೂ ಅಷ್ಟಿಷ್ಟು ತುಂಬಿಕೊಳ್ಳಲಿ. ಸುತ್ತ ಕತ್ತಲೆಂದು ಗೊಣಗದೆ ಕತ್ತಲಲ್ಲಿರುವವರ ಕೈಗೊಂದು ಹಚ್ಚಿದ ಹಣತೆಯನ್ನಾದರೂ ಇಡುವ ಕೆಲಸ ಆಗಲಿ.

**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

# ಅತ್ಯಂತ ವಿಶ್ವಾಸಾರ್ಹ ದಿನಪತ್ರಿಕೆ

1948 ಕನ್ನಡ ದಿನಪತ್ರಿಕೆಗಳ ಇತಿಹಾಸದಲ್ಲಿ ಹೊಸ ಮೈಲಿಗಲ್ಲನ್ನು ಕಂಡ ವರ್ಷ, ಕನ್ನಡ ಪ್ರಜೆಗಳವಾಣಿ ಪ್ರಜಾವಾಣಿ ಸಂಸ್ಥೆ, ದಿ ಪ್ರಿಂಟರ್ಸ್ (ಮೈಸೂರು) ಪ್ರೈವೇಟ್ ಲಿಮಿಟೆಡ್ ಉದಯಿಸಿದ ವರ್ಷ. ಅಂದಿನಿಂದ ಇಂದಿನವರೆಗೆ ಸಂಸ್ಥೆ ಬರೀ ಪತ್ರಿಕೆಗಳನ್ನು ಪ್ರಕಟಿಸುವ ಸಂಸ್ಥೆಯಾಗಿರದೆ ಕರ್ನಾಟಕದ ಜನರ ಮನೆ ಮನಗಳಲ್ಲಿ ಹಾಸುಹೊಕ್ಕಾಗಿ ಅವರ ಜೀವನದ ಒಂದು ಭಾಗವಾಗಿ ಬೆಳೆದಿದೆ.

ಸಂಸ್ಥೆಯ ಮುಖ್ಯ ಪ್ರಕಟಣೆಗಳಲ್ಲಿ ಇಂಗ್ಲಿಷ್ ದಿನಪತ್ರಿಕೆ ಡೆಕ್ಕನ್ ಹೆರಾಲ್ಡ್, ಕನ್ನಡ ದಿನಪತ್ರಿಕೆ ಪ್ರಜಾವಾಣಿ ಕರ್ನಾಟಕದ ಜನರ ಅತ್ಯಂತ ವಿಶ್ವಾಸಾರ್ಹ ಪತ್ರಿಕೆಗಳಾಗಿ ಜನಮನದಲ್ಲಿ ನೆಲೆಸಿದ್ದು ಅವರ ಜೀವನ ಶೈಲಿಯನ್ನೇ ಬದಲಿಸುವಷ್ಟು ಶಕ್ತಿಶಾಲಿಯಾಗಿ ಬೆಳೆದಿವೆ. ವಾರ ಪತ್ರಿಕೆ ಸುಧಾ ಪ್ರಕಟಣೆಯ ದಿನಕ್ಕಾಗಿ ಇಡೀ ಕುಟುಂಬ ತುದಿಗಾಲಲ್ಲಿ ಕಾದಿರುತ್ತದೆ. ಕನ್ನಡ ಸಾಹಿತ್ಯಾಸಕ್ತರ ಮೆಚ್ಚಿನ ಮಾಸ ಪತ್ರಿಕೆ ಮಯೂರ ಕೂಡ ನಮ್ಮ ಸಂಸ್ಥೆಯ ಹೆಮ್ಮೆಯ ಕಾಣಿಕೆ.

ನಮ್ಮ ನಾಲ್ಕೂ ಪ್ರಕಟಣೆಗಳು ಹಿಂದೆಂದಿಗಿಂತಲೂ ಅತಿ ಶೀಘ್ರವಾಗಿ ಕರ್ನಾಟಕ ರಾಜ್ಯಾದ್ಯಂತ ಓದುಗರಿಗೆ ತಲುಪುತ್ತಿವೆ. ವಿಶ್ವದ, ದೇಶದ, ರಾಜ್ಯದ ಸುದ್ದಿಗಳನ್ನಷ್ಟೇ ಅಲ್ಲದೆ ಓದುಗರ ಜ್ಞಾನ ಭಂಡಾರವನ್ನು ಹೆಚ್ಚಿಸುವ ಲೇಖನಗಳನ್ನೂ ಹೊಂದಿರುತ್ತವೆ. ಆರು ದಶಕಗಳಿಗೂ ಮೀರಿ ಓದುಗರು ನಮ್ಮ ಪ್ರಕಟಣೆಗಳ ಮೇಲಿಟ್ಟಿರುವ ವಿಶ್ವಾಸ ಮತ್ತು ನಂಬಿಕೆಗಳಿಗೆ ಸ್ವಲ್ಪವೂ ಕುಂದುಬಾರದಂತೆ ಮುನ್ನಡೆಯುತ್ತಿವೆ.






**The Printers (Mysore) Private Limited**

ಪ್ರಜಾವಾಣಿ

DECCAN HERALD

ಸುಧಾ

ಮಯೂರ

No. 75, M.G. Road, Bangalore-560 001 Phone: 2588 0000
Fax: 2588 0205 E-mail: Circulation-Blore@deccanherald.co.in

# ಭೀಷ್ಮ ಸಾಹನಿ

**ಜನ್ಮ ಶತಮಾನೋತ್ಸವ ಸಂದರ್ಭದ ಲೇಖನ**



ಶ್ರೇಷ್ಠ ಇಂಗ್ಲಿಷ್ ಅಧ್ಯಾಪಕ, ಪ್ರಸಿದ್ಧ ಸಾಹಿತಿ, ನಾಟಕಕಾರ, ಪತ್ರಿಕಾ ಸಂಪಾದಕ, ಅನುವಾದಕ, ರಂಗನಟ, 'ಇಪ್ಟಾ' ಸಂಘಟಕ, ನಿರ್ದೇಶಕ, ಪ್ರಗತಿಶೀಲ ಲೇಖಕ ಸಂಘ ಮತ್ತು ಆಫ್ರೋ – ಏಶಿಯನ್ ಲೇಖಕ ಸಂಘದಂಥ ಅಂತರರಾಷ್ಟ್ರೀಯ ಸಂಸ್ಥೆಗಳ ಪದಾಧಿಕಾರಿ, ತಮ್ಮದೇ "ತಮಸ್" ಅಲ್ಲದೆ, "ಮೋಹನ್ ಜೋಶೀ ಹಾಜಿರ್ ಹೋ" ಮುಂತಾದ ಸಿನೆಮಾಗಳಲ್ಲಿ ಯಶಸ್ವಿ ಅಭಿನಯ ನೀಡಿದ, ಸಾಹಿತ್ಯ ಅಕಾದೆಮಿ ಪ್ರಶಸ್ತಿ ಪಡೆದಿದ್ದ, ಬಹುಭಾಷಿಯಾಗಿದ್ದರೂ ಭೀಷ್ಮ ಸಾಹನಿ ಎಂದೂ ಯಾರೊಡನೆಯೂ ಅಹಂಕಾರದಿಂದ ನಡೆದುಕೊಳ್ಳಲಿಲ್ಲ. ಕುಟುಂಬವತ್ಸಲರಾಗಿದ್ದ ಸಾಹನಿ ಅವರು ಮನೆಯಲ್ಲಿ ಅಷ್ಟೇ ಅಲ್ಲ, ಸಾರ್ವಜನಿಕ ಜೀವನದಲ್ಲಿಯೂ ಒಂದು ಕೂಡು–ಕುಟುಂಬದಲ್ಲಿದ್ದಂತೆಯೇ ಇರುತ್ತಿದ್ದರು. ಅವರ ವಿನಯಪೂರ್ಣ ಸ್ವಭಾವ, ಮೃದು ಮಿತಭಾಷಿತ್ವ , ವೈಚಾರಿಕ ಸ್ಪಷ್ಟತೆ, ಗಂಭೀರರಾಗಿದ್ದರೂ ಸದಾ ಹಸನ್ಮುಖ ವ್ಯಕ್ತಿತ್ವ ಮತ್ತು ಸಜ್ಜನ ನಡೆವಳಿಕೆ ದೇಶ ವಿದೇಶಗಳಲ್ಲಿ ಅವರಿಗೆ ಅಸಂಖ್ಯ ಆತ್ಮೀಯರನ್ನು, ಸ್ನೇಹಿತರನ್ನು ದೊರಕಿಸಿಕೊಟ್ಟಿತ್ತು.

ಡಾ॥ ಸಿದ್ಧಲಿಂಗ ಪಟ್ಟಣಶೆಟ್ಟಿ

೧

**ಹಿಂ**ದಿಯ ಪ್ರಸಿದ್ಧ ಕಾದಂಬರಿಕಾರ, ಕತೆಗಾರ, ನಾಟಕಕಾರರಾದ ಭೀಷ್ಮ ಸಾಹನಿಯವರ 'ತಮಸ್' ಕಾದಂಬರಿ ದೂರದರ್ಶನದಲ್ಲಿ ಧಾರಾವಾಹಿಯಾಗಿ ಪ್ರದರ್ಶಿತವಾಗಿ ಅತ್ಯಂತ ಜನಪ್ರಿಯವಾಗಿತ್ತು. ಆಗ ಆ ಕಾದಂಬರಿಯನ್ನು ಶಾರದಾ ಸ್ವಾಮಿ ಮತ್ತು ಎಸ್. ಎಂ. ರಾಮಚಂದ್ರಸ್ವಾಮಿ ಕನ್ನಡಕ್ಕೆ ಅನುವಾದಿಸಿ (೧೯೮೮) ಕೊಟ್ಟುದನ್ನು ಕನ್ನಡ ಓದುಗರು ಈಗಲೂ ಪ್ರೀತಿಯಿಂದ ನೆನೆಯುತ್ತಾರೆ. ಆಗಿನಿಂದ ನವಕರ್ನಾಟಕ ಪ್ರಕಾಶನದವರು, ಮತ್ತು ಇತರರು ಭೀಷ್ಮ ಸಾಹನಿಯವರ ಕೆಲವು ಕಾದಂಬರಿ, ನಾಟಕ, ಕಥಾಸಂಗ್ರಹ ಮುಂತಾದುವನ್ನು ಕನ್ನಡದಲ್ಲಿ ಪ್ರಕಟಿಸುತ್ತ ಬಂದರು; ತನ್ಮೂಲಕ ಸಾಹನಿಯವರನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಹೆಚ್ಚು ಆಪ್ತರಾಗುವಂತೆ ಮಾಡಿದರು.

ಭೀಷ್ಮ ಸಾಹನಿ ತಮ್ಮ ಬದುಕಿನಲ್ಲಿ ಕಂಡುಂಡ ಅನುಭವ ಮತ್ತು ನೆನಪುಗಳನ್ನು ಆಧಾರವಾಗಿಟ್ಟುಕೊಂಡು ಆಪ್ತ ಹಾಗೂ ಪ್ರಭಾವಶಾಲಿಯಾದ ಬರವಣಿಗೆ ನೀಡಿದ ವಿರಳ ಲೇಖಕರು. ಅವರು ೧೯೧೫, ಆಗಸ್ಟ್ ೮ರಂದು ರಾವಲಪಿಂಡಿಯಲ್ಲಿ ಜನಿಸಿದರು. ಅವರ ತಂದೆ ಹರ್‌ಬನ್ಸ್‌ಲಾಲ್ ಸಾಹನಿ ರಾವಲಪಿಂಡಿಯ ಪ್ರತಿಷ್ಠಿತ ವ್ಯಾಪಾರಸ್ಥರು ಮತ್ತು ಸಾಂಸ್ಕೃತಿಕ ನಾಯಕರಾಗಿದ್ದರು. ಛಾಛೀ ಮೊಹಲ್ಲಾದಲ್ಲಿದ್ದ ಎರಡು ಅಂತಸ್ತಿನ ಅವರ ಮನೆಯ ಮೇಲ್ಭಾಗ ಮನೆಯವರಿಗಾಗಿ ವಾಸಸ್ಥಳವಾಗಿತ್ತು ; ಮತ್ತು ಕೆಳಭಾಗದಲ್ಲಿ ವ್ಯಾಪಾರಕ್ಕೆ ಮತ್ತು ಅತಿಥಿಗಳಿಗಾಗಿ ವ್ಯವಸ್ಥೆಯಿತ್ತು. ಹರ್‌ಬನ್ಸ್‌ಲಾಲ್‌ರ ಮನೆಯಲ್ಲಿ ಪತ್ನಿ ಲಕ್ಷ್ಮಿ, ದೊಡ್ಡ ಮಗ ಬಲರಾಜ್, ವೀರ್ಣಾ ಮತ್ತು ಸುಮಿತ್ರಾ ಎಂಬ ಹೆಣ್ಣುಮಕ್ಕಳು ಹಾಗೂ ಕೊನೆಯ ಮಗ ಭೀಷ್ಮ ವಾಸಿಸುತ್ತಿದ್ದರು. ಅವರು ಬಟ್ಟೆ ವ್ಯಾಪಾರ ಮಾಡುತ್ತಿದ್ದರು. ಮುಖ್ಯವಾಗಿ ಕಮೀಶನ್ ಏಜೆಂಟ್ ಆಗಿ, ಪ್ರಾಮಾಣಿಕ ವ್ಯವಹಾರ ನಡೆಸುತ್ತಿದ್ದರು; ಆರ್ಯಸಮಾಜದ ಅನುಯಾಯಿಯಾಗಿದ್ದ ಅವರು ರಾವಲಪಿಂಡಿಯಲ್ಲಿ ಅದರ ಕಾರ್ಯದರ್ಶಿಯೂ ಆಗಿದ್ದರು. ಅದರ ವಾರ್ಷಿಕೋತ್ಸವ ಅಥವಾ ಇತರ ಕಾರ್ಯಕ್ರಮಗಳ ಹೊತ್ತಿಗೆ ಪ್ರತಿಷ್ಠಿತ ಹಿಂದಿ ಲೇಖಕರು, ಭಾಷಣಕಾರರನ್ನು ಆಹ್ವಾನಿಸುತ್ತಿದ್ದರು. ಅಂಥ ಸಂದರ್ಭದಲ್ಲಿಯೇ ಭೀಷ್ಮ ಸಾಹನಿ ತಾವು ಚಿಕ್ಕವರಿದ್ದಾಗ ಸುದರ್ಶನ್‌ರಂಥ ಪ್ರತಿಷ್ಠಿತ ಹಿಂದಿ ಲೇಖಕರನ್ನು ನೋಡಿದ್ದು, ಪ್ರೇಮ್‌ಚಂದ್ ಮುಂತಾದವರ ಪ್ರಮುಖ ಕಥಾಸಂಗ್ರಹಗಳನ್ನು ಕೊಂಡು ಓದಿದ್ದು ನೆನೆಯುತ್ತಾರೆ.

ಉಪನಯನ ಸಂಸ್ಕಾರದ ನಂತರ ಇಬ್ಬರೂ ಸೋದರರನ್ನು ಸಂಸ್ಕೃತ ಕಲಿಯುವುದಕ್ಕಾಗಿ ಗುರುಕುಲಕ್ಕೆ ಕಳಿಸಲಾಯಿತು. ಅಲ್ಲಿ ಕಲಿತ ಬಾಯಿಪಾಠ ಮಾಡುವ, ನೆನಪಿಡುವ ಅಭ್ಯಾಸ ಮಾತ್ರ ಭೀಷ್ಮರಿಗೆ ಕೊನೆಯವರೆಗೂ ನೆರವಾಯಿತು. ಅವರು ಗುರುಕುಲದಲ್ಲಿ ಬಹಳ ಕಾಲ ಉಳಿಯಲಿಲ್ಲ; ಇಬ್ಬರೂ ರಾವಲಪಿಂಡಿಯ ಶಾಲೆಗೆ ಹೆಸರು ಹಚ್ಚಿಸಿಕೊಂಡರು. ಇಂಗ್ಲಿಷ್ ಅಥವಾ ಉರ್ದುವಿನಲ್ಲಿ ವ್ಯವಹಾರ ನಡೆಸುತ್ತಿದ್ದ ಹರ್‌ಬನ್ಸ್‌ಲಾಲ್‌ರಿಗೂ ಮಕ್ಕಳು ಶಾಲೆಗೆ ಸೇರಿದ್ದು ಸರಿಯೆನಿಸಿತು. ತಾಯಿಗೂ ಇದು ಇಷ್ಟದ ನಿರ್ಣಯವಾಗಿತ್ತು.



ಬಲರಾಜರಿಗೆ ಕಲಿಯುವ, ಓದುವ ಆಸಕ್ತಿಯಿತ್ತು. ಆದರೆ ಊರೂರು ತಿರುಗಾಡುವುದು, ಆಟಪಾಟ, ಪ್ರವಚನ ಭಾಷಣ ಕೇಳುವುದು, ಗೆಳೆಯರೊಂದಿಗೆ ಹರಟೆ ಮುಂತಾದುವು ಭೀಷ್ಮರ ಹವ್ಯಾಸಗಳಾಗಿದ್ದುವು. ಆಗಿನ ತಮ್ಮ ಗೆಳೆಯರ ಬಡತನ, ಅವರ ಜೀವನದ ನಿರ್ಭಯ ರೀತಿ–ನೀತಿಗಳು ಅವರಿಗೆ ಇಷ್ಟವಾಗುತ್ತಿದ್ದುವು. ಬಹುಪಾಲು ಈ ಗೆಳೆಯರೇ ನಂತರ ಭೀಷ್ಮರ ಸಾಹಿತ್ಯದ ತುಂಬ ಹರಡಿದ್ದಾರೆ. ಮೊದಲಿನಿಂದಲೂ ಮನೆಯಲ್ಲಿ ಸಾಹಿತ್ಯಿಕ ವಾತಾವರಣ ವಿದ್ದುದು ಅವರಿಗೆ ಕೊನೆಯವರೆಗೂ ನೆರವಾಯಿತು. ಅವರ ತಾಯಿಯ ತಾಯಿ ಸಹ 'ಕವಿತ್ತೆ' ರಚಿಸುತ್ತಿದ್ದಳಂತೆ. ತಂದೆಯೂ ಒಂದು ಕಾದಂಬರಿ ಬರೆದಿದ್ದರಂತೆ. ರಾವಲಪಿಂಡಿಯಲ್ಲಿ ಆರಂಭದ ಶಿಕ್ಷಣ ಮುಗಿಸಿ, ಅವರು ಹೆಚ್ಚಿನ ಓದಿಗೆ ಲಾಹೋರ್‌ಗೆ ಹೋದರು. ಅಲ್ಲಿ ಸರಕಾರಿ ಕಾಲೇಜಿನಿಂದ ಇಂಗ್ಲಿಷಿನಲ್ಲಿ ಎಂ.ಎ. ಮಾಡಿಕೊಂಡರು.

ಸಾಹನಿ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿಕೊಂಡಿದ್ದರು. ೧೯೪೨ರ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಭಾಗವಹಿಸಿದ್ದುದಕ್ಕಾಗಿ ಜೇಲುವಾಸವನ್ನೂ ಅನುಭವಿಸಿದ್ದರು. ದೇಶವಿಭಜನೆಯ ಹೊತ್ತಿಗೆ ಅವರ ಇಡೀ ಕುಟುಂಬವನ್ನು ಒತ್ತಾಯಪೂರ್ವಕವಾಗಿ ಅಮೃತಸರಕ್ಕೆ ಸ್ಥಳಾಂತರಿಸಲಾಯಿತು.

೨

ದೇಶವಿಭಜನೆಯ ನಂತರ ಭೀಷ್ಮ ಸಾಹನಿ ಮುಂಬಯಿ, ಅಂಬಾಲಾ, ಜಲಂಧರ್ ಮುಂತಾದ ಕಡೆ ವಾಸಿಸಿ, ಕೊನೆಗೆ ದಿಲ್ಲಿಯಲ್ಲಿ ನೆಲೆಗೊಂಡರು. ದಿಲ್ಲಿಯ ಪಟೇಲನಗರದಲ್ಲಿ ತಂದೆ ಕೊಂಡಿದ್ದ ಮನೆಯಿತ್ತು. ಅವರು 'ದಿಲ್ಲಿ ಕಾಲೇಜಿ'ನಲ್ಲಿ (ಅದು ಈಗ 'ಝಾಕಿರ್ ಹುಸೇನ್ ಕಾಲೇಜು') ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅಲ್ಲಿದ್ದಾಗಲೇ 'ಹಿಂದೀ ಕಾದಂಬರಿಗಳಲ್ಲಿ ನಾಯಕನ ಪರಿಕಲ್ಪನೆ' ಕುರಿತು ವಾರಾಣಸಿಯಿಂದ ಸಂಪರ್ಕ ಇರಿಸಿ ಕೊಂಡು, ಪಂಜಾಬ ವಿಶ್ವವಿದ್ಯಾಲಯದಿಂದ, ಇಂಗ್ಲಿಷ್‌ನಲ್ಲಿ ಪಿಎಚ್.ಡಿ. ಮಾಡಿಕೊಂಡರು. ಆಗ ಕಾಶಿಯಲ್ಲಿದ್ದ ಹಿಂದಿಯ ಪ್ರಖ್ಯಾತ ವಿದ್ವಾಂಸರಾದ ಹಜಾರೀಪ್ರಸಾದ್ ದ್ವಿವೇದಿ, ನಾಮ್‌ವರ್ ಸಿಂಗ್, ವಿಶ್ವನಾಥ್ ತ್ರಿಪಾಠಿ ಮುಂತಾದವರಿಗೆ ಹತ್ತಿರದವರಾದರು. ನಂತರ ಕುಟುಂಬದವರೊಂದಿಗೆ ಮಾಸ್ಕೋಗೆ ಹೋಗಿ, ಏಳು ವರ್ಷ (೧೯೫೭–೧೯೬೩) ಅಲ್ಲಿದ್ದು, ಒಂದು ಪ್ರಕಾಶನ ಸಂಸ್ಥೆಯಲ್ಲಿ ಅನುವಾದಕರಾಗಿ ಕೆಲಸ ಮಾಡಿದರು; ಟಾಲ್‌ಸ್ಟಾಯ್, ಸ್ತಾನಿಸ್ಲಾವ್‌ಸ್ಕಿ, ಆಇತಮಾತೋವ್ ಮುಂತಾದ ಪ್ರಮುಖರ ೨೫ ರಶಿಯನ್ ಪುಸ್ತಕಗಳನ್ನು ಹಿಂದಿಗೆ ಭಾಷಾಂತರಿಸಿದರು. ಬಹುಭಾಷಿಯಾಗಿದ್ದ ಭೀಷ್ಮ ಸಾಹನಿ ಅವರ ಮಾತೃಭಾಷೆ ಪಂಜಾಬಿ; ಹಿಂದೀ, ಉರ್ದು, ಸಂಸ್ಕೃತ, ಇಂಗ್ಲಿಷ್ ಮತ್ತು ರಶಿಯನ್ ಕಲಿತ ಭಾಷೆಗಳು. ಬರವಣಿಗೆ ಮಾಡಿದ್ದು ಮಾತ್ರ ಹಿಂದಿಯಲ್ಲಿ. ಮಾತಿನಲ್ಲಿ ಬಳಸಿದ್ದು ಹಿಂದುಸ್ತಾನಿ ಮತ್ತು ಬರವಣಿಗೆಯಲ್ಲಿ ರೂಢಿಸಿಕೊಂಡಿದ್ದು ಪ್ರೇಮ್‌ಚಂದ್ ಬರೆದಂಥ ನೇರ, ಸರಳ ಶೈಲಿಯ ಭಾಷೆ.

ಭೀಷ್ಮ ಸಾಹನಿ ಅಪಾರ ಅನುಭವಗಳ ಭಂಡಾರದಂತಿದ್ದ ಲೇಖಕರಾಗಿದ್ದರು. ಸ್ವಾತಂತ್ರ್ಯ ಹೋರಾಟದ ಚಳವಳಿ ಮತ್ತು ದೇಶ ವಿಭಜನೆಯ ಸಾವು–ನೋವುಗಳನ್ನು ಕಣ್ಣಾರೆ ಕಂಡಿದ್ದರು. ಬಾಲ್ಯದಿಂದಲೇ ಹಿಂದೂ, ಸಿಖ್, ಮುಸಲ್ಮಾನ್, ಕ್ರಿಶ್ಚಿಯನ್‌ರ ಜೀವನವನ್ನು ಚೆನ್ನಾಗಿ ಅರಿತವರಾಗಿದ್ದರು. ಭಾರತ ಮತ್ತು ಹೊರದೇಶಗಳ ರಾಜಕೀಯವನ್ನು ಹತ್ತಿರದಿಂದ ಗಮನಿಸುತ್ತ ಬಂದಿದ್ದರು. ಆರಂಭದಲ್ಲಿ ಕಾಂಗ್ರೆಸ್ ಸದಸ್ಯರಾಗಿ, ನಂತರ ಕಮ್ಯುನಿಸ್ಟ್ ಪಾರ್ಟಿ ಸೇರಿ ದೇಶಸೇವೆಯಲ್ಲಿ ತೊಡಗಿದ್ದರು. ಮೊದಲಿನಿಂದಲೂ ಸ್ವಾತಂತ್ರ್ಯ, ಸಮಾನತೆ, ವಿಶ್ವಬಂಧುತ್ವ, ಪ್ರಜಾಪ್ರಭುತ್ವ, ಧರ್ಮನಿರಪೇಕ್ಷ ಸಿದ್ಧಾಂತ, ಕೋಮು ಸೌಹಾರ್ದತೆಗಳನ್ನು ಪ್ರೀತಿಯಿಂದ ಮನ್ನಿಸಿದ್ದರು, ಪಾಲಿಸಿದ್ದರು. ಇಂಥ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಅರ್ಜಿಸಿದ ಅನುಭವ, ವಿಚಾರ, ಸಿದ್ಧಾಂತಗಳ ಬೆಳಕಿನಲ್ಲಿ ಅವರ ಸಮಸ್ತ ಸಾಹಿತ್ಯವನ್ನು ಅವಲೋಕಿಸಬಹುದಾಗಿದೆ.

೩

ಭೀಷ್ಮ ಸಾಹನಿಯವರ ಮೊದಲ ಕತೆ ಪ್ರಕಟವಾಗಿದ್ದು ಅವರು ರಾವಲಪಿಂಡಿಯ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ. ಆಗಿನ ಕಾಲೇಜು ಮಿಸಲೆನಿಯಲ್ಲಿ ಪ್ರಕಟವಾಗಿದ್ದ 'ಅಬಲಾ' ಹೆಸರಿನ ಇದೇ ಕತೆ, ನಂತರ ಅವರು ಹೆಚ್ಚಿನ ಅಭ್ಯಾಸಕ್ಕಾಗಿ ಲಾಹೋರ್ ಕಾಲೇಜಿನಲ್ಲಿದ್ದಾಗ

ಕಾವ್ಯಲೋಕ

## ತರಗೆಲೆಗಳು – ದಂಡನಾಯಕ

ಉದುರುವ ಎಲೆಗಳು
ಉದುರುತ್ತಿರುವ ನೆಲೆಗಳು
ಪಶ್ಚಿಮದ ವಿಲಯ ಮಾರುತದ
ಹೊಡೆತಕ್ಕೆ ಸಿಕ್ಕಿ
ದಿಕ್ಕು ಕಾಣದೆ ಚಡಪಡಿಸುವ ಜೀವಗಳು.

ಒಣ ಎಲೆಗಳು ತರಗೆಲೆಗಳಾಗಿ
ತಮ್ಮದೇ ಮರಗಳಿಗೆ ನೇತಾಡುತ್ತಿವೆ,
ಉಸಿರು ನಿಂತು.

ಪಶ್ಚಿಮವನ್ನೇ ಹಳಿಯುವ ಶಾಲೆಯ ಮುದ್ದಿನ ಛಾತ್ರ
ಹೊರಬಂದ ಮೇಲೆ ಮಹಾ ದಂಡನಾಯಕನಿಗೆ
ಅದೇ ಪಶ್ಚಿಮದ ದಿಗ್ಗಜರಿಂದ
ಶಹಬ್ಬಾಸ್ ಗಿರಿ ಪಡೆಯುವ ತವಕ, ಗೀಳು
ಸ್ವಪ್ರತಿಷ್ಠೆ, ಸ್ವಚಿತ್ರಗಳ ಆತ್ಮರತಿಯ ಮೈ
ಪುಳಕದಲ್ಲಿ ಮೈಮರೆತಿರುವ ನಾಯಕನಿಗೆ
ಉಸಿರು ನಿಂತಿರುವ, ಏದುಸಿರು ಬಿಡುವ
ಎಲೆಗಳು ಕಾಣುವುದೇ ಇಲ್ಲ, ಕೇಳುವುದೇ ಇಲ್ಲ.

ನರಲೋಕದ ರಾಜನಾದರೆ ಸಾಕು
ದೇವೇಂದ್ರನ ಪಟ್ಟ ಸಿಕ್ಕಂತೆ,
ಭಜನಾಮಂಡಲಿಗಳ
ಉಘೋ ಉಘೋ ಉದ್ಘೋಷಗಳ ನಡುವೆ
ತರಗೆಲೆಗಳ ಪಿರಿಪಿರಿ ಕಿವಿಗೆ ಬಿದ್ದೀತೇ ?

ದಿವಿಭುವಿಗಳ ಫರಕ್ಕಿಲ್ಲದೆ
ಜೈತ್ರಯಾತ್ರೆಯಲ್ಲಿ ಲೀನ ಈ ನಾಯಕ.
ಮೈಬಗ್ಗಿಸಿ, ಶಿರ ಬಾಗಿಸಿ
ಡೊಗ್ಗು ಸಲಾಮುಗಳಲ್ಲೇ ಕಳೆದುಹೋಗಿರುವ
ಉಪನಾಯಕರು.

ಈ ಅಂಗುಲಿಮಾಲನನ್ನು ಆನಂದನನ್ನಾಗಿಸುವ
ಬುದ್ಧ ಬಂದಾನೆಯೇ ?
ಸ್ವಾನಂದದಲ್ಲಿ ಈಜಾಡುವ,
ತನ್ನ ಮಾತಿನ ಮೋಡಿಯಲ್ಲಿ ತಾನೇ
ಕಳೆದುಹೋಗಿರುವ
ನಾರ್ಸಿಸಸ್ಸನಿಗೆ ಬುದ್ಧನ ಮಾತೆಲ್ಲಿ ಹಿಡಿಸೀತು ?

ಕೊಂಬೆಗಳ ಮೇಲಿಂದ ಎಲೆಗಳು ಇಳಿದು ಬಂದಾಗ
ನಿಟ್ಟುಸಿರು ನಿಲ್ಲಿಸಿ ತರಗೆಲೆಗಳು ಹೂಂಕರಿಸಿದಾಗ
ದಂಡನಾಯಕನಿಂದ ದಂಡ ಪೀಕದೆ ಬಿಡುವುದಿಲ್ಲ.

ಈಬಾರಿ ಚಂಡಮಾರುತವನ್ನು ಎಬ್ಬಿಸುವುದು
ಇದೇ ಎಲೆಗಳ ಸರದಿ.
ತನ್ನ ಜೈತ್ರಯಾತ್ರೆಯನ್ನು ಮುಗಿಸಿ
ರಾಜಪ್ರಾಸಾದಕ್ಕೆ ಹಿಂತಿರುಗಿ ಬಂದ
ದಂಡನಾಯಕನಿಗೆ
ತನ್ನ ಸಿಂಹಾಸನವೇ
ಕಾಣದಿದ್ದದ್ದು ಎಲ್ಲೆಲ್ಲಿಯೂ ಸುದ್ದಿ.

**ನಗರಗೆರೆ ರಮೇಶ್**
ನಂ. ೩೬೬, ೮ನೇ ಅಡ್ಡರಸ್ತೆ
೮ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು – ೫೬೦ ೦೭೦



ಮತ್ತೆ ಅಲ್ಲಿಯ ಮಿಸಲೆನಿಯಲ್ಲಿಯೂ ಪ್ರಕಟವಾಗಿತ್ತು. ಲಾಹೋರ್ ಸರಕಾರಿ ಕಾಲೇಜಿನಿಂದ ಪಡೆದ ಅನೇಕ ಅನುಭವಗಳು ಜೀವನದುದ್ದಕ್ಕೂ ತಮಗೆ ನೆರವಾಗಿವೆ ಎಂದು ಸಾಹನಿ ಬಹಳ ಕಡೆ ಹೇಳಿಕೊಂಡಿದ್ದಾರೆ. ಅಲ್ಲಿದ್ದಾಗಲೇ ಹಿಂದಿ ಮತ್ತು ಇಂಗ್ಲಿಷ್‌ನ ಅನೇಕ ಕಾದಂಬರಿ, ನಾಟಕ ಮುಂತಾದುವುಗಳನ್ನು ಓದಿದ್ದು, ತಮ್ಮ ಶಿಕ್ಷಕರೊಂದಿಗೆ ಚರ್ಚಿಸಿದ್ದು ಸಹ ತನ್ನನ್ನು ಸಾಹಿತಿಯನ್ನಾಗಿ, ನಾಟಕಕಾರನನ್ನಾಗಿ ರೂಪಿಸುವಲ್ಲಿ ಜೊತೆಗೂಡಿದೆ ಎನ್ನುತ್ತಾರೆ.

ಸಾಹನಿಯವರ ಸೋದರತ್ತೆಯ ಪತಿ ಚಂದ್ರಗುಪ್ತ ವಿದ್ಯಾಲಂಕಾರ್ ಹಿಂದಿಯ ಪ್ರಸಿದ್ಧ ಕತೆಗಾರ ಹಾಗೂ ಪತ್ರಿಕಾ ಸಂಪಾದಕರಾಗಿದ್ದರು. ಸಾಹನಿ ತಮ್ಮ ಹಾಸ್ಟೆಲ್ ಬಿಟ್ಟು ವಿದ್ಯಾಲಂಕಾರ್ ಅವರ ಮನೆಯಲ್ಲಿ ಇರತೊಡಗಿದ ನಂತರ ಹಿಂದಿಯ ಅಸಂಖ್ಯ ಲೇಖಕರ ಸಂಪರ್ಕಕ್ಕೆ ಬಂದರು. ಸ.ಹೀ. ವಾತ್ಸ್ಯಾಯನ್ 'ಅಜ್ಞೇಯ್', ದೇವೇಂದ್ರ ಸತ್ಯಾರ್ಥಿ, ಉಪೇಂದ್ರನಾಥ್ 'ಅಶ್ಕ್', ಪ್ರೇಮ್‌ಚಂದ್ ಮುಂತಾದವರು ಆ ಮನೆಗೆ ಬಂದು ಸಾಹಿತ್ಯಿಕ ಚರ್ಚೆಯಲ್ಲಿ ಪಾಲುಗೊಂಡ ಪ್ರಮುಖರು. ರವೀಂದ್ರನಾಥ್ ಠಾಕೂರ್ ಮತ್ತು ನೃತ್ಯಗುರು ಉದಯಶಂಕರ್, ಸುಮಿತ್ರಾನಂದನ್ ಪಂತ್ ಮೊದಲಾದವರನ್ನು ಕಂಡದ್ದೂ ಲಾಹೋರ್‌ದಲ್ಲಿದ್ದಾಗಲೇ.

ಎಂ.ಎ. ಮುಗಿಸಿದ ನಂತರ ಬಲರಾಜ್ ಸಾಹನಿ ತಂದೆಯ ವ್ಯಾಪಾರದಲ್ಲಿ ಕೈ ಜೋಡಿಸಲು ಇಷ್ಟಪಡಲಿಲ್ಲ. ಅವರು ಶಾಂತಿನಿಕೇತನಕ್ಕೆ ಹೋಗಿ ಅಲ್ಲಿ ಹಿಂದಿ ಅಧ್ಯಾಪಕರಾದರು. ಆಗ ಭೀಷ್ಮ ಅವರು ಸಹ ತಮ್ಮದೇ ಆದ ಬೇರೆ ದಾರಿ ಹುಡುಕಲೆತ್ನಿಸಿದರು. ಶಾಂತಿನಿಕೇತನದಿಂದ ಬಲರಾಜ್ ಕಳಿಸಿದ ಒಂದು ನಾಟಕವನ್ನು ರಂಗಕ್ಕೆ ತರಲು ಯತ್ನಿಸಿದರು. ರಾವಲಪಿಂಡಿಯಲ್ಲಿ ಒಂದೂ ನಾಟಕ ಮಂದಿರ ಇರಲಿಲ್ಲ. ಆಗ ತಮ್ಮ ಹಳೆಯ ಇಂಟರ್‌ಮೀಡಿಯೆಟ್ ಕಾಲೇಜಿನ ಪ್ರಿನ್ಸಿಪಾಲ್ ಜಸ್‌ವಂತ್ ರಾಯ್ (ಬಲರಾಜ್ ಸಾಹನಿಯವರ ಪತ್ನಿ ದಮಯಂತಿಯ ಅಣ್ಣ) ಅವರನ್ನು ಕಂಡು ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಈ ಘಟನೆ ಭೀಷ್ಮ ಸಾಹನಿಯವರ ಬದುಕಿಗೆ ಮಹತ್ವದ ತಿರುವು ನೀಡಿತು. ಜಸ್‌ವಂತ್ ರಾಯ್ ತೋರಿದ ವಿಶ್ವಾಸದಿಂದಾಗಿ ಭೀಷ್ಮರು ಆ ಕಾಲೇಜಿನಲ್ಲಿ ಅವೈತನಿಕ, ಗೌರವಾಧ್ಯಾಪಕರಾಗಿ ಸೇರಿಕೊಂಡರು. ಮುಂದಿನ ದಿನಗಳಲ್ಲಿ ಜೀವನದ ಬಹುಪಾಲು ಅಧ್ಯಾಪಕ ವೃತ್ತಿಯನ್ನೇ ಅವರು ಆಶ್ರಯಿಸಿದ್ದುದಕ್ಕೆ ಈ ಪ್ರಸಂಗ ನಾಂದಿಯಾಯಿತು. ಅಂದು ಜಸ್‌ವಂತ್ ರಾಯ್‌ರ ಕಾಲೇಜಿನಲ್ಲಿ ಆಡಿಸಿದ ಪ್ರಥಮ ನಾಟಕ ಭೀಷ್ಮರ ಜೀವನದಲ್ಲಿ ಸೇರಿಹೋದ ನಾಟಕ ರಚನೆ, ಚಲನಚಿತ್ರಪಟ ಲೇಖನ, ಅಭಿನಯ ಮತ್ತು ನಿರ್ದೇಶನ ಸರಣಿಯ ಮೊದಲ ಪ್ರಯೋಗ ಎಂಬ ಹೆಗ್ಗಳಿಕೆ ಪಡೆಯಿತು. ಅದರಿಂದಾಗಿಯೇ ಮುಂದೆ ಅವರು ದೇಶವ್ಯಾಪಿಯಾದ 'ಇಪ್ಟಾ' ಸಾಂಸ್ಕೃತಿಕ ಜನಾಂದೋಲನದಲ್ಲಿ ಪಾಲುಗೊಳ್ಳುವಂತಾದದ್ದು ಸಹ ಇತಿಹಾಸ. ಇವುಗಳಿಗಿಂತ ಮುಖ್ಯವಾದ ಒಂದು ಘಟನೆ ಸಂಭವಿಸಿದ್ದು ಸಹ ಆಗಲೇ. ಅವತ್ತಿನ ನಾಟಕ ಪ್ರಯೋಗ ನೋಡಲು ಅವರ ಭಾವೀ ಪತ್ನಿ ಶೀಲಾ ಹಾಗೂ ಅವರ ತಂದೆ ಇಬ್ಬರೂ ಬಂದಿದ್ದರು; ಇಬ್ಬರೂ ನಾಟಕವನ್ನು ಮತ್ತು ಅದನ್ನು ನಿರ್ದೇಶಿಸಿ, ಸಿದ್ಧಪಡಿಸಿದ ಹುಡುಗನನ್ನು ಮೆಚ್ಚಿಕೊಂಡಿದ್ದರು. ಆ ನಂತರ ಶೀಲಾ ಅವರು ಅದೇ ಕಾಲೇಜಿನಲ್ಲಿ ಅಧ್ಯಾಪಕರಾದ ಭೀಷ್ಮ ಅವರ ವಿದ್ಯಾರ್ಥಿನಿಯೂ ಆಗಿದ್ದರು.

ಭೀಷ್ಮರು ಸಾಹಿತ್ಯದ ಗಂಭೀರ ಓದು ಮತ್ತು ಬರವಣಿಗೆಗೆ ತೊಡಗಿದ್ದು ಈ ಕಾಲದಲ್ಲಿಯೇ. ತಮ್ಮ ತಂದೆಯ ವ್ಯಾಪಾರದಲ್ಲಿ ಸಹಕರಿಸುತ್ತಲೇ ತಮ್ಮ ಆಸಕ್ತಿಯನ್ನು ಪೋಷಿಸಿಕೊಳ್ಳತೊಡಗಿದ್ದರು. 'ಸರಸ್ವತೀ', 'ವಿಶಾಲ್ ಭಾರತ್' ಮುಂತಾದ ಪತ್ರಿಕೆಗಳಲ್ಲಿ ಅವರ ಲೇಖನಗಳು ಅಚ್ಚಾಗತೊಡಗಿದುವು. ವ್ಯಾಪಾರ, ಅಧ್ಯಾಪನ, ನಾಟಕ, ಕಾಂಗ್ರೆಸ್ ಸದಸ್ಯರಾಗಿ ದೇಶಸೇವಾ ಕಾರ್ಯ,

ಬರವಣಿಗೆ ಹೀಗೆ ಭೀಷ್ಮರ ಬಹುಮುಖೀ ವ್ಯಕ್ತಿತ್ವ ಒಟ್ಟಾಗಿಯೇ ರೂಪಿತಗೊಳ್ಳತೊಡಗಿತ್ತು. ಖಾದೀ ಬಟ್ಟೆ ತೊಟ್ಟು ಮುಂದಾಳುಗಳ ಜೊತೆ ಭಾಗವಹಿಸುತ್ತ ತಾನೊಬ್ಬ ಮಹತ್ವದ ವ್ಯಕ್ತಿಯಾದೆ ಎಂದು ಹೆಮ್ಮೆಪಡತೊಡಗಿದ್ದರು. ಅಂಥ ಕಾಲದಲ್ಲಿಯೇ, ಪ್ರೇಮ್‌ಚಂದ್‌ರ ಪುತ್ರ ಅಮೃತ್‌ರಾಯ್ ಸಂಪಾದಿಸುತ್ತಿದ್ದ 'ಹನ್ಸ್' (ಹಂಸ) ಪತ್ರಿಕೆಯಲ್ಲಿ ಭೀಷ್ಮರು ಬರೆದ 'ನೀಲೀ ಆಂಖ್ಞೇ' ಕತೆ ಪ್ರಕಟವಾಗಿತ್ತು. ಅದಕ್ಕೆ ಸಂಪಾದಕರಿಂದ ಬಂದ ಪ್ರಪ್ರಥಮ ಗೌರವಧನ ಎಂಟು ರೂಪಾಯಿ ಪಡೆದು ಕುಣಿದಾಡಿಬಿಟ್ಟಿದ್ದರು !

ಈ ಹೊತ್ತಿಗೆ ಅಣ್ಣ ಬಲರಾಜ್ ಶಾಂತಿನಿಕೇತನ ಬಿಟ್ಟು, ಮಹಾತ್ಮಾ ಗಾಂಧಿಯವರ ಸೇವಾಗ್ರಾಮ ಆಶ್ರಮಕ್ಕೆ ಬಂದು, 'ನಯೀ ತಾಲೀಮ್' ಪತ್ರಿಕೆಯ ಉಪ ಸಂಪಾದಕರಾಗಿ ಕೆಲಸ ಮಾಡುತ್ತಿದ್ದರು. ಭೀಷ್ಮರೂ ಅಲ್ಲಿಗೇ ಬಂದರು. ಅಲ್ಲಿ ಗಾಂಧೀಜಿಯ ನಿಕಟ ಸಂಪರ್ಕ, ಚರ್ಚೆ, ಮಾತುಕತೆಯ ಅವಕಾಶ ಪಡೆದರು. ಬಲರಾಜ್ ಅಲ್ಲಿ ಉಳಿಯಲಿಲ್ಲ; ಬಿಬಿಸಿಯಲ್ಲಿ ಉದ್ಘೋಷಕರಾಗಿ ಕೆಲಸ ಮಾಡಲು ಲಂಡನ್‌ಗೆ ಹೋದರು, ಇತ್ತ ಭೀಷ್ಮರು ಮತ್ತೆ ರಾವಲಪಿಂಡಿಗೆ ಮರಳಿದರು. ಈ ಸಂದರ್ಭದಲ್ಲಿಯೇ ಅಲ್ಲಿ ಬಲರಾಜ್, ಇಲ್ಲಿ ಭೀಷ್ಮರು ಎಡಪಂಥೀಯ ವಿಚಾರಧಾರೆಯತ್ತ ತೀವ್ರವಾಗಿ ಆಕರ್ಷಿತರಾಗತೊಡಗಿದ್ದರು. ಎರಡನೆಯ ಮಹಾಯುದ್ಧದ ಹೊತ್ತಿಗೆ ಸೋವಿಯತ್ ಸಂಘದ ಪ್ರಭಾವ ಹೆಚ್ಚತೊಡಗಿತ್ತು; ಕೆಂಪು ಸೈನ್ಯ ಹಿಟ್ಲರ್‌ನನ್ನು ಪೂರ್ಣ ಹಿಮ್ಮೆಟ್ಟಿಸಿತ್ತು.

೧೯೪೪ರಲ್ಲಿ ಶೀಲಾರೊಂದಿಗೆ ಭೀಷ್ಮರ ಮದುವೆಯಾಯಿತು. ನಾಲ್ಕು ವರ್ಷದ ನಂತರ ಈಗ ಬಲರಾಜ್ ಲಂಡನ್‌ನಿಂದ ಮರಳಿ ಮುಂಬಯಿಗೆ ಬಂದಿದ್ದರು. ಅವರು ತಮ್ಮ ಮಿತ್ರ ಚೇತನ್ ಆನಂದ್ ನಿರ್ಮಿಸಲಿದ್ದ, ಮ್ಯಾಕ್ಸಿಮ್ ಗಾರ್ಕಿಯ 'ಲೋವರ್ ಡೆಪ್ತ್ಸ್' ಆಧರಿಸಿದ 'ನೀಚಾ ನಗರ್' ಸಿನೆಮಾದಲ್ಲಿ ಅಭಿನಯಿಸಬೇಕಿತ್ತು. ಮಗ ಹೀಗೆ ಮುಂಬಯಿಯಲ್ಲಿದ್ದುದು ತಂದೆಗೆ ಇಷ್ಟವಾಗಿರಲಿಲ್ಲ; ಅವರನ್ನು ರಮಿಸಿ ಮನೆಗೆ ಕರೆತರಲು ಭೀಷ್ಮರನ್ನು ಮುಂಬಯಿಗೆ ಕಳಿಸಲಾಯಿತು. ಆದರೆ ಇಲ್ಲಿ ಬಂದು ಕಂಡದ್ದೇ ಬೇರೆ! ಸಿನೆಮಾದಲ್ಲಿ ಕೆಲಸ ಮಾಡಲೆಂದು ಬಂದಿದ್ದ ಅಣ್ಣ ಇಲ್ಲಿ ಅತ್ಯಂತ ಉತ್ಸಾಹಪೂರ್ವಕವಾಗಿ 'ಇಪ್ಟಾ' ('ಇಂಡಿಯನ್ ಪೀಪಲ್ಸ್ ಥೇಟರ್ ಅಸೋಸಿಯೇಶನ್' – 'ಭಾರತೀಯ ಜನ್‌ನಾಟ್ಯ ಸಂಘ್' – 'ಭಾರತೀಯ ಜನಕಲಾ ಸಮಿತಿ')ದಲ್ಲಿ ದುಡಿಯತೊಡಗಿದ್ದ. ಆಗ ಬಲರಾಜ್ ಅತ್ಯಂತ ತಲ್ಲೀನತೆಯಿಂದ ಖ್ವಾಜಾ ಅಹ್ಮದ್ ಅಬ್ಬಾಸ್‌ರ 'ಜುಬೈದಾ' ನಾಟಕ ನಿರ್ದೇಶಿಸುತ್ತಿದ್ದರು; ಅಲ್ಲಿ ಸಿನೆಮಾ–ಗಿನೆಮಾ ಏನೂ ಇರಲಿಲ್ಲ. ಇಪ್ಟಾದಲ್ಲಿ ತೊಡಗಿಕೊಂಡಿದ್ದ ಕಲಾವಿದರ ಆಸಕ್ತಿ, ಉತ್ಸಾಹವನ್ನು ನೋಡಿ ಸ್ವತಃ ಭೀಷ್ಮರೂ ಮಾನಸಿಕವಾಗಿ ಅವರೊಡನೆ ಒಂದಾಗಿಬಿಟ್ಟರು. ಈ ಮೊದಲೂ ಬಂಗಾಲದ ಭಯಂಕರ ಬರಗಾಲವನ್ನು ಕುರಿತು ಇಪ್ಟಾದವರು ರಾವಲಪಿಂಡಿಯಲ್ಲಿ ಆಡಿದ ಒಂದು ನಾಟಕವನ್ನು ಭೀಷ್ಮರು ನೋಡಿದ್ದರು. ಸ್ವತಃ ನಾಟಕ ಆಡಿದ, ಆಡಿಸಿದವರಾದ ಅವರು ಈಗ 'ಜುಬೈದಾ' ನಾಟಕದ ಪ್ರತಿ ಹಿಡಿದುಕೊಂಡು ರಾವಲಪಿಂಡಿಗೆ ಮರಳಿದರು.

೪

ಸ್ವಾತಂತ್ರ್ಯ ಚಳವಳಿಯ ಪರಿಣಾಮದಿಂದಾಗಿ ದೇಶಕ್ಕೆ ಸ್ವಾತಂತ್ರ್ಯವೇನೋ ಬಂದಿತು. ಆದರೆ ಅದು ದೇಶವನ್ನು ಹೋಳು ಮಾಡಿತು. ವಿಭಜನೆಯ ಸಂದರ್ಭದ ಅಸಂಖ್ಯ ಭೀಷಣ ದೃಶ್ಯಗಳನ್ನು ಭೀಷ್ಮ ಸಾಹನಿ ಕಣ್ಣಾರೆ ಕಂಡರು. ದೇಶವಿಭಜನೆಯ ನಂತರ ಅವರ ಕುಟುಂಬ ಮುಂಬಯಿಗೆ ಬಂದು ಬಲರಾಜ್‌ರ ಮನೆಯಲ್ಲಿ ಒಗ್ಗೂಡಿತು. ಅಷ್ಟು ಹೊತ್ತಿಗೆ ಬಲರಾಜ್‌ರ ಪತ್ನಿ ದಮಯಂತಿ ಗತಿಸಿದ್ದಳು; ಭೀಷ್ಮರ ಮಗಳು ಕಲ್ಪನಾ ಜನಿಸಿದ್ದಳು. ದೇಶಕ್ಕೆ ಬಂದ ಸ್ವಾತಂತ್ರ್ಯವನ್ನು ಸಂತೋಷದಿಂದ ಸ್ವಾಗತಿಸುವ ಅಥವಾ ಸಂಭ್ರಮಿಸುವ ಸ್ಥಿತಿ ಭೀಷ್ಮರಿಗಾಗಲಿ ಅವರ ಕುಟುಂಬದವರಿಗಾಗಲಿ ಇರಲಿಲ್ಲ. ಆದರೆ ಅವರು ಅದನ್ನು ಇನ್ನೊಂದು ಅರ್ಥದಲ್ಲಿಯೇ ಸ್ವೀಕರಿಸಿದರು. ಈ ಸ್ವಾತಂತ್ರ್ಯ ವೈಯಕ್ತಿಕವಾಗಿ ತನಗೂ ಬಂದಿದೆ, ತಂದೆಯೊಂದಿಗಿನ ತನ್ನ ವ್ಯಾಪಾರ ವಹಿವಾಟು, ಕಾಲೇಜಿನ ಅಧ್ಯಾಪಕ ವೃತ್ತಿ, ಕಾಂಗ್ರೆಸ್ ಜೊತೆಗಿನ ತೊಳಲಾಟಗಳು, ರಾವಲಪಿಂಡಿಯೊಂದಿಗಿನ ಎಲ್ಲ ಸಂಬಂಧಗಳಿಂದ ತನಗೆ ಮುಕ್ತಿ ನೀಡಿದೆ ಎಂದೇ ಅವರು ಭಾವಿಸಿದರು. ಕಮ್ಯುನಿಸ್ಟ್ ಪಾರ್ಟಿ ಮತ್ತು ದೇಶಾದ್ಯಂತ ಹರಡಿದ್ದ ಅದರ ಸಾಂಸ್ಕೃತಿಕ ಸಂಘಟನೆಯಾಗಿದ್ದ 'ಇಪ್ಟಾ'ದೊಂದಿಗೆ ಒಂದಾಗಿಬಿಟ್ಟರು. ವಾಸ್ತವ್ಯಕ್ಕೆ ಅಣ್ಣನ ಮನೆಯಂತೂ ಇತ್ತು. ಈಗ 'ಇಪ್ಟಾ'ದ ಬೀದಿ ನಾಟಕ ತಂಡಗಳಲ್ಲಿ ಪಾಲುಗೊಂಡು, ದಿನವಿಡೀ ಊರೂರು ಸುತ್ತುವುದು, ಕಾರ್ಯಕ್ರಮಗಳ ಸಮೂಹಗಾನದಲ್ಲಿ ಹಾಡುವುದು, ಸಿಕ್ಕಲ್ಲಿ ಸಿಕ್ಕಿದ್ದನ್ನು ತಿನ್ನುವುದು, ಪ್ರದರ್ಶನ ಮುಗಿದ ಊರಲ್ಲಿಯೇ ತಂಗುವುದು ಮುಂತಾದುವು ಪರೋಕ್ಷವಾಗಿ ಅವರ ಭವಿಷ್ಯವನ್ನೇ ರೂಪಿಸತೊಡಗಿದುವು.

ಭೀಷ್ಮ ಸಾಹನಿ ಅವರು 'ಇಪ್ಟಾ'ದ ಮೂಲ ಪ್ರೇರಕ ಶಕ್ತಿಯಾಗಿದ್ದ ಪಿ. ಸಿ. ಜೋಶಿಯವರನ್ನು ಕಂಡದ್ದು ಈ ಕಾಲದಲ್ಲಿಯೇ. ದೇಶ ಮತ್ತು ಜನತೆಯನ್ನು ಸಾಮಾಜಿಕವಾಗಿ, ರಾಜಕೀಯವಾಗಿ ಜಾಗೃತಗೊಳಿಸುವ ನಿಟ್ಟಿನಲ್ಲಿ ಕಲೆ ಮತ್ತು ಸಾಹಿತ್ಯ ಪ್ರಕಾರಗಳು ಮಹತ್ವಪೂರ್ಣ ಕೆಲಸಮಾಡಬಲ್ಲವು; ಈ ದೃಷ್ಟಿಯಿಂದ ರಂಗಭೂಮಿಯ ವಿವಿಧ ಆಯಾಮಗಳ ಮೂಲಕ ಜನರ ಸಮೀಪ ತಲುಪುವ ಉದ್ದೇಶದಿಂದ 'ಇಪ್ಟಾ' ಸಂಸ್ಥೆಯನ್ನು ಹುಟ್ಟುಹಾಕಿದ್ದವರು ಪಿ. ಸಿ. ಜೋಶಿ. 'ಇಪ್ಟಾ' ಒಂದು ವೃತ್ತಿ ನಾಟಕ ಮಂಡಳಿಯಾಗಿರಲಿಲ್ಲ, ಆದರೆ ದೇಶದ ಸಮಸ್ತ ಜನತೆಯ ಭಾವನೆಗಳನ್ನು, ಆಕಾಂಕ್ಷೆಗಳನ್ನು ಪ್ರತಿಬಿಂಬಿಸುವ, ಪ್ರತಿನಿಧಿಸುವ ವ್ಯಾಪಕ ಚಳವಳಿಯ ವಾಹಕವಾಗಿತ್ತು. 'ಇಪ್ಟಾ' ಸಾಮಾನ್ಯ ಜನರ ನೋವು, ಅನಿಸಿಕೆ, ಆಕಾಂಕ್ಷೆ, ಅಪೇಕ್ಷೆಗಳನ್ನು ನೇರವಾಗಿ, ನಿರ್ಭಿಡೆಯಿಂದ ವ್ಯಕ್ತಪಡಿಸುತ್ತಿತ್ತು. ಭಾರತದ ವಿವಿಧ ಪ್ರದೇಶಗಳ ಕಲೆ, ಹಾಡು, ಸಂಗೀತ, ಸಂಸ್ಕೃತಿ, ಸಮಸ್ಯೆ, ಉದ್ಗಾರಗಳನ್ನು ಒಳಗೊಳ್ಳುತ್ತ, ಹೊಸ ಹೊಸ ಪ್ರಯೋಗ ಮಾಡುತ್ತ, ಬದಲಾಗುತ್ತಲೇ ಇದ್ದು ಜಂಗಮಸ್ವರೂಪಿಯಾಗುವ ಉದ್ದೇಶ ಮತ್ತು ಗುಣ–ಲಕ್ಷಣ ಹೊಂದಿದ್ದ 'ಇಪ್ಟಾ' ರಂಗಭೂಮಿಗೆ ಮಾತ್ರ ಸೀಮಿತವಾಗಿ ಉಳಿಯಲಿಲ್ಲ. ಚಿತ್ರಕಲೆ, ಹಾಡುಗಾರಿಕೆ, ಗೀತರಚನೆ ಮುಂತಾದ ಕ್ಷೇತ್ರಗಳಲ್ಲಿಯೂ ಹೊಸ ಬೆಳೆ ಬರತೊಡಗಿತ್ತು. ಹಿಂದಿ, ಉರ್ದುವಿನ ಪ್ರೇಮ್ ಧವನ್, ಶೈಲೇಂದ್ರರಲ್ಲದೆ ಭಾರತದ ಇತರ ಭಾಷೆಗಳ ಅನೇಕ ಕವಿಗಳು, ಗೀತಕಾರರು ಸಹ ಆಯಾ ಭಾಗದ ಕಲೆ, ಜಾನಪದ ಸಂಪತ್ತನ್ನು ಬಳಸಿಕೊಳ್ಳುತ್ತಲೇ ಜನತೆಯ ಬಳಿ ತಲುಪಲಾರಂಭಿಸಿದ್ದರು.

'ಇಪ್ಟಾ' ಸದಸ್ಯರೆಲ್ಲ ಒಂದು ಕುಟುಂಬದ ಸದಸ್ಯರಂತೆಯೇ ಇರುತ್ತಿದ್ದರು. ಭೀಷ್ಮರೊಂದಿಗೆ ಅವರ ಪತ್ನಿ ಶೀಲಾ ಸಹ ಚಿಕ್ಕ ಮಗಳು ಕಲ್ಪನಾಳನ್ನು ಕರೆದುಕೊಂಡು ಜೊತೆಗೆ ಹೋಗುತ್ತಿದ್ದರು. ಎಲ್ಲೆಡೆ ಸ್ನೇಹ ಮತ್ತು ಸಹಕಾರದ ಅಪಾರ ಅನುಭವ ಲಭಿಸುತ್ತಿತ್ತು. 'ಇಪ್ಟಾ' ರಾಷ್ಟ್ರ ಮಟ್ಟದ ಸಂಘಟನೆಯಾಗಿ ಬೆಳೆಯತೊಡಗಿತ್ತು. ಎಲ್ಲ ಭಾಷೆಗಳ, ಎಲ್ಲ ಜನರ ಕಲೆ, ಊಟ ಉಡುಗೆ ನಡೆನುಡಿ ಕೊಡು ಕೊಳೆಗಳ ಪ್ರಾದೇಶಿಕ ವೈಭಿನ್ಯ ಮುಂತಾದುವನ್ನು ಸೇರ್ಪಡೆಗೊಳಿಸುತ್ತ ಸಂಸ್ಥೆ ನಿತ್ಯ ನವೀನವಾಗತೊಡಗಿತ್ತು. ಜಾತಿ, ಧರ್ಮ, ಕೋಮು ಎಲ್ಲವನ್ನೂ ಮೀರಿದ ಒಂದು ಹೊಸ ನಾಡು, ಹೊಸ ಜನಾಂಗ, ಹೊಸ ಬಾಳು ಕಟ್ಟುವ ಹಾದಿಯಲ್ಲಿ ಜನತೆ ಒಗ್ಗೂಡತೊಡಗಿತ್ತು.

ಆ ಕಾಲದಲ್ಲಿ ಮುಂಬಯಿಯಲ್ಲಿ ಅನೇಕ ಉರ್ದು ಸಾಹಿತಿಗಳು ಸಿನೆಮಾ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದರು. ಅವರಲ್ಲಿ ಅಲಿ ಸರದಾರ್ ಜಾಫ್‌ರೀ, ಕೃಷ್ಣ ಚಂದರ್, ಸಾಹಿರ್ ಲುಧಿಯಾನ್‌ವಿ, ಖ್ವಾಜಾ ಅಹಮದ್ ಅಬ್ಬಾಸ್, ಕೈಫಿ ಆಜ್ಮೀ, ಸಾದತ್ ಹಸನ್ ಮಂಟೋ



ಭೀಷ್ಮ ಸಾಹನಿಯವರೊಡನೆ ಡಾ॥ ಸಿದ್ದನಗೌಡ ಪಾಟೀಲ

ಮೊದಲಾದವರನ್ನು ಭೀಷ್ಮರು ಹತ್ತಿರದಿಂದ ಬಲ್ಲವರಾಗಿದ್ದರು. ಆದರೆ ಅವರಿಗೆ ಆಪ್ತರಾಗುವ ಪ್ರಯತ್ನ ಮಾಡಲಿಲ್ಲ; ಅವರಂತೆ ಸಿನಿಮಾ ಚಿತ್ರಕತೆ ಇತ್ಯಾದಿ ಬರೆಯುವ ಕಡೆಗೆ ಸಹ ಅವರು ಮನಸ್ಸು ಹಾಕಲಿಲ್ಲ. ಭೀಷ್ಮರ ಅತಿ ಸಂಕೋಚದ ಸ್ವಭಾವವೂ ಇದಕ್ಕೆ ಕಾರಣವಾಗಿದ್ದಿರಬಹುದು. ಅವರಿಗೆ ಆಗ ಸ್ವಂತದ ಬರವಣಿಗೆ ಮಾಡುವುದಕ್ಕಿಂತ 'ಇಪ್ಟಾ'ದಲ್ಲಿ ದುಡಿಯುವುದೇ ಹೆಚ್ಚು ಮಹತ್ವದ್ದು ಮತ್ತು ಪ್ರಿಯವಾದದ್ದೆನಿಸಿತ್ತು. ದೇಶವಿಭಜನೆಯ ಸಮಯದಲ್ಲಿ ಹೊತ್ತುರಿದ ರಾವಲಪಿಂಡಿ, ಲಾಹೋರ್, ಪಂಜಾಬ್ ನಗರಗಳನ್ನು ಕಣ್ಣಾರೆ ನೋಡಿದ್ದ ಸಾಹನಿಯವರಿಗೆ 'ಇಪ್ಟಾ'ದಲ್ಲಿ ಕೆಲಸ ಮಾಡುತ್ತ ಎಂಥದೋ ಅವ್ಯಕ್ತ ಅಭಿವ್ಯಕ್ತಿ ಲಭಿಸುತ್ತಿತ್ತು. ಅದು ಅವರ ಪಾಲಿಗೆ ಮನರಂಜನೆಯಾಗಿರದೆ, ಒಂದು ಅಗತ್ಯದ ಕರ್ತವ್ಯ ಹಾಗೂ ಸಾರ್ಥಕ ಸೇವೆ ಎಂದೇ ಅನಿಸುತ್ತಿತ್ತು.

ಸ್ವಲ್ಪ ಕಾಲದ ನಂತರ ಭೀಷ್ಮರು ಅಂಬಾಲಾದಲ್ಲಿ ಆರಂಭವಾಗಿದ್ದ ಹೊಸ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇರಿಕೊಂಡರು. ಅಲ್ಲಿಯೂ 'ಇಪ್ಟಾ' ನಾಟಕ ಮಂಡಳಿ ಸ್ಥಾಪಿಸಿ ಜನರ ಮಧ್ಯೆ ಹೋಗುವುದು, ಹಾಡು, ನಾಟಕ, ಅಭಿನಯ ಆರಂಭಿಸಿದರು. ಆದರೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರ 'ಇಪ್ಟಾ'ದ ಕಾರ್ಯಪ್ರಣಾಳಿ ಮತ್ತು ನೀತಿಗಳಲ್ಲಿ ಬಹಳ ಬದಲಾವಣೆಗಳಾದುವು. 'ಇಪ್ಟಾ' ಈವರೆಗೆ ಒಂದು ಬೃಹತ್ ಸಾಂಸ್ಕೃತಿಕ ಚಳವಳಿಯಾಗಿತ್ತು; ಸಮಗ್ರ ದೇಶವಾಸಿಗಳ ಆಂತರ್ಯದ ಧ್ವನಿಯಾಗಿ ಹೊಮ್ಮತೊಡಗಿತ್ತು, ಆದರೆ ಈಗ ಅದು ರಾಜಕೀಯ ದೃಷ್ಟಿಯಿಂದ ಕಮ್ಯುನಿಸ್ಟ್ ಪಾರ್ಟಿಯ ಹೊಸ ತತ್ವ ಪ್ರಣಾಳಿಗಳ ಮುಖವಾಣಿಯಂತೆ ವರ್ತಿಸತೊಡಗಿತು; ಇದರ ಮೇರೆಗೆ ನೆಹರೂ ಸರಕಾರದ ನೀತಿಗಳನ್ನು ಜನವಿರೋಧಿಯೆಂದು ಬಿಂಬಿಸಿ, 'ಇಪ್ಟಾ' ಕಾರ್ಯಕ್ರಮಗಳಲ್ಲಿ ನೆಹರೂ ಸರಕಾರವನ್ನು ಕಟುವಾಗಿ ಟೀಕಿಸುವ ಮತ್ತು ವ್ಯಂಗ್ಯಕ್ಕೀಡುಮಾಡುವ ಕೆಲಸ ನಡೆಯತೊಡಗಿತು. ಇದು ಭೀಷ್ಮ ಸಾಹನಿ ಅವರಿಗೆ ಇಷ್ಟವಾಗಲಿಲ್ಲ. ಇಂಥ ಧೋರಣೆ 'ಇಪ್ಟಾ'ವನ್ನು ಪಂಗುಗೊಳಿಸಿತು ಎಂಬುದು ಅವರ ಭಾವನೆಯಾಗಿತ್ತು.

ಭೀಷ್ಮರು ಅಂಬಾಲಾದಲ್ಲಿ ಕಾಲೇಜು ಅಧ್ಯಾಪಕರ ಯೂನಿಯನ್ ಸ್ಥಾಪಿಸಿದರು. ಅದರ ಪಂಜಾಬ ಪ್ರಾದೇಶಿಕ ಯೂನಿಯನ್‌ದ ಕಾರ್ಯದರ್ಶಿಯೂ ಆಗಿ ಓಡಾಡಿದರು. ಈ ಯೂನಿಯನ್ ಭಾರತೀಯ ಕಮ್ಯುನಿಸ್ಟ್ ಪಾರ್ಟಿಯ ಅಂಗವಾಗಿತ್ತು. ಪೊಲೀಸರು ಸದರೀ ಯೂನಿಯನ್ ಮತ್ತು ಅದರ ಕಾರ್ಯಕರ್ತರ ಮೇಲೆ ದೃಷ್ಟಿ ಇಟ್ಟಿದ್ದರು. ಆಗ ಭೀಷ್ಮರ ಒಂದು ನಾಟಕದ ಮೇಲೆ ಪ್ರತಿಬಂಧ ಹೇರಿದ್ದಲ್ಲದೆ, ಅವರನ್ನು ನೌಕರಿಯಿಂದ ತೆಗೆದುಹಾಕಲಾಯಿತು. ಆದರೆ ಭೀಷ್ಮರು ಯೂನಿಯನ್ ಕೆಲಸ ಮಾಡುತ್ತಲೇ ಬೇರೆ ಕೆಲಸ ಹುಡುಕುತ್ತಿದ್ದರು. ನಂತರ ಅಮೃತಸರದ ಖಾಲ್ಸಾ ಕಾಲೇಜಿನಲ್ಲಿ ಸಿಕ್ಕ ನೌಕರಿಯೂ ಇದೇ ಕಾರಣಕ್ಕಾಗಿ ಹೋಯಿತು.

ಅದೇ ಹೊತ್ತಿಗೆ ಶೀಲಾರಿಗೆ ಜಲಂಧರ್ ಆಕಾಶವಾಣಿಯಲ್ಲಿ ಉದ್ಘೋಷಕಿಯ ಕೆಲಸ ಸಿಕ್ಕಿದ್ದರಿಂದ ಜೀವನ ಸ್ವಲ್ಪಮಟ್ಟಿಗೆ ಹಳಿಯ ಮೇಲೆ ಬಂದಂತಾಯಿತು. ಎಷ್ಟು ಪ್ರಯತ್ನಿಸಿದರೂ ಭೀಷ್ಮರಿಗೆ ಮಾತ್ರ ಎಲ್ಲಿಯೂ ಕೆಲಸ ಸಿಕ್ಕಲಿಲ್ಲ. ಅದೇ ಹೊತ್ತಿಗೆ ಭೀಷ್ಮರ ತಂದೆ ದಿಲ್ಲಿಯಲ್ಲಿ ಒಂದು ಮನೆ ಕೊಂಡರು; ಅದು ದೇಶವಿಭಜನೆಯ ನಂತರ ಸಂತ್ರಸ್ತರಿಗಾಗಿ ಪೂರ್ವ ಪಟೇಲನಗರದಲ್ಲಿ ಸರಕಾರ ಕಟ್ಟಿಸಿದ ಮನೆಯಾಗಿತ್ತು. ತಂದೆಯ ಕರೆಯ ಮೇರೆಗೆ ಆ ಮನೆಗೆ ಬಂದ ಭೀಷ್ಮರು ಪಂಜಾಬ ಮತ್ತು ಯೂನಿಯನ್ ಕೆಲಸ ಎಲ್ಲವನ್ನೂ ತೊರೆದು ದಿಲ್ಲಿಯಲ್ಲಿ ನೆಲೆಗೊಂಡರು. ಶೀಲಾ ಸಹ ದಿಲ್ಲಿ ಆಕಾಶವಾಣಿಯಲ್ಲಿ ಉದ್ಘೋಷಕಿಯ ಕೆಲಸ ಪಡೆದರು. ಭೀಷ್ಮರಿಗೆ ದಿಲ್ಲಿಯಲ್ಲಿ ಅನೇಕ ಹಿಂದಿ ಲೇಖಕರ ಸ್ನೇಹ ಮತ್ತು ಸಂಪರ್ಕ ಲಭಿಸಿದ್ದು ಅವರಿಗೆ ಅನುಕೂಲವಾಯಿತು. ನಂತರ ಭೀಷ್ಮರಿಗೆ ಅಲ್ಲಿಯೇ ಕಾಲೇಜು ಅಧ್ಯಾಪಕ ಕೆಲಸವೂ ಸಿಕ್ಕಿತು; ಮೊದಲು ಶ್ರೀರಾಮ ಕಾಲೇಜಿನಲ್ಲಿ, ನಂತರ ಹಿಂದೂ ಕಾಲೇಜಿನಲ್ಲಿ; ಕೊನೆಯ ಖಾಯಂ ನೌಕರಿ ದಿಲ್ಲಿ (ಈಗ ಝಾಕಿರ್ ಹುಸೇನ್) ಕಾಲೇಜಿನಲ್ಲಿ. ಇದರಿಂದಾಗಿ ನೆಮ್ಮದಿಯ ಬದುಕು ಮತ್ತು ಬರವಣಿಗೆಗೆ ಭೀಷ್ಮ–ಸಾಹಿತ್ಯ–ಪಥ ಪ್ರಶಸ್ತವಾಗತೊಡಗಿತು.

೫

ದಿಲ್ಲಿಯಲ್ಲಿದ್ದು ಸಾಹಿತ್ಯ ರಚನೆ, ಪುಸ್ತಕ ಪ್ರಕಟಣೆ, ಪತ್ರಿಕೆಗಳ ಸಂಪಾದನೆ, ಸಂಘ ಸಂಸ್ಥೆಗಳ ಸಂಪರ್ಕ ಮುಂತಾಗಿ ಎಲ್ಲ ರೀತಿಯಿಂದಲೂ ನೆಲೆಗೊಳ್ಳುತ್ತಿದ್ದಾಗಲೇ ಸಾಹನಿ ಅವರು ೧೯೫೭ರಲ್ಲಿ ಸೋವಿಯತ್ ಸಂಘದ ಪ್ರಕಾಶನ ಸಂಸ್ಥೆಯ ಆಮಂತ್ರಣದ ಮೇರೆಗೆ ಕುಟುಂಬ ಸಮೇತ ಮಾಸ್ಕೋಗೆ ಹೋದರು. ಅಲ್ಲಿದ್ದು ೨೫ ರಶಿಯನ್ ಕೃತಿಗಳನ್ನು ಹಿಂದಿಗೆ ಅನುವಾದಿಸಿದರು. ಸೋವಿಯತ್ ಸಂಘದ ಬಗ್ಗೆ ಅಲ್ಲಲ್ಲಿ ಓದಿ, ಕೇಳಿ ಒಂದು ಬಗೆಯ ರೊಮ್ಯಾಂಟಿಕ್–ಆದರ್ಶವಾದಿ ದೃಷ್ಟಿಕೋನ ಹೊಂದಿದ್ದ ಭೀಷ್ಮರಿಗೆ ಮೊದಲ ಬಾರಿಗೆ ಮನೆಯಿಂದ, ದೇಶದಿಂದ ಹೊರ ಹೋಗಲು ಸಿಕ್ಕ ಅವಕಾಶ ಬಹಳ ಸಂತೋಷ ನೀಡಿತ್ತು. ಭೀಷ್ಮರು ಸೋವಿಯತ್ ಸಂಘದಲ್ಲಿದ್ದುದು ಕ್ರುಶ್ಚೇವ್ ಇದ್ದ ಕಾಲದಲ್ಲಿ. ಭಾರತದೊಡನೆ ಆ ದೇಶ ಒಳ್ಳೆಯ ಸಂಬಂಧ ಹೊಂದಿತ್ತು. ಏಳು ವರ್ಷ ಅಲ್ಲಿದ್ದು ಬಂದ ಸಾಹನಿಯವರಿಗೆ ಸಮಾಧಾನ, ಸಂತೋಷಕ್ಕಿಂತ ಪಶ್ಚಾತ್ತಾಪದ ಭಾವನೆಯೇ ಉಳಿದುಬಂದಿತ್ತು. ಅಲ್ಲಿಯ ಜನಜೀವನವನ್ನಾಗಲಿ, ದೇಶದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಯನ್ನಾಗಲಿ ತಿಳಿಯುವ ಅವಕಾಶವೇ ಸಿಗಲಿಲ್ಲ ಎಂದು ನೊಂದುಕೊಂಡು ಬರೆದಿದ್ದಾರೆ.

ಅಲ್ಲಿಂದ ಮರಳಿ ಬಂದಮೇಲೆ ತಮಗೆ ಮತ್ತೆ ದಿಲ್ಲಿ ಕಾಲೇಜಿನ ಕೆಲಸ ಸಿಕ್ಕಿದ್ದು, ಮತ್ತು ಪತ್ನಿಗೆ ಆಕಾಶವಾಣಿಯಲ್ಲಿ ಅದೇ ಕೆಲಸ ಸಿಕ್ಕಿದ್ದು ಸಮಾಧಾನ ತಂದಿತ್ತು. ಹಿಂದಿಯಲ್ಲಿ ಕತೆ, ಕಾವ್ಯ ಮುಂತಾದ್ದರಲ್ಲಿ 'ವಾದ', 'ವಿವಾದ', 'ಚೌಕಟ್ಟು'ಗಳ ಕಟ್ಟಳೆಗೆ ಸಿಕ್ಕಿ ಬೀಳುವ ಅಥವಾ ಸಿಗಿಸಲ್ಪಡುವ ಆತಂಕಗಳು ಯಾವಾಗಲೂ ಇದ್ದುದೇ. ಆದರೆ ಭೀಷ್ಮರು ಮಾತ್ರ ಇಂಥ ಯಾವ ಕೋಟೆ, ಬಂಧನಗಳಿಗೆ ಸಿಲುಕದೆ ತನಗೆ ಸರಿಯೆನಿಸಿದಂತೆ, ಉತ್ತಮವೆನಿಸಿದಂತೆ ಬರೆಯುತ್ತೇನೆ ಎಂದೇ ಬರೆದರು. ೨–೩ ವರ್ಷ (೧೯೬೫–೬೭) 'ನಯೀ ಕಹಾನಿಯ್ಯಾ' ಎಂಬ ಕಥಾ ಮಾಸಿಕವನ್ನು ಸಂಪಾದಿಸುತ್ತಿದ್ದಾಗಲೂ ಇದೇ ಅವರ ಧೋರಣೆಯಾಗಿತ್ತು. ಯಾವ ಪಂಥ, ಯಾವ ಪ್ರದೇಶ, ಯಾವ ಲೇಖಕ ಎಂಬುದಕ್ಕಿಂತ ಕಥೆ ಉತ್ಕೃಷ್ಟವಾಗಿರಬೇಕು, ಅದೇ ಮುಖ್ಯ ಎನ್ನುತ್ತಿದ್ದರು. ತಮ್ಮ ಬರವಣಿಗೆಗೂ ಅದೇ ನಿಷ್ಠೆಯನ್ನು ಅನುಸರಿಸಿದರು.

ಭಾರತೀಯ ಕಮ್ಯುನಿಸ್ಟ್ ಪಾರ್ಟಿಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದರೂ ಭೀಷ್ಮ ಸಾಹನಿ 'ಪಕ್ಕಾ, ಪರಿಪೂರ್ಣ ಕಮ್ಯುನಿಸ್ಟ್' ಆಗಿರಲಿಲ್ಲ. ೧೯೪೬–೫೦ರವರೆಗೆ 'ಇಪ್ಟಾ' ಒಡನಾಟದಲ್ಲಿದ್ದಾಗ, ೧೯೪೮–೧೯೫೦ರ ಅಧ್ಯಾಪಕರ ಯೂನಿಯನ್ ಕೆಲಸ ಮಾಡುತ್ತಿದ್ದಾಗ ಮತ್ತು ೧೯೭೬–೧೯೮೬ರಲ್ಲಿ ಪ್ರಗತಿಶೀಲ ಲೇಖಕ ಸಂಘದಲ್ಲಿ ಕ್ರಿಯಾಶೀಲರಾಗಿದ್ದಾಗ – ಹೀಗೆ ಅವರಿಗೆ ಪಾರ್ಟಿಯ ಸಂಬಂಧವಿತ್ತು. ಅದಲ್ಲದೇ ಆಫ್ರೋ–ಏಶಿಯನ್ ಲೇಖಕ ಸಂಘದ ಜೊತೆಗೂ ಅವರು ನಿಕಟಸಂಬಂಧ ಇಟ್ಟುಕೊಂಡಿದ್ದರು. ಅದಕ್ಕೆ ಸಂಬಂಧಪಟ್ಟು ಮತ್ತೆ ಹಲವು ಬಾರಿ ರಶಿಯಾ ಮತ್ತು ಇತರ ದೇಶಗಳಿಗೆ ಹೋಗಿ ಬಂದಿದ್ದರು. ಜಾಗತೀಕರಣದ ಹಲವು ಮಗ್ಗುಲುಗಳನ್ನು ನೋಡಿದ ಅವರು "ಆಜ್ ಕೇ ಅತೀತ್" (೨೦೦೩) ಎಂಬ ಆತ್ಮಕಥೆಯಲ್ಲಿ ತಮ್ಮ ಅನುಭವಗಳನ್ನು ವಿಸ್ತಾರಪೂರ್ವಕವಾಗಿ ನಮೂದಿಸಿದ್ದಾರೆ.

ಶ್ರೇಷ್ಠ ಇಂಗ್ಲಿಷ್ ಅಧ್ಯಾಪಕ, ಪ್ರಸಿದ್ಧ ಸಾಹಿತಿ, ನಾಟಕಕಾರ, ಪತ್ರಿಕಾ ಸಂಪಾದಕ, ಅನುವಾದಕ, ರಂಗನಟ, 'ಇಪ್ಟಾ' ಸಂಘಟಕ, ನಿರ್ದೇಶಕ, ಪ್ರಗತಿಶೀಲ ಲೇಖಕ ಸಂಘ ಮತ್ತು ಆಫ್ರೋ – ಏಶಿಯನ್ ಲೇಖಕ ಸಂಘದಂಥ ಅಂತರರಾಷ್ಟ್ರೀಯ ಸಂಸ್ಥೆಗಳ ಪದಾಧಿಕಾರಿ, ತಮ್ಮದೇ "ತಮಸ್" ಅಲ್ಲದೆ, "ಮೋಹನ್ ಜೋಶೀ ಹಾಜಿರ್ ಹೋ" ಮುಂತಾದ ಸಿನೆಮಾಗಳಲ್ಲಿ ಯಶಸ್ವಿ ಅಭಿನಯ ನೀಡಿದ, ಸಾಹಿತ್ಯ ಅಕಾದೆಮಿ ಪ್ರಶಸ್ತಿ ಪಡೆದಿದ್ದ, ಬಹುಭಾಷಿ ಯಾಗಿದ್ದರೂ ಭೀಷ್ಮ ಸಾಹನಿ ಎಂದೂ ಯಾರೊಡನೆಯೂ ಅಹಂಕಾರದಿಂದ ನಡೆದುಕೊಳ್ಳಲಿಲ್ಲ. ಕುಟುಂಬವತ್ಸಲರಾಗಿದ್ದ ಸಾಹನಿ ಅವರು ಮನೆಯಲ್ಲಿ ಅಷ್ಟೇ ಅಲ್ಲ, ಸಾರ್ವಜನಿಕ ಜೀವನದಲ್ಲಿಯೂ ಒಂದು ಕೂಡು – ಕುಟುಂಬದಲ್ಲಿದ್ದಂತೆಯೇ ಇರುತ್ತಿದ್ದರು. ಅವರ ವಿನಯಪೂರ್ಣ ಸ್ವಭಾವ, ಮೃದು ಮಿತಭಾಷಿತ್ವ, ವೈಚಾರಿಕ ಸ್ಪಷ್ಟತೆ, ಗಂಭೀರರಾಗಿದ್ದರೂ ಸದಾ ಹಸನ್ಮುಖ ವ್ಯಕ್ತಿತ್ವ ಮತ್ತು ಸಜ್ಜನ ನಡೆವಳಿಕೆ ದೇಶ ವಿದೇಶಗಳಲ್ಲಿ ಅವರಿಗೆ ಅಸಂಖ್ಯ ಆತ್ಮೀಯರನ್ನು, ಸ್ನೇಹಿತರನ್ನು ದೊರಕಿಸಿಕೊಟ್ಟಿತ್ತು. ೨೦೦೩ರ ಜುಲೈ ೧೧ರಂದು ದಿಲ್ಲಿಯಲ್ಲಿ ನಿಧನರಾದ ಭೀಷ್ಮ ಸಾಹನಿ ಅವರು ವೈವಿಧ್ಯಪೂರ್ಣ ಸಾಹಿತ್ಯದ ಬಳುವಳಿ ನಮಗೆ ನೀಡಿದ್ದಾರೆ.

೬

ಮಾತೃಭಾಷೆ ಪಂಜಾಬಿ ಆಗಿದ್ದರೂ ತಮ್ಮ ಎಲ್ಲ ಕೃತಿಗಳನ್ನು ಹಿಂದಿಯಲ್ಲಿ ರಚಿಸಿದ ಭೀಷ್ಮ ಸಾಹನಿ ಪ್ರಸಿದ್ಧ ಕತೆಗಾರರು. ಅವರ ಕಥಾಸಂಗ್ರಹಗಳು ಹೀಗಿವೆ : (೧) ಭಾಗ್ಯ – ರೇಖಾ – ೧೯೫೩, (೨) ಪಹಲಾ ಪಾಠ್ – ೧೯೫೬, (೩) ಭಟಕ್‌ತೀ ರಾಖ್ –೧೯೬೫, (೪) ಪಟರಿಯ್ಯಾ – ೧೯೭೩, (೫) ವಾಙ್‌ಚೂ – ೧೯೭೮, (೬) ಶೋಭಾಯಾತ್ರಾ – ೧೯೮೧, (೭) ನಿಶಾಚರ್ – ೧೯೮೩, (೮) ಪಾಲೀ – ೧೯೮೪, (೯) ಡಾಯನ್ – ೧೯೯೮ ಮತ್ತು ಮೇರೀ ಪ್ರಿಯ ಕಹಾನಿಯ್ಯಾ, ಪ್ರತಿನಿಧಿ ಕಹಾನಿಯ್ಯಾ.

ಪ್ರಗತಿಶೀಲ ಲೇಖಕ ಸಂಘ, ಕಮ್ಯುನಿಸ್ಟ್ ಪಾರ್ಟಿಯ ಸಂಬಂಧವಿದ್ದಾಗಲೂ ಸಾಹನಿ ಅವರನ್ನು ಕ್ರಾಂತಿಕಾರಿ ಲೇಖಕ ಎನ್ನಲಾಗದು. ಪ್ರೇಮ್‌ಚಂದ್ ಕಥಾಪರಂಪರೆಯನ್ನು ಮುಂದುವರಿಸಿದ್ದರೂ ತಮ್ಮದು ಸಮಾಜೋನ್ಮುಖ ವಾಸ್ತವಿಕತೆಯ ಬರವಣಿಗೆ ಎಂದು ಹೇಳುತ್ತಿದ್ದರು. ಪ್ರತ್ಯಕ್ಷ ಕಂಡ ಮತ್ತು ಸಾಕ್ಷೀಭೂತವಾದ ಅನುಭವಗಳಿಗೆ ನಿಷ್ಠರಾಗಿ ಬರೆಯುವುದೇ ಜೀವನದ ಪ್ರತಿಬದ್ಧತೆ ಎಂದು ನಂಬಿದ್ದರು. ಇಂಥ ಅನುಭವಗಳ ಹಿನ್ನೆಲೆ ಹೊಂದಿದ್ದ ಅವರ ಅನೇಕ ಕತೆಗಳು ಭಾರತೀಯ ಕಥಾಲೋಕಕ್ಕೆ ಗೌರವ ನೀಡುವಂತಿವೆ. 'ಚೀಫ್ ಕೀ ದಾವತ್', 'ಅಮೃತಸರ್ ಆ ಗಯಾ ಹೈ', 'ವಾಙ್‌ಚೂ', 'ಖೂನ್ ಕಾ ರಿಶ್ತಾ', 'ಡಾಯನ್', 'ಗಂಗೋ ಕಾ ಜಾಯಾ', 'ರಾಧಾ–ಅನುರಾಧಾ', 'ನಿಶಾಚರ್', 'ಲೀಲಾ ನಂದ್‌ಲಾಲ್ ಕೀ', 'ಜೋತ್', 'ಓ ಹರಾಮ್‌ಜಾದೇ', 'ಮಾತಾ–ವಿಮಾತಾ', 'ಶಿಷ್ಟಾಚಾರ್' ಮುಂತಾದುವು ಅವಿಸ್ಮರಣೀಯ ಕತೆಗಳು. ಅವರ ಬಹುಪಾಲು ಕತೆಗಳು ಆತ್ಮಕಥಾತ್ಮಕವಾಗಿವೆ ಅಥವಾ ಅವರ ಸಂಪರ್ಕಕ್ಕೆ ಬಂದ ವ್ಯಕ್ತಿಗಳ ಬದುಕಿನಲ್ಲಿ ಕಂಡ, ಕೇಳಿದ ಪ್ರಸಂಗಗಳೇ ಆಗಿವೆ. ಬಹುತೇಕ ಕತೆಗಳು ಬಡವರು, ಮನೆಗೆಲಸದವರು, ದಾರಿ ಮಾಡುವವರು, ಕಟ್ಟಡ ಕಟ್ಟುವವರು, ಕಸ ಆರಿಸುವವರು ಮುಂತಾದ ನೊಂದವರ ಬದುಕಿಗೆ ಆದ್ಯತೆ ನೀಡುತ್ತಾರೆ. ಆದರೂ ಅವರ ಹೆಚ್ಚಿನ ಪಾತ್ರಗಳು ನಗರ ಜೀವನದ ಮಧ್ಯಮ ವರ್ಗಕ್ಕೆ ಸಂಬಂಧಿಸಿವೆ.

ಭೀಷ್ಮ ಸಾಹನಿ ಅವರು ಒಟ್ಟು ಏಳು ಕಾದಂಬರಿಗಳನ್ನು ರಚಿಸಿದ್ದಾರೆ : (೧) ಝರೋಖೇ – ೧೯೬೭, (೨) ಕಡಿಯ್ಯಾ – ೧೯೭೦, (೩) ತಮಸ್ – ೧೯೭೨, (೪) ಬಸಂತೀ – ೧೯೮೦, (೫) ಕುಂತೋ – ೧೯೮೩, (೬) ಮಯ್ಯಾದಾಸ್ ಕೀ ಮಾಡೀ – ೧೯೮೮, (೭) ನೀಲೂ ನೀಲಿಮಾ ನೀಲೋಫರ್ – ೨೦೦೦.

ಸಾಹನಿಯವರ ಕಾದಂಬರಿಗಳು ಒಂದು ರೀತಿಯಲ್ಲಿ ಇತಿಹಾಸದ ದಾಖಲೆಗಳೇ ಇದ್ದಂತಿವೆ. ಅವು ಐತಿಹಾಸಿಕ ವಿಷಯ ವಸ್ತು

ಹೊಂದಿರದಿದ್ದರೂ ಆಧುನಿಕ ಜೀವನದ ವಾಸ್ತವ ಚಿತ್ರಣ ನೀಡುವ ಸಾಮಾಜಿಕ ಇತಿಹಾಸಗಳೇ ಆಗಿವೆ. 'ಖರೋಖೇ' ಒಂದು ಬಗೆಯಲ್ಲಿ ಸಾಹನಿಯವರ ಆತ್ಮಕಥೆಯೇ ಆಗಿದೆ. ಅವರ ಬಾಲ್ಯದ ಹಲವಾರು ನೆನಪುಗಳು ಇಲ್ಲಿ ಚಿತ್ರವತ್ತಾಗಿ ಮೂಡಿವೆ. 'ಕಡಿಯ್ಞಾ'ದಲ್ಲಿ ಸಾಹನಿ ತಮ್ಮ ಪರಿಚಯದ ಕುಟುಂಬವೊಂದರ ಕಥೆಯನ್ನೇ ಚಿತ್ರಿಸಿದ್ದಾರೆ. ಭೀಷ್ಮ ಅವರ 'ಆಜ್ ಕೇ ಅತೀತ್' ಓದಿದರೆ ಬಹುಪಾಲು ಅವರ ಎಲ್ಲ ಕಾದಂಬರಿಗಳ, ಕತೆಗಳ ನಿಜವಾದ ಪಾತ್ರಗಳನ್ನು ಅವರನ್ನು ಹತ್ತಿರದಿಂದ ಬಲ್ಲವರು ಸಹಜವಾಗಿ ಗುರುತಿಸಬಹುದಾಗಿದೆ.

'ತಮಸ್' ಭೀಷ್ಮ ಸಾಹನಿಯವರ ಕೀರ್ತಿಯನ್ನು ಅನಂತ ಕಾಲ ಮೆರೆಸುವ ಕಾದಂಬರಿ. ಸಾಹನಿ ಬಾಲ್ಯದಿಂದಲೂ ಮತ್ತು ದೇಶವಿಭಜನೆಯ ಹೊತ್ತಿಗೆ ಉರಿಯುತ್ತಿದ್ದ ಎರಡೂ ಭಾಗದ ಜನಜೀವನವನ್ನು ಕಣ್ಣಾರೆ ಕಂಡಿದ್ದವರು. ಮುಂದೆ ಬಹಳ ವರ್ಷಗಳ ನಂತರ ಮುಂಬಯಿ ಬಳಿಯ ಭಿವಂಡಿಯಲ್ಲಿ ಘಟಿಸಿದ ಹಿಂದೂ ಮುಸ್ಲಿಮ್ ದಂಗೆಯನ್ನು ತಮ್ಮ ಅಣ್ಣ ಬಲರಾಜ್ ಮತ್ತು ಖ್ವಾಜಾ ಅಹಮದ್ ಅಬ್ಬಾಸ್ ಜೊತೆ ನೋಡಿ ತಳಮಳಗೊಂಡರು. ಅವರಿಗೆ ತಮ್ಮ ಬಾಲ್ಯ, ವಿಭಜನೆಯ ಬೆಂಕಿ ಎಲ್ಲವೂ ಜೀವಂತ ನೆನಪಾದುವು; ಅದರ ಫಲವಾಗಿ ಮೂಡಿದ ಚಿತ್ರಣವೇ 'ತಮಸ್'. ಇಲ್ಲಿಯ ಬಹುತೇಕ ಪಾತ್ರಗಳು ಭೀಷ್ಮರ ಜೀವನದಲ್ಲಿ ಇದ್ದವರೇ. ಹೀಗಾಗಿ ಸಂಪೂರ್ಣ ಕಾದಂಬರಿಯಲ್ಲಿ ಒಂದು ಪ್ರಾಣವತ್ತತೆ ಮೂಡಿದೆ. ಬ್ರಿಟಿಷರು ಪ್ರಯೋಗಿಸಿದ ಒಡೆದು ಆಳುವ ನೀತಿಯನ್ನು ಅರ್ಥಮಾಡಿಕೊಳ್ಳದೆ ನಾಶಹೊಂದಿದ ನಮ್ಮ ಎರಡೂ ದೇಶಗಳ, ಹಿಂದೂ ಮುಸ್ಲಿಮರ ಬಗ್ಗೆ ಸಹಾನುಭೂತಿ, ಕರುಣೆ ಮೂಡುವಂತೆ ಇಲ್ಲಿಯ ಚಿತ್ರಗಳು ಜೀವಂತವಾಗಿವೆ. ಈ ಕಾದಂಬರಿ ಟಿವಿ ವಾಹಿನಿಯಾಗಿ ಬಹಳ ಜನಪ್ರಿಯವಾಯಿತು. ಚಿತ್ರಪಟ ಕತೆ ಬರೆದುದಲ್ಲದೇ ಸ್ವತಃ ಅಭಿನಯಿಸಿದ್ದ ಭೀಷ್ಮ–ಸ್ಮೃತಿ ಭಾರತೀಯ ಕಲಾ–ಪ್ರಪಂಚದಲ್ಲಿ ಅವಿಸ್ಮರಣೀಯವಾದುದಾಗಿದೆ.

'ಬಸಂತೀ' ವಾಸ್ತವತೆ ಹೊಂದಿರುವ, ಕಲಾತ್ಮಕ ಕಾದಂಬರಿ ನೆಲೆ ಕಳೆದುಕೊಂಡಿರುವ, ದಿಲ್ಲಿಯ ಬೀದಿ–ಹಾದಿಗಳಲ್ಲಿ ದುಡಿಯುತ್ತಿರುವ ಕಟ್ಟಡ ಕಟ್ಟುವವರು, ಕ್ಷೌರಿಕರು, ಅಗಸರು, ಬಟ್ಟೆ ಹೊಲಿಯುವವರು ಮುಂತಾದ ಕೆಲಸಗಾರರ ಮತ್ತು ಅವರಿಗಾಗುವ ಕಷ್ಟಗಳ ಹಿನ್ನೆಲೆ ಹೊಂದಿದೆ. ಪಟ್ಟಣದಲ್ಲಿ ನೆಲೆಸಬಯಸಿದರೂ ನೆಲೆಸಲಾಗದ ಕಡುಬಡವರ ಚಿತ್ರ ಇಲ್ಲಿದೆ. 'ಕುಂತೋ' ಬಹುಶಃ ಅಣ್ಣ ಬಲರಾಜ್‌ರ ಪತ್ನಿ ದಮಯಂತಿಯನ್ನು ಕೇಂದ್ರ ಪಾತ್ರವಾಗಿಸಿ ಕೊಂಡು ಬರೆದ ಕಾದಂಬರಿ. ಭೀಷ್ಮ ತಮ್ಮ ಕುಟುಂಬದ ಬಹುಜನರ ಚರಿತ್ರೆಯನ್ನೇ ಕಾದಂಬರಿಯನ್ನಾಗಿಸಲು ಯತ್ನಿಸಿದಂತಿದೆ. 'ಮಯ್ಯಾದಾಸ್ ಕೀ ಮಾಡೀ' ಬೃಹತ್ ಕಾದಂಬರಿ. ಇದರಲ್ಲಿ ೧೯ನೇ ಶತಮಾನದ ಆರಂಭದಿಂದ ೨೦ನೇ ಶತಮಾನದ ಆರಂಭದವರೆಗಿನ ಪಂಜಾಬದ ಇತಿಹಾಸದ ಚಾರಿತ್ರಿಕ ವರ್ಣನೆಯಿದೆ. ಸಿಖ್ಖರ ಆಡಳಿತವನ್ನು ಕೊನೆಗಾಣಿಸಿ ಬ್ರಿಟಿಷರು ಆಧಿಪತ್ಯ ಸಾಧಿಸುವ ವಿವರಗಳಿವೆ. ಸಾಮಂತೀ ವ್ಯವಸ್ಥೆಯ ಅಳಿವು, ಇಂಗ್ಲಿಷರ ಸಾಮ್ರಾಜ್ಯವಾದ ಗಟ್ಟಿಗೊಳ್ಳುವಿಕೆ, ಬಂಡವಾಳಶಾಹಿಯ ಮೆರವಣಿಗೆ ಇಲ್ಲಿ ಚಿತ್ರಿತವಾಗಿವೆ. ಭೀಷ್ಮರು ಬಾಲ್ಯದಲ್ಲಿ ತಮ್ಮ ತಾಯಿಯ ಬಾಯಿಂದ ಕೇಳಿದ ತಮ್ಮ ಹಿರಿಯರೊಬ್ಬರ ಜೀವನದ ಕಥೆಯೇ ಇಲ್ಲಿ ಕಾದಂಬರಿಯಾಗಿದೆ. 'ನೀಲೂ ನೀಲಿಮಾ ನೀಲೋಫರ್'ದಲ್ಲಿ ಇರುವುದು ಇಬ್ಬರೇ ಹೆಣ್ಣುಮಕ್ಕಳು. ನೀಲಿಮಾ ಹಿಂದೂ ಮಹಿಳೆ, ನೀಲೋಫರ್ ಮುಸ್ಲಿಮ್ ಮಹಿಳೆ. ಅವರವರ ಮನೆಯಲ್ಲಿ ಅವರನ್ನು 'ನೀಲೂ' ಎಂದು ಕರೆಯುತ್ತಾರೆ. ಒಂದು ಸಿನಿಮಾ ಕತೆಯಂತಿರುವ ಇದರಲ್ಲಿ ನೀಲಿಮಾ ಒಬ್ಬ ಮುಸ್ಲಿಮ್ ಯುವಕನನ್ನು ಪ್ರೀತಿಸುತ್ತಾಳೆ; ನೀಲೋಫರ್ ಒಬ್ಬ ಹಿಂದೂ ಯುವಕನನ್ನು ಪ್ರೀತಿಸುತ್ತಾಳೆ. ಪಿತೃಪ್ರಧಾನ ವ್ಯವಸ್ಥೆ, ಕೋಮುವಾದಗಳ ಕಠೋರ ಭಯಾನಕತೆಯನ್ನು ಹೇಳುವ ಕಥಾವಸ್ತುವನ್ನು ಹೊಂದಿದೆ.

೭

ಸಾಹನಿ ಅವರು ಆರು ನಾಟಕಗಳನ್ನು ಬರೆದಿದ್ದಾರೆ : (೧) ಹಾನೂಶ್ – ೧೯೭೭, (೨) ಕಬಿರಾ ಖಡಾ ಬಜಾರ್ ಮ್ಹೇ – ೧೯೮೫, (೩) ಮಾಧವೀ – ೧೯೮೫, (೪) ಮುಆವಜೇ – ೧೯೯೩, (೫) ರಂಗ್ ದೇ ಬಸಂತೀ ಚೋಲಾ – ೧೯೮೮, (೬) ಆಲಮ್‌ಗೀರ್ – ೧೯೯೯.

೧೯೬೦ರಲ್ಲಿ ಝೆಕೊಸ್ಲೊವಾಕಿಯಾ ಪ್ರವಾಸದಲ್ಲಿ ಕಂಡ ಪ್ರಾಚೀನ ಗಡಿಯಾರದ ಕತೆಯನ್ನು ಹೆಣೆದು ಶೋಷಣೆಯ ಕಥಾಭಿತ್ತಿ ಬಿಡಿಸಿದ ಕತೆ 'ಹಾನೂಶ್'. 'ಕಬೀರ'ನ ಸಮಾಜಮುಖಿ ಚಿತ್ರಣದಲ್ಲಿಯೂ 'ಹಾನೂಶ್'ದಂತೆ ವ್ಯಕ್ತಿಯ ಸೃಜನಶೀಲತೆಯನ್ನು ಶೋಷಿಸುವ, ದಮನಿಸುವ, ವಿರೋಧಿಸುವ ಕ್ರೂರ ಶಕ್ತಿಗಳ ಮುಖಾಮುಖಿಯಿದೆ. ಮಹಾಭಾರತ ಕತೆಯಲ್ಲಿ ಬರುವ 'ಮಾಧವಿ'ಯ ಮೂಲಕ ಪಿತೃಪ್ರಧಾನ ವ್ಯವಸ್ಥೆಯಿಂದ ಹೆಣ್ಣು ಪಡುವ ಬವಣೆ, ಅವಳು ಸಹಿಸಬೇಕಾಗುವ ಅಪಮಾನ, ಶೋಷಣೆ, ಅವಹೇಳನೆಗಳನ್ನು ಚಿತ್ರಿಸಲಾಗಿದೆ. 'ಮುಆವಜೇ' ವ್ಯಂಗ್ಯ ಪ್ರಹಸನದಂತಿದೆ. ಇಂದಿನ ಯಾವುದೇ ರಾಜಕೀಯ ನಾಯಕರ ಬೂಟಾಟಿಕೆ, ಭ್ರಷ್ಟಾಚಾರಗಳ ನೇರ ಚಿತ್ರ ಇಲ್ಲಿದೆ. ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡ ಕುರಿತ 'ರಂಗ್ ದೇ ಬಸಂತೀ ಚೋಲಾ' ಮತ್ತು ಔರಂಗಜೇಬನನ್ನು ಕುರಿತ 'ಆಲಮ್‌ಗೀರ್' ಅಷ್ಟು ಒಳ್ಳೆಯ ನಾಟಕಗಳಲ್ಲ. ಮೊದಲಿನಿಂದಲೂ ನಾಟಕ, ಅಭಿನಯ, ನಿರ್ದೇಶನ ತಿಳಿದಿದ್ದ ಭೀಷ್ಮ ಸಾಹನಿಗೆ ನಾಟಕ ತಂಡಗಳ ಒಡನಾಟ ಕೊನೆಯವರೆಗೂ ಇತ್ತು.

೮

ಭೀಷ್ಮ ಸಾಹನಿ ಅವರು 'ಮೇರೇ ಭಾಯಿ ಬಲರಾಜ್' (೧೯೮೫) ಎಂಬ ಜೀವನಚರಿತ್ರೆಯನ್ನು; ಮತ್ತು 'ಗುಲೇಲ್ ಕಾ ಖೇಲ್' (೧೯೮೧), ಹಾಗೂ 'ವಾಪಸೀ' (೧೯೮೫) ಮಕ್ಕಳ ಕತೆಗಳನ್ನೂ ರಚಿಸಿದ್ದಾರೆ. 'ಆಜ್ ಕೇ ಅತೀತ್' (೨೦೦೩) ಭೀಷ್ಮ ಸಾಹನಿ ಅವರ ಅತ್ಯಂತ ಮಹತ್ವದ ಕೃತಿ. ಇದು ಆ ಕಾಲದ ದೇಶ ವಿಭಜನೆಯ ಯಥಾವತ್ತಾದ ಚಿತ್ರಮಾಲಿಕೆ ಮತ್ತು ಎರಡೂ ದೇಶಗಳ ಜನರ ಕುರಿತು ಅಸದಳ ಪ್ರೀತಿ ತೋರುವ ಅಸಂಖ್ಯ ಜೀವಂತ ನೆನಪುಗಳನ್ನು ಕೆದಕುವ ಅದ್ಭುತ ಪುಸ್ತಕ. ಇದು ಅವರ ಆತ್ಮಕಥೆಯಾಗಿದ್ದರೂ ಅವರ ಅನೇಕ ವಿಚಾರಗಳ ಉಗ್ರಾಣವೂ ಇಲ್ಲಿದೆ. ಈ ಕೃತಿಯಲ್ಲಿ ವ್ಯಕ್ತವಾಗಿರುವ ಅವರ ಕೆಲವು ವಿಚಾರಗಳು :

"ಸಾಹಿತ್ಯ ಕೃತಿಯಲ್ಲಿ ವಿಶ್ವಸನೀಯತೆ ಪ್ರಚುರವಾಗಿರಬೇಕು. ವಿಶ್ವಸನೀಯತೆಯೇ ಒಂದು ಒಳ್ಳೆಯ ಕೃತಿಯ ನಿಕಷ. ಅದು ಜೀವನದ ಜೀವಂತ ಅನುಭವಗಳನ್ನು ಆಧರಿಸಿರಬೇಕು."

"ನಮ್ಮ ಬರವಣಿಗೆಯಲ್ಲಿ ನಾವಾಗಿ ಏನನ್ನೂ ಹೇರಬಾರದು. ಕೃತಿ ತಾನೇ ಮಾತಾಡಬೇಕು. ತನ್ನಲ್ಲಿ ಅಳವಡಿಸಲಾದ ವಿಚಾರಗಳನ್ನು ಆ ಕೃತಿ ತಾನೇ ಪ್ರಮಾಣೀಕರಿಸಬೇಕು. ಅದಕ್ಕೆ ನೈತಿಕ ಅಥವಾ ಸಂದೇಶ ಪ್ರಧಾನವಾದ ಬಾಲ ಜೋಡಿಸುವುದರಿಂದ ಕೃತಿ ಕಳೆಗುಂದುತ್ತದೆ."

"ಸೋವಿಯತ್ ಸಂಘದ ಪರವಾಗಿ ಇಂದು ಯಾರೂ ವಕಾಲತ್ತು ವಹಿಸುತ್ತಿಲ್ಲ. ಇದರ ಅರ್ಥ ಬಂಡವಾಳಶಾಹಿ ವ್ಯವಸ್ಥೆಯು ಆದರ್ಶ ವ್ಯವಸ್ಥೆ ಎಂದಾಗಲಿ, ಅಥವಾ ಪ್ರಪಂಚ ಈ ಬಂಡವಾಳಶಾಹಿ ವ್ಯವಸ್ಥೆಯನ್ನೇ ಕೊನೆಯ ಸತ್ಯವೆಂದು ಒಪ್ಪಿ ಸ್ವೀಕರಿಸುತ್ತದೆಂದಾಗಲಿ ಆಗುವುದಿಲ್ಲ. ಸೋವಿಯತ್ ಸಂಘದಲ್ಲಿ ಸಮಾಜವಾದಿ ವ್ಯವಸ್ಥೆ ಭಂಗಗೊಂಡಿದ್ದ ಮಾತ್ರಕ್ಕೆ ಬಂಡವಾಳಶಾಹಿ ವ್ಯವಸ್ಥೆಯ ಶ್ರೇಷ್ಠತೆ ಸಿದ್ಧವಾಗುವುದಿಲ್ಲ."

"ಕಮ್ಯುನಿಸ್ಟ್ ವಿಚಾರಧಾರೆಯಿಂದ ಪ್ರಭಾವಿತನಾದ ವ್ಯಕ್ತಿಯ ದೃಷ್ಟಿಯು ಖಂಡಿತವಾಗಿಯೂ ಸಾಮಾಜಿಕ ಮಟ್ಟದಲ್ಲಿ ಹೆಚ್ಚು ಸ್ಪಷ್ಟವಾಗಿರುತ್ತದೆ, ತರ್ಕಬದ್ಧವಾಗಿರುತ್ತದೆ. ಅವನು ಕೋಮುವಾದಿಯಾಗಿರುವುದಿಲ್ಲ, ಜಾತಿಭೇದ, ವರ್ಣಭೇದಗಳನ್ನು ನಂಬುವುದಿಲ್ಲ... ಜನರು ದುಡಿಯುವವರ ಪಕ್ಷದಲ್ಲಿರುವರೋ ಎದುರು ಪಕ್ಷದಲ್ಲಿರುವರೋ ಎಂಬುದನ್ನು ಮಾತ್ರ ಅವರು ಪರಿಗಣಿಸುತ್ತಾರೆ. ಜನಹಿತವೇ ಅವರ ವೈಚಾರಿಕತೆಯ ನೆಲೆಗಟ್ಟು. ಅವರು ಅದನ್ನೇ ನಂಬುತ್ತಾರೆ."

"ಯಾವುದೇ ವ್ಯಕ್ತಿ ಜೀವನದಲ್ಲಿ ಏನಾದ ಎನ್ನುವುದಕ್ಕಿಂತ ಅವನು ಏನು ನೀಡಿದ ಎನ್ನುವುದು ಬಹಳ ಮುಖ್ಯವಾದದ್ದು. ಆಗಿಹೋದ ಹಿರಿಯರನ್ನು ನಾವು ಅವರ ಕೊಡುಗೆಯ ಆಧಾರದ ಮೇಲೆಯೇ ಅಳೆಯುತ್ತೇವೆ, ಆ ಹಿನ್ನೆಲೆಯಲ್ಲಿಯೇ ಅವರ ಹಿರಿಮೆ ಪರಿಗಣಿತವಾಗುತ್ತದೆ. ಈ ಕಾರಣದಿಂದಾಗಿಯೇ ನಮ್ಮ 'ಗೌರವ ಮಾಲಿಕೆ'ಯಲ್ಲಿ ಪರಾಕ್ರಮಿಗಳಾದ ರಾಜ ಮಹಾರಾಜರನ್ನು, ಶ್ರೀಮಂತರನ್ನು ಪಕ್ಕಕ್ಕಿಡುತ್ತೇವೆ; ಬಹುಸಂಖ್ಯೆಯಲ್ಲಿರುವ ಕವಿಗಳು, ಸಂತರು, ಪೀರರು, ಫಕೀರರಂಥವರನ್ನು ನಾವು ಶ್ರದ್ಧೆಯಿಂದ ಕಾಣುತ್ತೇವೆ."

೯

ಭೀಷ್ಮ ಸಾಹನಿಯವರ ಬಹಳ ಕೃತಿಗಳು ಭಾರತೀಯ ಮತ್ತು ವಿದೇಶೀ ಭಾಷೆಗಳಿಗೆ ಅನುವಾದಗೊಂಡಿವೆ. ಕನ್ನಡ ಓದುಗರಿಗೆ ಅವರು ಮುಖ್ಯವಾಗಿ ಕಾದಂಬರಿಕಾರರೆಂದೇ ಪರಿಚಿತರಾಗಿದ್ದಾರೆ. ಈವರೆಗೆ ಕನ್ನಡಕ್ಕೆ ಅನುವಾದಗೊಂಡ ಅವರ ಕಾದಂಬರಿಗಳು ನಾಲ್ಕು: (೧) ತಮಸ್ – ೧೯೮೮, (೨) ಬಸಂತಿ – ೧೯೮೯, (೩) ಗವಾಕ್ಷಿ {ಝರೋಖೇ}; ಈ ಮೂರನ್ನೂ ಅನುವಾದಿಸಿದವರು ಶಾರದಾಸ್ವಾಮಿ ಮತ್ತು ಡಾ॥ ಎಸ್. ಎಂ. ರಾಮಚಂದ್ರಸ್ವಾಮಿ. (೪) ೨೦೦೨ರಲ್ಲಿ ಪ್ರಕಟವಾದ 'ಮಯ್ಯಾದಾಸನ ವಾಡೆ'ಯನ್ನು ಅನುವಾದಿಸಿದವರು ದು. ನಿಂ. ಬೆಳಗಲಿ. ಈ ನಾಲ್ಕನ್ನೂ ಪ್ರಕಟಿಸಿದವರು ನವಕರ್ನಾಟಕ ಪ್ರಕಾಶನದವರು.

ಸಾಹನಿಯವರ ನಾಲ್ಕು ನಾಟಕ ಕನ್ನಡದಲ್ಲಿ ಬಂದಿವೆ. (೧) ಮಾಧವಿ – ಗೊರೂರು ಶ್ರೀನಿವಾಸಮೂರ್ತಿ, (೨) ಹಾನೂಶ್ – ೧೯೯೩ – ದಾಕ್ಷಾಯಣಿ ಸೋಮಶೇಖರ್, (೩) ಪರಿಹಾರ {ಮುಆವಜೇ} – ೧೯೯೭ – ಅಶ್ವಿನಿ ರಂಗಾ, ಮತ್ತು ಸಂತ್ಯಾಗ ನಿಂತಾನ ಕಬೀರ {ಕಬೀರಾ ಖಡಾ ಬಜಾರ್ ಮ್ಹೇ} – ೨೦೧೦ – ಗೋಪಾಲ ವಾಜಪೇಯಿ. ಇಲ್ಲಿ ಮೊದಲಿನ ಮೂರು ನಾಟಕಗಳನ್ನು ಪ್ರಕಟಿಸಿದವರು ನವಕರ್ನಾಟಕ ಪ್ರಕಾಶನದವರು; ಮತ್ತು ಕೊನೆಯದನ್ನು ಧಾತ್ರಿ ಪುಸ್ತಕದವರು ಪ್ರಕಟಿಸಿದ್ದಾರೆ. ಇಲ್ಲಿ ಗೋಪಾಲ ವಾಜಪೇಯಿ ಮಾಡಿದ "ಸಂತ್ಯಾಗ ನಿಂತಾನ ಕಬೀರ" ಒಂದು ವಿಶಿಷ್ಟ, ಅನುಕರಣೀಯ ನಾಟಕಾನುವಾದ. ಕಬೀರನ ದೋಹೆ, ಪದಗಳನ್ನು ಸಹ ಗೋಪಾಲರು ಅನುವಾದಿಸಿದ ರೀತಿ ಕಬೀರಾನುವಾದಕ್ಕೇ ಒಂದು ಹೊಸ ದಾರಿ ತೋರುವಂಥ ಸ್ತುತ್ಯ ಪ್ರಯತ್ನವಾಗಿದೆ.

ಇಡಿಯಾಗಿ ಭೀಷ್ಮ ಸಾಹನಿಯವರ ಯಾವುದೇ ಕಥಾಸಂಗ್ರಹ ಕನ್ನಡದಲ್ಲಿ ಅನುವಾದಗೊಂಡಿಲ್ಲ; ಆದರೆ, ಡಿ. ಎನ್. ಶ್ರೀನಾಥ್ ಅವರು ತಮ್ಮ ನವನೀತ ಪ್ರಕಾಶನದಿಂದ ಭೀಷ್ಮರ ಆಯ್ದ ೨೧ ಉತ್ತಮ ಕತೆಗಳನ್ನು "ಭೀಷ್ಮ ಸಾಹನಿ ಅವರ ಪ್ರಾತಿನಿಧಿಕ ಕಥೆಗಳು" ಎಂಬ ಹೆಸರಿನಿಂದ ೨೦೦೩ರಲ್ಲಿ ಪ್ರಕಟಿಸಿದ್ದರು. ಅದಕ್ಕೆ ಸಾಹಿತ್ಯ ಅಕಾದೆಮಿಯ ಪುರಸ್ಕಾರವೂ ಬಂದಿತ್ತು. ಇವಲ್ಲದೆ ಅಲ್ಲಲ್ಲಿ ಬೇರೆ ಕೆಲ ಸಾಹಿತಿಗಳೂ ಭೀಷ್ಮರ ಬಿಡಿ ಕತೆಗಳನ್ನು ಅನುವಾದಿಸಿದ್ದಾರೆ.

೧೦

ಸಾಹನಿ ಅವರಿಗೆ 'ತಮಸ್' ಕೃತಿಗೆ ೧೯೭೫ರಲ್ಲಿ ಸಾಹಿತ್ಯ ಅಕಾದೆಮಿ ಪುರಸ್ಕಾರ, ೧೯೮೦ರಲ್ಲಿ ಪಂಜಾಬ ಸರಕಾರದ 'ಶಿರೋಮಣಿ ಲೇಖಕ ಸಮ್ಮಾನ', ೧೯೮೩ರಲ್ಲಿ ಲೋಟಸ್ ಪುರಸ್ಕಾರ, ೧೯೮೮ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ ಪುರಸ್ಕಾರ ಮತ್ತು ಭಾರತ ಸರಕಾರದ ಪದ್ಮಭೂಷಣ ಪ್ರಶಸ್ತಿಗಳು ಬಂದಿವೆ. ಭೀಷ್ಮ ಸಾಹನಿ ಹುಟ್ಟಿ ನೂರು ವರ್ಷ ತುಂಬಿದ ಈ ಸಂದರ್ಭದಲ್ಲಿ ಜೀವನಕ್ಕೆ ಪ್ರತಿಬದ್ಧರಾಗಿದ್ದ ಅವರಂಥ ಲೇಖಕರನ್ನು ನೆನೆಯುವುದು ನಾಡಿನ ಸಾಹಿತ್ಯ ಗೌರವ. ಕರ್ನಾಟಕಕ್ಕೆ, ಧಾರವಾಡ, ಬೆಳಗಾವಿ, ಮೈಸೂರು, ಬೆಂಗಳೂರಿಗೆ ಬಹಳ ಸಲ ಬಂದುಹೋಗಿದ್ದ ಭೀಷ್ಮರ ಇನ್ನುಳಿದ ಸಾಹಿತ್ಯವೂ ಅನುವಾದಗೊಂಡು ಕನ್ನಡ ಓದುಗರಿಗೆ ಸಿಗುವಂತಾದರೆ ಅದು ಕೂಡ ಭೀಷ್ಮಗೌರವವೇ.




**ಡಾ॥ ಸಿದ್ಧಲಿಂಗ ಪಟ್ಟಣಶೆಟ್ಟಿ**

'ಹೂಮನೆ', ಶ್ರೀದೇವಿನಗರ, ವಿದ್ಯಾಗಿರಿ

ಧಾರವಾಡ – ೫೮೦ ೦೦೪

# ನ್ಯಾಯಾಂಗ ನೇಮಕಾತಿ ಸರ್ವೋಚ್ಚ ನ್ಯಾಯಾಲಯ ಅಗ್ರಮಾನ್ಯ

೨೦೧೫ ಅಕ್ಟೋಬರ್, ೧೬ರಂದು ಭಾರತದ ಸರ್ವೋಚ್ಚ ನ್ಯಾಯಾಲಯ ಮಹತ್ವದ ತೀರ್ಪೊಂದನ್ನು ನೀಡಿತು. ದೇಶದ ಪಾರ್ಲಿಮೆಂಟ್ ಮತ್ತು ೨೦ ರಾಜ್ಯ ವಿಧಾನಸಭೆಗಳು ಸರ್ವಾನುಮತದಿಂದ ಅನುಮೋದಿಸಿದ್ದ ಸಂವಿಧಾನದ ೯೯ನೇ ತಿದ್ದುಪಡಿ ಮತ್ತು ಈ ತಿದ್ದುಪಡಿಗಳನ್ನು ಆಧರಿಸಿ ರಚಿಸಿದ್ದ ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗವನ್ನು ಅಸಂವಿಧಾನಿಕವೆಂದು ಘೋಷಿಸಿ ಹಳೆಯ ಕೊಲಿಜಿಯಂ ಪದ್ಧತಿಯನ್ನೇ ಪುನರ್ಜೀವಗೊಳಿಸಿದ್ದು ದೇಶದಾದ್ಯಂತ ಪರ-ವಿರೋಧ ಚರ್ಚೆಗೆ ಗ್ರಾಸವಾಗಿದೆ. ಮೋದಿ ಸರ್ಕಾರ ಅಧಿಕಾರಕ್ಕೇರಿದ ಕೆಲವು ತಿಂಗಳಲ್ಲೇ ಅತ್ಯಂತ ತರಾತುರಿಯಿಂದ ಅನುಮೋದನೆಗೊಂಡಿದ್ದ ಸಂವಿಧಾನ ತಿದ್ದುಪಡಿ ಕಾಯ್ದೆ ಮತ್ತು ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ಕಾಯ್ದೆ ಅಧಿಕಾರ ಕೇಂದ್ರೀಕರಣದ ಸನ್ನಾಹವೇ ಅಥವಾ ನ್ಯಾಯಾಂಗ ನೇಮಕಾತಿ ಪದ್ಧತಿಗೆ ಸುಧಾರಣೆ ತರುವ ನೈಜ ಪ್ರಯತ್ನವೇ ಎಂಬ ಅನುಮಾನ ಬಹಳಷ್ಟು ಮಂದಿಯನ್ನು ಕಾಡಿತ್ತು. ಕೊಲಿಜಿಯಂ ಪದ್ಧತಿಯಡಿ ನಡೆಯುತ್ತಿದ್ದ, ಯಾವುದೇ ಪಾರದರ್ಶಕತೆ ಇಲ್ಲದ ನ್ಯಾಯಾಂಗ ನೇಮಕಾತಿಯ ಬಗ್ಗೆ ಬೇಸರಗೊಂಡಿದ್ದ ಜನರೂ ಕೂಡ ಮೋದಿ ಸರ್ಕಾರದ ಪ್ರಯತ್ನದ ಬಗ್ಗೆ ಸಂಶಯಗೊಂಡು ಕೊಲಿಜಿಯಂ ಪದ್ಧತಿಯನ್ನು ಸ್ವಲ್ಪ ಮಾರ್ಪಾಡುಗಳೊಂದಿಗೆ ಮುಂದುವರಿಸುವುದೇ ಲೇಸು ಎಂಬ ಅಭಿಪ್ರಾಯದ ಕಡೆ ವಾಲಿದ್ದರು. ಅದಕ್ಕೆ ಕಾರಣಗಳೂ ಇದ್ದವು. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಸ್ಥಾನ ಅಲಂಕರಿಸಲು ಎಲ್ಲ ಯೋಗ್ಯತೆಗಳನ್ನು ಹೊಂದಿದ್ದ ಹೆಸರಾಂತ ವಕೀಲರಾದ ಗೋಪಾಲ ಸುಬ್ರಮಣ್ಯಂ ಅವರ ಹೆಸರನ್ನು ಸರ್ವೋಚ್ಚ ನ್ಯಾಯಾಲಯದ ಕೊಲಿಜಿಯಂ ಅನುಮೋದಿಸಿದ್ದರೂ ಯಾವ ಕಾರಣವನ್ನೂ ಕೊಡದೆ ಅವರ ಹೆಸರನ್ನು ಬೇರ್ಪಡಿಸಿ ಇತರೆ ಹೆಸರುಗಳನ್ನು ರಾಷ್ಟ್ರಾಧ್ಯಕ್ಷರ ಅನುಮೋದನೆಗೆ ಕಳುಹಿಸಿ ಮೋದಿ ಸರ್ಕಾರ ಹದ್ದುಮೀರಿ ನಡೆದುಕೊಂಡಿತ್ತು ಮತ್ತು ಭವಿಷ್ಯದಲ್ಲಿ ಇದು ಸರ್ವೇಸಾಧಾರಣವಾಗುವ ಸೂಚನೆ ನೀಡಿತ್ತು. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿ ನಿವೃತ್ತಿ ಹೊಂದಿದ್ದ ಸದಾಶಿವಂ ಅವರನ್ನು ಕೇರಳದ ರಾಜ್ಯಪಾಲರಾಗಿ ನೇಮಕ ಮಾಡಿದ್ದು ಕೂಡ ಹೊಸ ಆತಂಕವನ್ನು ಹುಟ್ಟಿಸಿತ್ತು. ಇಷ್ಟೇ ಅಲ್ಲದೆ, ಮೋದಿ ಸರ್ಕಾರ ವಿವಿಧ ಸಂಸ್ಥೆಗಳಿಗೆ ನೇಮಕಾತಿ ಮಾಡಿದ "ವಿಧ್ವಂಸ"ರನ್ನು ಗಮನಿಸಿದಲ್ಲಿ ನ್ಯಾಯಾಂಗ ಕೂಡ ಈ ಸಾಲಿಗೆ ಸೇರಲಿದೆ ಎಂದು ಹಲವರಿಗೆ ಅನ್ನಿಸಿದ್ದಲ್ಲಿ ಆಶ್ಚರ್ಯವೇನಿಲ್ಲ. ಇದೊಂದು ರಾಜಕೀಯಾಸಕ್ತ ಅಭಿಪ್ರಾಯವೆಂಬ ಟೀಕೆಗೆ ಒಳಗಾಗಬಹುದಾದರೂ ಸರ್ವೋಚ್ಚ ನ್ಯಾಯಾಲಯದ ತೀರ್ಪು ಸರ್ಕಾರವನ್ನು ಆಘಾತಗೊಳಿಸಿ ಕೊಲಿಜಿಯಂ ಪದ್ಧತಿಯ ಬಗ್ಗೆ ನಂಬಿಕೆ ಕಳೆದುಕೊಂಡಿದ್ದ ಜನರನ್ನೂ ನಿರಾತಂಕಗೊಳಿಸಿತು.

## ಸರ್ಕಾರದ ಪ್ರತಿಕ್ರಿಯೆ

ಆದರೆ ಇದರ ವಿರುದ್ಧದ ಇನ್ನೊಂದು ರಾಜಕೀಯಾಸಕ್ತ ಅಭಿಪ್ರಾಯವೂ ಇದೆ. ಮೋದಿ ಸರ್ಕಾರದ ವಿತ್ತಮಂತ್ರಿ ಹಾಗೂ ಹಿರಿಯ ವಕೀಲರಾದ ಅರುಣ್ ಜೈಟ್ಲಿಯವರು ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಪ್ರತಿಕ್ರಿಯಿಸುತ್ತಾ ಭಾರತದ ಪ್ರಜಾಪ್ರಭುತ್ವ ಚುನಾಯಿತರಲ್ಲದವರ ಕ್ರೌರ್ಯವನ್ನು ಸಹಿಸಕೂಡದು ಮತ್ತು ಚುನಾಯಿತರಾದವರನ್ನು ಕಡೆಗಣಿಸಿದಲ್ಲಿ ಪ್ರಜಾಪ್ರಭುತ್ವವೇ ಅಪಾಯಕ್ಕೀಡಾಗುವುದು ಎಂದು ಹೇಳಿದ್ದು ಇದಕ್ಕೊಂದು ಸಮರ್ಪಕ ನಿದರ್ಶನ. ಭಾರತದ ಅಟಾರ್ನಿ ಜನರಲ್ ಮತ್ತು ಕೇಂದ್ರ ಸರ್ಕಾರದ ಪರ ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಮುಖವಾದ ಮಂಡಿಸಿದ್ದ ಮುಕುಲ್ ರೋಹಟಗಿ ತೀರ್ಪಿನ ಬಗ್ಗೆ ಮಾತನಾಡುತ್ತಾ ಸರ್ವಾನುಮತದಿಂದ ಪಾರ್ಲಿಮೆಂಟ್ ಮತ್ತು ೨೦ ರಾಜ್ಯ ವಿಧಾನ ಸಭೆಗಳಿಂದ ಅನುಮೋದನೆಗೊಂಡು ನ್ಯಾಯಾಂಗ ನೇಮಕಾತಿಯಲ್ಲಿ ಪಾರದರ್ಶಕತೆ ಬಯಸಿದ್ದ ಜನತೆಯ ಆಶಯವನ್ನು ಈ ತೀರ್ಪು ಕಡೆಗಣಿಸಿದೆ ಎಂದು ಹೇಳಿದ್ದು ಸರ್ಕಾರದ ನಿಲುವಿನ ಪ್ರತೀಕವಾಗಿತ್ತು.

## ನ್ಯಾಯಾಂಗದ ಸ್ವಾತಂತ್ರ್ಯ - ಸಂವಿಧಾನದ ಮೂಲ ಲಕ್ಷಣ

ಸರ್ವೋಚ್ಚ ನ್ಯಾಯಾಲಯದ ತೀರ್ಪು ಮೇಲ್ಕಂಡ ಮುಖ್ಯ ಭಿನ್ನಾಭಿಪ್ರಾಯಗಳಿಗೆ ಎಡೆಮಾಡಿಕೊಟ್ಟಿದ್ದರೂ

ಮುರಳಿಧರ ಚಿಕ್ಕಮಗಳೂರು

ನಿಷ್ಪಕ್ಷಪಾತ ವಿಮರ್ಶೆ ಇದರಿಂದಾಗಿ ದಾರಿ ತಪ್ಪಬೇಕಿಲ್ಲ. ಅಂತಹ ವಿಮರ್ಶೆ ಸಾಧ್ಯವಾಗ ಬೇಕೆಂದರೆ ಕೆಲವು ಪ್ರಮುಖ ಅಂಶಗಳ ಬಗ್ಗೆ ಗಮನ ಹರಿಸುವುದು ಅನಿವಾರ್ಯ. ಭಾರತದ ಸಂವಿಧಾನ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಪಾತ್ರಗಳನ್ನು ಮತ್ತು ಆಯಾಮ ಗಳನ್ನು ಸ್ಪಷ್ಟವಾಗಿ ಗುರುತಿಸಿ ಬೇರ್ಪಡಿಸಿದೆ. ಶಾಸಕಾಂಗ ರಚಿಸಿ ಅನುಮೋದಿಸಿದ ಕಾಯ್ದೆಗಳು ಪ್ರಶ್ನೆಗೊಂಡಲ್ಲಿ ಅವುಗಳ ಸಂವಿಧಾನಾತ್ಮತೆಯನ್ನು ನಿರ್ಧರಿಸುವ ಅಧಿಕಾರ ಮತ್ತು ಜವಾಬ್ದಾರಿ ನ್ಯಾಯಾಂಗದ್ದು. ಹಾಗೆಯೇ ಮೂಲಭೂತ ಹಕ್ಕುಗಳು ಮತ್ತು ಸ್ವಾತಂತ್ರ್ಯದ ರಕ್ಷಣೆ ಉಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯದ ಜವಾಬ್ದಾರಿ. ಹಾಗಾಗಿ ರಾಜಕೀಯ ಮತ್ತು ಕಾರ್ಯಾಂಗದ ಪ್ರಭಾವ ಮತ್ತು ಒತ್ತಡಗಳಿಂದ ನ್ಯಾಯಾಂಗ ಹೊರತಾಗಿರಬೇಕಾದ್ದು ಅತಿ ಅಗತ್ಯ. ಅದೇ ನ್ಯಾಯಾಂಗದ ನಿಜವಾದ ಸ್ವಾತಂತ್ರ್ಯ. ಸ್ವಾಮಿ ಕೇಶವಾನಂದ ಭಾರತಿ ಪ್ರಕರಣದಲ್ಲಿ (ಎ.ಐ.ಆರ್. ೧೯೭೩ ಎಸ್.ಸಿ. ೧೪೬೧) ಸರ್ವೋಚ್ಚ ನ್ಯಾಯಾಲಯದ ೧೩ ನ್ಯಾಯಮೂರ್ತಿಗಳ ನ್ಯಾಯಪೀಠ ಸಂವಿಧಾನಕ್ಕೆ ತಿದ್ದುಪಡಿ ತರುವ ಶಾಸಕಾಂಗದ ಅಧಿಕಾರವನ್ನು ಎತ್ತಿ ಹಿಡಿದರೂ, ಸಂವಿಧಾನದ ಮೂಲ ಲಕ್ಷಣಗಳಿಗೆ ತಿದ್ದುಪಡಿ ತರುವ ಅಧಿಕಾರ ಹೊಂದಿಲ್ಲ ಎಂದು ತೀರ್ಪಿತ್ತಿದೆ. ನ್ಯಾಯಾಂಗದ ಸ್ವಾತಂತ್ರ್ಯ ಮತ್ತು ನ್ಯಾಯಿಕ ಪುನರ್ ವಿಮರ್ಶೆ ಸಂವಿಧಾನದ ಮೂಲ ಲಕ್ಷಣಗಳು. ನ್ಯಾಯಾಂಗ ಸ್ವಾತಂತ್ರ್ಯ ಶಾಸನಾತ್ಮಕ ಆಳ್ವಿಕೆಗೆ ಅತ್ಯಗತ್ಯ ಸಾಧನ.

**ನ್ಯಾಯಾಂಗ–ಕಾರ್ಯಾಂಗ ನಡುವಿನ ಘರ್ಷಣೆ**

ಭಾರತದಲ್ಲಿ ಕಾರ್ಯಾಂಗ ಮತ್ತು ನ್ಯಾಯಾಂಗಗಳ ನಡುವಿನ ಹಲವಾರು ತಿಕ್ಕಾಟಗಳ ಬಗ್ಗೆ ಉದಾಹರಣೆಗಳಿವೆ. ಇಂದಿರಾ ಗಾಂಧಿ ಪ್ರಧಾನ ಮಂತ್ರಿಯಾಗಿದ್ದ ಸಂದರ್ಭದಲ್ಲಿ ನಡೆದ ಘಟನೆಗಳನ್ನು ಇಲ್ಲಿ ಸ್ಮರಿಸಬಹುದು. ಸಂವಿಧಾನ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಅಧಿಕಾರ ವ್ಯಾಪ್ತಿಗಳನ್ನು ಗುರುತಿಸಿ ಬೇರ್ಪಡಿಸಿದ್ದರೂ ನ್ಯಾಯಿಕ ಪುನರ್ ವಿಮರ್ಶೆ ಮತ್ತು ನ್ಯಾಯಿಕ ಕ್ರಿಯಾಶೀಲತೆಯಿಂದಾಗಿ ಅನೇಕ ಪ್ರಕರಣಗಳಲ್ಲಿ ನ್ಯಾಯಾಂಗವು ಶಾಸಕಾಂಗ ಮತ್ತು ಕಾರ್ಯಾಂಗದ ಸಂವಿಧಾನದತ್ತ ಅಧಿಕಾರವನ್ನು ಒತ್ತುವರಿಸಿಕೊಂಡಿದೆ ಎಂಬ ಆತಂಕವೇ ಚಕಮಕಿಗೆ ಕಾರಣವಾಗಿದೆ. ಆದರೆ ಇದು ಸಂವಿಧಾನದ ಬಿಕ್ಕಟ್ಟಿಗೆ ಪರಿವರ್ತನೆಯಾಗಿಲ್ಲ.

**ಮೊದಲನೇ ನ್ಯಾಯಾಧೀಶರ ಪ್ರಕರಣ**

ಸಂವಿಧಾನದ ಅನುಚ್ಛೇದ ೧೨೪ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯ ಮೂರ್ತಿಗಳು ಮತ್ತು ಇತರ ನ್ಯಾಯಮೂರ್ತಿಗಳ ನೇಮಕಾತಿಯ ಅಧಿಕಾರವನ್ನು ರಾಷ್ಟ್ರಪತಿ ಯವರಿಗೆ ನೀಡಿದೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳನ್ನು ನೇಮಕ ಮಾಡುವುದು ರಾಷ್ಟ್ರಪತಿಯವರ ಅಧಿಕಾರವಾದರೂ ಅದು ಕೇಂದ್ರ ಮಂತ್ರಿಮಂಡಲದ ಸಲಹೆಯ ಮೇರೆಗೆ ಮತ್ತು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳ ಸಮಾಲೋಚನೆಯ ಆಧಾರದ ಮೇಲೆ ನಿರ್ಧರಿತವಾಗುವಂತಹದ್ದು. ಹಾಗೆಯೇ ಅನುಚ್ಛೇದ ೨೧೭ರಡಿಯಲ್ಲಿ ಉಚ್ಚ ನ್ಯಾಯಾಲಯ ಗಳಿಗೆ ನ್ಯಾಯಮೂರ್ತಿಗಳನ್ನು ನೇಮಕ ಮಾಡುವ ಮುನ್ನ ರಾಷ್ಟ್ರಪತಿಗಳು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯ ಮೂರ್ತಿಗಳು ಆಯಾ ರಾಜ್ಯದ ರಾಜ್ಯಪಾಲರು ಮತ್ತು ಆಯಾ ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ಸಮಾಲೋಚನೆ ನಡೆಸುವುದು ಅಗತ್ಯ. ನ್ಯಾಯಾಂಗ ನೇಮಕಾತಿಯ ಈ ಪ್ರಕ್ರಿಯೆಯಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳ ಸಮಾಲೋಚನೆ ಅಗ್ರಮಾನ್ಯವೇ ಮತ್ತು ರಾಷ್ಟ್ರಪತಿಗಳು ಅದಕ್ಕೆ ಬದ್ಧರೇ ಎಂಬ ಪ್ರಶ್ನೆ ಮೊದಲನೇ ನ್ಯಾಯಾಧೀಶರ ಪ್ರಕರಣವೆಂದೇ ಹೆಸರುವಾಸಿಯಾದ ಎಸ್. ಪಿ. ಗುಪ್ತ ಪ್ರಕರಣದಲ್ಲಿ (ಎ.ಐ.ಆರ್. ೧೯೮೨ ಎಸ್. ಸಿ. ಪುಟ ೧೪೯) ಸರ್ವೋಚ್ಚ ನ್ಯಾಯಾಲಯದ ೭–ನ್ಯಾಯಮೂರ್ತಿಗಳ ನ್ಯಾಯಪೀಠ ಸರ್ವೋಚ್ಚ

ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳ ಸಮಾಲೋಚನೆ ಮಿಕ್ಕೆಲ್ಲ ಸಮಾಲೋಚನೆಗಳಿಗೆ ಸರಿಸಮಾನವೇ ಹೊರತು ಅಗ್ರಮಾನ್ಯವಲ್ಲವೆಂದು ತೀರ್ಪಿತ್ತಿತು. ಆದರೆ ಮೇಲಿನ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ನೇಮಕಾತಿಯ ಪ್ರಶ್ನೆ ಉದ್ಭವಿಸಿರಲಿಲ್ಲ.

**ಎರಡನೇ ನ್ಯಾಯಾಧೀಶರ ಪ್ರಕರಣ**

ಎರಡನೇ ನ್ಯಾಯಾಧೀಶರ ಪ್ರಕರಣವೆಂದು ಹೆಸರುವಾಸಿಯಾದ ಸುಪ್ರೀಂ ಕೋರ್ಟ್ ಅಡ್ವೋಕೇಟ್ಸ್ – ಆನ್ – ರೆಕಾರ್ಡ್ ಅಸೋಸಿಯೇಶನ್ (ಎ.ಐ.ಆರ್. ೧೯೯೪ ಎಸ್.ಸಿ. ಪುಟ ೨೬೮) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚನ್ಯಾಯಾಲಯಗಳಿಗೆ ನ್ಯಾಯಮೂರ್ತಿಗಳ ನೇಮಕಾತಿ ಅಧಿಕಾರವನ್ನು ಯಾರು ಹೊಂದಿದ್ದಾರೆ ಎಂಬ ಪ್ರಶ್ನೆ ನಿರ್ಧರಿತವಾಯಿತು. ೯ ನ್ಯಾಯಮೂರ್ತಿಗಳ ನ್ಯಾಯಪೀಠ ಬಹುಮತದಿಂದ ನೀಡಿದ ತೀರ್ಪಿನ ಪ್ರಕಾರ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ಸರ್ವೋಚ್ಚ ನ್ಯಾಯಾಲಯದ ಇತರ ನ್ಯಾಯಮೂರ್ತಿಗಳ ನೇಮಕಾತಿಯ ಬಗ್ಗೆ ನೀಡುವ ಸಮಾಲೋಚನೆ ನಿರ್ಣಾಯಕ ಮತ್ತು ರಾಷ್ಟ್ರಪತಿಗಳು ಅದಕ್ಕೆ ಬದ್ಧರು. ಭಾರತದ ಮುಖ್ಯ ನ್ಯಾಯಮೂರ್ತಿಗಳು ತಮ್ಮ ಸಲಹೆ ನೀಡುವ ಮುನ್ನ ಸರ್ವೋಚ್ಚ ನ್ಯಾಯಾಲಯದ ಇಬ್ಬರು ಹಿರಿಯ ನ್ಯಾಯಮೂರ್ತಿಗಳ ಅಭಿಪ್ರಾಯ ಪಡೆಯಬೇಕೆಂದು ನೇಮಕಾತಿ ಕಾರ್ಯವಿಧಾನವನ್ನೂ ಸರ್ವೋಚ್ಚ ನ್ಯಾಯಾಲಯ ಈ ಪ್ರಕರಣದಲ್ಲಿ ರೂಪಿಸಿತ್ತು. ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳ ನೇಮಕಾತಿಯಲ್ಲಿ ಭಾರತದ ಮುಖ್ಯ ನ್ಯಾಯಮೂರ್ತಿಗಳು ಒಬ್ಬರು ಅಥವಾ ಹೆಚ್ಚು ನ್ಯಾಯಮೂರ್ತಿಗಳ ಅಭಿಪ್ರಾಯ ಪಡೆದರೂ ಆ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳ ಅಭಿಪ್ರಾಯಕ್ಕೇ ಹೆಚ್ಚು ಮನ್ನಣೆ. ಏಕೆಂದರೆ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಭಾರತದ ಮುಖ್ಯ ನ್ಯಾಯಮೂರ್ತಿಗಳಿಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಮುನ್ನ ಕನಿಷ್ಠ ಇಬ್ಬರು ಹಿರಿಯ ನ್ಯಾಯಮೂರ್ತಿಗಳ ಅಭಿಪ್ರಾಯ ಪಡೆದಿರಬೇಕು. ನ್ಯಾಯಮೂರ್ತಿಗಳಿಂದ ನ್ಯಾಯಮೂರ್ತಿಗಳ ನೇಮಕಾತಿಯ ಕೊಲಿಜಿಯಂ ಪದ್ಧತಿ ಹೀಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಚಮತ್ಕಾರದಿಂದ ಆವಿಷ್ಕಾರವಾದದ್ದು, ಕೇಂದ್ರ ಮಂತ್ರಿಮಂಡಲ ಮತ್ತು ರಾಷ್ಟ್ರಪತಿಗಳ ಅಧಿಕಾರವನ್ನು ಗೌಣಗೊಳಿಸಿದ್ದು. ನ್ಯಾಯಮೂರ್ತಿಗಳು ಅದು ಹೀಗೆ ಎಂದು ಅರ್ಥೈಸುವುದೇ ಸಂವಿಧಾನ ಎಂಬ ಹೇಳಿಕೆಗೆ ಕೊಲಿಜಿಯಂ ಪದ್ಧತಿ ಒಂದು ಉದಾಹರಣೆ.

**ರಾಷ್ಟ್ರಪತಿಯವರ ಉಲ್ಲೇಖ**

ನ್ಯಾಯಾಂಗ ನೇಮಕಾತಿಯ ಬಗ್ಗೆ ಎರಡನೇ ನ್ಯಾಯಾಧೀಶರ ಪ್ರಕರಣದ ತೀರ್ಪಿನ ಹಿನ್ನೆಲೆಯಲ್ಲಿ ಮೂಡಿದ ಕೆಲವು ಸಂದೇಹಗಳ ಬಗ್ಗೆ ರಾಷ್ಟ್ರಪತಿಯವರು ಸರ್ವೋಚ್ಚ ನ್ಯಾಯಾಲಯದ ಅಭಿಪ್ರಾಯ ಪಡೆಯಲು ಕಳುಹಿಸಿದ ಉಲ್ಲೇಖ ಮೂರನೇ ನ್ಯಾಯಾಧೀಶರ ಪ್ರಕರಣವೆಂದು ಕರೆಯಲ್ಪಟ್ಟಿತು. ೯ ನ್ಯಾಯಮೂರ್ತಿಗಳ ನ್ಯಾಯಪೀಠ ರಾಷ್ಟ್ರಪತಿಗಳು ಎತ್ತಿದ ಸಂದೇಹಗಳನ್ನು ಉತ್ತರಿಸುತ್ತಾ ಕೊಲಿಜಿಯಂ ಪದ್ಧತಿಗೆ ಕೆಲವು ಮಾರ್ಪಾಡುಗಳನ್ನು ಸೂಚಿಸಿತು (ಎ.ಐ.ಆರ್. ೧೯೯೯ ಎಸ್.ಸಿ. ಪುಟ–೧)

**ಕೊಲಿಜಿಯಂ – ನಿಗೂಢ ಪದ್ಧತಿ**

ಈ ರೀತಿ ೧೯೯೩–೯೪ರಲ್ಲಿ ಉದ್ಭವಗೊಂಡು ಪ್ರಚಲಿತವಾದ ಕೊಲಿಜಿಯಂ ಪದ್ಧತಿ ರಾಜಕೀಯ ಮತ್ತು ಕಾರ್ಯಾಂಗಗಳ ಪ್ರಭಾವದಿಂದ ಮುಕ್ತಗೊಂಡು ನ್ಯಾಯಾಂಗವನ್ನು ಶ್ರೀಮಂತಗೊಳಿಸುವ ಆಸೆ ಅನೇಕರಲ್ಲಿತ್ತು. ದಕ್ಷತೆ, ಪ್ರಾಮಾಣಿಕತೆ ಮತ್ತು ನಿಷ್ಪಕ್ಷಪಾತತೆಗಳನ್ನು ನ್ಯಾಯಮೂರ್ತಿಗಳಿಂದ ಕಕ್ಷಿಗಾರರು ನಿರೀಕ್ಷಿಸುವುದು ಸಹಜವೇ. ಆದರೆ ಆದದ್ದೇ ಬೇರೆ. ನ್ಯಾಯಮೂರ್ತಿಗಳ ನೇಮಕಾತಿಗೆ ಅರ್ಹತೆಗಳೇನು, ಅಭ್ಯರ್ಥಿಗಳ ಅರ್ಹತೆಯನ್ನು ಅಳೆಯುವ ಮಾಪನಗಳೇನು, ಅವರ ಚಾರಿತ್ರ್ಯ ಮತ್ತು ಹಿನ್ನೆಲೆಯನ್ನು ಅರಿಯಲು ನ್ಯಾಯಾಂಗಕ್ಕೆ ಇರುವ ಸಾಧನಗಳೇನು ಎಂಬೆಲ್ಲ ಪ್ರಶ್ನೆಗಳು ವಿವಾದಾತ್ಮಕ ನ್ಯಾಯಮೂರ್ತಿಗಳು ನೇಮಕ ಗೊಳ್ಳುತ್ತಿರುವಂತೆಯೇ ಏಳಲಾರಂಭಿಸಿದವು. ಹೀಗೆ ನೇಮಕಗೊಂಡ ಹಲವಾರು ನ್ಯಾಯಮೂರ್ತಿಗಳ ಶ್ರದ್ಧೆ, ದಕ್ಷತೆ ಮತ್ತು ಪ್ರಾಮಾಣಿಕತೆಯ ಬಗ್ಗೆಯೂ ಪ್ರಶ್ನೆಗಳು ಏಳಲಾರಂಭಿಸಿದವು. ಕೊಲಿಜಿಯಂನಲ್ಲಿರುವ ನ್ಯಾಯಮೂರ್ತಿಗಳ ಕೃಪಾಕಟಾಕ್ಷವೇ ನೇಮಕಾತಿಗೆ ಹೆದ್ದಾರಿ ಎಂಬಂತಾಯಿತು. ಕೊಲಿಜಿಯಂನ ಆಯ್ಕೆಯನ್ನು ಯಾರೂ ಪ್ರಶ್ನಿಸುವಂತಿಲ್ಲ. ಪ್ರಶ್ನಿಸಿದರೂ ಉತ್ತರ ದೊರಕುವುದಿಲ್ಲ. ಎಲ್ಲವೂ ನಿಗೂಢ. ಕೊಲಿಜಿಯಂ ಪದ್ಧತಿ ಅರ್ಹರನ್ನೇ ನ್ಯಾಯಮೂರ್ತಿಗಳನ್ನಾಗಿ ನೇಮಿಸಿತು ಎನ್ನುವುದು ಅತ್ಯಂತ ಪ್ರಶ್ನಾರ್ಹ ವಿಷಯ. ತಮ್ಮ ನಡೆ–ನುಡಿಗಳನ್ನು ಯಾರೂ ಪ್ರಶ್ನಿಸುವಂತಿಲ್ಲ ಎಂಬುದು ಅನೇಕ ನ್ಯಾಯಮೂರ್ತಿಗಳ ಗರ್ವವನ್ನು ಹೆಚ್ಚಿಸಿದ್ದೂ ಉಂಟು. ಕೊಲಿಜಿಯಂ ಪದ್ಧತಿ ನ್ಯಾಯಾಂಗದ ಗೌರವವನ್ನು ಉನ್ನತ ಹಂತಕ್ಕೆ ತೆಗೆದುಕೊಂಡು ಹೋಗಲಿಲ್ಲವೆಂಬುದು ಅನೇಕ ಜನರ ಅಭಿಮತ ಮತ್ತು ವಿಷಾದ. ಕೊಲಿಜಿಯಂ ಪದ್ಧತಿಯ ಆವಿಷ್ಕಾರಕ್ಕೆ ತಮ್ಮ ಕಾಣಿಕೆಯನ್ನು ನೀಡಿದ್ದ ನ್ಯಾಯಮೂರ್ತಿ ಜೆ. ಎಸ್. ವರ್ಮರವರು ನಂತರದ ದಿನಗಳಲ್ಲಿನ ಬೆಳವಣಿಗೆಯಿಂದ ಬೇಸರಗೊಂಡಿದ್ದರು. ವಿಶ್ರಾಂತ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಕೊಲಿಜಿಯಂ ಪದ್ಧತಿಯ ನ್ಯಾಯಾಂಗ ನೇಮಕಾತಿ ನಿರಾಶಾದಾಯಿಕವೆಂದು ಅತೃಪ್ತಿ ವ್ಯಕ್ತಪಡಿಸಿದ್ದರು.

**ಪರಿಹಾರ**



ಪೀಡಿಸುವ ಹತ್ತಾರು
ಸಮಸ್ಯೆಗಳ ಪರಿಹಾರಕ್ಕಾಗಿ
ಜ್ಯೋತಿಷಿಯವರ ಮೊರೆಹೊಕ್ಕರೆ
ಅವರು ತೋರಿದ ಪರಿಹಾರಗಳೇ
ಈಗ ಬೆಂಬಿಡದೆ ಕಾಡತೊಡಗಿವೆ
ಬೃಹತ್ ಸಮಸ್ಯೆಗಳಾಗಿ

ಸದಾನಂದ ನಾರಾವಿ
ಸೂರ್ಯದತ್ತ ಕೃಪಾ, ಮೂಡುಬಿದಿರೆ
ಮಂಗಳೂರು (ದ.ಕ)



ನ್ಯಾ॥ ವಿ. ಆರ್. ಕೃಷ್ಣ ಅಯ್ಯರ್



ನ್ಯಾ॥ ಜೆ. ಎಸ್. ವರ್ಮ

ಕೊಲಿಜಿಯಂ ಪದ್ಧತಿ ತನ್ನ ವರ್ಚಸ್ಸನ್ನು ಕಳೆದುಕೊಂಡಿತ್ತು. ಪರ್ಯಾಯ ವ್ಯವಸ್ಥೆಯ ಬೇಡಿಕೆ ಬಲಗೊಂಡಿತ್ತು.

**ಸಂವಿಧಾನ ಪರಾಮರ್ಶೆ ಆಯೋಗ**

ಫೆಬ್ರವರಿ ೨೦೦೦ದಲ್ಲಿ ಸಂವಿಧಾನದ ಕಾರ್ಯಾವಲೋಕನಕ್ಕಾಗಿ ಕೇಂದ್ರ ಸರ್ಕಾರ ಭಾರತದ ವಿಶ್ರಾಂತ ಮುಖ್ಯ ನ್ಯಾಯಮೂರ್ತಿ ವೆಂಕಟಾಚಲಯ್ಯನವರ ನೇತೃತ್ವದಲ್ಲಿ ರಚಿಸಿದ ಸಂವಿಧಾನ ಪರಾಮರ್ಶೆ ಆಯೋಗ ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳ ನೇಮಕಾತಿಗೆ ಭಾರತದ ಮುಖ್ಯ ನ್ಯಾಯ ಮೂರ್ತಿ, ಸರ್ವೋಚ್ಚ ನ್ಯಾಯಾಲಯದ ಇಬ್ಬರು ಹಿರಿಯ ನ್ಯಾಯಮೂರ್ತಿಗಳು, ಕೇಂದ್ರ ಸರ್ಕಾರದ ಕಾನೂನು ಮಂತ್ರಿ ಮತ್ತು ಭಾರತದ ಮುಖ್ಯ ನ್ಯಾಯಮೂರ್ತಿಗಳ ಸಮಾಲೋಚನೆ ನಡೆಸಿ ರಾಷ್ಟ್ರಪತಿ ಹೆಸರಿಸಿದ ಒಬ್ಬ ಪ್ರಸಿದ್ಧ ವ್ಯಕ್ತಿಯನ್ನೊಳಗೊಂಡ ರಾಷ್ಟ್ರೀಯ ನ್ಯಾಯಾಂಗ ಆಯೋಗವನ್ನು ರಚಿಸಲು ಶಿಫಾರಸ್ಸು ಮಾಡಿತ್ತು. ನ್ಯಾಯಾಂಗದ ಸ್ವಾತಂತ್ರ್ಯವನ್ನು ದೃಷ್ಟಿಯಲ್ಲಿಟ್ಟು ನೀಡಿದ ಶಿಫಾರಸ್ಸು ಅತ್ಯಂತ ಸಮರ್ಪಕವಾಗಿತ್ತು. ಆದರೆ ಇದಕ್ಕೆ ಚಾಲನೆಯೇ ಸಿಗಲಿಲ್ಲ. ಶಾಸಕಾಂಗದ ಬಲಹೀನತೆ ಇದಕ್ಕೆ ಕಾರಣವಾಗಿತ್ತು.



**ನ್ಯಾ॥ ಎಂ. ಎನ್. ವೆಂಕಟಾಚಲಯ್ಯ**

**ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ಮಸೂದೆ**

೨೦೧೪ರ ಲೋಕಸಭಾ ಚುನಾವಣೆಯಲ್ಲಿ ಎನ್.ಡಿ.ಎ. ಬಹುಮತ ಗಳಿಸಿ ಮೋದಿ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ ಕೊಲಿಜಿಯಂ ಪದ್ಧತಿಗೆ ಬದಲಾಗಿ ಹೊಸ ಆಯೋಗದ ರಚನೆಗೆ ಸರ್ಕಾರ ಸಜ್ಜಾಗಿ, ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳ ನೇಮಕಾತಿ, ವರ್ಗಾವಣೆ ಮತ್ತು ಇತರೆ ವಿಷಯಗಳನ್ನೊಳಗೊಂಡಂತೆ ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗದ ಮಸೂದೆಯ ರೂಪುರೇಷೆಗಳನ್ನು ರಚಿಸಿ ಅದನ್ನು ೧೧-೦೮-೨೦೧೪ರಂದು ಲೋಕಸಭೆಯಲ್ಲಿ ಮಂಡಿಸಲಾಯಿತು. ಅದರ ಜೊತೆಗೆ ಸಂವಿಧಾನಕ್ಕೆ ತಿದ್ದುಪಡಿ ತರುವ ಮೂಲಕ ಅನುಚ್ಛೇದ ೧೨೪-ಎ (ಆಯೋಗದ ರಚನೆ), ೧೨೪-ಬಿ (ಆಯೋಗದ ಕರ್ತವ್ಯಗಳು) ಮತ್ತು ೧೨೪-ಸಿ (ಕಾರ್ಯವಿಧಾನ), ಸೇರ್ಪಡಿಸುವ ಮಸೂದೆಯನ್ನೂ ಮಂಡಿಸಲಾಯಿತು. ಅತಿ ಆಶ್ಚರ್ಯಕರ ಸಂಗತಿಯೆಂದರೆ ಈ ಮಸೂದೆಗಳು ೧೩-೦೮-೨೦೧೪ರಂದು ಲೋಕಸಭೆಯಲ್ಲಿ ಮತ್ತು ೧೪-೦೮-೨೦೧೪ ರಂದು ರಾಜ್ಯಸಭೆಯಲ್ಲಿ ಸರ್ವಾನುಮತದಿಂದ ಅನುಮೋದನೆಗೊಂಡದ್ದು. ೨೦ ರಾಜ್ಯ ವಿಧಾನಸಭೆಗಳು ಅನುಮೋದಿಸಿದ ನಂತರ ೩೧-೧೨-೨೦೧೪ರಂದು ರಾಷ್ಟ್ರಪತಿಗಳ ಅಂಗೀಕಾರ ಪಡೆದು, ೧೩-೦೪-೨೦೧೫ರಂದು ಕಾನೂನಾಗಿ ಜಾರಿಗೊಂಡಿತು.

**ಆಯೋಗದ ರಚನೆ**

ಭಾರತದ ಮುಖ್ಯ ನ್ಯಾಯಮೂರ್ತಿ (ಅಧ್ಯಕ್ಷರು), ಸರ್ವೋಚ್ಚ ನ್ಯಾಯಾಲಯದ ಇಬ್ಬರು ಹಿರಿಯ ನ್ಯಾಯಮೂರ್ತಿಗಳು (ಸದಸ್ಯರು), ಕೇಂದ್ರ ಕಾನೂನು ಮಂತ್ರಿ (ಸದಸ್ಯ) ಮತ್ತು ಇಬ್ಬರು ಪ್ರಸಿದ್ಧ ವ್ಯಕ್ತಿಗಳು (ಇವರನ್ನು ಪ್ರಧಾನ ಮಂತ್ರಿ, ಲೋಕಸಭೆಯ ವಿರೋಧ ಪಕ್ಷದ ನಾಯಕರು ಭಾರತದ ಮುಖ್ಯ ನ್ಯಾಯಮೂರ್ತಿಗಳೊಂದಿಗೆ ಸಮಾಲೋಚಿಸಿ ಹೆಸರಿಸುವುದು) ಇವರನ್ನೆಲ್ಲ ಒಳಗೊಂಡ ಆಯೋಗ ನೇಮಕಾತಿಯ ಅಧಿಕಾರ ಹೊಂದಿತ್ತು. ಎಲ್ಲರನ್ನೂ ಕಾಡಿದ ಅಂಶವೆಂದರೆ ಈ ಆಯೋಗದ ಆರು ಸದಸ್ಯರಲ್ಲಿ ಯಾರಾದರೂ ಇಬ್ಬರು ನೇಮಕಾತಿಗೆ ಒಬ್ಬ ವ್ಯಕ್ತಿಯ ಹೆಸರನ್ನು ಒಪ್ಪದಿದ್ದಲ್ಲಿ ಅಂತಹ ವ್ಯಕ್ತಿಯನ್ನು ಆಯೋಗ ನೇಮಕಾತಿಗೆ ಶಿಫಾರಸ್ಸು ಮಾಡುವ ಹಾಗಿಲ್ಲ ಎಂಬುದು.

ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ಕಾಯ್ದೆ ಮತ್ತು ಅದಕ್ಕೆ ಪೂರಕವಾದ ೯೯ನೇ ಸಂವಿಧಾನ ತಿದ್ದುಪಡಿ ಕಾಯ್ದೆಯ ಬಗ್ಗೆ ಲೋಕಸಭೆ, ರಾಜ್ಯಸಭೆ ಮತ್ತು ರಾಜ್ಯಗಳ ವಿಧಾನಸಭೆಗಳಲ್ಲಿ ನಡೆಯಬೇಕಾದ ಚರ್ಚೆ ಸರ್ವೋಚ್ಚ ನ್ಯಾಯಾಲಯದಲ್ಲಿ ನಡೆಯುವಂತಾಯಿತು.

**ನ್ಯಾಯಾಂಗ ನೇಮಕಾತಿ-ನ್ಯಾಯಾಂಗ ಸ್ವಾತಂತ್ರ್ಯದ ಭಾಗ**

೧೯೯೩ರಲ್ಲಿ ಸರ್ವೋಚ್ಚ ನ್ಯಾಯಾಲಯದ ಎರಡನೇ ನ್ಯಾಯಾಧೀಶರ ಪ್ರಕರಣದಲ್ಲಿ ನ್ಯಾಯಾಂಗ ನೇಮಕಾತಿ ಪ್ರಕ್ರಿಯೆಯಲ್ಲಿ ಭಾರತದ ಮುಖ್ಯ ನ್ಯಾಯಾಧೀಶರ ಮತ್ತು ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಸಮಾಲೋಚನೆ ಸಂವಿಧಾನದಲ್ಲಿ ಉದ್ಧೃತವಾಗಿರುವ ಉದ್ದೇಶವೇನೆಂದರೆ ಇವರಿಂದ ಮಾತ್ರ ಅಭ್ಯರ್ಥಿಗಳ ಅರ್ಹತೆ ಅಳೆಯಲು ಸಾಧ್ಯ ಎಂಬುದು. ಇದಲ್ಲದೆ ನ್ಯಾಯಾಂಗ ನೇಮಕಾತಿ ಸಂದರ್ಭದಲ್ಲಿ ರಾಜಕೀಯ ಅಂಶ ಮತ್ತು ಪ್ರಭಾವಗಳನ್ನು ದೂರವಿಡುವ ಉದ್ದೇಶವೂ ಆಗಿತ್ತು. ಏಕೆಂದರೆ ನೇಮಕಾತಿಯ ನಂತರ ನ್ಯಾಯಾಧೀಶರ ಸ್ವಾತಂತ್ರ್ಯವನ್ನು ಕಾಯುವ ವ್ಯವಸ್ಥೆಯಷ್ಟೇ ನ್ಯಾಯಾಂಗ ಸ್ವಾತಂತ್ರ್ಯಕ್ಕೆ ಸಾಲದು ಎಂಬ ಅಭಿಪ್ರಾಯ ನೀಡಿತ್ತು. ಅಂದರೆ ಎರಡನೇ ನ್ಯಾಯಾಧೀಶರ ಪ್ರಕರಣ ನ್ಯಾಯಾಂಗ ನೇಮಕಾತಿ ಕೂಡ ನ್ಯಾಯಾಂಗ ಸ್ವಾತಂತ್ರ್ಯದ ಭಾಗವೆಂದು ಪರಿಗಣಿಸಿತ್ತು. ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗದ ಸಂವಿಧಾನತೆಯನ್ನು ನಿರ್ಧರಿಸುವ ಸಮಯದಲ್ಲಿ ಇದು ಬಹು ಮುಖ್ಯ ಅಂಶವಾಗಿತ್ತು. ನ್ಯಾಯಾಂಗ ನೇಮಕಾತಿ ನ್ಯಾಯಾಂಗ ಸ್ವಾತಂತ್ರ್ಯದ ಭಾಗವಲ್ಲ ಮತ್ತು ಅದು ಕಾರ್ಯಾಂಗದ ಜವಾಬ್ದಾರಿ ಮತ್ತು ಮುಖ್ಯ ನ್ಯಾಯಾಧೀಶರ ಸಮಾಲೋಚನೆಗೆ ಹೆಚ್ಚಿನ ಆದ್ಯತೆಯೇನಿಲ್ಲ ಎಂಬುದು ಸರ್ಕಾರದ ವಾದವಾಗಿತ್ತು. ಕಾನೂನು ಮಂತ್ರಿ ಆಯೋಗದ ಓರ್ವ ಸದಸ್ಯರಾದ್ದರಿಂದ ಅದು ನ್ಯಾಯಾಂಗ ಸ್ವಾತಂತ್ರ್ಯವನ್ನು ರಾಜಿಗೊಳಿಸಿದೆ ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅಷ್ಟೇ ಅಲ್ಲ, ಭಾರತದಲ್ಲಿ ಸರ್ಕಾರ ಅತಿದೊಡ್ಡ ಕಕ್ಷಿದಾರ. ಹಾಗಾಗಿ ನೇಮಕಾತಿಯಲ್ಲಿ ರಾಜಕೀಯ ಪ್ರಭಾವಗಳಿರಕೂಡದು ಎಂದು ಅಭಿಪ್ರಾಯಪಟ್ಟಿದೆ.



## ಆಯೋಗದ ಎಕ್ಸ್‌ಪರ್ಟ್ ಸದಸ್ಯರು ಯಾರು ?

ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗದಲ್ಲಿ ಸ್ಥಾನ ಹೊಂದಿರುವ ಇಬ್ಬರು ಎಕ್ಸ್‌ಪರ್ಟ್ಸ್ ಬಗ್ಗೆಯೂ ಸರ್ವೋಚ್ಚ ನ್ಯಾಯಾಲಯ ಅನುಮಾನ ವ್ಯಕ್ತಪಡಿಸಿದೆ. 'ಎಕ್ಸ್‌ಪರ್ಟ್ಸ್' ಎಂದರೆ ಕಾನೂನು ತಜ್ಞರೇ ಅಥವಾ ನ್ಯಾಯಾಂಗಕ್ಕೆ ಸಂಬಂಧಿಸಿದವರೇ ? ಸರ್ಕಾರ ಸರ್ವೋಚ್ಚ ನ್ಯಾಯಾಲಯದ ಮುಂದೆ ಮಂಡಿಸಿದ ವಾದದ ಪ್ರಕಾರ ಈ ಇಬ್ಬರು ಎಕ್ಸ್‌ಪರ್ಟ್ಸ್‌ಗಳಿಗೆ ಕಾನೂನು ವಿದ್ಯಾರ್ಹತೆಯೂ ಅಗತ್ಯವಿಲ್ಲ. ಈ ದೇಶದ ಬಹುತೇಕ ಕಾನೂನುಗಳಲ್ಲಿ ಎಕ್ಸ್‌ಪರ್ಟ್ಸ್ ಎಂದರೆ ಯಾರು ಎಂಬ ಸ್ಪಷ್ಟತೆ ಇದೆ. ಆದರೆ ಆಯೋಗದ ಎಕ್ಸ್‌ಪರ್ಟ್ಸ್‌ಗಳ ಬಗ್ಗೆ ಈ ರೀತಿ ಸ್ಪಷ್ಟತೆ ಇಲ್ಲದ್ದು ಅನುಮಾನಕ್ಕೆ ಕಾರಣವಾಗಿತ್ತು. ಹಾಗಾಗಿ ಎಕ್ಸ್‌ಪರ್ಟ್ಸ್‌ಗಳ ನೇಮಕಾತಿಯೇ ಪ್ರಶ್ನಾರ್ಹವಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಯಾರಾದರೂ ಇಬ್ಬರು ಸದಸ್ಯರು ನೇಮಕಾತಿಯ ಬಗ್ಗೆ ವೀಟೊ ಚಲಾಯಿಸುವ ಅಧಿಕಾರ ಹೊಂದಿದ್ದೇ ನ್ಯಾಯಾಂಗ ಸ್ವಾತಂತ್ರ್ಯಕ್ಕೆ ಧಕ್ಕೆ ತರುವ ಅಂಶವಾಗಿತ್ತು. ಈ ನಿಟ್ಟಿನಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪು ಅತ್ಯಂತ ಸಮರ್ಪಕವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

## ಸಂವಿಧಾನ ತಿದ್ದುಪಡಿ – ಆಯೋಗ ರಚನೆಕಾಯ್ದೆ ಅಸಂವಿಧಾನಿಕ

ಸುಪ್ರೀಂ ಕೋರ್ಟ್ ಅಡ್ವೋಕೇಟ್ಸ್ – ಆನ್ – ರೆಕಾರ್ಡ್ ಅಸೋಸಿಯೇಶನ್ ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗದ ಸಂವಿಧಾನತೆಯನ್ನು ಪ್ರಶ್ನಿಸಿದ ಅರ್ಜಿಯೇ ೪ನೇ ನ್ಯಾಯಾಧೀಶರ ಪ್ರಕರಣವೆಂದು ಹೆಸರು ಗಳಿಸಿತು. ೫ ನ್ಯಾಯಮೂರ್ತಿಗಳ ನ್ಯಾಯಪೀಠದ ಮುಂದೆ ಮುಖ್ಯವಾಗಿ ಬಂದ ಪ್ರಶ್ನೆಯೆಂದರೆ ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ನ್ಯಾಯಾಂಗ ಸ್ವಾತಂತ್ರ್ಯಕ್ಕೆ ಧಕ್ಕೆ ತಂದಿದೆಯೇ ಎಂಬುದು. ದೀರ್ಘ ವಾದ – ಪ್ರತಿವಾದಗಳ ನಂತರ ನ್ಯಾಯಪೀಠ ನೇಮಕಾತಿ ಆಯೋಗ ಸಂವಿಧಾನ ಬಾಹಿರವೆಂದು ಘೋಷಿಸಿತು. ಕೇಂದ್ರ ಮಂತ್ರಿ ನ್ಯಾಯಾಲಯ ಪಾರ್ಲಿಮೆಂಟಿನ ಸಾರ್ವಭೌಮತೆಗೆ ಪೆಟ್ಟುಕೊಟ್ಟಿದೆ ಎಂದು ಟೀಕಿಸಿದರು. ಇದೊಂದು ರಾಜಕೀಯಾಸಕ್ತ ತೀರ್ಪೆಂದು ಇನ್ನು ಕೆಲವರು ಟೀಕಿಸಿದರು.

## ಪಾರ್ಲಿಮೆಂಟ್ ಬಹುಮತ – ನ್ಯಾಯಾಂಗ

ನ್ಯಾಯಾಂಗದ ಸ್ವಾತಂತ್ರ್ಯ ಸಂವಿಧಾನದ ಪ್ರಮುಖ ಲಕ್ಷಣಗಳಲ್ಲೊಂದು ಎಂಬುದು ವಿವಾದಾತೀತ. ಸರ್ವೋಚ್ಚ ನ್ಯಾಯಾಲಯಕ್ಕಿರುವ ನ್ಯಾಯಿಕ ಪುನರ್ ವಿಮರ್ಶೆಯ ಅಧಿಕಾರ ಕೂಡ ಸಂವಿಧಾನದ ಮೂಲ ಲಕ್ಷಣ ಗಳಲ್ಲೊಂದು. ಅಂದರೆ ಒಂದು ಸಂವಿಧಾನದ ತಿದ್ದುಪಡಿಯಾಗಲೀ ಅಥವಾ ಕಾನೂನಾಗಲೀ ಶಾಸಕಾಂಗ ಎಲ್ಲ ನಿಯಮಗಳನ್ನು ಯಥಾವತ್ತಾಗಿ ಪಾಲಿಸಿದರೂ, ಬಹುಮತದಿಂದಲೊ ಅಥವಾ ಸರ್ವಾನುಮತದಿಂದಲೊ ಅನುಮೋದಿಸಿದ್ದರೂ ಅದು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿತ ಗೊಂಡಾಗ ಅದರ ಸಂವಿಧಾನತೆಯನ್ನು ನಿರ್ಧರಿಸಬೇಕಾದುದು ನ್ಯಾಯಾಂಗದ ಸಂವಿಧಾನಾತ್ಮಕ ಜವಾಬ್ದಾರಿ. ಸಂವಿಧಾನ ತಿದ್ದುಪಡಿ ಅಥವಾ ಕಾಯ್ದೆಯನ್ನು ಸಂವಿಧಾನದ ಒರೆಗೆ ಹಚ್ಚಿ ಅಸಂವಿಧಾನಿಕವೆಂದು ನ್ಯಾಯಾಲಯ ತೀರ್ಮಾನಿಸಿದರೆ ಅದು ಪಾರ್ಲಿಮೆಂಟಿನ ಸಾರ್ವಭೌಮತೆಗೆ ಪೆಟ್ಟುಕೊಟ್ಟಿದೆ ಎಂದು ಟೀಕಿಸುವುದು ಸಮರ್ಥನೀಯವಲ್ಲ. ಸಂವಿಧಾನದ ೯೯ನೇ ತಿದ್ದುಪಡಿ ಮತ್ತು ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗ ಸಂವಿಧಾನದ ಮೂಲ ಲಕ್ಷಣವನ್ನೇ ಬದಲಾಯಿಸಿದೆ. ಆದ್ದರಿಂದ ಇವು ಅಸಂವಿಧಾನಿಕವೆಂದು ನ್ಯಾಯಾಲಯ ತೀರ್ಮಾನಿಸಿದ್ದು ಸಂವಿಧಾನದ ಮಾನದಂಡದಿಂದಲೇ ಹೊರತು ಪಾರ್ಲಿಮೆಂಟಿನ ಬಹುಮತ ಅಥವಾ ಸರ್ವಾನುಮತದ ಆಧಾರದ ಮೇಲಲ್ಲ. ಅದನ್ನು ನ್ಯಾಯಾಂಗ ಶಾಸಕಾಂಗದ ಮೇಲೆ ನಡೆಸಿದ ಅತಿಕ್ರಮಣ ಎಂದು ಅರ್ಥೈಸುವುದು ಸರಿಯಲ್ಲ.

## ನ್ಯಾಯಾಂಗದ ಜವಾಬ್ದಾರಿ

ಅಮೆರಿಕದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಗಳಾಗಿದ್ದ ಅರ್ಲ್ ವಾರೆನ್ ಹೇಳುವಂತೆ ನಮ್ಮ ನ್ಯಾಯಾಧೀಶರು ಯತಿಗಳಲ್ಲ, ವಿಜ್ಞಾನಿಗಳಲ್ಲ. ಆದರೆ ರಾಷ್ಟ್ರೀಯ ಜೀವನ ಧಾರೆಯಲ್ಲಿ ಪಾಲ್ಗೊಂಡವರು. ಹಾಗಾಗಿ ಒಂದೆಡೆ ಕಾನೂನನ್ನು ಕಠಿಣತೆಯ ಅಪಾಯ ಮತ್ತು ಇನ್ನೊಂದೆಡೆ ಅಮೂರ್ತತೆಯ ನಡುವೆ ನಡೆಸಬೇಕಾದವರು. ಈ ಮಾತು ನಮ್ಮ ದೇಶದ ನ್ಯಾಯಾಧೀಶರಿಗೂ ಅನ್ವಯಿಸುತ್ತದೆ. ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಇದಕ್ಕೊಂದು ನಿದರ್ಶನ. ಇಂದು ನಮ್ಮ ಮುಂದಿರುವ ಪ್ರಶ್ನೆಯೆಂದರೆ ಕೊಲಿಜಿಯಂ ಪದ್ಧತಿಯಲ್ಲಿನ ನೇಮಕಾತಿ ಸಮರ್ಪಕವೇ ಎಂಬುದು. ರಾಷ್ಟ್ರೀಯ ನ್ಯಾಯಾಂಗ ನೇಮಕಾತಿ ಆಯೋಗದ ಬಗ್ಗೆ ತೀರ್ಪು ನೀಡಿದ ಸರ್ವೋಚ್ಚ ನ್ಯಾಯಾಲಯದ ನ್ಯಾಯಪೀಠ ಕೂಡ ಕೊಲಿಜಿಯಂ ಪದ್ಧತಿಯ ಅವಗುಣಗಳನ್ನು, ವೈಫಲ್ಯಗಳನ್ನು ಚರ್ಚಿಸಿದೆ. ಈ ನ್ಯಾಯಪೀಠದ ನ್ಯಾಯಮೂರ್ತಿಗಳಲ್ಲೊಬ್ಬರಾದ ಚಲಮೇಶ್ವರ್‌ರವರು ಕೊಲಿಜಿಯಂ ಬಗ್ಗೆ ಮಾಡಿರುವ ಟೀಕೆ ಗಮನಾರ್ಹವಾದದ್ದು ಮತ್ತು ಶ್ಲಾಘನೀಯವಾದದ್ದು. ಇದೇ ನ್ಯಾಯಪೀಠ ಕೊಲಿಜಿಯಂ ಪದ್ಧತಿಯ ಸುಧಾರಣೆಯ ಬಗ್ಗೆ ಅಭಿಪ್ರಾಯ ಪಡೆಯಲು ಪ್ರಕರಣ ಮುಂದುವರಿಸಿದೆ. ಕೇಂದ್ರ ಸರ್ಕಾರ ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸುವುದಿಲ್ಲವೆಂದು ಹೇಳಿ ತನ್ನ ಅಸಮಾಧಾನ ಸೂಚಿಸಿದೆ. ಉನ್ನತ ನ್ಯಾಯಾಲಯಗಳ ನೇಮಕಾತಿ ಪ್ರಕ್ರಿಯೆಗಳಲ್ಲಿ ಸಂಪೂರ್ಣ ಪಾರದರ್ಶಕತೆ ಅತ್ಯಂತ ಅವಶ್ಯಕ. ಪರಿಶೀಲನಾ ವಲಯಕ್ಕೆ ಬಂದಂತಹ ಅಭ್ಯರ್ಥಿಗಳು ಯಾರೆಂದು ವಕೀಲ ಸಮುದಾಯಕ್ಕೆ ಮತ್ತು ಜನತೆಯ ಗಮನಕ್ಕೆ ತರಬೇಕಾದದ್ದು ಅವಶ್ಯಕ. ಅಂತಹ ಅಭ್ಯರ್ಥಿಗಳ ಅನುಭವ, ಪರಿಶ್ರಮ, ಪ್ರಾಮಾಣಿಕತೆ, ಚಾರಿತ್ರ್ಯ ಇತ್ಯಾದಿಗಳ ಕೂಲಂಕಷ ಪರಿಶೀಲನೆಗೆ ಸರ್ವೋಚ್ಚ ನ್ಯಾಯಾಲಯ ತನ್ನದೇ ಆದ ವ್ಯವಸ್ಥೆ ರೂಪಿಸಬೇಕು. ಎಲ್ಲಕ್ಕಿಂತ ಹೆಚ್ಚಾಗಿ ನೇಮಕಾತಿಯ ನಂತರ ನ್ಯಾಯಮೂರ್ತಿಗಳ ನಡತೆ ಮತ್ತು ಅವರನ್ನು ಶಿಸ್ತು ಕ್ರಮಕ್ಕೆ ಒಳಪಡಿಸುವ ವ್ಯವಸ್ಥೆ ಜಾರಿಗೊಳಿಸಬೇಕು. ನ್ಯಾಯಾಲಯ ನಿಂದನೆಯ ಕಾನೂನನ್ನು ಅದಕ್ಕನುಗುಣವಾಗಿ ತಿದ್ದುಪಡಿ ಮಾಡಬೇಕು. ನ್ಯಾಯಮೂರ್ತಿಗಳಿಂದ ನ್ಯಾಯಮೂರ್ತಿಗಳ ನೇಮಕಾತಿ ಭಾರತದ ನ್ಯಾಯಾಂಗ ತನ್ನದಾಗಿಸಿಕೊಂಡಿರುವುದರಿಂದ ಹೆಚ್ಚು ಜವಾಬ್ದಾರಿಯನ್ನು ತೋರಿಸಬೇಕಿತ್ತು. ಕೊಲಿಜಿಯಂ ಪದ್ಧತಿ ಭರವಸೆ ಕಳೆದುಕೊಂಡಿದೆ ಎಂಬುದು ಬಹುಜನರ ಅಭಿಪ್ರಾಯ. ಈಗ ಅದೇ ಕೊಲಿಜಿಯಂಗೆ ಸರ್ವೋಚ್ಚ ನ್ಯಾಯಾಲಯ ತನ್ನ ತೀರ್ಪಿನ ಮೂಲಕ ಪುನರ್ಜೀವ ಕೊಟ್ಟಿದೆ. ಈ ಪದ್ಧತಿಗೆ ಕಾಯಕಲ್ಪ ಚಿಕಿತ್ಸೆ ಕೊಡಬೇಕಾದದ್ದು ಸರ್ವೋಚ್ಚ ನ್ಯಾಯಾಲಯದ ಆದ್ಯ ಕರ್ತವ್ಯ. ಹಾಗಾದಲ್ಲಿ ಮಾತ್ರ ನ್ಯಾಯಾಂಗದ ಬಗ್ಗೆ ಜನತೆಯ ಭರವಸೆ ಮತ್ತೆ ಚಿಗುರಬಹುದು. ಹಾಗಾಗದಿದ್ದಲ್ಲಿ ನ್ಯಾಯಾಂಗವೇ ಅದಕ್ಕೆ ಹೊಣೆ.



**ಮುರಳಿಧರ ಚಿಕ್ಕಮಗಳೂರು**
ವಕೀಲರು, ನಂ. ೩, ಡಯಾಗನಲ್ ರಸ್ತೆ, ಕೆನರಾ ಬ್ಯಾಂಕ್ ಮಹಡಿ ಮೇಲೆ
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪

ಕಾವ್ಯಲೋಕ



# ನನಗೆ ಸ್ವಲ್ಪ ಹೇಳಿ



ಹೇಳಿ ನನಗೆ...
ನನ್ನ ಕನಸುಗಳನ್ನು ಅದು ಹೇಗೆ ನಿಷೇಧಿಸುತ್ತೀರಿ ?
ನನ್ನ ಕನಸುಗಳಲ್ಲಿ ಜಿಗಿಯುವ ಮರಿಮೀನುಗಳ
ಕಣ್ಣುಗಳಲ್ಲಿ ಓಡಾಡುವ ಕಲ್ಪನೆಗಳನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ಕನಸುಗಳಲ್ಲಿ ನಾನು ಸಮುದ್ರವಾಗುತ್ತೇನೆ
ಅಕ್ಷರಗಳು ನನ್ನ ಮೇಲೆ
ದೋಣಿಗಳಾಗಿ
ಹಾಡುಗಳಾಗಿ
ಪಯಣಿಸುತ್ತವೆ

ಕನಸುಗಳಲ್ಲಿ ನಾನು ಮತ್ತು ಆಕಾಶ ಅಪ್ಪಿಕೊಳ್ಳುತ್ತೇವೆ
ಹಾಗಾದರೆ ನನ್ನ ರೆಪ್ಪೆಗಳಿಗೆ ನೇತಾಡುವ
ಪಾತರಗಿತ್ತಿ ರೆಕ್ಕೆಗಳ ಬಣ್ಣಗಳನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ಹಸುಗಳನ್ನು ಹೊಡೆದುಕೊಂಡು
ಈ ಕಡೆಗೆ ಬರಬೇಡವೆಂದು
ಅವನಿಗೆ ಹೇಳಿ
ಮಾನವ ದೀಪಗಳ ಮಹಾದ್ವೀಪದಲ್ಲಿ
ಅವನದೇನು ಕೆಲಸ ?

ಹೇಳಿ ನನಗೆ ಸ್ವಲ್ಪ
ನನ್ನ ಹೃದಯದ ಬಡಿತದಲ್ಲಿ ಸರಪರವೆನ್ನುವ
ಬೆಂಕಿಯ ಬಾವುಟವನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ಎರಡೂ ಕಣ್ಣುಗಳನ್ನು
ಎರಡು ಪಾದಗಳನ್ನಾಗಿ ಮಾಡಿ
ಚಿಕ್ಕಮಕ್ಕಳ ಸ್ವಪ್ನಲೋಕದಲ್ಲಿ
ಸಂಚರಿಸುತ್ತೇನೆ...

ರಾತ್ರಿಗಳನ್ನು ಹೆಗಲಮೇಲೆ ಹಾಕಿಕೊಂಡು
ಮರಗಿಡಗಳನ್ನು ಅಪ್ಪಿಕೊಂಡು
ಜನರ ಕೊರಳಲ್ಲಿ ನಕ್ಷತ್ರಗಳ
ಮಾಲೆ ಹಾಕಿ ಹೋಗುತ್ತೇನೆ

ನನ್ನ ಪಾದಗಳಲ್ಲಿ ನಿದ್ರಿಸುತ್ತಿರುವ
ಕಾಡಿನ ಶ್ವಾಸವನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ಮನುಷ್ಯರನ್ನು ತಿನ್ನುವ ಮತ ಅವನದು
ನಮ್ಮ ಅನ್ನದ ತಾಟಿನ ಹತ್ತಿರ ಅವನದೇನು
ಕೆಲಸ ?
ಹೋಗಲು ಹೇಳಿ
ಅಂದ ಹಾಗೆ ನಾನು ಬೆಳದಿಂಗಳು ತಿಂದು
ಬೆಳಕನ್ನು ಕುಡಿಯುತ್ತೇನೆ
ದಿಗಂತಗಳಲ್ಲಿ ಅನಂತಾನಂದ
ತಾಂಡವ ಮಾಡುತ್ತೇನೆ

ನನ್ನ ಬೆನ್ನು ಮೂಳೆಯಲ್ಲಿ
ಚಳಿ ಕಾಯಿಸಿಕೊಳ್ಳುವ ವೀರರನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ನನಗೆ ಸ್ವಲ್ಪ ಹೇಳಿ
ನನ್ನ ನೋಟದ ಪ್ರಶ್ನೆಗಳ ಕೊನೆಯಲ್ಲಿ
ನಲಿದಾಡುವ ಪಾರಿವಾಳಗಳನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ಮನುಷ್ಯರು ಪಾರಿವಾಳಗಳು ಸೇರಿ
ಆಡಿಕೊಳ್ಳುವ ನನ್ನ ಪುಸ್ತಕಗಳ ಆಲಯ
ಪ್ರಾಂಗಣದಲ್ಲಿ ಮುಸ್ಸಂಜೆಯ ನೆರಳನ್ನು
ಅದು ಹೇಗೆ ನಿಷೇಧಿಸುತ್ತೀರಿ ?

ನಾವು ಮನುಷ್ಯರು ಕಣೋ
ಅಪ್ಪಿಕೊಳ್ಳುವದು ಮಾತ್ರ ಗೊತ್ತಿರುವ
ಪುಟ್ಟ ಕಂದಮ್ಮಗಳು
ಕಂದಮ್ಮಗಳಿಗೆ ಜೋಗುಳ ಹಾಡದವರನ್ನು
ಮನುಷ್ಯರನ್ನು ಅದು ಹೇಗೆ ಪಾಲಿಸುತ್ತಾರೆ ?

ಹೇಳಿ ನನಗೆ...
ಮನುಷ್ಯನನ್ನು ಮನುಷ್ಯದಿಂದ
ಅದು ಹೇಗೆ ನಿಷೇಧಿಸುತ್ತೀರಿ ?
ನನ್ನಿಂದ ನನ್ನ ಕವಿತೆಯನ್ನು
ಅದು ಹೇಗೆ ನಿಷೇಧಿಸುತ್ತೀರಿ ?

---

ತೆಲುಗು ಮೂಲ : **ಪ್ರಸಾದಮೂರ್ತಿ**
ಕನ್ನಡಕ್ಕೆ : **ರಾಮಣ್ಣ ಆರ್ಹೆಜ್ಜೆ**

೧-೪-೮೪೯/೧೦೭, ಅಂಬೇಡ್ಕರ್ ನಗರ, ಐ. ಬಿ. ರಸ್ತೆ
ರಾಯಚೂರು – ೫೮೪ ೧೦೧




ಶ್ರೀಮತಿ ಎಚ್. ಆರ್. ಲೀಲಾವತಿಯವರು ಕರ್ನಾಟಕದ ಅಪರೂಪದ ಸಂಗೀತ ಪ್ರತಿಭೆಗಳಲ್ಲಿ ಒಬ್ಬರು. ೧೯೩೪ರ ಫೆಬ್ರವರಿ ೮ರಂದು ಜನಿಸಿದ ಲೀಲಾವತಿಯವರು ಕನ್ನಡ ಸಾಹಿತ್ಯ, ನಾಟಕ ಹಾಗೂ ಕರ್ನಾಟಕ ಶಾಸ್ತ್ರೀಯ ಸಂಗೀತದ ಅಭಿರುಚಿಯುಳ್ಳ ಕುಟುಂಬದಲ್ಲಿ ಬೆಳೆದು ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಕಛೇರಿ ಮಾಡುವಷ್ಟು ಪರಿಣತಿಯನ್ನು ಪಡೆದದ್ದಲ್ಲದೆ ಹಿಂದಿ ಭಜನ್, ಕನ್ನಡ ಗೀತೆಗಳು, ರವೀಂದ್ರ ಸಂಗೀತ, ಮುಂತಾದವುಗಳಲ್ಲಿಯೂ ಪರಿಣತಿ ಗಳಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಬಿ.ಎ. ಪದವೀಧರೆ ಲೀಲಾವತಿಯವರು ಇಂದಿನ ಸುಗಮ ಸಂಗೀತ ಕ್ಷೇತ್ರಕ್ಕೆ ಗಟ್ಟಿಯಾದ, ಅರ್ಥಪೂರ್ಣವಾದ ನೆಲೆಗಟ್ಟನ್ನು ಒದಗಿಸಿಕೊಟ್ಟ ಆದ್ಯರಲ್ಲಿ ಅತಿ ಪ್ರಮುಖರು. ಸಾಹಿತ್ಯ– ಸಂಗೀತಾಸಕ್ತ, ಗಾಯಕ, ಸಂಯೋಜಕ ಎಸ್. ಜಿ. ರಘುರಾಂ ಅವರೊಂದಿಗಿನ ವಿವಾಹ ಅವರ ಕಲೆಯನ್ನು ಮತ್ತಷ್ಟು ಬೆಳೆಸಿ, ಬೆಳಗಿಸಿತು. ಆಕಾಶವಾಣಿಯ 'ಎ–ಟಾಪ್' ದರ್ಜೆಯ ಸಂಯೋಜಕಿಯಾದ ಶ್ರೀಮತಿ ಎಚ್. ಆರ್. ಲೀಲಾವತಿಯವರು ಸುಗಮ ಸಂಗೀತ ಅಕಾಡೆಮಿಯ ಸ್ಥಾಪಕರೂ ಕೂಡ. ಅವರ ಈ ಕಾರ್ಯತತ್ಪರತೆಯಿಂದಾಗಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷೆ, ಕರ್ನಾಟಕ ಸುಗಮ ಸಂಗೀತ ಪರಿಷತ್ತು ನಡೆಸಿದ ಸಂಗೀತ ಸಮ್ಮೇಳನದ ಅಧ್ಯಕ್ಷೆ , ಆಕಾಶವಾಣಿಯ ಧ್ವನಿ ಪರೀಕ್ಷಾ ಪ್ಯಾನಲ್ ಸದಸ್ಯೆ, ಚಲನಚಿತ್ರ ಮಂಡಲಿಯ ಆಯ್ಕೆ ಸಮಿತಿಯ ಸದಸ್ಯೆ... ಹೀಗೆ ಹಲವು ಜವಾಬ್ದಾರಿಯುತ ಹುದ್ದೆಗಳನ್ನು ನಿರ್ವಹಿಸಿದ್ದಾರೆ. ಸಹಜವಾಗಿಯೇ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾತಿಲಕ, ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸರ್ಕಾರದ ಶ್ರೀ ಸಂತ ಶಿಶುನಾಳ ಪ್ರಶಸ್ತಿ, ಡಾ॥ ಎಸ್. ಕೆ. ಕರೀಂಖಾನ್ ಪ್ರಶಸ್ತಿ, ಅತ್ತಿಮಬ್ಬೆ ಪ್ರತಿಷ್ಠಾನದ ಕಾವ್ಯಗಂಗಾ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಶತಮಾನೋತ್ಸವ ಗೌರವ ಪ್ರಶಸ್ತಿ ಹೀಗೆ ಎಲ್ಲ ಪ್ರಮುಖ ಪ್ರಶಸ್ತಿಗಳೂ ಇವರ ಮುಡಿಯಲ್ಲಿವೆ. ಸಾರಸ್ವತಲೋಕಕ್ಕೂ ಲೀಲಾವತಿಯವರದು ಗಮನಾರ್ಹ ಕೊಡುಗೆ. ಅವರ ಕಥಾಸಂಕಲನ, ಕವನ ಸಂಕಲನ, ಸಂಗೀತ ಕುರಿತ ಲೇಖನಗಳು, ಮಕ್ಕಳ ಕಥೆಗಳು, ವ್ಯಕ್ತಿ ಚಿತ್ರಣಗಳು... ಹೀಗೆ ಹದಿನಾಲ್ಕು ಕೃತಿಗಳು ಪ್ರಕಟವಾಗಿವೆ. ಅವುಗಳಲ್ಲಿ ಐದು ಕೃತಿಗಳು ಪ್ರಶಸ್ತಿಗಳಿಗೆ ಪಾತ್ರವಾಗಿವೆ.

ಎಂಬತ್ತರ ಹರೆಯದ ಲೀಲಾವತಿಯವರ ಬೌದ್ಧಿಕ, ಕಲಾತ್ಮಕ ಆಸಕ್ತಿ ನಮ್ಮೆಲ್ಲರಿಗೂ ಮಾದರಿಯಾಗುವಂತಹುದು.

# ಮತ್ತೆ ಮಳೆ ಹೊಯ್ಯುತಿದೆ ಎಲ್ಲ ನೆನಪಾಗುತಿದೆ

– ಎಚ್. ಆರ್. ಲೀಲಾವತಿ

## ಶ್ರೀಮತಿ ಎಚ್. ಆರ್. ಲೀಲಾವತಿಯವರೊಂದಿಗೆ ಒಂದು ಸಂಜೆ

ಸಂದರ್ಶಕರು : **ಶೈಲಜ, ಟಿ. ಎಸ್. ವೇಣುಗೋಪಾಲ್**

ಲೇಖನ ಸಿದ್ಧಗೊಳಿಸಿದವರು : **ಟಿ. ಎಸ್. ವೇಣುಗೋಪಾಲ್**

**ಪ್ರ : ನೀವು ಮತ್ತು ಕಾಳಿಂಗರಾಯರು ಸುಗಮ ಸಂಗೀತ ಕ್ಷೇತ್ರಕ್ಕೆ ಪ್ರವೇಶಿಸಿದವರಲ್ಲಿ ಮೊದಲಿಗರು. ಈ ಕ್ಷೇತ್ರಕ್ಕೆ ಬರೋದಕ್ಕೆ ಕಾರಣ ಏನು?**

**ಲೀಲಾವತಿ :** ಈ ಕ್ಷೇತ್ರಕ್ಕೆ ಬರೋದಕ್ಕೆ ಮನೆ ಪರಿಸರವೇ ಕಾರಣ. ತಮ್ಮ ತಂದೆ ತಾಯಿ ಇಬ್ಬರೂ ಹಾಡ್ತಿದ್ದರು. ಇಂಗ್ಲಿಷ್ ಗೀತೆಗಳಲ್ಲಿದ್ದ ಎಲ್ಲಾ ಹಾಡುಗಳಿಗೂ ರಾಗ ಸಂಯೋಜಿಸಿ ಅವರು ಹಾಡ್ತಾ ಇದ್ರು. ಬಿಎಂಶ್ರೀ ಅವರ 'ಅಶ್ವಥ್ಥಾಮನ್' ನಾಟಕವನ್ನು ನಿರ್ದೇಶಿಸಿ ಅದರ ಮೇಳನಾಯಕನ ಹಾಡುಗಳನ್ನೆಲ್ಲಾ ಅವರೇ ಹಾಡ್ತಿದ್ರು. ಮುಂದೆ ಇದೇ ಒಂದು ಪ್ರಕಾರ ಆಗುತ್ತೆ ಅಂತ ನಮಗೆ ಗೊತ್ತಿರಲಿಲ್ಲ. ಅದನ್ನೆಲ್ಲಾ ಅವರು ಮನೇಲಿ ಹಾಡ್ತಿದ್ದಾಗ ಅದನ್ನು ಕೇಳಿ ನಾನೂ ಅಭ್ಯಾಸ ಮಾಡಿಕೊಳ್ತಾ ಇದ್ದೆ. ನಮ್ಮ ತಾಯಿ ನಾಟಕದ ಕೊಟ್ಟೂರಪ್ಪನವರ ಶಿಷ್ಯೆ. ಪ್ರತಿನಿತ್ಯ ಅಮ್ಮ ಹಾರ್ಮೋನಿಯಂ ನುಡಿಸಿಕೊಂಡು ಹಾಡೋರು. ನಾನು ಮತ್ತು ನನ್ನ ಮೂವರು ಸಹೋದರರು ಕುಳಿತು ಕೇಳ್ತಿದ್ವಿ. ಕೊಟ್ಟೂರಪ್ಪನವರು ನಮ್ಮ ತಾಯಿಗೆ ಶಾಸ್ತ್ರೀಯ ಸಂಗೀತ, ನಾಟಕದ ಹಾಡುಗಳೇ ಅಲ್ಲದೆ ಗಝಲ್‌ಗಳನ್ನೂ ಹೇಳಿಕೊಟ್ಟಿದ್ರು. ಕೊಟ್ಟೂರಪ್ಪನವರು ಬರೆದುಕೊಟ್ಟಿರುವ ಪುಸ್ತಕ ಈಗಲೂ ನನ್ನ ಬಳಿ ಇವೆ. ಆಗಿನ ಕಾಲಕ್ಕೆ ನಾಗಪುರ ಮತ್ತು ವಿಜಯವಾಡದಲ್ಲಿ ಸ್ವರ ಸಮೇತ ಹಾಡು ಗಳಿರುವ ಪುಸ್ತಕಗಳು ಪ್ರಕಟವಾಗ್ತಾ ಇದ್ವು, ಅವುಗಳನ್ನು ನಮ್ಮಮ್ಮ ತರಿಸಿಕೊಳ್ತಿದ್ರು.

ಆಗಲೇ ನಮ್ಮನೇನಲ್ಲಿ ಗ್ರಾಮಾಫೋನ್ ರೆಕಾರ್ಡ್ ಇತ್ತು. ಕೇಸರ್‌ಬಾಯಿ ಕೇಳ್ಕರ್, ಮೋಗೂಬಾಯಿ ಕುರ್ಡೀಕರ್ ಇವರ ಮುದ್ರಿಕೆಗಳು, ಸೈಗಲ್, ಪಂಕಜ್ ಮಲ್ಲಿಕ್ ಇವರ ಸಿನಿಮಾ ಹಾಡುಗಳು ಇವೆಲ್ಲವನ್ನೂ ನಾವು ಕೇಳ್ತಿದ್ವಿ. ಹೀಗಾಗಿ ಎಲ್ಲಾ ಸ್ವರೂಪದ ಹಾಡುಗಳೂ ಕಿವಿಗೆ ಬೀಳ್ತಾ ಇದ್ದವು. ನಮ್ಮ ತಾಯಿ ಹರಿಕಥೆ ರಾಮಣ್ಣೋರ ಮೊಮ್ಮಗಳು. ಅವರು ಜಾವಳಿಗಳನ್ನ ಬರೆಯುತ್ತಿದ್ದರು. ಹಾಗಾಗಿ ಸಂಗೀತ ಎನ್ನುವುದು ವಂಶವಾಹಿನಿಯಲ್ಲೇ ಇತ್ತು.

ನಾನು ಒಂದನೇ ತರಗತಿಯಲ್ಲಿದ್ದಾಗ ನನ್ನ ಗೆಳತಿಯರಿಂದ ತಮಿಳು, ತೆಲುಗು, ಮರಾಠಿ ಭಾಷೆಯ ಹಾಡುಗಳನ್ನು ಕಲಿತೆ. ಸುಗಮ ಸಂಗೀತ ಪ್ರಕಾರದಲ್ಲಿ ರುಚಿ ಹುಟ್ಟಲು ಇವೆಲ್ಲವೂ ಕಾರಣ ವಾಯ್ತು. ನಾನು ಆಗೆಲ್ಲಾ ಸಿನಿಮಾ ಹಾಡುಗಳನ್ನು ತುಂಬಾ ಹಾಡ್ತಿದ್ದೆ.

೧೯೪೯ರಲ್ಲಿ ಕ್ರೈಸ್ಟ್ ದ ಕಿಂಗ್ ಶಾಲೆಯಲ್ಲಿ ಎಸ್‌ಎಸ್‌ಎಲ್‌ಸಿ ಓದ್ತಿದ್ದೆ. ಆಗ ಮಕ್ಕಳು ಆಕಾಶವಾಣಿಯ ಕಾರ್ಯಕ್ರಮವನ್ನು ಕಡ್ಡಾಯವಾಗಿ ಕೇಳಬೇಕಾಗಿತ್ತು. ಆಗ ಆಕಾಶವಾಣಿಯಲ್ಲಿ ಕುವೆಂಪು ಅವರ 'ಜಯ ಜಯ ಜಯ ವಿಜಯೀಭವ ವೈಜಯಂತಿ,' ಧರಣೇಂದ್ರಯ್ಯನವರ ಕವಿತೆ 'ಪುಣ್ಯಭೂಮಿ ಭಾರತಿ ಜನ್ಮಭೂಮಿ ಭಾರತಿ' ಎಂಬ ಎರಡು ಭಾವಗೀತೆಗಳು ಮೂಡಿ ಬಂದ್ವು. ಅದನ್ನು ಕೇಳಿ ನನಗೆ ರೋಮಾಂಚನವಾಯ್ತು. ಯಾರಪ್ಪಾ ಇಷ್ಟು ಚೆನ್ನಾಗಿರೋ ಹಾಡನ್ನು ಮಾಡಿರೋರು ಅಂತ ಯೋಚಿಸ್ತಾ ಇದ್ದೆ. ಕೊನೆಯಲ್ಲಿ ಎ. ವಿ. ಕೃಷ್ಣಮಾಚಾರ್ ಅವರ ಸಂಗೀತ ಅಂತ ಹೇಳಿದರು. ಇವರ ಬಳಿ ಕಲೀಬೇಕಂತ ಆಸೆಯಾಯ್ತು. ನನ್ನ ಗೆಳತಿ ಪ್ರಭಾವತಿ, "ನೀನು ಅವರ ಹತ್ರ, ಕಲೀಬೇಕೇನೇ ? ಅವನು ನಮ್ಮ ಮನೇಗೆ ಬರ್ತಾನೆ. ನಮ್ಮ ತಂದೆ ಹತ್ತಿರ ಪಿಟೀಲು ಕಲೀತಾನೆ" ಅಂತ ಅಂದ್ಳು. ಅವಳು ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರ ಮಗಳು. ಹೀಗೆ ನಾನು ಕೃಷ್ಣಮಾಚಾರ್ ಅವರ ಬಳಿ ಭಾವಗೀತೆ ಕಲಿಯೋದಕ್ಕೆ ಹೋದೆ.



ಅ. ನ. ಕೃಷ್ಣರಾಯರ ಸಲಹೆಯ ಮೇರೆಗೆ ೧೯೪೯ರಲ್ಲಿ ಕಾಳಿಂಗರಾವ್ ಭಾವಗೀತೆ ಮತ್ತು ಜನಪದ ಗೀತೆಗಳನ್ನು ಹಾಡೋದಕ್ಕೆ ಶುರು ಮಾಡಿದ್ರು. ಅದಕ್ಕೆ ಮೊದಲು ಅವರು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತವನ್ನು ಆಕಾಶವಾಣಿಯಲ್ಲಿ ಹಾಡ್ತಿದ್ರು. ನಾನದನ್ನು ಕೇಳಿದ್ದೆ. ನಮ್ಮನೇಲಿ ರೇಡಿಯೋ ಇರಲಿಲ್ಲ. ರೇಡಿಯೋ ಇರೋವ್ರ ಮನೆಗೆ ಹೋಗಿ ಕೇಳ್ತಿದ್ವಿ. ಇದೇ ಸಮಯದಲ್ಲಿ ಆಕಾಶವಾಣಿಯಲ್ಲಿ ಭಾವಗೀತೆಗಾಗಿ ಪ್ರತಿಭಾಶೋಧ ಪ್ರಾರಂಭಿಸಿದ್ರು. ಕನ್ನಡ ಗೀತೆಗಳನ್ನು ಹಾಡಿಸೋದಕ್ಕೆ ಮಕ್ಕಳನ್ನು ಕಳಿಸಿ ಅಂತ ಶಾಲೆಗಳಿಗೆಲ್ಲಾ ಮಾಹಿತಿ ಕಳಿಸಿದ್ದರು. ನಾನು ಬಿಎಂಶ್ರೀ ಅವರ ಅನುವಾದದ 'ಅನಾಥೆಯಿವಳು' ಎನ್ನುವ ಹಾಡನ್ನು ಹಾಡಿದೆ.

ಅಷ್ಟೊತ್ತಿಗೆ ನಾನು ಕೃಷ್ಣಮಾಚಾರ್ ಅವರ ಬಳಿ ಕಲಿಯೋದಕ್ಕೆ ಪ್ರಾರಂಭಿಸಿದ್ದೆ. ಪ್ರತಿಭಾಶೋಧ ಆಗಿ ಒಂದು ತಿಂಗಳ ನಂತರ ಆಕಾಶವಾಣಿಯಿಂದ ಕಾಂಟ್ರಾಕ್ಟ್ ಬಂತು. ಆಕಾಶವಾಣಿಯಲ್ಲಿ ನಾನು ಮೊದಲು ಹಾಡಿದ್ದು ಕೃಷಿರಂಗದಲ್ಲಿ 'ಹರದಿ ಪಾರ್ವತಿದೇವಿ ಪರಮ ಸಂತೋಷದಲಿ ಸರಸ ವಾಡುತ ತನ್ನ ಪುರುಷರೊಡನೆ' ಅನ್ನೋ ಜನಪದ ಗೀತೆ. ಆಗ ಕಾಳಿಂಗರಾವ್ ಹಾಡ್ತಾ ಇದ್ದರು ಮತ್ತು ಶ್ಯಮಂತಕಮಣಿ ನರೇಂದ್ರನ್ ಎಂಬಾಕೆ ಸ್ವತಃ ಸಂಗೀತ ಸಂಯೋಜಿಸಿ ಹಾಡ್ತಿದ್ದಳು. ಅವಳು ನನಗಿಂತ ಮೊದಲೇ ಕೃಷ್ಣಮಾಚಾರ್ ಅವರ ಶಿಷ್ಯೆ ಯಾಗಿದ್ದಳು. ಅವಳು ಮಕ್ಕಳ ಡಾಕ್ಟರ್, ಇಂಗ್ಲೆಂಡ್‌ಗೆ ಹೊರಟುಹೋದಳು. ಹಾಗಾಗಿ ಹೆಚ್ಚಿಗೆ ಬೆಳೆಸಿಕೊಳ್ಳಲಿಲ್ಲ. ಆಗೆಲ್ಲ ಭಾವಗೀತೆ ಹಾಡ್ತಾ ಇದ್ದವರು ನಾನು ಮತ್ತು ಕಾಳಿಂಗರಾವ್ ಇಬ್ಬರೇ. ತಿಂಗಳಿಗೆ ಎರಡು ಮೂರು ಕಾರ್ಯಕ್ರಮ ಇರ್ತಾ ಇತ್ತು. ಆ ಸಮಯದಲ್ಲಿ ಆಕಾಶವಾಣಿಗೆ ರಾಜಪ್ಪ ಶೆಟ್ರು ಅನ್ನೋರು ಪ್ರೋಗ್ರಾಂ ಎಕ್ಸಿಕ್ಯುಟಿವ್ ಆಗಿ ಬಂದರು. ಅವರಿಗೆ ಹಿಂದಿ ಚೆನ್ನಾಗಿ ಬರ್ತಾ ಇತ್ತು. ನನ್ನ ಹಾಡು ಕೇಳಿ, ಹರಿವಂಶ ರಾಯ್ ಬಚ್ಚನ್ ಅವರ ಗೀತೆಗಳಿಗೆ ರಾಗ ಸಂಯೋಜಿಸಿ, ತಾವೇ ನಿರೂಪಣೆ ನೀಡಿ ನನ್ನಿಂದ ಹಾಡ್ಸಿದ್ರು. ಇದಾದ ಮೇಲೆ ಒಂದು ಕನ್ನಡ ಮತ್ತು ಒಂದು ಹಿಂದಿ ಕಾರ್ಯಕ್ರಮ ಹೀಗೆ ಹಾಡಲಾರಂಭಿಸಿದೆ. ತುಂಬಾ ಜನ ಹಿಂದಿ ಹಾಡುವ ಲೀಲಾವತಿ ಬೇರೆ ಮತ್ತು ಕನ್ನಡ ಹಾಡುವ ಲೀಲಾವತಿ ಬೇರೆ ಅಂತ ತಿಳಿದುಕೊಂಡಿದ್ದರು. ಆ ಸಮಯದಲ್ಲಿ ನನ್ನ ಬಿಟ್ರೆ ಅಬ್ದುಲ್ ಗಫೂರ್ ಅನ್ನೋರು ಹಿಂದಿ ಹಾಡು ಹಾಡ್ತಿದ್ರು. ಅವರು ಬೇಗ ಹೋಗಿಬಿಟ್ರು. ನಾನು ಬಂಗಾಳಿ ಅಥವಾ ಹಿಂದಿ ಅಥವಾ ತೆಲುಗು ಹಾಡುಗಳನ್ನು ಹಾಡಿದಾಗ ನನ್ನ ಆ ಭಾಷೆಗಳ ಉಚ್ಚಾರವನ್ನು ಎಲ್ಲರೂ ಮೆಚ್ಚಿಕೊಂಡಿದ್ದರು. ಅದು ನನಗೆ ತುಂಬಾ ಸಹಜವಾಗಿ ಬಂದಿತ್ತು. ಉತ್ತರದ ರಾಜ್ಯಗಳಲ್ಲಿ ನನ್ನನ್ನು ಹಿಂದಿಯವಳು ಅಂತಾನೇ ಭಾವಿಸಿದ್ರು. ಪಾಟ್ನಾ, ಕಲ್ಕತ್ತಾ, ಗೌಹಾಟಿ ಮುಂತಾದ ಆಕಾಶವಾಣಿಗಳಿಗೂ ನಾನು ಹಾಡಿದ್ದೀನಿ.

ಅಸ್ಸಾಂನಲ್ಲಿ ನಾನು ಕನ್ನಡ, ಹಿಂದಿ, ತೆಲುಗು, ಮತ್ತು ಸಂಸ್ಕೃತದ ರಚನೆಗಳನ್ನು ಹಾಡಿದೆ. ನನ್ನ ಕಂಠ ಅವರಿಗೆ ಇಷ್ಟ ಆಗಿ ನನಗೋಸ್ಕರ ಪುರುಷೋತ್ತಮದಾಸ್ ಎನ್ನುವ ಕವಿಗಳಿಂದ ಕವನ ಬರೆಸಿ ತಿಂಗಳ ಹೊಸಹಾಡು ಸರಣಿಯಲ್ಲಿ, ದೇಬೇನ್ ಶರ್ಮ ಅವರ ಸಂಗೀತ ನಿರ್ದೇಶನದಲ್ಲಿ ಹಾಡ್ಸಿದ್ರು. ಆಗ ನಾನು ಶಿಲ್ಲಾಂಗಿನಲ್ಲಿ ಅಣ್ಣನ ಮನೇಲಿದ್ದೆ. ನಮ್ಮ ಹಾಡಿನ ಸರಿಯಾದ ಉಚ್ಚಾರಣೆ ತಿಳ್ಕೊಳ್ಳೋದಕ್ಕೆ ಶಿಲ್ಲಾಂಗಿನಿಂದ ಗೌಹಾಟಿಗೆ ಎಂಟು ದಿನ ಹೋದೆ. ಯಾವುದನ್ನೇ ಹಾಡಿದರೂ ಯಾರಿಗೆ ಆ ಭಾಷೆ ಚೆನ್ನಾಗಿ ಗೊತ್ತಿದೆಯೋ ಅವರ ಬಳಿ ಹೋಗಿ ಕಲೀತಿದ್ದೆ. ಅನ್ಯಭಾಷೆಯಲ್ಲಿ ಬರೆಯೋದಕ್ಕೂ, ಉಚ್ಚರಿಸೋದಕ್ಕೂ ವ್ಯತ್ಯಾಸವಿದೆ. ಅವರು 'ಸ' ಎಂದು ಬರೆದದ್ದನ್ನು 'ಹ' ಎಂದು ಉಚ್ಚರಿಸುತ್ತಾರೆ. ಅವರು 'ಸುರ್' ಎಂದು ಬರೆದದ್ದನ್ನು 'ಹುರ್' ಎಂದು ಉಚ್ಚರಿಸುತ್ತಾರೆ. ಭಾಷಾ ಗೌರವವನ್ನು ಆಯಾ ಭಾಷಿಕರ ಒಡನಾಟದಿಂದ ಮಾತ್ರ ತಿಳಿದುಕೊಳ್ಳಬಹುದು.



*ಸಂಗೀತ ಕಾರ್ಯಕ್ರಮದಲ್ಲಿ : ಶ್ರೀ ಬಾಲಮುರಳೀಕೃಷ್ಣ ಅವರೊಂದಿಗೆ ಎಚ್. ಆರ್. ಲೀಲಾವತಿ ಮತ್ತಿತರರು*

**ಪ್ರ: ಇದೆಲ್ಲದರ ನಡುವೆ ನಿಮ್ಮ ಉಳಿದ ವ್ಯಾಸಂಗ ಹೇಗೆ ಸಾಗುತ್ತಿತ್ತು ?**

**ಲೀ :** ನಾನು ಓದಿದ್ದು ಬಿ.ಎ. ಶಾರದಾವಿಲಾಸ್‌ನಲ್ಲಿ ಸೈನ್ಸ್ ತೆಗೆದುಕೊಂಡು ಇಂಟರ್‌ಮೀಡಿಯೆಟ್ ಓದ್ತಿದ್ದೆ. ನಂಗೆ ಮ್ಯಾಥ್ಸ್ ಅಂದರೆ ತುಂಬಾ ಇಷ್ಟ. ಆದರೆ ಅದಕ್ಕೆ ತುಂಬಾ ವರ್ಕ್ ಮಾಡಬೇಕು, ಹೆಚ್ಚು ಸಮಯ ಕೊಡಬೇಕು. ಆದರೆ ದಿನದಿಂದ ದಿನಕ್ಕೆ ಕಾರ್ಯಕ್ರಮಗಳು ಹೆಚ್ಚಾಗಲು ಆರಂಭಿಸಿದವು. ಆಗ ನಾನು ವಾಸುದೇವಾಚಾರ್ಯರ ಶಿಷ್ಯರಾದ ಚನ್ನಕೇಶವಯ್ಯನವರ ಬಳಿ ಶಾಸ್ತ್ರೀಯ ಸಂಗೀತ ಕಲಿಯುತ್ತಿದ್ದೆ. ಬೆಳಿಗ್ಗೆ ಪದ್ಮಚರಣ್ ಅವರ ಬಳಿ, ಸಂಜೆ ಚನ್ನಕೇಶವಯ್ಯನವರ ಬಳಿ ಹೋಗ್ತಿದ್ದೆ. ಎಲ್ಲಾ ಕಡೆಗೂ ನಡೆದೇ ಹೋಗ ಬೇಕಿತ್ತು. ಚನ್ನಕೇಶವಯ್ಯನವರಂತೂ ತೀರಾ ಒಳ್ಳೆ ಮೇಷ್ಟ್ರು. ನಾನು ಹೋದ ತಕ್ಷಣ, "ಮಗು ಹಸಿದುಕೊಂಡು ಬಂದಿದೆ ಕಣೆ, ಮೊದಲು ಅನ್ನ ಹಾಕಿಬಿಡು, ಆಮೇಲೆ ಪಾಠ ಹೇಳ್ಕೊಡ್ತೀನಿ" ಅನ್ನೋರು. ನಾನು ಶಾಸ್ತ್ರೀಯ ಸಂಗೀತದ ಕಛೇರಿ ಮಾಡ್ತಿದ್ದೆ.

**ಪ್ರ: ಎರಡು ಬಗೆಯ ಸಂಗೀತಾನ ಹೇಗೆ ನಿಭಾಯಿಸ್ತಾ ಇದ್ದಿರಿ ?**

**ಲೀ :** ಆಗುತ್ತೆ, ನಿಮಗೆ ಆ ಫ್ಲೇರ್ ಇರಬೇಕು. ನಿಮಗೆ ಯಾವುದನ್ನು ಹೇಗೆ ಹಾಡಬೇಕು ಎನ್ನುವ ಮನಃಸ್ಥಿತಿ ಇರಬೇಕು. 'ಲೀಲಾವತಿ ಭಾವಗೀತೆಗಿಂತಲೂ ಶಾಸ್ತ್ರೀಯ ಸಂಗೀತ ಚೆನ್ನಾಗಿ ಹಾಡ್ತಾರೆ' ಅಂತ ಪತ್ರಿಕೆಯೊಂದು ಬರೆದಿತ್ತು. ನಾನು ಬಾಂಬೆ ಮುಂತಾದ ಕಡೆಗಳಲ್ಲೆಲ್ಲಾ ಶಾಸ್ತ್ರೀಯ ಸಂಗೀತವನ್ನೇ ಹಾಡಿರೋದು. ಮೇಷ್ಟ್ರ ಮನೆಗೆ ಹೋದಾಗ ಅಲ್ಲಿ ವಾಸುದೇವಾಚಾರ್ಯರು, ರಾಳ್ಳಪಲ್ಲಿ, ಚಿಂತಲಪಲ್ಲಿ ರಾಮಚಂದ್ರರಾಯರು ಮುಂತಾದವರೆಲ್ಲರೂ ಇರ್ತಿದ್ರು. ಅವರ ಮುಂದೆ ಹಾಡು ಅನ್ನೋರು. ನನಗೆ ತುಂಬಾ ಭಯ. ರಾಳ್ಳಪಲ್ಲಿಯವರ ಮನೆಗಂತೂ ನಾನು ಸದಾ ಹೋಗ್ತಿದ್ದೆ. ಅವರೂ ಹಾಡು ಅಂತ ಹಾಡಿಸೋರು. ನಂತರ ರಾಗ ಹಾಡು, ಸ್ವರ ಹಾಕು, ನೆರವಲ್ ಮಾಡು... ಹೀಗೆ ಹೇಳೋರು. ಹಾಡಿದ ಮೇಲೆ, "ಇಷ್ಟು ಚೆನ್ನಾಗಿ ಹಾಡ್ತೀಯ ಯಾಕೆ ಹೆದರಿಕೊಳ್ತೀಯ" ಅನ್ನೋರು. ನನ್ನ ಗಂಟಲಿನ ಅನಾರೋಗ್ಯದಿಂದ ಶಾಸ್ತ್ರೀಯ ಸಂಗೀತ ಮುಂದುವರಿಸೋದಕ್ಕೆ ಆಗಲಿಲ್ಲ. ರಾಗ ತಾನ ಪಲ್ಲವಿ ಹಾಡೋದಕ್ಕೆ ಹೆಚ್ಚು ಶ್ರಮ ಬೇಕು. ನನ್ನ ಗಂಟಲು ಕೋಆಪರೇಟ್ ಮಾಡ್ತಿರ್ಲಿಲ್ಲ. ಗಂಟಲಿನ ತೊಂದರೆಯಿಂದ ವಿದ್ವತ್ ಪರೀಕ್ಷೆಗೆ ಹೋಗಲು ಆಗಲಿಲ್ಲ. ಆ ವ್ಯಥೆ ಈಗಲೂ ನನ್ನಲ್ಲಿ ಉಳಿದುಬಿಟ್ಟಿದೆ.

**ಪ್ರ: ಮದುವೆ ನಂತರ ನಿಮ್ಮ ಸಂಗೀತ ಹೇಗೆ ಸಾಗಿತು?**

**ಲೀ :** ನನಗೆ ಮದುವೆ ಆಗಿದ್ದು ಸ್ವಲ್ಪ ತಡವಾಗಿ. ನನ್ನ ಪತಿ ರಘುರಾಂ ಲಾಯರ್ ಆಗಿದ್ದರು. ಆದರೆ ಸುಳ್ಳು ಹೇಳಿ ಮೋಸ ಮಾಡೋದು ಆಗಲ್ಲ ಅಂತ ಆ ವೃತ್ತಿಯನ್ನು ಬಿಟ್ಟುಬಿಟ್ರು. ಬಿ.ಎಡ್. ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದರು, ಸೃಜನಶೀಲ ಲೇಖಕರೂ, ಒಳ್ಳೆ ಹಾಡುಗಾರರೂ, ಸಂಯೋಜಕರೂ ಆಗಿದ್ದರು. ಇಬ್ಬರ ಒಲವೂ ಸಂಗೀತವೇ ಆಗಿದ್ದರಿಂದ ಮದುವೆಯಾದ ಮೇಲೆ ಸಂಗೀತಕ್ಕೆ ಇನ್ನೂ ಹೆಚ್ಚಿನ ಬೆಂಬಲ ದೊರಕಿತು. ಅವರು ಆಕಾಶವಾಣಿಯಲ್ಲಿ ೧೯೪೦ರಿಂದಲೇ ಹಾಡ್ತಾ ಇದ್ರು. ಎಷ್ಟೋ ಗೀತೆಗಳನ್ನು ನಾವು ಒಟ್ಟಿಗೇ ಸೇರಿ ರಾಗ ಸಂಯೋಜನೆ ಮಾಡ್ತಾ ಇದ್ವಿ. ಇಬ್ಬರದ್ದೂ ಒಂದೇ ಪ್ರವೃತ್ತಿ.

**ಪ್ರ : ನೀವು ಹಾಡ್ತಿದ್ದಕ್ಕೆಲ್ಲ ರಾಗಸಂಯೋಜನೆ ಕೃಷ್ಣಮಾಚಾರ್ ಅವರದ್ದೇ ಆಗಿತ್ತಾ ?**

**ಲೀ :** ಆಕಾಶವಾಣಿಯಲ್ಲಿ ಪ್ರಸಾರವಾದ ನನ್ನ ಪ್ರತಿ ಗೀತೆಯ ರಾಗ ಸಂಯೋಜನೆಯೂ ಅವರದ್ದೇ. ನಾನು ಕೂಡ ೧೯೫೪ರಿಂದಲೇ ರಾಗ ಸಂಯೋಜನೆ ಮಾಡ್ತಿದ್ದೆ. ರಘುರಾಂ ಚೆನ್ನಾಗಿ ರಾಗ ಸಂಯೋಜನೆ ಮಾಡ್ತಿದ್ದರು. ಅವರು ಕೆಲವೊಮ್ಮೆ ಹೇಳುತ್ತಿದ್ದರು, "ಲೀಲಾ, ಪ್ರಸಿದ್ಧಿಗೆ ಬಂದವರನ್ನು ಮದುವೆಯಾದರೆ ಕಷ್ಟ ಅಲ್ವಾ, ನಮಗೆ ಹೆಸರು ಬರೋಲ್ಲ" ಅಂತ. ಕೆಲವು ಹಾಡುಗಳನ್ನು ಕೇಳಿ ಜನ ಹೇಳ್ತಾರೆ. "ಲೀಲಾವತಿಯವರೇ, ಇದನ್ನು ಎಷ್ಟು ಚೆನ್ನಾಗಿ ಟ್ಯೂನ್ ಮಾಡಿದ್ದೀರಿ" ಅಂತ. "ನಾನು ಮಾಡಿದ್ದಲ್ಲ, ರಘುರಾಂ ಮಾಡಿದ್ದು" ಅಂತ ನಾನು ಹೇಳ್ತಾ ಇದ್ದೆ. ತುಂಬ ಸಲ ಒಟ್ಟಿಗೆ ಟ್ಯೂನ್ ಮಾಡ್ತಾ ಇದ್ವಿ, ಕೆಲವು ಸಲ ಅವರೇ ಸ್ವತಂತ್ರವಾಗಿ ಟ್ಯೂನ್ ಮಾಡ್ತಾ ಇದ್ರು. ಆದರೆ ನನಗೆ ಹೆಸರು ಬಂದುಬಿಡ್ತು. ಹಾಗಾಗಿ ಅವರು ಹೇಳ್ತಾ ಇದ್ದದ್ದು ಸರಿ ಅನ್ನುತ್ತೆ. ಆದರೆ ಈ ಅಂಶ ನಮ್ಮ ಸಂಬಂಧಕ್ಕೆ ಎಂದೂ ಅಡ್ಡಿ ಬರಲಿಲ್ಲ. ನನ್ನನ್ನು ಅವರು ತುಂಬಾ ಪ್ರೋತ್ಸಾಹಿಸುತ್ತಿದ್ದರು.

**ಪ್ರ : ನೀವು ಮೂರು ನಾಲ್ಕು ಗಂಟೆ ಕಾರ್ಯಕ್ರಮ ಕೊಡ್ತಿದ್ರಿ. ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಏನು ವ್ಯತ್ಯಾಸ ?**

**ಲೀ :** ನಾನು, ಕಾಳಿಂಗರಾಯರು ಮತ್ತು ಅನಂತಸ್ವಾಮಿ ಮೂರೇ ಜನ ಅಂತ ಕಾಣುತ್ತೆ ಮೂರು ನಾಲ್ಕು ಗಂಟೆಗಳ ಕಾಲ ಕಾರ್ಯಕ್ರಮ ನೀಡ್ತಿದ್ದೋರು. ಕಾಳಿಂಗರಾಯರಿಗೆ ಕೊನೇ ಪಕ್ಷ ಸೊಲ್ಲಿಗಾದರೂ ಜನ ಇದ್ದರು. ಆದರೆ ನನಗೆ ಯಾರೂ ಇರಲಿಲ್ಲ. ಪಕ್ಕವಾದ್ಯಕ್ಕೆ ಎ. ವಿ. ಕೃಷ್ಣಮಾಚಾರ್ ಅವರ ವಯೋಲಿನ್ ಮತ್ತು ಎಂ. ಎಸ್. ರಾಮಯ್ಯ ಅವರ ತಬಲಾ, ಅವರಿಲ್ಲದಿದ್ದರೆ ಶೇಷಪ್ಪ ಇಲ್ಲವೇ ಡಿ. ಸೀನಪ್ಪ ನುಡಿಸ್ತಿದ್ರು. ನಮಗೆ ನೀರು ತೆಗೆದುಕೊಂಡು ಹೋಗಬೇಕು ಎನ್ನುವ ಪರಿಕಲ್ಪನೆಯೇ ಇರಲಿಲ್ಲ. ನಾಲ್ಕು ಗಂಟೆ ಹಾಡಿದರೂ ಒಂದು ತೊಟ್ಟು ನೀರನ್ನೂ ಕುಡೀತಾ ಇರಲಿಲ್ಲ. ನಮ್ಮ ಅಭ್ಯಾಸ ಹಾಗಿತ್ತು. ಈಗಿನ ಮಕ್ಕಳು ಒಂದು ಹಾಡು ಹೇಳಿ ನೀರು ಕುಡೀತಾರೆ. ಈಗ ವಾದ್ಯಗಳ ಸಂಖ್ಯೆಯೂ ಜಾಸ್ತಿ. ಒಬ್ಬೊಬ್ಬರೇ ಹಾಡೋದೇ ಇಲ್ಲ. ಮೂರು ಗಂಟೆ ಹಾಡೋಕ್ಕೆ ಯಾರಿಗೂ ಬರೋಲ್ಲ. ನಮಗಿದ್ದದ್ದು ಎರಡೇ ವಾದ್ಯಗಳು. ಒಂದು ಶ್ರುತಿ, ಮತ್ತೊಂದು ಲಯ. ಬೀಜೀಯಂ ಅನ್ನೋದು ಆಗ ಇರಲೇ ಇಲ್ಲ. ನಾವು ಹಾಡಿದ್ದರ ಹಿನ್ನೆಲೆಯಾಗಿ ನುಡಿಸಿಕೊಂಡು ಹೋಗ್ತಿದ್ದರು. ಇಲ್ಲವೇ ಒಂದು ಲೈನ್ ಮಧ್ಯ ಕೊಡ್ತಾ ಇದ್ರು. ಉಳಿದದ್ದೆಲ್ಲಾ ನಮ್ಮದೇ ಸ್ವಂತ. ಈಗ ವಾದ್ಯಮೇಳದ ಮಧ್ಯೆ ಧ್ವನಿ. ಅದೂ ಮೂರು ನಾಲ್ಕು ಜನರ ಧ್ವನಿ.

**ಪ್ರ : ಈಗಿನವರಿಗೆ ಏಕೆ ಕಷ್ಟವಾಗುತ್ತಿದೆ ?**

**ಲೀ :** ನಮಗೆ ಶಾಸ್ತ್ರೀಯ ಸಂಗೀತದ ಬುನಾದಿ ಅಚ್ಚುಕಟ್ಟಾಗಿತ್ತು. ಕಾಳಿಂಗರಾಯರಿಗೆ ಕರ್ನಾಟಕ ಮತ್ತು ಹಿಂದುಸ್ತಾನಿ ಸಂಗೀತ ತುಂಬಾ ಚೆನ್ನಾಗಿ ತಿಳಿದಿತ್ತು. ನನ್ನ ಪ್ರಕಾರ ಶಾಸ್ತ್ರೀಯ ಸಂಗೀತದ ಒಂದು ಶೈಲಿಯ ಬುನಾದಿಯ ಮೇಲೆ ಉಳಿದೆಲ್ಲಾ ಸಂಗೀತಗಳೂ ಕವಲೊಡೆಯುತ್ತವೆ. ಶಾಸ್ತ್ರೀಯ ಸಂಗೀತದಲ್ಲಿ

ಒಳ್ಳೆಯ ಸಾಧನೆ ಇರುತ್ತೆ. ಶ್ರುತಿ ಹಿಡಿಯುವ ಅಭ್ಯಾಸ ಆಗಿರುತ್ತದೆ. ವಾಯ್ಸ್ ಕಲ್ಚರ್ ಅಂತ ನಮಗೆ ಆಗೋದು ಶಾಸ್ತ್ರೀಯ ಸಂಗೀತದಲ್ಲಷ್ಟೆ. ಶಾಸ್ತ್ರೀಯ ಸಂಗೀತದ ಬುನಾದಿ ಇರುವವರು ಯಾವುದೇ ಶೈಲಿಯ ಗಾಯನವನ್ನೂ ಚೆನ್ನಾಗಿ ಹಾಡಬಹುದು. ಆದರೆ ಉಳಿದವು ಕೀಳು ಎನ್ನುವ ಮನೋಭಾವ ಇರಬಾರದು. ಒಂದು ಫ್ಲೇರ್ ಇರಬೇಕು, ಒಂದು ರುಚಿ ಇರಬೇಕು. ಈಗ ಬಾಲಮುರಳೀಕೃಷ್ಣ ಹಾಡುವುದಿಲ್ಲವೇ ? ಕರ್ನಾಟಕ ಶಾಸ್ತ್ರೀಯ ಸಂಗೀತಗಾರರಲ್ಲಿ ಭಾವಗೀತೆ ಎಂದರೆ ಕೀಳು ಎನ್ನುವ ಮನೋಭಾವ ಇದೆ.

ಈಗ ಹಾಡೋದೆಲ್ಲಾ ಸುಗಮ ಸಂಗೀತ ಅಂತ ಒಪ್ಪಿಕೊಳ್ಳೋದಕ್ಕೆ ನಾನು ಸಿದ್ಧವಿಲ್ಲ. ಕೇವಲ ಕವನವನ್ನು ಹಾಡಿಬಿಟ್ಟರೆ ಅದು ಸುಗಮ ಸಂಗೀತ ಆಗೋಲ್ಲ. ಅದಕ್ಕಿರುವ ಜೀವ, ರಸ, ಅರ್ಥ, ಭಾವ ಇವೆಲ್ಲವೂ ತಿಳಿದಿರಬೇಕು, ಸಾಹಿತ್ಯಪ್ರಜ್ಞೆ ಇರಬೇಕು. ಅದಿಲ್ಲದೆ ಭಾವಗೀತೆ ಆಗೋದೇ ಇಲ್ಲ. ಕವಿಯ ಮನದ ಇಂಗಿತ ಅರಿಯದೆ ಹಾಡುವುದಕ್ಕೆ ಸಾಧ್ಯವೇ ಇಲ್ಲ.

**ಪ್ರ : ನಿಮಗೆ ಪ್ರಾರಂಭದಿಂದಲೂ ಸಾಹಿತ್ಯದ ಒಲವಿತ್ತಾ ?**

**ಲೀ :** ನಮ್ಮನೇನಲ್ಲಿ ಎಲ್ಲರಿಗೂ ಓದು ತುಂಬಾ ಇಷ್ಟ. ನನ್ನ ಬಳಿ ಸುಮಾರು ಎರಡು ಸಾವಿರ ಪುಸ್ತಕಗಳಿವೆ. ನಮ್ಮಪ್ಪ, ಚಿಕ್ಕಪ್ಪ ಪುಸ್ತಕಗಳನ್ನು ಕೊಂಡು ತರೋರು. ನಮ್ಮನೇನಲ್ಲಿ ಸಾಹಿತ್ಯ ಒಂದು ಕಣ್ಣು, ಸಂಗೀತ ಮತ್ತೊಂದು ಕಣ್ಣು. ನಾನು ಹದಿನೇಳು ಪುಸ್ತಕಗಳನ್ನು ಬರೆದಿದ್ದೇನೆ. ಪ್ರಶಸ್ತಿಗಳೂ ಬಂದಿವೆ. ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ನಾನು ಓದುತ್ತೇನೆ.

**ಪ್ರ : ನಿಮ್ಮ ರಾಗಸಂಯೋಜನೆಗೆ ಕವಿಗಳಿಂದ ಎಂತಹ ಪ್ರತಿಕ್ರಿಯೆ ಬಂದಿದೆ?**

**ಲೀ :** ಕುವೆಂಪು ಅವರಿಗೆ ನನ್ನ ಗಾಯನ ಕಂಡರೆ ತುಂಬಾ ಇಷ್ಟ. ನಾನು ಅವರ ಮನೆಗೆ ಹೋದಾಗೆಲ್ಲಾ ಇಂತಹ ಹಾಡು ಹೇಳು, ಅದು ತುಂಬಾ ಚೆನ್ನಾಗಿದೆ ಅಂತಿದ್ರು. "ಹಗಲೆಲ್ಲ ಧೂಳಿನಲಿ ಗೊಂಬೆಯಾಟವನಾಡಿ" ಎಂಬ ಅವರ ಕವನವನ್ನು ನಾನು ಮೊದಲ ಬಾರಿ ಹಾಡಿದಾಗ, "ಈ ಹಾಡನ್ನು ಅದೆಷ್ಟು ಚೆನ್ನಾಗಿ ಹಾಡಿದ್ದೀಯಮ್ಮಾ, ಇದನ್ನು ಇನ್ನೊಂದು ಸಲ ನೀನೇ ಹಾಡಿದರೂ ಅಷ್ಟು ಚೆನ್ನಾಗಿ ಹಾಡುವುದಕ್ಕಾಗುವುದಿಲ್ಲ" ಅನ್ನುತ್ತಿದ್ದರು. ಮಾನಸಗಂಗೋತ್ರಿ ಆರಂಭವಾದಾಗ 'ಕಳಚಿಬೀಳುವೆನಯ್ಯ ನಿನ್ನ ಸಿರಿಯಡಿಗೆ' ಎಂಬ ಹಾಡನ್ನು ಲೀಲಾವತಿಯೇ ಹಾಡಬೇಕು ಎಂದು ಹೇಳಿಕಳುಹಿಸಿದ್ದರು. ಜಯಚಾಮರಾಜೇಂದ್ರ ಒಡೆಯರ್ ಯಾವ ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿದರೂ ಪ್ರಾರ್ಥನೆಗೆ ಲೀಲಾವತಿ ಇಂಥದ್ದೇ ಹಾಡಬೇಕು ಎಂದು ಹೇಳಿಕಳಿಸೋರು. ೧೯೬೨ರಲ್ಲಿ ಬೇಂದ್ರೆಯವರ, ಕನ್ನಡನಾಡಿನ ಪರಂಪರೆ ಎಂಬ ಕಾರ್ಯಕ್ರಮ ಬೆಂಗಳೂರಿನ ಟೌನ್‌ಹಾಲಿನಲ್ಲಿ ನಡೆಯಿತು. ಅದರಲ್ಲಿ ಎರಡು ಹಾಡುಗಳನ್ನು ಹಾಡಿದೆ. ಬೇಂದ್ರೆಯವರು, "ಎಷ್ಟು ಛಲೋ ಹಾಡ್ತೀಯವ್ವ ಆಶಾ ಭೋಂಸ್ಲೆ ಹಾಗೆ. ಈಗ ರೆಕಾರ್ಡ್ ಆಗಿರುತ್ತಲ್ಲ ಅದನ್ನು ಮತ್ತೆ ಹೋಗಿ ಕೇಳ್ತೀನಿ" ಅಂತಂದ್ರು. ಶಿವರುದ್ರಪ್ಪನವರು "ನನ್ನನ್ನು ಕವಿ ಮಾಡಿದ್ದೇ ಲೀಲಾವತಿ" ಅಂತ ಹೇಳ್ತಿದ್ದರು. ಪುತಿನ ಅವರ ಕವನ 'ಮನಸು ಮಾತ ತೆರೆಯುತಿದೆ' ಎನ್ನುವುದನ್ನು ತಿಂಗಳ ಹಾಡು ಮಾಡಿ ಹಾಡಿದಾಗ 'ಈ ಕವನಕ್ಕೆ ತಕ್ಕ ರಾಗಸಂಯೋಜನೆ ಇದು, ಇದನ್ನು ಹಾಡಿರೋದು ಮತ್ತು ಸಂಯೋಜನೆ ಮಾಡಿರೋದು ತುಂಬಾ ಸೂಕ್ತವಾಗಿದೆ' ಎಂದು ನನಗವರು ಪತ್ರ ಬರೆದರು. ವೆಂಕಟೇಶಮೂರ್ತಿ ಮತ್ತು ಲಕ್ಷ್ಮೀನಾರಾಯಣ ಭಟ್ಟರು "ನಾವು ಬರೆಯೋ ಕಾಲಕ್ಕೆ ಲೀಲಾವತಿ ಹಾಡೋದು ನಿಲ್ಲಿಸಿಬಿಟ್ಟರು" ಅಂತಿದ್ದರು. ಇದಕ್ಕೆಲ್ಲಾ ಕಾರಣ ನನಗೆ ಸೈನಸ್ ಸಮಸ್ಯೆ ಇತ್ತು. ಅದಕ್ಕೆ ನಾನು ಏಳು ಸಲ ಪಂಕ್ಚರ್ ಮಾಡಿಸಿಕೊಂಡೆ. ಅದು ನನ್ನ ಶಾರೀರದ ಮೇಲೆ ಪರಿಣಾಮ ಬೀರಿತಂತೆ.

**ಪ್ರ : ನೀವು ಹಾಡ್ತಾ ಇದ್ದ ಕಾಲದಲ್ಲಿ ನವೋದಯದ ಕವಿತೆಗಳು ಹೆಚ್ಚಾಗಿದ್ವು. ನಂತರದಲ್ಲಿ ನವ್ಯ ಮತ್ತು ಬಂಡಾಯ ಪ್ರಾರಂಭವಾಯಿತು. ನೀವು ಅವುಗಳನ್ನೂ ಯಾಕೆ ಹಾಡಲಿಲ್ಲ ?**

**ಲೀ :** ಎಲ್ಲವೂ ಹಾಡಲಿಕ್ಕೆ ಬರೋಲ್ಲ. ಗೇಯತೆಯೂ ಮುಖ್ಯವಾಗುತ್ತದೆ. ಹಾಡಲಿಕ್ಕೆ ವಸ್ತುವೂ ಸುಂದರವಾಗಿ ಇರಬೇಕು. ಲಲಿತ ಪದಬಂಧಗಳಿರಬೇಕು. ಸುಲಲಿತವಾಗಿ ನಾಲಿಗೆಯಲ್ಲಿ ಹೊರಳುವ ಹಾಗೆ ಇರಬೇಕು. ಕ್ಲಿಷ್ಟವಾದ ಪದಗಳಿದ್ದರೆ ಉಚ್ಚಾರಣೆ ಕಷ್ಟ. ಕೇಳೋರಿಗೆ ಹಿತವಿರೋಲ್ಲ. ರಾಗ ಸಂಯೋಜನೆಯೂ ಕಷ್ಟ. ರಸ, ಭಾವ ಬೇಕು. ಚಿಕ್ಕದಾಗಿ ಚೊಕ್ಕವಾಗಿ ಇರಬೇಕು. ತುಂಬಾ ದೀರ್ಘವಾದ ಕವನವನ್ನು ಹಾಡಿದರೆ ಜನರಿಗೆ ತಾಳ್ಮೆ ಇರೋಲ್ಲ. ಗಮಕ ಹಾಡ್ತಾರಲ್ಲಾ ? ಅಂತ ಕೇಳಬಹುದು. ಅದರಲ್ಲಿ ಕಾವ್ಯದ ಲಯ ಇದೆಯೇ ಹೊರತು ಸಂಗೀತದ ಲಯ ಇಲ್ಲ. ಕೆಲವು ಕವನಗಳು ಕೇವಲ ಓದೋದಕ್ಕೆ ಸರಿ.

**ಪ್ರ : ಒಬ್ಬ ಕಂಪೋಸರ್ ಆಗಿ ಆಕಾಶವಾಣಿ ನಿಮ್ಮನ್ನ ಹೇಗೆ ಬೆಳೆಸಿತು ?**

**ಲೀ :** ೧೯೭೭ರಲ್ಲಿ ಕಂಪೋಸರ್ ಪೋಸ್ಟ್‌ಗಾಗಿ ಅರ್ಜಿ ಆಹ್ವಾನಿಸಿದರು. ಸಂದರ್ಶನದ ಪ್ಯಾನೆಲ್‌ನಲ್ಲಿ ರಾಮರತ್ನಂ, ರಾ. ಸತ್ಯನಾರಾಯಣ, ಪಲ್ಲವಿ ಚಂದ್ರಪ್ಪ, ಎಸ್. ಕೃಷ್ಣಮೂರ್ತಿ, ಶಂಕರ್ ಮುಂತಾದವರಿದ್ದರು. ನಾನು ಆಯ್ಕೆ ಆದೆ. ಯಾವ ವಾದ್ಯವನ್ನು ಎಲ್ಲಿ ಉಪಯೋಗಿಸಬಹುದು, ಯಾವುದಕ್ಕೆ ಉಪಯೋಗಿಸಬಹುದು, ಯಾವ ಭಾವವನ್ನು ಸ್ಫುರಿಸಲು ಉಪಯೋಗಿಸಬಹುದು, ಇವನ್ನೆಲ್ಲಾ ಪ್ರಾಯೋಗಿಕವಾಗಿ ಅರ್ಥಮಾಡಿಕೊಳ್ಳಬಹುದು ಎಂಬುದು ನನಗೆ ತುಂಬಾ ಖುಷಿಯಾಗಿತ್ತು. ನನ್ನನ್ನು ಜನಕ್ಕೆ ಮುಟ್ಟಿಸಿದ್ದೇ ಆಕಾಶವಾಣಿ. ನಾನು ಆಕಾಶವಾಣಿಯಲ್ಲಿ ಹಾಡೋದನ್ನು ಕೇಳಿದವರು ಬೇರೆಬೇರೆ ಕಾರ್ಯಕ್ರಮಗಳಿಗೆ ನನ್ನನ್ನು ಕರೆಯಲು ಪ್ರಾರಂಭಿಸಿದರು. ೧೯೫೪ರಲ್ಲಿ ಆಡಿಷನ್ ಪ್ರಾರಂಭವಾಯಿತು. ಆಗ ನನಗೆ ಮತ್ತು ಕಾಳಿಂಗರಾವ್ ಅವರಿಗೆ ವಿನಾಯ್ತಿ ಸಿಕ್ಕಿತು.

**ಪ್ರ : ಮೊದಲು ನಿಮಗೆ ವಾದ್ಯ ಸಂಗೀತದಲ್ಲಿ ಪರಿಶ್ರಮವಿತ್ತೇ ?**

**ಲೀ :** ನನಗೆ ಯಾವ ವಾದ್ಯವೂ ಬರ್ತಾ ಇರಲಿಲ್ಲ. ಕೇವಲ ಕೇಳ್ಮೆ ಇತ್ತು, ಅಷ್ಟೆ. ಆಕಾಶವಾಣಿಗೆ ಬಂದ ಮೇಲೆ ನಾನು ವಾದ್ಯಗಳನ್ನು ಹೇಗೆ ಬಳಸಬಹುದು ಅನ್ನೋದನ್ನ ಕಲಿತೆ. ಆ ವಿಷಯದಲ್ಲಿ ಆಕಾಶವಾಣಿ ನನಗೆ ತುಂಬಾ ಸಹಾಯ ಮಾಡಿತು.

**ಪ್ರ : ರಾಗ ಸಂಯೋಜನೆ ಎನ್ನುವುದು ತುಂಬ ಅಮೂರ್ತವಾದ ಒಂದು ಕ್ರಿಯೆ. ಅದು ನಿಮ್ಮಲ್ಲಿ ಹೇಗೆ ಕೆಲಸಮಾಡ್ತಾ ಇತ್ತು ?**

**ಲೀ :** ನನ್ನ ರಾಗ ಸಂಯೋಜನೆಯ ಸ್ವರೂಪದಲ್ಲಿ ಮುಖ್ಯವಾದ

ಅಂಶವೆಂದರೆ, ಈ ರಾಗದಲ್ಲಿ ಮಾಡೋಣ ಆ ರಾಗದಲ್ಲಿ ಮಾಡೋಣ ಅಂತ ನಾನು ಯೋಚನೆ ಮಾಡ್ತಾ ಇರಲಿಲ್ಲ. ಕವನವನ್ನು ಮತ್ತೆ ಮತ್ತೆ ಓದ್ತೀನಿ. ಆಮೇಲೆ ನನ್ನಷ್ಟಕ್ಕೆ ಹಾಡೋದಕ್ಕೆ ಶುರು ಮಾಡ್ತೀನಿ. ಕವನದ ಅರ್ಥ ಮನಸ್ಸಿಗೆ ಇಳಿದಂತೆಲ್ಲಾ ಅದೇನೋ ಬರುತ್ತೆ. ಆ ಕವನದ ಗುಂಗು ಇಡೀ ದಿವಸ ಇರಬಹುದು ಅಥವಾ ವಾರವೇ ಇರಬಹುದು. ಅದು ಹಾಡಿಗೆ ಬಂದ ಮೇಲೆ ಇದು ಆ ರಾಗ ಅಲ್ವಾ ಅನ್ನಿಸುತ್ತದೆ. ಭಾವಗೀತೆ ಅಥವಾ ಕನ್ನಡಗೀತೆ ರಾಗಾಧಾರಿತ ಅಲ್ಲ, ಅದು ಸ್ವರಾಧಾರಿತ. ಅದರಲ್ಲಿ ಸ್ವರಗಳು ಮುಖ್ಯ. ಅಂದ್ರೆ ಸ್ವರ ಯಾವುದು ಬೇಕಾದರೂ ಬರಬಹುದು. ನಮಗೆ ಶಾಸ್ತ್ರೀಯ ಸಂಗೀತದ ಕಟ್ಟುಪಾಡುಗಳು, ರೀತಿನೀತಿಗಳು, ನಿಯಮಗಳು ಯಾವುವೂ ಇಲ್ಲ. ಇದು ಒಂದು ರೀತಿಯಲ್ಲಿ ಕಾಡುಹಕ್ಕಿ ಹಾಡಿದಂತೆ. ಯಾವುದೇ ನಿಯಮಕ್ಕೂ ಒಳಪಟ್ಟಿದ್ದಲ್ಲ. ಶಾಸ್ತ್ರೀಯ ಸಂಗೀತಕ್ಕಾದರೆ ನಿಯಮಗಳುಂಟು. ತ್ಯಾಗರಾಜರ ಕೃತಿಯೊಂದನ್ನು ನಾನು ಬೇರೆ ರಾಗದಲ್ಲಿ ಹಾಡಲು ಸಾಧ್ಯವಿಲ್ಲ. ಆದರೆ ಸುಗಮ ಸಂಗೀತದಲ್ಲಿ ಒಂದು ಕವನಕ್ಕೆ ಬೇರೆ ಬೇರೆ ರಾಗಗಳನ್ನು ಅವರವರ ಕಲ್ಪನೆಗೆ ತಕ್ಕಂತೆ ಸಂಯೋಜಿಸಬಹುದು. ಯಾಕೇಂದ್ರೆ, ಕವಿಗಳು ವಾಗ್ಗೇಯಕಾರರಲ್ಲ. ಅವರು ಸಾಹಿತ್ಯ ಮಾತ್ರ ಕೊಡ್ತಾರೆ.

**ಪ್ರ : ಎಲ್ಲಾ ಸಂಗೀತ ನಿರ್ದೇಶಕರು ಮತ್ತು ಸಂಯೋಜಕರಿಗೆ ಯಾವುದೋ ಕೆಲವು ರಾಗಗಳು ಅಥವಾ ಧುನ್‌ಗಳು ಅಥವಾ ಮಟ್ಟುಗಳು ಅವರಿಗರಿವಿಲ್ಲದೆಯೇ ಮತ್ತೆ ಮತ್ತೆ ಅವರ ಸಂಗೀತದಲ್ಲಿ ಕಾಣಿಸಿಕೊಳ್ಳುತ್ತವೆ. ಹಾಗೆ ನಿಮಗೂ ಆಗಿದೆಯೇ ?**

**ಲೀ :** ಹಾಗೆ ಖಂಡಿತವಾಗಿಯೂ ಆಗುತ್ತೆ. ಪ್ರಾಯಶಃ ನಾನು ಪಹಾಡಿ ರಾಗದ ಕಡೆ ವಾಲುತ್ತೇನೆ ಎನಿಸುತ್ತದೆ. ಕಲ್ಯಾಣಿ ಛಾಯೆ ಇಲ್ಲದೆ ಪದ್ಮಚರಣ್ ಅವರ ರಾಗ ಸಂಯೋಜನೆಯೇ ಇಲ್ಲ ಅಂತ ಹೇಳ್ತಾರೆ.

**ಪ್ರ : ಒಂದೇ ಕಾಲಘಟ್ಟದಲ್ಲಿ ಹಾಡ್ತಾ ಇದ್ದ ನೀವು, ಕಾಳಿಂಗರಾಯರು ಮತ್ತು ಅನಂತಸ್ವಾಮಿ ಮೂರೂ ಜನರ ಶೈಲಿಯಲ್ಲಿದ್ದ ವ್ಯತ್ಯಾಸಗಳೇನು ಮತ್ತು ವಿಶೇಷತೆಗಳೇನು ?**

**ಲೀ :** ಕಾಳಿಂಗರಾಯರು ೧೯೪೯ರಲ್ಲಿ, ನಾನು ೧೯೫೦ರಲ್ಲಿ ಮತ್ತು ಅನಂತಸ್ವಾಮಿ ೧೯೭೨ರಲ್ಲಿ ಹಾಡೋದಕ್ಕೆ ಪ್ರಾರಂಭಿಸಿದೆವು. ನಾನು ಆವಾಗ ಹಾಡಿದ್ದೆಲ್ಲಾ ಪದ್ಮಚರಣ್ ಅವರ ಸಂಗೀತ ಸಂಯೋಜಿಸಿದ್ದ ಗೀತೆಗಳನ್ನು ಮಾತ್ರ. ಕಾಳಿಂಗರಾಯರದ್ದು ಹೆಚ್ಚು ಸರಳ, ಹೆಚ್ಚು ಸುಲಭಗ್ರಾಹ್ಯ. ಅವುಗಳನ್ನು ಜನ ಸುಲಭವಾಗಿ ಕಲಿಯಬಹುದಾಗಿತ್ತು. ನಾನು ಹಾಡಿದ್ದರಲ್ಲಿ ಇರುವ ಕಷ್ಟವಾದ ನುಡಿಕಾರಗಳನ್ನು ಎಲ್ಲರೂ ಸುಲಭವಾಗಿ ಹಾಡಲಾಗುತ್ತಿರಲಿಲ್ಲ. ಅನಂತಸ್ವಾಮಿ ಯವರದ್ದು ಎರಡು ವಿಧವಾದ ಪರಿಕಲ್ಪನೆಗಳಿವೆ. ಕೆಲವು ಹಾಡುಗಳಲ್ಲಿ ಅಂದರೆ 'ಎದೆತುಂಬಿ ಹಾಡಿದೆನು', 'ಹೆಂಡತಿಯೊಬ್ಬಳು ಮನೆಯೊಳಗಿದ್ದರೆ' ಇವುಗಳಲ್ಲಿ ಅಪಾರವಾದ ಮಾಧುರ್ಯವಿದೆ. ಇನ್ನು ಕೆಲವು ಹಾಡುಗಳು ತುಂಬಾ ಸಲೀಸಾಗಿವೆ, ಸರಳವಾಗಿವೆ. ಪದ್ಮಚರಣ್ ಅವರದ್ದು ಸುಲಭಗ್ರಾಹ್ಯವಲ್ಲ. ಅದು ಶಾಸ್ತ್ರೀಯ ಸಂಗೀತದ ಆಧಾರದ ಮೇಲೆ ರೂಪಿತವಾಗಿರೋದ್ರಿಂದ ಹಾಗೆ ಆಗಿದೆ ಅನ್ನಿಸುತ್ತದೆ. ಕಾಳಿಂಗರಾಯರ ಹಾಡುಗಳನ್ನು ಹಾಡುವ ಹಾಗೆ ಪದ್ಮಚರಣ್ ಅವರ ಹಾಡುಗಳನ್ನು ಹಾಡೋದಕ್ಕೆ ಆಗೋದಿಲ್ಲ. ಎಲ್ಲರೂ "ಲೀಲಾವತಿ, ನೀವು ಹಾಡಿದಂತೆ ಯಾರೂ ಹಾಡೋದಿಲ್ಲ ಅಂತಾರೆ." ನಾನು ಪದ್ಮಚರಣ್ ಅವರ ಸಂಪ್ರದಾಯವನ್ನೇ ಮುಂದುವರಿಸಿದ್ದೇನೆ, ಅಲ್ಲದೆ ಕೆಲವನ್ನು ಭಿನ್ನವಾಗಿಯೂ ಅಂತಂದ್ರೆ, ಯಾರ ಕಂಠಕ್ಕೆ ಯಾವುದು ಹೊಂದುತ್ತದೆ ಎನ್ನುವುದನ್ನು ನೋಡಿ ಸಂಗೀತ ಸಂಯೋಜಿಸಲು ಪ್ರಯತ್ನಿಸಿದ್ದೇನೆ. ಆದರೆ ಬೇಸಿಕಲಿ ನನ್ನದು ಪದ್ಮಚರಣ್ ಸ್ಕೂಲ್.

**ಪ್ರ : ನಿಮ್ಮ ಅಕಾಡೆಮಿ ಮತ್ತು ಅದರ ಚಟುವಟಿಕೆಗಳ ಬಗ್ಗೆ ನಮಗೊಂದು ಸ್ವಲ್ಪ ಹೇಳ್ತೀರಾ ?**

**ಲೀ :** ಶಾಸ್ತ್ರೀಯ ಸಂಗೀತಕ್ಕೆ ಬೇಕಾದಷ್ಟು ಸಂಘಸಂಸ್ಥೆಗಳಿವೆ, ಸುಗಮ ಸಂಗೀತಕ್ಕೆ ಯಾವುದೂ ಇಲ್ಲ. ನೀವೇ ಯಾಕೆ ಒಂದು ಸಂಸ್ಥೆಯನ್ನು ಮಾಡಬಾರದು ಎನ್ನುವ ಗೆಳೆಯರೊಬ್ಬರ ಸಲಹೆಯ ಮೇರೆಗೆ ೧೯೮೫ನೆಯ ಇಸವಿ ಮೇ ೧೯ರಂದು ನಾನು, ನನ್ನ ಪತಿ ರಘುರಾಂ ಸೇರಿ ಅಕಾಡೆಮಿಯನ್ನು ಹುಟ್ಟುಹಾಕಿದೆವು. ನಾವು ಪ್ರಾರಂಭದಲ್ಲಿ ವಂತಿಕೆ ಎತ್ತಿದ್ದೆಲ್ಲಾ ಸಂಗೀತಪ್ರೇಮಿಗಳಾದ ನಮ್ಮ ಮನೆಯವರಿಂದ, ವಿದ್ಯಾರ್ಥಿಗಳಿಂದ.



***ಕುವೆಂಪು ಅವರೊಡನೆ ಎಚ್. ಆರ್. ಲೀಲಾವತಿ, ಪತಿ ರಘುರಾಂ***

ಆಸಕ್ತರಿಂದ ಸದಸ್ಯತ್ವ, ವಂತಿಗೆ ತೆಗೆದುಕೊಂಡಿದ್ದೇವೆ. ನಾವು ಅಕಾಡೆಮಿಯಲ್ಲಿ ಎಲ್ಲಾ ಬಗೆಯ ಸಂಗೀತವನ್ನೂ ನಡೆಸ್ತಾ ಇದ್ದೀವಿ. ನಾಟಕ, ಬೊಂಬೆಯಾಟ ಆಡ್ಸಿದ್ವಿ. ಆದರೆ ಹೆಚ್ಚು ಒತ್ತನ್ನು ಸುಗಮ ಸಂಗೀತಕ್ಕೆ ನೀಡ್ತಾ ಇದ್ವಿ. ಸುಗಮ ಸಂಗೀತ ಕ್ಷೇತ್ರದ ಪ್ರತಿಯೊಬ್ಬರೂ ಬಂದು ಇಲ್ಲಿ ಹಾಡಿದ್ದಾರೆ. ಹಾಗೆಯೇ ಏಕಕವಿ ಸಂಜೆಗಳನ್ನು ಮಾಡಿದ್ದೀವಿ. ಬೇಂದ್ರೆ ಸಂಜೆ... ನರಸಿಂಹಸ್ವಾಮಿ ಸಂಜೆ... ಹೀಗೆ. ೧೯೮೫ರಲ್ಲಿ ಬಾಲಮುರಳಿಯವರು ನಮ್ಮ ಐದು ಜನ ವಿದ್ಯಾರ್ಥಿಗಳಿಗೆ ಕಲಿಸಿ, ಅವರ ಜೊತೆಗೆ ಕುಳಿತು ಕಲಾಮಂದಿರದಲ್ಲಿ ಹಾಡಿದರು. ಸುಧೀರ್ ಫಡ್ಕೆಯನ್ನು ಕರೆಸಿ ಗೀತರಾಮಾಯಣ ಕಾರ್ಯಕ್ರಮವನ್ನು ನಡೆಸಿದ್ದೇವೆ. ಬಾಂಬೆ ಜಯಶ್ರೀ ಮೊದಲು ಬಂದಿದ್ದು ನಮ್ಮ ಅಕಾಡೆಮಿಗೇ. ಅಕಾಡೆಮಿಯ ಹತ್ತನೆಯ ವರ್ಷಕ್ಕೆ ದಶಮಾನೋತ್ಸವ ಅಂತ ಬೇರೆ ಬೇರೆ ಕ್ಷೇತ್ರದ ಹತ್ತು ಜನರನ್ನು ಕರೆದು ಸನ್ಮಾನ ಮಾಡಿದ್ದೀವಿ. ಇಪ್ಪತ್ತೈದನೆಯ ವರ್ಷಕ್ಕೆ ಐದು ದಿನ ಕಾರ್ಯಕ್ರಮ ಮಾಡಿ ಇಪ್ಪತ್ತೈದು ಜನಕ್ಕೆ ಸನ್ಮಾನ ಮಾಡಿದೆವು. ಮಹಿಳಾ ಕವಿಗೋಷ್ಠಿಗಳನ್ನು ಮಾಡಿದ್ದೀವಿ.

**ಪ್ರ : ಈಗ ಹಿಂತಿರುಗಿ ಈ ೬೫ ವರ್ಷಗಳ ಸಂಗೀತದ ಬದುಕನ್ನು ನೋಡಿದರೆ ನಿಮಗೆ ಏನನ್ನಿಸುತ್ತದೆ ?**

**ಲೀ :** ಎಷ್ಟೇ ಮಾಡಿದರೂ ಅತೃಪ್ತಿ ಉಳಿದೇ ಉಳಿಯುತ್ತದೆ. ಆದರೆ ನಾನು ಮಾಡುವಷ್ಟು ಕೆಲಸವನ್ನು ಶ್ರದ್ಧೆಯಿಂದ ಮಾಡಿದ್ದೀನಿ ಅನ್ನುವ ಸಮಾಧಾನವಿದೆ. ಗಂಟಲು ಕೆಟ್ಟು ಹೋಗುತ್ತೆ ಅಂತ ಉಪ್ಪು ತುಪ್ಪ ಮತ್ತು ಕಟ್ಟನ್ನ ತಿಂದುಕೊಂಡು ಇರ್ತಾ ಇದ್ದೆ. ಮನೆಯವರಷ್ಟೇ ಪ್ರೋತ್ಸಾಹ ಗಂಡನಿಂದಲೂ ಸಿಕ್ಕಿದೆ. ನನಗೆ ಸಿನಿಮಾದ ಆಫರ್ ಕೂಡ ಬಂದಿತ್ತು. ಪ್ರಭುಲಿಂಗ ಲೀಲೆ, ಪಾಪ ಪುಣ್ಯ, ಸಾವಿತ್ರಿ, ಕುವೆಂಪುರವರ ಸಾಕ್ಷ್ಯ ಚಿತ್ರ ಮುಂತಾದ ಕೆಲವು ಸಿನಿಮಾಗಳಿಗೆ ಹಾಡಿದೆ. ಆದರೆ ಅದನ್ನು ಮುಂದುವರಿಸಲಿಲ್ಲ. ಆಗ ಹಾಡಿದ್ರೆ ಚೆನ್ನಾಗಿ ನೆಲೆಯೂರಿಬಿಡ್ತಿದ್ದೆ. ಆಗ ಪಿ. ಸುಶೀಲ, ಎಸ್. ಜಾನಕಿ ಇವರ್ಯಾರೂ ಇನ್ನೂ ಕನ್ನಡಕ್ಕೆ ಬಂದಿರಲಿಲ್ಲ. ಆ ಬಗ್ಗೆ ನನಗೇನೂ ವ್ಯಥೆ ಇಲ್ಲ. ಏಕೆಂದರೆ ಹಾಗೆ ಹೋಗಿದ್ದರೆ ನನಗೆ ಈ ರಂಗ, ಈ ಕ್ಷೇತ್ರ ಎಲ್ಲಿ ಸಿಕ್ತಾ ಇತ್ತು. ಇದು ಹೆಚ್ಚು ಸಾಹಿತ್ಯಕ ಕ್ಷೇತ್ರ. ವ್ಯಥೆಪಡೋ ಅಂತಹುದು ನನಗೇನೂ ಆಗಿಲ್ಲ. ನಿಜವಾಗಿ ಹೇಳಬೇಕೆಂದರೆ ಸಂಗೀತ ನೃತ್ಯ ಅಕಾಡೆಮಿಗೆ ಸುಗಮ ಸಂಗೀತ ಕ್ಷೇತ್ರದಿಂದ ಬಂದ ಏಕೈಕ ಅಧ್ಯಕ್ಷಳು ನಾನು. I have not lost anything. ಆ ಸಿನಿಮಾ ರಂಗಕ್ಕೆ ಹೋಗದೇ ಇದ್ದದ್ದರಿಂದ ನನಗೆ ಆಕಾಶವಾಣಿ ಸೇರುವಂತಾಯಿತು. ಇಷ್ಟೊಂದು ಪ್ರಯೋಗಗಳನ್ನು ಮಾಡುವುದಕ್ಕೆ ಸಾಧ್ಯ ವಾಯಿತು. I am happy as I am.

**ಶೈಲಜ, ಟಿ. ಎಸ್. ವೇಣುಗೋಪಾಲ್**
ಸಿ.ಎಚ್. – ೭೫, ೭ನೇ ಮುಖ್ಯರಸ್ತೆ, ಸರಸ್ವತಿಪುರಂ
ಮೈಸೂರು – ೫೭೦ ೦೦೯



# ನಗರದ ರೈತ ಬಂಡಾಯ ೧೮೩೦-೩೧

**ಡಾ॥ ಸಿದ್ಧಲಿಂಗ ಸ್ವಾಮಿ**

೧೭೯೯ರಲ್ಲಿ ಬ್ರಿಟಿಷರು ಟಿಪ್ಪುವನ್ನು ಸೋಲಿಸಿದರು. ಈ ಒಂದು ವಿಜಯದ ಫಲವಾಗಿ ಇಡೀ ಮೈಸೂರು ರಾಜ್ಯ ಅದರ ಎಲ್ಲ ಸಂಪನ್ಮೂಲಗಳು ಬ್ರಿಟಿಷರ ಕೈ ಸೇರಿದವು. ಇಂತಹ ಪರಿಸ್ಥಿತಿಯಲ್ಲಿ ಮೈಸೂರು ಸಂಸ್ಥಾನವು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸದೃಢವಾಗಿ ಬೆಳೆಯಲು ಅವಕಾಶವೇ ಇರಲಿಲ್ಲ. ಮೈಸೂರು ಸಂಸ್ಥಾನವನ್ನು ಬ್ರಿಟಿಷರು ೧೮೩೧ರವರೆಗೆ ಪರೋಕ್ಷವಾಗಿ ಮತ್ತು ೧೮೩೧ರ ನಂತರ ನೇರವಾಗಿ ಆಳಲಾರಂಭಿಸಿದಾಗ ಕೃಷಿ ಎಂಬುದು ನಿಂತ ನೀರಾಯಿತು ಅಥವಾ ಅಧೋಗತಿಗಿಳಿಯಿತು. ರೈತಾಪಿ ವರ್ಗದವರ ತೀವ್ರತರ ಶೋಷಣೆಯ ಫಲ ಇದು. ಬ್ರಿಟಿಷ್ ಸಾಮ್ರಾಜ್ಯಶಾಹಿ ರಕ್ಷಣಾ ಕವಚದೊಳಗೆ ನಡೆಯುತ್ತಿದ್ದ ಶೋಷಣೆಯ ಸ್ವರೂಪವನ್ನು ಪೂರ್ವ ವಸಾಹತುಶಾಹಿ ಊಳಿಗಮಾನ್ಯ ಪದ್ಧತಿಯ ಮೇಲೆ ಅವಲಂಬಿತವಾದ ಒಂದು ಸಾಮಂತರಾಜ್ಯದ ಪರಾವಲಂಬಿತನ ಎಂದು ಕರೆಯಬಹುದು. ತತ್ಫಲವಾದ ಪ್ರಕ್ರಿಯೆಯಿಂದ ವಿವಿಧ ವರ್ಗಗಳ ನಡುವೆ ತಾರತಮ್ಯ ಹೆಚ್ಚುತ್ತಾ ಬಂದದ್ದೇ ಅಲ್ಲದೆ ಒಟ್ಟಾರೆ ಸಾಗುವಳಿದಾರರ ಸಮುದಾಯದಿಂದ ಅವರ ಹಿಡುವಳಿಯನ್ನು ಕಿತ್ತುಕೊಳ್ಳುವುದು ಜಾಸ್ತಿಯಾಯಿತು. ಹೀಗೆ ಭೂಮಿ ಕಳೆದುಕೊಂಡ ಸಾಗುವಳಿದಾರರು ಗುಲಾಮ ರೈತರ ಮಟ್ಟಕ್ಕೆ ಇಳಿಯುವಂತಾದದ್ದೇ ಅಲ್ಲದೆ ಭೂರಹಿತ ಕಾರ್ಮಿಕ ವರ್ಗ ಎನ್ನುವುದು ದಿನೇದಿನೇ ಬೆಳೆಯುತ್ತಾ ಬಂದ ವರ್ಗವಾಗಿ ರೂಪುಗೊಂಡಿತು.

ಈ ಕಾಲಾವಧಿಯಲ್ಲಿ ಜರುಗಿದ ನಗರದ ರೈತರ ಬಂಡಾಯ ಒಂದು ಮಹತ್ವಪೂರ್ಣ ಘಟನೆ. ನಗರದ ರೈತ ಬಂಡಾಯ ಒಮ್ಮಿಂದೊಮ್ಮೆಲೆ ಭುಗಿಲೆದ್ದ ಘಟನೆಯಲ್ಲ. ಅನೇಕ ಸಂಗತಿಗಳ ಕೂಡುಫಲವಾಗಿ ನಡೆದ ಘಟನೆ. ಮುಮ್ಮಡಿ ಕೃಷ್ಣರಾಜ ಒಡೆಯರ ದುರಾಡಳಿತ, ಬೂದಿ ಬಸಪ್ಪ ಮತ್ತು ತರಿಕೆರೆ ಪಾಳೆಗಾರರ ಪ್ರಯತ್ನ ಮತ್ತು ಪ್ರಭಾವ, ಪೂರ್ಣಯ್ಯನ ಕಂದಾಯದ ಕಾರ್ಯನೀತಿ, ಅಧಿಕಾರದ ಚುಕ್ಕಾಣಿಯಲ್ಲಿ ಬ್ರಾಹ್ಮಣರ ಏಕಸ್ವಾಮ್ಯ ಮತ್ತು ಕಂಪನಿ ಸರಕಾರವು ರಾಜನ ಅಧಿಕಾರಕ್ಕೆ ತನ್ನ ಬೆಂಬಲ ನೀಡುವುದಿಲ್ಲ ಎಂಬ ನಂಬಿಕೆ ಇವೆಲ್ಲಾ ಈ ಬಂಡಾಯಕ್ಕೆ ಮುಖ್ಯ ಕಾರಣಗಳು. (ನಗರ ಎಂದರೆ ಸಾಗರ, ನಗರ, ಕವಲೆದುರ್ಗ ಕೊಪ್ಪ, ಲಕ್ಕವಳ್ಳಿ, ಸೊರಬ, ಶಿಕಾರಿಪುರ, ಶಿವಮೊಗ್ಗ, ಹೊನ್ನಾಳಿ, ಹರಿಹರ, ಚನ್ನಗಿರಿ, ತರಿಕೆರೆ, ಕಡೂರು ಮತ್ತು ಚಿಕ್ಕಮಗಳೂರು ತಾಲ್ಲೂಕುಗಳನ್ನು ಒಳಗೊಂಡ ಪ್ರದೇಶವಾಗಿತ್ತು. ಈ ಪ್ರದೇಶದ ವ್ಯಾಪ್ತಿಯಲ್ಲಿ ೫೨೭೭ ಹಳ್ಳಿಗಳು, ೧೨೭೭ ಕೊಪ್ಪಲುಗಳಿದ್ದು, ಅಂದಿನ ಜನಸಂಖ್ಯೆ ೪೫೯,೮೪೨ ಆಗಿತ್ತು).

ಬಂಡಾಯದ ಪರಿಣಾಮಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ನಗರದ ಜನತೆಯಲ್ಲಿ ಯಾರ್‍ಯಾರು ಇದ್ದರು ಎಂಬುದನ್ನು ಅಧ್ಯಯನ ಮಾಡಬೇಕಾದ್ದು ಅತ್ಯವಶ್ಯಕ. ನಗರದ ರೈತರಿಗೆ ತಮ್ಮ ನಾಡಿನ ಬಗ್ಗೆ ಅಪೂರ್ವ ಹೆಮ್ಮೆ ಇತ್ತು.

೧೮೩೦ರಲ್ಲಿ ಬೂದಿಬಸಪ್ಪನ ಬೆಂಬಲಿಗರಲ್ಲೊಬ್ಬನು ನಗರ ಪ್ರಾಂತದ ಆನಂದಪುರದ ಕೋಟೆಯನ್ನು ಮುತ್ತಿಗೆ ಹಾಕಲು ಪ್ರಯತ್ನಿಸಿ ವಿಫಲನಾದನು. ಆಗಸ್ಟ್ ೨೩ರಂದು ನಗರದ ರೈತರು ಇತರೇ ಫೌಜಿದಾರಗಳಲ್ಲಿದ್ದ ಇತರ ರೈತರಿಗೆ ಪತ್ರಗಳ ಸುತ್ತೋಲೆ ಕಳಿಸಿ ಕೂಟವಾಗಿ ಸೇರಲು ಆಹ್ವಾನಿಸಿದರು. ಸೆಪ್ಟೆಂಬರ್ ೨೩ರಂದು ಚೆನ್ನಗಿರಿಯ ರೈತರು ತಮ್ಮ ತೆರಿಗೆ ಕಟ್ಟಲು ನಿರಾಕರಿಸಿದರು ಮತ್ತು ನಗರ ಫೌಜುದಾರಿಯ ಇತರ ತಾಲ್ಲೂಕುಗಳು ಇವರನ್ನು ಅನುಸರಿಸಿದವು. ಡಿಸೆಂಬರ್ ತಿಂಗಳಲ್ಲಿ ಫೌಜುದಾರ ವೀರರಾಜ ಅರಸು ಹೊಳೆಹೊನ್ನೂರಿನ ಪ್ರತಿಭಟನಾಕಾರರನ್ನು ಚೆದುರಿಸಲು ಸೇನೆ ಬಳಸಿದನು. ಚಿತ್ರದುರ್ಗ ಮತ್ತು ಬೆಂಗಳೂರು ವಿಭಾಗಗಳ ರೈತರೂ ಕಂದಾಯ ಕಟ್ಟಲು ನಿರಾಕರಿಸಿ ಈ ಚಳುವಳಿಯಲ್ಲಿ ಸೇರಿಕೊಂಡರು. ಇದೇ ಸಮಯದಲ್ಲಿ ರೈತರೊಂದಿಗೆ ಸಂಧಾನ ನಡೆಸಲು ಬೆಂಗಳೂರಿನಲ್ಲಿ ಚಿತ್ರದುರ್ಗ ವಿಭಾಗದಲ್ಲಿ ದಿವಾನ್ ವೆಂಕಟರಾಜ ಪ್ರಯತ್ನ ನಡೆಸಿದನು. ೧೮೩೦ರಲ್ಲಿ ಈ ಕೆಲವೊಂದು ತಾಲ್ಲೂಕುಗಳಿಗೆ ಮಹಾರಾಜನೇ ಖುದ್ದಾಗಿ ಪ್ರವಾಸ ಕೈಗೊಂಡನು. ಆದರೆ ಚೆನ್ನರಾಯಪಟ್ಟಣ ಮತ್ತಿತರ ಸ್ಥಳಗಳಲ್ಲಿ ರೈತರು ಆತನಿಗೆ ಅವಮಾನ ಮಾಡಿದರು. ದಂಗೆಯೆದ್ದವರು ರಾಜನ ಸೇನೆಗೆ ಸಮಸಮನಾಗಿ ಹೋರಾಡಿದರು. ಅವರು ನಗರದ ಕೆಲವೊಂದು ಕೋಟೆಗಳನ್ನು ವಶಪಡಿಸಿಕೊಂಡರು ಮತ್ತು ಕೆಲವೆಡೆ ಮೈಸೂರು ಸೇನೆಯನ್ನು ಹಿಮ್ಮೆಟ್ಟಿಸಿದರು. ೧೮೩೦ರ ಡಿಸೆಂಬರ್ ೨೧ರಂದು ಮೂಳೆಗಳು ಮತ್ತು ಬೇವಿನ ಸೊಪ್ಪನ್ನು (ಪ್ರತಿಭಟನೆಯ ವಾಡಿಕೆಯ ಸಂಕೇತಗಳು) ಹೊತ್ತು ಹೋಗುತ್ತಿರುವ ವ್ಯಕ್ತಿಗಳನ್ನು ದಸ್ತಗಿರಿ ಮಾಡಿ, ವಿಚಾರಣೆ ನಡೆಸಿ, ತಪ್ಪಿತಸ್ಥ ಎಂದು ಕಂಡುಬಂದರೆ ನೇಣು ಹಾಕಬೇಕು ಎಂಬ ಘೋಷಣೆಯನ್ನು ಹೊರಡಿಸಿ ಸಾರಲಾಯಿತು. ಮೂರನೆಯ ದಿನ ಬೆಂಗಳೂರಿನ ಫೌಜುದಾರನಿಗೆ ಪ್ರತಿಭಟನಾಕಾರರನ್ನು ಹಿಡಿದು ನೇಣಿಗೇರಿಸಬೇಕೆಂದು ಆದೇಶಿಸಲಾಯಿತು. ಅನೇಕ ಬಂಡಾಯಕೋರರರನ್ನು ಹಿಡಿದು ನೇಣು ಹಾಕಲಾಯಿತು. ಕೆಲವಾರು ಬಂಡಾಯಕಾರರ ಮೂಗುಗಳು ಮತ್ತು ಕಿವಿಗಳನ್ನು ಕತ್ತರಿಸಿ ಹಾಕಲಾಯಿತು, ಫಲವಾಗಿ ಅನೇಕ ಮಂದಿ ವಿರೂಪಗೊಂಡರು.



ನಗರದ ರಾಜ್ಯಾದಾಯದ ಶೇಕಡ ೭೦ರಷ್ಟು ಕೃಷಿಯಿಂದ ಬರುತ್ತಿತ್ತು ಮತ್ತು ಜನತೆಯ ಶೇಕಡ ೬೦ರಷ್ಟು ಮಂದಿ ಕೃಷಿಯಲ್ಲೇ ನಿರತರಾಗಿದ್ದರು. ೧೮೩೦ರಲ್ಲೇ ಏನೋ ಗಲಭೆ ನಡೆಯುವ ಸೂಚನೆಗಳು ಕಾಣಬರಲಾರಂಭಿಸಿದವು. ದುರ್ಭಿಕ್ಷ ಋತುಮಾನಗಳು, ಪೂರ್ಣಯ್ಯನವರು ಹೇರಿದ ಮಿತಿಮೀರಿದ ಕರಭಾರ ಹಾಗೂ ಅದಕ್ಷ ಆಡಳಿತ ರಾಜ್ಯಾದಾಯ ಇಳಿಮುಖವಾಗಲು ಕಾರಣವಾದವು. ಕಂದಾಯದ ಬಾಕಿಗಳು ೧೩ ಲಕ್ಷ ರೂಪಾಯಿಗಳನ್ನು ಮೀರಿದ್ದವು.

ಮಹಾರಾಜನು ಕ್ರೂರಿಯಾಗಲಿ, ಸುಲಿಗೆ ಮಾಡುವವನಾಗಲಿ ಆಗಿರದಿದ್ದರೂ ಅವನ ಸುತ್ತಮುತ್ತ ಇದ್ದವರೆಲ್ಲಾ ಪರಾವಲಂಬಿಗಳು. ಅಪರಿಮಿತ ಹಣ ಕೈಯಲ್ಲಿದ್ದು,

ಈ ಯುವರಾಜ ಒಬ್ಬ ದುರ್ಬಲ ರಾಜನಾದದ್ದರಲ್ಲಿ ಆಶ್ಚರ್ಯವೇನಿಲ್ಲ. ಕಂದಾಯ ವಸೂಲಿಯ ಜವಾಬ್ದಾರಿ ಹೊತ್ತಿದ್ದ ಕಂದಾಯ ಅಧಿಕಾರಿಗಳು ಎಸಗುತ್ತಿದ್ದ ಅನ್ಯಾಯ ಮತ್ತು ಸ್ವೇಚ್ಛಾಚಾರಗಳಿಂದ ಜನ ರೋಸಿಹೋಗಿದ್ದರು. ಯಾರ ಆಸ್ತಿಗೂ ಭದ್ರತೆ ಇರಲಿಲ್ಲ. ಬೇರೆಲ್ಲಾ ಕಡೆಗಳಿಗಿಂತಲೂ ಈ ಪಿಡುಗು ನಗರದಲ್ಲೆ ಬಹಳ ಹೆಚ್ಚಾಗಿದ್ದರಿಂದ ಈ ಎಲ್ಲ ಗಲಭೆಗಳಿಗೆ ನಗರವೆ ಮೂಲ ಸ್ಥಾನವಾಯಿತು.

**ಬಂಡಾಯದ ಉಗಮ**

ನಗರದ ಬಂಡಾಯಕ್ಕೆ ಮೂಲ ಕಾರಣಗಳು ರಾಜ್ಯಾಡಳಿತದ ವ್ಯವಸ್ಥೆಯ ಅಂತರ್ಯದಲ್ಲಿ ಅಡಗಿದ್ದವು. ಪೂರ್ಣಯ್ಯನ ಕಂದಾಯ ಕಾರ್ಯನೀತಿಯ ಪರಿಣಾಮವಾಗಿ ರೈತರು ಎಂತಹ ಸಂಕಷ್ಟಕ್ಕೆ ಸಿಕ್ಕಿದ್ದರು ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ಪೂರ್ಣಯ್ಯನ ಕಾರ್ಯನೀತಿಯ ಪರಿಣಾಮಗಳು ಆತನ ಆಳ್ವಿಕೆ ಕಾಲದಲ್ಲಿ ಎದ್ದು ಕಾಣಲಿಲ್ಲ. ಏಕೆಂದರೆ ಅದನ್ನು ಸಂಪೂರ್ಣವಾಗಿ ಜಾರಿಗೊಳಿಸಲು ಸಾಕಷ್ಟು ಸಮಯ ಇರಲಿಲ್ಲ ಮತ್ತು ನಾಡಿನಲ್ಲಿ ಬ್ರಿಟಿಷರ ದೊಡ್ಡ ದಂಡೇ ಬೀಡುಬಿಟ್ಟಿತ್ತು.

ಪೂರ್ಣಯ್ಯನ ಆಳ್ವಿಕೆಯ ಕಾಲದಲ್ಲಿ ಶರ್ತ ಅಥವಾ ಕರಾರು ಪದ್ಧತಿ ಜಾರಿಯಲ್ಲಿತ್ತು. ಲಿಖಿತ ಕರಾರಾಗಿದ್ದ ಶರ್ತ ಮುಚ್ಚಳಿಕೆಯ ಮುಖ್ಯ ತತ್ವವೆಂದರೆ ಅಮಲ್ದಾರ ಲಿಖಿತ ಕರಾರು ಮಾಡಿಕೊಳ್ಳುವುದು. ಒಂದು ಜಿಲ್ಲೆಯ ಕಂದಾಯ ವಸೂಲಿಯ ಜವಾಬ್ದಾರಿ ಮತ್ತು ಅದರ ಸಾಧಾರಣ ನಾಗರಿಕ ಹೊಣೆಗಾರಿಕೆಗಳನ್ನು ಹೊಂದಿದ್ದ ಅಧಿಕಾರಿಗಳೇ ಅಮಲ್ದಾರರು. ಅಮಲ್ದಾರರೊಂದಿಗೆ ಮಾಡಿಕೊಳ್ಳುವ ಒಪ್ಪಂದವೆಂದರೆ ಆತ ರಾಜ್ಯಕ್ಕಾಗಿ ಕೆಲವೊಂದು ಮೊಬಲಗನ್ನು ವಸೂಲು ಮಾಡಿಕೊಡಬೇಕು. ಇದು ಸಾಧಾರಣವಾಗಿ ಹಿಂದಿನ ವರ್ಷದ ಕಂದಾಯಕ್ಕಿಂತ ಹೆಚ್ಚಾಗಿರುತ್ತಿತ್ತು. ಒಪ್ಪಿಕೊಂಡ ಮೊಬಲಗಿಗಿಂತ ಕಡಿಮೆ ಬಿದ್ದರೆ ಆ ಕೊರತೆಗೆ ಆತನು ಜವಾಬ್ದಾರನಾಗಿರುತ್ತಿದ್ದನು. ಅದು ಹೆಚ್ಚಳವನ್ನೇನಾದರೂ ಸಂಗ್ರಹಿಸಿದ್ದರೆ ಆ ಮೊಬಲಗು ರಾಜ್ಯಕ್ಕೆ ಸೇರುತ್ತಿತ್ತು.

ಕರಾರುದಾರರಿಗೆ ಒಂದು ಅಥವಾ ಹೆಚ್ಚು ಗ್ರಾಮಗಳನ್ನು ಬಾಡಿಗೆಗೆ ಕೊಡಲಾಗುತ್ತಿತ್ತು, ಅವರು ಅದನ್ನು ಪಟೇಲರು ಮತ್ತಿತರರಿಗೆ ಒಳಬಾಡಿಗೆಗೆ ಕೊಡುತ್ತಿದ್ದರು. ಕರಾರುದಾರನು ಬರೆದುಕೊಡುತ್ತಿದ್ದ ಮುಚ್ಚಳಿಕೆಯಲ್ಲಿ ಕಂದಾಯ ಭೂಮಿಗಳ ಮೇಲಿನ ಬಾಡಿಗೆ ಮನೆಗಳ ಮೇಲೆ ತೆರಿಗೆಗಳು ಹಾಗೂ ಬಟಾಯಿ ಅಥವಾ ಧಾನ್ಯದ ಪಾಲಿನ ಮೌಲ್ಯ ಮುಂತಾದ ನಗದು ವಸೂಲಿ ಅಥವಾ ಸುವರ್ಣಾದಾಯ ಕೂಡ ಸೇರಿರುತ್ತಿತ್ತು. ಇದರಲ್ಲಿ ಬಜೆಬಾಬ್ ಅಥವಾ ಇತರೆ ಕಂದಾಯಗಳು ಸೇರಿರುತ್ತಿರಲಿಲ್ಲ. ಶೇಕ್‌ದಾರನು ಆಗಾಗ್ಗೆ ಯಾರಿಂದ ಎಷ್ಟು ಕಂದಾಯ ಸಂದಾಯವಾಗಿದೆ ಮತ್ತು ಯಾರಿಂದ ಎಷ್ಟು ಕಂದಾಯ ಬಾಕಿ ಇದೆ ಎಂಬ ವರದಿಯನ್ನು ಅಮಲ್ದಾರನಿಗೆ ಕಳುಹಿಸುತ್ತಿದ್ದನು. ವರ್ಷದ ಕೊನೆಯಲ್ಲಿ ಶಿಲ್ಕೇನಾದರೂ ಉಳಿದಿದ್ದರೆ ಅದರ ವಸೂಲಿಗೆ ಪಟೇಲನು ಹೊಣೆಗಾರನಾಗಿರುತ್ತಿದ್ದನು.

ಮಂಜ್ರಾಬಾದ್‌ನಲ್ಲೂ ಶರ್ತ ವ್ಯವಸ್ಥೆ ಇತರೆ ಕಡೆಯಂತೆಯೇ ಚಾಲ್ತಿಯಲ್ಲಿತ್ತು. ಮಳೆ ಬೆಳೆ ಏನೇ ಇರಲಿ, ರೈತನಿಗೆ ಹಣ ಕೊಡುವ ಶಕ್ತಿ ಇರಲಿ ಇಲ್ಲದಿರಲಿ, ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅಮಲ್ದಾರರು ಎಷ್ಟು ಸಿಗುತ್ತೋ ಅಷ್ಟು ವಸೂಲು ಮಾಡುತ್ತಿದ್ದರು. ಈ ವಸೂಲಿಯನ್ನು ಪಟೇಲರುಗಳ ಮೂಲಕ ಮಾಡುತ್ತಿದ್ದರು. ಪಟೇಲರು ವಾಸ್ತವವಾಗಿ ನಾಡುಗಳು (ತಾಲ್ಲೂಕು), ಮುಂಡೆಗಳು (ಹೋಬಳಿಗಳು) ಮತ್ತು ಹಳ್ಳಿಗಳನ್ನು ಬಾಡಿಗೆಗೆ ಕೊಟ್ಟು ತಮ್ಮ ಉಂಬಳಿಗಳ ನಷ್ಟಕ್ಕೆ ಪರಿಹಾರ ಗಳಿಸಿಕೊಳ್ಳಲು ಎಲ್ಲಾ ಎಚ್ಚರಿಕೆ ವಹಿಸುತ್ತಿದ್ದರು.

ಸಾಧಾರಣವಾಗಿ ಅಮಲ್ದಾರರು ಫಸಲನ್ನು ಹಿಡಿದಿಟ್ಟುಕೊಂಡು ಅಥವಾ ಫಸಲಿನ ವ್ಯಾಪಾರವನ್ನು ಪ್ರತಿಬಂಧಿಸಿ ಕಂದಾಯ ವಸೂಲು ಮಾಡುತ್ತಿದ್ದರು. ಯಾವುದೇ ಫಸಲು ಇಲ್ಲದೇ ಹೋದ ಸಮಯದಲ್ಲಿ ಸುಸ್ತಿದಾರನನ್ನು ದಸ್ತಗಿರಿ ಮಾಡುತ್ತಿದ್ದರು. ಆ ಕಾಲದಲ್ಲಿ ಅದು ಮಾಮೂಲು ಕ್ರಮವಾಗಿತ್ತು. ಸುಸ್ತಿದಾರನ ಆಸ್ತಿಯನ್ನು ಮಾರಾಟ ಮಾಡಲಾಗುತ್ತಿತ್ತು. ಅದರಲ್ಲಿ ಶಿಲ್ಕೇನಾದರೂ ಉಳಿದಿದ್ದರೆ ಎಷ್ಟೋ ವರ್ಷಗಳ ನಂತರ ಹಿಂತಿರುಗಿಸುತ್ತಿದ್ದರು. ಸುಸ್ತಿದಾರ ಗೈರುಹಾಜರಾಗಿದ್ದರೆ ಅವನ ಕುಟುಂಬದ ಸದಸ್ಯರಿಂದ ಕಂದಾಯ ಕೇಳಲಾಗುತ್ತಿತ್ತು.

ಅಮಲ್ದಾರನು ತನ್ನ ತಾಲ್ಲೂಕಿಗೆ ಹೋದಾಗ ಹಿಂದಿನ ವರ್ಷದ ಲೆಕ್ಕಪತ್ರಗಳನ್ನು ಪರಿಶೀಲಿಸಿ ನೋಡುತ್ತಿದ್ದನು ಮತ್ತು ತನ್ನ ಹಿಂದಿನ ಅಧಿಕಾರಿ ಮೋಸದಿಂದ ಪಡೆದುಕೊಂಡಿರುವ ಹಣ ಎಂದು ತನಗೆ ಖಚಿತವಾದ ಹಣವನ್ನೆಲ್ಲಾ ತನ್ನ ಲೆಕ್ಕಕ್ಕೆ ಸೇರಿಸಿಕೊಳ್ಳುತ್ತಿದ್ದನು. ಅವನ ಹಿಂದಿನ ಅಧಿಕಾರಿಗಳು ಮಹಾಭ್ರಷ್ಟರಾಗಿದ್ದರೆ ಶರ್ತಿ ಅಮಲ್ದಾರನು ತನ್ನ ಲೆಕ್ಕಕ್ಕೆ ಮಾಡಿಕೊಳ್ಳುತ್ತಿದ್ದ ವಸೂಲಿ ಹಣದಿಂದ ಬಹಳ ಪ್ರಯೋಜನ ಪಡೆಯುತ್ತಿದ್ದನು. ಆದರೆ ಅಂತಹ ಮೂಲ ದೊರಕದೇ ಇದ್ದರೆ ಹೊಸ ಅಮಲ್ದಾರನು ತನ್ನ ಮನಸೋ ಇಚ್ಛೆ ಕಂದಾಯ ವಿಧಿಸುವುದಕ್ಕೆ ತೊಡಗಬೇಕಾಗುತ್ತಿತ್ತು.

ಶರ್ತಿ ಅಮಲ್ದಾರನು ರೈತನ ಜೊತೆ ವೈಯಕ್ತಿಕವಾಗಿ ಒಂದು ಇತ್ಯರ್ಥ ಮಾಡಿಕೊಂಡ ಮೇಲೆ, ಆತ ಬಂಜರು ಭೂಮಿ ಎಂದು ಘೋಷಿಸಿದ್ದ ವಿಸ್ತಾರ ಭೂಮಿಯನ್ನು ವಾಸ್ತವವಾಗಿ ಸಾಗುವಳಿ ಮಾಡಲಾಗುತ್ತಿತ್ತು. ಆದ್ದರಿಂದ ಅಮಲ್ದಾರರು ಇನ್ನೂ ಹೆಚ್ಚು ಬಂಜರು ಭೂಮಿಯನ್ನು ಆಗೊಮ್ಮೆ ಈಗೊಮ್ಮೆ ಬರೆದಿರುವ ಸಾಧ್ಯತೆ ಇದೆ. ಆತನ ಮುಖ್ಯ ಉದ್ದೇಶವೆಂದರೆ ಹೆಚ್ಚು ಕಂದಾಯ ಬಂದಿದೆ ಎಂಬುದನ್ನೆ ತೋರಿಸುವುದು. ಅಮಲ್ದಾರನು ವಸೂಲಿ ಮಾಡಬೇಕೆಂದು ನೇಮಿಸಲಾದ ಮೊಬಲಗು ಸಾಮಾನ್ಯವಾಗಿ ಹಿಂದಿನ ವರ್ಷ ವಸೂಲಿ ಮಾಡಿದ್ದಕ್ಕಿಂತ ಜಾಸ್ತಿಯಾಗಿರಬೇಕಿತ್ತು.

ಶರ್ತಿ ಅಮಲ್ದಾರನು ಮಾಡಿಕೊಂಡ ಕರಾರಿನ ಪ್ರಕಾರ ಅವನು ರೈತರನ್ನು ಹತ್ತಿಕ್ಕಬೇಕಾಗಿರಲಿಲ್ಲ. ವಾಸ್ತವವಾಗಿ ಅವನು ಮನಸೋ ಇಚ್ಛೆ ಮತ್ತು ಸಂಪ್ರದಾಯ ಮೀರಿದ ತೆರಿಗೆ ವಿಧಿಸುವುದಿಲ್ಲ, ಹಾಗೆಯೇ ಸರ್ಕಾರದ ಪಾಲಿಗೆ ಬಂದ ಧಾನ್ಯವನ್ನು ಕೊಂಡುಕೊಳ್ಳಲು ಒತ್ತಾಯಿಸುವುದಿಲ್ಲ ಎಂದು ಪ್ರಮಾಣ ಮಾಡಿರುತ್ತಾನೆ. ಕೂಲಿ ಕೊಡದೆ ಯಾರಿಂದಲೂ ಬಿಟ್ಟಿ ಕೆಲಸ ಮಾಡಿಸಿಕೊಳ್ಳುವುದಿಲ್ಲ, ಭೂಮಿಯ ಬಗ್ಗೆ ಹಣದ ರೂಪದ ಕಂದಾಯ ನಿರ್ಧಾರವಾಗಿರುವ ಕಡೆ ನಿಗದಿತ ಬಾಡಿಗೆಗಿಂತ ಹೆಚ್ಚು ಹಣಕ್ಕಾಗಿ ತಗಾದೆ ಮಾಡುವುದಿಲ್ಲ ಎಂದೂ ವಾಗ್ದಾನ ಮಾಡಿರುತ್ತಾನೆ.

ಇಷ್ಟೆಲ್ಲಾ ಮುನ್ನೆಚ್ಚರಿಕೆ ವಹಿಸಿದ್ದರೂ, ಶರ್ತಿ ವ್ಯವಸ್ಥೆಯು ಸಂಬಂಧಪಟ್ಟ ಎಲ್ಲರಿಗೂ, ಅಂದರೆ ಸರ್ಕಾರ, ರೈತರು ಮತ್ತು ಖುದ್ದು ಅಮಲ್ದಾರರಿಗೆ ಅನಾನುಕೂಲವಾಗುವುದನ್ನು ತಪ್ಪಿಸಲಾಗಲಿಲ್ಲ. ಅಮಲ್ದಾರನು ಪ್ರಾಧಿಕೃತವಾಗಿ ಮತ್ತು ತೆರಿಗೆಯಿಂದ ನಿಗದಿತ ಕಂದಾಯ ಪಡೆಯುವುದು ಸಾಧ್ಯವಾಗದೇ ಹೋದಾಗ ಮನಸ್ಸಿಗೆ ಬಂದಂತೆ ಕಂದಾಯ ನಿಗದಿ ಮಾಡಲು ಪ್ರಾರಂಭಿಸುತ್ತಿದ್ದನು. ಭೂಮಿಯ ಉತ್ಪನ್ನವನ್ನು ಹೆಚ್ಚಾಗಿ ನಿರ್ಧರಿಸುವುದು, ಸರ್ಕಾರದ ಧಾನ್ಯವನ್ನು ಮಾರುಕಟ್ಟೆ ದರಕ್ಕೂ ಹೆಚ್ಚಿನ ದರದಲ್ಲಿ ಒತ್ತಾಯವಾಗಿ ಮಾರುವುದು, ಮುಂತಾದ ಹಣ ಸಂಗ್ರಹಣಾ ವಿಧಾನಗಳು ಅವರು ಕೊಡುತ್ತಿದ್ದ ಹಿಂಸೆಯಲ್ಲಿ ಸೇರಿದ್ದವು. ಹೀಗಾಗಿ ರೈತರ ಬಡತನ ಹೆಚ್ಚುತ್ತಾ ಹೋಯಿತು. ಇದರಿಂದ ಅಮಲ್ದಾರರಿಗೆ ನಷ್ಟವಾಗಲಾರಂಭಿಸಿತು. ಅವರು ಆಸ್ತಿವಂತರಾಗಿರದಿದ್ದರೆ ಅಥವಾ ಆ ಸ್ಥಾನದಲ್ಲಿ ಪ್ರಭಾವವಿಲ್ಲದವರಾದರೆ ಈ ಕೊರತೆಯನ್ನು ಅವರೇ ತುಂಬಿಕೊಡಬೇಕೆಂದು ಕಟ್ಟುನಿಟ್ಟಾಗಿ ಒತ್ತಾಯಿಸಲಾಗುತ್ತಿತ್ತು.

ಹೀಗೆ ಶರ್ತಿ ವ್ಯವಸ್ಥೆಯು ರೈತರು ಮತ್ತು ಸರ್ಕಾರ ಇಬ್ಬರಿಗೂ ಅತ್ಯಂತ ಹಾನಿಕಾರಕವಾಗಿ ಪರಿಣಮಿಸಿತು. ಹೆಚ್ಚು ಕಂದಾಯ ಸಂಗ್ರಹಿಸಿದ ಅಮಲ್ದಾರರನ್ನು ಬದಲಾಯಿಸುತ್ತಿದ್ದುದರಿಂದ ಈ ದುಷ್ಟ ಕಾರ್ಯಾಚರಣೆ ಇನ್ನಷ್ಟು ದುಷ್ಟವಾಯಿತು. ಇದು ಯಾವ ಮಟ್ಟಕ್ಕೆ ಹೋಯಿತೆಂದರೆ ನಿಗದಿಪಡಿಸಿದ ಕಂದಾಯವನ್ನು ವಸೂಲಿ ಮಾಡಲು ತಪ್ಪಿದ ಅಮಲ್ದಾರನನ್ನು ತೆಗೆದುಹಾಕಿದವನ ಜಾಗಕ್ಕೆ ಹೆಚ್ಚಿನ ದರದಲ್ಲಿ ಸವಾಲು ಕೂಗುವವನನ್ನು ನೇಮಿಸಲಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ನೇಮಕಗೊಂಡ ಅಮಲ್ದಾರರು ತಮ್ಮ ತಮ್ಮ ಜಿಲ್ಲೆಯ ಏಳ್ಗೆಗೆ ದುಡಿಯಲಾರದೇ ಹೋದರು. ಅವರಿಗಿದ್ದ ಮುಖ್ಯ ಉದ್ದೇಶ ಒಂದೇ : ತಮ್ಮ ಅಧಿಕಾರಸ್ಥಾನದ ಅನಿಶ್ಚಿತತೆ ಕಾರಣದಿಂದ ತಮ್ಮ ಶಕ್ತ್ಯಾನುಸಾರ ಎಷ್ಟು ಸಿಗುತ್ತೋ ಅಷ್ಟೂ ಹಣವನ್ನು ವಸೂಲಿ ಮಾಡಿಕೊಳ್ಳುತ್ತಿದ್ದರು. ರೈತನಿಗೆ ಅನುಕೂಲವಾಗಲಿ ಎಂದು ಕಿಂಚಿತ್ತೂ ತ್ಯಾಗಮಾಡಲು ಅವರು ತಯಾರಿರಲಿಲ್ಲ. ಹೀಗಾಗಿ ಅಮಲ್ದಾರರು ಒಂದು ಕಡೆ ಸರ್ಕಾರದ ಹಣ ಲಪಟಾಯಿಸುತ್ತಿದ್ದುದೇ ಅಲ್ಲದೆ ರೈತರನ್ನು ಕೊತ್ತಳ ತುಳಿಯುತ್ತಿದ್ದರು.

ಈ ಸಂಬಂಧದಲ್ಲಿ ಅನೇಕ ವರ್ಷಗಳ ತರುವಾಯ ಕಮಿಷನರ್ ಬೌರಿಂಗ್ ವಿಶಾಲ ಭೂಪ್ರದೇಶವನ್ನು ಅತಿಹೆಚ್ಚು ಸವಾಲು ಕೂಗಿದವನಿಗೆ ಗೇಣಿಗೆ ಕೊಡುತ್ತಿದ್ದ ತಪ್ಪು ಪದ್ಧತಿಯೇ ಪ್ರಮುಖ ಕಾರಣವಾಗಿ ಅದರಿಂದ ರೈತರ ದಮನ ಮತ್ತು ಗೇಣಿದಾರರಲ್ಲಿನ ಅತೃಪ್ತಿ ಭುಗಿಲೆದ್ದು ನಗರದ ಬಂಡಾಯಕ್ಕೆ ಕಾರಣವಾಯಿತು ಎಂದು ಹೇಳಿದ್ದಾನೆ.

ಕರಾರುದಾರರು (ಅಮಲ್ದಾರರು) ಸಾಂಪ್ರದಾಯಿಕ ಕಂದಾಯ ವಸೂಲಿಯನ್ನು ಹೆಚ್ಚಿಸಲು ಮತ್ತು ವಾರಂ ಸಾಗುವಳಿಗೆ ಉತ್ತೇಜನ ನೀಡಲು ಉದ್ದೇಶಿಸಿ ಶರ್ತಿ ಪದ್ಧತಿಯನ್ನು ಜಾರಿಗೆ ತರಲಾಯಿತು. ಆದರೆ ವಾರ್ಷಿಕ ಕಂದಾಯದಲ್ಲಿ ಸುಸ್ಥಿರತೆಯನ್ನು ತರುವ ಅಥವಾ ಕಂದಾಯವನ್ನು ಹೆಚ್ಚಿಸುವ ಬಗ್ಗೆ ಇಟ್ಟುಕೊಂಡಿದ್ದ ನಿರೀಕ್ಷೆಯನ್ನು ಪೂರೈಸಲು ವಿಫಲವಾಯಿತು. ಆರಂಭದ ವರ್ಷದಲ್ಲಿ ಕಂದಾಯದ ಏರಿಳಿತ ನಿಯಂತ್ರಿಸಲು ಬಹಳ ಅನುಕೂಲಕಾರಿ ಎಂದು ಕಂಡುಬಂತು, ಆದರೆ ಮುಂದೆ ಬಹಳಷ್ಟು ಬಾಕಿ ಉಳಿದುಹೋಯಿತು ಮತ್ತು ಸಂಗ್ರಹವಾಗುತ್ತಾ ಬಂತು. ಕೊನೆಕೊನೆಗೆ ಇದೊಂದು ಭೂಕಂದಾಯವನ್ನು ಒಂದು ಅಥವಾ ಎರಡು ವರ್ಷಗಳ ಕಾಲ ಒತ್ತೊಟ್ಟಿಗೆ ಹೆಚ್ಚಿಗೆ ಸವಾಲು ಕೂಗುವವನಿಗೆ ಹರಾಜು ನೀಡುವ ವ್ಯವಸ್ಥೆಯಾಗಿಹೋಯಿತು.

**ರಾಜ್ಯದ ಹುದ್ದೆಗಳ ನೀಡಿಕೆ ಮತ್ತು ಸ್ವಜನ ಪಕ್ಷಪಾತ**

ಶರ್ತಿ ಪದ್ಧತಿಯು ರಾಜನ ಸಲಹೆಗಾರರಾದ ಮಾಸಾಹಿಬ್‌ಗಳು ತಮ್ಮ ಬಂಧುಮಿತ್ರರನ್ನು ಸರ್ಕಾರದ ಸೇವೆಗೆ ಸೇರಿಸಿಕೊಳ್ಳುವುದಕ್ಕೆ ಸಹಾಯ ಮಾಡಿತು. ಪರಿಣಾಮವಾಗಿ ಅಯೋಗ್ಯ ವ್ಯಕ್ತಿಗಳು ಜಿಲ್ಲಾ ಕಚೇರಿಗಳಿಗೆ ನೇಮಿತರಾದರು. ದಕ್ಷರಾಗಿದ್ದ ಕೆಲಸಗಾರರನ್ನು ತೆಗೆದುಹಾಕಲಾಯಿತು. ಈ ಸಂದರ್ಭದಲ್ಲಿ ವೀಣೆ ವೆಂಕಟಸುಬ್ಬಯ್ಯ ಎಂಬುವವನ ಬಗ್ಗೆ ಹೇಳಲೇಬೇಕು. ಈತನನ್ನು ವಿಚಾರಣಾ ಸಮಿತಿ "ಬಹಳ ನೀತಿಗೆಟ್ಟ ಬ್ರಾಹ್ಮಣ" ಎಂದು ಕರೆದಿದೆ. ರಾಜಕುಮಾರನನ್ನು ತಪ್ಪು ದಾರಿಗೆಳೆಯುವಲ್ಲಿ ಮತ್ತು ರಾಜ್ಯದ ದುರಾಡಳಿತಕ್ಕೆ ಈತನ ಕೊಡುಗೆ ಅಪಾರ ಎಂದು ವಿಚಾರಣಾ ಸಮಿತಿ ಹೇಳಿದೆ.

ರಾಮರಾವ್ ಅಂತಹ ಇನ್ನೊಬ್ಬ ವ್ಯಕ್ತಿ. ಈತನನ್ನು ಪೂರ್ಣಯ್ಯನ ನಂತರ ದಿವಾನನನ್ನಾಗಿ ನೇಮಿಸಲಾಯಿತು. ೧೮೧೧ರಿಂದ ೧೮೧೨ರ ವರೆಗೆ ಈತ ದಿವಾನನಾಗಿದ್ದನು. ಈತ ಈ ಹಿಂದೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಳಿ ಅಶ್ವದಳದ ಸೇನಾಧಿಕಾರಿಯಾಗಿ ಕೆಲಸ ಮಾಡಿದ್ದನು. ೧೭೯೯ರಲ್ಲಿ ಇವನನ್ನು ನಗರದ ಫೌಜುದಾರನನ್ನಾಗಿ ಪೂರ್ಣಯ್ಯ ನೇಮಿಸಿದ್ದನು. ಅಲ್ಲಿ ಈತ ೧೮೦೨ರ ವರೆಗೆ ಫೌಜುದಾರನಾಗಿದ್ದನು. ಆತನ ಪ್ರಭಾವದಿಂದ ಫೌಜುದಾರಿಯ ಎಲ್ಲ ಪ್ರಮುಖ ಹುದ್ದೆಗಳನ್ನು ಅವನ ನೆಂಟರಿಂದಲೇ ತುಂಬಲಾಯಿತು. ಹೀಗೆ ೧೭೯೯ರಿಂದ ೧೮೩೨ರವರೆಗೆ ಯಾವುದೇ ಅಡೆತಡೆಯಿಲ್ಲದೆ ಅವನ ಹಿತಾಸಕ್ತಿ ಕಾಯುವ ಒಂದು ಗುಂಪು ಸಿದ್ಧವಾಯಿತು. ಈ ಕುಟುಂಬದ ಬಹಳಷ್ಟು ಸದಸ್ಯರುಗಳ ಬಗ್ಗೆ ಸಂಶಯವಿರಲಿ, ಎಗ್ಗುಸಿಗ್ಗಿಲ್ಲದ ಮೋಸ ಮತ್ತು ಹಣದ ಕಬಳಿಕೆ ಬಗ್ಗೆ ಆಪಾದನೆಗಳು ಇದ್ದವು. ಕೆಲವರು ದರೋಡೆಕೋರರಿಗೆ ಉತ್ತೇಜನ ನೀಡಿದ್ದಷ್ಟೇ ಅಲ್ಲ,

ಅವರ ಲೂಟಿಯಲ್ಲಿ ತಾವೂ ಪಾಲು ಪಡೆದುಕೊಳ್ಳುತ್ತಿದ್ದರು. ಹೀಗೆ ಅವರ ಪಾಡಿಗೆ ಅವರು ಯಾವುದೇ ಅಡೆತಡೆ ಇಲ್ಲದೆ ಭ್ರಷ್ಟಾಚಾರ ಮತ್ತು ದುರಾಡಳಿತವನ್ನು ನಡೆಸಿಕೊಂಡು ಹೋಗಲು ಬಿಟ್ಟುಬಿಡಲಾಗಿತ್ತು. ಹೀಗೆ ಯಾವುದೇ ದಾರಿ ಅಥವಾ ಪರಿಹಾರ ಕಾಣದ ರೈತರು ನ್ಯಾಯ ಕೋರಿ ರೆಸಿಡೆಂಟನ ಸುತ್ತ ಪೇರಿಸಿದರು.

ಸಂಕಷ್ಟಕ್ಕೀಡಾದ ಇಕ್ಕೇರಿ ರೈತರು ರೆಸಿಡೆಂಟನಿಗೆ ಬರೆದ ಬಿನ್ನವತ್ತಳೆಯಲ್ಲಿ ಹೀಗೆ ಬರೆದರು; "ಈ ರಾಜ್ಯದ ಸಾರ್ವಭೌಮನಾಗಿ ಟಿಪ್ಪು ಸುಲ್ತಾನನು ಆಳುತ್ತಿದ್ದ ಕಾಲದಲ್ಲಿ ನಾವೆಲ್ಲ ಶಾಂತಿ ಸುಭಿಕ್ಷದಿಂದ ಬಾಳುತ್ತಿದ್ದೆವು. ರಾಜರ ಸರ್ಕಾರದಲ್ಲಿ ಅಧಿಕಾರಿಗಳ ತುಳಿತ ಮತ್ತು ಕ್ರೌರ್ಯ ದಿನೇ ದಿನೇ ಹೆಚ್ಚಾಗಿದ್ದು ಅದು ನಾವು ತಾಳಲಾರದಷ್ಟು ಮಿತಿ ಮೀರಿದೆ. ಅಧಿಕಾರಿಗಳ ಸುಲಿಗೆ ಎಷ್ಟು ಮಿತಿ ಮೀರಿದೆ ಎಂದರೆ ಅವರಿಗೆ ಹಣ ಕೊಡಲು ಅನೇಕ ಬಾರಿ ಮಕ್ಕಳು ಮರಿಗಳನ್ನೇ ಮಾರಿಕೊಳ್ಳಬೇಕಾಗಿ ಬಂದಿದೆ."

ನಗರದ ಪ್ರಾಂತದಲ್ಲಿ ಎಷ್ಟೊಂದು ಕ್ರೌರ್ಯ ಮತ್ತು ಕೊಲೆ ನಡೆಸಲಾಗುತ್ತಿತ್ತು ಎಂಬುದನ್ನು ಈ ಮುಂದಿನ ಮಾತುಗಳಿಂದ ಅರ್ಥ ಮಾಡಿಕೊಳ್ಳಬಹುದು. ೧೮೨೭ರ ಜನವರಿಯಲ್ಲಿ ಯಲ್ಲಹಳ್ಳಿ ಪಟ್ಟಣದಲ್ಲಿ ಒಂದು ಬ್ಯಾಂಕನ್ನು ಒಡೆದು ನುಗ್ಗಿ ಅನೇಕ ವ್ಯಕ್ತಿಗಳ ಕೊಲೆ ಮಾಡಲಾಯಿತು ಹಾಗೂ ೩.೫ ಲಕ್ಷ ರೂಪಾಯಿಯನ್ನು ಕೊಂಡೊಯ್ಯಲಾಯಿತು. ಇದು ಚನ್ನಗಿರಿ (ನಗರದ ಒಂದು ತಾಲ್ಲೂಕು) ಅಮಲ್ದಾರ ಅಣ್ಣೀಗರಿ ವೆಂಕಟರಾವ್ ಮತ್ತು ನಗರದ ಸ್ಥಾಪಕನಾದ ಹಾನಗಲ್ ಕೃಷ್ಣರಾವ್ ಅವರು ಯೋಜನೆ ಹಾಕಿ ಮಾಡಿಸಿದ ಕೃತ್ಯ ಎಂಬುದು ಜನಜನಿತ ನಂಬಿಕೆ. ಈ ಬಗ್ಗೆ ವಿಚಾರಣೆ ನಡೆಸಬೇಕೆಂದು ಮನವಿ ಸಲ್ಲಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೊಮ್ಮೆ ಒಂದು ವಿಚಾರಣೆ ನಡೆಸಲು ಆದೇಶಿಸಲಾಯಿತು. ತನಿಖೆ ನಡೆಯುತ್ತಿದ್ದ ಕಾಲದಲ್ಲಿ ಇದ್ದಕ್ಕಿದ್ದಂತೆ ಅದನ್ನು ಕೈಬಿಡಲಾಯಿತು, ಅಧಿಕಾರಿಯನ್ನು ಹಿಂದಕ್ಕೆ ಕರೆಸಿಕೊಳ್ಳಲಾಯಿತು. ಉನ್ನತ ರಾಜ್ಯಾಧಿಕಾರಿಗಳಿಗೂ ನಗರದ ಭ್ರಷ್ಟ ಅಧಿಕಾರಿಗಳಿಗೂ ಬಹಳ ನಿಕಟ ಸಂಬಂಧ ಇತ್ತು ಎಂಬುದು ಇದರಿಂದ ಗೊತ್ತಾಗುತ್ತದೆ.

ಜನತೆಯ ಹತಾಶೆ ದೇಶದ ವಿವಿಧ ಭಾಗದಲ್ಲಿ ಪದೇಪದೇ ನಡೆದ ಕಳ್ಳತನ ಮತ್ತು ಜನತೆಗೆ ಯಾವ ಭದ್ರತೆಯನ್ನೂ ಒದಗಿಸಲಿಲ್ಲವೆಂಬ ಸತ್ಯ ಸಂಗತಿ ರೈತ ಬಂಡಾಯ ಬೃಹತ್ ಪ್ರಮಾಣದಲ್ಲಿ ಜರುಗಲು ಉತ್ತೇಜಿಸಿತು.

**ಬೂದಿ ಬಸಪ್ಪನ ಪಾತ್ರ**

ಬೂದಿ ಬಸಪ್ಪನು ನಗರದ ಪರಂಪರಾಗತ ಪಟ್ಟಕ್ಕೆ ತಾನು ಹಕ್ಕುದಾರ ಎಂದು ಮಾಡಿದ ನಟನೆಯಿಂದ ಉಂಟಾದ ಭಾವಾವೇಶದಿಂದ ಪರಿಸ್ಥಿತಿ ಇನ್ನೂ ಉಲ್ಬಣವಾಯಿತು. ಬೂದಿ ಬಸಪ್ಪನನ್ನು ಕೆನರಾ ಜಿಲ್ಲೆಯಲ್ಲಿ ಕಳ್ಳತನದ ಆರೋಪದ ಮೇಲೆ ಶಿಕ್ಷಿಸಲಾಯಿತು. ಜೈಲಿನಿಂದ ಬಿಡುಗಡೆ ಆದಮೇಲೆ ಆತನು ಬೂದಿ ಬಸವಪ್ಪ ನಗರ ಖಾವಿಂದ್ ಎಂಬ ಪದನಾಮವುಳ್ಳ ಜಿಲ್ಲಾ ನ್ಯಾಯಾಲಯದ ಮುದ್ರೆಯುಳ್ಳ ಒಂದು ರಹದಾರಿಯನ್ನು ಪಡೆದುಕೊಂಡಿದ್ದನು. ಜನತೆಯ ಮೌಢ್ಯದ ಬಗ್ಗೆ ಆಟವಾಡುತ್ತ ಆತ ಅದೇ ರಹದಾರಿಯನ್ನು ಕಂಪನಿ ಸರ್ಕಾರವು ನಗರದ ಪಟ್ಟಕ್ಕೆ ತನ್ನ ವಂಶಪಾರಂಪರ್ಯ ಹಕ್ಕನ್ನು ಗುರುತಿಸಿ ಮಂಜೂರು ಮಾಡಿದ ಸನ್ನದು ಎಂದು ಎಲ್ಲರಿಗೂ ತೋರಿಸಿ ನಂಬಿಸುವಲ್ಲಿ ಯಶಸ್ವಿಯಾದನು. ೧೮೩೦ರಲ್ಲಿ ಭಕ್ಷಿ ರಾಮರಾಯರ ಬಂಧು ಆನವಟ್ಟಿ ಲಕ್ಷ್ಮಣರಾಯನ ನೆರವಿನೊಂದಿಗೆ ತನ್ನ ಮದುವೆ ಸಮಾರಂಭವನ್ನು ನೆರವೇರಿಸಿ ಯಶಸ್ವಿಯಾದನು. ಒಂದು ಅಧಿಕೃತ ದಸ್ತಾವೇಜಿನಲ್ಲಿ ಅವನ ಹೆಸರಿಗೆ 'ನಗರದ ರಾಜ' ಎಂಬ ಬಿರುದೂ ಸೇರಿಕೊಂಡಿತು. ಇಲ್ಲಿ ಹೇಳಲೇಬೇಕಾದ ಇನ್ನೊಂದು ಉತ್ಸವ ಜರುಗಿತು. ಅನೇಕ ಪಟೇಲರ ಸಮ್ಮುಖದಲ್ಲಿ ನಗರದ ಸಾರ್ವಭೌಮನಾಗಿ ಬೂದಿ ಬಸಪ್ಪನ ಪಟ್ಟಾಭಿಷೇಕವನ್ನು ವಿಧ್ಯುಕ್ತವಾಗಿ ನಡೆಸಲಾಯಿತು.

**ತರಿಕೆರೆ ಪಾಳೆಯಗಾರರ ಸಂಚಲನ**

ಬೂದಿ ಬಸಪ್ಪನ ತರುವಾಯ ತರಿಕೆರೆ ಪಾಳೆಯಗಾರರ ಕುಟುಂಬದ ಮುಖ್ಯಸ್ಥನಾದ ರಂಗಪ್ಪ ನಾಯಕನ ಸರದಿ. ತರಿಕೆರೆ ಕುಟುಂಬದವರು ಬಹಳ ಕಾಲದಿಂದ ಅಧಿಕಾರ ಕಳೆದುಕೊಂಡಿದ್ದರು. ಅವರು ಗಾಢ ಪ್ರಭಾವ ಬೀರಬಲ್ಲವರಾಗಿದ್ದರು. ಸ್ವಲ್ಪಮಟ್ಟಿಗೆ ರೈತರೂ ಅದಕ್ಕೆ ಮನ್ನಣೆ ನೀಡಿದ್ದರು.

ರಂಗಪ್ಪ ನಾಯಕನು ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಕಾಯುತ್ತಿದ್ದನು. ರೈತರ ಅತೃಪ್ತಿಯ ಲಾಭ ಪಡೆಯಲು ಹವಣಿಸಿದನು. ರೈತರ ಮೇಲೆ ಕರಭಾರವು ಬಹಳ ಕಮ್ಮಿಯಿದ್ದ ಕಾಲವನ್ನು ಅವರಿಗೆ ನೆನಪಿಸಿ ತನ್ನನ್ನು ನಗರದ ರಾಜನೆಂದು ಸಾರ್ವಜನಿಕವಾಗಿ ಮಾನ್ಯ ಮಾಡಿ ತನ್ನ ಹಕ್ಕಿಗೆ ಬೆಂಬಲ ನೀಡಿದರೆ ಅಂಥದ್ದೇ ಸುದಿನವನ್ನು ಮತ್ತೆ ತರುವುದಾಗಿ ಜನತೆಯನ್ನು ಪ್ರಚೋದಿಸಿ ತನ್ನ ಹಕ್ಕಿಗಾಗಿ ಒತ್ತಾಯಿಸಿದನು.

**ಪಟೇಲರ ಅತೃಪ್ತಿ**

ಪೂರ್ಣಯ್ಯನು ಅನೇಕ ಪಟೇಲರ ಹುದ್ದೆಗಳನ್ನು ಕಸಿದುಕೊಂಡನು ಮತ್ತು ಅವರ ಉಂಬಳಿಗಳನ್ನು ರದ್ದುಪಡಿಸಿದನು. ಸಹಜವಾಗಿ ಅವರೆಲ್ಲ ಅಸಮಾಧಾನಗೊಂಡರು. ಇದರ ಜೊತೆಗೆ ಜನಸಾಮಾನ್ಯರಲ್ಲಿ ಸ್ವಾತಂತ್ರ್ಯದ ಹುರುಪು ಬೆಳೆಯುತ್ತಿರುವುದು, ಪಟೇಲರ ಅಧಿಕಾರ ಮತ್ತು ಪಾಳೆಯಗಾರಿಕೆಗೆ ಕುತ್ತು ಬರುವುದೆಂದು ಹಾಗೂ ರೈತರು ತಮಗೆ ಮನಸ್ಸಿಲ್ಲದಿದ್ದರೂ ಬಗ್ಗಿ ದುಡಿದು ಕೊಡುವಂತೆ ಮಾಡುವ ಅಧಿಕಾರ ತಪ್ಪಿಹೋಗುವ ಭಯ ಉಂಟಾಯಿತು. ತಮ್ಮ ಕೈ ತಪ್ಪಿದ ಅಧಿಕಾರವನ್ನು ಮತ್ತೆ ಪಡೆಯಲು ಪಟೇಲರು ಸೂಕ್ತ ಅವಕಾಶಕ್ಕಾಗಿ ಕಾಯುತ್ತಿದ್ದರು.

ನಗರದ ಈ ಗ್ರಾಮೀಣ ಭೂಮಿಕೆಯಲ್ಲಿ ಒಂದು ಗಮನಾರ್ಹ ಅಂಶವೆಂದರೆ ಎಲ್ಲರೂ 'ಹಿರಿಯ ರೈತ' ಎಂದು ಕರೆಯುತ್ತಿದ್ದ ಒಬ್ಬ ಪ್ರಖ್ಯಾತ ರೈತ ಮತ್ತು ಪ್ರಭಾವಿ ಜಮೀನ್ದಾರನು ಇದ್ದದ್ದು. ಸಾಮಾನ್ಯವಾಗಿ ಯಾವುದೇ ವಿಷಯಕ್ಕೂ ಅವನ ಸಲಹೆ ಇಲ್ಲದೆ ಮುಂದುವರಿಯುತ್ತಿರಲಿಲ್ಲ. ಅಧಿಕಾರಿಗೆ ಏನೇ ಮನವಿ ಸಲ್ಲಿಸುವಾಗಲೂ ಈತನೇ ಮುಂದೆ ನಿಂತು ಮಾತನಾಡುತ್ತಿದ್ದನು. ಇನ್ನು ಮಲೆನಾಡಿನಲ್ಲಿ ಪ್ರತಿಯೊಂದು ಮಾಗಣಿಯಲ್ಲೂ (ತಾಲ್ಲೂಕು ಉಪ ವಿಭಾಗ) ಇಬ್ಬರು ಅಥವಾ ಮೂವರು ಹೆಗ್ಗಡೆಗಳು ತಮ್ಮ ಸೀಮೆ ಅಥವಾ ಜಿಲ್ಲೆಯ

ರೈತರ ಪರವಾಗಿ ಮಾತನಾಡುತ್ತಿದ್ದರು. ಎಲ್ಲರ ಹಿತಾಸಕ್ತಿಗೆ ಸಂಬಂಧಪಟ್ಟ ವಹಿವಾಟುಗಳ ಸಂದರ್ಭದಲ್ಲಿ, ಅಂದರೆ ವ್ಯಾಪಾರಿಗಳಿಗೆ ಅಡಿಕೆ ಮಾರಾಟ, ಸರ್ಕಾರಿ ಅಧಿಕಾರಿಗಳ ಜೊತೆಯಲ್ಲಿ ಇತ್ಯರ್ಥ ಮತ್ತು ವಸೂಲಿ ವಿವರಗಳು ಮುಂತಾದ ಸಂದರ್ಭಗಳಲ್ಲಿ ಹಾಜರಿರುತ್ತಿದ್ದರು. ಅವರು ಸಹಿ ಹಾಕಿದ ಒಪ್ಪಂದ ಪತ್ರಗಳು ಆಯಾ ಜಿಲ್ಲೆಗಳ ರೈತರನ್ನು ಬದ್ಧಗೊಳಿಸುತ್ತಿತ್ತು. ಪ್ರತಿಯೊಂದು ತಾಲ್ಲೂಕಿನಲ್ಲೂ ಕೆಲವೊಂದು ಮೊಕ್ತೇಸರರು ಎಂಬ ಮುಖಂಡರು ಇರುತ್ತಿದ್ದರು. ಇವರು ಸಾಮಾನ್ಯವಾಗಿ ಜಮೀನ್ದಾರರೇ ಆಗಿರುತ್ತಿದ್ದು, ಸಾರ್ವಜನಿಕ ವ್ಯವಹಾರಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು ಮತ್ತು ಯಾವಾಗಲೂ ಅಮಲ್ದಾರರ ಜೊತೆಯಲ್ಲೇ ಇರುತ್ತಿದ್ದರು. ತಾಲ್ಲೂಕಿನ ಆಡಳಿತ ನಿರ್ವಹಣೆಯ ಮೇಲೆ ಇವರು ತಮ್ಮ ಪ್ರಭಾವ ಬೀರುತ್ತಿದ್ದರು. ಇದು ಹೆಚ್ಚಾಗಿ ತಮ್ಮ ಲಾಭಕ್ಕಾಗಿಯೇ ಬೀರುತ್ತಿದ್ದ ಪ್ರಭಾವ ಎಂದು ಬೇರೆ ಹೇಳಬೇಕಾಗಿಲ್ಲ. ರೈತರಲ್ಲಿ ಬೆಳೆಯುತ್ತಿದ್ದ ಒಂದು ಸ್ವತಂತ್ರತಾ ಮನೋಭಾವ ವನ್ನು ಹತ್ತಿಕ್ಕುವುದರ ಜೊತೆಗೆ ತಮ್ಮ ಅಧಿಕಾರ ಉಳಿಸಿಕೊಳ್ಳುವುದಕ್ಕಾಗಿ ಕೂಡ ಈ ಜಮೀನ್ದಾರರು ಈ ಚಳುವಳಿಯ ನೇತೃತ್ವ ವಹಿಸಲು ಮುಂದಾದರು.

**ಬ್ರಾಹ್ಮಣರಿಂದ ಅಧಿಕಾರದ ಏಕಸ್ವಾಮ್ಯ**

ಬ್ರಾಹ್ಮಣರನ್ನು ಯಾರೂ ಇಷ್ಟಪಡುತ್ತಿರಲಿಲ್ಲ ಎಂಬ ಅಂಶವನ್ನು ವಿಚಾರಣಾ ಸಮಿತಿ ಮುಂದೆ ಹಾಜರಾದ ಕೆಲವೊಂದು ಸಾಕ್ಷಿಗಳು ವ್ಯಕ್ತಪಡಿಸಿದರು. ಮೈಸೂರಿನ ವಾಯವ್ಯ ಭಾಗದ ಜನರಲ್ಲಿ ಈ ಭಾವನೆ ಕುದಿಯುತ್ತಿತ್ತು ಎಂದೇ ತಿಳಿದುಬಂತು. ಇಡೀ ಸಂಸ್ಥಾನದಲ್ಲೇ ಈ ಅಸಮಾಧಾನ ಸ್ವಲ್ಪ ಕಡಿಮೆ ಪ್ರಮಾಣದಲ್ಲಾದರೂ ಅಸ್ತಿತ್ವದಲ್ಲಿತ್ತು. ಈ ಅಂಶ ಗಲಭೆಗಳ ಮೇಲೆ ಗಮನಾರ್ಹ ಪ್ರಭಾವ ಬೀರಿತು. ಯಾವುದೇ ಪ್ರಮುಖವಾದ ಹುದ್ದೆ ಇರಲಿ ಅಲ್ಲೆಲ್ಲಾ ಬಹುಪಾಲು ಬ್ರಾಹ್ಮಣರೇ ಇರುತ್ತಿದ್ದರು. ಸಹಜವಾಗಿ ಅವರು ಅಂತಹ ಹುದ್ದೆಗಳಿಗೆ ಲಗತ್ತಾದ ಅಪರಾಧಗಳನ್ನು ಮಾಡುತ್ತಿದ್ದರು. ಪರಿಸ್ಥಿತಿ ಹೀಗೆ ಮುಂದುವರಿದಾಗ ಬಹಿರಂಗವಾಗಿ ಜನರು ದಂಗೆ ಏಳಲೇಬೇಕಾಯಿತು.

ಇನ್ನೊಂದು ಗಣನೀಯ ಅಂಶವೆಂದರೆ ನಗರದ ಜನರಲ್ಲಿ ಲಿಂಗಾಯತರೇ ಬಹಳ ಮಂದಿ ಇದ್ದರು. ಬ್ರಾಹ್ಮಣರು ಮತ್ತು ಬ್ರಾಹ್ಮಣ ಸಂಸ್ಥೆಗಳ ಬಗ್ಗೆ ಅವರಲ್ಲಿ ಅಸಮಾಧಾನ ತಾಂಡವವಾಡುತ್ತಿತ್ತು. ಸ್ಟೋಕ್ಸ್‌ನ ಮಾತಲ್ಲಿ ಹೇಳುವುದಾದರೆ ಲಿಂಗಾಯತ ಮತ ತತ್ವಗಳು "ಜಾತಿ ತತ್ವದ ಕೃತಕ ಮತ್ತು ಗುಲಾಮಗಿರಿಯ ಹಿಡುಗಿನಿಂದ ಬಾಧಿತವಾಗಿರಲಿಲ್ಲ ಮತ್ತು ಇತರೆ ಹಿಂದೂ ಜಾತಿಗಳಂತೆ ಕೀಳುಗೈಯ ವಂತಹದ್ದಾಗಿರಲಿಲ್ಲ. ಇದಕ್ಕೆ ಹೋಲಿಸಲಾಗಿ ಬ್ರಾಹ್ಮಣರ ತತ್ವಗಳ ಗರಿಷ್ಠ ಗುರಿಯೆಂದರೆ ಸದರಿ ತತ್ವಗಳನ್ನು ರೂಪಿಸಿದ ಬ್ರಾಹ್ಮಣರಿಗೆ ಲಾಭ ಮತ್ತು ಅಧಿಕಾರದ ಏಕಸ್ವಾಮ್ಯತೆ ಭದ್ರವಾಗಿ ಎದ್ದು ಕಾಣುವ ರೀತಿಯಲ್ಲಿ ದೊರಕುವಂತೆ ಮಾಡುವುದು."

ಹಿಂದೆ ಇದೇ ತಮ್ಮ ಪೂರ್ವಿಕರು ಅರಸರ ಅಡಿಯಲ್ಲಿ ನಾಡಿನ ಆಡಳಿತದಲ್ಲಿ ಸಿಂಹಪಾಲು ಹೊಂದಿದ್ದ ಸಮಾಜದ ಉನ್ನತಸ್ತರದ ಲಿಂಗಾಯಿತರು ನಗರದಲ್ಲಿ ಬ್ರಾಹ್ಮಣರ ಉಚ್ಛ್ರಾಯ ಸ್ಥಿತಿ ಬೇರೂರು ತ್ತಿರುವುದನ್ನು ಗಮನವಿಟ್ಟು ನೋಡುತ್ತಿದ್ದರು. ರಾಜನ ಪಟ್ಟಾಭಿಷಕ್ತನಾದ ಮೇಲೆ ಮುಖ್ಯವಾಗಿ ಹಾನಗಲ್ ಕುಟುಂಬದವರ ಮೂಲಕ ಬ್ರಾಹ್ಮಣರು ಪಟ್ಟಭದ್ರ ರಾಗುವುದು ಸಾಧ್ಯವಾಯಿತು. ೧೮೩೦ರ ಹೊತ್ತಿಗೆ ನಗರದ ಸ್ಥಿತಿಗತಿ ಇದು ಒಂದು ಕಾಲದಲ್ಲಿ ಸಮೃದ್ಧ ರಾಜ್ಯವಾಗಿತ್ತೇ ಎನ್ನುವಷ್ಟು ಹೀನಾಯವಾಗಿತ್ತು. ರಾಮರಾವ್ ಮತ್ತು ಹಾನಗಲ್ ಕುಟುಂಬದ ಇತರರು ಅಧಿಕಾರದ ಚುಕ್ಕಾಣಿ ಹಿಡಿದಷ್ಟೂ ಕಾಲ ತಮಗೆ ಬೇಕಾದವರಿಗೆ ಆಶ್ರಯ ನೀಡುವ ನಿರಂಕುಶ ಅಧಿಕಾರ ಹೊಂದಿದ್ದರು. ಬಹುಪಾಲು ಆಡಳಿತದ ಎಲ್ಲಾ ಹುದ್ದೆಗಳಲ್ಲೂ ಬ್ರಾಹ್ಮಣರೇ ನೇಮಕವಾದರು.

ನಗರದಲ್ಲಿ ೧೨೦ ಅಗ್ರಹಾರಗಳಿದ್ದವು. ಅಲ್ಲಿ ವೈದಿಕೋತ್ತಮ ಬ್ರಾಹ್ಮಣರಿಗೆ ಬೆಂಬಲವಾಗಿ ಯಾವ ತೆರಿಗೆಯೂ ಇಲ್ಲದೆ ಅಥವಾ ಒಂದಿಷ್ಟು ಕಡಿಮೆ ತೆರಿಗೆ ಮೇಲೆ ಭೂಮಿಯನ್ನು ಮಂಜೂರು ಮಾಡಲಾಗಿತ್ತು. ಇದನ್ನು ಆಳುವ ಮಹಾರಾಜ ದಾನವಾಗಿ ಕೊಟ್ಟಿದ್ದನು ಅಥವಾ ಇನ್ನಾರೋ ವ್ಯಕ್ತಿ ನಜರ್ ಅಥವಾ ಕಾಣಿಕೆ ಒಪ್ಪಿಸಿದ ಮೇಲೆ ನೀಡಿದ್ದನು. ಅನೇಕ ಸಂದರ್ಭಗಳಲ್ಲಿ ಬ್ರಾಹ್ಮಣರನ್ನು ಕಂಚಿ, ಮಧುರೆ ಮುಂತಾದ ದೂರದ ಪ್ರದೇಶಗಳಿಂದ ಈ ಅಗ್ರಹಾರಕ್ಕೆ ಮೂಲತಃ ಆಹ್ವಾನಿಸಲಾಗುತ್ತಿತ್ತು.

ನಗರದ ಗಲಭೆಯ ನಂತರ ಅಧಿಕಾರ ವಹಿಸಿ ಕೊಂಡ ಎಚ್. ಸ್ಟೋಕ್ಸ್ ಹೀಗೆ ಬರೆಯುತ್ತಾನೆ: "ಏನೇ ಆಗಲಿ ಈ ತರಹ ಮತ್ತೆ ಬ್ರಾಹ್ಮಣರ ಪ್ರಾಬಲ್ಯಕ್ಕೆ ಅವಕಾಶವನ್ನೇ ನೀಡಬಾರದು. ಸರ್ಕಾರಿ ಸೇವೆಗೆ ಲಿಂಗಾಯಿತರನ್ನು ಸೇರಿಸಿಕೊಳ್ಳುವುದು ಉತ್ತಮ. ಅರ್ಹತೆಯುಳ್ಳ ಜನರು ಅಲ್ಲೂ ಸಾಕಷ್ಟು ಸಿಗುತ್ತಾರೆ. ಇವರು ಬ್ರಾಹ್ಮಣರಷ್ಟು ಕುಶಾಗ್ರಮತಿಗಳು ಹಾಗೂ ವ್ಯವಹಾರ ಚತುರರು ಆಗಿರದೇ ಹೋದರೂ ಇವರ ಪ್ರಾಮಾಣಿಕತೆ ಮತ್ತು ಸರಳತೆ, ಅದೆಲ್ಲವನ್ನೂ ಮೀರಿಸುವ ಸದ್ಗುಣ."




**ಸಾಲದ ಹೊರೆ**

ರೈತಾಪಿ ಜನರ ಮೇಲೆ ಬಿದ್ದ ಬಲು ದೊಡ್ಡ ಹೊರೆಯೆಂದರೆ ಬೆಳೆ ಕೊಯ್ಲು ಆಗುವ ಮೊದಲೇ ಸರ್ಕಾರಕ್ಕೆ ಹಣವನ್ನು ಮುಂಗಡವಾಗಿ ಸಂದಾಯ ಮಾಡಬೇಕಾಗಿ ಬಂದದ್ದು.

ಬಾಡಿಗೆದಾರರ ಬಳಿ ಆಗಲಿ ಅಥವಾ ಸಾಗುವಳಿದಾರರ ಬಳಿ ಆಗಲಿ ಹೀಗೆ ಮುಂಗಡವಾಗಿ ಕೊಡಲು ಹಣ ಇರುತ್ತಿರಲಿಲ್ಲ. ಹೀಗಾಗಿ ಅವರು ಲೇವಾದೇವಿದಾರರು ಅಥವಾ ಸಾಹುಕಾರರ ಬಳಿ ಹೋಗಿ ಸಾಲ ಪಡೆದುಕೊಳ್ಳುತ್ತಿದ್ದರು. ಮನುಷ್ಯನ ಪ್ರಾಮಾಣಿಕತೆ, ಒಳ್ಳೆಯ ಹೆಸರು ಇವುಗಳ ಆಧಾರದ ಮೇಲೆ ಸಾಹುಕಾರರು ತಿಂಗಳಿಗೆ ಶೇ. ೨ರ ಬಡ್ಡಿ ದರದ ಮೇಲೆ ಸಾಲ ಕೊಡುತ್ತಿದ್ದರು. ಅದರ ಜೊತೆಗೆ ಸಾಲ ಕೊಟ್ಟ ಹಣದ ಶೇ. ೫ರಷ್ಟು ಉಡುಗೊರೆ ಯನ್ನು ಸುಲಿಗೆ ಮಾಡುತ್ತಿದ್ದರು. ಎರಡನೆಯ ಮತ್ತು ಮೂರನೆಯ ಕಿಸ್ತಿಗೆ (ಕಂತಿಗೆ) ಒಂದು ಉಡುಗೊರೆ ಕೊಡಬೇಕೆಂದು ತಗಾದೆ ಮಾಡುತ್ತಿದ್ದರು. ನಾಲ್ಕನೆಯ ಕಿಸ್ತನ್ನೂ ಸಂದಾಯ ಮಾಡುವಾಗ ಬೆಳೆಯನ್ನು ಅಡಮಾನ ಇಡಬೇಕಾಗಿತ್ತು. ಈ ಸಾಲಿಗರೆಲ್ಲಾ ತಕ್ಷಣವೇ ಬೆಳೆ ಮಾರಬೇಕೆಂದು ಒತ್ತಾಯಿಸುತ್ತಿದ್ದರು ಮತ್ತು ತಾವೇ ಮಾರುಕಟ್ಟೆ ಬೆಲೆಗೆ ಕೊಂಡು ಕೊಳ್ಳುತ್ತಿದ್ದರು. ಇದು ಸುಗ್ಗಿ ಕಾಲದಲ್ಲಿ ಬೇರೆ ಅವಧಿಯಲ್ಲಿ ಇದ್ದದ್ದಕ್ಕಿಂತ ಶೇ. ೫ರಿಂದ ಶೇ. ೧೦ರಷ್ಟು ಬೆಲೆ ಕಡಿಮೆ ಇರುತ್ತಿತ್ತು. ದುಬಾರಿ ಬಡ್ಡಿಯ ಸಾಲಿಗರಿಗೆ ಇದರಿಂದ ಮತ್ತಷ್ಟು ಲಾಭವಾಗುತ್ತಿತ್ತು. ಈ ಸಾಲದ ವಿರುದ್ಧ ದೂರು ನೀಡಲು ಅನೇಕ ಮಂದಿ ರೈತರು ಹುಜೂರ್ ಬಳಿ ತಂಡೋಪತಂಡವಾಗಿ ಬಂದರು. ಸಾಹುಕಾರರಿಗೆ ದೊಡ್ಡ ದೊಡ್ಡ ಮೊತ್ತದ ಸಾಲದ ಮರು ಸಂದಾಯ ಬಾಕಿ ಉಳಿದಿತ್ತು. ಸರ್ಕಾರವೂ ಸಾಹುಕಾರರಿಗೆ ದೊಡ್ಡ ಮೊತ್ತದ ಹಣವನ್ನು ಸಂದಾಯ ಮಾಡಬೇಕಿತ್ತು. ೧೮೨೬ರ ಫೆಬ್ರವರಿ ಹೊತ್ತಿಗೆ ಸಾಹುಕಾರರಿಗೆ ಕೊಡಬೇಕಾಗಿದ್ದ ಹಣ ೪ ಲಕ್ಷ ಕಂಠೀರಾಯ ಪಗೋಡಗಳು ಎಂದು ಅಂದಾಜು ಮಾಡಲಾಗಿದೆ.

ಈ ಎಲ್ಲ ದುಸ್ಥಿತಿಗೆ ತಮ್ಮಲ್ಲೇ ನಿಹಿತವಾದ ಕೆಡುಕುಗಳ ಮೂಲಗಳನ್ನು ತಿದ್ದುವ ಸಾಮರ್ಥ್ಯ ವಿಲ್ಲದ ಭ್ರಷ್ಟ ಅಧಿಕಾರಿಗಳು ನಡೆಸುತ್ತಿದ್ದ ಕುರುಡು ದರ್ಬಾರು ಕಾರಣವಾಗಿತ್ತು. ರಾಜನ ಸರ್ಕಾರವೇ ಭ್ರಷ್ಟವಾಗಿದ್ದ ಕಾರಣ ಜಿಲ್ಲಾ ಅಧಿಕಾರಗಳ ಮೇಲೆ ಯಾವುದೇ ದಕ್ಷ ನಿಯಂತ್ರಣವನ್ನು ಈ ಅಧಿಕಾರಿಗಳು ಚಲಾಯಿಸುತ್ತಿರಲಿಲ್ಲ. ಸಹಜವಾಗಿ ಜನರು ಈ ಅಧಿಕಾರಿಗಳ ಇಂತಹ ಅನ್ಯಾಯಕೋರ ಮತ್ತು ಮನಸೋ ಇಚ್ಛೆಯ ಕೃತ್ಯಗಳಿಂದ ಕುಪಿತರಾಗಿದ್ದರು. ಸರ್ಕಾರಿ ನೌಕರರು ರೈತರ ಅಹವಾಲು ಮತ್ತು ದೂರಿಗೆ ಕಿವಿಗೊಡಬೇಕೆಂದು ತಾಕೀತು ಮಾಡುವ ಯಾವ ನಿಯಮವೂ ಇರಲಿಲ್ಲ. ಆದ್ದರಿಂದ ೧೮೩೦ರ ಬಂಡಾಯ ಜರುಗಿತು.

ಈ ಪರಿಸ್ಥಿತಿಯ ಲಾಭ ಪಡೆದು ಬಸವಪ್ಪನು ದೇಶದ ಸಾರ್ವಭೌಮತ್ವವನ್ನು ತಾನೇ ವಹಿಸಿಕೊಂಡು ಇರುವುದಾಗಿ ಸುದ್ದಿಯನ್ನು ಹರಡಿದನು ಮತ್ತು

ರೈತರ ಎಲ್ಲಾ ಸಾಲದ ಇಡೀ ಬಾಕಿಗಳನ್ನು ಮನ್ನಾ ಮಾಡುವುದಾಗಿ ವಾಗ್ದಾನ ಮಾಡಿದನು. ರೈತರ ಭೂಮಿಗಳ ಮೇಲೆ ಪ್ರತಿ ಪಗೋಡಕ್ಕೆ ಒಂದು ರೂಪಾಯಿ ಸರ್ಕಾರದ ತೆರಿಗೆ ಇಳಿಸುವುದಾಗಿ ಹೇಳಿ ತನ್ನ ಪರ ಬೆಂಬಲ ನೀಡಬೇಕೆಂದು ಕರೆ ನೀಡಿದನು. ಬೂದಿ ಬಸಪ್ಪನ ಬೆಂಬಲಿಗರು ೧೮೩೦ರ ಆಗಸ್ಟ್‌ನಲ್ಲಿ ಅನೇಕ ಉದ್ರೇಕಕಾರಿ ಭಾಷಣಗಳನ್ನು ಮಾಡಿ ರೈತರು ತಮ್ಮೊಡನೆ ಸೇರಿಕೊಳ್ಳಬೇಕೆಂದು ಆಹ್ವಾನಿಸಿದರು.

೧೮೩೦ರಲ್ಲಿ ಆತನ ಬೆಂಬಲಿಗರಲ್ಲೊಬ್ಬನು ನಗರ ಪ್ರಾಂತದ ಆನಂದಪುರದ ಕೋಟೆಯನ್ನು ಮುತ್ತಿಗೆ ಹಾಕಲು ಪ್ರಯತ್ನಿಸಿ ವಿಫಲನಾದನು. ಆಗಸ್ಟ್ ೨೩ರಂದು ನಗರದ ರೈತರು ಇತರೇ ಫೌಜಿದಾರಗಳಲ್ಲಿದ್ದ ರೈತರಿಗೆ ಪತ್ರಗಳ ಸುತ್ತೋಲೆ ಕಳಿಸಿ ಕೂಟವಾಗಿ ಸೇರಲು ಆಹ್ವಾನಿಸಿದರು. ಸೆಪ್ಟೆಂಬರ್ ೨೩ರಂದು ಚೆನ್ನಗಿರಿಯ ರೈತರು ತಮ್ಮ ತೆರಿಗೆ ಕಟ್ಟಲು ನಿರಾಕರಿಸಿದರು ಮತ್ತು ನಗರ ಫೌಜುದಾರಿಯ ಇತರ ತಾಲ್ಲೂಕುಗಳೂ ಇವರನ್ನು ಅನುಸರಿಸಿದವು. ಡಿಸೆಂಬರ್ ತಿಂಗಳಲ್ಲಿ ಫೌಜುದಾರ ವೀರರಾಜ ಅರಸು ಹೊಳೆಹೊನ್ನೂರಿನ ಪ್ರತಿಭಟನಾಕಾರರನ್ನು ಚೆದುರಿಸಲು ಸೇನೆ ಬಳಸಿದನು. ಚಿತ್ರದುರ್ಗ ಮತ್ತು ಬೆಂಗಳೂರು ವಿಭಾಗಗಳ ರೈತರೂ ಕಂದಾಯ ಕಟ್ಟಲು ನಿರಾಕರಿಸಿ ಈ ಚಳುವಳಿಯಲ್ಲಿ ಸೇರಿಕೊಂಡರು.

ಇದೇ ಸಮಯದಲ್ಲಿ ರೈತರೊಂದಿಗೆ ಸಂಧಾನ ನಡೆಸಲು ಬೆಂಗಳೂರಿನಲ್ಲಿ ಚಿತ್ರದುರ್ಗ ವಿಭಾಗದಲ್ಲಿ ದಿವಾನ್ ವೆಂಕಟರಾಜ ಪ್ರಯತ್ನ ನಡೆಸಿದನು. ೧೮೩೦ರಲ್ಲಿ ಈ ಕೆಲವೊಂದು ತಾಲ್ಲೂಕುಗಳಿಗೆ ಮಹಾರಾಜನೇ ಖುದ್ದಾಗಿ ಪ್ರವಾಸ ಕೈಗೊಂಡನು. ಆದರೆ ಚೆನ್ನರಾಯಪಟ್ಟಣ ಮತ್ತಿತರ ಸ್ಥಳಗಳಲ್ಲಿ ರೈತರು ಆತನಿಗೆ ಅವಮಾನ ಮಾಡಿದರು.

ದಂಗೆಯೆದ್ದವರು ರಾಜನ ಸೇನೆಗೆ ಸಮಸಮನಾಗಿ ಹೋರಾಡಿದರು. ಅವರು ನಗರದ ಕೆಲವೊಂದು ಕೋಟೆಗಳನ್ನು ವಶಪಡಿಸಿಕೊಂಡರು ಮತ್ತು ಕೆಲವೆಡೆ ಮೈಸೂರು ಸೇನೆಯನ್ನು ಹಿಮ್ಮೆಟ್ಟಿಸಿದರು. ೧೮೩೦ರ ಡಿಸೆಂಬರ್ ೨೧ರಂದು ಮೂಳೆಗಳು ಮತ್ತು ಬೇವಿನ ಸೊಪ್ಪನ್ನು (ಪ್ರತಿಭಟನೆಯ ವಾಡಿಕೆಯ ಸಂಕೇತಗಳು) ಹೊತ್ತು ಹೋಗುತ್ತಿರುವ ವ್ಯಕ್ತಿಗಳನ್ನು ದಸ್ತಗಿರಿ ಮಾಡಿ, ವಿಚಾರಣೆ ನಡೆಸಿ, ತಪ್ಪಿತಸ್ಥರು ಎಂದು ಕಂಡುಬಂದರೆ ನೇಣು ಹಾಕಬೇಕು ಎಂಬ ಘೋಷಣೆಯನ್ನು ಹೊರಡಿಸಿ ಸಾರಲಾಯಿತು. ಮೂರನೆಯ ದಿನ ಬೆಂಗಳೂರಿನ ಫೌಜುದಾರನಿಗೆ ಪ್ರತಿಭಟನಾಕಾರರನ್ನು ಹಿಡಿದು ನೇಣಿಗೇರಿಸಬೇಕೆಂದು ಆದೇಶಿಸಲಾಯಿತು. ಅನೇಕ ಬಂಡಾಯಕೋರರನ್ನು ಹಿಡಿದು ನೇಣು ಹಾಕಲಾಯಿತು. ಹಲವಾರು ಬಂಡಾಯಕಾರರ ಮೂಗುಗಳು ಮತ್ತು ಕಿವಿಗಳನ್ನು ಕತ್ತರಿಸಿ ಹಾಕಲಾಯಿತು, ಫಲವಾಗಿ ಅನೇಕ ಮಂದಿ ವಿರೂಪಗೊಂಡರು.

ಬಂಡಾಯ ಹತ್ತಿಕ್ಕಲು ಇದಲ್ಲದೆ ಬೇರೆ ಗತ್ಯಂತರವಿರಲಿಲ್ಲ ಎಂದು ರಾಜನು ಹೇಳಿದನು. ಇದರ ಪರಿಣಾಮವಾಗಿ ಈ ರಾಜ್ಯದ ಉದ್ದಕ್ಕೂ ನೂರಾರು ರೈತರನ್ನು ಗಲ್ಲಿಗೇರಿಸಲಾಯಿತು. ಈ ಮರಣದಂಡನೆಯ ಆದೇಶವನ್ನು ತಾನೇ ಸ್ವಪ್ರೇರಣೆಯಿಂದ ಮಾಡಿದ್ದಲ್ಲ, ರೆಸಿಡೆಂಟರ ಸಲಹೆ ಪಡೆದು ಮಾಡಿದ್ದಾಗಿ ರಾಜನು ಸಮರ್ಥಿಸಿಕೊಂಡನು.

ಮೈಸೂರು ಸೇನೆ ಹಿಮ್ಮೆಟ್ಟಿದ ಕಾರಣದಿಂದಾಗಿ ಕಂಪೆನಿಯವರ ಸೇನೆಯನ್ನು ದಂಗೆ ಹತ್ತಿಕ್ಕಲು ಬಳಸಬೇಕಾಯಿತು. ಮೇ ೩೧ರಂದು ಬಂಡಾಯಕೋರರ ಆಶ್ರಯತಾಣವಾಗಿದ್ದ ನಗರವನ್ನು ಆಕ್ರಮಿಸಿ ಈ ಬಂಡಾಯವನ್ನು ಬಹುಪಾಲು ಶಮನಗೊಳಿಸಲಾಯಿತು. ಆದರೂ ೧೮೩೨ರವರೆಗೆ ಅಲ್ಲೊಂದು ಇಲ್ಲೊಂದು ಬಂಡಾಯ ಸಿಡಿದೇಳುತ್ತಿತ್ತು ಮತ್ತು ಕೊನೆಗೆ ದಂಗೆಯನ್ನು ಪೂರ್ಣವಾಗಿ ಹತ್ತಿಕ್ಕಲಾಯಿತು.

---

**ಡಾ॥ ಸಿದ್ಧಲಿಂಗ ಸ್ವಾಮಿ**
'ಪ್ರಣವ', ನಂ. ೩೯೦, ೧೦ನೇ 'ಬಿ' ಅಡ್ಡರಸ್ತೆ, ೧ನೇ 'ಸಿ' ಮುಖ್ಯರಸ್ತೆ
ವಿನಾಯಕ ಬಡಾವಣೆ, ನಾಗರಭಾವಿ, ೨ನೇ ಹಂತ
೯ನೇ ಬ್ಲಾಕ್, ಬೆಂಗಳೂರು – ೫೬೦ ೦೭೨

# ನಮ್ಮ ಕಾಲಕ್ಕೊಂದು ಚೀನೀ ಕತೆ

**ನ**ಮ್ಮ ದೇಶದ ಬೌದ್ಧಿಕ ದಾರಿದ್ರ್ಯ ಮತ್ತು ಮಾನಸಿಕ ಡಾಂಭಿಕತೆ ಯಾವ ಮಟ್ಟಕ್ಕಿಳಿದಿದೆ ? ಇದಕ್ಕೆ ಉತ್ತರ ಪಡೆಯಲು ಒಂದು ಪ್ರಶ್ನೆ ಕೇಳಿಕೊಳ್ಳೋಣ : "ದೆವ್ವಗಳು ಇವೆಯೆ ?" ಇದೆಯೆಂಬ ಉತ್ತರ ಅವೈಚಾರಿಕವಾಗುತ್ತದೆ. ಮನೋವಿಜ್ಞಾನವು ಕಳೆದ ಮುನ್ನೂರು ವರ್ಷಗಳಲ್ಲಿ ಆ ವಿಷಯದ ಬಗ್ಗೆ ಹೊರತಂದಿರುವ ಗ್ರಂಥಗಳ ಸಂಖ್ಯೆ ಅಪಾರ. ನಾವು ಹುಡುಗರಾಗಿದ್ದಾಗ ದೆವ್ವಕ್ಕಿಂತ ಕೊಳ್ಳಿದೆವ್ವ ನಮ್ಮೂರಿನಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿತ್ತು. ಅದು ತನ್ನ ಕಾಲುಗಳನ್ನು ಒಲೆಯೊಳಗಿಕ್ಕಿ ಅದನ್ನೇ ಉರಿಯುವ ಸೌದೆ ಮಾಡಿ ಏನನ್ನೋ ಬೇಯಿಸಿಕೊಳ್ಳುತ್ತಿತ್ತು ! ಮದುವೆಯಾಗಿ ಬಂದ ಒಬ್ಬ ಪುಟ್ಟ ಹುಡುಗಿಯನ್ನು ಮಾಗಡಿ ತಾಲೂಕಿನ ತಿಪ್ಪಸಂದ್ರದ ಬಳಿಯ ಹೆಬ್ಬಳಲು ಎಂಬಲ್ಲಿ ಬೇವಿನ ಸೊಪ್ಪು ಮತ್ತು ಕಟ್ಟಿಗೆಗಳಿಂದ ಹೊಡೆದು ಚಚ್ಚಿ ಸಾಯಿಸಿದ್ದು ಇನ್ನೂ ನೆನಪಿನಲ್ಲಿದೆ. ಅವಳ ಮೇಲಿಲ್ಲದ ದೆವ್ವ ಬಿಡಿಸಲು ಅವಳನ್ನೇ ಸಾಯಿಸಿದರು. ಅದರಿಂದ ದೆವ್ವಗಳಿರುವುದಂತೂ ಖಚಿತವಾಯಿತೆಂದು ಆ ಊರಿನ ಹಿರಿಯರು ಮಾತನಾಡಿಕೊಳ್ಳುತ್ತಿದ್ದರು. "ನಾವೇ ಇರುವಾಗ ಬೇರೆ ದೆವ್ವಗಳೇಕೆ ಬೇಕು ? ದೆವ್ವ ಮಾಡುತ್ತದೆನ್ನಲಾದ್ದನ್ನೆಲ್ಲಾ ನಾವೇ ಮಾಡುತ್ತಿದ್ದೇವಲ್ಲ !" ಎಂದೇನಾದರೂ ಆ ಹಿರಿಯರು ಹೇಳಿದ್ದರೆ ಹೆಚ್ಚು ಸಮಂಜಸವಾಗಿರುತ್ತಿತ್ತು. ಈ ಪ್ರಸಂಗ ಜರುಗಿ ಸುಮಾರು ಎಪ್ಪತ್ತು ವರ್ಷಗಳು ಕಳೆದಿವೆ, ವೈಜ್ಞಾನಿಕ ಸಂಶೋಧನೆಗಳು ಸಹಸ್ರಾರು ನಡೆದಿವೆ, ಮಾನವ ಶರೀರದ ವಿವಿಧ ಅಂಗಾಂಗಗಳನ್ನು ಕೃತಕವಾಗಿ ನಿರ್ಮಿಸಿ ಅಳವಡಿಸುವ ಅಪ್ರತಿಮ ಕೆಲಸ ದಿನಂಪ್ರತಿ ಜರುಗುತ್ತಿದೆ; ಆದರೆ ನಮ್ಮ ದೇಶದ ಜೀವಂತ ಮನುಷ್ಯರ ಮನಸ್ಸುಗಳಿಂದ ದೆವ್ವಗಳು ನಿರ್ಮೂಲವಾಗಿಲ್ಲ. ಇತ್ತೀಚೆಗೆ ಒಂದು ಕನ್ನಡ ಟಿ.ವಿ. ವಾಹಿನಿಯಲ್ಲಿ ಪರಲೋಕದ ವ್ಯಕ್ತಿಗಳು ಕರ್ನಾಟಕದ ಭೂಮಿಯ ಮೇಲೆ ಪಾದವಿರಿಸಿ ನಮ್ಮನ್ನು ಪಾವನಗೊಳಿಸಿದ ವಿವೇಕಶೂನ್ಯ "ಸುದ್ದಿ" ಕುರಿತಂತೆ ಚರ್ಚೆ ನಡೆಸಲಾಯಿತಂತೆ ! ಚರ್ಚೆಯಲ್ಲಿ ಭಾಗವಹಿಸಿದ್ದ ಇಬ್ಬರು ವಿಜ್ಞಾನಿಗಳು ವಾಹಿನಿಯ ಸಂಯೋಜಕರಿಗೆ ಛೀಮಾರಿ ಹಾಕಿದರಂತೆ; ಆದರೆ ಅನ್ಯಲೋಕದ ಜೀವಿಗಳು ಬಂದಿದ್ದುದು ನಿಜವೆಂದು ವಾಹಿನಿಯ ನಿರ್ವಾಹಕಿ ಹೇಳಿದಳಂತೆ. ಆಕ್ರಮಣ ನಡೆಸಲು ಬಂದಿದ್ದರೋ ಅಥವಾ ಪ್ರವಾಸಿಗಳಾಗಿ ಬಂದಿದ್ದರೋ ಎಂಬುದು ತೀರ್ಮಾನವಾಗಿಲ್ಲವೆಂದು ಇನ್ನೊಬ್ಬ ಚರ್ಚಾಧೀಮಂತ ಬೊಗಳಿದನಂತೆ.

ದೆವ್ವಗಳಿಲ್ಲದಿದ್ದರೆ ದೆವ್ವ ಬಿಡಿಸುವವರ ಗತಿ ಏನು ? ಆದ್ದರಿಂದ ದೆವ್ವಗಳಿರಬೇಕು. ದೆವ್ವವು ಮೂಢನಂಬಿಕೆಗೆ ಒಂದು ಪ್ರತೀಕವೆನ್ನಬಹುದು. ಅದನ್ನಾಧರಿಸಿ, ಅದರ ಮುಖವಾಡ ತೊಟ್ಟು , ಮಾನವರನ್ನು ಅಧೀರರನ್ನಾಗಿಸಬಹುದು, ಅಧೀನರನ್ನಾಗಿಸಬಹುದು. ದೆವ್ವದ ಜಾಗದಲ್ಲಿ ಚಂಡೀ ಹೋಮ, ಆಯುಷ್ಯ ಹೋಮ, ವಾಸ್ತುವಿನ ದೋಷ, ಮಾರಮ್ಮನಿಗೆ ಕೋಣನ ಬಲಿ, ನಕ್ಷತ್ರ ಬಲ, ಹೀಗೆ ಯಾವುದನ್ನು ಬೇಕಾದರೂ ಇರಿಸಬಹುದು. ಮಾನವ ನಾಗರಿಕತೆಯ ವಿಕಾಸದ ಹಾದಿಯಲ್ಲಿ ವಿಶ್ವಾದ್ಯಂತ ಮೂಢನಂಬಿಕೆ ಮತ್ತು ಅದಕ್ಕೆ ಪ್ರತಿರೋಧ, ಎರಡೂ ಸಮಪ್ರಮಾಣದಲ್ಲಿ ಪ್ರಾತಿನಿಧ್ಯ ಪಡೆದಿವೆ. ಇತ್ತೀಚೆಗೆ ಚೆನ್ನೈನಲ್ಲಿ ಘಟಿಸಿದ ಮಾನವಕೃತ – ನೈಸರ್ಗಿಕ ವಿಕೋಪವನ್ನು ಕುರಿತಂತೆ ಯಾವ ಜ್ಯೋತಿಷಿಯೂ ಘಟನೆಗೆ ಮುಂಚೆ ಎಚ್ಚರಿಕೆ ನೀಡಿರಲಿಲ್ಲ; ಆದರೆ ಎಲ್ – ನಿನೋ ಬಗ್ಗೆ ವಿಜ್ಞಾನ ಶಾಖೆಗಳು ಕೆಲವು ದಶಕಗಳಿಂದ ತಿಳಿವಳಿಕೆ ಮೂಡಿಸುತ್ತಾ ಬಂದಿವೆ. ಮಡೆಸ್ನಾನ – ಅಯ್ಯಪ್ಪ – ಬಾಲಯೇಸು – ಪ್ರವಾದಿ ಪೈಗಂಬರರ ಭೌಗೋಳಿಕ ವ್ಯಾಪ್ತಿ, ಇವೆಲ್ಲಾ ಶತಮಾನಗಳುದ್ದಕ್ಕೂ ಏಕಪ್ರಕಾರವಾಗಿ ನಡೆದುಬಂದಿಲ್ಲ. ಅವೆಲ್ಲಾ ಆಯಾಕಾಲದ ಆವಿಷ್ಕಾರಗಳು. ಅಂದರೆ ಮೂಢನಂಬಿಕೆಗಳ ಪರಿಧಿಯು ಪೂರ್ವನಿರ್ಧಾರಿತವಲ್ಲ.



ಭಾರತದಲ್ಲಿದ್ದಂತೆ ಚೀಣಾದಲ್ಲೂ ಹಲವು ಶತಮಾನಗಳ ಕಾಲ ಜಟಾಪಟಿ ನಡೆದುಬಂದಿದೆ. ಜಾನಪದ ಕತೆಗಳಲ್ಲಂತೂ ದೆವ್ವ – ಪಿಶಾಚಿಗಳನ್ನು ಮಣಿಸುವುದು ಸಾಮಾನ್ಯವಾಗಿ ಒಂದು ಗಟ್ಟಿ ಮನಸ್ಸಿನಿಂದಲೇ. ಅಳುಕು ಮನಸ್ಸು ದೆವ್ವದ ಆವಾಸಸ್ಥಾನ. ಇದನ್ನು ನಿರೂಪಿಸುವ ನೂರಾರು ಕತೆಗಳಿಂದ ಕೆಲವನ್ನು ಆಯ್ದು ೧೯೬೧ರಲ್ಲಿ "ದೆವ್ವಗಳಿಗೆ ಭಯಬೀಳದ ಕತೆಗಳು" ಎಂಬ ಸಂಕಲನವನ್ನು ಬೀಜಿಂಗ್‌ನ "ವಿದೇಶಿ ಪ್ರಕಾಶನ ಸಂಸ್ಥೆ" ಇಂಗ್ಲಿಷ್‌ನಲ್ಲಿ ಹೊರತಂದಿತ್ತು. ಆಧುನಿಕ ದೆವ್ವಗಳ ಪೈಕಿ ರಾಜಕೀಯ ಪ್ರತಿಗಾಮಿತ್ವ , ಸಾಮ್ರಾಜ್ಯಶಾಹಿಯ ಧಾಳಿಕೋರತನ, ಮತೀಯ ಕಲಹಗಳು, ಪುರಾಣವನ್ನು ಇತಿಹಾಸವಾಗಿ ಮಾರ್ಪಡಿಸುವ ಜಡ್ಡುತನ, ಎಲ್ಲವೂ ಸೇರಿಕೊಳ್ಳುತ್ತವೆ. ಸಂಕಲನದ ಮುನ್ನುಡಿಯ ಮೊದಲ ಮೂರು ವಾಕ್ಯಗಳು ಹೀಗಿವೆ : "ದೆವ್ವಗಳು ಎಲ್ಲೂ ಇಲ್ಲ. ದೆವ್ವಗಳಲ್ಲಿನ ನಂಬಿಕೆಯು ಹಿಂದುಳಿಕೆಯ ಸಂಕೇತ, ಅದೊಂದು ಮೂಢನಂಬಿಕೆ, ಪುಕ್ಕಲುತನದ ಚಿಹ್ನೆ. ಜನಸಾಮಾನ್ಯರಲ್ಲಿ ಇವೆಲ್ಲಾ ಇಂದು

ಭಾರತದಲ್ಲಿದ್ದಂತೆ ಚೀಣಾದಲ್ಲೂ ಹಲವು ಶತಮಾನಗಳ ಕಾಲ ಜಟಾಪಟಿ ನಡೆದುಬಂದಿದೆ. ಜಾನಪದ ಕತೆಗಳಲ್ಲಂತೂ ದೆವ್ವ – ಪಿಶಾಚಿಗಳನ್ನು ಮಣಿಸುವುದು ಸಾಮಾನ್ಯವಾಗಿ ಒಂದು ಗಟ್ಟಿ ಮನಸ್ಸಿನಿಂದಲೇ. ಅಳುಕು ಮನಸ್ಸು ದೆವ್ವದ ಆವಾಸಸ್ಥಾನ. ಇದನ್ನು ನಿರೂಪಿಸುವ ನೂರಾರು ಕತೆಗಳಿಂದ ಕೆಲವನ್ನು ಆಯ್ದು ೧೯೬೧ರಲ್ಲಿ "ದೆವ್ವಗಳಿಗೆ ಭಯಬೀಳದ ಕತೆಗಳು" ಎಂಬ ಸಂಕಲನವನ್ನು ಬೀಜಿಂಗ್‌ನ "ವಿದೇಶಿ ಪ್ರಕಾಶನ ಸಂಸ್ಥೆ" ಇಂಗ್ಲಿಷ್‌ನಲ್ಲಿ ಹೊರತಂದಿತ್ತು. ಆಧುನಿಕ ದೆವ್ವಗಳ ಪೈಕಿ ರಾಜಕೀಯ ಪ್ರತಿಗಾಮಿತ್ವ, ಸಾಮ್ರಾಜ್ಯಶಾಹಿಯ ಧಾಳಿಕೋರತನ, ಮತೀಯ ಕಲಹಗಳು, ಪುರಾಣವನ್ನು ಇತಿಹಾಸವಾಗಿ ಮಾರ್ಪಡಿಸುವ ಜಡ್ಡುತನ, ಎಲ್ಲವೂ ಸೇರಿಕೊಳ್ಳುತ್ತವೆ.

ಜಿ. ರಾಮಕೃಷ್ಣ

ಒಂದು ಸಾಮಾನ್ಯ ತಿಳುವಳಿಕೆ.” ಎಲ್ಲ ವಿಧಗಳ ದೆವ್ವಗಳನ್ನೂ ಎದುರಿಸಲು ಆಯಾ ಸಂಗತಿಗಳ ಬಗೆಗಿನ ನಿಖರ ತಿಳುವಳಿಕೆಯೇ ಮದ್ದು. ಕ್ರಿಸ್ತಶಕ ೨೭–೯೭ರ ಅವಧಿಯಲ್ಲಿದ್ದ ವಾಂಗ್ ಚುಂಗ್ ನಮ್ಮ ದೇಶದ ಲೋಕಾಯತರಂತೆ “ಹಣೆಬರಹ”ವೆಂಬ ಮಹಾಮೌಢ್ಯವನ್ನು ಸಾರಾಸಗಟಾಗಿ ಖಂಡಿಸಿ ನಿರಾಕರಿಸಿದ್ದ. “ನನ್ನ ಅದೃಷ್ಟದಿಂದ ಇಂದು ಮಹಾ ಸಂಪತ್ತು ದೊರೆಯಿತು” ಎಂಬಂತಹ ಮಾತುಗಳನ್ನು ಅವನು ತರ್ಕಹೀನವೆಂದು ಜರಿಯುತ್ತಿದ್ದ. ಅವನು ನೀಡಿದ್ದ ದೃಷ್ಟಾಂತವೊಂದನ್ನು ಇಂದು ಚೆನ್ನೈ, ನಿನ್ನೆ ಉತ್ತರಕಾಶಿ, ಮೊನ್ನೆ ಹಿರೋಷಿಮಾ, ಹೀಗೆ ಎಲ್ಲೆಲ್ಲೂ ಅನ್ವಯಿಸಬಹುದು : ಲಿ–ಯಾಂಗ್ ಎಂಬ ಒಂದು ಪಟ್ಟಣ. ಅಲ್ಲಿ ಒಮ್ಮೆ ಭಾರಿ ಪ್ರವಾಹ ಬಂತು. ಊರಿನ ಸಾವಿರಾರು ಜನ ಕೊಚ್ಚಿಹೋದರು. ಕಾರಾಗೃಹಗಳಲ್ಲಿದ್ದವರಂತೂ ಅಲ್ಲೇ ನೀರಿನಲ್ಲಿ ಮುಳುಗಿ ಸತ್ತರು. ವಾಂಗ್ ಚುಂಗ್ ಒಂದು ಪ್ರಶ್ನೆ ಹಾಕಿದ : “ಅಲ್ಲರಯ್ಯಾ, ಅಲ್ಲೆಲ್ಲಾ ಇದ್ದ ಜನ ಅಲ್ಲಲ್ಲಿ ಇರಬೇಕೆಂದು ಅಂದೇ ಮನಸ್ಸು ಮಾಡಿದ್ದು ಏಕೆ ಮತ್ತು ಹೇಗೆ”, ಎಂದು. ಸಾನ್ ಮ್ಯಾಂಗ್ ಎಂಬೊಬ್ಬ ಒಂದು ಕತೆ ಬರೆದಿದ್ದಾನೆ : “ದೆವ್ವಗಳು ಸಾನ್ ಮ್ಯಾಂಗ್ ಬಳಿ ನುಸುಳುವುದಿಲ್ಲ” ಎಂದು ಅದರ ಶೀರ್ಷಿಕೆ. ದೆವ್ವಗಳನ್ನು ಹಿಡಿದು ಬಂಧಿಸಬಹುದೆಂದು ಅವನು ನಂಬಿದ್ದ. “ಅದನ್ನು ನಿಮ್ಮ ಮನಸ್ಸು ಮಾತ್ರವೇ ಮಾಡಬಲ್ಲದು” ಎಂದೂ ಹೇಳುತ್ತಿದ್ದ.

ನಮ್ಮ ಇಂದಿನ ಪರಿಸ್ಥಿತಿ ಹಾಸ್ಯಾಸ್ಪದವಾಗಿದೆ. ಬೆಂಗಳೂರಿನ ಸಭೆಯೊಂದರಲ್ಲಿ ನೀವು “ದೆವ್ವಗಳಿಲ್ಲ, ಅದೆಲ್ಲಾ ಮನುಷ್ಯನ ಅರ್ಥಹೀನ ಕಲ್ಪನೆ” ಎಂದು ಹೇಳುತ್ತೀರಿ. ಅದನ್ನು ಕೇಳಿಯೂ ಇರದ ನಾಗಪುರದ ಒಬ್ಬ ವ್ಯಕ್ತಿ ನಿಮ್ಮ ಮೇಲೆ ಆ ಊರಲ್ಲಿ ಒಂದು ದೂರು ಕೊಟ್ಟು ಕೇಸು ಜಡಿಯುತ್ತಾನೆ, “ಅವನು ದೆವ್ವಗಳಿಲ್ಲವೆಂದು ಹೇಳಿದ್ದು ನನ್ನ ಮನಸ್ಸಿಗೆ ನೋವುಂಟುಮಾಡಿದೆ, ಆದ್ದರಿಂದ ಅವನನ್ನು ಶಿಕ್ಷಿಸಿ,” ಎಂದು. ಪೊಲೀಸರು, ನ್ಯಾಯಾಲಯಗಳು, ಎಲ್ಲಾ ಆ ನೊಂದ ಮನಸ್ಸಿಗೆ ಮುಲಾಮು ಹಚ್ಚುತ್ತವೆ ! ಒಂದು ಸಣ್ಣ ಪ್ರಶ್ನೆ ಅವರಿಗೆ ಹೊಳೆಯುವುದಿಲ್ಲ : “ದೆವ್ವಗಳಿವೆ ತಾನೆ ? ಹಾಗಿದ್ದರೆ, ಅವಿಲ್ಲವೆಂದು ಯಾರೋ ಹೇಳಿದರೆ ನಿಮ್ಮ ದೆವ್ವ ಇಲ್ಲವಾಗಿಬಿಡುತ್ತದೆಯೆ ? ಹೀಗಿರುವಾಗ ನೋವುಂಟುಮಾಡಿಕೊಳ್ಳುವ ನಿಮ್ಮ ಮನಸ್ಸನ್ನು ಶುದ್ಧೀಕರಿಸಿಕೊಳ್ಳಬೇಕಲ್ಲವೆ ?” ಮೂಢನಂಬಿಕೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಅಸಹಿಷ್ಣುತೆ, ಎಂದು ಏನೇನೋ ವೃಥಾ ಚರ್ಚೆ ಮಾಡಿಕೊಳ್ಳುತ್ತಿದ್ದೇವಲ್ಲ, ಅವಕ್ಕೆಲ್ಲಾ ಸಮಜಾಯಿಷಿ ಇಲ್ಲಿದೆ. ಒಂದು ದೃಷ್ಟಾಂತದ ಮಾದರಿಯಾಗಿ ತೈ ತುಂಗ್ – ಯುವಾನ್ ಎಂಬೊಬ್ಬ ಹೇಳಿದನೆನ್ನಲಾದ ಕತೆಯನ್ನು ಗಮನಿಸಬಹುದು. ಅದನ್ನು ನಾವು ಹೇಗೆ ಇಂದಿಗೆ ಅನ್ವಯಿಸಿಕೊಳ್ಳುತ್ತೇವೆಂಬುದು ನಮ್ಮ ಜವಾಬ್ದಾರಿ, ಅಷ್ಟೆ. ಅನೇಕ ಸಾಹಿತ್ಯ ರೂಪಕಗಳಿಂದ ತುಂಬಿರುವ ಕತೆ ಅದು.

* * *

**ತೈ ತುಂಗ್ – ಯುವಾನ್ ಹೇಳಿದ ಕತೆ**

ನನ್ನ ತಾತನ ತಮ್ಮ ಬಹುಕಾಲ ತನಗಾಗಿ ಒಂದು ಮನೆ ಹುಡುಕಿಕೊಳ್ಳುತ್ತಿದ್ದ. ಕಡಿಮೆ ದುಡ್ಡಿನ ಮನೆಯೇ ಬೇಕಾಗಿತ್ತು ಅವನಿಗೆ. ಕಡೆಗೆ ಯಾರೋ ಒಂದು ಮನೆ ತೋರಿಸಿದರು. ಅನೇಕ ವರ್ಷಗಳಿಂದ ಖಾಲಿ ಬಿದ್ದಿದ್ದ ಮುರುಕುಲು ಗೋಡೆಗಳ ಮನೆ ಅದು. ಆ ಗಲ್ಲಿಯಲ್ಲಿ ಬೇರೆ ಮನೆಗಳೇ ಇರಲಿಲ್ಲ. ಅಲ್ಲಿ ಭೂತ–ಪಿಶಾಚಿಗಳ ಅವಾಂತರ ಬಹಳ ಹೆಚ್ಚು ಎಂಬ ಪ್ರತೀತಿ ಬೇರೆ. ಮುದುಕ ಹೇಳಿದ : “ನನಗೇನೂ ಭಯವಿಲ್ಲ, ನಾನು ಅಲ್ಲಿರಲು ಒಪ್ಪುತ್ತೇನೆ.” ಸರಿ, ಅವನು ವಾಸಕ್ಕೆ ಬಂದ. ಇನ್ನೂ ಮೊದಲ ರಾತ್ರಿ, ಆಗಲೇ ಅವನು ಹಚ್ಚಿಟ್ಟಿದ್ದ ದೀಪದ ಸುತ್ತ ಎಂಥವೋ ನೆರಳುಗಳ ನರ್ತನ ಆರಂಭವಾಯಿತು. ಎಂಥದೋ ತುಂತುರುಗಳು ಅವನ ಮೈಮೇಲೆ ಬಿದ್ದು ಚಳಿ ಶುರುವಾಯಿತು. ಆದರೂ ಈ ಗಟ್ಟಿ ಮುದುಕ ಅಲುಗಾಡದೆ ಕುಳಿತೇ ಇದ್ದ. ಅಗಾಧವಾದ ಭೂತಕ್ಕೆ ಕೋಪ ಉಕ್ಕೇರಿ ಗರ್ಜಿಸಿತು : “ಏ ಮುದುಕ, ನಿನಗಿನ್ನೂ ಭಯವಿಲ್ಲವೆ ? ನೋಡಿಕೊಳ್ಳುತ್ತೇನೆ, ತಾಳು.”

ಮುದುಕ ಒಂದಿಷ್ಟೂ ಅಳುಕದೆ ಹೇಳಿದ : “ಭಯವೇ ? ನನಗೇಕೆ ಭಯ ?”

ಬುದ್ಧಿ ಕಲಿಸುತ್ತೇನೆ, ತಾಳು, ಎನ್ನುತ್ತಾ ದೆವ್ವ ಬೇರೆಬೇರೆ ವಿಚಿತ್ರ ಮತ್ತು ಕ್ರೂರ ರೂಪಗಳನ್ನು ಧರಿಸಿಕೊಂಡಿತು. ಸ್ವಲ್ಪಹೊತ್ತಿನ ನಂತರ ಅಬ್ಬರಿಸಿತು : “ಈಗಲಾದರೂ ಭಯವಾಯಿತೆ ?”

ಮುದುಕ ಮೆಲುದನಿಯಲ್ಲಿ ಹೇಳಿದ : “ಇಲ್ಲವಲ್ಲ !”

ದೆವ್ವದ ಮನಸ್ಸು ಸ್ವಲ್ಪ ಮೃದುವಾಯಿತು. ಏನೋ ಒಪ್ಪಂದ ಮಾಡಿಕೊಂಡ

ರೀತಿಯಲ್ಲಿ ಅದು ಹೇಳಿತು : "ನೋಡು, ನಿನ್ನನ್ನು ಇಲ್ಲಿಂದ ಓಡಿಸಬೇಕೆಂಬ ಇಚ್ಛೆ ನನ್ನಲ್ಲಿಲ್ಲ, ಆದರೆ ನೀನು ನಿನ್ನ ಬಗ್ಗೆ ಅಷ್ಟೊಂದು ಜಂಭ ಕೊಚ್ಚಿಕೊಳ್ಳಬಾರದು, ತಿಳಿಯಿತೆ ? ಸುಮ್ಮನೆ ಇಷ್ಟು ಹೇಳಿಬಿಡು : 'ಹೌದು, ನನಗೆ ಹೆದರಿಕೆಯಾಗುತ್ತಿದೆ' ಎಂದು. ಕೂಡಲೆ ನಾನು ಹೋಗಿಬಿಡುತ್ತೇನೆ."

ಮುದುಕನಿಗೆ ಕೋಪ ನುಗ್ಗಿಬಂತು. ಅವನು ಕೂಗಿ ಹೇಳಿದ : "ನನಗೆ ನಿನ್ನ ಬಗೆಗೆ ಎಳ್ಳಷ್ಟೂ ಭಯವಿಲ್ಲವೆಂದೆನಲ್ಲ. ಹಾಗಿರುವಾಗ ಭಯವಿರುವವನಂತೆ ನಾನೇಕೆ ನಟಿಸಲಿ ? ಇನ್ನು, ನೀನು ಇಲ್ಲಿರುತ್ತೀಯೋ ತೊಲಗಿಹೋಗುತ್ತೀಯೋ, ಅದು ನಿನ್ನಿಷ್ಟ."

ದೆವ್ವಕ್ಕೆ ಕಸಿವಿಸಿಯಾಯಿತು. ಪರಿಪರಿಯಲ್ಲಿ ಬೇಡಿಕೊಳ್ಳುವುದು, ಪದೇಪದೇ ಕೇಳಿಕೊಳ್ಳುವುದು, ಹೀಗೆ ಅದರ ಜಗ್ಗಾಟ. ಮುದುಕನಾದರೋ ಪ್ರತಿಕ್ರಿಯೆಯೇ ಇಲ್ಲದ ಕಂಭದಂತೆ ಕೂತುಬಿಟ್ಟಿದ್ದ. ನಿಟ್ಟುಸಿರಿಟ್ಟು ದೆವ್ವ ಹೇಳಿತು : "ಏ ಮುದುಕ, ಮೂವತ್ತು ವರ್ಷಗಳಿಂದ ನಾನಿಲ್ಲಿ ವಾಸವಿದ್ದೇನೆ, ಗೊತ್ತೆ ? ನಿನ್ನಂಥ ಮೊಂಡನನ್ನು ನಾನು ನೋಡಲಿಲ್ಲ. ನಿನ್ನಂತಹ ಮೂರ್ಖನ ಜೊತೆ ನಾನಿಲ್ಲಿ ವಾಸಿಸುವುದಾದರೂ ಹೇಗೆ ?" ಹಾಗೆಂದು ಹೇಳಿ ಅದು ಹೊರನುಗ್ಗಿತು.

ಮಾರನೆಯ ದಿನ ಪಕ್ಕದ ಬೀದಿಯ ಕೆಲವರು ಬಂದು ಮುದುಕನಿಗೆ ಹೇಳಿದರು : "ನೋಡಪ್ಪ, ಹಾಗೆಲ್ಲಾ ತಕರಾರು ಎತ್ತಬಾರದು. ದೆವ್ವಗಳಿಗೆ ಹೆದರುವುದು ಸ್ವಾಭಾವಿಕ, ಅದರಲ್ಲಿ ನಾಚಿಕೆ ಪಡುವಂಥದ್ದೇನಿದೆ ? ಸ್ವಲ್ಪ ಹೆದರಿದಂತೆ ತೋರಿಸಿಕೊಂಡಿದ್ದರೆ ನಿನಗೇನು ಕಳೆದುಹೋಗುತ್ತಿತ್ತು ? ಹೇಗೋ ಸಾವರಿಸಿಕೊಂಡು ಹೋಗಬಹುದಿತ್ತಲ್ಲ. ದೆವ್ವ ಮತ್ತು ನೀನು ಹೀಗೆ ಸದಾ ಕುಸ್ತಿ ಮಾಡುತ್ತಿದ್ದರೆ ಎಲ್ಲಿಗೆ ಪಾರ ?"

ಮುದುಕ ನಿರ್ಭಾವುಕನಾಗಿ ಹೇಳಿದ : "ನೈತಿಕ ಬಲವಿದ್ದವನು ದೆವ್ವಗಳನ್ನು ಹೊಡೆದೋಡಿಸಬಲ್ಲ. ತರಗೆಲೆಗಳಂತೆ ದೆವ್ವಗಳು ತೂರಿಹೋಗುತ್ತವೆ. ಅವನ ಮನಸ್ಸು ನಿರ್ಮಲವಾಗಿರಬೇಕು, ಶಾಂತವಾಗಿರಬೇಕು, ಅಷ್ಟೆ. ಆದರೆ ನನಗದಿಲ್ಲವಲ್ಲ, ಏನು ಮಾಡಲಿ ? ಆದ್ದರಿಂದ ನಾನು ಸ್ಫೂರ್ತಿ ತುಂಬಿಕೊಳ್ಳುತ್ತೇನೆ, ಬಲವಾಗಿ ಪ್ರತಿರೋಧ ಒಡ್ಡುತ್ತೇನೆ. ಆ ಪ್ರಬಲ ಛಲದೆದುರು ಯಾವ ದೆವ್ವ ಏನು ಮಾಡೀತು ! ಸ್ವಲ್ಪ ಮೆದುವಾಗಿ ನಾನು ಒಪ್ಪಂದ ಮಾಡಿಕೊಳ್ಳಹೊರಡುತ್ತೇನೆನ್ನಿ : ನನ್ನ ಛಲ ಮತ್ತು ಸ್ಫೂರ್ತಿ ತಗ್ಗಿಹೋಗುತ್ತವೆ. ಆಗ ದೆವ್ವದ್ದು ಮೇಲುಗೈ ಆಗಿಹೋಗುತ್ತದೆ. ಆ ದೆವ್ವ ನಿನ್ನೆ ರಾತ್ರಿ ಬಂದಿದ್ದಿತ್ತಲ್ಲ, ಅದು ನನ್ನ ಮುಂದೆ ಎಂತೆಂಥದೋ ಆಮಿಷಗಳನ್ನೊಡ್ಡುತ್ತಾ ಹೋಯಿತು. ಸದ್ಯ, ನಾನು ಅದರ ಬೋನಿನಲ್ಲಿ ಸಿಕ್ಕಿ ಬೀಳಲಿಲ್ಲ."

ಎಲಾ ಇವನ, ಇವನ ಕತೆ ಚೆನ್ನಾಗಿದೆ, ಸರಿಯಾಗಿದೆ, ಅಲ್ಲವೇ, ಎಂದು ಜನ ಮೂಗಿನ ಮೇಲೆ ಬೆರಳಿಟ್ಟರು.

✶ ✶ ✶

ನಮ್ಮ ದೇಶದ ಪರಂಪರೆಯಲ್ಲಿ ಇಂತಹ ಅನೇಕ ಪ್ರಸಂಗಗಳಿವೆ. ಬ್ರಹ್ಮ ಬರೆದ ಹಣೆಬರಹವನ್ನು ಅಳಿಸಿಹಾಕಿದವರೆಷ್ಟೋ, ಬ್ರಹ್ಮನೇ ಇಲ್ಲ, ಇನ್ನು ಅವನಿಗೆ ಲಿಪಿ ಬೇರೆ ಎಲ್ಲಿಯದು, ಎಂದು ಹಂಗಿಸಿದವರೆಷ್ಟೋ ! ಆದರೆ ಆ ಮಾತುಗಳೂ ಯಾರಿಗೂ ಉಗ್ರಕೋಪ ತರಲಿಲ್ಲ, ಮನಸ್ಸಿಗೆ ನೋವುಂಟುಮಾಡಲಿಲ್ಲ. ಹಾಗೆ ಬ್ರಹ್ಮನನ್ನು ಹಳಿದವನ ಬಾಯಿ ಮುಚ್ಚಿಸಲು ಹೋದ ಪ್ರಸಂಗ ನಮ್ಮ ಜಾನಪದ ಕತೆಗಳಲ್ಲಿ ಎಲ್ಲೂ ಇಲ್ಲ. ಆದರೆ ನಮ್ಮ ನವ–ನಾಗರಿಕರು, ದೊಡ್ಡದೊಡ್ಡ ಪದವೀಧರರು, ಶ್ರೀಮಂತರು, ಸಂಸ್ಕೃತಿಯ 'ರಕ್ಷಕರು', ಕಾನೂನು ಪಂಡಿತರು, ದೆವ್ವವಿಲ್ಲ ಎಂಬ ಮಾತು ಕೇಳಿದರೆ ಹೌಹಾರುತ್ತಾರೆ, ಕೆಂಡಾಮಂಡಲವಾಗುತ್ತಾರೆ, ಮನಸ್ಸಿಗೆ ನೋವಾದವರಂತೆ ನಟಿಸುತ್ತಾರೆ ! "ಸ್ವಲ್ಪ ವಜ್ರ ತಿನ್ನಿರಪ್ಪ , ನಿಮ್ಮ ಮನಸ್ಸು ಗಟ್ಟಿಯಾಗುತ್ತದೆ" ಎಂದು ಇವರಿಗೆ ದೆವ್ವಗಳೇ ಬಂದು ಉಪದೇಶಿಸ ಬೇಕಾಗಿದೆಯೆಂದು ತೋರುತ್ತದೆ. ಆಗ ದೆವ್ವಗಳಿಗೆ ಇವರು ಹೇಳುತ್ತಾರೆ, "ಹೇ, ಸುಮ್ಮನಿರು. ನೀನಿಲ್ಲದಿದ್ದರೆ ನಮ್ಮ ಪಟ್ಟೆಪಟ್ಟೆ ವಿಭೂತಿ, ಅಂಗೈಯ್ಯಗಲದ ಕುಂಕುಮ, ಗೇಣುದ್ದದ ಗಡ್ಡ, ಮಾರುದ್ದದ ಶಿಲುಬೆ, ಇವಕ್ಕೆಲ್ಲಾ ಏನು ಶಕ್ತಿ ಉಳಿದೀತು !" ಎಂದು. ಆದ್ದರಿಂದಲೇ ನಮ್ಮ ನವಯುಗ, ಐಟಿ–ಬಿಟಿ ಯುಗ, ಸರ್ವಂ ದೆವ್ವಮಯಂ ಆಗಿ ಕೂತಿದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫




ಮನೆಗಳೊಳಗಣ ಗುಟ್ಟ ರಟ್ಟು ಮಾಡುತ್ತಿದ್ದ
ಗುಬ್ಬಚ್ಚಿಗಳೆ ಇಲ್ಲ, ಎಲ್ಲಿ ಹುಡುಕುವುದವನು ಹೇಳಿ ನೀವು
ಮಕ್ಕಳಾಟಕ್ಕಿದ್ದ ಮೈದಾನಗಳಲ್ಲೆಲ್ಲ
ಮನೆಮಠಗಳೆದ್ದಿಹವು ಆಡುವಾಡುವುದೆಲ್ಲಿ
ನಮ್ಮ ಮಕ್ಕಳು ಇನ್ನು – ಹೇಳಿ ನೀವು
ಮನೆ ಮನೆಗಳೇಳುತಿವೆ ಕೆರೆಗಳಿದ್ದೆಡೆಯಲ್ಲಿ
ಪಾತಾಳಕಿಳಿಯುತಿದೆ ಬಾವಿಗಳ ಜಲಮಟ್ಟ
ಕುಡಿವ ನೀರೆಲ್ಲವೂ ವಿಷಗ್ರಸ್ಥವಾಗುತಿದೆ
ಕುಡಿವುದೇನನು ಇನ್ನು ಹೇಳಿ ನೀವು
ರಸ್ತೆ ಕಿರಿದಾಯ್ತೆಂದು ವೃಕ್ಷ ಮಾರಣಹೋಮ
ಗೋಳಿಡುತ ಕೇಳುತಿವೆ ದಿಕ್ಕೆಟ್ಟ ಹಕ್ಕಿಗಳು
ಗೂಡು ಕಟ್ಟುವುದೆಲ್ಲಿ ಹೇಳಿ ನೀವು
ಕಾರ್ಖಾನೆಗಳ ತ್ಯಾಜ್ಯ ಬಗೆ ಬಗೆಯ ಮಾಲಿನ್ಯ
ದಿನ ದಿನವು ಹೆಚ್ಚುತ್ತ ಜನರು ತತ್ತರಿಸಿಹರು
ಶುದ್ಧ ಗಾಳಿಯೆ ಇಲ್ಲ ಉಸಿರಾಡುವುದು ಏನು ಹೇಳಿ ನೀವು

ಬೆಳೆಯುತಿವೆ ನಗರಗಳು ಕಾಡುಗಳ ಕಡಿಕಡಿದು
ನುಗ್ಗುತ್ತ ಊರೊಳಗೆ ಕಾಡು ಪ್ರಾಣಿಗಳೆಲ್ಲ
ಕೇಳುತಿವೆ – ನಾವೆಲ್ಲಿ ಹೋಗೋಣ – ಹೇಳಿ ನೀವು
ಕೀಟನಾಶಕ ದ್ರವ್ಯ ಧಾನ್ಯಗಳಿಗೇ ಅಲ್ಲ
ಸೊಪ್ಪುಸದೆಗೂ ಇಳಿದು ಎಲ್ಲ ವಿಷಮಯವಾಗಿ
ತಿನ್ನುವುದು ಏನನ್ನು ? ಹೇಳಿ ನೀವು

**ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ**
ನಂ. ೨೦೫, 'ಲಲಿತ ಕೃಪ' ೭ನೇ 'ಎ' ಮುಖ್ಯರಸ್ತೆ, ಆರ್. ಪಿ. ಸಿ. ಲೇಔಟ್
ವಿಜಯನಗರ, ಬೆಂಗಳೂರು – ೫೬೦ ೦೪೦



# ಮುಂಜಾವಿನ ಆಕರ್ಷಣೆಗಳು

**ಈ** ತಿಂಗಳಲ್ಲಿ ಮುಂಜಾವಿನಲ್ಲಿ ಗ್ರಹಗಳ ಸಂಗಮಗಳನ್ನು ನೋಡಲು ಒಳ್ಳೆಯ ಅವಕಾಶಗಳಿವೆ. ಎಲ್ಲಕ್ಕಿಂತ ಮುಖ್ಯವಾದ ಆಕರ್ಷಣೆ ಶುಕ್ರ ಮತ್ತು ಶನಿ. ಇವು ಪರಸ್ಪರ ಸಮೀಪಿಸಿ ದೂರವಾಗುವುವು. ೯ರಂದು ಅವೆರಡರ ನಡುವೆ ಕನಿಷ್ಠ ಕೋನ. ದೂರದರ್ಶಕ, ದುರ್ಬೀನು, ಕ್ಯಾಮೆರಾ ಇರುವವರಿಗೆ ಇದು ಒಳ್ಳೆಯ ಅವಕಾಶ. ಮೊದಲನೆಯ ತಾರೀಖಿನಂದೇ ಮುಂಜಾವಿನಲ್ಲಿ ಗುರು ಮತ್ತು ಚಂದ್ರ ಒಟ್ಟುಗೂಡಿರುತ್ತವೆ. ೪ರಂದು ಚಿತ್ರಾ, ಮಂಗಳ ಇವೆರಡರ ಜೊತೆಗೆ ಚಂದ್ರನ ಸಮಾಗಮ. ಹಾಗೆಯೇ ಮುಂದುವರೆಯುವ ಚಂದ್ರ ಏಳರಂದು ಶುಕ್ರ, ಶನಿ ಜೊತೆಗೆ ಜ್ಯೇಷ್ಠಾ ಇವುಗಳೊಡನೆ ಸೇರುವುದಿದೆ. ೧ನೇ ತಾರೀಖಿನ ಮುಂಜಾವಿನಲ್ಲಿ ನಿದ್ದೆ ಮಾಡಿ ಬಿಟ್ಟವರಿಗೆ ತಿಂಗಳ ಕೊನೆಗೆ ೨೭–೨೮ರಂದು ಪುನಃ ಚಂದ್ರ–ಗುರು ಒಂದಾಗುವುದನ್ನು ಕಾಣುವ ಅವಕಾಶ ಇದೆ. ೨೭ರ ರಾತ್ರಿ ಸುಮಾರು ೯:೪೫ ಗಂಟೆಗೆ ಚಂದ್ರೋದಯವನ್ನು ನೋಡಿದಲ್ಲಿ ಈ ಸಮಾಗಮ ಕಾಣುತ್ತದೆ. ೨೮ರ ಮುಂಜಾವಿಗೆ ಪಶ್ಚಿಮದಲ್ಲಿ ಕಾಣುತ್ತದೆ.

ಬುಧ ಗ್ರಹ ತಿಂಗಳ ಮೊದಲ ವಾರ ಸಂಜೆ ಕಾಣುತ್ತದೆ. ಕ್ರಮೇಣ ದಿಗಂತದ ಅಂಚಿಗೆ ಸರಿದು ಕಾಣದಂತಾಗುತ್ತದೆ. ಆದ್ದರಿಂದ ಸಂಜೆಯ ಆಕಾಶದಲ್ಲಿ ನಕ್ಷತ್ರಗಳದ್ದೇ ವೈಭವ. ಶುಭ್ರವಾದ ಆಕಾಶದಲ್ಲಿ ನಕ್ಷತ್ರಪುಂಜಗಳ ಪರಿಚಯ ಮಾಡಿಕೊಳ್ಳೋಣ. ಪೂರ್ವದಲ್ಲಿ ಗೆರೆ ಎಳೆದಂತೆ ಕಾಣುವ ಮೂರು ಚುಕ್ಕೆಗಳು ಮಹಾವ್ಯಾಧದ (ಒರ್ರೈಯನ್) ನಡುವು. ಈ ಸೊಂಟಪಟ್ಟಿಯಲ್ಲೊಂದು ಖಡ್ಗವನ್ನು ಕಲ್ಪಿಸಿಕೊಳ್ಳಿ, ಆ ಸ್ಥಳದಲ್ಲಿದೆ ಒರ್ರೈಯನ್ ನೆಬ್ಯುಲಾ. ಇದನ್ನು ಬರಿಗಣ್ಣಿನಿಂದಲೇ ಗುರುತಿಸುವ ಪ್ರಯತ್ನ ಮಾಡಬಹುದು. ಮಹಾವ್ಯಾಧದ ಉತ್ತರಕ್ಕೆ ಇದೆ, ಪಂಚಕೋಣಾಕೃತಿಯ ವಿಜಯ ಸಾರಥಿ (ಆರಿಗಾ) – ಅದರಲ್ಲಿಯ ಪ್ರಕಾಶಮಾನ ನಕ್ಷತ್ರ ಬ್ರಹ್ಮಹೃದಯ (ಕಪೆಲ್ಲಾ). ದಕ್ಷಿಣದಲ್ಲಿ ಕಾಣುವ ಏಕಾಂಗಿ ನಕ್ಷತ್ರ ವೈತರಣೀ ಮುಖ (ಆಚೆರ್ನಾರ್). ಮಹಾವ್ಯಾಧನ ಕಾಲಿನ ಬಳಿ ಆರಂಭವಾಗುವ ನದಿಯ ಕೊನೆಯ ನಕ್ಷತ್ರ. ಉತ್ತರದಲ್ಲಿ ಕುಂತಿ (ಕೆಸಿಯೋಪಿಯ) ನೆತ್ತಿಯಲ್ಲಿ ನಕುಲ (ಪೆಗಸಸ್) – ಇವೆರಡರ ನಡುವೆ ದ್ರೌಪದಿ (ಆಂಡ್ರೊಮಿಡಾ). ಈ ಭಾಗದಲ್ಲಿ ದುರ್ಬೀನಿನಿಂದ ಹುಡುಕಿದರೆ ಆಂಡ್ರೊಮಿಡಾ ಗೆಲಾಕ್ಸಿಯೂ ಕಾಣುವ ಸಾಧ್ಯತೆ ಇದೆ. ನೆತ್ತಿಯಿಂದ ಪೂರ್ವದಂಚಿನ ಭಾಗದಲ್ಲಿ ಮೇಷ, ವೃಷಭಗಳನ್ನು ಕಾಣಬಹುದು.



೯ (ಮುಂಜಾವು) ಶುಕ್ರ – ಶನಿ




ತಿಂಗಳ ಮೊದಲ ವಾರದಲ್ಲಿ ಕ್ವಾಡ್ರಾಟಿಡ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ಅಷ್ಟೇನೂ ಪ್ರಕಾಶಮಾನವಾದದ್ದಲ್ಲ. ೪ರಂದು ಭೂಮಿ – ಸೂರ್ಯರ ದೂರ ಗರಿಷ್ಠವಾಗಿರುವುದು; ಹಾಗೆಂದ ಮಾತ್ರಕ್ಕೆ ಅದು ಬರಿಗಣ್ಣಿಗೇ ಚಿಕ್ಕದಾಗಿ ಕಾಣುತ್ತದೆ ಎಂದೇನೂ ಅರ್ಥವಲ್ಲ. ಈ ತಿಂಗಳ ೨ ಮತ್ತು ೧೫ರಂದು ಚಂದ್ರ – ಭೂಮಿ ನಡುವಿನ ದೂರ ಗರಿಷ್ಠ ಮತ್ತು ಕನಿಷ್ಠ ಇರುತ್ತವೆ. ಆದಿನ ಕಾಣುವ ಅರ್ಧ ಚಂದ್ರಗಳಲ್ಲಿ ಚಂದ್ರಗೋಳದ ಎರಡು ಬೇರೆ ಬೇರೆ ಅರ್ಧಗಳು ಕಾಣುವುವು ಎಂಬುದೇ ಒಂದು ವಿಶೇಷ. ಒಂದೇ ಕ್ಯಾಮೆರಾದ ಸೆಟ್ಟಿಂಗ್ಸ್ ಬದಲಿಸದೆ ಇಟ್ಟು ತೆಗೆದ ಚಿತ್ರಗಳನ್ನು ಹೋಲಿಸಿದರೆ ದೂರದ ಕಾರಣ ಗಾತ್ರದ ವ್ಯತ್ಯಾಸ ಕಾಣುತ್ತದೆ. ಅಕಸ್ಮಾತ್ ೨ರಂದು ತೆಗೆಯಲು ಸಾಧ್ಯವಾಗದಿದ್ದರೆ ೩೦ರಂದು ತೆಗೆಯಲು ಇನ್ನೊಂದು ಅವಕಾಶವೂ ಇದೆ.

**ಖಗೋಳ ದಿನಚರಿ**

೨ ಚಾಂದ್ರಮಾಸದ ಕೊನೆಯ ಪಾದ. ಚಂದ್ರ–ಭೂಮಿ ನಡುವಿನ ದೂರ ಗರಿಷ್ಠ*.
ಭೂಮಿ–ಸೂರ್ಯ ನಡುವಿನ ದೂರ ಗರಿಷ್ಠ.
೪ (ಮುಂಜಾವು) ಚಂದ್ರ–ಮಂಗಳ ಜೋಡಿ*
೭ (ಮುಂಜಾವು) ಚಂದ್ರ–ಶುಕ್ರ–ಶನಿ ಸಮಾಗಮ*
೯ (ಮುಂಜಾವು) ಶುಕ್ರ–ಶನಿ ನಡುವೆ ಕನಿಷ್ಠ ಅಂತರ*
೧೦ ಅಮಾವಾಸ್ಯೆ ಬೆಳಿಗ್ಗೆ ೬:೩೦ಕ್ಕೆ
೧೪ ಬುಧ–ಸೂರ್ಯ ಜೋಡಿ
೧೫ ಚಂದ್ರ–ಭೂಮಿ ನಡುವಿನ ದೂರ ಕನಿಷ್ಠ*
೧೬ ಚಾಂದ್ರಮಾಸದ ಮೊದಲ ಪಾದ
೨೦ (ಸಂಜೆ) ಚಂದ್ರ–ರೋಹಿಣಿ ಜೋಡಿ;
ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ.*
೨೭ (ಮುಂಜಾವು) ಗುರು–ಚಂದ್ರ ಜೋಡಿ*
೩೦ ಚಂದ್ರ–ಭೂಮಿ ನಡುವಿನ ದೂರ ಗರಿಷ್ಠ *
(*ಛಾಯಾಗ್ರಹಣಕ್ಕೆ ಸದವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧




# ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ



1ನೇ ಮಹಡಿ, 16/ಜೆ, ಮಿಲ್ಲರ್ ಟ್ಯಾಂಕ್ ಬೆಡ್ ಏರಿಯಾ, ಬೆಂಗಳೂರು–560052



## ರಾಜ್ಯಸರ್ಕಾರದ ಲೋಕೋಪಯೋಗಿ ಇಲಾಖೆಯಡಿ ಸ್ಥಾಪಿತವಾಗಿರುವ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಮಾಡಿರುವ ಸಾಧನೆಗಳ ಪಕ್ಷಿನೋಟ



ಶ್ರೀ ಸಿದ್ಧರಾಮಯ್ಯ
ಮಾನ್ಯ ಮುಖ್ಯಮಂತ್ರಿಗಳು



ಡಾ|| ಹೆಚ್.ಸಿ. ಮಹದೇವಪ್ಪ
ಮಾನ್ಯ ಲೋಕೋಪಯೋಗಿ ಸಚಿವರು

- ರಾಜ್ಯದ ವಿವಿಧ ಭಾಗಗಳಲ್ಲಿ ಒಟ್ಟು 884 ಕಿ.ಮೀ. ಉದ್ದದ 31 ರಸ್ತೆ ಯೋಜನೆಗಳನ್ನು ರೂ. 1187 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ. ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
- 131 ಕಿ.ಮೀ. ಉದ್ದದ ಮೂರು ರಸ್ತೆ ಅಭಿವೃದ್ಧಿ ಯೋಜನೆಗಳನ್ನು ರೂ. 1069 ಕೋಟಿಗಳ ವರ್ಷಾಸನ ಮೊತ್ತದಲ್ಲಿ ಪಿ.ಪಿ.ಪಿ-ವರ್ಷಾಸನ ಆಧಾರದಲ್ಲಿ ಕೈಗೊಳ್ಳಲಾಗಿದೆ.
- 202 ಕಿ.ಮೀ. ಉದ್ದದ ಎರಡು ರಸ್ತೆ ಯೋಜನೆಗಳನ್ನು ಒಟ್ಟಾರೆ ಯೋಜನಾ ಮೊತ್ತ ರೂ. 432 ಕೋಟಿಗಳಲ್ಲಿ ಪಿ.ಪಿ.ಪಿ-ವಿ.ಜಿ.ಎಫ್ (ಟೋಲ್) ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
- 2001-04 ರ ಮೊದಲನೇ ಹಂತದಲ್ಲಿ 7327 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 225 ಕೋಟಿಗಳ ಮೊತ್ತದಲ್ಲಿ ಮತ್ತು 2005-08ರ ಎರಡನೇ ಹಂತದಲ್ಲಿ 14500 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 603 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ. ಒಟ್ಟು 636 ಸೇತುವೆಗಳನ್ನು ಹಂತವಾರು ವಿಶೇಷ ಯೋಜನೆ ಅಡಿಯಲ್ಲಿ ರೂ. 610.30 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ. ಇದಲ್ಲದೆ 11 ಬ್ರಿಡ್ಜ್ ಸೇತುವೆಗಳನ್ನು ರೂ. 182 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
- ಒಟ್ಟು 324 ಕಿ.ಮೀ. ಉದ್ದದ 10 ರಸ್ತೆ ಯೋಜನೆಗಳನ್ನು ರೂ. 1010 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ ಆಧಾರದಲ್ಲಿ ಕೈಗೊಳ್ಳಲಾಗುತ್ತಿದೆ.
- ಒಟ್ಟು 12 ಬ್ರಿಡ್ಜ್ ಸೇತುವೆಗಳನ್ನು ರೂ. 226 ಕೋಟಿಗಳ ಮೊತ್ತದಲ್ಲಿ ಕೈಗೊಳ್ಳಲಾಗುತ್ತಿದೆ.

### ಉದ್ದೇಶಿತ ಯೋಜನೆಗಳು



- ಒಟ್ಟು 515 ಕಿ.ಮೀ. ಉದ್ದದ ರೂ. 1654 ಕೋಟಿಗಳ ಒಟ್ಟಾರೆ ಯೋಜನಾ ಮೊತ್ತದ 6 ಯೋಜನೆಗಳನ್ನು ಪಿ.ಪಿ.ಪಿ-ವಿ.ಜಿ.ಎಫ್-ಡಿ.ಬಿ.ಎಫ್.ಓ.ಟಿ (ಟೋಲು) ಆಧಾರದಲ್ಲಿ ಕೈಗೊಳ್ಳಲು ಯೋಜಿಸಿದೆ.
- 381.4 ಕಿ.ಮೀ. ಉದ್ದದ 7 ರಸ್ತೆ ಯೋಜನೆಗಳನ್ನು ರೂ. 1178 ಕೋಟಿಗಳ ಯೋಜನಾ ಮೊತ್ತದಲ್ಲಿ ಡಿ.ಬಿ.ಎಫ್.ಓ.ಟಿ (ಅನ್ಯುಟಿ ಮಾದರಿಯಲ್ಲಿ ವಿಶ್ವಬ್ಯಾಂಕ್ ನೆರವಿನೊಂದಿಗೆ ಕೈಗೆತ್ತಿಕೊಳ್ಳಲು ಯೋಜಿಸಿ, ಬಿಡ್ಡುದಾರರ ಪೂರ್ವಾರ್ಹತೆ ಪ್ರಕ್ರಿಯೆ ಪ್ರಗತಿಯಲ್ಲಿದೆ. ಭಾಗಶಃ ಕೋರ್ ರೋಡ್ ನೆಟ್‌ವರ್ಕ್ ಅಭಿವೃದ್ಧಿಯನ್ನು ಹುಡ್ಕೋ ನೆರವಿನೊಂದಿಗೆ ಕೈಗೊಳ್ಳಲು ಯೋಜಿಸಿದೆ. ಕರ್ನಾಟಕ ರಾಜ್ಯಾದ್ಯಂತ ಅತ್ಯಂತ ಅವಶ್ಯವಿರುವ ಒಟ್ಟು 201 ಸೇತುವೆಗಳನ್ನು ಒಟ್ಟು ಅಂದಾಜು ಮೊತ್ತ ರೂ. 1235.77 ಕೋಟಿಗಳ ಮೊತ್ತದಲ್ಲಿ ನಬಾರ್ಡ್ ನೆರವಿನೊಂದಿಗೆ ಕೈಗೊಳ್ಳಲು ಯೋಜಿಸಿದೆ.



ಶ್ರೀ ಎಸ್. ಕೃಷ್ಣರಾಜು
ಮಾನ್ಯ ಅಧ್ಯಕ್ಷರು, ಕರರಅನಿ



ಶ್ರೀ ವಿ. ಹೆಚ್. ಭೀಮಾಶಂಕರ್
ಮಾನ್ಯ ಉಪಾಧ್ಯಕ್ಷರು, ಕರರಅನಿ









ಉತ್ತಮ ರಸ್ತೆಗಳು ಅಭಿವೃದ್ಧಿಗೆ ಮುನ್ನುಡಿ

ಎಚ್. ಎಲ್. ಕೇಶವಮೂರ್ತಿ

# ಮೋದಿ ವಿಜ್ಞಾನ



'ಪುರಾಣ ಓದಿ
ವಿಜ್ಞಾನ ತಿಳಿ.'

ಇದು ಮೋದಿಯವರ ಮಂತ್ರ.

ಪುರಾಣದಲ್ಲಿ ಏನಿಲ್ಲ ?

ಕಟ್ಟಡ ತಂತ್ರಜ್ಞಾನ ಬೇಕೆ ?

ತಳಿ ತಂತ್ರಜ್ಞಾನ ಬೇಕೆ ?

ಬಾಹ್ಯಾಕಾಶ ತಂತ್ರಜ್ಞಾನ ಬೇಕೆ ?

ಯಾವ ತಂತ್ರಜ್ಞಾನ ಬೇಕು ಹೆಸರಿಸಿ, ಎಲ್ಲವೂ ಇದೆ ಪುರಾಣದಲ್ಲಿ !

ಒಂದು ಉದಾಹರಣೆ.

ಗಣಪತಿ ಸೃಷ್ಟಿಯಾದದ್ದು ಹೇಗೆ ?

ಮನುಷ್ಯನ ದೇಹ, ಆನೆಯ ತಲೆ. ಇದು, ನಮ್ಮ ಗಣಪತಿ.

ಅದು ಆದದ್ದು ಹೀಗೆ :

ಪಾರ್ವತಿಗೆ ಒಂದು ದಿವಸ ಇದ್ದಕ್ಕಿದ್ದಂತೆ ಸ್ನಾನ ಮಾಡುವ ಬಯಕೆ ಆಯಿತು. ಅದು ಯಾಕೆ ಆಯಿತು ಅಂದರೆ ಆಯಿತು ಅಷ್ಟೆ. ಮನೆಯಲ್ಲಿದ್ದವಳು ಒಬ್ಬಳೇ – ಒಂಟಿ ಬಡುಕಿ. ತಾನು ಸ್ನಾನಕ್ಕೆ ಕುಳಿತಾಗ ಅಪರಿಚಿತರಾರಾದರು ಬಂದಾರು, ಅವರ ಕಾಮುಕ ಕಣ್ಣಿಗೆ ನಗ್ನ ದೇಹ ಆಹಾರವಾದೀತು ಎಂಬ ಆತಂಕ. ತನ್ನ ಮೈಯ ಕೊಳೆಯಿಂದ ಒಂದು ಪುಟ್ಟ ಬಾಲಕನನ್ನು ಸೃಷ್ಟಿಸಿದಳು. ಅವನನ್ನು ಕಾವಲಿಗೆ ನೇಮಿಸಿ ಸ್ನಾನ ಗೃಹಕ್ಕೆ ತೆರಳಿದಳು. ಅದೇ ಸಮಯದಲ್ಲಿ ಈಶ್ವರ ಬಂದ. ಅವನಿಗೋ ಹೆಂಡತಿ ಕಾಣುವ ತವಕ. ಸೀದಾ ಒಳ ನುಗ್ಗಲು ಹೋದ. ಬಾಗಿಲ ಬಳಿ ಇದ್ದ ಬಾಲಕ ಅಡ್ಡ ಬಂದ. ತನ್ನ ಮನೆಯ ಒಳಗೆ ತಾನು ಹೋಗಲು ಈ ಚುಲ್ಟಾರಿಯ ಅಡ್ಡಿ. ರೇಗಿತು ಪರಮೇಶ್ವರನಿಗೆ. ಯಾರ ಮಗು ಇದು ? ಯಾಕೆ ಅಡ್ಡಿ ಮಾಡ್ತಿದೆ ಅಂತ ಯೋಚಿಸುವ ವ್ಯವಧಾನ ಇರಲಿಲ್ಲ. ಮಗುವಿನ ರುಂಡ ಚೆಂಡಾಡಿದ. ಅಷ್ಟರಲ್ಲಿ ಪಾರ್ವತಿ ಅಲ್ಲಿಗೆ ಬಂದಳು. ತನ್ನ ಮುದ್ದಿನ ಕುವರ ರುಂಡ ಮುಂಡ ಛೇದಿತನಾಗಿ ಬಿದ್ದಿರುವುದನ್ನು ಕಂಡು ಪರಿತಪಿಸಿದಳು. ತನ್ನ ಮಗು ಬೇಕು ಎಂದು ಚಂಡಿ ಹಿಡಿದಳು. ಉತ್ತರದಿಕ್ಕಿಗೆ ತಲೆ ಹಾಕಿ ಮಲಗಿರುವ ಮನುಷ್ಯ ಅಥವಾ ಪ್ರಾಣಿ ತರುವಂತೆ ಆಜ್ಞಾಪಿಸಿ ತನ್ನ ದೂತರನ್ನು ಅಟ್ಟಿದ ಪರಮಾತ್ಮ. ಮನುಷ್ಯರು ಯಾರೂ ಹಾಗೆ ಮಲಗಿರಲಿಲ್ಲ. ನತದೃಷ್ಟ ಆನೆಯೊಂದು ಹಾಗೆ ಮಲಗಿತ್ತು. ಅದರ ತಲೆಯನ್ನೇ ಕಡಿದು ತಂದರು. ಈಶ್ವರ ಮನುಷ್ಯನ ಮುಂಡ ಆನೆಯ ರುಂಡ ಕಸಿಮಾಡಿದ. ಅದು ಗಣಪತಿ ಆಯಿತು.

ಇದು ನಾವೆಲ್ಲರೂ ಬಲ್ಲ ಕತೆ.

ಮೋದಿಯವರಿಗೆ ಇದು ಕುತೂಹಲದ ಸಂಗತಿ.

ಸಾಮಾನ್ಯವಾಗಿ ಒಬ್ಬ ಮನುಷ್ಯನ ಅಂಗವನ್ನು ಇನ್ನೊಬ್ಬ ಮನುಷ್ಯನಿಗೆ ಕಸಿ ಮಾಡುವುದೇ ಕಷ್ಟದ ಕೆಲಸ. ಅವರಿಬ್ಬರ ರಕ್ತದ ಗುಂಪು ಹೊಂದಾಣಿಕೆ ಆಗಬೇಕು. ಇನ್ನು ಪ್ರಾಣಿಯ ಅಂಗವನ್ನು ಮನುಷ್ಯನಿಗೆ ಕಸಿಮಾಡುವುದು ಸಾಧ್ಯವಿಲ್ಲದ ಮಾತು. ಆದರೆ ಇಲ್ಲಿ ಆನೆಯ ತಲೆಯನ್ನು ಮನುಷ್ಯನಿಗೆ ಕಸಿ ಮಾಡಲಾಗಿತ್ತು. ಅಂದರೆ, ಪ್ರಾಣಿಯ ರಕ್ತವನ್ನು ಮನುಷ್ಯನ ರಕ್ತಕ್ಕೆ ಹೊಂದಾಣಿಕೆ ಮಾಡಿ ಕಸಿ ಮಾಡಲಾಗಿತ್ತು! ನಮ್ಮ ಪೂರ್ವಿಕರಿಗೆ ಈ ವಿದ್ಯೆ ಕರಗತ ಆಗಿರಲೇಬೇಕು. ಅದೂ ಅಲ್ಲದೆ ಇನ್ನೊಂದು ವಿಷಯ ಗಮನಿಸಬೇಕು. ಮಗು ಜನಿಸಿದ್ದು ತಾಯಿಯ ಗರ್ಭದಿಂದ ಹೊರಗೆ! ಅಂದರೆ ತಾಯಿಯ ಗರ್ಭದ ಆಶ್ರಯ ಇಲ್ಲದೆ ಮಗುವನ್ನು ಸೃಷ್ಟಿಸುವ ವೈದ್ಯಕೀಯ ವಿಜ್ಞಾನದ ಅರಿವು ನಮ್ಮ ಪೂರ್ವಿಕರಿಗಿತ್ತು.

ಈ ಸತ್ಯವನ್ನು ಬಹಿರಂಗಗೊಳಿಸಿದ್ದು ಮೋದಿ. ಆಸ್ಪತ್ರೆ ಉದ್ಘಾಟನೆ ಸಂದರ್ಭದಲ್ಲಿ ಹೊರಬಿದ್ದ ಮೋದಿಯವರ ವೈಜ್ಞಾನಿಕ ಸತ್ಯ ಇದು.

ಕಾಂಡಕೋಶ ತಂತ್ರಜ್ಞಾನ (stem cell technology) ತನ್ನ ಕೊಡುಗೆ ಎಂದು ಬೀಗುತ್ತಿದೆ ಅಮೆರಿಕ ದೇಶ. ಇಡೀ ಪ್ರಪಂಚ ಇದಕ್ಕೆ ಮರುಳಾಗಿದೆ. ಆದರೆ ಇದು ಸುಳ್ಳು. ಈ ತಂತ್ರಜ್ಞಾನದ ಕೊಡುಗೆ ಭಾರತೀಯರದ್ದು ಎಂಬುದು ಮೋದಿಯವರ ಸಂಶೋಧನೆ. ಇದಕ್ಕೆ ಉದಾಹರಣೆ ಮಹಾಭಾರತದ ಕರ್ಣನ ಜನನ. ತಾಯಿ ಕುಂತಿ ಈ ತಂತ್ರಜ್ಞಾನವನ್ನು ಬಳಸಿ ಸೂರ್ಯನಷ್ಟೇ ಪ್ರಕಾಶಮಾನವಾದ ಮಗುವನ್ನು ಪಡೆದಳು. ಈ ಸಂಗತಿ ಗಾಂಧಾರಿಗೆ ತಿಳಿದಿತ್ತು. ಅವಳಿಗೋ ಮದುವೆಯಾಗಿ ಎರಡು ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಈ ವ್ಯಸನ ಅವಳನ್ನು ಕಾಡುತ್ತಿತ್ತು. ಕುಂತಿ ಮಗನನ್ನು ಪಡೆದ ವಿಧಾನ

ತಿಳಿದಿತ್ತಲ್ಲ, ಅದನ್ನೇ ಬಳಸಲು ಬಯಸಿದಳು. ಗರ್ಭಪಾತ ಮಾಡಿಸಿಕೊಂಡಳು. ಅವಳ ದೇಹದಿಂದ ಮಾಂಸದ ಮುದ್ದೆ ಹೊರಬಂತು. ವ್ಯಾಸ ಮುನಿಗಳನ್ನು ಬರಮಾಡಿಕೊಂಡಳು. ವಿಷಯ ತಿಳಿಸಿದಳು. ಮಹಾ ಮುನಿಗಳು ಮಾಂಸದ ಮುದ್ದೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. ನುರಿತ ಶಿಲ್ಪಿಗೆ ಬಂಡೆಯ ಒಳಗಿನ ವಿಗ್ರಹ ಗೋಚರಿಸುವಂತೆ ಮಹಾ ಮುನಿಗಳಿಗೆ ಆ ಮಾಂಸದ ಮುದ್ದೆಯಲ್ಲಿ ನೂರು ಜೀವಕೋಶಗಳು ಕಂಡುಬಂದವು. ಕೂಡಲೆ ಅದನ್ನು ತಂಪಾದ ಒಂದು ಬೃಹತ್ ಗುಡಾಣದಲ್ಲಿ ಇರಿಸಿದರು. ಅದಕ್ಕೆ ವಿಶಿಷ್ಟವಾದ ಮದ್ದನ್ನು ಸೇರಿಸಿದರು. ಅನಂತರ ಅದನ್ನು ನೂರು ಭಾಗ ಮಾಡಿ ತಂಪಾದ ನೂರು ಪ್ರತ್ಯೇಕ ಮಡಕೆಗಳಲ್ಲಿ ಇಡಿಸಿದರು. ಅವುಗಳ ತುಂಬ ತುಪ್ಪವನ್ನು ಸುರಿಸಿದರು. ಎರಡು ವರ್ಷಗಳ ನಂತರ ಆ ಮಡಕೆಗಳಿಂದ ನೂರು ಮಂದಿ ಕೌರವರು ಹೊರಬಂದರು. ಇದು ಸಾಧ್ಯವಾದದ್ದು ಕಾಂಡಕೋಶ ತಂತ್ರಜ್ಞಾನದಿಂದ. ಅದು ಅಮೆರಿಕದ ಕೊಡುಗೆ ಅಲ್ಲ, ನಮ್ಮದು. ಸಾವಿರಾರು ವರ್ಷಗಳ ಹಿಂದೆಯೇ ಈ ತಂತ್ರಜ್ಞಾನ ನಮಗೆ ತಿಳಿದಿತ್ತು. ನಮ್ಮ ಆಸ್ತಿಯಾಗಿತ್ತು! ಅದಕ್ಕಾಗಿ ಹೆಮ್ಮೆಪಡುವ ಮೋದಿ ಈ ಹೆಮ್ಮೆ ಇತರ ಭಾರತೀಯರಿಗಿಲ್ಲವಲ್ಲ ಎಂದು ಮರುಗುತ್ತಾರೆ.

ವಿಮಾನವನ್ನು ಕಂಡುಹಿಡಿದವರು ಯಾರು? ಈ ಪ್ರಶ್ನೆಗೆ ಬರುವ ಉತ್ತರ ರೈಟ್




ಸಹೋದರರು!

ಇದು ಅಜ್ಞಾನದ ಪರಮಾವಧಿ ಎನ್ನುತ್ತಾರೆ ಮೋದಿ.

ಹಾಗಾದರೆ ಇದರ ಸಂಶೋಧಕರು ಯಾರು?

ತಿಳಿದಿಲ್ಲ. ಆದರೆ ಮೊದಲ ಪ್ರಯಾಣಿಕನಂತೂ ಶ್ರೀರಾಮ ಎಂಬುದು ನಿಸ್ಸಂಶಯ ಎನ್ನುತ್ತದೆ ಮೋದಿಯವರ ವೈಜ್ಞಾನಿಕ ಸಂಶೋಧನೆ!

ಏನಿದೆ ಇದಕ್ಕೆ ಪುರಾವೆ?

ರಾಮಾಯಣ ಓದಿ.

ಶ್ರೀರಾಮಚಂದ್ರ ಲಂಕೆಯಿಂದ ಸೀತಾಮಾತೆಯನ್ನು ಕರೆದು ತಂದದ್ದು ಹೇಗೆ? ಪುಷ್ಪಕ ವಿಮಾನದಲ್ಲಿ! ಅಂದರೆ ತ್ರೇತಾಯುಗದಲ್ಲೇ ವಿಮಾನ ತಂತ್ರಜ್ಞಾನ ನಮಗೆ ದಕ್ಕಿತ್ತು. ಹಾಗೆಯೇ ಕಟ್ಟಡ ನಿರ್ಮಾಣ ತಂತ್ರಜ್ಞಾನವೂ ಸಹ. ಭಾರತದಿಂದ ಲಂಕೆಗೆ ಹೋಗಲು ಸಮುದ್ರ ಅಡ್ಡ ಇತ್ತು. ಶ್ರೀ ರಾಮಚಂದ್ರ ಅಲ್ಲಿ ಸೇತುವೆ ನಿರ್ಮಿಸಿದ. ಅದರ ಅವಶೇಷಗಳು ಇನ್ನೂ ಇವೆ.

ಇಷ್ಟು ಮಾತ್ರ ಅಲ್ಲ, ಬಾಹ್ಯಾಕಾಶ ವಿಜ್ಞಾನವೂ ನಮ್ಮ ಪೂರ್ವಿಕರಿಗೆ ಕರಗತ ಆಗಿತ್ತು. ನೂರಾರು ವರ್ಷಗಳ ಹಿಂದೆ ಆರ್ಯಭಟ ಹೇಳಿದ್ದ ಮಾತುಗಳು ಇಂದು ಸತ್ಯವಾಗುತ್ತಿವೆ.

ವಿಜ್ಞಾನಿ ಮೋದಿಯವರ ಬತ್ತಳಿಕೆಯಲ್ಲಿ ಇನ್ನೂ ಎಂತೆಂತಹ ಅದ್ಭುತ ವೈಜ್ಞಾನಿಕ ವಿಚಾರಗಳು ಇದಾವೋ ತಿಳಿಯದು. ಭಾರತೀಯರನ್ನು ನೇರವಾಗಿ ಕೈಲಾಸಕ್ಕೆ ಕಳುಹಿಸುವ ತಂತ್ರಜ್ಞಾನವೂ ಇರಬಹುದೇನೋ!

**ಎಚ್. ಎಲ್. ಕೇಶವಮೂರ್ತಿ**
# ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್
ಅಗ್ನಿಶಾಮಕ ಠಾಣೆ ಎದುರು, ಗುತ್ತಲು ಅಂಚೆ
ಮಂಡ್ಯ – ೫೭೧ ೪೦೩

[redacted]



# ಡೆಮಾಕ್ರಸಿ ಉಳಿಸುವ ಚಳುವಳಿ ಮತ್ತು ಹೊಸ ತಲೆಮಾರು

ರಹಮತ್ ತರೀಕೆರೆ

**ಕ**ಳೆದ ಆಗಸ್ಟ್ ೧೬ರ ಆಸುಪಾಸಿನ ದಿನಗಳಲ್ಲಿ ಪಾರ್ಲಿಮೆಂಟಿನಲ್ಲಿ ನಡೆದ ಒಂದು ವಿದ್ಯಮಾನ ನಡೆಯಿತು. ಲಲಿತ್ ಮೋದಿ ಎಂಬ ವ್ಯಕ್ತಿ ದೇಶದಿಂದ ತಪ್ಪಿಸಿಕೊಂಡು ಹೋಗಲು ಆಡಳಿತ ಪಕ್ಷವಾದ ಬಿಜೆಪಿಯೇ ಕಾರಣವೆಂದು ಸಿಟ್ಟಾಗಿದ್ದ ವಿರೋಧ ಪಕ್ಷವಾದ ಕಾಂಗ್ರೆಸ್ಸಿನವರು, 'ಭ್ರಷ್ಟರನ್ನು ಶಿಕ್ಷಿಸಬೇಕು, ಡೆಮಾಕ್ರಸಿಯನ್ನು ಉಳಿಸಬೇಕು' ಎಂದು ಜೋರಾಗಿ ಕೂಗಾಡುತ್ತಿದ್ದರು. 'ಈ ವಿರೋಧ ಪಕ್ಷದವರು ಪಾರ್ಲಿಮೆಂಟ್ ಕೆಲಸ ಮಾಡೋಕೆ ಬಿಡ್ತಿಲ್ಲ. ಅವರಿಂದ ಡೆಮಾಕ್ರಸಿಯನ್ನು ಉಳಿಸ ಬೇಕಾಗಿದೆ' ಎಂದು ಆಡಳಿತ ಪಕ್ಷದವರು ಗಾಂಧಿ ಪ್ರತಿಮೆ ಎದುರು ಧರಣಿ ನಡೆಸುತ್ತಿದ್ದರು. ಗಾಂಧಿ ಚಿಂತನೆಯನ್ನು ಆಳದಲ್ಲಿ ವಿರೋಧ ಮಾಡು ವವರೇ ಅವರ ಪ್ರತಿಮೆಯ ಎದುರು ಅತಿಹೆಚ್ಚು ಉಪವಾಸ ಮಾಡುತ್ತಿರುವುದು ಒಂದು ರಾಜಕೀಯ ವ್ಯಂಗ್ಯ. ಇಲ್ಲಿನ ಸಮಸ್ಯೆಯೆಂದರೆ, 'ಡೆಮಾಕ್ರಸಿ ಯನ್ನು ಉಳಿಸಬೇಕು' ಎಂದು ಬೊಬ್ಬೆ ಹಾಕುತ್ತಿರುವ ಎರಡೂ ಪಕ್ಷಗಳು ಡೆಮಾಕ್ರಸಿಯನ್ನು ಈ ಸ್ಥಿತಿಗೆ ತಂದವರು ಯಾರೆಂಬ ಮೂಲಭೂತ ಪ್ರಶ್ನೆಯನ್ನೇ ಕೇಳಿಕೊಳ್ಳದಿರುವುದು.

ಚಳುವಳಿ, ಧರಣಿ, ಸತ್ಯಾಗ್ರಹ ಇವು ಅನ್ಯಾಯಕ್ಕೆ ಒಳಗಾದವರು ತಮ್ಮ ನ್ಯಾಯಬದ್ಧ ಹಕ್ಕಿಗಾಗಿ ಹೋರಾಟ ಮಾಡುವಾಗ ಬಳಸುತ್ತ ಬಂದ ಡೆಮಾಕ್ರಟಿಕ್ ಅಸ್ತ್ರಗಳು. ಇವುಗಳ ಅರ್ಥವೇ 'ವ್ಯಕ್ತಿಗಳು ತಮ್ಮ ಸ್ವಾರ್ಥ ಅಥವಾ ಸ್ವಹಿತಾಸಕ್ತಿಯನ್ನು, ವಿಶಾಲವಾದ ಸಮುದಾಯದ, ಒಟ್ಟು ಸಮಾಜದ ಒಳಿತಿಗಾಗಿ ಬಿಟ್ಟುಕೊಡಬೇಕು; ಅದಕ್ಕಾಗಿ ಕ್ರಿಯೆಗೆ ಇಳಿಯಬೇಕು' ಎನ್ನುವುದು. ಆದರೆ ಇಂತಹ ಸಮಾನತೆಯ ಸಮಾಜದ ಅಸ್ತ್ರವನ್ನು ಇವತ್ತು ಅಕ್ರಮವಾಗಿ ಹಣ ಮಾಡುವವರು, ದೇಶದ ಸಂಪತ್ತನ್ನು ಮುಕ್ತ ಆರ್ಥಿಕತೆಯ ಹೆಸರಲ್ಲಿ ಬಲಿಷ್ಠರಿಗೆ ಧಾರೆಯೆರೆದು ಕೊಡುವವರು, ಧರ್ಮದ ಹೆಸರಲ್ಲಿ ಜನರನ್ನು ವಿಭಜಿಸಿ ನೆತ್ತರು ಹರಿಸುವವರು, ಎಷ್ಟೋ ತಲೆಮಾರುಗಳಿಗೆ ಸೇರಬೇಕಾದ ಖನಿಜ ಸಂಪತ್ತನ್ನು ಲೂಟಿ ಮಾಡಿದವರು, ಇಂತಹ ಲೂಟಿಕೋರ ಲಕ್ಷ್ಮೀಪುತ್ರರ ಮಸ್ತಕದ ಮೇಲೆ ಹಸ್ತವಿಟ್ಟು ಹರಸಿದ ರಾಜಕೀಯ ತಾಯಂದಿರು, ವಂಶಪರಂಪರೆಯಿಂದ ರಾಜಕೀಯ ಅಧಿಕಾರ ಅನುಭವಿಸುತ್ತಿರುವವರು ಬಳಸುತ್ತಿದ್ದಾರೆ. ದೆಹಲಿಯಲ್ಲಿ ನಡೆದ ಈ ಡೆಮಾಕ್ರಸಿ ಉಳಿಸುವ ಧರಣಿ–ಪ್ರತಿಧರಣಿಗಳಲ್ಲಿರುವ ಈ ಮುಖಗಳನ್ನು ಗಮನಿಸುತ್ತ 'ಡೆಮಾಕ್ರಸಿ ಉಳಿಸುವ' ಪ್ರಶ್ನೆಯನ್ನು ಹೇಗೆ ಅರ್ಥೈಸಿಕೊಂಡಿರಬಹುದು? ಕಳೆದ ಲೋಕಸಭೆಯಲ್ಲಿ ಓಟು ಹಾಕಿರುವ ಹೊಸ ತಲೆಮಾರಿನ ತರುಣ–ತರುಣಿಯರು 'ಡೆಮಾಕ್ರಸಿ ಉಳಿಸಲು' ಇವರಿಬ್ಬರೂ ಮಾಡುತ್ತಿರುವ ಧರಣಿಯನ್ನು ಹೇಗೆ ಗ್ರಹಿಸಿರಬಹುದು?

ಇಡೀ ಪ್ರಹಸನಕ್ಕೆ ಕಾರಣವಾದ ಲಲಿತ್ ಮೋದಿಯು ಕ್ರಿಕೆಟ್ ಆಟವನ್ನು ವ್ಯಾಪಾರವನ್ನಾಗಿಸಿ, ಭಾರತದ ತರುಣ–ತರುಣಿಯರ ಬಿಸಿರಕ್ತಕ್ಕೆ ಅಮಲನ್ನು ಹತ್ತಿಸಿ ನಗದನ್ನಾಗಿ ಮಾಡಿಕೊಂಡು ಕೊಬ್ಬಿದವನು; ಈ ನೆಲದ ಕಾನೂನುಗಳನ್ನು ಸುಲಭವಾಗಿ ಮುರಿದು ಹಣ ಮಾಡುವುದನ್ನು ತೋರಿಸಿಕೊಟ್ಟವನು. ಹೀಗೆ ಕಾನೂನು ಮುರಿದು ದಿಢೀರ್ ಸಂಪತ್ತನ್ನು ಗಳಿಸಿದ ನೂರಾರು ವ್ಯಕ್ತಿಗಳು ಕಳೆದ ಎರಡು ದಶಕಗಳಲ್ಲಿ ಹುಟ್ಟಿಕೊಂಡಿದ್ದಾರೆ. ಹೀಗೆ ಹುಟ್ಟಿದ ಕರ್ನಾಟಕದ ಕೆಲವರು ಜೈಲನ್ನೂ ಸೇರಿದ್ದಾರೆ. ಇದು ೧೯೯೦ರ ದಶಕದಿಂದ ಭಾರತದಲ್ಲಿ ಆರಂಭವಾದ ಜಾಗತೀಕರಣ – ಉದಾರೀಕರಣಗಳ ವಿಕೃತ ಸಂತಾನ. ಪರಸ್ಪರ ಎಷ್ಟೇ ಜಗಳ ಮಾಡಿಕೊಂಡರೂ, ಆರ್ಥಿಕ ನೀತಿಗಳ ವಿಷಯದಲ್ಲಿ ಸಮಾನಮನಸ್ಕರಾಗಿರುವ ಮತ್ತು ಇಂತಹ ವಿಕೃತ ಸಂತಾನಕ್ಕೆ ಕಾರಣರಾಗಿರುವ ಭಾರತದ ಎರಡು ದೊಡ್ಡ ರಾಷ್ಟ್ರೀಯ ರಾಜಕೀಯ ಪಕ್ಷಗಳು, ತಾವೇ ಹುಟ್ಟಿಸಿದ ಒಬ್ಬ ಭ್ರಷ್ಟ ವ್ಯಕ್ತಿಯನ್ನು ನಡುವೆ ಇಟ್ಟುಕೊಂಡು, ಪ್ರಜಾಪ್ರಭುತ್ವ ಉಳಿಸಬೇಕು ಎಂದು ಪರಸ್ಪರ ಆರೋಪಿಸುತ್ತ ಗಲ್ಲಿಗಿಳಿದಿವೆ. ಈ ವಿದ್ಯಮಾನವನ್ನು ಮನೆಯಲ್ಲಿ ದುಡಿಯುವ ವ್ಯಕ್ತಿಯನ್ನು ಕಳಕೊಂಡು ಸೂತಕದಲ್ಲಿರುವ ರೈತರ ಮನೆಯವರು, ಕೈಬೆರಳು ಕಡಿದುಹೋಗಿರುವ ಮಲೆಕುಡಿಯನ ಕುಟುಂಬದವರು, ಮನೆಯಲ್ಲಿ ದನದ ಮಾಂಸವಿದೆ ಎಂಬ ಶಂಕೆಗೊಳಪಟ್ಟು ಕೊಲೆಗೊಂಡವನ ಬಂಧುಗಳು, ಗುಡಿಯೊಳಗೆ

**ಹೊಸ ತಲೆಮಾರಿನ ತರುಣರ ಜೊತೆಗೆ ಈ ಪರ್ಯಾಯ ಚಳುವಳಿಯನ್ನು ಕಟ್ಟಬೇಕೆನ್ನುವವರು, ಖರೇ ಡೆಮಾಕ್ರಸಿ ಕ್ರಿಯಾಶೀಲವಾಗಬೇಕೆಂದು ಬಯಸುವವರು, ಎಲ್ಲ ಜನಪರ ಸಿದ್ಧಾಂತ, ಚಳುವಳಿ ಮತ್ತು ಸಂಘಟನೆಗಳನ್ನು ಒಳಗೊಳ್ಳುವಂತಹ, ಒಳಗೊಂಡು ಪರಸ್ಪರ ಸಂವಾದ ಮಾಡುವಂತಹ ಹೊಸ ಚಾರಿತ್ರಿಕ ಸನ್ನಿವೇಶ ನಿರ್ಮಾಣದ ಜರೂರಿಯಿದೆ; ಹೊಸ ತಲೆಮಾರಿನ ಮನಸ್ಸುಗಳನ್ನು ಒಳಗೊಳ್ಳುವ ಮತ್ತು ಅವರೊಟ್ಟಿಗೆ ಸಂವಾದಿಸುವ ಜರೂರಿಯಿದೆ. ಇದಕ್ಕಾಗಿ ಮೊದಲು ಜೀವವಿರೋಧಿ ಸಿದ್ಧಾಂತ–ಸಂಘಟನೆಗಳ ಜೊತೆಗೆ ಅವರು ಹೋಗದಂತೆ ತಡೆಯಬೇಕಿದೆ. ಹೋಗಿರುವವರನ್ನು 'ನೀವು ನಿಮ್ಮದೇ ಜನರ ವಿರುದ್ಧವಾಗಿ ಚಿಂತಿಸುವವರ ಜೊತೆ ಸೇರಿದ್ದೀರಿ. ವಾಪಾಸ್ ಬನ್ನಿ' ಎಂದು ಮರಳಿ ಕರೆತರಬೇಕಿದೆ.**

ಹೋದ ಕಾರಣಕ್ಕಾಗಿ ಜೀವ ಕಳೆದುಕೊಂಡ ದಲಿತರು ಹೇಗೆಂದು ಅರ್ಥ ಮಾಡಿಕೊಳ್ಳಬೇಕು ?

ಇವತ್ತು ದೇಶದಲ್ಲಿ ಜನರನ್ನು ದೊಡ್ಡ ಮಟ್ಟದಲ್ಲಿ ಸಂಘಟಿಸುತ್ತ ಇರುವುದು ಇಂತಹ ತಬ್ಬಲಿಗಳ ಪರವಾಗಿರುವ ಕೂಡುಹೋರಾಟದ ಸಿದ್ಧಾಂತವಲ್ಲ; ಬದಲಿಗೆ ಧಾರ್ಮಿಕ ವಿಕಾರವಾದಗಳು, ಮಾರುಕಟ್ಟೆವಾದ ಹಾಗೂ ಜಾತಿ–ಪಂಗಡಗಳ ನೆಲೆಯ ಮೇಲೆ ನಿಂತ ಐಡೆಂಟಿಟಿ ರಾಜಕಾರಣ.

ಅ) ಈ ಹೊತ್ತು ಧರ್ಮವನ್ನು ವಿಕಾರ ರೂಪದಲ್ಲಿ ಮಂಡಿಸುತ್ತಿರುವಂತಹ ಹಿಂದುತ್ವವಾದಿಗಳು; ಧರ್ಮದ ಹೆಸರಲ್ಲಿ ಇನ್ನೊಬ್ಬರ ತಲೆ ತೆಗೆಯಲು ಹಿಂಜರಿಯದ, ಮಹಿಳೆಯರ ಹಕ್ಕುಗಳನ್ನು ದಮನಿಸುವ, ಶಾಲೆಗೆ ಹೋಗುವ ಎಳೆಯ ಮಕ್ಕಳನ್ನು ತುಪಾಕಿಯಿಂದ ಸುಡುವ, ಮುಸ್ಲಿಂ ಮೂಲಭೂತ ವಾದಿಗಳು. ಧರ್ಮದ ಹೆಸರಲ್ಲಿ ಜನರ ಮನಸ್ಸನ್ನು ನಂಜುಗೊಳಿಸುವ ಇವರು ಚಳುವಳಿ, ಧರಣಿಗಳಂತಹ ಆಯುಧಗಳನ್ನು ಸಮರ್ಥವಾಗಿ ಬಳಸಿ ಕೊಳ್ಳುತ್ತಿದ್ದಾರೆ. ಇವರ ಪ್ರಭಾವಕ್ಕೆ ಸಿಕ್ಕ ಹೊಸ ತಲೆಮಾರಿನ ಮನಸ್ಸುಗಳು, ಬೀದಿಗಳಲ್ಲಿ ಮತ್ತು ಸಾಮಾಜಿಕ ಜಾಲತಾಣಗಳಲ್ಲಿ ಅಸಹನೆ ಮತ್ತು ವಿದ್ವೇಷಗಳನ್ನು ಉಗುಳುತ್ತಿವೆ. ಧರ್ಮಗಳ ಸೀಮೋಲ್ಲಂಘನೆ ಮಾಡಿ ಒಂದು ಕೂಡು ಹೋರಾಟದಲ್ಲಿ ಇವರನ್ನು ಕಲೆಹಾಕುವ ಸವಾಲು ಎದುರಿಗಿದೆ.

ಆ) ಚಳುವಳಿಯನ್ನು ಬಳಸಿಕೊಳ್ಳುತ್ತಿರುವ ಎರಡನೆಯ ಶಕ್ತಿ ಮಾರುಕಟ್ಟೆ. ಇದು ಸಮಾಜದಲ್ಲಿ ಲಾಭಕ್ಕಾಗಿ ಏನಾದರೂ ಮಾಡಬಹುದು ಎಂಬ ಮನೋಭಾವವನ್ನು ವ್ಯಾಪಕವಾಗಿ ಹುಟ್ಟುಹಾಕಿದೆ. ಹೊಸ ತಲೆಮಾರಿನಲ್ಲಿ ಸಿಕ್ಸ್‌ಪ್ಯಾಕಿನ ದೇಹ ಮತ್ತು ಪರ್ಸನಾಲಿಟಿ ಡೆವಲಪ್‌ಮೆಂಟ್ ವಿಷಯದಲ್ಲಿ ತಲೆಕೆಡಿಸಿಕೊಂಡಿರುವವರು ಸಾಕಷ್ಟು ಜನರಿದ್ದಾರೆ. ಇದಕ್ಕೆ ಬೇಕಾದ ಕೋರ್ಸುಗಳು, ಶಾಲೆಗಳು, ಗುರುವರ್ಗ ಹುಟ್ಟಿಕೊಂಡಿವೆ. ಇವೆಲ್ಲವೂ ಹೊಸ ತಲೆಮಾರಿನ ಮುಂದೆ ತಮ್ಮನ್ನು ಸ್ಪರ್ಧಾತ್ಮಕ ಸಮಾಜದಲ್ಲಿ ಯಶಸ್ವೀ ವ್ಯಕ್ತಿಯಾಗಿ ಹೇಗೆ ಮಂಡಿಸಿಕೊಳ್ಳಬೇಕು ಎಂಬ ಗುರಿಯನ್ನು ಮುಂದಿಟ್ಟಿವೆ. ಇದರಿಂದ ತಮ್ಮ ಪರಿಸರದಲ್ಲಿ ಬದುಕುತ್ತಿರುವ ಉಳಿದವರ ಬಗ್ಗೆ ಕಿಂಚಿತ್ತೂ ಕಾಳಜಿಯಿಲ್ಲದೆ ತನ್ನ ಲಾಭ–ನಷ್ಟದ ಬಗ್ಗೆ ಮಾತ್ರ ಆಲೋಚಿಸುವ ಸ್ವಕೇಂದ್ರಿತ ಮನೋಧರ್ಮವೊಂದು ರೂಪುಗೊಳ್ಳುತ್ತಿದೆ. ಈ ಮನೋಧರ್ಮದ ತಲೆಮಾರಿನವರಲ್ಲಿ ನಮ್ಮ ಮಕ್ಕಳೂ ಇರಬಹುದು. ಇಂತಹ ಚಾರಿತ್ರಿಕ ಸನ್ನಿವೇಶದಲ್ಲಿ ಈ ತಲೆಮಾರಿನಲ್ಲಿ ದಮನಿತ ಸಮುದಾಯಗಳ ಹಿತಕ್ಕಾಗಿ ನಮ್ಮ ಸ್ವಾರ್ಥವನ್ನು ಬಿಟ್ಟುಕೊಡಬೇಕು ಎಂಬ ಪ್ರಜ್ಞೆಯನ್ನು ಮೂಡಿಸುವುದು ಹೇಗೆ, ಅವರನ್ನು ಮರಳಿ ಜನಪರ ಚಳುವಳಿಗೆ ಕರೆತರುವುದು ಹೇಗೆ ಎಂಬ ಸವಾಲಿದೆ.



ಇ) ಹೊಸ ತಲೆಮಾರಿನ ತರುಣರು ಈಗ ಜಾತಿ, ಪಂಗಡ, ಉಪ ಪಂಗಡಗಳ ಹೆಸರಲ್ಲಿ ಸಾಂಸ್ಕೃತಿಕ ಐಡೆಂಟಿಟಿ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುತ್ತಿದ್ದಾರೆ. ಸಾಂಸ್ಕೃತಿಕ ನಾಯಕರ ಜಯಂತಿಯೊ ಪುಣ್ಯತಿಥಿಯೊ ಬಂದರೆ, ಆಯಾ ಜಾತಿಗೆ ಸೇರಿದ ತರುಣ–ತರುಣಿಯರು ಜಾತಿ ಸಂಘಟನೆಯ ಹೆಸರು ಮುದ್ರಣಗೊಂಡಿರುವ ಟೀ ಶರ್ಟ್ ತೊಟ್ಟು ಓಡಾಡುವುದನ್ನು ನೋಡಬಹುದು. ತಮ್ಮ ವಾಹನಗಳ ಮೇಲೆ ತಮ್ಮ ಜಾತಿ ಸಂಘಟನೆಯ ಗುರುತುಗಳನ್ನು ಮುಜುಗರವಿಲ್ಲದೆ ಬರೆಸಿಕೊಳ್ಳುವುದನ್ನು ಅಥವಾ ಬಾವುಟ ಕಟ್ಟಿಕೊಳ್ಳುವುದನ್ನು ಗಮನಿಸಬಹುದು. ಟಿಪ್ಪು ಸುಲ್ತಾನ್, ಅಂಬೇಡ್ಕರ್, ಜಗಜೀವನರಾಂ, ವಾಲ್ಮೀಕಿ, ಭಗೀರಥ, ಶಿವಾಜಿ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ಕೈವಾರದ ತಾತಯ್ಯ, ನಾರಾಯಣಗುರು, ಬಸವಣ್ಣ ಹೀಗೆ ಹೊಸ ಚೌಕಟ್ಟುಗಳು ಅವರನ್ನು ಹಿಡಿಯಲು ಸಿದ್ಧವಾಗಿವೆ. ತಮ್ಮ ಸಾಮಾಜಿಕ ಆರ್ಥಿಕ ಶೈಕ್ಷಣಿಕ ಹಿಂದುಳಿಯುವಿಕೆ, ಒಂದೆಡೆ ಸೇರಿ ಚರ್ಚೆ ಮಾಡದ ಮುಸ್ಲಿಮರಂತೂ, ಪೈಗಂಬರ್ ಅವರಿಗೆ ಅಪಮಾನ ಮಾಡುವ ಘಟನೆ ಜರುಗಿದಾಗ ಮಾತ್ರ ಆಕ್ರೋಶಗೊಂಡು ಧರ್ಮರಕ್ಷಣೆಯ ನಾಯಕತ್ವ ವಹಿಸಿಕೊಂಡ ಮೌಲ್ವಿಗಳ ಹಿಂದೆ ಬೀದಿಗಿಳಿಯುವುದನ್ನು ಗಮನಿಸಬಹುದು. ಒಂದು ಕಾಲಕ್ಕೆ 'ದಲಿತ' ಎನ್ನುವುದು ಎಲ್ಲ ಅಸ್ಪೃಶ್ಯರನ್ನು ಒಳಗೊಳ್ಳುವ ಸಾಂಸ್ಕೃತಿಕ ರಾಜಕೀಯ ಪರಿಕಲ್ಪನೆಯಾಗಿತ್ತು. ಈಗ ದಲಿತರಲ್ಲೇ ಅಂಬೇಡ್ಕರ್ ಮತ್ತು ಜಗಜೀವನರಾಂ ಜಯಂತಿಗಳು, ಟೀ ಶರ್ಟ್–ಬ್ಯಾನರ್–ಧ್ವಜಗಳು ಪ್ರತ್ಯೇಕವಾಗಿ ಸೃಷ್ಟಿಯಾಗುತ್ತಿವೆ. ದಲಿತರಲ್ಲಿ ಎಡ–ಬಲದ ವಿಭಜನೆಯು, ಹಾಸ್ಟೆಲುಗಳಲ್ಲಿ ವಿದ್ಯಾರ್ಥಿಗಳು ಪ್ರತ್ಯೇಕವಾಗಿ ಗುಂಪುಗೂಡಿ ತಿರುಗಾಡುವಂತಾಗಿದೆ. ದಲಿತ ಸಾಹಿತ್ಯವನ್ನು ಮೆಚ್ಚಿಕೊಳ್ಳುವಾಗ ಇಲ್ಲವೇ ವಿಮರ್ಶಿಸುವಾಗಲೂ ಈ ಪಂಗಡ ಪ್ರಜ್ಞೆ ಕೆಲಸ ಮಾಡುವಂತಹ ಸನ್ನಿವೇಶವಿದೆ. ಭಾರತದ ತುಳಿತಕ್ಕೆ ಒಳಗಾದವರು ಸಮಾನ ಆಶಯಗಳಿಗಾಗಿ ಸಮಾನ ಎದುರಾಳಿಯ ವಿರುದ್ಧ ಒಟ್ಟಾಗಲು ಸಾಧ್ಯವಾಗದಂತಹ ಛಿದ್ರ ಸ್ಥಿತಿಯಿದು.

೨೦ನೇ ಶತಮಾನದ ಮೊದಲಾರ್ಧದಲ್ಲಿ ಬೇರೆಬೇರೆ ಸಂದರ್ಭಗಳಲ್ಲಿ ಹಿಂದುಳಿದ ಮತ್ತು ಅಲ್ಪಸಂಖ್ಯಾತ ಸಮುದಾಯಗಳು ಆಧುನಿಕ ಶಿಕ್ಷಣ ಪಡೆಯಲು, ಸರ್ಕಾರಿ ನೌಕರಿ ಗಳಿಸಲು, ತಮ್ಮ ಸಾಮಾಜಿಕ ಮತ್ತು ಆರ್ಥಿಕ ಮೇಲ್ಚಲನೆಗಾಗಿ ಸಾಂಸ್ಕೃತಿಕ ಗುರುತುಗಳ ಅಡಿಯಲ್ಲಿ ಸಂಘಟಿತಗೊಂಡವು. ಇದಕ್ಕೆ ಸಾಕ್ಷಿ ಜಾತಿವಾರು ಹಾಸ್ಟೆಲುಗಳು ಶಾಲೆಗಳು ಪಟ್ಟಣ, ನಗರಗಳಲ್ಲಿ ಆರಂಭವಾಗಿದ್ದು. ಇವು ಚಾರಿತ್ರಿಕವಾಗಿ ಆಯಾ ಜಾತಿ–ಉಪಜಾತಿಗಳ ಬಡವರ ಸಾಮಾಜಿಕ ಆರ್ಥಿಕ ಚೇತರಿಕೆಗೆ ಕಾರಣವಾಗಿದ್ದನ್ನು ಮರೆಯುವಂತಿಲ್ಲ. ಆದರೆ ಈಗ ಈ ಜಾತಿ–ಉಪಜಾತಿ–ಪಂಗಡದ ಗುರುತುಗಳು, ಬೇರೆ ಸಮುದಾಯಗಳು ಅಥವಾ ಎಲ್ಲ ಸಮುದಾಯಗಳಲ್ಲಿರುವ ಶ್ರಮಿಕ ವರ್ಗಗಳು ಬೆರೆಯದಂತೆ ನಿರ್ಬಂಧಿಸುವ ಗೋಡೆಗಳಾಗಿ ರೂಪಾಂತರವಾಗುತ್ತಿವೆ. ಸಮುದಾಯಗಳು ವರ್ಗಗಳಾಗಿ ರೂಪಾಂತರಗೊಳ್ಳುವ ಬದಲು, ವರ್ಗಗಳೇ ಸಮುದಾಯ ಐಡೆಂಟಿಟಿಯ ರಾಜಕಾರಣದತ್ತ ಸರಿಯುತ್ತಿವೆ. ಇದರಿಂದ ಜಾತಿ–ಉಪಜಾತಿ ಗುರುತುಗಳ ಒಳಗೆ ಸಿಲುಕಿಕೊಂಡು ತರುಣ ಚೈತನ್ಯದ ನದಿಗಳು ಕೂಡುವುದಕ್ಕೆ ಸಾಧ್ಯವಾಗುತ್ತಿಲ್ಲ. ಈ ಬಿಕ್ಕಟ್ಟನ್ನು ಹೇಗೆ ಬಿಡಿಸುವುದು ಎಂಬ ಸವಾಲು ಎದುರು ನಿಂತಿದೆ.

ಹೀಗೆ ಮತೀಯವಾದ–ಮೂಲಭೂತವಾದಗಳ ಪ್ರವರ್ತಕರು, ಮಾರುಕಟ್ಟೆ ಶಕ್ತಿಗಳು, ಅಸ್ಮಿತೆ ರಾಜಕಾರಣದವರು, ಮಧ್ಯಮ ವರ್ಗದ ಸಂಸ್ಕೃತಿಹೀನತೆಯ ಸಂಕೇತವಾಗಿರುವ ನಗೆಹಬ್ಬಗಳಲ್ಲಿ ನಗಿಸುವವರು, ಹೆಚ್ಚು ಯುವಕ–ಯುವತಿಯರನ್ನು ಸೆಳೆಯುತ್ತಿದ್ದಾರೆ. ದಮನಿತ ಜನರಿಗಾಗಿ ಕೆಲಸ ಮಾಡುವ

ಚಳುವಳಿಗಳು ಇಷ್ಟು ಪ್ರಮಾಣದಲ್ಲಿ ಹೊಸ ತಲೆಮಾರಿನವರನ್ನು ಸೆಳೆಯಲು ಸಾಧ್ಯವಾಗುತ್ತಿಲ್ಲ. ಇದು ಯಾರ ಸೋಲು ಯಾರು ಗೆಲುವು ? ೮೦ರ ದಶಕದಲ್ಲಿ, ನನ್ನ ವಾರಿಗೆಯವರ ಎದುರು ಹಲವಾರು ಜನಪರ ಚಳುವಳಿಗಳು ತೆರೆದುಕೊಂಡಿದ್ದವು. ನಾವು ಅಂಚಿನಲ್ಲಿ ನಿಂತಾದರೂ ಅವುಗಳೊಂದಿಗೆ ನಮ್ಮನ್ನು ಜೋಡಿಸಿಕೊಂಡೆವು. ಈಗ ಹೊಸ ತಲೆಮಾರಿನ ಮುಂದೆ ಅಂತಹ ಯಾವ ಚಳುವಳಿಗಳಿವೆ ? ಇದು ಹೊಸ ತಲೆಮಾರಿನವರ ತಪ್ಪೊ , ಮಾರುಕಟ್ಟೆ ಎಕಾನಮಿ ಪ್ರಾಬಲ್ಯದ ಗೆಲುವೊ ಅಥವಾ ಅವರೊಂದಿಗೆ ಸಂವಾದ ಮಾಡದಿರುವ ಅವರನ್ನು ಒಳಗುಮಾಡಿಕೊಳ್ಳದಿರುವ ಜನಪರ ಚಳುವಳಿಗಳ ಸೋಲೋ ?

ವ್ಯಂಗ್ಯವೆಂದರೆ, ಸಮಾಜವನ್ನು ಧರ್ಮ-ಜಾತಿಗಳ ಹೆಸರಲ್ಲಿ ಛಿದ್ರ ಮಾಡುವವರಲ್ಲಿ, ದೇಶವನ್ನು ಮುಕ್ತ ಆರ್ಥಿಕತೆಯ ಹೆಸರಲ್ಲಿ ಕಾರ್ಪೊರೇಟ್ ವಲಯದ ಲೂಟಿಗೆ ತೆರೆಯುವವರಲ್ಲಿ ಒಗ್ಗಟ್ಟಿದೆ; ದೇಶವನ್ನು ಕಷ್ಟಗಳಿಂದ ಬಿಡುಗಡೆ ಮಾಡಬೇಕು, ಎಲ್ಲರೂ ಘನತೆಯಿಂದ, ನೆಮ್ಮದಿಯಿಂದ ಬದುಕುವ ಸಮಾಜ ನಿರ್ಮಾಣವಾಗಬೇಕು ಎಂಬ ಕನಸು ಕಾಣುವವರಲ್ಲಿ ಪರಸ್ಪರ ಭಿನ್ನಮತ ಮತ್ತು ಶಂಕೆಗಳು ಹೆಚ್ಚಾಗಿವೆ. ನಾವು ಎಡಪಂಥೀಯ ಸಂಘಟನೆಗಳ ಆಶಯ ಮತ್ತು ಪ್ರಾಮಾಣಿಕತೆಗಳ ಬಗ್ಗೆ ಸಿನಿಕ ಶಂಕೆ ತೋರಬೇಕಾಗಿಲ್ಲ. ಆದರೆ ಅವುಗಳ ವಿಧಾನದ ಬಗ್ಗೆ ಪ್ರಶ್ನೆ ಎತ್ತಬೇಕಾಗಿದೆ. ಅವೆಲ್ಲವೂ ನಿಂತ ನೀರಾಗಿರುವುದಕ್ಕೆ ಕಾರಣವೇನೆಂದು ಆಲೋಚಿಸಬೇಕಿದೆ. ಜನಪರ ಸಂಗಾತಿಗಳ ಸಂಖ್ಯೆ ಕಡಿಮೆಯಾಗಿ ಸಾಂಕೇತಿಕವಾಗಿ ಉಳಿದಿರುವ ಚಳುವಳಿಗಳಲ್ಲಿ ನಾವು ತೊಡಗಿಕೊಂಡಿದ್ದೇವೆಯೇ ? ನಿಜವಾದ ಬದಲಾವಣೆಯನ್ನು ಸಮಾನ ಸಮಾಜದ ವಿರೋಧಿಗಳು, ಪ್ರತಿಗಾಮಿಗಳು ಕೈಗೆತ್ತಿಕೊಂಡಿದ್ದಾರೆಯೇ ?

ಈ ಬಿಕ್ಕಟ್ಟಿನ ಹಿನ್ನೆಲೆಯಲ್ಲಿ, ಹೊಸ ತಲೆಮಾರಿನ ತರುಣರ ಜೊತೆಗೆ ಈ ಪರ್ಯಾಯ ಚಳುವಳಿಯನ್ನು ಕಟ್ಟಬೇಕೆನ್ನುವವರು, ಖರೇ ಡೆಮಾಕ್ರಸಿ ಕ್ರಿಯಾಶೀಲವಾಗಬೇಕೆಂದು ಬಯಸುವವರು, ಎಲ್ಲ ಜನಪರ ಸಿದ್ಧಾಂತ, ಚಳುವಳಿ ಮತ್ತು ಸಂಘಟನೆಗಳನ್ನು ಒಳಗೊಳ್ಳುವಂತಹ, ಒಳಗೊಂಡು ಪರಸ್ಪರ ಸಂವಾದ ಮಾಡುವಂತಹ ಹೊಸ ಚಾರಿತ್ರಿಕ ಸನ್ನಿವೇಶ ನಿರ್ಮಾಣದ ಜರೂರಿಯಿದೆ; ಹೊಸ ತಲೆಮಾರಿನ ಮನಸ್ಸುಗಳನ್ನು ಒಳಗೊಳ್ಳುವ ಮತ್ತು ಅವರೊಟ್ಟಿಗೆ ಸಂವಾದಿಸುವ ಜರೂರಿಯಿದೆ. ಇದಕ್ಕಾಗಿ ಮೊದಲು ಜೀವವಿರೋಧಿ ಸಿದ್ಧಾಂತ-ಸಂಘಟನೆಗಳ ಜೊತೆಗೆ ಅವರು ಹೋಗದಂತೆ ತಡೆಯಬೇಕಿದೆ. ಹೋಗಿರುವವರನ್ನು 'ನೀವು ನಿಮ್ಮದೇ ಜನರ ವಿರುದ್ಧವಾಗಿ ಚಿಂತಿಸುವವರ ಜೊತೆ ಸೇರಿದ್ದೀರಿ. ವಾಪಾಸ್ ಬನ್ನಿ' ಎಂದು ಮರಳಿ ಕರೆತರಬೇಕಿದೆ.

ಈಚೆಗೆ ದಾವಣಗೆರೆಯಲ್ಲಿ ನಡೆದ ಸಮಾನತೆಯ ಸಮಾಜಕ್ಕಾಗಿ ಒಟ್ಟುಗೂಡಿದ ಸಮಾನಮನಸ್ಕರ ಸಮಾವೇಶದ ಕರಪತ್ರದಲ್ಲಿ 'ಅನುಮಾನಗಳನ್ನು ಬದಿಗಿಟ್ಟು , ಗಾಯಗಳನ್ನು ಮರೆತು' ಎಂಬ ವಾಕ್ಯವಿದೆ. ಇದರ ಉಲ್ಲೇಖದಲ್ಲಿ ಎರಡು ಸಂಗತಿಗಳನ್ನು ಹೇಳಬೇಕು. ಮೊದಲನೆಯದಾಗಿ, ಐಟಿ-ಬಿಟಿಯವರ ಬಗ್ಗೆ ಕೆಲವು ಸಂಗಾತಿಗಳಲ್ಲಿ ಮತ್ತು ಜನಪರ ಚಳುವಳಿಗಳಲ್ಲಿರುವ ವಿಚಿತ್ರವಾದ ಪೂರ್ವಗ್ರಹ. ಅದೊಂದು ಲಕ್ಷಾಂತರ ಜನರಿಗೆ ಉದ್ಯೋಗ ಕೊಟ್ಟಿರುವ ಹೊಸ ಕ್ಷೇತ್ರವಾಗಿದ್ದು, ಸಹಜವಾಗಿಯೇ ಅಲ್ಲಿ ಆಧುನಿಕ ಶಿಕ್ಷಣ ಪಡೆಯುವುದರಲ್ಲಿ ಮುಂಚೂಣಿಯಲ್ಲಿರುವ ಮೇಲ್ಜಾತಿಯ ತರುಣ-ತರುಣಿಯರು ಹೆಚ್ಚಾಗಿದ್ದಾರೆ. ಆದರೆ ಕೆಳಜಾತಿಯ ಹಿಂದುಳಿದ ವರ್ಗಗಳ, ದಲಿತರ ಹಾಗೂ ಮಧ್ಯಮ ವರ್ಗದ ಕುಟುಂಬಗಳಿಂದ ಹೋಗಿರುವವರೂ ಅಲ್ಲಿ ಸಾಕಷ್ಟಿದ್ದಾರೆ. ಇವರೆಲ್ಲರೂ ಕೂಡ ಕಾರ್ಪೊರೇಟ್ ವ್ಯವಸ್ಥೆಯಲ್ಲಿ ಸಂತೋಷವಾಗೇನಿಲ್ಲ. ಆ ವ್ಯವಸ್ಥೆ ಅವರನ್ನು ಹಿಂಡಿ ಹಿಪ್ಪೆ ಮಾಡಿ ಅಕಾಲಿಕ ವೃದ್ಧಾಪ್ಯಕ್ಕೆ ದೂಡಿದೆ. ಈ ಹೊಸ ಕ್ಷೇತ್ರದಲ್ಲಿರುವ ಉದ್ಯೋಗಿಗಳಲ್ಲಿ ಜಾಗತೀಕರಣದ ಪರವಾಗಿರುವ, ಎಡಚಳುವಳಿ ಹಾಗೂ ಮೀಸಲಾತಿಗಳನ್ನು ವಿರೋಧಿಸುವ ಜನ ಸಾಕಷ್ಟಿದ್ದಾರೆ. ಆದರೆ ಹಾಗಲ್ಲದ ರೀತಿಯಲ್ಲಿ ಆಲೋಚಿಸುವ ಸಾವಿರಾರು ಮನಸ್ಸುಗಳೂ ಅಲ್ಲಿವೆ. ಅಂತಹ ಮನಸ್ಸುಗಳನ್ನು ಈಚೆಗೆ ದೊಡ್ಡ ರಾಜಕೀಯ ಗೆಲುವನ್ನು ಪಡೆದ ಆಮ್ ಆದ್ಮಿ ಪಕ್ಷ ಸೆಳೆದಿದೆ. ಸಮಾನ ಸಮಾಜ ಕಟ್ಟಬಯಸುವ ಯಾವುದೇ ಹೊಸ ಚಳುವಳಿಯು, ಈ ಕ್ಷೇತ್ರದಲ್ಲಿರುವ ಹೊಸತಲೆಮಾರನ್ನು ಸಹ ಒಳಗೊಳ್ಳ ಬೇಕಿದೆ. ಯಾವುದೇ ಮತೀಯವಾದ ಅಜೆಂಡಾ ಇಲ್ಲದೆ ನಮಗೆಲ್ಲ ಒಳ್ಳೆಯ ಬದುಕು ಬರಬಹುದು, ಅಚ್ಛೇ ದಿನ್ ಬರ ಬಹುದು ಎಂದು ಓಟು ಹಾಕಿರುವ ಹೊಸ ತಲೆಮಾರಿನವರಿನ ಬಹಳ ಜನರಿಗೆ ಭ್ರಮನಿರಸನವಾಗುತ್ತಿದೆ. ವಿಲಾಯತ್ತಿನ ಬ್ಯಾಂಕುಗಳಲ್ಲಿರುವ ಕಪ್ಪುಹಣವನ್ನು ತಂದು ಪ್ರತಿಯೊಬ್ಬರ ಖಾತೆಯಲ್ಲಿ ೧೫ ಲಕ್ಷ ಹಾಕುವ ಭರವಸೆ ತಟವಟವೆಂದು ಅರಿವಾಗುತ್ತಿದೆ. ಮೋಸಹೋದ ಭಾವದಲ್ಲಿರುವ ಈ ತಲೆಮಾರಿನಲ್ಲಿ ಒಂದು ಬಗೆಯ ತಳಮಳ, ಅನ್‌ರೆಸ್ಟ್ ಇದೆ. ಎರಡನೆಯದಾಗಿ, ಕರ್ನಾಟಕದ ಜನಪರ ಚಳುವಳಿಗಳಲ್ಲಿ ಮೇಲ್ಜಾತಿಯಿಂದ ಬಂದಿರುವ ಆರೋಗ್ಯವಂತ ಮನಸ್ಸಿನ ಸಾವಿರಾರು ಜನ ಚಿಂತಕರು, ಕಾರ್ಯಕರ್ತರು ಹಿಂದಿನಿಂದಲೂ ತೊಡಗಿಕೊಂಡಿದ್ದಾರೆ. ಆದರೆ ಅವರ ಬದ್ಧತೆಯ ಬಗ್ಗೆ ಬೆನ್ನಹಿಂದೆ ಒಂದು ತರಹ ಗುಮಾನಿ ವ್ಯಕ್ತಪಡಿಸುವ ಗೆಳೆಯರುಂಟು. ಹಿಂದುತ್ವವು ಭಾರತದ ಎಲ್ಲ ಜಾತಿ ಮತ್ತು ಎಲ್ಲ ಧರ್ಮಗಳ ಜನರನ್ನು, ಕೊನೆಗೆ ಎಡಪಂಥೀಯ ರಾಗಿದ್ದವರಲ್ಲಿ ಸಹ ಕೆಲವರನ್ನು ಸೆಳೆದು, ಒಳಗೊಂಡು ಅವರನ್ನು ತನ್ನ ಹತ್ಯಾರವನ್ನಾಗಿ ಮಾಡಿಕೊಂಡಿದೆ. ಆದರೆ ನಾವು ಜನಪರ ಚಳುವಳಿಗಳಿಗೆ ಮಿಡಿಯಬಲ್ಲ ಮನಸ್ಸುಗಳನ್ನು ಅವರ ಸಾಮಾಜಿಕ ಹಿನ್ನೆಲೆಯಿಂದ ಶಂಕಿಸುತ್ತ ದೂರೀಕರಿಸುತ್ತ ಇದ್ದೇವೆ. ಒಟ್ಟಿಗೆ ಬರುವ ಎಲ್ಲರನ್ನು ಮಾತ್ರವಲ್ಲ, ಭಿನ್ನಮತವಿದ್ದವರನ್ನೂ ಒಳಗೊಳ್ಳುವ ಮತ್ತು ಸಂವಾದ ಮಾಡುವ ಕೆಲಸವನ್ನು ನಾವು ಮಾಡಬೇಕಿದೆ. ಸಮಾನತೆಯ ಸಮಾಜ ಕಟ್ಟುವ ಕನಸುಳ್ಳ ಎಲ್ಲರ ಜೊತೆ ಸಂವಾದಿಸಬೇಕಿದೆ.

ಸಾಮಾನ್ಯವಾಗಿ ಬೇರೆಬೇರೆ ಸಿದ್ಧಾಂತಗಳ ಮತ್ತು ಸಂಘಟನೆಗಳ ಹಿನ್ನೆಲೆಯಿಂದ ಬಂದಿರುವ ನಾವು ಕರ್ನಾಟಕದಲ್ಲಿ ನಡೆಯುವ ಸಮಾನಮನಸ್ಕ ಕಾರ್ಯಕ್ರಮ ಗಳಲ್ಲಿ ಭಾವುಕವಾಗಿ ಒಗ್ಗೂಡುತ್ತೇವೆ. ಅನೇಕ ಸಲ ಈ ಒಗ್ಗೂಡುವಿಕೆಯ ಹಿಂದೆ ಸಮಾನ ಆಶಯಗಳಿಗಿಂತ ಹೆಚ್ಚಾಗಿ ನಮ್ಮ ಎದುರಾಳಿಗಳು ಪಡೆದಿರುವ ಸೈದ್ಧಾಂತಿಕ ಸಂಘಟನಾತ್ಮಕ ರಾಜಕೀಯ ಯಶಸ್ಸಿನಿಂದ ಹುಟ್ಟಿದ ಆತಂಕವೇ ಇರುತ್ತದೆ. ಹೇಗೂ ಇರಲಿ, ಒಗ್ಗೂಡುವುದು ಮಹತ್ವದ ಕೆಲಸ. ಅದಕ್ಕಿಂತ ಮಹತ್ವದ್ದು ಒಗ್ಗೂಡಿದವರು ಹೊಸ ಹಾದಿ ನಿರ್ಮಿಸಿ ನಡೆಯುವುದು; ನಡೆದು ಗುರಿ ಮುಟ್ಟುವುದು. ಆದರೆ ಹೆಚ್ಚಿನ ಪ್ರಸಂಗಗಳಲ್ಲಿ ಸಮಾನಮನಸ್ಕ ಕಾರ್ಯಕ್ರಮಗಳಲ್ಲಿ ಒಗ್ಗೂಡಿದವರು ಮತ್ತೆ ತಮ್ಮ ತಮ್ಮ ಗೂಡುಗಳಿಗೆ ಹೋಗಿ ಸೇರಿಬಿಡುತ್ತಿದ್ದಾರೆ. ಎಲ್ಲರೂ ತಮ್ಮ ಸಿದ್ಧಾಂತಗಳನ್ನು ವಿಸರ್ಜಿಸಬೇಕು ಅಥವಾ ಅವೆಲ್ಲವನ್ನು ಒಗ್ಗೂಡಿಸಬೇಕು ಎಂಬುದು ಇದರರ್ಥವಲ್ಲ. ವಿಭಿನ್ನ ಸೈದ್ಧಾಂತಿಕ ರಾಜಕೀಯ ಹಿನ್ನೆಲೆಯುಳ್ಳವರು, ಸಮಾನ ಆಶಯಗಳಿಗೆ ಸಮಾನ ಕಾರ್ಯಕ್ರಮಗಳ ಅಡಿಯಲ್ಲಿ ಒಗ್ಗೂಡುವುದು ಮತ್ತು ನಡೆಯುವುದು ಮುಖ್ಯವೆಂದು ಇದರರ್ಥ. ಧಾರವಾಡದಲ್ಲಿ ಸಮಾನ ಶಿಕ್ಷಣ ಮತ್ತು ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುವ ಹಕ್ಕಿನ ಸಮಾವೇಶವನ್ನು ಬೇರೆಬೇರೆ ಸಿದ್ಧಾಂತಗಳ ಹಿನ್ನೆಲೆಯಿಂದ ಬಂದವರೆಲ್ಲರೂ ಸಮಾನ ಆಶಯದಡಿ ಸೇರಿ ಮಾಡಿದೆವು. ಅದೊಂದು ಚಾರಿತ್ರಿಕ, ಮಹತ್ವದ ಅಭೂತಪೂರ್ವ ಯಶಸ್ಸಿನ ಸಮಾವೇಶ. ಆದರೆ ನಂತರ ಅದನ್ನು ಚಳುವಳಿಯಾಗಿ ಬೆಳೆಸಲು ನಮಗೆ ಸಾಧ್ಯವಾಗಲಿಲ್ಲ. ನನಗೆ ನೆನಪಿದೆ, ಒಂದು ಕಾಲಕ್ಕೆ ಬಾಬಾಬುಡನ್ ಗಿರಿಯಲ್ಲಿ ಕೋಮುವಾದ ಮುಕ್ತ ಕರ್ನಾಟಕ ಕಟ್ಟುವ ಕನಸುಳ್ಳ ನೂರಾರು ಲೇಖಕರು, ಚಿಂತಕರು, ಕಾರ್ಯಕರ್ತರು ನೆರೆದಿದ್ದರು. ಸೆರೆಮನೆಯನ್ನೂ ಸೇರಿದ್ದರು. ಅದೊಂದು ಅಪೂರ್ವಗಳಿಗೆ. ಆದರೆ ಅದು ಚಳುವಳಿಯಾಗಿ ರೂಪುಗೊಂಡಾಗ, ಅಲ್ಲಿ ಸೇರಿದ್ದ ಅನೇಕ ಸಂಗಾತಿಗಳು ಹೊರಗುಳಿದರು. ಕರ್ನಾಟಕದಲ್ಲಿ ಜೀವಪರವಾಗಿ ಆಲೋಚಿಸುವ ಚಿಂತಕರು ಚಳುವಳಿಗಳು ಸಂಘಟನೆಗಳು ಹಲವಾರು ಸಂದರ್ಭಗಳಲ್ಲಿ ಒಂದೇ

**ಆಸರೆ**



ಮಗಳು ಹುಟ್ಟಿದಳೆಂದು
ವೇದನೆ ಪಟ್ಟ ಅಪ್ಪನ
ದುಃಖ ಕರಗಿಹೋಯಿತು
ಮಗನು ಕೈಬಿಟ್ಟಾಗ
ಮಗಳು ಕೈಹಿಡಿದು
ಕಣ್ಣೀರಿಟ್ಟಾಗ

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು - ೫೬೦ ೦೯೪

ವೇದಿಕೆಯಲ್ಲಿ ಒಗ್ಗೂಡಲು ಸಾಧ್ಯವಾಗುತ್ತಿದೆ. ಆದರೆ ಒಟ್ಟಾಗಿ ಮುಂದೆ ಹೋಗಲು ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ಎಲ್ಲ ಸಂಘಟನೆಗಳು, ಜನಪರ ಸಿದ್ಧಾಂತಗಳು, ಚಿಂತಕರು ಸೇರಿ ಹೊಸ ತಲೆಮಾರಿನ ಜೊತೆಗೆ, ಬೇರೆಬೇರೆ ಸಂಕುಚಿತ ಗೋಡೆ ಮತ್ತು ಬೇಲಿಗಳ ನಡುವೆ ಸಿಲುಕಿಕೊಂಡಿರುವ ಹೊಸ ತಲೆಮಾರನ್ನು ಮುಟ್ಟಲು, ಅವರ ಜೊತೆ ಸಂವಾದ ಮಾಡಲು ಹೊಸ ಭಾಷೆಯನ್ನು ಕಂಡುಕೊಳ್ಳುವುದು ಅಂದರೆ, ಹೊಸ ಚಳುವಳಿ, ಹೊಸ ಕನಸು, ಹೊಸ ತಾತ್ವಿಕತೆಗೆ ಮರುಹುಟ್ಟು ನೀಡುವುದು ಸಾಧ್ಯವೇ? ಮೂಲಭೂತವಾದ–ಮತೀಯವಾದಗಳು, ನಾವು ಉಣ್ಣುವ ಊಟದ ತಟ್ಟೆ, ನೋಡುವ ಸಿನಿಮಾ, ಬರೆಯುವ ಬರೆಹ, ಓದುವ ಪುಸ್ತಕ, ಪ್ರೇಮಿಸಿ ಮದುವೆಯಾಗುವ ಖಾಸಗಿತನ, ಎರಡು ಧರ್ಮಕ್ಕೆ ಸೇರಿದವರು ಬಸ್ಸಿನಲ್ಲೊ ಹೋಟೆಲಿನಲ್ಲೊ ಜತೆಗೆ ಕುಳಿತುಕೊಳ್ಳುವುದನ್ನೂ ತಪಾಸಣೆ ಮಾಡುವಷ್ಟು ಸಾಂಸ್ಕೃತಿಕ ತುರ್ತುಪರಿಸ್ಥಿತಿ ಹೇರುತ್ತಿರುವಾಗಲೂ, ಇದು ಸಾಧ್ಯವಾಗದೆ ಹೋದರೆ ಮತ್ತೆಂದು ಸಾಧ್ಯವಾಗಬೇಕು? ದೋಷ, ೯೦ರ ದಶಕದ ಬಳಿಕ ಮಾರುಕಟ್ಟೆ ಯುಗದಲ್ಲಿ ಹುಟ್ಟಿದ ಹೊಸ ತಲೆಮಾರಿನಲ್ಲಿಲ್ಲ, ಅದರ ಜತೆ ಸಂವಾದ ಏರ್ಪಡಿಸಿಕೊಳ್ಳದೇ ಹೋಗಿರುವ ಜೀವಪರ ಚಿಂತನೆ ಮತ್ತು ಚಳುವಳಿಗಳಲ್ಲಿದೆ. ಡೆಮಾಕ್ರಸಿ ಉಳಿಸುವುದು ಎಂದರೆ, ರಾಜಕೀಯ ಪಕ್ಷಗಳು ಭಾವಿಸಿದಂತೆ ಪಾರ್ಲಿಮೆಂಟಿನ ಕಲಾಪವನ್ನು ಸುಗಮವಾಗಿ ನಡೆಸುವುದು ಅಥವಾ ನಡೆಸದೇ ಇರುವುದಲ್ಲ. ಬೀದಿಗೆ ಬಿದ್ದಿರುವ ರೈತರು, ತಬ್ಬಲಿಗಳಾಗಿರುವ ಬುಡಕಟ್ಟು ಜನರು, ಹಾಸುಂಡು ಬೀಸಿ ಒಗೆಯಲ್ಪಡುತ್ತಿರುವ ಮಹಿಳೆಯರು, ತಮ್ಮಿಷ್ಟದ ಆಹಾರ ಸೇವಿಸಿದರೆ ಅಥವಾ ಗುಡಿ ಪ್ರವೇಶಿಸಿದರೆ ಬಡಿಸಿಕೊಂಡು ಸಾಯುವ ಭಯದಲ್ಲಿರುವವರು, ಪ್ರಾಯ ಕಳೆಯುತ್ತಿದ್ದರೂ ನೌಕರಿ ಸಿಗದ ಯುವಕ–ಯುವತಿಯರು, ನೆಮ್ಮದಿಯಿಂದ ಬಾಳಬಲ್ಲ ಸಮಾಜವೊಂದು ರೂಪುಗೊಳ್ಳುವುದು. ಭಾರತ ರೂಢಿಸಿಕೊಂಡಿರುವ ಪ್ರಜಾಪ್ರಭುತ್ವವೇ ಈ ಪ್ರಜೆಗಳ ಮೇಲೆ ಭಾರವಾಗಿ ಬಿಟ್ಟಿರುವಾಗ, ನಿಜವಾದ ಡೆಮಾಕ್ರಸಿಯ ಮಾನವೀಯ ವ್ಯಾಖ್ಯೆಯನ್ನು ಕೊಡುವ ಮತ್ತು ಜನರ ಬದುಕನ್ನು ಹಸನಾಗಿಸುವ ಉಪಕರಣವಾಗಿಸುವ ಹೊಣೆಗಾರಿಕೆ, ಭಾರತದಲ್ಲಿ ಇನ್ನೂ ಅರೆಮುಗಿದ ಕಾರ್ಯವಾಗಿದೆ.

**ರಹಮತ್ ತರೀಕೆರೆ**
ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ, ಬಳ್ಳಾರಿ – ೫೮೩ ೨೦೧

**ಕಾವ್ಯಲೋಕ**



## ಚರಗ ಚೆಲ್ಲುವ ಕಾಲ

**ಚರಗ ೧**

ನೆತ್ತರು ಕುಡಿವ ನೆಲ ಬಿಸಿಲ ಹಡೆಯುವ ಮುಗಿಲು
ಬಿರುಕು ಬಿಟ್ಟ ತತ್ರಾಣಿಯ ಹರಿದ ಬಟ್ಟೆ ಹಸಿದ ಕಣ್ಣುಗಳಲಿ
ಭಾರತದ ನಕಾಶೆ ಅಚ್ಚಾಗುತಿದೆ

ಕಳೆತೆಗೆಯುವ ಕುರ್ಚಿಗೆಗಾದ ಕೀವುಗಾಯದ ನೋವು
ಕುರ್ಚಿ ಮೇಲಿನ ಹೃದಯವಿಕಲರಿಗೆ ರವಾನೆಯಾಗುತ್ತಿಲ್ಲ
ಗುಳೆ ಹೊರಟ ಕಣ್ಣೀರಿಗೂ ತಾಯ್ಗಂಡರು
ಫ್ಯಾಶನ್, ಅಫೇರ್‌ಗಳ ಮುದ್ರೆ ಒತ್ತುತ್ತಾರೆ

ಎರೆಹೊಲದ ತುಂಬಾ ನೋವನ್ನೇ ಹೊದ್ದು ಮಲಗಿದ
ನೇಗಿಲಿನ ಹೆಣಕ್ಕೆ ಎದೆಗೆ ಬಿದ್ದ ಗುಂಡೊಂದು
ಸಾಕ್ಷಿ ಉಲಿಯುತಿದೆ

ಅನ್ನದ ಅಗಳಲಿ ಬಿಲ ಕೊರೆದ
ಹೆಗ್ಗಣಗಳು ಜೈಲು ಪಾಲಾದವು
ಲೋಕದ ಹಾದರಕ್ಕೆ ಮುಗಿಲೆತ್ತರದ ಸೌದೆಗಳೇ
ಪ್ರಮಾಣ ಪತ್ರ ದಯಪಾಲಿಸುತಿವೆ
ಮಹಾದಾಯಿಯ ಮಡಿಲಿಗೂ ಬಣ್ಣ ಬಳಿಯುವ
ಬಿಳಿಯಂಗಿಯ ರಾಕ್ಷಸರ ನಡುವೆ
ತುತ್ತು ನೀಡುವ ಕೈಗಳು ಹರಿದ ಜೋಳಿಗೆಯಲಿ
ಕನಸುಗಳ ಕಲೆ ಹಾಕುತಿವೆ ಸೋರುವ ಜೋಳಿಗೆಯಿಂದ
ಇಣುಕಿ ಬಂದ ನಕ್ಷತ್ರವೊಂದು ಕೀಲಿಮಣೆಯ ಮೇಲೆ
ಜಗದ ಚರಿತ್ರೆ ಬರೆಯುತಿದೆ.

**ಚರಗ ೨**

ಈ ದಿನ ಕಾಲ ಗರ್ಭದ ದೀಪ ಮತ ಧರ್ಮಗಳ
ಪಣತಿಯಲಿ ಕಣ್ಣೀರ ಹನಿಯುತ್ತಿದೆ
ಹಾಡು ಬೆಳೆಯುವ ಊರಲಿ ಹಾಡಹಗಲೆ
ಗತದ ಬೇರಿಗೆ ಸತ್ಯದ ಘಮಲು ತುಂಬಿದ ಚಂದಿರನ
ಹಣೆಗೆ ತ್ರಿಶೂಲದೊಳಗಿನ ಮುಳ್ಳು ತಾಕಿ ಲ್ಯಾವಿಗಂಟು
ಬಿಚ್ಚುತ್ತಾ ಕುಳಿತ ಬೆರಳಿಗೆ ರಕ್ತದ ರಂಗೋಲಿಯ ಸ್ಪರ್ಶ
ಕಲ್ಯಾಣನಾಡಲ್ಲೀಗ ಕಣ್ಣೀರ ಓಕಳಿ !

ಹಗಲ ಹಾದಿಗುಂಟ ಸಾವುಗಳ ಚರಗ ಚೆಲ್ಲುವ
ಕಲಿಕಾಲದ ಕೊನೆಯ ಕೂಗೊಂದೆ
ನಿಮ್ಮ ಬಂದೂಕಿನ ನಳಿಕೆಯಲಿ
ನಮ್ಮ ಹರಿದ ಬದುಕಿನ ಆತ್ಮದ ಕುರುಹುಗಳಿವೆ.



**ಕಲಕೇಶ. ಡಿ. ಗುಡ್ಡಾನೂರ (ಕಡಿಗು)**
'ಅಕ್ಷರ', ಎ. ಡಿ. ನಗರ, ಮುಂಡರಗಿ
ಗದಗ ಜಿಲ್ಲೆ – ೫೮೨ ೧೧೮



# ಡಾರ್ವಿನ್ನನ ವಿಕಾಸವಾದ ಏಕಿಷ್ಟು ಗೊಂದಲ?

ಪ್ರೊ ॥ ಎಂ. ಆರ್. ಎನ್. ಮೂರ್ತಿ

ಜಡ ಹಾಗೂ ಜೀವಜಗತ್ತಿನ ಉಗಮ ಹೇಗಾಯಿತೆಂಬ ಮಾನವನ ಕುತೂಹಲ ಬಹು ಪುರಾತನ. ಈ ಕುತೂಹಲವನ್ನು ಋಗ್ವೇದದ ಹತ್ತನೇ ಮಂಡಲದಲ್ಲಿ ಬರುವ ನಾಸದೀಯ ಸೂಕ್ತ ಬಹು ಸುಂದರವಾಗಿ ವರ್ಣಿಸುತ್ತದೆ. ಈ ಸೂಕ್ತ ಬಹುಶಃ ನಾಲ್ಕು ಸಹಸ್ರ ವರ್ಷಗಳ ಹಿಂದೆ ರಚಿಸಿದ್ದಿರ ಬಹುದು. ಸೂಕ್ತದ ಮೊದಲನೆಯ ಸಾಲಿನಲ್ಲಿ "ಮೊದಲಲ್ಲಿ ವಿಶ್ವ ಏನೇನೂ ಇಲ್ಲದ ಬರಿಯ ಶೂನ್ಯ"ವಾಗಿದ್ದಿರಬಹುದೆಂಬ ಊಹೆಯಿದೆ. ನಂತರ ಸೂಕ್ತ ಒಂದು ಗಹನ ಪ್ರಶ್ನೆ ಕೇಳಿಕೊಂಡು ಉತ್ತರಿಸುವ ಪ್ರಯತ್ನ ಮಾಡುತ್ತದೆ : "ಈ ಶೂನ್ಯದಲ್ಲಿ ಒಂದು ಬಯಕೆ ಉದಿಸಿರಬಹುದು. ಈ ಬಯಕೆಯೇ ಜಡ, ಜೀವಜಗತ್ತಿನ ಉಗಮಕ್ಕೆ ಕಾರಣವಾಗಿರ ಬಹುದಲ್ಲವೆ ?" ಪುನಃ ಸೂಕ್ತ ಇನ್ನೊಂದು ಗಹನ ಪ್ರಶ್ನೆಯೊಂದನ್ನು ನಮ್ಮ ಮುಂದಿಡುತ್ತದೆ : "ಈ ಜಗತ್ತಿನ ಉಗಮದ ಗುಟ್ಟನ್ನು ನಮಗೆ ತಿಳಿಸುವವರು ಯಾರು ? ದೇವತೆಗಳು ತಿಳಿಸಬಹುದೇ ? ಅವರಾರೂ ಜಗತ್ತಿನ ಆದಿಯಲ್ಲಿ ಇರಲಿಲ್ಲ, ಅವರು ನಂತರ ಬಂದವರು. ಆದ್ದರಿಂದ ಅವರು ಜಗತ್ತಿನ ಉಗಮದ ಬಗ್ಗೆ ನಮಗೆ ತಿಳಿಸಲಾರರು. ಯಾವ ಮಹಾ ಪುರುಷನು, ಎತ್ತರದ ಆಗಸದಿಂದ ಈ ವಿಶ್ವವನ್ನೆಲ್ಲಾ ವೀಕ್ಷಿಸುತ್ತಿರುವನೋ, ಅವನು ತಿಳಿಸ ಬಹುದೇ ?" ಸೂಕ್ತದ ಕಡೆಯ ಸಾಲಿನ ತೀರ್ಮಾನ ಇದನ್ನು ರಚಿಸಿದ ಕವಿಯ ಸೂಕ್ಷ್ಮಮತಿಯನ್ನು ಪ್ರತಿನಿಧಿಸುತ್ತದೆ. ಅದೆಂದರೆ "ಬಹುಶಃ ಆತನಿಗೂ ತಿಳಿದಿರಲಾರದು."

ಯಹೂದಿ, ಕ್ರೈಸ್ತ ಮತ್ತು ಇಸ್ಲಾಂ ಮತಗಳು, ಜಡ ಹಾಗೂ ಜೀವಜಗತ್ತಿನ ಸೃಷ್ಟಿಗೆ ಕರ್ತಾರನೊಬ್ಬನು ಇರುವನೆಂದು ಸಾರುತ್ತವೆ. ಬೈಬಲ್‌ನ ಮೊದಲನೆಯ ಅಧ್ಯಾಯ "ಮೊದಲಲ್ಲಿ ದೇವರು ಆಗಸವನ್ನೂ, ಭೂಮಿಯನ್ನೂ ಸೃಷ್ಟಿಸಿದ" ಎಂದು ಪ್ರಾರಂಭ ವಾಗುತ್ತದೆ. ದೇವರು ಮನುಷ್ಯನನ್ನು ತನ್ನದೇ ಪ್ರತಿರೂಪವಾಗಿ ಸೃಷ್ಟಿಸಿದ ಎಂದು ಪ್ರತಿಪಾದಿಸುತ್ತದೆ : "ಮಾನವನನ್ನು ನಮ್ಮ ಪ್ರತಿಬಿಂಬದಂತೆ ಸೃಷ್ಟಿಸೋಣ, ಅವನು ಸಾಗರದ ಮೀನುಗಳನ್ನೂ, ಆಗಸದ ಹಕ್ಕಿಗಳನ್ನೂ ಆಳಲಿ" ಎಂದು ಸಾರುತ್ತದೆ. ಮಾನವನಿಗೆ ದೇವರಿಂದ ದತ್ತವಾದ ಈ ಉನ್ನತ ಸ್ಥಾನದ ಹಿನ್ನೆಲೆಯಲ್ಲಿ ಡಾರ್ವಿನ್ ತನ್ನ ಜೀವ ವಿಕಾಸವಾದವನ್ನು ಮಂಡಿಸಿದ. ಪ್ರಕೃತಿಯಲ್ಲಿ ನಡೆಯುವ ನಿಯಮಬದ್ಧ ಭೌತಿಕ, ರಾಸಾಯನಿಕ ಕ್ರಿಯೆಗಳಿಂದಲೇ ಜೀವವಿಕಾಸ ಆಗಿರಬಹುದೆಂದು ಡಾರ್ವಿನ್ನನ ವಿಕಾಸವಾದ ಪ್ರತಿಪಾದಿಸುತ್ತದೆ. ವಿಕಾಸವಾದದ ಸೂಚಿತಾರ್ಥ ಬಹಳ ವಿಶಾಲ. ಜೀವವಿಜ್ಞಾನದ ಎಲ್ಲ ಶಾಖೆಗಳಿಗೂ ಬೇಕಾಗುವ ವೈಜ್ಞಾನಿಕ ತಳಹದಿಯನ್ನು ಡಾರ್ವಿನ್ನನ ವಿಕಾಸವಾದ ಒದಗಿಸುತ್ತದೆ ಎಂದು ಜೀವವಿಜ್ಞಾನಿಗಳು ಭಾವಿಸು ತ್ತಾರೆ. ದೇವರನ್ನು ಅವನ ಉನ್ನತ ಪೀಠದಿಂದ ಕೆಳಗಿಳಿಸಿ, ಮಾನವರನ್ನು ಪ್ರಾಣಿಗಳ ಒಂದು ಗುಂಪಾಗಿ ಪರಿಗಣಿಸಿದ ಡಾರ್ವಿನ್ನನ ವಿಕಾಸವಾದ ನಮ್ಮ "ಮಾನವತೆ"ಯ ಕಲ್ಪನೆಯನ್ನೇ ಬದಲಿಸಿದೆ. ಮಾನವ ಬೇರೆ ಪ್ರಾಣಿಗಳಿಗಿಂತ ಭಿನ್ನವಾಗಿ ವಿಕಾಸಹೊಂದಿ ಹೆಚ್ಚಿನ ಬೌದ್ಧಿಕ ಶಕ್ತಿ ಪಡೆದಿರಬಹುದು. ಅದರಂತೆಯೇ, ಜೀವವಿಕಾಸದ ಹಾದಿಯಲ್ಲಿ, ಹಲವಾರು ಜೀವಜಾತಿಗಳು ತಮ್ಮದೇ ಆದ, ಆದರೆ ಮನುಷ್ಯನಿಗಿಲ್ಲದ ವಿಶಿಷ್ಟ ಗುಣಗಳನ್ನು ಮೈಗೂಡಿಸಿಕೊಂಡಿವೆ. ಭೂಮಿಯ ಪರಿಸ್ಥಿತಿಯಲ್ಲಿ ಬಹಳ ಬದಲಾವಣೆಗಳಾದರೆ, ಮಾನವಕುಲ ನಶಿಸ ಬಹುದು, ಇನ್ನು ಕೆಲ ಜೀವಜಾತಿಗಳು ಬದುಕಿ ಉಳಿಯುವ ಸಾಧ್ಯತೆ ಇರಬಹುದು. ಆದ್ದರಿಂದ ಮಾನವನಿಗೆ ಅಗ್ರಸ್ಥಾನ ಕೊಡುವುದರಲ್ಲಿ ವೈಜ್ಞಾನಿಕ ಹುರುಳಿಲ್ಲ. ಆತ, ಪ್ರತಿ ಕೊಂಬೆಯೂ ಒಂದು ಜೀವಜಾತಿಯ ಸಂಕೇತವಾಗಿರುವ ಜೀವಜಾತಿಗಳ ಮಹಾವೃಕ್ಷದ ಒಂದು ಶಾಖೆಯಷ್ಟೆ.

ಆಳವಾಗಿ ವಿಶ್ಲೇಷಿಸಿದಾಗ, ಡಾರ್ವಿನ್ನನ ವಿಕಾಸವಾದ ನಮ್ಮ ಕಲ್ಪನೆಗೆ ತಕ್ಷಣ ಸಹಜವಾಗಿ ಹೊಳೆಯದ ಜೀವಜಗತ್ತಿನ ಇನ್ನೂ ಹಲವಾರು ಗುಣಗಳಿಗೆ ಸಹಜ ವಿವರಣೆ ನೀಡುತ್ತದೆ. ನಮ್ಮಲ್ಲಿ ಕಂಡುಬರುವ ಲೋಭ, ಮೋಸ, ಪ್ರೀತಿ, ತ್ಯಾಗ ಮುಂತಾದ ಅನೇಕ ಸ್ವಭಾವಗಳು ಹೇಗೆ



ರೂಪುಗೊಳ್ಳುತ್ತವೆ ಎನ್ನುವ ಪ್ರಶ್ನೆಗೆ ಜೀವವಿಕಾಸವಾದ ಸಹಜ, ಸರಳ ವಿವರಣೆ ನೀಡುತ್ತದೆ, ಮಾನವನ ಗುಣಗಳಿಗೆ ಅವನು ಅನುಸರಿಸುವ ಮತ ಅಥವಾ ಧರ್ಮವೇ ಮೂಲ ಎಂಬ ಹಿಂದಿನ ನಂಬಿಕೆಯ ಸತ್ಯತೆಯನ್ನು ಪ್ರಶ್ನಿಸುತ್ತದೆ.

ವಿಕಾಸವಾದದ ಪ್ರಮುಖ ಅಂಶಗಳನ್ನು ಅರಿತುಕೊಳ್ಳಲು ಒಂದು ಸರಳ ಮಾದರಿ ಉದಾಹರಣೆಯನ್ನು ಊಹಿಸಿಕೊಳ್ಳೋಣ. ಅಂತ್ಯವೇ ಇಲ್ಲದ ಒಂದು ಸಮತಟ್ಟಾದ ಬಯಲು ಪ್ರದೇಶ ಇದೆ ಎಂದು ಭಾವಿಸಿ. ಈ ಸಮತಟ್ಟು ಪ್ರದೇಶದಲ್ಲಿ ಅಲ್ಲಿಲ್ಲಿ, ಜೀವಿಗಳು ಬದುಕಿ ಉಳಿಯಲಾರದ ಅಗ್ನಿ ಪರ್ವತಗಳೂ, ವಿಷಾವೃತ ಸರೋವರಗಳೂ, ಹಿಮಾವೃತ ಪ್ರದೇಶಗಳೂ, ಮರುಭೂಮಿಗಳೂ ಇರಲಿ. ಮಿಕ್ಕೆಲ್ಲ ಕಡೆ ಜೀವಿಗಳಿಗೆ ಬೇಕಾದ ನೀರು, ಆಹಾರ ಮುಂತಾದ ಎಲ್ಲ ದ್ರವ್ಯಗಳೂ ದೊರೆಯುತ್ತಿರಲಿ. ಇಂತಹ ಬಯಲಿನ ಒಂದು ಸುರಕ್ಷಿತ ಪ್ರದೇಶದಲ್ಲಿ ಕೋಟ್ಯಂತರ ಏಕಕೋಶ ಜೀವಿಗಳನ್ನು ಇರಿಸೋಣ. ಈ ಜೀವಕೋಶಗಳು ಆಹಾರವನ್ನು ಕಬಳಿಸುತ್ತ, ಸಮತಲದಲ್ಲಿ ಹರಡತೊಡಗುತ್ತವೆ. ಈ ಜೀವಕಣಗಳ ಚಲನೆಗೆ, ಆಹಾರ ಸಂಪಾದನೆಯ ಹೊರತಾಗಿ ಬೇರೆ ಯಾವುದೇ ಉದ್ದೇಶವೂ ಇಲ್ಲ. ಯಾವುದೇ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಕೋಶಗಳು ಚಲಿಸುವುದಿಲ್ಲ. ಇವು ಪಲ್ಲಟಗೊಳ್ಳುವ ದಿಕ್ಕು ಸಂಪೂರ್ಣ ಆಕಸ್ಮಿಕ. ಅವು ಚಲಿಸುತ್ತಿದ್ದಂತೆ, ಆಹಾರ ಸೇವಿಸಿ, ಬೆಳೆದು, ಒಂದು ಕೋಶ ಎರಡಾಗಿ ಒಡೆಯುತ್ತವೆ. ಹೀಗೆ ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಾ, ಜೀವಕೋಶಗಳು ಬೇರೆ ಬೇರೆ ದಿಕ್ಕುಗಳಲ್ಲಿ ಚಲಿಸತೊಡಗುತ್ತವೆ. ಕೋಶ ವಿಭಜನೆಯಾದಾಗ, ಅದರ ವಂಶವಾಹಿ ಮಾಹಿತಿ ಒಮ್ಮೊಮ್ಮೆ ಸಣ್ಣ ಬದಲಾವಣೆಗೆ ಒಳಪಡುತ್ತದೆ. ಈ ಬದಲಾವಣೆಯೂ ಆಕಸ್ಮಿಕ. ಯಾವುದೇ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಬದಲಾವಣೆ ಕಾಣಿಸಿಕೊಳ್ಳುವುದಿಲ್ಲ. ಹೀಗೆ ಆಕಸ್ಮಿಕವಾಗಿ ಆದ ಬದಲಾವಣೆಗಳು ಆನುವಂಶಿಕವಾಗಿದ್ದು, ಕೋಶ ವಿಭಜನೆಯಾದಾಗ ಎರಡೂ ನೂತನ ಕೋಶಗಳು ಈ ಗುಣಗಳನ್ನು ಪಡೆದುಕೊಳ್ಳುತ್ತವೆ. ಇಂತಹ ಸಣ್ಣ, ಸಣ್ಣ ಬದಲಾವಣೆಗಳು ಕೋಟ್ಯಂತರ ವರ್ಷಗಳ ಅವಧಿಯಲ್ಲಿ ಮೂಲ ಕೋಶಗಳಿಗೆ ಹೋಲಿಕೆಯೇ ಇಲ್ಲ ಎನ್ನುವಷ್ಟು ಮಟ್ಟಿಗೆ ಬದಲಾವಣೆಗಳನ್ನು ತರುತ್ತವೆ. ಹೀಗೆ ಬದಲಾಗುತ್ತಿರುವ ಕೋಶಗಳು ಉಳಿಯಬೇಕಾದರೆ, ಅವು ಚಲಿಸುವ ಮಾರ್ಗದಲ್ಲಿ ಹಾನಿಕಾರಕ ಪ್ರದೇಶಗಳು ಇರಬಾರದು. ಆಕಸ್ಮಿಕವಾಗಿ ಇಂತಹ ಪ್ರದೇಶಗಳನ್ನು ತಲುಪುವ ಕೋಶಗಳು ನಾಶ ಹೊಂದುತ್ತವೆ. ಆದ್ದರಿಂದ ಯಾವುದೇ ಪೂರ್ವೋದ್ದೇಶ, ವಿವೇಚನೆ ಇಲ್ಲದಿದ್ದರೂ, ಹಾನಿಕಾರಕ ಪ್ರದೇಶಗಳಿಂದ ಆಕಸ್ಮಿಕವಾಗಿ ದೂರ ಉಳಿಯುವ ಕೋಶಗಳು ಬದುಕಿ ಉಳಿಯುತ್ತವೆ, ಇತರ ಕೋಶಗಳು ನಶಿಸುತ್ತವೆ. ಇದು ಪ್ರಕೃತಿ ಸಹಜ ಆಯ್ಕೆ. ಇದೆಲ್ಲ ಪೂರ್ಣ ಆಕಸ್ಮಿಕ. ಕೋಟ್ಯಂತರ ವರ್ಷಗಳ ತರುವಾಯ ಸಮತಲದ ಬೇರೆ ಬೇರೆ ಪ್ರದೇಶಗಳನ್ನು ನಾವು ಪರೀಕ್ಷಿಸಿದರೆ, ಬಹು ಬೇರೆಯೇ ಆದ ಜೀವಕೋಶಗಳನ್ನು ಕಾಣುತ್ತೇವೆ. ಹೀಗೆ ಜೀವವಿಕಾಸ ಆಕಸ್ಮಿಕವೇ ಹೊರತು ಉದ್ದೇಶಪೂರ್ವಕವಾಗಿ ನಡೆಯುವುದಲ್ಲ.

ಈ ಉದಾಹರಣೆಯನ್ನೇ ವೈಜ್ಞಾನಿಕ ಪರಿಭಾಷೆಯಲ್ಲಿ ಹೀಗೆ ಹೇಳಬಹುದು :

೧. ಜೀವವಿಕಾಸಕ್ಕೆ ಪ್ರಾಕೃತಿಕ ನಿಯಮಗಳೇ ಕಾರಣ.
೨. ಜೀವಿಗಳಲ್ಲಿ ವ್ಯತ್ಯಾಸಗಳು ಆಕಸ್ಮಿಕವಾಗಿ ಕಾಣಿಸಿಕೊಳ್ಳುತ್ತವೆ,
೩. ಆಕಸ್ಮಿಕ ಬದಲಾವಣೆಗಳು ಮುಂದಿನ ಪೀಳಿಗೆಗೆ ವರ್ಗಾಯಿಸಲ್ಪಡುತ್ತವೆ,
೪. ಬದಲಾವಣೆ ಹೊಂದಿದ ಕೆಲ ಜೀವಿಗಳು ಮಾತ್ರ ಬದುಕಿ ಉಳಿಯುತ್ತವೆ.

ಡಾರ್ವಿನ್ನನ ವಿಕಾಸವಾದ, ದೇವರನ್ನು ಅವನ ಉನ್ನತ ಪೀಠದಿಂದ ಕೆಳಗಿಳಿಸಿತಲ್ಲದೆ, ಮನುಷ್ಯನನ್ನು ಜೀವಸಂಕುಲದ ಒಂದು ಕೊಂಬೆ ಮಾತ್ರ ಎಂದು ಪರಿಗಣಿಸಿ, ಅವನನ್ನು ಜೀವಜಗತ್ತಿನ ಮೇಲ್ತುದಿಯಿಂದ ಕೆಳಗಿಳಿಸಿತು. ಡಾರ್ವಿನ್ನನ ವಿಕಾಸವಾದ ಪ್ರಕಟವಾಗುತ್ತಿದ್ದಂತೆ, ಇಂತಹ ವಿಕಾಸವಾದಾಧಾರಿತ ತೀರ್ಮಾನಗಳು ಧಾರ್ಮಿಕ ಭಾವನೆಯುಳ್ಳ ಅನೇಕರಿಗೆ ಒಪ್ಪಿಗೆಯಾಗಲಿಲ್ಲ. ಆದ್ದರಿಂದ ಡಾರ್ವಿನ್ನನ ವಿಕಾಸವಾದಕ್ಕೆ ಬಹಳ ಪ್ರತಿರೋಧ ವ್ಯಕ್ತವಾಗ ತೊಡಗಿತು. "ಮಾನವ ಜನ್ಮ ದೊಡ್ಡದು, ಆತನಿಗೆ ಮಾತ್ರ ಆತ್ಮವಿದೆ" ಎನ್ನುವ ಅನೇಕ ಮತಗಳು ವಿಕಾಸವಾದದ ವಿರುದ್ಧ ಸಂಘರ್ಷಕ್ಕೆ ಅಣಿಯಾದವು. ಇಂತಹ ಪ್ರತಿರೋಧ ಇಂದಿಗೂ ನಿಂತಿಲ್ಲ. ಡಾರ್ವಿನ್ನನ ವಿಕಾಸವಾದವನ್ನು ಬೋಧಿಸಬಾರದು ಎಂದು ಅನೇಕ ಸಲ ನ್ಯಾಯಾಲಯಗಳಿಗೆ ದೂರು ಸಲ್ಲಿಸಲಾಗಿದೆ. ವಿಜ್ಞಾನದ ಇನ್ನಾವ ಸಿದ್ಧಾಂತವೂ ಇಂತಹ ಪ್ರತಿರೋಧವನ್ನು ಕಂಡಿಲ್ಲ. ಕೋಪರ್ನಿಕಸ್ ಭೂಮಿಯನ್ನು ವಿಶ್ವಕೇಂದ್ರದಿಂದ ಪಲ್ಲಟಗೊಳಿಸಿ, ಅಲ್ಲಿ ಸೂರ್ಯನನ್ನು ಸ್ಥಾಪಿಸಿದ. ಮೊದಲಲ್ಲಿ ಧಾರ್ಮಿಕ ಮನೋಭಾವದ ಜನ ಇದನ್ನೂ ವಿರೋಧಿಸಿದ್ದರು, ನಂತರ ಇದನ್ನು ಸಾರ್ವಜನಿಕವಾಗಿ ಒಪ್ಪಿಕೊಂಡರು. ವಿಕಾಸವಾದ ಮಾತ್ರ ಇನ್ನೂ ವಾದಗ್ರಸ್ತವಾಗಿಯೇ ಉಳಿದಿದೆ. ಇಂದಿಗೂ ಕೂಡ ವಿಕಾಸವಾದವನ್ನು ಬಲವಾಗಿ ವಿರೋಧಿಸುವ ದೊಡ್ಡ ಗುಂಪಿದೆ.

ಡಾರ್ವಿನ್ ವಿಕಾಸವಾದವನ್ನು ಪ್ರಕಟಿಸಿದ್ದು ತನ್ನ "ಜೀವ ಜಾತಿಗಳ ಉಗಮ" ಪುಸ್ತಕದಲ್ಲಿ. ಈ ಪುಸ್ತಕ ಪ್ರಕಟವಾಗುತ್ತಿದ್ದಂತೆ, ವಿಕಾಸವಾದದ ಪರ ಮತ್ತು ವಿರೋಧ ಸಂವಾದಗಳು ಪ್ರಾರಂಭವಾದವು. ಇದರಲ್ಲಿ ಪ್ರಸಿದ್ಧಿ ಪಡೆದಿರುವುದು ಡಾರ್ವಿನ್ನನ ನಿಕಟವರ್ತಿಯಾಗಿದ್ದ ಥಾಮಸ್ ಹಕ್ಸ್ಲಿ ಮತ್ತು ವಿಲ್ಬರ್ ಫೋರ್ಸ್ ಎಂಬ ಪಾದ್ರಿಯವರ ನಡುವೆ ನಡೆದ ಸಂವಾದ. ಮಾನವ ಮತ್ತು ಮಂಗಗಳು ಒಂದೇ ಕುಲದ ಶಾಖೆಗಳು ಎನ್ನುವ ಡಾರ್ವಿನ್ನನ ವಾದವನ್ನು ಹಳಿಯಲು ಮತ್ತು ಹಕ್ಸ್ಲಿಯವರನ್ನು ಅವಮಾನಿಸಲು ವಿಲ್ ಫೋರ್ಸ್ ಹಕ್ಸ್ಲಿಯವರನ್ನು ಕೇಳುತ್ತಾರೆ : "ನಿಮ್ಮ ಮಂಗ ಸಂತತಿ ತಾಯಿಯ ಕಡೆಯಿಂದ ಬಂದದ್ದೋ, ತಂದೆಯ ಕಡೆಯಿಂದ ಬಂದದ್ದೊ ?" ಸ್ವಲ್ಪವೂ ವಿಚಲಿತರಾಗದ ಹಕ್ಸ್ಲಿ ಹೇಳುತ್ತಾರೆ : "ನನ್ನ ವಂಶದ ಮೂಲ ಒಂದು ಯಃಕಶ್ಚಿತ್ ಮಂಗವೋ ಅಥವಾ ಸಮಾಜದ ಗಣ್ಯರು, ಬುದ್ಧಿಶಾಲಿಗಳು, ಪ್ರಭಾವಶಾಲಿಗಳು ಎನಿಸಿರುವ, ಬೌದ್ಧಿಕ ಶಕ್ತಿಯನ್ನು ಒಂದು ಗಂಭೀರ ವೈಜ್ಞಾನಿಕ ಚರ್ಚೆಯನ್ನು ಗೇಲಿಮಾಡುವುದಕ್ಕೆ ಉಪಯೋಗಿಸುವ ನೀವೋ ಎಂದು ಕೇಳಿಕೊಂಡರೆ, ನನ್ನ ಆಯ್ಕೆ ಖಂಡಿತವಾಗಿಯೂ ಮಂಗನೇ ಆಗಿದೆ." ಡಾರ್ವಿನ್ನನ ವಿಕಾಸವಾದಕ್ಕೆ ಪರ ಮತ್ತು ವಿರೋಧವಾದ ಚರ್ಚೆ ಇನ್ನೂ ನಿಂತಿಲ್ಲ.

ಡಾರ್ವಿನ್ನನ ವಿಕಾಸವಾದದ ಸಾರಾಂಶ, ಭೂಮಿಯಲ್ಲಿ ಜೀವಿಸಿರುವ ಎಲ್ಲ ಜೀವ ಜಾತಿಗಳೂ ಒಂದೇ ಮೂಲದಿಂದ ವಿಕಾಸಹೊಂದಿವೆ ಎನ್ನುವುದು. ಇದರಂತೆ, ಎಲ್ಲ ಮನುಷ್ಯರೂ, ಅವರು ಯಾವ ಖಂಡದಲ್ಲಿಯೇ ಬದುಕಿರಲಿ, ಅವರೆಲ್ಲ ಸೋದರ ಸಂಬಂಧ ಹೊಂದಿದ್ದಾರೆ. ನಮ್ಮ ಮೂಲಕ್ಕೆ ಕಾರಣರಾದ

ಪಿತೃಗಳು ೩೦-೪೦ ಸಾವಿರ ವರ್ಷಗಳ ಹಿಂದೆ ಬದುಕಿದ್ದಿರಬಹುದು. ಹಾಗೆಯೇ ಇಂದು ಬದುಕಿರುವ ಚಿಂಪಾಂಜಿ ಹಾಗೂ ಮನುಷ್ಯರ ಮೂಲ ಪಿತೃಗಳು ಹತ್ತಾರು ಲಕ್ಷ ವರ್ಷಗಳ ಹಿಂದೆ ಬದುಕಿದ್ದಿರಬಹುದು. ಈ ಲೆಕ್ಕದಲ್ಲಿ ನಮ್ಮ ಮನೆಗಳಲ್ಲಿ ಸಾಕುವ ಪ್ರಾಣಿಗಳು ನಮ್ಮ ಇನ್ನೂ ಬಲು ದೂರದ ಸೋದರ ಸಂಬಂಧಿಗಳು. ನಮಗೂ ಹಕ್ಕಿಗಳಿಗೂ ಜನ್ಮ ನೀಡಿದ ಪಿತೃಗಳು ಅನೇಕ ಕೋಟಿ ವರ್ಷಗಳ ಹಿಂದೆ ಬದುಕಿದ್ದವು. ಈ ರೀತಿ ಜೀವಜಗತ್ತಿನ ಎಲ್ಲ ಜಾತಿಗಳೂ ಸೋದರ ಸಂಬಂಧಿಗಳೇ !

ಡಾರ್ವಿನ್ನನ ವಿಕಾಸವಾದದ ಪ್ರಕಾರ ಜೀವಜಾತಿಗಳಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳು ಆಕಸ್ಮಿಕ. ಈ ಬದಲಾವಣೆಗಳು ಹೇಗೆ ಕಾಣಿಸಿಕೊಳ್ಳುತ್ತವೆ ಎನ್ನುವುದು ಡಾರ್ವಿನ್ನನ ವಿಕಾಸವಾದವನ್ನು ಮಂಡಿಸಿದ ನಂತರ ಒಂದು ಶತಮಾನ ಕಾಲ ನಿಗೂಢವಾಗಿಯೇ ಉಳಿದಿತ್ತು. ವಂಶವಾಹಿ ಮಾಹಿತಿ ಹೇಗೆ ಬದಲಾಗುತ್ತದೆ ಎನ್ನುವುದಕ್ಕೆ ವೈಜ್ಞಾನಿಕ ವಿವರಣೆಯನ್ನು ಇಪ್ಪತ್ತನೇ ಶತಮಾನದಲ್ಲಿ ನಡೆದ ಜೀವಶಾಸ್ತ್ರದ ಸಂಶೋಧನೆಗಳು ಒದಗಿಸಿದವು. ಎಲ್ಲ ಜೀವಕೋಶಗಳ ವಂಶವಾಹಿ ಮಾಹಿತಿ, ಅವುಗಳ ಕೇಂದ್ರದಲ್ಲಿರುವ ಡಿ.ಎನ್.ಎ. ಅಣುಗಳಲ್ಲಿ ಸಾಂಕೇತಿಕ ರೂಪದಲ್ಲಿ ಅಡಗಿರುತ್ತದೆ. ಡಿ.ಎನ್.ಎ. ಎಲ್ಲ ಜೀವಕೋಶಗಳಲ್ಲಿರುವ ದೈತ್ಯ ಗಾತ್ರದ ಅಣುಗಳು. ಡಿ.ಎನ್.ಎ. ಅಣುಗಳು ನಾಲ್ಕು ಬಗೆಯ, ಸಣ್ಣ ಗಾತ್ರದ ನ್ಯೂಕ್ಲಿಯಕ್ ಆಮ್ಲದ ಅಣುಗಳನ್ನೊಳಗೊಂಡ ಸರಪಣಿಗಳು. ಈ ನಾಲ್ಕು ಬಗೆಯ ನ್ಯೂಕ್ಲಿಯಕ್ ಆಮ್ಲಗಳ ಸಂಕೇತ "ಎ (ಅಡೆನಿನ್)", "ಟೀ (ಥೈಮಿನ್)", "ಜೀ (ಗ್ವಾನಿನ್)", "ಸಿ (ಸೈಟೋಸಿನ್)". ಈ ಸಂಕೇತಗಳ ಅಥವಾ ಅಕ್ಷರಗಳ (ಅಡೆನಿನ್, ಥೈಮಿನ್, ಗ್ವಾನಿನ್, ಸೈಟೋಸಿನ್ ಅಣುಗಳ) ಶ್ರೇಣಿಯು ವಂಶವಾಹಿ ಮಾಹಿತಿಯನ್ನು ಸೂಚಿಸುತ್ತದೆ. ವಂಶವಾಹಿ ಮಾಹಿತಿ ಹೊಂದಿರುವ ಇಂತಹ ಡಿ.ಎನ್.ಎ. ಅಣುಗಳಲ್ಲಾಗುವ ಬದಲಾವಣೆಗಳೇ ವಂಶವಾಹಿ ಮಾಹಿತಿ ಬದಲಾಗಲು ಕಾರಣ. ಕೋಶ ಒಡೆದು ಎರಡಾದಾಗ, ಡಿ.ಎನ್.ಎ. ಸರಪಣಿಯ ಪ್ರತಿ ಸಂಶ್ಲೇಷಿಸಲ್ಪಡುತ್ತದೆ, ಈ ಸಂಶ್ಲೇಷಣೆಯಲ್ಲಿ ಆಗೊಮ್ಮೆ, ಈಗೊಮ್ಮೆ ತಪ್ಪುಗಳಾಗುತ್ತವೆ – ಒಂದು ಅಕ್ಷರದ (ನ್ಯೂಕ್ಲಿಯಕ್ ಆಮ್ಲ) ಬದಲಿಗೆ ಇನ್ನೊಂದು ಅಕ್ಷರ (ಬೇರೊಂದು ನ್ಯೂಕ್ಲಿಯಕ್ ಆಮ್ಲ) ಬಳಕೆಯಾಗಬಹುದು, ಒಂದು ಅಕ್ಷರ ಬಿಟ್ಟುಹೋಗಬಹುದು ಅಥವಾ ಮೂಲ ಪ್ರತಿಯಲ್ಲಿ ಇಲ್ಲದ ಅಕ್ಷರ ಸರಪಣಿಯಲ್ಲಿ ಸೇರಿಕೊಳ್ಳಬಹುದು. ಇಂತಹ ವ್ಯತ್ಯಾಸಗಳು ವಂಶವಾಹಿ ಮಾಹಿತಿಯನ್ನು ಬದಲಿಸುತ್ತವೆ. ಇಂತಹ ಬದಲಾವಣೆಗಳು ಕೋಶ ವಿಭಜನೆಯ ಸಮಯದಲ್ಲಿ ವಂಶವಾಹಿ ಮಾಹಿತಿಯ ಪ್ರತಿಗಳನ್ನು ಸಂಶ್ಲೇಷಿಸುವಾಗ ಆಕಸ್ಮಿಕವಾಗಿ ಆಗಬಹುದು. ಹಲವಾರು ರಾಸಾಯನಿಕಗಳು ಹಾಗೂ ವಿಕಿರಣಗಳು ಸಹ ವಂಶವಾಹಿ ಮಾಹಿತಿ ಹೊತ್ತಿರುವ ಡಿ.ಎನ್.ಎ. ಅಣುಗಳಲ್ಲಿ ಬದಲಾವಣೆಗಳನ್ನು ತರಬಹುದು.

ಇಂತಹ ವ್ಯತ್ಯಯಗಳಿಂದ ಆಗುವ ಅನೇಕ ಬದಲಾವಣೆಗಳು ಗೌಣವಾಗಿದ್ದು, ವಂಶವಾಹಿ ಮಾಹಿತಿ ಅಲ್ಪವೇ ಬದಲಾದರೂ, ಲಕ್ಷಾಂತರ ವರ್ಷಗಳಲ್ಲಾಗುವ ಬದಲಾವಣೆಗಳು ಹೊಸ ಜೀವಜಾತಿಗಳಿಗೆ ಎಡೆಮಾಡಿಕೊಡಬಹುದು. ಹೀಗೆ ಜೀವವಿಕಾಸವಾಗಿದ್ದರೆ, ವಿಕಾಸದ ಹಾದಿಯಲ್ಲಿ ಹತ್ತಿರವಿರುವ ಮಾನವ ಮತ್ತು ಚಿಂಪಾಂಜಿಗಳ ವಂಶವಾಹಿ ಮಾಹಿತಿಯಲ್ಲಿ ಬಹಳ ಹೋಲಿಕೆಗಳಿರಬೇಕು. ವಿಕಾಸದ ಹಾದಿಯಲ್ಲಿ ಬೇರೆ ಬೇರೆ ದಾರಿಯಲ್ಲಿ ಬಹುಕಾಲ ಸಾಗಿರುವ ಜೀವ ಜಾತಿಗಳ ವಂಶವಾಹಿ ಮಾಹಿತಿ ಹೆಚ್ಚಿನ ಬದಲಾವಣೆಗಳನ್ನು ತೋರಬೇಕು. ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿ, ಅನೇಕ ಜೀವಜಾತಿಗಳ ಸಂಪೂರ್ಣ ವಂಶವಾಹಿ ಮಾಹಿತಿಯನ್ನು (ಡಿ.ಎನ್.ಎ. ಅಣುಗಳಲ್ಲಿರುವ ನಾಲ್ಕು ನ್ಯೂಕ್ಲಿಯೋಟೈಡುಗಳ ಸರದಿ) ಪಡೆಯುವುದರಲ್ಲಿ ವಿಜ್ಞಾನಿಗಳು ಸಫಲರಾಗಿದ್ದಾರೆ. ಈ ವಂಶವಾಹಿ ಮಾಹಿತಿಯ ತುಲನಾತ್ಮಕ ಅಧ್ಯಯನದಿಂದ ಜೀವಜಾತಿಗಳು ವಿಕಾಸ ಹೊಂದಿದ ಮಾರ್ಗವನ್ನೂ ಅರಿಯಬಹುದು. ಪಳೆಯುಳಿಕೆಗಳ ಆಧಾರದಿಂದ ಜೀವವಿಕಾಸದ ಮೈಲುಗಲ್ಲುಗಳನ್ನು ಹಿಂದಿನ ಶತಮಾನದಲ್ಲಿಯೇ ನಿರ್ಧರಿಸಿದ್ದರು, ಇಂದು ವಂಶವಾಹಿ ಮಾಹಿತಿಯ ಅಧ್ಯಯನದಿಂದ ಜೀವವಿಕಾಸದ ಮೈಲುಗಲ್ಲುಗಳನ್ನು ಗುರುತಿಸಬಹುದು. ಈ ಎರಡು ವಿಧಾನಗಳೂ ಜೀವವಿಕಾಸದ ಬಗ್ಗೆ ಪರಸ್ಪರ ವಿರೋಧವಿಲ್ಲದ ವಿವರಣೆಗಳನ್ನೇ ಒದಗಿಸುತ್ತವೆ. ಇದರಿಂದ ಡಾರ್ವಿನ್ನರ ವಿಕಾಸವಾದಕ್ಕೆ ಬಹಳ ಪ್ರಬಲ ಪುರಾವೆ ದೊರೆತಂತಾಗಿದೆ.

ಡಾರ್ವಿನ್ನನ ಮೂಲ ಕಲ್ಪನೆಗಳನ್ನು, ತಳಿಸಂಬಂಧಿ ಅಧ್ಯಯನ ಮತ್ತು ಅಣು ಜೀವಶಾಸ್ತ್ರಗಳನ್ನು (ಜೀವಕೋಶಗಳಲ್ಲಿರುವ ಅಣುಗಳ ಅಧ್ಯಯನ) ಒಗ್ಗೂಡಿಸಿ ಇಪ್ಪತ್ತನೆಯ ಶತಮಾನದಲ್ಲಿ "ನವ ಡಾರ್ವಿನ್ ಪರಿಕಲ್ಪನೆ" ಎನ್ನುವ ಒಂದು ಹೊಸ ಶಾಖೆಯೇ ಪ್ರಾರಂಭವಾಯಿತು. ಈ ಶಾಖೆಯಲ್ಲಿ ಜೀವಿಗಳ ದೇಹ ರಚನೆ ಮತ್ತು ಅವುಗಳ ವರ್ತನೆ ಹೇಗೆ ರೂಪಗೊಳ್ಳುತ್ತವೆ ಎನ್ನುವುದನ್ನು ವಿಕಾಸವಾದದ ನೆರವಿನಿಂದ ವಿವರಿಸುವ ಪ್ರಯತ್ನ ನಡೆಯುತ್ತಿದೆ.

ಡಾರ್ವಿನ್ ವಿಕಾಸ ಮಂಡಿಸಿದ ಹೊಸದರಲ್ಲಿ, ಎಲ್ಲ ಪ್ರಾಣಿಗಳೂ ಬದುಕುಳಿಯಲು ಹೋರಾಡಬೇಕಾಗುವುದರಿಂದ, ವಿಕಾಸ ಬರಿಯ ಸ್ವಾರ್ಥತೆಯನ್ನು ಬೆಳೆಸುತ್ತದೆಯೇ ಹೊರತು ಸಹಕಾರಕ್ಕೆ ಎಡೆಮಾಡಿಕೊಡಲಾರದು ಎಂದು ಅನೇಕರು ಭಾವಿಸಿದ್ದರು, ಇಪ್ಪತ್ತನೆಯ ಶತಮಾನದಲ್ಲಿ ಈ ತರ್ಕ ಸರಿಯಲ್ಲವೆಂದು ಸಾಧಿಸಲಾಯಿತು. ಉದಾಹರಣೆಗೆ, ಕಾಡು ನಾಯಿ ಮಾಂಸಹಾರಿ ಪ್ರಾಣಿ. ಅದು ಬೇಟೆಯಾಡಿ ತನ್ನ ಆಹಾರವನ್ನು ದೊರಕಿಸಿಕೊಳ್ಳಬೇಕು. ಮೊಲದಂತಹ ಸಣ್ಣ ಪ್ರಾಣಿಯನ್ನು ಕಾಡುನಾಯಿ ಸ್ವತಂತ್ರವಾಗಿ ಹಿಡಿಯಬಲ್ಲದು. ಆದರೆ, ಎಲ್ಲ ಸಮಯಗಳಲ್ಲೂ ಅದಕ್ಕೆ ಸಣ್ಣ ಪ್ರಾಣಿಗಳೇ ದೊರೆಯಲಾರವು. ತನಗಿಂತ ದೊಡ್ಡದಾದ, ಶಕ್ತಿಶಾಲಿಯಾದ ಪ್ರಾಣಿಗಳನ್ನೂ ಕಾಡುನಾಯಿಗಳು ಒಟ್ಟಾಗಿ ಸೇರಿ ಬೇಟೆಯಾಡುತ್ತವೆ, ಇಂತಹ ಆಹಾರ ಪಡೆಯಲು ನಾಯಿಗಳಲ್ಲಿ ಪರಸ್ಪರ ಸಹಕಾರ ಅತ್ಯವಶ್ಯಕ. ಅಂತಹ ಸಹಕಾರ ತೋರುವ ವಂಶವಾಹಿ ಮಾಹಿತಿ ಹೊಂದಿರುವ ನಾಯಿಗಳ ಸಂತಾನ ವೃದ್ಧಿಸುತ್ತದೆ. ಸಹಕಾರ ಹೊಂದದ ನಾಯಿಗಳ ವಂಶ ಕ್ಷೀಣಿಸುತ್ತದೆ. ಇದರಿಂದ ಜೀವವಿಕಾಸದ ಹಾದಿಯಲ್ಲಿ ಸಹಜವಾಗಿ ಸಹಕಾರ ಕಾಣಿಸಿಕೊಳ್ಳುತ್ತದೆ. ಇನ್ನೊಂದು ಸರಳ ಉದಾಹರಣೆಯನ್ನು ಗಮನಿಸೋಣ. "ಅವಳಿ-ಜವಳಿ" ಮಕ್ಕಳ ವಂಶವಾಹಿ ಮಾಹಿತಿ ಒಂದೇ ಆಗಿದ್ದು, ಅವರಲ್ಲಿ ಯಾರಿಗೆ ಮಗು ಹುಟ್ಟಿದರೂ, ಮಗುವು ಇಬ್ಬರಿಗೂ ಆನುವಂಶಿಕವಾಗಿ ಸರಿಸಮನಾದ ಬಾಂಧವ್ಯ ಹೊಂದಿರುತ್ತದೆ, ಇಂತಹ ಅವಳಿ-ಜವಳಿಗಳು ಇಬ್ಬರೂ ಉನ್ನತ ಕೆಲಸದಲ್ಲಿದ್ದರೆ, ಅವರು ಒಂದೇ ಮಗುವನ್ನು ಹೊಂದಲು ಸಾಧ್ಯವಾಗುವಂತಹ ಪರಿಸ್ಥಿತಿ ಇರಬಹುದು ಎಂದುಕೊಳ್ಳಿ. ಅವರಲ್ಲಿ ಒಬ್ಬರು ಮಾತ್ರ ಉನ್ನತ ಹುದ್ದೆಯಲ್ಲಿದ್ದು, ಮತ್ತೊಬ್ಬರು ಸಂಪೂರ್ಣ ಸಹಕಾರ ನೀಡುತ್ತ ಯಾವ ಹುದ್ದೆಯನ್ನೂ ಅವಲಂಬಿಸದಿದ್ದರೆ, ನಾಲ್ಕು ಮಕ್ಕಳಿಗೆ ಜನ್ಮ ಕೊಡಲು ಸಾಧ್ಯವಾದರೆ, ಮುಂದಿನ ತಲೆಮಾರಿಗೆ ವಂಶವಾಹಿ ಮಾಹಿತಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವರ್ಗಾವಣೆಯಾಗುತ್ತದೆ. ಆದ್ದರಿಂದ ಅವಳಿ-ಜವಳಿಗಳಲ್ಲಿ ಇಂತಹ ಸಹಕಾರ ವಿಕಾಸ ಹೊಂದಬಹುದು. ಇಂತಹ ತರ್ಕದಿಂದಲೇ ಜೇನುಹುಳುಗಳ ಸಹಕಾರಿ ಸ್ವಭಾವವನ್ನು ಅರ್ಥಮಾಡಿಕೊಳ್ಳಬಹುದು. ಜೇನುಹುಳುಗಳು ಗೂಡಿನ ರಕ್ಷಣೆಗಾಗಿ ಆತ್ಮಾರ್ಪಣೆ ಮಾಡಿಕೊಳ್ಳುತ್ತವೆ. ಇದೇ ರೀತಿಯ ತರ್ಕಗಳಿಂದ ಜೀವಜಾತಿಗಳ ಬದುಕುವ ರೀತಿಯನ್ನು ವೈಜ್ಞಾನಿಕ ನೆಲೆಯಲ್ಲಿ ಅರಿತುಕೊಳ್ಳಬಹುದು. ಆದ್ದರಿಂದಲೇ ಒಬ್ಬ ಪ್ರಸಿದ್ಧ ವಿಜ್ಞಾನಿ "ಡಾರ್ವಿನ್ನನ ವಿಕಾಸವಾದದ ಬೆಳಕಿನಲ್ಲಲ್ಲದೆ ಜೀವಶಾಸ್ತ್ರದ ಯಾವ ವಿಶೇಷವೂ ಅರ್ಥವಾಗಲಾರದು" ಎಂದು ಹೇಳಿದ್ದಾನೆ.

ವಿಕಾಸವಾದಕ್ಕೆ ವಿರುದ್ಧದ ಅನೇಕ ವಾದಗಳಿಗೆ ಕಾರಣ ಪರಂಪರಾಗತ ಮತಗಳ ನಂಬಿಕೆಗಳೇ. ಅಮೆರಿಕೆಯ ಮೇಧಾವಿ ತತ್ವಶಾಸ್ತ್ರಜ್ಞರು "ದೇವರ ಜಾಗದಲ್ಲಿ ವಿಕಾಸವಾದವನ್ನು ಕೂರಿಸಿ, ಡಾರ್ವಿನ್, ಧಾರ್ಮಿಕ ನೆಲೆಯಲ್ಲಿ ನಿಂತಿರುವ ನೈತಿಕತೆಯ ಮೂಲವನ್ನೇ ತೆಗೆದುಹಾಕಿದ್ದಾನೆ" ಎಂದು ವಿರೋಧ ವ್ಯಕ್ತಪಡಿಸಿದ್ದಾರೆ. ಡಾರ್ವಿನ್ನನ ವಿಕಾಸವಾದಕ್ಕೆ ಇನ್ನು ಹಲವು ಇಂತಹ ವಿರೋಧಗಳು : "ಮಾನವ ಜೀವದ ಬೆಲೆ ಕುಗ್ಗಿಸಿದೆ", "ಪ್ರಾಣಿಗಳನ್ನು ಸಲ್ಲದ ಎತ್ತರದ ಪೀಠದಲ್ಲಿ ಕೂರಿಸಿದೆ", "ದೇವರ ಭಯವಿಲ್ಲದ ನೈತಿಕತೆಯೇ ಭಯಾನಕ" ಇತ್ಯಾದಿ.

ಡಾರ್ವಿನ್ನನ ವಿಕಾಸವಾದವನ್ನು ಕೆಲವು ಚಿಂತನಶೀಲ ವಿಜ್ಞಾನಿಗಳೂ ವಿರೋಧಿಸಿದ್ದಾರೆ. ಜೀವಕೋಶಗಳಲ್ಲಿರುವ ಅತಿ ಸಂಕೀರ್ಣ ರಚನೆಗಳನ್ನು, ಅಲ್ಲಿ ನಡೆಯುವ ಸಹಸ್ರಾರು ರಾಸಾಯನಿಕ ಕ್ರಿಯೆಗಳನ್ನು ಪರಿಗಣಿಸಿ ಈ ಗುಂಪಿನ ವಿಜ್ಞಾನಿಗಳು ವಿಕಾಸವಾದವನ್ನು ಖಂಡಿಸುತ್ತಾರೆ. ಅತ್ಯಂತ ಸರಳ ಜೀವಕೋಶಗಳಲ್ಲೂ ಕಂಡುಬರುವ ಸಂಕೀರ್ಣತೆ ಮಾನವನಿರ್ಮಿತ ಸೂಪರ್ ಸಾನಿಕ್ ಜೆಟ್ ವಿಮಾನಗಳನ್ನು ಆಟದ ಬೊಂಬೆಗಳನ್ನಾಗಿಸುತ್ತವೆ. ಒಂದು

ಗಡಿಯಾರ "ಮರುಭೂಮಿಯಲ್ಲಿ ಬೀಸುವ ಗಾಳಿ, ಮಳೆಗಳಿಂದ ರೂಪಗೊಳ್ಳಲು ಸಾಧ್ಯವಿಲ್ಲ, ಅದರ ಇರುವಿಕೆಗೆ, ಮನುಷ್ಯನ ಚಾತುರ್ಯವೇ ಕಾರಣ. ಹಾಗೆಯೇ, ಗಡಿಯಾರಗಳಿಗಿಂತ ಊಹಿಸಲಾರದ ಕ್ಲಿಷ್ಟತೆ ಇರುವ ಜೀವಕೋಶಗಳ ಉಗಮವೂ, ನಿರ್ಜೀವ ಭೂಮಿಯಲ್ಲಿ ತನ್ನಿಂದ ತಾನೆ ಹುಟ್ಟಿಕೊಳ್ಳಲಾರದು. ಇಂತಹ ಅತಿ ಸಂಕೀರ್ಣ ಜೀವಕೋಶಗಳ ಉಗಮಕ್ಕೆ ಒಬ್ಬ ಸೃಷ್ಟಿಕರ್ತನ ಅವಶ್ಯಕತೆ ಇರಲೇಬೇಕು" ಎನ್ನುವುದು ಇವರ ತರ್ಕ.

ಇಪ್ಪತ್ತನೆಯ ಶತಮಾನದಲ್ಲಿ "ನವ–ಡಾರ್ವಿನ್" ವಾದಿಗಳು, ಅತ್ಯಂತ ಶ್ರಮದಿಂದ, ಜೀವಜಗತ್ತಿನ ಅಧ್ಯಯನದಿಂದ, ಸೃಷ್ಟಿಕರ್ತನಿಲ್ಲದೆ ಗಡಿಯಾರವೇ ಆಗಲಿ, ಜೀವಕೋಶವೇ ಆಗಲಿ ಹೇಗೆ ವಿಕಾಸ ಹೊಂದಬಹುದು ಎನ್ನುವುದನ್ನು ವಿವರಿಸಿದ್ದಾರೆ. ಜೀವವಿಕಾಸಕ್ಕೆ ಒದಗಿ ಬಂದ ಕಾಲ ೩೦೦–೪೦೦ ಕೋಟಿ ವರ್ಷಗಳಷ್ಟು ದೀರ್ಘ. ಈ ಕಾಲಮಾನವನ್ನು ಊಹಿಸಿಕೊಳ್ಳುವುದು ಸಾಧ್ಯವೇ ಇಲ್ಲ ಎನ್ನುವಷ್ಟು ಕಷ್ಟ. ಅಲ್ಪಕಾಲದಲ್ಲಿ ಸಾಧ್ಯವೇ ಇಲ್ಲ ಎನ್ನುವ ಬದಲಾವಣೆಗಳು, ಈ ಅಗಾಧ ಕಾಲದಲ್ಲಿ ಸಾಧ್ಯವಾಗುತ್ತವೆ. ಉದಾಹರಣೆಗೆ, ಒಂದು ಇರುವೆ ೧ ಮಿಲಿಗ್ರಾಮ್ ತೂಕವಿರಬಹುದು. ಆನೆ ೧೦೦೦೦ ಕಿಲೊಗ್ರಾಮ್ ಇದೆ ಎನ್ನೋಣ. ೧೦ ವರ್ಷಗಳಿಗೊಮ್ಮೆ ಸಂಭವಿಸುವ ತಲೆಮಾರಿನಲ್ಲಿ, ಇರುವೆಯ ತೂಕ ಸಾವಿರದಲ್ಲಿ ಒಂದು ಭಾಗ ಹೆಚ್ಚುತ್ತದೆ ಎಂದು ಭಾವಿಸಿ.ಈ ತೂಕದ ವ್ಯತ್ಯಯ ನಮ್ಮ ಗಮನಕ್ಕೆ ಬರಲಾರದು. ಹೀಗೆಯೇ ಪ್ರತಿ ತಲೆಮಾರಿನಲ್ಲೂ ಇರುವೆಯ ತೂಕ ಸಾವಿರದಲ್ಲಿ ಒಂದು ಪಾಲು ಹೆಚ್ಚುತ್ತಾ ಹೋದರೆ, ಎಷ್ಟು ಸಮಯದ ನಂತರ ಅದು ಆನೆಯ ತೂಕಕ್ಕೆ ಸಮವಾಗುತ್ತದೆ ? ಈ ಸಮಸ್ಯೆಯ ಪರಿಹಾರಕ್ಕೆ ಪ್ರೌಢಶಾಲೆಯಲ್ಲಿ ಕಲಿಯುವ ಗಣಿತ ಸಾಕು. ಬೇಕಾದ ಸಮಯ ೨೧,೦೦೦ ವರ್ಷಗಳು. ಜೀವವಿಕಾಸಕ್ಕೆ ತೆಗೆದುಕೊಂಡಿರುವ ಕಾಲ ೩೦೦ ಕೋಟಿ ವರ್ಷಗಳಿಗೂ ಮಿಗಿಲು. ಈ ಸರಳ ಉದಾಹರಣೆ, ಅತಿ ದೀರ್ಘ ಕಾಲಾವಧಿಯಲ್ಲಿ ಮಾಂತ್ರಿಕತೆಯಂತೆ ತೋರುವ ಬದಲಾವಣೆಗಳು ಸಾಧ್ಯ ಎನ್ನುವುದನ್ನು ತೋರಿಸುತ್ತದೆ.

ಡಾರ್ವಿನ್ನನ ವಿಕಾಸವಾದಕ್ಕೆ ತೋರಿಬಂದಿರುವ ಎಲ್ಲ ಟೀಕೆಗಳೂ ಪಾಶ್ಚಿಮಾತ್ಯ ದೇಶಗಳಿಂದ ಬಂದಿವೆ. ನಮ್ಮಲ್ಲಿ ಏಕೆ ಇಂತಹ ವಾದ–ವಿವಾದಗಳು ನಡೆದಿಲ್ಲ ಎನ್ನುವುದನ್ನು ಪರಿಶೀಲಿಸುವುದು ಅಗತ್ಯ. ನಮ್ಮ ದೇಶದ ಮತಗಳಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಈ ವೈವಿಧ್ಯತೆ ನಮಗೆ ವರವೇ ಸರಿ, ನಮ್ಮಲ್ಲಿ ಅನೇಕ ಧರ್ಮಗಳ ಅನುಯಾಯಿಗಳಿದ್ದಾರೆ. ಬಹುಸಂಖ್ಯಾತರಾದ ಹಿಂದುಗಳಿಗೆ, ಬೈಬಲ್ ಅಥವಾ ಕುರಾನ್‌ನಂತಹ ಅತಿ ಪವಿತ್ರ ಗ್ರಂಥ ಯಾವುದೂ ಇಲ್ಲ. ವೇದಗಳು ಹಿಂದೂ ಧರ್ಮದ ಮೂಲ ಎಂದು ಕೆಲವರು ಹೇಳಿದರೂ, ಇಂದಿನ ಮೂರ್ತಿ ಪೂಜೆ ಪ್ರಧಾನವಾದ ಹಿಂದೂ ಸಂಪ್ರದಾಯಕ್ಕೂ ವೇದಗಳಿಗೂ ಹೆಚ್ಚಿನ ಸಂಬಂಧವಿಲ್ಲ. ವೇದಗಳಲ್ಲಿ ಕಂಡುಬರುವ ಎಷ್ಟೋ ದೇವತೆಗಳನ್ನು ಇಂದು ಯಾರೂ ನೆನೆಸಿಕೊಳ್ಳುವುದಿಲ್ಲ. ವೇದಗಳಲ್ಲಿ ಬರುವ ರುದ್ರನಿಗೂ, ಇಂದಿನ ಈಶ್ವರನಿಗೂ ಯಾವುದೇ ಹೋಲಿಕೆಗಳಿಲ್ಲ. ನಾಸ್ತಿಕ ವಾದ, ತಂತ್ರ ಮುಂತಾದುವೂ ಇಲ್ಲಿ ಸ್ಥಾನ ಪಡೆದಿವೆ. ಜೈನರ ಬಸದಿಗಳಲ್ಲಿ ದೇವ ಮೂರ್ತಿಗಳಿಲ್ಲ. ಹೆಚ್ಚಿನ ಹಳ್ಳಿಗಳಲ್ಲಿ ಆರಾಧಿಸಲ್ಪಡುವ ದೇವತೆಗಳು ಅಲ್ಲಿಯ ನಿವಾಸಿಗಳು. ಅವರ ವ್ಯಾಪ್ತಿ ದೇಶಕ್ಕೆಲ್ಲ ಹರಡುವುದಿಲ್ಲ. ಈ ವೈವಿಧ್ಯತೆ ಡಾರ್ವಿನ್ನನ ವಿಕಾಸವಾದ ಕರಾಳವಾಗಿ ಕಾಣದಿರುವುದಕ್ಕೆ ಭಾಗಶಃ ಕಾರಣವಿರಬಹುದು, ಅದೂ ಅಲ್ಲದೆ, ನಮ್ಮ ಅನೇಕ ಮತಗಳ ಧರ್ಮಗುರುಗಳಿಗೆ ಡಾರ್ವಿನ್ನನ ವಿಕಾಸವಾದದ ಪರಿಚಯವಿಲ್ಲ. ಅದನ್ನು ತಿಳಿದುಕೊಳ್ಳುವ ಕುತೂಹಲವೂ ಇಲ್ಲ. ಆದ್ದರಿಂದ ತಮ್ಮ ಮತಕ್ಕೂ, ವಿಜ್ಞಾನಕ್ಕೂ ಇರಬಹುದಾದ ವೈರುಧ್ಯ ಅವರಿಗೆ ಗೋಚರಿಸುವುದಿಲ್ಲ. ಒಟ್ಟಿನಲ್ಲಿ, ನಮ್ಮ ಶಾಲಾ, ಕಾಲೇಜುಗಳಲ್ಲಿ ವಿಕಾಸವಾದವನ್ನು ಬೋಧಿಸಬಾರದು ಎಂದು ಯಾವ ಮಠಾಧೀಶರೂ ತಕರಾರು ಮಾಡಿಲ್ಲ ಎನ್ನುವುದೇ ನಮಗೆ ಸಮಾಧಾನದ ವಿಷಯವಾಗಿದೆ.

**ಪ್ರೊ॥ ಎಂ. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯಾಲಜಿ ವಿಭಾಗ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು – ೫೬೦ ೦೧೨

ಎಂ. ಅಬ್ದುಲ್ ರೆಹಮಾನ್ ಪಾಷ

# ಮನುಷ್ಯರಲ್ಲಷ್ಟೇ ಏಕೆ ದೇವರು, ಧರ್ಮ?

ನಾಯಿ, ಹಸು, ಕುದುರೆ, ತಿಮಿಂಗಿಲ, ಅಮೀಬಾ, ಹಾವು, ಕಾಗೆ ಇವುಗಳಲ್ಲಿ ದೇವರಿಲ್ಲ. ಅಂದರೆ ಯಾವುದೇ ಪಶು, ಪಕ್ಷಿ, ಸರೀಸೃಪ, ಜಲಜೀವಿಗಳಲ್ಲಿ ದೇವರಾಗಲೀ ಧರ್ಮವಾಗಲೀ ಪವಿತ್ರ ಗ್ರಂಥಗಳಾಗಲೀ ಇಲ್ಲ. ಅವು ಮಂದಿರ, ಮಸೀದಿ, ಈದಗಾ, ಚರ್ಚು, ದರ್ಗಾಗಳನ್ನು ಕಟ್ಟುವುದಿಲ್ಲ, ಕೆಡುಹುವುದಿಲ್ಲ; ಯಾತ್ರಾಸ್ಥಳ, ಪವಿತ್ರ ಯಾತ್ರೆಗಳಿಲ್ಲ, ಪಲ್ಲಕ್ಕಿ ಉತ್ಸವ, ಜಾತ್ರೆ, ಮೆರವಣಿಗೆಗಳಿಲ್ಲ. ದೇವರ ಮತ್ತು ಧರ್ಮಗಳ ಸ್ಥಾಪಕರಾಗಲೀ, ಪ್ರತಿಪಾದಕರಾಗಲೀ, ರಕ್ಷಕರಾಗಲೀ ಇಲ್ಲ. ಅದಕ್ಕೇ ಅವು ನೆಮ್ಮದಿಯಿಂದ ಇರುತ್ತವೆ; ತಮ್ಮನ್ನು ತಾವು ನಿಸರ್ಗಕ್ಕೆ ಒಡ್ಡಿಕೊಂಡು ಬದುಕುತ್ತವೆ; ತಮ್ಮ ತಮ್ಮ ಸಹಜೀವಿಗಳಲ್ಲೇ ತಾರತಮ್ಯ ಹುಡುಕಿ ಕಗ್ಗೊಲೆ, ಅತ್ಯಾಚಾರ ಮಾಡುವ ದುರಂತಕ್ಕೆ ಒಳಗಾಗಿಲ್ಲ.

ದೇವರು, ಧರ್ಮ ಇತ್ಯಾದಿ ಇರುವುದು ನಿಸರ್ಗದಲ್ಲಿ ಮನುಷ್ಯರಲ್ಲಿ ಮಾತ್ರ. ಎಂದರೆ ದೇವರು ಮತ್ತು ಧರ್ಮ 'ಸಾಮಾಜಿಕ ಸಂಗತಿ' ಅಥವಾ ವಿದ್ಯಮಾನ; ಅದು ನೈಸರ್ಗಿಕ ಅಲ್ಲ ಎಂಬುದು ಖಾತ್ರಿಯಾಯಿತು. ಹಾಗೆಯೇ ದೇವರು ಮತ್ತು ಧರ್ಮ ವಿಶ್ವದಲ್ಲಿ ಕೇವಲ ಪುಟ್ಟ ಧೂಳಿನ ಕಣಕ್ಕೂ ಸಮಾನವಲ್ಲದ ಭೂಗ್ರಹಕ್ಕೆ ಸೀಮಿತ. ಯಾವುದೇ ಧರ್ಮದಲ್ಲಿ ನಾವು ಅಂದುಕೊಂಡಿರುವ ದೇವರು ಇಡೀ 'ವಿಶ್ವದ ಸೃಷ್ಟಿಕರ್ತ' ಎಂದು ಭಾವಿಸುತ್ತೇವೆ. ಆದರೂ, ನಾವು ಈಗಾಗಲೇ ಬಿಲಿಯಗಟ್ಟಲೆ ಮೈಲಿಗಳವರೆಗೆ ಕಣ್ಣು ಹಾಯಿಸಿರುವ ಹಾಗೆ ಇನ್ನೆಲ್ಲಿಯೂ ಮನುಷ್ಯರಾಗಲೀ, ಅವರಂತಿರುವ ದೇವರುಗಳಾಗಲೀ, ದೇವರುಗಳ ಉಪಾಸನೆ, ಜೋಪಾಸನೆಗಾಗಿ ಸೃಷ್ಟಿಯಾಗಿರುವ ಧರ್ಮಗಳಾಗಲೀ, ಸಂಸ್ಥೆಗಳಾಗಲೀ ಕಂಡುಬರುವುದಿಲ್ಲ. ಎಂದರೆ, ದೇವರು, ಧರ್ಮ ಎನ್ನುವ ಪರಿಕಲ್ಪನೆ ಭೂಗ್ರಹಕ್ಕೆ, ಅದರಲ್ಲೂ ಮನುಷ್ಯ ಜೀವಿಗೆ ಮಾತ್ರ ಸೀಮಿತವಾದ ಸಾಮಾಜಿಕ, ರಾಜಕೀಯ, ಆರ್ಥಿಕ ವಿದ್ಯಮಾನ. ದೇವರು ಮನುಷ್ಯರಲ್ಲಷ್ಟೇ ಇದ್ದಾನೆ ಎನ್ನುವುದರಲ್ಲಿ ಮನುಷ್ಯನ ಅಂಥ ವಿಶೇಷತೆ ಏನು?

**ಪಶುಪಕ್ಷಿಗಳು ಸುಳ್ಳು ಹೇಳುವುದಿಲ್ಲ :** ಭೂಗ್ರಹದ ಮೇಲಿನ ಇಡೀ ಜೀವಜಗತ್ತಿನಲ್ಲಿ ಸುಳ್ಳು ಹೇಳುವ ಪ್ರಾಣಿಯೆಂದರೆ, ಮನುಷ್ಯ ಮಾತ್ರ. ಪಶುಪಕ್ಷಿಗಳಲ್ಲಿಯೂ ತಮ್ಮತಮ್ಮ ಜೀವಕುಲದಲ್ಲಿ ಪರಸ್ಪರ ಸಂವಹನವಿದೆ. ಸಾಕಷ್ಟು ನಿಖರವಾಗಿದೆ. ಆದರದು ತುಂಬ ಸೀಮಿತವಾಗಿದೆ. ಆದರೆ ವಿಕಾಸದ ಹಾದಿಯಲ್ಲಿ ಮನುಷ್ಯನಿಗೆ ಮಾತ್ರ ಸಾಧಿತವಾಗಿರುವ ಆಡುಮಾತಿನ ಭಾಷೆಯು ಅತ್ಯಂತ ಸೃಜನಶೀಲ, ಅಸೀಮ ಸಾಧ್ಯತೆಯುಳ್ಳ ಒಂದು ಕೌಶಲ್ಯವಾಗಿದೆ. ಮನುಷ್ಯನಿಗೆ ಮಾತ್ರ ವರ್ತಮಾನದ ಜೊತೆಗೆ ಭೂತ ಭವಿಷ್ಯತ್ತಿನ ಬಗ್ಗೆಯೂ ಮಾತಾಡಬಲ್ಲ ಸಾಮರ್ಥ್ಯವಿದೆ. ಇನ್ನು ಮಾತನ್ನು ಬರಹದಲ್ಲಿ, ಚಿತ್ರದಲ್ಲಿ ಹಿಡಿದಿಡುವ ಸಾಧ್ಯತೆ ಕಂಡುಕೊಂಡ ನಂತರವಂತೂ ಮನುಷ್ಯನ ಭಾಷೆಯ ಸಾಮರ್ಥ್ಯಕ್ಕೆ ಮಿತಿಯಿಲ್ಲದಾಗಿದೆ.

ಸೀಮಿತವಾದ ಪಶುಪಕ್ಷಿಗಳ ಭಾಷೆಯಲ್ಲಿ ಪ್ರಚೋದನೆಗೆ ತಕ್ಕ ಪ್ರತಿಕ್ರಿಯೆ ಇರುತ್ತದೆ. ಉದಾಹರಣೆಗೆ, ಕಾಗೆ ಆಹಾರವನ್ನು ಕಂಡಾಗ ತನ್ನ ಬಳಗವನ್ನು ಕರೆಯಲು ಒಂದು ಮಾದರಿಯಲ್ಲಿ ಕೂಗುತ್ತದೆ; ಕೋಳಿಗೆ ಹದ್ದಿನ ಅಪಾಯ ಕಂಡಾಗ ಅದು ಒಂದು ನಿಗದಿತ ನಮೂನೆಯಲ್ಲಿ ಕೂಗಿ ತನ್ನ ಮರಿಗಳಿಗೆ ಎಚ್ಚರಿಕೆ ನೀಡುತ್ತದೆ. ಅಂದರೆ, ಪ್ರಚೋದನೆ ಇಲ್ಲದೆ ಅದಕ್ಕಾಗಿ ಬರುವ ಪ್ರತಿಕ್ರಿಯೆ ಬರುವುದಿಲ್ಲ; ಎಂದರೆ ನಿಜವಾದ ಅಪಾಯವಿಲ್ಲದೆ (ಅಪಾಯದ ಭ್ರಮೆಯಾದರೂ ಆಗಿರುತ್ತದೆ) ಕೋಳಿ ಆ ರೀತಿಯಲ್ಲಿ ಕೂಗುವುದು ಅಪರೂಪ. ಇಲ್ಲವೇ ಇಲ್ಲ ಎನ್ನಬಹುದು. ಅದಕ್ಕೆ ಕೋಳಿ, ಅಂತೆಯೇ ಯಾವುದೇ ಪಶುಪಕ್ಷಿಗಳು ಯಾವಾಗಲೂ ಸುಳ್ಳು ಹೇಳುವುದಿಲ್ಲ. ಮನುಷ್ಯನ ಭಾಷೆಗೆ ಈ ಪ್ರಚೋದನೆ–ಪ್ರತಿಕ್ರಿಯೆಗಳ ಸಂಬಂಧ ಯಾವಾಗಲೂ ಅನ್ವಯಿಸುವುದಿಲ್ಲ. ಪ್ರಚೋದನೆಗೆ ತಕ್ಕ ಪ್ರತಿಕ್ರಿಯೆ ಬರಬಹುದು; ಅಥವಾ ತಕ್ಕುದಲ್ಲದ ಇನ್ಯಾವುದೇ ಪ್ರತಿಕ್ರಿಯೆ ಸುಲಭವಾಗಿ ಬರಬಲ್ಲದು.

ಮನುಷ್ಯ ತನಗೆ ಸಿಕ್ಕಾಪಟ್ಟೆ ಹಸಿವೆಯಾಗಿದ್ದರೂ, ಯಾರಾದರೂ ಊಟಕ್ಕೆ ಕರೆದರೂ, 'ಇಲ್ಲ, ನಾನು ಈಗಷ್ಟೆ ಊಟ ಮಾಡಿ ಬಂದೆ' ಎನ್ನಬಲ್ಲ. ಹಾಗೆ ಹೇಳುವುದೇ ಸಂಸ್ಕೃತಿ. ಕರೆದ ಕೂಡಲೇ ಹಸಿವೆಯಾಗಿದ್ದರೂ, ಊಟಕ್ಕಾಗಿ ಒಪ್ಪಿಕೊಳ್ಳುವುದು ಸೌಜನ್ಯವಲ್ಲ ಎಂಬುದು ಮನುಷ್ಯನ ಸಂಸ್ಕಾರ. 'ನಾನು ಮತ್ತು ಒಬಾಮಾ ಚಡ್ಡಿ ದೋಸ್ತುಗಳು', 'ನನ್ನ ಕನಸಿನಲ್ಲಿ ಅಲ್ಲಾಹ್ ಬಂದು, 'ನೀನು ಒಬ್ಬ ದೇವಮಾನವ' ಎಂದು ಹೇಳಿದ' ಎಂದು ನಾನು ಹೇಳಬಹುದು. ಭಾಷೆಯ ಮತ್ತು ಅದರಿಂದಾಗಿ ದಕ್ಕಿರುವ ಸೃಜನಶೀಲ ಸಾಮರ್ಥ್ಯದಿಂದಾಗಿ ಮನುಷ್ಯ ಇಲ್ಲದ್ದನ್ನೂ ಇರುವ ಹಾಗೆ, ಸುಳ್ಳನ್ನೂ ಸತ್ಯದ ತಲೆಯ ಮೇಲೆ ಹೊಡೆದ ಹಾಗೆ ಹೇಳಬಲ್ಲ. ಇದೊಂದು ಗುಣಾತ್ಮಕ ಕೌಶಲ್ಯವೇ ಸರಿ. ಇಲ್ಲವಾದರೆ ನಮ್ಮಲ್ಲಿ ಇಷ್ಟೊಂದು ಸೃಜನಶೀಲ ಸಾಹಿತ್ಯ ಸಾಧ್ಯವಾಗುತ್ತಿರಲಿಲ್ಲ. ಅದೇ ರೀತಿ, ದೇವರು, ಧರ್ಮಗಳ ಕುರಿತು ವ್ಯಾಖ್ಯಾನಗಳು, ಪುರಾಣಗಳು, ಧರ್ಮಗ್ರಂಥಗಳ ರಚನೆ, ಪ್ರಚಾರ, ಪ್ರತಿಪಾದನೆ ಸಾಧ್ಯವಾಗುತ್ತಿರಲಿಲ್ಲ. ಮನುಷ್ಯ ಏನನ್ನಾದರೂ ಹೇಳಬಲ್ಲ; ಬರೆಯಬಲ್ಲ; ಮನುಷ್ಯ ಹೇಳಿದ್ದೆಲ್ಲ, ಬರೆದಿದ್ದೆಲ್ಲ ಸತ್ಯವಾಗಲೇ ಬೇಕಿಲ್ಲ ಎಂಬುದಷ್ಟೆ ಇಲ್ಲಿನ ಅಭಿಪ್ರಾಯ.

ಪ್ರತಿಯೊಂದು ಜೀವಿಯಲ್ಲಿಯೂ ಬದುಕುಳಿಯುವ ಪ್ರೇರಣೆ ನಿಸರ್ಗದತ್ತವಾಗಿ ಒಡಮೂಡಿರುತ್ತದೆ. ಎಂದರೆ, ಪ್ರತಿಯೊಂದು ಜೀವಿಯೂ ತಾನು ಮತ್ತು ತನ್ನ ಸಂತತಿ ಉಳಿದುಕೊಂಡು ಹೋಗಲು ನಿಸರ್ಗದೊಡನೆ ನಿರಂತರ ಸಂಘರ್ಷ ಮಾಡಲೇಬೇಕು. ಅದಕ್ಕಾಗಿ ನಿಸರ್ಗದ ಆಗುಹೋಗುಗಳನ್ನು, ಅನುಕೂಲ ಅನಾಹುತಗಳನ್ನು, ನಿಸರ್ಗದ ನಿಯಮಗಳನ್ನು ಅರ್ಥಮಾಡಿಕೊಳ್ಳುವುದು ಅನಿವಾರ್ಯ. ಪ್ರಾಣಿ ಪಕ್ಷಿಗಳು ಇದನ್ನು ನೈಜವಾದ ಪ್ರೇರಣೆಯಿಂದ ಮಾತ್ರ ಮಾಡುತ್ತವೆ; ಹೆಚ್ಚಾಗಿ ನಿಸರ್ಗದ ಕರುಣೆಯ ಮೇಲೆ ಬದುಕುತ್ತವೆ. ಆದರೆ ಸೃಜನಶೀಲ ಬುದ್ಧಿವಂತಿಕೆಯನ್ನು ಬೆಳೆಸಿಕೊಂಡು ಪಶುಪಕ್ಷಿಗಳಿಗಿಂತ ಭಿನ್ನನಾಗಿರುವ ಮನುಷ್ಯ ನಿಸರ್ಗದ ಆಗುಹೋಗುಗಳನ್ನು ವಿಶ್ಲೇಷಿಸುವಲ್ಲಿ, ಅರ್ಥಮಾಡಿಕೊಳ್ಳುವಲ್ಲಿ ಬೇರೊಂದು ಮಾರ್ಗವನ್ನು ಹಿಡಿಯುತ್ತಾನೆ. ಭೂಮಿಯ ಮೇಲೆ ನೈಜವಾಗಿ ನಡೆಯುವ ವಿದ್ಯಮಾನಗಳಿಗೆ ಅರ್ಥವನ್ನು ಬೇರೊಂದು ಲೋಕದಲ್ಲಿ ಹುಡುಕುತ್ತಾನೆ. ಇದರಿಂದಾಗಿಯೇ ದೇವರು, ಧರ್ಮ, ಅಧ್ಯಾತ್ಮ ಇವೆಲ್ಲ ಹುಟ್ಟಿಕೊಳ್ಳುವುದು. ಇಂದು ಜಗತ್ತನ್ನು ಅರ್ಥಮಾಡಿಕೊಳ್ಳಲು ನಮಗೆ ವಿವಿಧ ಬಗೆಯ ವಿಜ್ಞಾನಗಳಿವೆ, ಅವಲೋಕನ, ಅಳತೆ, ಪ್ರಯೋಗ, ಪರೀಕ್ಷೆ, ಲೆಕ್ಕಾಚಾರ ಇತ್ಯಾದಿಗಳಿಗಾಗಿ ಹೆಚ್ಚು ಹೆಚ್ಚು ನಿಖರವಾದ ಸಾಧನ, ವಿಧಾನ, ಸೂತ್ರಗಳಿವೆ. ಇವು ಮನುಷ್ಯನಿಗೆ ದಕ್ಕುವ ಮುಂಚೆ, ಜಗತ್ತನ್ನು ಅರ್ಥಮಾಡಿಕೊಳ್ಳಲು ಕೇವಲ ಪರಿಕಲ್ಪನೆ, ಸಿದ್ಧಾಂತ, ವಿಚಾರಗಳನ್ನು ಮಾತ್ರ ಬಳಸಲಾಗುತ್ತಿತ್ತು. ಪ್ರಯೋಗ, ಪರೀಕ್ಷೆಯ ಮೂಲಕ ಅಂಥ ಸಿದ್ಧಾಂತಗಳನ್ನು ದೃಢಪಡಿಸಲು ಸಾಧ್ಯವಾಗುತ್ತಿರಲಿಲ್ಲ; ಅದರ ಅಗತ್ಯವೂ ಸಿದ್ಧಾಂತಿಗಳಿಗೆ ಇರಲಿಲ್ಲ. ನಂಬಿಕೆಯೇ ನಂಬಿಕೆಗೆ ಆಧಾರ. ಹೀಗಾಗಿ, ಆಧುನಿಕ ಪ್ರಯೋಗಶೀಲ ವಿಜ್ಞಾನ ಕ್ರಮೇಣ ವಿಕಾಸ ಹೊಂದುವುದಕ್ಕಿಂತ ಮುಂಚೆ ಪರಿಕಲ್ಪನೆ, ಅಧ್ಯಾತ್ಮದ ಮೂಲಕವೇ ಜಗತ್ತನ್ನು ಅರ್ಥಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು.

**ಎರಡೂ ಜಗತ್ತುಗಳ ಜೀವಿ :** ಹಾಗಾದರೆ, ದೇವರು, ಧರ್ಮಗಳ ಅಗತ್ಯ ಈಗಿನ ಅತ್ಯಾಧುನಿಕ ವೈಜ್ಞಾನಿಕ ಜಗತ್ತಿನಲ್ಲಿ ಇರಬಾರದಾಗಿತ್ತಲ್ಲ! ಇದಕ್ಕೂ ಮನುಷ್ಯ ಜೀವಿಯ ವಿಶೇಷತೆಯೇ ಕಾರಣ. ಮನುಷ್ಯ ಏಕಕಾಲದಲ್ಲಿ ಎರಡೂ ಜಗತ್ತುಗಳಲ್ಲಿ ಅನಾಯಾಸ ಓಡಾಡಿಕೊಂಡು ಇರಬಲ್ಲ. ಒಂದು ವಾಸ್ತವವಾದ ಭೌತಿಕ ಜಗತ್ತು, ಇನ್ನೊಂದು ಕಾಲ್ಪನಿಕ, ಭ್ರಮಾತ್ಮಕ, ಭಾವನಾತ್ಮಕ, ಆಧ್ಯಾತ್ಮಿಕ, ಪೌರಾಣಿಕ ಜಗತ್ತು. ಇದು ಮನುಷ್ಯನಿಗೆ ಮಾತ್ರ ಸಾಧ್ಯ; ಪಶುಪಕ್ಷಿಗಳಿಗೆ ಇದು ಸಾಧ್ಯವಿಲ್ಲ. ಅವು ಕೇವಲ ಭೌತಿಕ ಜಗತ್ತಿನ ನೀತಿ, ನಿಯಮಗಳಿಗೆ ಅಂಟಿಕೊಂಡು ಬದುಕುತ್ತವೆ; ಸಾಯುತ್ತವೆ. ಮನುಷ್ಯ ಮಾತ್ರ ಭೌತಿಕ ಜಗತ್ತಿನ ಅರಿವು, ಅನ್ವಯ, ಪ್ರಯೋಗ, ಪ್ರಯೋಜನ ಸಾಲುವುದಿಲ್ಲ ಎಂಬ ಭಯಕ್ಕೆ ಒಳಗಾಗಿ, ಅಭೌತಿಕವಾದ ಜಗತ್ತಿನಲ್ಲಿ ಶಾಂತಿ, ಸಾರ್ಥಕತೆಯನ್ನು ಹುಡುಕತೊಡಗುತ್ತಾನೆ. ಇದರ ಫಲವಾಗಿಯೇ ದೇವರು, ದೇವತೆಗಳು ಇತ್ಯಾದಿಗಳ ಸೃಷ್ಟಿಯಾಗುತ್ತದೆ. ತೊಂದರೆ ಇಲ್ಲ. ಅವೆಲ್ಲವೂ ಇನ್ನೊಂದು ಲೋಕಕ್ಕೆ ಸಂಬಂಧಿಸಿದವು. ಮನುಷ್ಯನೂ ಸೇರಿದ ಹಾಗೆ ಇಡೀ ಜೀವಕೋಟಿ, ನಿರ್ಜೀವಿ ವಸ್ತುಗಳೊಂದಿಗೆ ಹಂಚಿಕೊಂಡು ಬದುಕುತ್ತಿರುವ ಭೌತಿಕ ಜಗತ್ತಿಗೂ ಅದಕ್ಕೂ ಯಾವುದೇ ಸಂಬಂಧವಿಲ್ಲ ಎಂಬ ಸ್ಪಷ್ಟ ಅರಿವಾದರೂ ಇದ್ದಿದ್ದರೆ ಈಗ ನಾವು ಅನುಭವಿಸುತ್ತಿರುವ ಅನೇಕ ತೊಂದರೆಗಳು ಇರುತ್ತಿರಲಿಲ್ಲ.

> **ಆಣೆಕಟ್ಟು**
>
> ಕುಟ್ಟುವ ಸಾಧನವಿಲ್ಲದೆ
> ಮೆಣಸಿನ ಕಾಯಿಯನ್ನು
> **ಕುಟ್ಟಲಾಗುವುದಿಲ್ಲ**
> ನದಿ ಉಕ್ಕಿ ಹರಿಯುವಾಗ
> ಗೆಳೆಯಾ, ಆಣೆಕಟ್ಟು
> **ಕಟ್ಟಲಾಗುವುದಿಲ್ಲ !**
>
> **ಲಾಲಸಾಬ ಎಚ್. ನದಾಫ,** ಬಾಗಲಕೋಟ

ಪರಮಾಣು, ಏಕಕೋಶ ಜೀವಿಗಳಿಂದ ಹಿಡಿದು, ವಿಶ್ವದ ಗ್ರಹಣ, ನಕ್ಷತ್ರ, ಗ್ಯಾಲಕ್ಸಿಗಳವರೆಗೆ, ನಾವೂ ಒಂದು ಭಾಗವಾಗಿರುವ ಈ ಭೌತಿಕ ಜಗತ್ತು ಕೆಲವೇ ಕೆಲವು ನೈಸರ್ಗಿಕ ನಿಯಮಗಳ ಪ್ರಕಾರ ನಡೆಯುತ್ತದೆ. ಅವುಗಳಲ್ಲಿ ಹಲವು ನಿಯಮಗಳನ್ನು ವಿಜ್ಞಾನಿಗಳು ಕಾಲಕಾಲಕ್ಕೆ ಕಂಡುಕೊಳ್ಳುತ್ತಾ ಬಂದಿದ್ದಾರೆ. ನಮಗೆ ತಿಳಿದಿರುವ ಕಾಲದಿಂದಲೂ ಜಗತ್ತಿನಲ್ಲಿ ಏನಾದರೂ ಪ್ರಗತಿ, ಅಭಿವೃದ್ಧಿಯಾಗಿದ್ದರೆ ಅದು ಕೇವಲ ನಿಸರ್ಗದ ಈ ನಿಯಮಗಳ ಅರಿವು ಮತ್ತು ಅನ್ವಯದಿಂದ ಮಾತ್ರ. ಉದಾಹರಣೆಗೆ, ಕಲ್ಲನ್ನು ಮೇಲಕ್ಕೆ ತೂರಿದರೆ ಅದಕ್ಕೆ ನೀಡಲಾಗಿರುವ ಶಕ್ತಿ ಮುಗಿದ ಮೇಲೆ ಅದು ಮತ್ತೆ ಭೂಮಿಗೆ ಬಂದು ಬೀಳಲೇಬೇಕು. ಉಕ್ಕಿನಿಂದ ಮಾಡಿದ ಬೃಹತ್ ಹಡಗು ನೀರಿನಲ್ಲಿ ತೇಲುತ್ತದೆ. ಆದರೆ ನಾವು ಮನುಷ್ಯರು ನೀರಿನ ಮೇಲೆ ನಡೆಯಲು ಸಾಧ್ಯವಿಲ್ಲ. ಯಾವುದೇ ವಸ್ತುವನ್ನು ಶೂನ್ಯವಾಗುವಂತೆ ಮಾಯ ಮಾಡಲು, ಶೂನ್ಯದಿಂದ ಯಾವುದಾದರೂ ವಸ್ತುವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಏನೇ ಇದ್ದರೂ ದ್ರವ್ಯ ಮತ್ತು ಶಕ್ತಿ ಪರಸ್ಪರ ರೂಪದಲ್ಲಿ ಪರಿವರ್ತನೆಗೊಳ್ಳಬಹುದು. ಹೀಗೆ ನಾವಿರುವ ಜಗತ್ತು ಇಂಥ ಕೆಲವು ನೈಸರ್ಗಿಕ ನಿಯಮಗಳ ಅನುಸಾರ ನಡೆಯುತ್ತದೆ. ಮನುಷ್ಯನ ವಿಕಾಸವಲ್ಲ; ವಿಶ್ವದ ವಿಕಾಸದ ಕಾಲದಿಂದಲೂ ಭೌತಿಕ ಜಗತ್ತಿನಲ್ಲಿ ನಡೆಯುತ್ತಿರುವುದು ಇದೇ ರೀತಿ; ನೈಸರ್ಗಿಕ ನಿಯಮಗಳಿಗೆ ಬದ್ಧವಾಗಿ ನಡೆಯುತ್ತಿದೆ. ಎಂದರೆ ಇವತ್ತು ಆಗದೇ ಇರುವುದು ಎಂದಿಗೂ ಆಗುತ್ತಿರಲಿಲ್ಲ. ಉದಾಹರಣೆಗೆ, ಮನುಷ್ಯ ಪಕ್ಷಿಯಂತೆ ಕೈ ಬೀಸಿ ಗಾಳಿಯಲ್ಲಿ ಹಾರುವುದು, ಪರ್ವತವನ್ನು ಕಿರುಬೆರಳಲ್ಲಿ ಎತ್ತುವುದು, ಇಂದು ಸಾಧ್ಯವಿಲ್ಲವೆಂದರೆ, ಅದು ಎಂದಿಗೂ ಸಾಧ್ಯವಿರಲಿಲ್ಲ. ಆದರೆ, ಪಾರಲೌಕಿಕ, ಕಲ್ಪನಾತ್ಮಕ, ಭಾವನಾತ್ಮಕ, ಸೃಜನಶೀಲ ಪೌರಾಣಿಕ ಜಗತ್ತಿನ ಕಥೆಯೇ ಬೇರೆ. ಅಲ್ಲಿನ ನಿಯಮಗಳೇ ಬೇರೆ. ಅಲ್ಲಿ ಜೀಸಸ್ ಬೆರಳನ್ನು ನೀರಲ್ಲಿ ಅದ್ದಿದರೆ ಅದು ವೈನ್ ಆಗುತ್ತದೆ. ಮೋಸಸ್ ಕೋಲನ್ನು ಬೀಸಿದರೆ ಕೆಂಪು ಸಮುದ್ರವು ಒಡೆದು ಇಬ್ಭಾಗವಾಗುತ್ತದೆ. ಆಂಜನೇಯ ಇಡೀ ಸಂಜೀವಿನಿ ಪರ್ವತವನ್ನು ಕೈಯಲ್ಲಿ ಹಿಡಿದು ಮೈಲುಗಟ್ಟಲೆ ಗಾಳಿಯಲ್ಲಿ ಹಾರುತ್ತಾನೆ. ಭೀಮ ಆನೆಯ ಬಾಲವನ್ನು ಹಿಡಿದು ಗರಗರ ತಿರುಗಿಸಿ ಕೈ ಬಿಟ್ಟನೆಂದರೆ ಆನೆ ಒಂಭತ್ತು ಗಾವುದ ದೂರ ಹೋಗಿ ಬೀಳುತ್ತದೆ. ಮಸ್ತಾನ್ ಔಲಿಯಾ ಅವರು ಗೋಡೆಯ ಮೇಲೆ ಕುಳಿತು ಅದನ್ನೇ ವಾಹನವನ್ನಾಗಿ ಮಾಡಿಕೊಂಡು ಸಂಚಾರ ಮಾಡುತ್ತಾರೆ. ಮಹಮ್ಮದ್ ಪೈಗಂಬರರು ಸಜೀವವಾಗಿ ಏಳು ಸ್ವರ್ಗಗಳನ್ನು ಭೇಟಿ ಮಾಡಿ ಬರುತ್ತಾರೆ. ಹೌದು, ಇದೆಲ್ಲವೂ ಖಂಡಿತ ಸಾಧ್ಯ. ಭೌತಿಕವಲ್ಲದ, ವಾಸ್ತವವಲ್ಲದ, ಅಲೌಕಿಕವಾದ, ಪೌರಾಣಿಕವಾದ, ಆಧ್ಯಾತ್ಮಿಕವಾದ ಜಗತ್ತಿನಲ್ಲಿ ಇವೆಲ್ಲವೂ ಸುಲಭವಾಗಿ ಸಾಧ್ಯ. ಅಲ್ಲಿನ ನಿಯಮಗಳೇ ಬೇರೆ. ಆದರೆ ಒಂದು ಮಾತನ್ನು ತುಂಬ ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕು. ಇವೆರಡೂ ಲೋಕಗಳು ಬೇರೆ ಬೇರೆ. ಭೌತಿಕ ಜಗತ್ತಿನಲ್ಲಿ ನಡೆಯುವ ನಿಯಮಗಳು ಕಲ್ಪನಾತ್ಮಕ ಜಗತ್ತಿನಲ್ಲಿ ನಡೆಯಬಹುದು. ಆದರೆ, ಮೇಲೆ ಉದಾಹರಿಸಿದ ರೀತಿಯಲ್ಲಿ, ಪೌರಾಣಿಕ ಜಗತ್ತಿನ ನಿಯಮಗಳು ನಾವು ಬದುಕುತ್ತಿರುವ ಭೌತಿಕ ಜಗತ್ತಿನಲ್ಲಿ ನಡೆಯುವುದಿಲ್ಲ.

**ತಾತ್ಪರ್ಯ ಇಷ್ಟೆ:** ನಾವು ಬದುಕುವ ವಾಸ್ತವ, ಭೌತಿಕ ಜಗತ್ತಿನ ಸಮಸ್ಯೆಗಳಿಗೆ ಪರಿಹಾರಗಳೂ ಈ ಜಗತ್ತಿನಲ್ಲಿಯೇ ಇರಲು ಸಾಧ್ಯ. ಇಲ್ಲಿನ ಸಮಸ್ಯೆಗಳಿಗೆ ಅಲೌಕಿಕ ಜಗತ್ತಿನಲ್ಲಿ ಪರಿಹಾರ ಹುಡುಕುವುದು ಬೆಳಕಿದ್ದರೂ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಹುಡುಕಾಡುವ ಮೂರ್ಖತನವಾಗುತ್ತದೆ. ಭೂಮಿಯಲ್ಲಾಗುವ ಪ್ರಳಯ, ಕ್ಷಾಮ, ಮಹಾನ್ ವ್ಯಕ್ತಿಗಳ ಮರಣ ಇವುಗಳಿಗೆಲ್ಲಾ ಧೂಮಕೇತು ದರ್ಶನವೇ ಕಾರಣ ಎಂದು ನಂಬಿದ್ದ ಕಾಲವೊಂದಿತ್ತು. ಹಾಗೆಯೇ ನವಗ್ರಹಗಳಲ್ಲಿ ಇಬ್ಬರಾಗಿರುವ ರಾಹು ಮತ್ತು ಕೇತು ಎಂಬುವವರು ರಾಕ್ಷಸರು, ಅವರು ಸೂರ್ಯ ಮತ್ತು ಚಂದ್ರನನ್ನು ನುಂಗಿದಾಗ ಗ್ರಹಣಗಳು ಉಂಟಾಗುತ್ತವೆ; ಆದ್ದರಿಂದ ಗ್ರಹಣ ಕಾಲ, ರಾಹುಕಾಲ ಬಹಳ ಅಶುಭಕಾರಿ ಎಂದು ಒಂದು ಕಾಲದಲ್ಲಿ ನಂಬಿದ್ದು ಆಶ್ಚರ್ಯಕರ ಸಂಗತಿಯೇನಲ್ಲ. ಪ್ರತಿಯೊಬ್ಬ ವ್ಯಕ್ತಿ, ಸಮುದಾಯ, ಸಮಾಜ ತಾನಿರುವ ಕಾಲದಲ್ಲಿ ತನಗೆ ದಕ್ಕಿರುವ ಜ್ಞಾನ ಮತ್ತು ಅರಿವಿನ ಸಾಧನಗಳನ್ನು ಅವಲಂಬಿಸಿಯೇ ಹೆಚ್ಚಿನ ಸತ್ಯಗಳನ್ನು ಕಂಡುಕೊಳ್ಳಲು ಸಾಧ್ಯ. ಅಂದಿಗೆ ನಭದಲ್ಲಿ ನಡೆಯುವ ಈ ಸಂಗತಿಗಳು ವಿಸ್ಮಯಕಾರಿಯಾಗಿ ಕಂಡವು. ಅದೇ ಕಾಲದಲ್ಲಿ ಕಾಕತಾಳೀಯವಾಗಿ ನಡೆದ ಮಾರಕ ಸಂಗತಿಗಳಿಗೆ ಅವುಗಳನ್ನು ತಾಳೆ ಹಾಕಿದ್ದು ಸಹಜವಾಗಿತ್ತು. ಆದರೆ ಇಂದು ನಮಗೆ ಧೂಮಕೇತು ಒಂದು ನಿರ್ಜೀವ ಆಕಾಶಕಾಯ, ಇಡೀ ಆಕಾಶವನ್ನು ತಡಕಾಡಿದರೂ ರಾಹು ಮತ್ತು ಕೇತು ಎಂಬ ಗ್ರಹಗಳು ನಮಗೆ ಸಿಗುವುದೇ ಇಲ್ಲ; ಇನ್ನು ಅವು ರಾಕ್ಷಸರಾಗಿರಲು ಸಾಧ್ಯವೇ ಇಲ್ಲ. ಸೂರ್ಯ ಮತ್ತು ಚಂದ್ರ ಗ್ರಹಣ ಸೌರವ್ಯೂಹದಲ್ಲಿ ನಡೆಯುವ ಭೌತಿಕ ವಿದ್ಯಮಾನಗಳು ಎಂಬುದು ಈಗ ಪ್ರಾಥಮಿಕ ಶಾಲೆಯ ಮಕ್ಕಳಿಗೂ ಗೊತ್ತಿದೆ.

**ಧರ್ಮ ಮತ್ತು ಆಚರಣೆ :** ಧರ್ಮ ಎಂದರೇನು ? ನಾವು ಏನೇನು ಅಂದುಕೊಳ್ಳುತ್ತೇವೋ ಅದು. ಏಕೆಂದರೆ 'ವಾಸ್ತವವಾಗಿ ಧರ್ಮ ಎಂದರೇನು' ಎನ್ನುವುದು ಇಲ್ಲಿ ಪ್ರಸ್ತುತವಲ್ಲ. ಆದರೆ ಅದನ್ನು ಅನುಸರಿಸುತ್ತೇವೆ ಎಂದು ಹೇಳುವ ವಿವಿಧ ಬಗೆಯ ಜನರಲ್ಲಿ ಹಾಗೆಂದರೇನು ಎಂಬ ಪರಿಕಲ್ಪನೆ ಇದೆಯೋ ಅದು ಹೆಚ್ಚು ಪ್ರಸ್ತುತ. ಕೆಲವರು ಪುರಾಣಗಳನ್ನು, ಸಂಹಿತೆಗಳನ್ನು, ಇನ್ನು ಕೆಲವರು ಕೆಲವು ಆಚರಣೆಗಳನ್ನು, ಇನ್ನು ಕೆಲವರು ಕೆಲವು ರೂಢ ನಂಬಿಕೆಗಳನ್ನೇ ಧರ್ಮ ಎಂದು ತಿಳಿಯುತ್ತಾರೆ. ಒಬ್ಬೊಬ್ಬರು ಒಂದೊಂದು ತರಹ ತಿಳಿದಿರುವುದರಿಂದ ಅದನ್ನು ಬೇಕಾದ ಹಾಗೆ ಬಳಸಿಕೊಳ್ಳಲು ಅನುಕೂಲವಾಗುತ್ತದೆ. ನಿಜವಾದ ಧರ್ಮಕ್ಕಿಂತ ಈ ಪ್ರಯೋಜನಕಾರಿ ಧರ್ಮದ್ದೇ ಹಾವಳಿ ಹೆಚ್ಚು.

ಜನರ ಪರಿಕಲ್ಪನೆಯ ಪ್ರಕಾರದ ಪ್ರತಿಯೊಂದು ಧರ್ಮದಲ್ಲಿಯೂ ಒಬ್ಬ ದೇವರ ಅಸ್ತಿತ್ವ ಅನಿವಾರ್ಯ. ದೇವರಿಗೆ ನಿರ್ಗುಣಿ, ನಿರಾಕಾರ, ಸರ್ವಶಕ್ತ, ಸರ್ವಾಂತರ್ಯಾಮಿ ಎಂಬ ವಿಶೇಷಣಗಳನ್ನು ನೀಡಿದರೂ, ದೇವರಿಗೆ ಮನುಷ್ಯನಿಗೆ ಸಹಜವಾದ ಎಲ್ಲಾ ಗುಣಗಳನ್ನು ಆರೋಪಿಸಿಯೇ ಅರ್ಥ ಮಾಡಿಕೊಳ್ಳುವುದು ಮನುಷ್ಯನಿಗೆ ಅನಿವಾರ್ಯ. ಇಸ್ಲಾಂನಲ್ಲಿಯೂ ದೇವರನ್ನು ಪುಲ್ಲಿಂಗ ಸರ್ವನಾಮದಿಂದ (ಅವನು) ಕರೆಯುವುದು; ಬೇರೆ ಧರ್ಮಗಳಲ್ಲಿ ಸ್ತ್ರೀ ಮತ್ತು ಪುರುಷ ದೇವತೆಗಳು, ಮನುಷ್ಯರಂತೆ ಅವರಲ್ಲಿಯೂ ಮದುವೆ, ಮಕ್ಕಳು, ಕಾಮ, ವ್ಯಭಿಚಾರ, ಈರ್ಷೆ, ಮೋಸ ಇವೂ ನುಸುಳಿರುವುದನ್ನು ನೋಡಬಹುದು. ಇದೇ ಮುಂದುವರಿದು, ದೇವರು ಮತ್ತು ದೇವತೆಗಳು

ಸಂಪೂರ್ಣ ದಾಸ್ಯವನ್ನು ಒಪ್ಪಿಕೊಂಡರೆ, ಆರಾಧಿಸಿದರೆ, ಓಲೈಸಿದರೆ, ಬಲಿ, ಎಡೆ, ಕಾಣಿಕೆ ಕೊಟ್ಟರೆ ಮಾತ್ರ ವರ ನೀಡುತ್ತಾರೆ; ಇಲ್ಲವಾದರೆ ಶಾಪ ಕೊಡುತ್ತಾರೆ.

ದೇವರನ್ನು ಇಡೀ ವಿಶ್ವದ ಸೃಷ್ಟಿಕರ್ತ ಎಂದು ನಂಬುವ ಜನರೇ ದೇವರಿಗೆ ಇಂಥ ಕ್ಷುಲ್ಲಕ ರೂಪವನ್ನು, ಗುಣಗಳನ್ನು ನೀಡಿದರೆ, ದೇವರು ಇದ್ದರೆ, ದೇವರಿಗೆ ಅತ್ಯಂತ ಅವಮಾನಕಾರಿಯಾದ ಸಂಗತಿಯೇ ಸರಿ. ಬಿಲಿಯಗಟ್ಟಲೆ ಗ್ಯಾಲಕ್ಸಿಗಳಲ್ಲಿರುವ ಬಿಲಿಯಬಿಲಿಯಗಟ್ಟಲೆ ನಕ್ಷತ್ರ, ಗ್ರಹ ಆಕಾಶಕಾಯಗಳ, ಲಕ್ಷಗಟ್ಟಲೆ ಇತರ ಗ್ರಹಗಳಲ್ಲಿ ಉಗಮಿಸಿರಬಹುದಾದ ಲಕ್ಷಾಂತರ ಜೀವಿಗಳ, ನಿರ್ಜೀವ ವಸ್ತುಗಳ ಸಕಲ ಆಗುಹೋಗುಗಳ ಹೊಣೆಯನ್ನು ಹೊತ್ತಿರುವ ದೇವರಿಗೆ ಒಂದು ಧೂಳಿನ ಕಣಕ್ಕೂ ಸಮಾನವಲ್ಲದ ಭೂಗ್ರಹ ಮಾತ್ರ ಬಹಳ ವಿಶೇಷವಾಗಲು ಕಾರಣವಿಲ್ಲ. ಆದರೂ, ಇಂಥ ಒಂದು ಕ್ಷುಲ್ಲಕ ಗ್ರಹದಲ್ಲಿ ಈಗಿರುವ ಮನುಷ್ಯರ ಸಂಖ್ಯೆ ೭೩೦೦,೦೦೦,೦೦೦. ಮನುಷ್ಯ ಒಂದು ಜೀವಜಾತಿ ಎನ್ನುವುದಾದರೆ ಮನುಷ್ಯನಲ್ಲದೆ, ಭೂಗ್ರಹದಲ್ಲಿರುವ ಇನ್ನೂ ಸುಮಾರು ೮ ಕೋಟಿ ೭೦ ಲಕ್ಷ ಜೀವಜಾತಿಗಳಿವೆ. ಇವೆಲ್ಲವುಗಳ ಜೊತೆಗೆ ಸಕಲ ನಿರ್ಜೀವ ವಸ್ತುಗಳ ಆಗುಹೋಗುಗಳನ್ನೂ ನೋಡಿಕೊಳ್ಳಬೇಕಾದ ದೇವರಿಗೆ ನಾವು, ಒಬ್ಬ ವ್ಯಕ್ತಿ ಎಲ್ಲಿಯ ಲೆಕ್ಕ? ಊಹಿಸಲಿಕ್ಕೂ ಅಸಾಧ್ಯವಾದ ಇಂಥ ಹೊಣೆಯಿರುವ ದೇವರು ನಮ್ಮ ಒಳ್ಳೆಯದರ, ಕೆಟ್ಟದರ ಲೆಕ್ಕಾಚಾರ ಇಡುವ ಕಾರಕೂನ ಎಂದು ಭಾವಿಸಿದರೆ ಇದನ್ನು ದೈವಭಕ್ತಿ ಎನ್ನಬಹುದೇ? ನಮಗೆ ಮದುವೆ ಆಗಿರದಿದ್ದರೆ ಒಳ್ಳೆಯ ವಧು/ವರ ಕೊಡುವುದು; ಮಕ್ಕಳಾಗಿರದಿದ್ದರೆ ಮಕ್ಕಳನ್ನು ಕೊಡುವುದು; ಓದಿಲ್ಲದಿದ್ದರೂ ಪರೀಕ್ಷೆಯಲ್ಲಿ ಪಾಸು ಮಾಡಿಸುವುದು; ಯೋಗ್ಯತೆ ಇಲ್ಲದಿದ್ದರೂ ಸಂಬಳ ತರುವ ನೌಕರಿ ಕೊಡಿಸುವುದು; ನಮ್ಮ ಬೇಜವಾಬ್ದಾರಿಯಿಂದ ನಾವು ತಂದುಕೊಳ್ಳುವ ರೋಗರುಜಿನಗಳನ್ನು ಹೋಗಲಾಡಿಸುವುದು ಇಂಥ ಕೆಲಸಗಳನ್ನೂ ದೇವರು ಮಾಡಲು ಸಾಧ್ಯವೇ?




**ಧಾರ್ಮಿಕ ಆಚರಣೆಗಳ ಹೆಸರಿನಲ್ಲಿ ವಂಚನೆ:** 'ಭಯವೇ ಧರ್ಮದ ಮೂಲವಯ್ಯಾ' ಎಂದರು ಬರ್ಟ್ರೆಂಡ್ ರಸೆಲ್. ನಮ್ಮ ಅಸ್ತಿತ್ವದ ಬಗ್ಗೆ ನಮಗೆ ಅಪನಂಬಿಕೆಯನ್ನು ಹುಟ್ಟಿಸಿ, ಭವಿಷ್ಯದ ಬಗ್ಗೆ ಭಯವನ್ನು ಬಿತ್ತಿ ನಮ್ಮನ್ನು ಶೋಷಣೆ ಮಾಡುವಂಥ ಅನೇಕ ಸಾಧನಗಳನ್ನು ದೇವರ ಗುತ್ತಿಗೆ ಹಿಡಿದಿರುವ ಕೆಲವರು ಕಂಡುಕೊಂಡಿದ್ದಾರೆ. ಅದಕ್ಕೆ ದೇವರ, ಧರ್ಮದ ಹೆಸರನ್ನು ನೀಡುತ್ತಾರೆ. ಇವತ್ತಿನ ಭೌತಲೋಕದ ಸಮಸ್ಯೆಗಳಿಗೆ ಸಾಂಪ್ರದಾಯಿಕ ಮೌಢ್ಯಾಚರಣೆಗಳಲ್ಲಿ ಪರಿಹಾರವನ್ನು ಕಾಣುವ ಭರವಸೆಯನ್ನು ನೀಡಲಾಗುತ್ತದೆ. ಈ ವಿಧಾನಕ್ಕೆ ಯಾವುದೇ ಪರೀಕ್ಷೆ, ಫಲಿತಾಂಶ, ಅಧಿಕೃತತೆಯ ಪುರಾವೆ ಇದಾವುದೂ ಬೇಕಾಗಿಲ್ಲ. ಕವಡೆ, ತಾಂಬೂಲ, ಕರ್ಣಪಿಶಾಚ, ಚಾಕ್ಷುರ್ಮತಿ, ಹಸ್ತಸಾಮುದ್ರಿಕ ಇತ್ಯಾದಿ ಹೆಸರುಗಳನ್ನು ಪಡೆದಿರುವ ಫಲಭವಿಷ್ಯ, ವಾಸ್ತು, ಸಂಖ್ಯಾಶಾಸ್ತ್ರ, ಆತ್ಮಸಂಜೀವಿನಿ, ಜನ್ಮಾಂತರ ಚಿಕಿತ್ಸೆ; ಹೆಸರುಗಳು ಅನೇಕ, ಉದ್ದೇಶವೊಂದೇ: ಅಮಾಯಕರಲ್ಲಿ ಭಯ, ಅನುಮಾನವನ್ನು ಹುಟ್ಟಿಸಿ ಅದರಿಂದ ಬೊಕ್ಕಸ ತುಂಬಿಸಿಕೊಳ್ಳುವುದು. ಜನರ ಸಂಕಷ್ಟಗಳನ್ನು ದೂರ ಮಾಡುವ ಕೆಲವು ದೇವಸ್ಥಾನಗಳು, ಚರ್ಚುಗಳು, ದರ್ಗಾಗಳೂ ಪ್ರಸಿದ್ಧವಾಗಿವೆ. ಅಲ್ಲಿ ಹೋಗಿ ತಲೆ ಬೋಳಿಸಿಕೊಂಡರೆ (ಉಪಮೆಯ ಅರ್ಥದಲ್ಲಿಯೂ ಹೌದು), ದಾರ ಕಟ್ಟಿದರೆ, ಬೀಗ ಹಾಕಿದರೆ, ಕುರಿ ಕೋಳಿ ಬಲಿಕೊಟ್ಟರೆ, ಉರುಳುಸೇವೆ ಮಾಡಿದರೆ ನಮ್ಮ ಕಷ್ಟಗಳು ದೂರವಾಗುತ್ತವೆ ಎಂದು ನಂಬಿಸಲಾಗುತ್ತದೆ. ಇಂಥ ಮೌಢ್ಯಾಚರಣೆಯ ಪ್ರೋತ್ಸಾಹವನ್ನು ಎಲ್ಲ ಧರ್ಮದ, ಎಲ್ಲ ದೇವರುಗಳ ಏಜೆಂಟರು ಮಾಡುತ್ತಾರೆ.

ಇಂಥ ವಿದ್ಯಮಾನಗಳಿಂದ ಎರಡು ಬಗೆಯ ಹಾನಿಯಿದೆ. ಒಂದು: ಇಂಥ ಕುರುಡು ಪರಿಹಾರಗಳಿಂದ ಕೆಲವೊಮ್ಮೆ ಸಮಾಧಾನ ಸಿಕ್ಕರೂ ಅದು ಕೇವಲ ಭ್ರಮೆ, ಅಲ್ಪಕಾಲಿಕ ನೆಮ್ಮದಿಯಾಗಿರುತ್ತದೆ; ಆಳವಾಗಿ ಬೇರು ಬಿಟ್ಟಿರುವ ಹುಣ್ಣಿಗೆ ಮೇಲಷ್ಟೆ ಮುಲಾಮು ಹಚ್ಚಿದಂತಾಗುತ್ತದೆ; ಸಮಸ್ಯೆ ಮುಂದಕ್ಕೆ ಹಾಕಿರುವುದರಿಂದ ಅದು ಇನ್ನೂ ಉಲ್ಬಣ ಸ್ಥಿತಿಯಲ್ಲಿ ಮರಳುತ್ತದೆ. ಎರಡು: ದೈಹಿಕ, ಮಾನಸಿಕ, ಔದ್ಯಮಿಕ, ಆರ್ಥಿಕ, ಕೌಟುಂಬಿಕ ಹೀಗೆ ಎಲ್ಲ ಬಗೆಯ ಸಮಸ್ಯೆಗಳಿಗೆ ಅತ್ಯಂತ ಆಧುನಿಕ ಮತ್ತು ಪರಿಣಾಮಕಾರಿಯಾದ ಪರಿಹಾರ, ಚಿಕಿತ್ಸೆ, ಸಮಾಲೋಚನೆ, ನೆರವು ಸಮಾಜದಲ್ಲಿ ಇದ್ದಾಗ್ಯೂ ಅವುಗಳನ್ನು ಪಡೆದುಕೊಳ್ಳದಂತೆ ತಡೆದ ಹಾಗೆ ಆಗುತ್ತದೆ. ಇದು ಸಮಾಜದ ಆರೋಗ್ಯಕ್ಕೆ ತುಂಬ ಅಪಾಯಕಾರಿ.

ನಾವು ವೈಯಕ್ತಿಕವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ ಎದುರಿಸುವ ಎಲ್ಲ ಸಮಸ್ಯೆಗಳಿಗೆ ಕಾರಣ ಇದೇ ವಾಸ್ತವಲೋಕದಲ್ಲಿರುತ್ತದೆ. ಇವುಗಳಿಗೆ ಪರಿಹಾರಗಳೂ ಇಲ್ಲೇ ಇರುತ್ತವೆ. ವಸ್ತುಸ್ಥಿತಿಯ ಕಾರ್ಯ–ಕಾರಣ ಸಂಬಂಧವನ್ನು ಅರಿತು, ವೈಜ್ಞಾನಿಕ ವಿಧಾನದಿಂದ ಅರಿತು, ಅನುಸರಿಸಿದರೆ ಮಾತ್ರ ಪರಿಹಾರಗಳನ್ನು ಕಂಡುಕೊಳ್ಳಬಹುದು. ಬದಲಿಗೆ ಸತ್ಯದಿಂದ ವಿಮುಖರಾಗಿ, ಅಲೌಕಿಕ ಜಗತ್ತಿನಲ್ಲಿ, ಪೂಜೆ, ಪುನಸ್ಕಾರ, ಯಂತ್ರ, ತಂತ್ರ, ಹರಕೆ, ದೇಹದಂಡನೆ, ಬಲಿ ಇವುಗಳಲ್ಲಿ ಪರಿಹಾರವನ್ನು ಹುಡುಕುವ ನಮ್ಮ ಮನೋಭಾವ ಹತ್ತು ಹಲವು ಬಗೆಯ ವಂಚಕರಿಗೆ ಅದ್ದೂರಿಯ ಆದಾಯದ ಆಕರವಾಗಿದೆ.

ಸದ್ಯದ ಬೆಳವಣಿಗೆಯನ್ನು ನೋಡಿದರೆ ಒಂದಷ್ಟು ಸಮಾಧಾನ ಕಾಣುತ್ತಿದೆ. ಸರಕಾರವು ಮೌಢ್ಯಾಚರಣೆ ಪ್ರತಿಬಂಧಕ ಕಾನೂನು ತರುವ ಕುರಿತು ಹೆಚ್ಚು ಗಂಭೀರವಾಗಿ ಆಲೋಚಿಸುತ್ತಿದೆ. ಇಂಥ ಒಂದು ಕಾನೂನಿಗಾಗಿ ಒತ್ತಾಯಿಸಿ ರಾಜ್ಯದ ಮೂಲೆ ಮೂಲೆಗಳಿಂದ ಜನಾಭಿಪ್ರಾಯ ಮೂಡಿದೆ. ಈ ಕಾನೂನು ನಿಜವಾಗಿಯೂ ಜಾರಿಯಾದರೆ ಆಗ, ದೇವರು, ಧರ್ಮ, ನಂಬಿಕೆಗಳ ಗುಮ್ಮ ಕೂಡಿಸಿ, ಜನರನ್ನು ಮಾನಸಿಕವಾಗಿ, ಆರ್ಥಿಕವಾಗಿ, ಲೈಂಗಿಕವಾಗಿ, ಭಾವನಾತ್ಮಕವಾಗಿ ಶೋಷಣೆ ಮಾಡಿ ಕೊಬ್ಬುತ್ತಿರುವ ದೇವರುಗಳ ಏಜೆಂಟರುಗಳು ಕಂಬಿ ಎಣಿಸುವ ಕಾಲ ದೂರವಿಲ್ಲ. ಎಲ್ಲದಕ್ಕಿಂತ ಹೆಚ್ಚಾಗಿ ನಾವು ಜಾಗೃತರಾಗಬೇಕಾಗಿದೆ. ನಮ್ಮ ಸಾಂವಿಧಾನಿಕ ಕರ್ತವ್ಯವೂ ಆಗಿರುವಂತೆ, ಇಂದು 'ವೈಜ್ಞಾನಿಕ ಮನೋವೃತ್ತಿ, ಮಾನವೀಯತೆ, ಅನ್ವೇಷಣೆ ಮತ್ತು ಸುಧಾರಣೆಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದು' ಅತ್ಯಗತ್ಯವಾಗಿದೆ.


**ಎಂ. ಅಬ್ದುಲ್ ರೆಹಮಾನ್ ಪಾಷ**
ನಂ. ೮೧ / ೩೭–೩, ೧೨ನೇ 'ಡಿ' ಮೇನ್, ಶಿವನಗರ, ಬೆಂಗಳೂರು – ೫೬೦ ೦೧೦




# ಸಿನೇಮಾ

ಶ್ರೀ ಸುಮಿತ್ರಾಸುತ ಅಗಸಬಾಳ

ಊರಿಗೆ ಬಂದಾಗೊಮ್ಮೆ ಅಂದುಕೊತೀನಿ. ನನ್ನ ಈ ಸುಂದರವಾದ ಹಳ್ಳಿಯಲ್ಲೂ ಒಂದು ಶೂಟಿಂಗ್ ಮಾಡಬೇಕು ಅಂತ. ಈ ದರಿದ್ರ ನಿರ್ಮಾಪಕರು ಖರ್ಚು ಜಾಸ್ತಿ ಅಂತ ರಾಗಾ ತಗೀತಾರ. ಈ ಸಲ ಏನರ ಮಾಡಿ ಈ ಕಡೇ ಬರಲೇ ಬೇಕು. ಬರೀ ಬೆಂಗಳೂರು ಸಿಟಿ, ಆ ಮಿಡ್ಲ್‌ಕ್ಲಾಸ್ ಕತಿ ಇದನ್ನ ಸಿನೆಮಾ ಮಾಡಿ ಮಾಡಿ ಸಾಕಾಗೇದ. ಹೋದ ಸಲಾ ಊರಿಗಿ ಬಂದಾಗ ಇವರೀಗಿ ಹೇಳಿದ್ಯಾ. ಮುಂದಿನ ಸಲಾ ನಮ್ಮೂರಾಗ ಸಿನೆಮಾ ಶೂಟಿಂಗ್ ಮಾಡೂನೂ ಅಂತ. ಈಗ ದಾರಿ ಕಾಯ್ತಿರತಾರ. ಎರಡ ವರ್ಷದ ಮ್ಯಾಲ ಬರಲಾಕತ್ತೀನಿ ಊರಿಗಿ, ಏನಂತಾರೋ ಏನೋ. ಮದಮದಲ ನಮ್ಮೂರಾಗ ನನಗ ಹಂತಾ ಕಿಮ್ಮತ್ತಿರಲಿಲ್ಲ. ಏನೋ ನಾಟಕಾ ಮಾಡಸ್ತಾನಂತ. ಅಷ್ಟ ಓದಿ ಹಿಂತಾದ ಮಾಡೂದ ಅಂತ ಮೂಗ ಎಳೀತಿದ್ರು. ಆದರ ಒಂದೀಸ ಹರೇದ ಹುಡುಗರು ಮಾತ್ರ ನಾ ಊರೀಗಿ ಬಂದ್ರ ಅವಾಗನ ಸಿನೆಮಾ ಡೈರೆಕ್ಟರನ್ನ ನೋಡದಂಗ ನೋಡತಿದ್ರು, ಆದರ ದೊಡ್ಡವರು ಮರ್ಯಾದಸ್ತರು ನನ್ನ ಉಡಾಳ ಟೋಪನ್ನ ನೋಡದಂಗ ನೋಡತಿದ್ರು. ನನ್ನ ಮೊದಲನೇ ಸಿನೆಮಾ ರಿಲೀಸ್ ಆಗಿದ್ದ ತಡ, ಊರಿಗಿ ಸುದ್ದಿ ಹೋತು. ಮದಲ ನಮ್ಮ ಮನಿಮಂದಿ ಗಾಡಿ ಮಾಡಕೊಂಡು ಹೋಗಿ ನೋಡಕೊಂಡ ಬಂದ್ರಂತ. ಆಮ್ಯಾಲ ಸಿನೆಮಾ ಪೋಸ್ಟರ್ ಮ್ಯಾಲ, ಸ್ಕ್ರೀನ್ ಮ್ಯಾಲ ನನ್ನ ಹೆಸರ ನೋಡಿದ ಮಂದಿ ಹುಚ್ಚೆದ್ದ ಕುಣದ್ರಂತ. ನಂತರ ನಾ ಊರಿಗಿ ಬರೂದ ಕಾಯ್ತಿದ್ರು. ಅವತ್ತ ಊರಿಗಿ ಬಂದಾಗ ನೈನ್ ದಾರಿಯಿಂದನ ಮೆರವಣಿಗಿ. ಆದರೂ ಕೆಲವರಿಗಿ ಸಂಶೆ ಬಂದಿತ್ತು ಸಿನೆಮಾ ನಿರ್ದೇಶಕನಾಗಿ ಬಸ್ಸಿಗಿ ಬಂದಾನಲ್ಲ ಅಂತ. ನಾ ತಗದ ಸಿನಿಮಾದಾಗಿನ ಕಾರಗೋಳೆಲ್ಲಾ ನನ್ನೂವ ಅಂತ ತಿಳಿದಿದ್ರಂತ ಅವರು. ಬೆಂಗಳೂರಿಂದ ನಮ್ಮೂರಿಗಿ ಏನಿಲ್ಲಂದ್ರೂ ಐದನೂರ ಕಿಲೋ ಮೀಟರ್ ಮ್ಯಾಲ ಅದ. ಅಲ್ಲಿಂದ ಕಾರ್ ತಂದ್ರ ನನ್ನ ಕತಿ ಏನು. ಇರ್ಲಿ ಅವತ್ತ ನಿರ್ದೇಶಕ ಆಗಿ ಮದಲನೇ ಸಲಾ ಊರಿಗಿ ಬಂದಾಗ ಏನಾತಂದ್ರ, ಇತ್ತಲ್ಲಾ ನಮ್ಮ ಹಳೇ ನಾಟಕ ಮ್ಯಾಳ, ಅವರೆಲ್ಲಾ ಸೇರಿ ಡೊಳ್ಳಾ ಭಜನಿ ಮ್ಯಾಳಾ ತಗೊಂಡು, ಊರ ಬಿಟ್ಟ ಒಂದ ಕಿಲೋಮೀಟರ್ ದೂರ ಇರೋ ಬಸ್ ಸ್ಟಾಪಿಗೇ ಬಂದಿದ್ರು. ಅಲ್ಲಿಂದ ಮೆರವಣಿಗಿ, ಮದಲ ಮೂಗ ಮುರದ ದೊಡ್ಡ ದೊಡ್ಡೊರೆಲ್ಲಾ ಮೆರವಣಿಗಿ ಹಿಂದ ಹೊಂಟಿದ್ರು.

ಊರಾಗ ದೊಡ್ಡ ಕಾರ್ಯಾಕ್ರಮಾ, ಹೆಚ್ಚೂ ಕಡಿಮಿ ಊರಾಗ ಎಲ್ಲಾರೂ ನನ್ನ ಸಿನೆಮಾ ನೋಡಿದ್ದರು. ಊರ ತುಂಬ ಆ ಸಿನೆಮಾ ಪೋಸ್ಟರ್ ಹಚ್ಚಿದ್ದರು. ನಮ್ಮೂರ ಸಾಲಿ ಮುಂದ ನಡದ ಸಭಾದಾಗ ಊರಿನ ಹಿರ್ಯಾರೆಲ್ಲಾ ಮಾಲಿ ಹಾಕಿ ಆತು. ಊರಾಗಿನ ಹುಡಿಗೇರು ಥೇಟ್ ಸಿನೆಮಾದಾಗಿನವರಂಗ ಮೇಕಪ್ ಮಾಡಿಕೊಂಡು ಬಂದು ಮುಂದ ಕುಂತಿದ್ರು. ನನಗ ಯಾಕೋ ದ್ಯಾಮವ್ವನ ಜಾತ್ರ್ಯಾಗಿನ ಗದ್ದಲ ನೆನಪಾತು. ಹಂಗಿತ್ತು ವಾತಾವರಣ. ಎಲ್ಲಾ ಆದ ಮ್ಯಾಲ ನನ್ನ ಭಾಷಣಾ. ನಾನೂ ಬಿಗದೇ ಬಿಗದ್ಯಾ. ಭಾಷಣಾ ಮುಗಸೂ ಮುಂದ ಮುಂದಿನ ವರ್ಷ ನಮ್ಮೂರಾಗ ಸಿನೆಮಾ ಶೂಟಿಂಗ್ ಮಾಡೂನು. ನಮ್ಮೂರ ಹೆಸರ ರಾಜ್ಯದ ತುಂಬ ಹೋಗ್ತದ ಅಂದಾಗ ಜನಾ ಹುಚ್ಚೆದ್ದು ಚಪ್ಪಾಳಿ ಹೊಡದಿದ್ರು.

ಈಗ ಎರಡ ವರ್ಷದ ನಂತರ ಊರಿಗಿ ಬರಾಕತ್ತೀನಿ. ಜನರೀಗಿ ಏನು ಹೇಳೋದು ತಿಳೀವಲ್ದು. ಹಿಂದ ಯಾರೋ ಕೂಗಿದಂಗ ಆತು. ತಿರಿಗಿ ನೋಡಿದರ ದೂರದಾಗ ಗುರುಬಸ್ಸು ಬರಾಕತ್ತಿದ್ದಾ. ಈ ಗುರುಬಸ್ಸುನ ನೋಡಿದರ ಸಾಕು ಆ ಘಟನಾ ನೆನಪ ಆಗತದ. ಹಂತಾ ಕೆಟ್ಟ ಘಟನಾ ಏನಲ್ಲ. ನಾನು ಗುರುಬಸ್ಸು ಕ್ಲಾಸ್‌ಮೇಟ್ಸ್. ನಮ್ಮೂರಾಗ ನಾಕನೆತ್ತೆ ತನಾ ಅಷ್ಟ ಸಾಲಿ.

**ಸೈನ್ಸ್ ಮಾಸ್ತರ ಕೈಲಿ ಮಸೂರ ಗ್ಲಾಸ್ ಇಸಗೊಂಡು ಎಲ್ಲೀದ ಒಂದ ಸಿನಿಮಾ ರೀಲ ತಂದು ಡಬ್ಬಿ, ರಟ್ಟಾ, ಲೈಟ್ ಏನೇನೋ ಹಾಕಿ ಒಂದು ಸ್ಲೈಡ್ ಪ್ರೊಜೆಕ್ಟರ್ ಮಾಡಿದ್ದಾ. ನಮಗೆಲ್ಲಾ ಗ್ವಾಡಿಮ್ಯಾಲ ಸಿನೆಮಾ ಚಿತ್ರಾ ತೋರ್ಸಿದ್ದಾ. ಸೈನ್ಸ್ ಮಾಸ್ತರು, ಹೆಡ್ ಮಾಸ್ತರು ಅವನ್ನ ಹೊಗಳಿದ್ದ ಹೊಗಳಿದ್ದು. ನಮಗರ ಮೆಣಸಿನಕಾಯಿ ಮುರದಂಗ ಆಗಿತ್ತು.**



ಐದನೇತ್ತೇಕ ಎರಡ ಕಿಲೋಮೀಟರ್ ನಡದು ಬ್ಯಾರೇ ಊರಿಗಿ ಹೋಗಬೇಕು. ಗುರುಬಸ್ಸನೂ ಐದನೇತ್ತೇಕ ಬಂದಾ. ಅವಾ ಗಣೀತಾ, ವಿಜ್ಞಾನದಾಗ ಶಾಣ್ಯಾ. ನಮಗ ಅವನ್ನ ನೋಡಿ ಹೊಟ್ಟಿಕಿಚ್ಚ ಆಗತಿತ್ತು. ಆದರ ಗುರುಬಸ್ಸ ಒಂದೊಂದ ಸಲಾ ನನಗೂ ಗಣೀತ ಬಿಡಿಸಿ ಕೊಡತ್ತಿದ್ದ. ವಿಜ್ಞಾನದ ಧೈರ್ಗ್ರಂ ಹಾಕಿ ಕೊಡತ್ತಿದ್ದಾ. ಹಿಂಗಾಗಿ ನಮ್ಮ ದೋಸ್ತಿ ಚಲೋನ ಇತ್ತು.

ಒಂದ ಸಲಾ ನಮ್ಮ ಸಾಲ್ಯಾಗ ಪ್ರವಾಸಕ್ಕೆ ಹೋಗೋದು ಅಂದ್ರು. ಪ್ರವಾಸಂದ್ರೇನು ಭಾಳ ದೂರ ಅಲ್ಲ. ಅಲ್ಲೇ ನಮ್ಮ ತಾಲೂಕಿಗಿ. ನಮ್ಮ ಸಾಲಿ ಊರಿಂದ ಹತ್ತ ಕಿಲೋಮೀಟರ್ ಅಲ್ಲಿ ಸರ್ಕಸ್ ಬಂದಿತ್ತು. ಸರ್ಕಸ್ ನೋಡೋದು ಮುಖ್ಯ ಕಾರ್ಯಾಕ್ರಮಾ. ಬುತ್ತಿ ಕಟಗೊಂಡು ಹತ್ತ ಕಿಲೋಮೀಟರ್ ನಡದ ಹ್ವಾದ್ವಿ. ಯಾವುದೋ ಸಾಲ್ಯಾಗ ಇಳಿಸಿದ್ರು. ರಾತ್ರಿ ಎಂಟಕ್ಕ ಸರ್ಕಸ್ಸು. ಊರೆಲ್ಲಾ ತಿರಿಗ್ಯಾಡಿ ಎಲ್ಲಾರೂ ಸೇರಿ ಸಾಲಕ ಸರ್ಕಸ್ ನೋಡಾಕ ಹೊಂಟ್ವಿ. ಏಳ ಗಂಟೆ ಆಗಿರಬೇಕು. ಸ್ವಲ್ಪ ಕತ್ತಲಾ, ನೋಡ್ತೀವಿ ದಾರ್‍ಯಾಗ ಒಂದು ಬಯಲಾಗ ಸಿನೆಮಾ ತೋರಸಾಕತ್ತಿದ್ರು. ನಮಗೆಲ್ಲಾ ಖುಷಿನ ಖುಷಿ. ಮಾಸ್ತರ್ ಹೇಳಿದರು 'ಲೇ ಸರ್ಕಸ್ ಇನ್ನಾ ಒಂದ ತಾಸ್ ತಡಾ ಐತಿ ಅನಕಾ ಇಲ್ಲೇ ಸಿನೆಮಾ ನೋಡ್ರಿ' ಅಂತ. 'ಎಲ್ಲಾರೂ ಹೋ ಅಂತ ಓಡಿ ಹೋಗಿ ಕುಂತ್ವಿ. 'ಕಾಡು ಬೆಳೆಸಿ ನಾಡು ಉಳಿಸಿ' ಅಂತ ಸಿನೆಮಾದಾಗ ಅಕ್ಷರ ಬಂದು. ಹಂಗ ಎಲ್ಲಾರೂ ನೋಡಕೊಂತ ಪರದೆ ಮುಂದ ಕುಂತಿದ್ವಿ. ಸಿನಿಮಾದಾಗ ಒಂದು ಹುಲಿ ಬಂತು. ಅದರ ಹಿಂದ ಒಬ್ಬಾವ ಬಂದೂಕ ಹಿಡದ ಬಂದಾ. ಹುಲಿ ಚಂಗನ ಜಿಗದದ್ದ ತಡಾ ನಾವೆಲ್ಲಾ ಎಪ್ಪೋ, ಎವ್ವೋ ಅಂತ ದಿಕ್ಕ ತಪ್ಪಿ ಓಡಿದ್ವಿ, ಇಪ್ಪತ್ತು ಮೂವತ್ತ ಹುಡುಗರಿರಬೇಕು. ಕತ್ತಲದಾಗ ಓಡಿ ಓಡಿ ಹುಲಿ ಕೈಯಾಗಿಂದ ತಪ್ಪಸಗೊಂಡ್ವಿ. ನಾನಂತೂ ಓಡಿ ಒಂದ ಬಿದ್ದ ಗ್ವಾಡಿ ಮರೀಗಿ ನಿಂತಿದ್ಯಾ. ಮಾಸ್ತರ ಕೂಗಿದ್ರು – 'ಲೇ ದಡ್ಡ ಸೂಳೇ ಮಕ್ಳ ಅದು ಖರೇ ಖರೇ ಹುಲಿ ಅಲ್ಲ ಬರ್‍ರೀ' ಅಂತ, ತಿರಿಗಿ ನೋಡತೀವಿ ಸಿನೆಮಾ ಬಂದ್ ಮಾಡಿ ಲೈಟ್ ಹಚ್ಚಿ ಮಾಸ್ತರ ನಮ್ಮನ್ನ ಹುಡುಕಾಕತ್ತಿದ್ರು. ಎಲ್ಲಾ ಹುಡುಗೂರೂ ಎಲ್ಲೆಲ್ಲೋ ಓಡಿದ್ರು. ಆದರ ಆ ಗುರುಬಸ್ಸು ಮಾತ್ರ ಆ ಸಿನೆಮಾ ಪರದೇ ಮುಂದ ನಿಂತ ನಗಾಕತ್ತಿದ್ದಾ. ಭಾರೀ ಧೈರ್ಯವಂತಾ ಅನಕೊಂಡ್ವಿ. ಮಾಸ್ತರು ಬಡಿಗಿ ತಗೊಂಡು ಸಂದಿಗೊಂದ್ಯಾಗ ಸೇರಿ ಹೆದರಿ ಕುಂತಿದ್ದ ನಮ್ಮನ್ನೆಲ್ಲ ಸೇರಿಸಿ ಅಟೆಂಡೆನ್ಸ್ ತೊಗೊಂಡು 'ಸಾಕು ಸರ್ಕಸ್ಸು ಬ್ಯಾಡಾ ಏನೂ ಬ್ಯಾಡಾ ಊರೀಗಿ ನಡೀರಿ' ಅಂದ್ರು. ಯಾಕಂತ ಹುಡುಗೂರ್‍ಗಿ ತಿಳೀಲಿಲ್ಲ. "ಏ ನಿಮ್ಮೌರ ಇಲ್ಲಿ ಸಿನೆಮಾದಾಗಿನ ಹುಲಿ ನೋಡೇ ಹೆದಿರಿ ಓಡೀರಿ. ಅಲ್ಲಿ ಸರ್ಕಸ್‌ನ್ಯಾಗ ಖರೇ ಖರೇ ಹುಲಿ ಇರತಾವು. ಮತ್ತ ಓಡಿ ಅದರ ಬಾಯಾಗ ಹೋಗಿ ಬಿದ್ದರ, ನಮ್ಮ ಗತಿ ಏನು? ನೌಕರೀನ ಹೋಗತದ. ಸಾಕ ನಡೀರಿ ಊರಿಗಿ" ಅಂತ ಒದರಾಡಿದ್ರು. ಕೊನೀಗಿ ಅತ್ತೂ ಕರದೂ ಸರ್ಕಸ್ ನೋಡಿ ಊರಿಗಿ ಬಂದ್ವಿ. ಆದರ ಸಿನೆಮಾದ ಹುಲೀಗಿ ಹೆದರಲಾರದಾವಂದ್ರ ಆ ಗುರುಬಸ್ಸು ಒಬ್ನ. ಊರ ತುಂಬ, ಸಾಲೀ ತುಂಬ ಅವಂದ ಸುದ್ದಿ. ನಮ್ಮ ಹೊಟ್ಟಿ ಮತ್ತೀಟು ಉರದು ಊರ ಮಂದೀ ಮುಂದ ಅವಮಾನ ಆತು. ಮುಂದ ಎರಡ ವರ್ಷದಾಗ ಗುರುಬಸ್ಸು ಇನ್ನಾ ಒಂದ ಸಾಹಸಾ ಮಾಡಿದ್ದಾ. ಅದು ಹೈಸ್ಕೂಲ ಓದುವಾಗ. ಸೈನ್ಸ್ ಮಾಸ್ತರ ಕೈಲಿ ಮಸೂರ ಗ್ಲಾಸ್ ಇಸಗೊಂಡು ಎಲ್ಲೀದ ಒಂದ ಸಿನೆಮಾ ರೀಲ ತಂದು ಡಬ್ಬಿ, ರಟ್ಟಾ, ಲೈಟ್ ಏನೇನೋ ಹಾಕಿ ಒಂದು ಸ್ಲೈಡ್ ಪ್ರೊಜೆಕ್ಟರ್ ಮಾಡಿದ್ದಾ. ನಮಗೆಲ್ಲಾ ಗ್ವಾಡಿಮ್ಯಾಲ ಸಿನೆಮಾ ಚಿತ್ರಾ ತೋರ್‍ಸಿದ್ದಾ. ಸೈನ್ಸ್ ಮಾಸ್ತರು, ಹೆಡ್ ಮಾಸ್ತರು ಅವನ್ನ ಹೊಗಳಿದ್ದ ಹೊಗಳಿದ್ದು. ನಮಗರ ಮೆಣಸಿನಕಾಯಿ ಮುರದಂಗ ಆಗಿತ್ತು.

ಸನೇದಾಗ ಬಂದ ಗುರುಬಸ್ಸು ಕೇಳಿದಾ "ಯಾವಾಗ ಬಂದ್ರಿ ಡೈರೆಕ್ಟರ್ ಸಾಯಿಬ್ರೆ ಮತ್ತಾ ಯಾವ ಸಿನೆಮಾ ತಗದಿಲ್ಲೇನು?" ಅದೂ ಇದೂ ಮಾತಾಡೂದ್ರಾಗ ಊರ ಸನೇದಾಗ ಬಂತು. "ನಾ ಬರ್ತೀನಿ, ಮತ್ತ ತ್ವಾಟಕ ಹೋಗಬೇಕು. ರಾತ್ರಿಯೆಲ್ಲಾ ಮೆಣಸಿನ ಗಿಡಕ ನೀರ ಬಿಡಬೇಕು, ಇರಲೀಕ ನಮ್ಮ ಸಾವಕಾರು ಬೈತಾರ. ನಾಳೆ ಇರ್‍ತಿಯಲ್ಲ" ಅಂತ ಅವಸರಲೇ ತಮ್ಮ ಮನಿಕಡೆ ಹ್ವಾದಾ.

**ಶ್ರೀ ಸುಮಿತ್ರಾಸುತ ಅಗಸಬಾಳ**
ಘಾಟೆಭವನ, ವೈಯ್ಯಾಲಿಕಾವಲ್, ಮಲ್ಲೇಶ್ವರಂ, ಬೆಂಗಳೂರು– ೫೬೦ ೦೦೩

# ನಾಯಿಮರಿ

ಡಾ॥ ಶಿವರಾಮ ಅಸುಂಡಿ

'ನಾಯಿಮರಿ ನಾಯಿಮರಿ ತಿಂಡಿ ಬೇಕೆ...? ತಿಂಡಿ ಬೇಕು ತೀರ್ಥ ಬೇಕು ಎಲ್ಲ ಬೇಕು... ನಾಯಿಮರಿ ನಾಯಿಮರಿ...' ಎಂದು ಕೈಯಲ್ಲಿ ಚಪಾತಿ ಹಿಡಿದು ಆಕಡೆ ಈಕಡೆ ತೋರಿಸುತ್ತಾ ಭೀಮಾಚಾರಿ ಆಟವಾಡುತ್ತಿದ್ದ. '...ಲೇ ಭೀಮಾ, ಕೊಟ್ಟಿದ್ನ ಅದಕ್ ಆಕಿ ಬರೋದ್ ಬಿಟ್ ಅದೇನೋ ನಿನ್ ಹಾಡು... ಅದ್ಕಂತ ಕೊಟ್ಟಿದ್ನ ನೀನೆ ಮೆಕ್ಕಾಕತ್ತೀಯಾ ಯಂಗ್...' ಎಂಬ ನಾರಾಯಣಾಚಾರಿಯ ಮಾತು ಕಿವಿಗೆ ಬೀಳುತ್ತಿದ್ದಂತೆ ಕೈಯಲ್ಲಿದ್ದ ಚಪಾತಿಯನ್ನು ಲಟಕ್ಕನೆ ಎಸೆದು ಭೀಮಾಚಾರಿ ಮನೆಯೊಳಗೆ ಓಡಿದ್ದ. ಅಲ್ಲಿಯವರೆಗೆ ಕೈಯಲ್ಲಿದ್ದುದನ್ನು ಈಗ ಹಾಕುತ್ತಾನೆ, ಆಗ ಹಾಕುತ್ತಾನೆ ಎಂದು ಎದುರು ನೋಡಿ ಬಾಯಲ್ಲಿ ಜೊಲ್ಲು ಸುರಿಸುತ್ತಿದ್ದ ನಾಯಿಮರಿಗೆ ನಾರಾಯಣಾಚಾರಿ ಆಪದ್ಬಾಂಧವನಂತೆ ಬಂದಿದ್ದರು. ಬಂಡೆಯ ಮೂಲೆಯಲ್ಲಿ ಹಾಕಿದ್ದ ಚಪಾತಿಯನ್ನು ಗಪಗಪನೆ ಬಾಯಿಗಿಟ್ಟುಕೊಂಡಿದ್ದ ನಾಯಿಮರಿ ಅಲ್ಲಿಂದ ಕಾಲ್ಕಿತ್ತಿತ್ತು.

ಮೊದಲಾಗಿದ್ದರೆ ಆ ನಾಯಿಮರಿ ಹಾಕಿದ್ದನ್ನು ತಿಂದು ನಾರಾಯಣಾಚಾರಿ ಮನೆಯ ತಲಬಾಗಿಲು ಇಲ್ಲವೆ ಮನೆಯ ಮುಂದಿದ್ದ ಗಿಡದ ಕೆಳಗೆ ಮಲಗುತ್ತಿತ್ತು. ಅದು ನಿದ್ರೆ ಮಾಡಿದಂತೆ ಕಣ್ಣುಮುಚ್ಚಿಕೊಳ್ಳುತ್ತಿತ್ತಾದರೂ ಏನಾದರೂ ವಾಸನೆ, ಯಾವುದಾದರೂ ಸಪ್ಪಳ ಕೇಳಿಸಿತೆಂದರೆ ಸಾಕು ಸಟಕ್ಕನೆ ಎದ್ದು ಛಂಗನೆ ಜಿಗಿಯುತ್ತಿತ್ತು. ಕಳ್ಳಕಾಕರನ್ನು ಬಿಡಿ ಸಣ್ಣಪುಟ್ಟ ಇಲಿ, ಬೆಕ್ಕುಗಳನ್ನೂ ಅತ್ತ ಹಾಯದಂತೆ ಎಚ್ಚರವಹಿಸುತ್ತಿತ್ತು. ಹೀಗಾಗಿ ನಾರಾಯಣಾಚಾರಿಗೆ ಅದರ ಬಗ್ಗೆ ಎಲ್ಲಿಲ್ಲದ ಪ್ರೀತಿ.

ಹಾಗೆಂದು ನಾಯಿಮರಿಯನ್ನು ಅವರಾಗಿಯೇ ಸಾಕಿದ್ದಲ್ಲ. ಹುಟ್ಟಿದಾಗಿನಿಂದಲೂ ತಾಯಿಯ ಹಾಲೇ ಕುಡಿದಿಲ್ಲವೇನೋ ಎನ್ನುವ ರೀತಿಯಲ್ಲಿ ನಾಯಿಮರಿಯ ಮೂಳೆಗಳು ತೇಲಿದ್ದವು. ಹಸಿವಿನಿಂದ ಕಂಗೆಟ್ಟು ಓಣಿ ಓಣಿ ತಿರುಗಿದ್ದರೂ ತಿನ್ನಲು ಏನೂ ಸಿಕ್ಕಿದ್ದಿಲ್ಲ. ಮಾಂಸವೇ ಇಲ್ಲದ ಮೂಳೆ ತಡಿಕೆಯಂತಿದ್ದ ಅದು ಮುಂದೆ ನಡೆಯಲೂ ಆಗದ ಅಸಹಾಯಕತೆಯಿಂದ ನಾರಾಯಣಾಚಾರಿ ಮನೆ ಎದುರು ನಿಂತಿತ್ತು. ಮನೆಯೊಳಗೆ ಮಣ ಮಣ ಮಂತ್ರ ಪಠಣ, ಗಂಟೆ ಸದ್ದು ಕೇಳಿಯೇ ಇಲ್ಲಿ ಏನಾದರೂ ಸಿಗಬಹುದೇನೋ ಎಂದು ಆಸೆಕಣ್ಣಿನಿಂದ ಬಾಗಿಲ ಕಡೆ ನೋಡಿತ್ತು. ಗಂಟೆ ಸದ್ದು ನಿಂತರೂ ಹೊರಗೆ ಯಾರೂ ಬರಲಿಲ್ಲ. ಇದರ ಕಡೆ ದೃಷ್ಟಿಯೂ ಹರಿಯಲಿಲ್ಲ. ಏನಾದರೂ ಸಿಗಬಹುದೆಂಬ ನಾಯಿಮರಿ ಆಸೆಗೆ ತಣ್ಣೀರೆರಚಿದಂತಾಗಿದ್ದರೂ ಅದು ಮುಂದೆ ಹೋಗಿ ಆಹಾರ ಹುಡುಕುವ ಸ್ಥಿತಿಯಲ್ಲಿರಲಿಲ್ಲ. ನಾರಾಯಣಾಚಾರಿ ಮನೆ ಮುಂದಿನ ಗಿಡದ ಕೆಳಗೆ ಧರಣಿ ಹೂಡುವ ರೀತಿಯಲ್ಲಿ ಅಸಹಾಯಕವಾಗಿ ಮಲಗಿಯೇ ಬಿಟ್ಟಿತು.

ಒಂದೆರಡು ದಿನವಾದರೂ ಯಾರೂ ಅದರತ್ತ ಗಮನ ಹರಿಸಿರಲಿಲ್ಲ. ರಾಮ ಮಂದಿರದಿಂದ ವಾಪಸ್ ಬರುತ್ತಿದ್ದ ನಾರಾಯಣಾಚಾರಿಗೆ ಇದು ಹೇಗೋ ಕಣ್ಣಿಗೆ ಬಿತ್ತು. ಅವರು ಅದರ ಬಳಿ ತೆರಳಿದರೂ ನಾಯಿಮರಿ ಮಾತ್ರ ಕದಲಲೇ ಇಲ್ಲ. "ಅಯ್ಯೋ... ನಾರಾಯಣಾ... ನಾರಾಯಣಾ... ಇದೇನಪ್ಪಾ ನಿನ್ನ ಅವಸ್ಥೆ... ನನ್ನನ್ ಪರೀಕ್ಷಾ ಮಾಡ್ಲಿಕ್ಕಂತ ಹೀಂಗ್ ನಮ್ ಮನೀ ಮುಂದ ಕಾಯಕತ್ತೀಯಾ... ಅಪಚಾರ... ಅಪಚಾರ... ಏ... ಇವ್ಳೇ...ಏನಾದ್ರಾ ತಂಗ್ಳಿದ್ರೇ ತಂದ್ ಹಾಕು... ಹಸಕೊಂಡ್ ನಮ್ ಮನೀ ಮುಂದಾ ಸಾಯಂಗೈತಿ... ಅದರ ಪಾಪ ನಮ್ಗೆ ಸುತ್ತಿಕೊಳ್ಳಾಂಗೈತಿ... ಉಳದಿದ್ದೇನಾದ್ರಾ ಇದ್ರೆ ತಂದ್ ಹಾಕ್... ತಿಂದ್ ವೋಗ್ತದಾ..." ಎಂದು ಕೂಗಿ ಹೇಳಿದ್ದರು.

**ತಾವು ತಿನ್ನುವ ಫಳಾರದಿಂದ ಹಿಡಿದು ಮೃಷ್ಟಾನ್ನ ಭೋಜನದವರೆಗೂ ಒಂದು ಭಾಗವನ್ನು ನಾರಾಯಣಾಚಾರಿ ನಾರಿಗೆಂದು ತೆಗೆದಿಡುತ್ತಿದ್ದರು. ಮಳೆ, ಚಳಿಯಲ್ಲಿ ತೊಂದರೆಯಾಗಬಾರದೆಂದು ಪಡಸಾಲೆಯ ಮೂಲೆಯಲ್ಲಿ ನಾರಿಗಾಗಿ ಗೋಣಿಚೀಲ ಹಾಕಿದ್ದರು. ಹೊಟ್ಟೆಗೆ ಹಿಟ್ಟಿಲ್ಲದೆ ಬೀದಿ ಬೀದಿ ಸುತ್ತಿ ಸುಸ್ತಾಗಿ ಬಿದ್ದಿದ್ದ ನಾಯಿಮರಿಗೆ ರಾಜಾತಿಥ್ಯವೆ ಸಿಕ್ಕಂತಾಗಿತ್ತು. ನಾಯಿಮರಿ ಬೆಳೆಯುತ್ತಾ ಸಾಗಿದಂತೆ ಅಭಿರುಚಿಗಳೂ ಬದಲಾಗುತ್ತಾ ಸಾಗಿದ್ದವು.**

"...ಹೀಂಗ್ ಹಾದೀಗ್... ಬೀದೀಗೋಗೋ ನಾಯೀಗಳಿಗೆಲ್ಲಾ ಅನ್ನಾ ಆಕ್ತಾ ವೋದ್ರೇ ಮುಗೀತ್... ಊರಾಗೀನ್ ನಾಯೀಗ್ಳೆಲ್ಲಾ ಮನೀ ಮುಂದ್ ಸೇರ್ತಾವ್ ನೋಡ್..." ಎಂದು ಮನೆಯೊಳಗಿನಿಂದ ಶಬ್ದ ಹೊರಹೊಮ್ಮಿತ್ತು. ಅದನ್ನು ಕೇಳಿಸಿಕೊಂಡು ನಾರಾಯಣಾಚಾರಿ ಮನೆ ಹೊಕ್ಕಿದ್ದರು. 'ಲೇ... ಏನೇ ನಿಂದು ವರಾತಾ.. ಹೇಳಿದಷ್ಟನ್ನ್ ಕೇಳು.. ಮನ್ಯಾಗ್ ಉಳ್ದ್ ತಂಗ್ಳ ಆಕಿದ್ರಾ ನಿನ್ ಗಂಟೇನ್ ವೋಗೋದಿಲ್.. ವಟಗುಟ್ದೇ ಯಾವ್ ಕೆಲ್ಸಾನೂ ಮಾಡಲ್ ನೋಡ್ ಈ ಹೆಂಗ್ಸೂರೂ... ನಾರಾಯಣ... ನಾರಾಯಣ...' ಎಂದು ನಾರಾಯಣಾಚಾರಿ ದೇವರ ಮನೆ ಹೊಕ್ಕಿದ್ದರು. ಗೊಣಗಿಕೊಳ್ಳುತ್ತಲೇ ಶಕುಂತಲಾ ಪಾತ್ರೆ ಹಿಡಿದು ಹೊರ ನಡೆದಿದ್ದಳು. ತಂಗಳು ಅನ್ನ, ಚಪಾತಿ ತುಂಡುಗಳನ್ನು ಹಾಕಿ 'ಹಚಾ ಹಚಾ...' ಎಂದಿದ್ದಳು. ನೆಲದ ಮೇಲೆ ಅನ್ನ, ರೊಟ್ಟಿ ಹಾಕಿದ್ದು ಕಂಡ ಕೂಡಲೇ ನಾಯಿಮರಿ ಮೇಲೆದ್ದಿತು. ದಿಢೀರನೆ ಮೇಲೇಳುತ್ತಿದ್ದಂತೆಯೇ ತನ್ನನ್ನು ಕಚ್ಚಿಯೇಬಿಟ್ಟಿತೆಂದು ಹೌಹಾರಿದ ಶಕುಂತಲಾ, ಥಂಗನೆ ಜಿಗಿದು ಮನೆ ಹೊಕ್ಕಿದ್ದಳು. ಮೃಷ್ಟಾನ್ನ ಭೋಜನವೇ ಸಿಕ್ಕಿತೆಂಬಂತೆ ಬಾಯಿ ಚಪ್ಪರಿಸಿಕೊಂಡು ನಾಯಿಮರಿ ಗಪಗಪನೆ ತಿಂದಿತು.

ಅಂದಿನಿಂದಲೇ ಆ ನಾಯಿಮರಿ ನಾರಾಯಣಾಚಾರಿಯ ಮನೆಯ ಕಾವಲು ಭಟನಾಯಿತು. ನಾರಾಯಣಾಚಾರಿ ರಾಮ ಮಂದಿರವಿರಲಿ, ರಾಯರ ಮಠಕ್ಕೆ ಹೋಗಲಿ, ಕೃಷ್ಣ ಮಂದಿರಕ್ಕೆ ತೆರಳಲಿ ನಾಯಿಮರಿ ರಾಮನ ಬಂಟ ಹನುಮಂತನಂತೆ ಹಿಂದೆಯೇ ಇರುತ್ತಿತ್ತು. ಮೊದಮೊದಲು ನಾಯಿಮರಿಯನ್ನು ಗುರ್... ಗುರ್... ಎಂದೇ ನೋಡುತ್ತಿದ್ದ ಶಕುಂತಲಾ ಕ್ರಮೇಣ ಮೃದುವಾದಳು. ಭೀಮಾಚಾರಿ ತನಗೆ ಆಡಲು ಜೀವಂತ ಆಟಿಕೆ ಸಿಕ್ಕಿತೆಂದು ಖುಷಿಪಟ್ಟಿದ್ದ. ನಾರಾಯಣಾಚಾರಿ ಮಾತ್ರ, ಸಾಕ್ಷಾತ್ ನಾರಾಯಣನೇ ತನ್ನ ಬೆಂಗಾವಲಿಗೆ ನಿಂತಿದ್ದಾನೆ, ತನ್ನ ಕುಟುಂಬದ ರಕ್ಷಣೆಗೆಂದೇ ದೇವರು ನಾಯಿಮರಿಯನ್ನು ಕಳುಹಿಸಿದ್ದಾನೆ ಎಂದು ಖುಷಿಪಟ್ಟಿದ್ದರು. ಕರಿ ಬಣ್ಣದ ಆ ನಾಯಿಮರಿ ಹಣೆಯ ಮೇಲೆ ತಿಲಕವಿಟ್ಟಂತೆ ಬಿಳಿಬಣ್ಣ ಹೊಂದಿತ್ತು. ಅದು ಹೆಣ್ಣೂ ಆಗಿದ್ದುದರಿಂದ ನಾಯಿಮರಿಗೆ 'ನಾರಿ' ಎಂಬ ನಾಮಕರಣ ಮಾಡಿದ್ದರು.

ತಾವು ತಿನ್ನುವ ಫಳಾರದಿಂದ ಹಿಡಿದು ಮೃಷ್ಟಾನ್ನ ಭೋಜನದವರೆಗೂ ಒಂದು ಭಾಗವನ್ನು ನಾರಾಯಣಾಚಾರಿ ನಾರಿಗೆಂದು ತೆಗೆದಿಡುತ್ತಿದ್ದರು. ಮಳೆ, ಚಳಿಯಲ್ಲಿ ತೊಂದರೆಯಾಗಬಾರದೆಂದು ಪಡಸಾಲೆಯ ಮೂಲೆಯಲ್ಲಿ ನಾರಿಗಾಗಿ ಗೋಣಿಚೀಲ ಹಾಕಿದ್ದರು. ಹೊಟ್ಟೆಗೆ ಹಿಟ್ಟಿಲ್ಲದೆ ಬೀದಿ ಬೀದಿ ಸುತ್ತಿ ಸುಸ್ತಾಗಿ ಬಿದ್ದಿದ್ದ ನಾಯಿಮರಿಗೆ ರಾಜಾತಿಥ್ಯವೇ ಸಿಕ್ಕಂತಾಗಿತ್ತು. ನಾಯಿಮರಿ ಬೆಳೆಯುತ್ತಾ ಸಾಗಿದಂತೆ ಅಭಿರುಚಿಗಳೂ ಬದಲಾಗುತ್ತಾ ಸಾಗಿದ್ದವು. ಬರುಬರುತ್ತಾ ಅದಕ್ಕೆ ನಾರಾಯಣಾಚಾರಿ ಮನೆಯ ಊಟ ಹಿಡಿಸದಾಯಿತು. ಅದೇ ಫಳಾರ, ಅದೇ ಪ್ರಸಾದ, ಅದೇ ತಂಗಳನ್ನ, ಹುಳಿಸಾರು, ಪುಳಿಯೋಗರೆ, ಮೊಸರನ್ನ. ಇವನ್ನು ಮಾತ್ರ ತಿಂದು ನಾಯಿಮರಿ ಗುಂಡುಗುಂಡಾಗಿ ಕೊಬ್ಬಿದ್ದರೂ, ಅದರ ನಾಲಿಗೆ ಮಾತ್ರ ಬೇರೆಯದನ್ನೇ ಬಯಸುತ್ತಿತ್ತು.

ಹಾಗೆ ನಾಯಿಮರಿ ಜೊಲ್ಲು ಸುರಿಸಲು ಕಾರಣವೂ ಇಲ್ಲದಿಲ್ಲ. ನಾರಾಯಣಾಚಾರಿ ಓಣಿಯ ಕೊನೆಯಲ್ಲಿದ್ದ ಪೀರಸಾಬ್‌ನ ಮನೆಯಿಂದ ಹೊರಹೊಮ್ಮುತ್ತಿದ್ದ ಮಸಾಲೆ ಘಾಟು ನಾಯಿಮರಿಯನ್ನು ಸೆಳೆಯುತ್ತಲೇ ಇತ್ತು. ಆತನ ಹೆಸರು ಪೀರಸಾಬ್ ಎಂದಿದ್ದರೂ ಜನ ಕರೆಯುತ್ತಿದ್ದುದು ಮಾತ್ರ ಸೂಜಿ ಪೀರಾ ಎಂದೇ. ಆರ್.ಎಂ.ಪಿ. ಕೋರ್ಸ್‌ನ್ನು ಅರ್ಧಕ್ಕೆ ಬಿಟ್ಟು ಬಂದಿದ್ದರೂ, ವೈದ್ಯನಾಗಿದ್ದ ಪೀರಸಾಬ್ ಎಂಬಿಬಿಎಸ್ ಡಾಕ್ಟರ್‌ಗಿಂತಲೂ ದೊಡ್ಡ ವೈದ್ಯನೆಂಬಂತೆ ಪೋಸು ಕೊಡುತ್ತಿದ್ದ. ಮನೆಯ ಮುಂದೆ ತೂಗುಹಾಕಿದ್ದ ಫಲಕದಲ್ಲಿ ಎಂಬಿಬಿಎಸ್, ಎಂ.ಡಿ., ಎಂ.ಎಸ್... ಇನ್ನೂ ಏನೇನನ್ನೋ ಹಾಕಿಕೊಂಡಿದ್ದರಿಂದ ಆ ಊರಿನಮಟ್ಟಿಗೆ ಈತನೊಬ್ಬ ಅಸಾಮಾನ್ಯ ವೈದ್ಯನಾಗಿಬಿಟ್ಟಿದ್ದ. ಆತನ ಬಳಿ ಹೋದವರೆಲ್ಲರಿಗೂ ಇಂಜೆಕ್ಷನ್

ಖಚಿತವಾಗಿತ್ತು. ಇಂಜೆಕ್ಷನ್ ಹಾಕಿದರೆ ಮಾತ್ರ ಚಿಕಿತ್ಸೆ ನೀಡಿದಂತೆ ಎಂಬ ಭಾವನೆ ಜನರಲ್ಲಿ ಇದ್ದುದರಿಂದಲೂ ಆತ ಹಾಗೆ ಮಾಡಿರಬಹುದು!

ಅವರಪ್ಪನಿಂದ ಬಳುವಳಿಯಾಗಿ ಸಿಕ್ಕಿದ್ದ ಸೂಜಿಯನ್ನು ಬಿಸಿ ನೀರಿನಲ್ಲಿ ಕಾಯಿಸಿ ಕಾಯಿಸಿ ಬಂದವರಿಗೆ ಚುಚ್ಚುತ್ತಿದ್ದರಿಂದ ಪೀರಸಾಬ್ ಸೂಜಿ ಪೀರನಾಗಿ ಫೇಮಸ್ ಆಗಿದ್ದ. ಇಂತಹ ಸೂಜಿ ಪೀರನ ಮನೆಯಲ್ಲಿ ವಾರದ ಬಹುತೇಕ ದಿನಗಳಲ್ಲಿ ಮಾಂಸದೂಟ ಖಚಿತ ಎಂಬಂತಿತ್ತು. ಆತನ ಮನೆಯ ಮುಂದೆ ಬಿದ್ದಿದ್ದ ಮೂಳೆಗಳಿಗಾಗಿ ನಾಯಿಗಳ ನಡುವೆ ಪೈಪೋಟಿ ನಡೆದು ಕದನವೇ ನಡೆದುಹೋಗುತ್ತಿತ್ತೆನ್ನಿ! ಮಸಾಲೆ ವಾಸನೆ ಹಿಡಿದು ನಾರಾಯಣಾಚಾರಿಯ ಮುದ್ದಿನ ನಾಯಿ ನಾರಿ ಆಗಾಗ ಅಲ್ಲಿ ಸುಳಿದಾಡಿದ್ದುಂಟು. ಆದರೆ ಅಲ್ಲಿ ನೆರೆದಿರುತ್ತಿದ್ದ ನಾಯಿಗಳ ಗುಂಪನ್ನು ನೋಡಿ ಹೆದರಿ ವಾಪಸ್ಸಾಗಿತ್ತು. ಆದರೆ ತನ್ನ ಪ್ರಯತ್ನವನ್ನು ಮುಂದುವರಿಸಿದ ಪರಿಣಾಮ ಹೇಗೋ ಒಂದಿಷ್ಟು ಮೂಳೆಗಳು ಇದಕ್ಕೂ ಸಿಗಲಾರಂಭಿಸಿದವು. ಹೀಗೆ ಶುದ್ಧ ಶಾಖಾಹಾರಿಯಾಗಿದ್ದ ನಾರಾಯಣಾಚಾರಿಯ ನಾರಿ ಮಾಂಸಾಹಾರಕ್ಕೆ ಅಪ್‌ಗ್ರೇಡ್ ಆಗಿತ್ತು.

* * *

ಮುಂಗೋಳಿ ಕೂಗಿಗೆ ಎಚ್ಚರಗೊಂಡ ನಾರಾಯಣಾಚಾರಿ ಚುಮು ಚುಮು ಚಳಿಯಲ್ಲಿಯೇ ಸ್ನಾನ ಮಾಡಲು ಹೊರಟಿದ್ದರು. ಹಾಗೆ ಹೊರಟ ಆಚಾರಿಯನ್ನು ಕೆಂಪು ಇರುವೆಗಳು ಮುತ್ತಿಕೊಂಡಿದ್ದವು. 'ಲೇ ಭೀಮಾ... ಇವ್ನ್ ಕಾಲಾಗ ಸಾಕಾಗ್ಯೆತೀ... ತಿನ್ನಾಕಂತ್ ಕೊಟ್ಟಿದ್ದ ಅವಲಕ್ಕೀ... ಉಂಡೀನ್... ಎಲ್ಲೆಂದ್ರಲ್ಲಿ ಆಕಿರ್ತಾನಾ. ಅದ್ನ್ ತಿನ್ನಾಕ್ ಇರ್ವಿ ಮುತ್ತಿಕೊಂಡಾವ... ರಾಮ ರಾಮಾ... ಕಾಲೆಲ್ಲಾ ಕಚ್ಚಿಬಿಟ್ವಲ್ಲೋ...' ಎಂದು ಕೆರೆದುಕೊಳ್ಳುತ್ತಾ ಸ್ನಾನಕ್ಕೆ ಹೋಗಿದ್ದ. ಸ್ನಾನ ಮಾಡಿ ಮಡಿಪಂಚೆ ಉಟ್ಟುಕೊಳ್ಳುತ್ತಾ ಮನೆಯೊಳಗೆ ಪ್ರವೇಶಿಸಿದ ನಾರಾಯಣಾಚಾರಿಯ ಕಾಲಿಗೆ ವಸ್ತುವೊಂದು ಚುಚ್ಚಿಕೊಂಡಿತ್ತು. ಗಾಜನ್ನೇ ತುಳಿದೆನೆಂದು ಗಾಬರಿಯಾದ ಆಚಾರಿ, ಹೆಂಡತಿಯನ್ನು ಕೂಗಿ ಕರೆದಿದ್ದರು. ಕಾಲಿಗೆ ಚುಚ್ಚಿದ ವಸ್ತುವನ್ನು ತೆಗೆದು ಕೈಯಲ್ಲಿ ಹಿಡಿದು ಏನಿರಬಹುದೆಂದು ಪರಿಶೀಲಿಸಿದ್ದರು. ಅದು ಮೂಳೆಯ ತುಂಡೆಂದು ಗೊತ್ತಾಗುತ್ತಿದ್ದಂತೆಯೇ 'ಥೀ... ಥೂ...' ಎಂದು ತಕ್ಷಣ ಹೊರಗೆಸೆದಿದ್ದರು. ಮನೆಯ ಛತ್ತು ಹಾರುವಂತೆ ಕಿರುಚಿಕೊಂಡಿದ್ದ ಆಚಾರಿ, 'ಅಪ್ಚಾರಾ... ಅಪ್ಚಾರಾ... ಅಪ್ರಾಚ್ಯ ಮುಂಡೇವು... ಮಡೀ ವೋಯ್ತೂ... ಮೈಲಿಗೀ ಆಯ್ತೂ... ಯಾರ್ ಇದ್ನ್ ತಂದಾಕಿದೋರ್ ಇಲ್ಲಿ. ಮುಂಜ್ ಮುಂಜಾನಿ ದರಿದ್ರಾನ ಮುಟ್ಟಿಕೊಂಡ್ನೆಲ್ಲಪ್ಪಾ... ಏನ್ ಗಾಚಾರಾ ಕಾದ್ಯೆತೋ... ರಾಮನ್ ಮುಟ್ಟೋದೆಂಗ್, ಪೂಜೀ ಮಾಡೋದೆಂಗ್...! ಲೇ ಇವ್ಳೇ... ಆಕಳ್ ಪಂಚಮೀ ಆಕಿ ಮನೀ ಶುದ್ಧ ಮಾಡ್...' ಎಂದು ಹೇಳಿ ಮತ್ತೆ ಸ್ನಾನಕ್ಕೆ ತೆರಳಿದ್ದರು. ಅಪ್ಪನ ಕೂಗಾಟಕ್ಕೆ ಬೆಚ್ಚಿ ನಿದ್ದೆಯಿಂದ ಎದ್ದು ಕಣ್ಣುಜ್ಜುತ್ತಾ ಬಂದಿದ್ದ ಭೀಮಾಚಾರಿಯೂ ಇರುವೆಯಿಂದ ಕಚ್ಚಿಸಿಕೊಂಡಿದ್ದ. ಅದೇ ವೇಳೆಗೆ ಅಲ್ಲಿಗೆ ಬಂದ ಶಕುಂತಲಾ ಪೊರಕೆಯಿಂದ ಇರುವೆಗಳನ್ನು ಗುಡಿಸಿ ಹೊರ ಹಾಕಿದ್ದಳು.

ನಾರಾಯಣಾಚಾರಿ ಮತ್ತೆ ಸ್ನಾನ ಮಾಡಿದ ನಂತರ ಕೈಯನ್ನು ಎರಡೆರಡು ಬಾರಿ ಗೋಮೂತ್ರದಿಂದ ಶುದ್ಧಪಡಿಸಿಕೊಂಡಿದ್ದರು! ಆದರೂ ಅವರ ಕಣ್ಣ ಮುಂದೆ ಮೂಳೆ ಚಲನಚಿತ್ರದ ರೂಪದಲ್ಲಿ ಹಾದು ಹೋದಂತಾಗಿತ್ತು. ಅದು ತನ್ನ ಮನೆಯೊಳಗೆ ಬಂದಿದ್ದಾದರೂ ಹೇಗೆ, ತಂದು ಹಾಕಿದವರ್ಯಾರು ಎಂಬ ಪ್ರಶ್ನೆ ಪದೇ ಪದೇ ಕಾಡಿತ್ತು. ಅದೇ ಗುಂಗಿನಲ್ಲಿಯೇ ರಾಮಮಂದಿರಕ್ಕೆ ಹೋಗಿದ್ದ ಆಚಾರಿ, ರಾಮನ ಪೂಜೆ ಮಾಡುವ ಧೈರ್ಯ ಮಾಡಿರಲಿಲ್ಲ. ಮನೆಗೆ ಬಂದು ಊಟ ಮಾಡುವಾಗಲೂ ಕೈಯಲ್ಲಿ ಮೂಳೆ ಬಂದಂತಾಗಿ, ಅದನ್ನೇ ತಿಂದಂತಾಗಿ ಬಾಯಲ್ಲಿನ ಅನ್ನವನ್ನು ಉಗಿದು ಥೀ... ಥೂ... ಎಂದು ಕ್ಯಾಕರಿಸಿದ್ದರು. ಎಂದಿನಂತೆ ಮಧ್ಯಾಹ್ನ ಮಲಗಲು ಯತ್ನಿಸಿದರೂ ನಿದ್ದೆ ಬಂದಿರಲಿಲ್ಲ. ಒದ್ದಾಡುತ್ತಲೇ ನಿದ್ರೆ ಶಾಸ್ತ್ರ ಪೂರೈಸಿದ್ದ ನಾರಾಯಣಾಚಾರಿ, ಮುಖ ತೊಳೆದುಕೊಂಡು ಬರುತ್ತಿದ್ದಂತೆಯೇ ಶಕುಂತಲಾ ಅವಲಕ್ಕಿ ತಂದಿಟ್ಟಿದ್ದಳು. ಅದನ್ನು ವಾಪಸ್ ಕಳುಹಿಸಿ, ಚಹಾ ತಂದು ಕೊಡುವಂತೆ ಹೇಳಿದ್ದರು. 'ಅಲ್ಲಾ... ಅದು ಯಂಗ್ ಬಂದ್ ಬಿತ್ತೂ ಅಂತೀನೀ... ಎಲ್ಲಾ ಅಯೋಮಯಾ...' ಎಂದು ತಲೆಕೆರೆದುಕೊಂಡಿದ್ದರು. ಅದೇ ವೇಳೆಗೆ ಪತ್ನಿ ತಂದುಕೊಟ್ಟ ಚಹಾ ಗುಟುಕರಿಸಿ ಹೊರಬಿದ್ದಿದ್ದರು.

ರಸ್ತೆಯಲ್ಲಿ ಕಾಲಿಡುತ್ತಿದ್ದಂತೆಯೇ 'ಕಟ್ರ್... ಕಟ್ರ್... ಕಟ್ರ್...' ಎಂಬ ಶಬ್ದ ಕಿವಿಗಪ್ಪಳಿಸಿ ನಾರಾಯಣಾಚಾರಿ ಕುತೂಹಲದಿಂದ ರಸ್ತೆಯ ಇಕ್ಕೆಲಗಳಲ್ಲಿ ಕಣ್ಣುಹಾಯಿಸಿದ್ದರು. ಸ್ವಲ್ಪ ದೂರದಲ್ಲಿಯೇ ಕಂಡ ದೃಶ್ಯ ಕಂಡು ದಂಗಾದರು. ಅವರ ಕಣ್ಣು ನೋಡಿದ್ದನ್ನು ಹೃದಯ ನಂಬಲು ಹಿಂದೇಟು ಹಾಕಿತ್ತು. ಮುದ್ದಿನಿಂದ ಸಾಕಿದ್ದ ನಾರಿಯ ಬಾಯಿಯಲ್ಲಿ ದೊಡ್ಡ ಗಾತ್ರದ ಮೂಳೆ ಕಂಡು ನಾರಾಯಣಾಚಾರಿ ದಂಗಾದರು. ತಲೆ ಗಿರ್ರನೆ ತಿರುಗಿದಂತಾಗಿ, ಕೆಳಗೆ ಬಿದ್ದ ಕಲ್ಲನ್ನು ತೆಗೆದುಕೊಂಡು ರೊಯ್ಯನೆ ನಾಯಿಯತ್ತ ಬೀಸಿದ್ದರು. ಮೂಳೆ ತಿನ್ನುವಲ್ಲಿ ನಿರತವಾಗಿದ್ದ ನಾಯಿಗೆ ಕಲ್ಲು ತಾಗುತ್ತಿದ್ದಂತೆಯೇ 'ಕುಂಯ್.. ಕುಂಯ್... ಕುಂಯ್...' ಎಂದು ಕುಂಯ್‌ಗುಡುತ್ತಾ ಮೂಳೆಯನ್ನು ಬಿಟ್ಟು ಓಡಿ ಹೋಯಿತು. 'ಥತ್... ಹೊಲುಸ್ ನನ್ಮಗಂದ್... ಇಂಥಾದ್ನ್ ತಂದ್ ಸಾಕಿದ್ನಲ್ಲಾ... ನಂದ್ ತೊಗೊಂಡ್ ನಾನೇ ಹೊಡ್ಕೋಬೇಕ್... ನೀ ಮನೀಗ್ ಬಾ ತಿಥೀ ಮಾಡ್ತೀನೀ... ನಾರಾಯಣಾ ನಾರಾಯಣಾ...' ಎಂದು ಗುರಾಯಿಸಿ ಮತ್ತೆ ಮನೆಗೆ ವಾಪಸ್ಸಾಗಿದ್ದರು. ಹೊರಗೆ ಹೊರಟ ಪತಿ ಮತ್ತೆ ವಾಪಸ್ ಬಂದಿದ್ದಕ್ಕೆ 'ಯಾಕ್ರೀ... ಬೆಕ್‌ಗಿಕ್ ಅಡ್ಡಾ ಬಂತಾ ಯಂಗ್...' ಎಂದು ಶಕುಂತಲಾ ಪ್ರಶ್ನಿಸಿದ್ದಳು. 'ನಿನ್ ಬೆಕ್ಕಿನ್ ಮನೀ ಹಾಳಾಗಾ... ಇನ್ ಮ್ಯಾಲ್ ಆ ನಾರೀನ್ ವೊಳಾಗ್ ಸೇರುಸ್ಬ್ಯಾಡ್...' ಎಂದು ರೇಗಿದ್ದರು. 'ಅಯ್ಯಾ... ಯಾಕ್ರೀ... ಇಂಗ್ ಆಡಾಕತ್ತೀರೀ... ಈಗ್ ಅದೇನ್ ಮಾಡ್ತಂತ... ಅದ್ನ ಮನ್ಯಾಗ್ ಬಿಟಕೊಂಡವ್ರಾ ನೀವ್... ಈಗ್ ನೋಡಿದ್ರಾ ಇಂಗ್ ಏಳಾಕತ್ತೀರೀ...! ಅಲ್ಲಾ... ಏನಾಯ್ತಂತ ಏಳಿದ್ರಲ್ ನನ್ಗೂ ಗೊತ್ತಾಗೋದ್...' ಎಂದಿದ್ದಳು. 'ಅದೂ... ಅದೂ... ಆ ಹೊಲ್ಸ್ ವಿಷ್ಯಾನ ನನ್ ಬಾಯ್ಲಿಂದ್ ಮತ್ಯಾಕ್ ಯೇಳುಸ್ತೀ... ಅದೆಲ್ಲಾ ನಿಂಗ್ಯಾಕ. ಬಾಯ್ಮುಚ್‌ಕೊಂಡ್ ಯೇಳಿದ್ನ್ ಕೇಳ್...' ಎಂದಿದ್ದ ನಾರಾಯಣಾಚಾರಿ, 'ಯೇ ಭೀಮಾ... ಭೀಮಾ... ಎಲ್ಲೋದ್



## ನಮನ......

ಶ್ರೀ ನಾರಾಯಣ ಮಂಜೇಶ್ವರ ಅವರು ದಿನಾಂಕ ೬-೧೨-೨೦೧೫ರಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಇವರು ಚಿಕ್ಕಂದಿನಿಂದ ಕಾರಂತರ ಬಾಲವನದಲ್ಲಿ ಬೆಳೆದವರು. ಅವರ ಮನೆಯಲ್ಲಿ ಹಾಗೂ ಹರ್ಷ ಮುದ್ರಣಾಲಯದಲ್ಲಿ ಕೆಲಸ ಮಾಡುತ್ತ, ಜೊತೆಗೆ ಕಾರಂತರ ವ್ಯಕ್ತಿತ್ವದಿಂದಲೂ ಸ್ಫೂರ್ತಿ ಪಡೆದು ತಮ್ಮ ಲೋಕಾನುಭವವನ್ನು ವಿಸ್ತರಿಸಿಕೊಂಡವರು. ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳನ್ನು ಬಲ್ಲ ಇವರು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಲ್ಲದೆ, ಸ್ವಂತ ಮುದ್ರಣಾಲಯ ನಡೆಸುತ್ತಿದ್ದರು. ಇವರು ನವಕರ್ನಾಟಕ ಮುದ್ರಣಾಲಯದೊಂದಿಗೆ ೧೫ ವರ್ಷಗಳಿಗೂ ಹೆಚ್ಚುಕಾಲ ಸಂಪರ್ಕ ಹೊಂದಿದ್ದರು. ಇವರು ಬರೆದ 'ಕಾರಂತರೊಂದಿಗೆ ಕೆಲವು ವರ್ಷಗಳು' ಕೃತಿಯು ನವಕರ್ನಾಟಕ ಪ್ರಕಾಶನದಿಂದ ಪ್ರಕಟಗೊಂಡಿದೆ.

ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ'ವು ಗೌರವಪೂರ್ವಕ ಸಂತಾಪ ಸೂಚಿಸುತ್ತದೆ.



# ಲಂಕೇಶ್ ಪ್ರಕಾಶನ

## ನಮ್ಮ ಪ್ರಕಾಶನದಿಂದ ಈವರೆಗೆ ಪ್ರಕಟವಾಗಿರುವ ಪುಸ್ತಕಗಳು

ಪ್ರತಿಗಳಿಗಾಗಿ ಸಂಪರ್ಕಿಸಿ:
ಲಂಕೇಶ್ ಪ್ರಕಾಶನ
ನಂ.9, ಇ.ಎ.ಟಿ.ರಸ್ತೆ, ಬಸವನಗುಡಿ
ಬೆಂಗಳೂರು–4 080–26676427
9880302817



| | ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|---|
| 1. | ನೀಲು ಕಾವ್ಯ –ಸಂಗ್ರಹ 1 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 2. | ನೀಲು ಕಾವ್ಯ –ಸಂಗ್ರಹ 2 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 3. | ನೀಲು ಕಾವ್ಯ –ಸಂಗ್ರಹ 3 | 200.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 4. | ಚಿತ್ರ ಸಮೂಹ | 90.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 5. | ಅಕ್ಷರ ಹೊಸ ಕಾವ್ಯ | 300.00 | ಕಾವ್ಯ ಸಂಗ್ರಹ | ಪಿ. ಲಂಕೇಶ್ |
| 6. | ಮರೆಯುವ ಮುನ್ನ–ಸಂಗ್ರಹ 1 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 7. | ಮರೆಯುವ ಮುನ್ನ–ಸಂಗ್ರಹ 2 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 8. | ಮರೆಯುವ ಮುನ್ನ–ಸಂಗ್ರಹ 3 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 9. | ಮರೆಯುವ ಮುನ್ನ–ಸಂಗ್ರಹ 4 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 10. | ಪಾಂಚಾಲಿ | 150.00 | 1974ರ ದೀಪಾವಳಿ ಸಂಚಿಕೆ | ಪಿ. ಲಂಕೇಶ್ |
| 11. | ಮನಕೆ ಕಾರಂಜಿಯ ಸ್ಪರ್ಶ | 150.00 | ಪಾಶ್ಚಿಮಾತ್ಯ ಬರಹಗಳು | ಪಿ. ಲಂಕೇಶ್ |
| 12. | ಈ ನರಕ ಈ ಪುಲಕ | 125.00 | ಸಿನಿಮಾ ಬರಹಗಳು | ಪಿ. ಲಂಕೇಶ್ |
| 13. | ಆಟ–ಜೂಜು–ಮೋಜು! | 175.00 | ಕ್ರೀಡಾ ಬರಹಗಳು | ಪಿ. ಲಂಕೇಶ್ |
| 14. | ಟೀಕೆ–ಟಿಪ್ಪಣಿ 1 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 15. | ಟೀಕೆ–ಟಿಪ್ಪಣಿ 2 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 16. | ಟೀಕೆ–ಟಿಪ್ಪಣಿ 3 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 17. | ಸಾಹಿತಿ–ಸಾಹಿತ್ಯ | 300.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 18. | ರೂಪಕ ಲೇಖಕರು | 70.00 | ಪ್ರಸಿದ್ಧ ಲೇಖಕರ ಬದುಕು–ಬರಹ | ಪಿ. ಲಂಕೇಶ್ |
| 19. | ಕಂಡದ್ದು ಕಂಡಹಾಗೆ | 100.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 20. | ಪ್ರಸ್ತುತ | 80.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 21. | ಹುಳಿಮಾವಿನ ಮರ | 275.00 | ಆತ್ಮಕಥೆ | ಪಿ. ಲಂಕೇಶ್ |
| 22. | ಮುಸ್ಸಂಜೆಯ ಕಥಾ ಪ್ರಸಂಗ | 250.00 | ಕಾದಂಬರಿ | ಪಿ. ಲಂಕೇಶ್ |
| 23. | ಬಿರುಕು | 65.00 | ಕಾದಂಬರಿ | ಪಿ. ಲಂಕೇಶ್ |
| 24. | ಅಕ್ಕ | 80.00 | ಕಾದಂಬರಿ | ಪಿ. ಲಂಕೇಶ್ |
| 25. | ಮಂಜು ಕವಿದ ಸಂಜೆ | 85.00 | ಕಥಾ ಸಂಕಲನ | ಪಿ. ಲಂಕೇಶ್ |
| 26. | ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| 27. | ಕಲ್ಲು ಕರಗುವ ಸಮಯ | 125.00 | ಕಥಾ ಸಂಕಲನ | ಪಿ. ಲಂಕೇಶ್ |
| 28. | ನಾನಲ್ಲ | 60.00 | ಕಥಾ ಸಂಕಲನ | ಪಿ. ಲಂಕೇಶ್ |
| 29. | ಕೆರೆಯ ನೀರನು ಕೆರೆಗೆ ಚೆಲ್ಲಿ | 50.00 | ಕಥಾ ಸಂಕಲನ | ಪಿ. ಲಂಕೇಶ್ |
| 30. | ಉಲ್ಲಂಘನೆ | 80.00 | ಕಥಾ ಸಂಕಲನ | ಪಿ. ಲಂಕೇಶ್ |
| 31. | ಪಾಪದ ಹೂಗಳು | 60.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 32. | ಬಿರುಕು | 40.00 | ನಾಟಕ | ಪಿ. ಲಂಕೇಶ್ |
| 33. | ಸಂಕ್ರಾಂತಿ | 50.00 | ನಾಟಕ | ಪಿ. ಲಂಕೇಶ್ |
| 34. | ತೆರೆಗಳು | 50.00 | ನಾಟಕ | ಪಿ. ಲಂಕೇಶ್ |
| 35. | ಈಡಿಪಸ್ ಮತ್ತು ಅಂತಿಗೊನೆ | 70.00 | ನಾಟಕ | ಪಿ. ಲಂಕೇಶ್ |
| 36. | ಟಿ. ಪ್ರಸನ್ನನ ಗೃಹಸ್ಥಾಶ್ರಮ | 50.00 | ನಾಟಕ | ಪಿ. ಲಂಕೇಶ್ |
| 37. | ಗುಣಮುಖ | 30.00 | ನಾಟಕ | ಪಿ. ಲಂಕೇಶ್ |
| 38. | ಕ್ರಾಂತಿ ಬಂತು ಕ್ರಾಂತಿ | 40.00 | ನಾಟಕ | ಪಿ. ಲಂಕೇಶ್ |
| 39. | ಕಪ್ಪು ಮಲ್ಲಿಗೆ | 75.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |
| 40. | ಕಂಡಹಾಗೆ – 1 | 125.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 41. | ಕಂಡಹಾಗೆ – 2 – III | 150.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 42. | ದರವೇಶಿ ಕತೆಗಳು | 90.00 | ಕತೆಗಳು | ಅನು: ಗೌರಿ ಲಂಕೇಶ್ |
| 43. | ಬಸವರಾಜಮಾರ್ಗ | 40.00 | ಲೇಖನಗಳು | ಸಂ: ಗೌರಿ ಲಂಕೇಶ್ |
| 44. | ಬೆನಜೀರ್ | 25.00 | ಜೀವನ ಚರಿತ್ರೆ | ಗೌರಿ ಲಂಕೇಶ್ |
| 45. | ಆವರಣ ಎಂಬ ವಿ–ಕೃತಿ | 100.00 | ವಿಮರ್ಶೆಗಳು | ಸಂ: ಗೌರಿ ಲಂಕೇಶ್ |
| 46. | ಜೈಲೆಂಬ ಲೋಕದಲ್ಲಿ | 75.00 | ಸರಳುಗಳ ಹಿಂದಿನ ಸತ್ಯಗಳು | ಕುಮಾರ್ ಸಮತಳ |
| 47. | ವೇದಾಂತ ರೆಜಿಮೆಂಟ್ | 60.00 | ವೈಚಾರಿಕ ಲೇಖನಗಳು | ಬಿ.ವಿ.ವೀರಭದ್ರಪ್ಪ |
| 48. | ಕಳೆದುಕೊಂಡವಳು | 45.00 | ಕತೆಗಳು | ಜಾಹ್ನವಿ |
| 49. | ನೂರುಸ್ವರ | 60.00 | ಕತೆಗಳು | ಉಮಾ ರಾವ್ |
| 50. | ಟ್ರೇನ್ ಟು ಪಾಕಿಸ್ತಾನ್ | 125.00 | ಕಾದಂಬರಿ | ಖುಷ್ವಂತ್ ಸಿಂಗ್. ಅನು : ಡಾ. ಎಂ.ಬಿ. ರಾಮಮೂರ್ತಿ |
| 51. | ಮಿಡತೆಗಳ ಬರವಿಗೆ.... | 100.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 52. | ಡಿಸೆಂಬರ್ 13 | 150.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 53. | ಮನುಸ್ಮೃತಿ | 20.00 | ಸಂಘಪರಿವಾರದ ಸಂವಿಧಾನ ಮನುಸ್ಮೃತಿ | ಏಕಲವ್ಯ |
| 54. | ಆರೋಗ್ಯ ಮತ್ತು ಜೀವನ | 125.00 | ವೈದ್ಯಕೀಯ ಸಾಹಿತ್ಯ | ಡಾ. ಎಂ.ಬಿ. ರಾಮಮೂರ್ತಿ |
| 55. | ತೇಜಸ್ವಿ ನೆನಪು | 100.00 | ಬರಹಗಳ ಸಂಗ್ರಹ | ಸಂ.: ಬಿ. ಚಂದ್ರೇಗೌಡ |
| 56. | ಜಬೀವುಲ್ಲಾ ಕೊಟ್ಟ ಕೋಳಿ | 100.00 | ಹಾಸ್ಯಲೇಖನಗಳು | ಬಿ. ಚಂದ್ರೇಗೌಡ |
| 57. | ಮುತ್ತುರಾಜನ ಮುತ್ತು | 175.00 | ಶಿವರಾಜ್‌ಕುಮಾರ್ ಆತ್ಮಕಥೆ | ಸದಾಶಿವ ಶೆಣೈ |
| 58. | ವಿಷ್ಣು–ನೂರೊಂದು ನೆನಪು | 150.00 | ವಿಷ್ಣುವರ್ಧನ್ ಆತ್ಮಕಥೆ | ಸದಾಶಿವ ಶೆಣೈ |
| 59. | ಓ ಈಳಂ | 250.00 | ಎಲ್‌ಟಿಟಿಇ ಕಥನ | ಕುಮಾರ್‌ಬುರಡಿಕಟ್ಟಿ |
| 60. | ಖೈರ್ಲಾಂಜಿ | 200.00 | ದಲಿತ ಭಾರತದ ಕಥನ | ಆನಂದ್ ತೇಲ್‌ತುಂಬ್ಡೆ |
| 61. | ಕಮಲಾ ದಾಸ್ ಕಥೆಗಳು | 60.00 | ಸಣ್ಣ ಕಥೆಗಳು | ಅನು: ಗಂಗಾಧರನ್ |
| 62. | ಮಾಂಟೊ ಕಥೆಗಳು | 80.00 | ಸಣ್ಣ ಕಥೆಗಳು | ಅನು: ಜೆ.ಬಾಲಕೃಷ್ಣ |
| 63. | ಕೋಮುವಾದ | 60.00 | ವೈಚಾರಿಕ ಬರಹಗಳು | ರಾಮ ಪುಲಿಯಾನಿ |
| 64. | ಜಾತಿ ಪದ್ಧತಿ | 125.00 | | ರಾಮ್‌ಮನೋಹರ್ ಲೋಹಿಯಾ |
| 65. | ರಾಮಾಯಣ ವಿಷವೃಕ್ಷ | 75.00 | ವೈಚಾರಿಕ ಬರಹಗಳು | ಡಾ.ಬಂಜಗೆರೆ ಜಯಪ್ರಕಾಶ್ |
| 66. | ಅರೇಬಿಯನ್ ನೈಟ್ಸ್ | 150.00 | ಕಥೆಗಳು | ಪಂಜು ಗಂಗೊಳ್ಳಿ |
| 67. | ಜಿಮ್‌ಕಾರ್ಬೆಟ್–ಶಿಕಾರಿ ಕತೆಗಳು | 80.00 | ಕಥೆಗಳು | ಟಿ. ಎಸ್ .ವಿವೇಕಾನಂದ |
| 68. | ಚೆಕ್‌ಪೋಸ್ಟ್ | 100.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 69. | Some–ಪದ | 80.00 | ಅನ್ಯಭಾಷಾ ಪದಗಳ ಪ್ರವಾಸ ಕಥನ | ಪಾರ್ವತೀಶ್ |
| 70. | ಬಿಡಿಚಿತ್ರಗಳು | 60.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 71. | ಗೋವು ಪವಿತ್ರ ಎಂಬ ಮಿಥ್ಯೆ | 80.00 | ವೈಚಾರಿಕ ಬರಹಗಳು | ಡಿ.ಎನ್.ಝಾ |
| 72. | ಕರ್ಕರೆಯನ್ನು ಕೊಂದವರ್‍ಯಾರು? | 200.00 | | ಎಸ್. ಎಂ. ಮುಶ್ರಿಫ್ |
| 73. | ಅಸ್ಪೃಶ್ಯ ವಸಂತ | 200.00 | ಕಾದಂಬರಿ | ಕಲ್ಯಾಣ್ ರಾವ್ |
| 74. | ಬಾಲಗೋಪಾಲ್ ಬರಹಗಳು | 150.00 | ವೈಚಾರಿಕ ಬರಹಗಳು | ಬಾಲಗೋಪಾಲ್ |
| 75. | ಬದುಕು–ಬಯಲು | 200.00 | ಹಿಜ್ರಾ ಒಬ್ಬಳ ಆತ್ಮಕತೆ | ಎ. ರೇವತಿ |
| 76. | ಚಾರ್ವಾಕ | 250.00 | ಸಮಕಾಲೀನ ಬರಹಗಳು | ಶಿವಸುಂದರ್ |
| 77. | ಜಂಗಲ್‌ನಾಮಾ | 175.00 | ಗೆರಿಲ್ಲಾ ವಲಯದೊಳಗೆ | ಸತ್ನಾಮ್ |
| 78. | ತಾಜುಮಾ ಕವಿತೆಗಳು | 75.00 | ಕವನಗಳು | ತಾಜುಮಾ |
| 79. | ಅಂತ್ಯಜರ ತತ್ವ ಚಿಂತನೆ | 100.00 | | ಬಂಜಗೆರೆ ಜಯಪ್ರಕಾಶ್ |
| 80. | ಪ್ರೀತಿ ಮತ್ತು ಕ್ರಾಂತಿ | 125.00 | ಕವನಗಳು | ಫೈಜ್ ಮಹಮ್ಮದ್ ಫೈಜ್ |
| 81. | ಲೋಕಾಯುಕ್ತ ತನಿಖಾ ವರದಿ | 100.00 | | ಸಂತೋಷ್ ಹೆಗ್ಡೆ |
| 82. | ಕೇಸರಿ ಭಯೋತ್ಪಾದನೆ | 100.00 | | ಸುರೇಶ್ ಭಟ್ ಬಾಕ್ರಬೈಲ್ |
| 83. | ಹೇಳುತ್ತೇನೆ ಕೇಳು | 175.00 | ಹೆಣ್ಣಿನ ಆತ್ಮಕತೆ | ಸುಕನ್ಯಾ ಕನಾರಳ್ಳಿ |
| 84. | ನನ್ನ ಪ್ರೀತಿಯ ಭಾರತ | 125.00 | ಸಾಹಸ ಕಥೆಗಳು | ಜಿಮ್‌ಕಾರ್ಬೆಟ್ |
| 85. | ಒಂದು ಶಹರದ ಸುತ್ತ | 85.00 | ನಾಟಕ | ಎಸ್. ಎಫ್. ಯೋಗಪ್ಪನವರ್ |
| 86. | ಮಂಗನ ಬ್ಯಾಟೆ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 87. | ಭಾರತದಲ್ಲಿ ಮಾವೋ ಚಳುವಳಿ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 88. | ಮಧ್ಯಯುಗೀನ ಭಾರತ ಅಂತರ್‌ರಾಜ್ಯ ತತ್ವಚಿಂತನೆ | | | 100.00 |
| 89. | ಬಿಡಿಚಿತ್ರಗಳು | | | I 60.00 :: II 100.00 |
| 90. | ಭಾರತದಲ್ಲಿ ಕ್ರಾಂತಿ ಮತ್ತು ಮಾವೋವಾದಿ ಚಳವಳಿ – ಶ್ರೀಧರ | | | 150.00 |
| 91. | ಬೆಳಕಿನಡೆಗೆ | 125.00 | | |
| 92. | ಹುಳಿ ಮಾವು ಮತ್ತು ನಾನು | 150.00 | | ಇಂದಿರಾ ಲಂಕೇಶ್ |
| 93. | ಬಿಟ್ಟು ಹೋದ ಪುಟಗಳು I | 250.00 | | ಪಿ. ಲಂಕೇಶ್ |
| 94. | ನೇತುಬಿದ್ದ ನವಿಲು | 225.00 | | ರಹಮತ್ ತರೀಕೆರೆ |
| 95. | ಬಿಟ್ಟು ಹೋದ ಪುಟಗಳು II | 250.00 | | ಪಿ. ಲಂಕೇಶ್ |
| 96. | ಅನಂತಮೂರ್ತಿ ಅನಂತ ರೀತಿ | 130.00 | | |
| 97. | ಜೇಡರ ಕಣಿವೆ ಮತ್ತು ಇತರ ಕಥೆಗಳು | 50.00 | | |
| 98. | ನಸ್ರುದ್ದೀನ ಕತೆಗಳು | 80.00 | | |
| 99. | ಆರ್.ಎಸ್.ಎಸ್. ಅಂತರಂಗ | 80.00 | | |

ಇವ್ನೂ... ಅವ್ನಿಗೇಳ್ ನಾಯೀನ್ ಮುಟ್ವ್ಯಾನಂದ್ರಾ ಚರ್ಮಾ ಸುಲೀತೀನಂತ' ಎಂದವರೆ ಸರಸರನೆ ಹೊರಟು ಹೋಗಿದ್ದರು.

ರಾತ್ರಿ ಎಂದಿನಂತೆ ಮಲಗಲು ಮನೆಯ ಒಳಗೆ ಬರಲು ಯತ್ನಿಸಿದ್ದ ನಾಯಿಯನ್ನು ನಾರಾಯಣಾಚಾರಿ ಬಡಿಗೆಯಿಂದ ಗದರಿಸಿ ಓಡಿಸಿದ್ದರು. ಅಂದಿನಿಂದ ನಾರಿ ಒಳಗೆ ಬರದಂತೆ ತಡೆಯುವುದೇ ಆಚಾರಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿತು. 'ಹೊಲುಸ್ ತಿನ್ನೋ ನಿನ್ ಏನಾದ್ರಾ ಮನೀಗ್ ಸೇರಿಸ್ಕೆಂಡೀನಂದ್ರಾ ನಮ್ ಕುಲದಾಗಿಂಗ್ ನನ್ ವೊರಗ್ ಆಕ್ತಾರಾ... ನೀ ನಮ್ಮನಿ ಆಸುಪಾಸು ಕಾಣಿಸಿಕೊಂಡೀಯಂದ್ರ ನಾನ್ ಪೂಜಿಸೋ ರಾಮಾಕೃಷ್ಣರ ಮ್ಯಾಲ ಆಣಿ...' ಎಂದು ದೂರದಿಂದಲೇ ನಾರಿಗೆ ಎಚ್ಚರಿಕೆ ನೀಡಿದ್ದರು. 'ನಾರಾಯಣಾ ಈ ಗಂಡಾಂತರದಿಂದ್ ನೀನೇ ಕಾಪಾಡಪಾ...!' ಎಂದು ಆಗಸದತ್ತ ಕೈಜೋಡಿಸಿ ನಮಸ್ಕರಿಸಿದ್ದರು.

ನಾರಾಯಣಾಚಾರಿಯ ಆಣೆ-ಪ್ರಮಾಣ ಆ ನಾಯಿಗೇನು ಗೊತ್ತಾಗಬೇಕು. ಕುಂಯ್... ಕುಂಯ್... ಎಂದು ಬಾಲ ಮುದುರಿಕೊಂಡು ಅವರ ಬಳಿ ಬರಲು ಯತ್ನಿಸಿತ್ತು. ನಾಲಿಗೆಯಿಂದ ಕಾಲು ನೆಕ್ಕಿ ತನ್ನ ಪ್ರೀತಿ ಎಷ್ಟೆಂಬುದನ್ನು ತೋರಿಸಲು ಯತ್ನಿಸುತ್ತಿತ್ತು. ಆದರೆ ನಾರಾಯಣಾಚಾರಿ 'ಹಚಾ... ಹಚಾ... ಅಡ್ರ್... ಅಡ್ರ್...' ಎಂದು ಗದರಿಸಿ ಅದರಿಂದ ದೂರ ಸರಿಯುತ್ತಿದ್ದರು. ನಾರಾಯಣಾಚಾರಿಯ ಕೃಪೆಯಿಂದ ನಿತ್ಯ ಮನೆಯಲ್ಲಿ ಬೆಚ್ಚಗೆ ಮಲಗುತ್ತಿದ್ದ ನಾಯಿಗೆ ಮೂಳೆ ದರ್ಶನದ ನಂತರ ಬೀದಿಯೇ ಗತಿಯಾಯಿತು. ಅದರಿಂದ ನಾರಿಗೆ ಮತ್ತೊಂದು ರೀತಿಯ ಲಾಭವಾಗಿತ್ತು. ಒಂದರ್ಥದಲ್ಲಿ ಸ್ವೇಚ್ಛೆ ಸಿಕ್ಕಂತಾಗಿ, ತನ್ನ ಚಾಳಿಯನ್ನು ನಿರ್ಭಿಡೆಯಿಂದ ಮುಂದುವರಿಸಿತು. ಇಡೀ ಓಣಿಯಲ್ಲದೆ ಇತರೆಡೆ ಯಲ್ಲಿಯೂ ಸುತ್ತಿ ತನ್ನ ಹೊಟ್ಟೆ ತುಂಬಿಸಿಕೊಳ್ಳುವ ಕೆಲಸ ಮಾಡುತ್ತಿತ್ತು. ನಿತ್ಯ ಬಾಯಿಗೆ ಮೂಳೆ ಸಿಗದೇ ಇದ್ದರೆ ಅದೇನನ್ನೋ ಕಳೆದುಕೊಂಡಂತೆ ನಾರಿ ಚಡಪಡಿಸುತ್ತಿತ್ತು. ಸೂಜಿ ಪೀರನ ಮನೆಯೊಂದೇ ಅಲ್ಲದೆ ಅಲ್ಲಿಯೇ ಸಮೀಪದಲ್ಲಿದ್ದ ವಂಡ್ರಿ, ತುಕಾರಾಮ, ಕೊತ್ಲಪ್ಪ ಇನ್ನಿತರರ ಮನೆಗಳಿಗೂ ಭೇಟಿ ನೀಡುತ್ತಿದ್ದುದುಂಟು. ಒಟ್ಟಾರೆ ಬಾಯಿರುಚಿಗೆ ತಕ್ಕಂತೆ ಮನೆಗಳನ್ನು ಆಯ್ಕೆ ಮಾಡಿಕೊಂಡು ತನಗೆ ಬೇಕಾದ್ದನ್ನು ಪಡೆದುಕೊಳ್ಳುತ್ತಿತ್ತು. ಅದು ಹೊಟ್ಟೆಗಾಗಿ ಯಾರ ಮನೆ ಸುತ್ತಿದರೂ ಕಾಯುತ್ತಿದ್ದುದು ಮಾತ್ರ ನಾರಾಯಣಾಚಾರಿ ಮನೆಯನ್ನೇ...!

ನಿತ್ಯ 'ಕಟ್ರ್... ಕಟ್ರ್... ಕಟ್ರ್...' ಸದ್ದು ಕೇಳಿಸುತ್ತಲೇ ಇತ್ತು! ನಾರಾಯಣಾಚಾರಿಗೆ ಅದೇ ದೊಡ್ಡ ತಲೆನೋವಾಗಿ ಮಾರ್ಪಟ್ಟಿತ್ತು. ಮನೆ ಮುಂದೆ ಮೂಳೆ ತುಂಡುಗಳು ಬೀಳುವುದು ಸಾಮಾನ್ಯವಾಗಿತ್ತು. ಅದನ್ನು ತೆಗೆಯುವವರು ಯಾರು...? ಒಂದು ವೇಳೆ ತೆಗೆಯದೆ ಇದ್ದರೆ ಯಾರಾದರೂ ತಪ್ಪಾಗಿ ತಿಳಿದುಕೊಂಡರೆ ಹೇಗೆ...? ಎಂಬ ಪ್ರಶ್ನೆಗಳು ಪದೇ ಪದೇ ಕಾಡಿದ್ದವು. ಅದು ಬೇರೆ ಎಲ್ಲಿಯಾದರೂ ತಿಂದು ವಾಪಸ್ಸಾಗುತ್ತಿದ್ದರೆ ಅಷ್ಟಾಗಿ ತಲೆಕೆಡಿಸಿಕೊಳ್ಳುತ್ತಿರಲಿಲ್ಲವೇನೋ. ಆದರೆ ಇವರು ಮಲಗಿದ ವೇಳೆ ನೇರವಾಗಿ ಮನೆಯ ಮುಂದೆ ಇಲ್ಲವೆ ಕಾಂಪೌಂಡ್ ಒಳಗೇ ತಂದು ತಿನ್ನುತ್ತಿತ್ತು. ಉಳಿದದ್ದನ್ನು ಅಲ್ಲಿಯೇ ಬಿಟ್ಟು ತನಗಿಷ್ಟ ಬಂದಲ್ಲಿ ಹಾಯಾಗಿ ಮಲಗುತ್ತಿತ್ತು. ಒಂದರ್ಥದಲ್ಲಿ ಹಚ್ಚಗಿದ್ದಲ್ಲಿ ತಿಂದು ಬೆಚ್ಚಗಿದ್ದಲ್ಲಿ ಮಲಗು ಎಂಬ ಗಾದೆ ಮಾತನ್ನು ಅನುಸರಿಸುತ್ತಿತ್ತು. 'ಯೇ ನಾರೀ... ನೀ ಮಾಡೋದ್ ಸರಿಯಲ್ ನೋಡೂ... ನೀ ನಾರಾಯಣನ ಅವತಾರ್ ಇದೀ...! ಅದ್ಕಾ ನಾ ಏನೂ ಮಾಡ್ದೇ ಸುಮ್ಕಿದ್ದೀನಿ. ನೀ ಹೊಲಸ್ ಮುಟ್ಟಿಕೊಂಡ್ರಾ ಶ್ರೀಮನ್ ನಾರಾಯಣನ್‌ಗೂ ಅಪಚಾರ್ ಆಗ್ತೈತೀ... ತಿಳೀತಿಲ್ಲೋ... ಇನ್‌ಮ್ಯಾಲ್ ಅಂಗ್ ಮಾಡಂಗಿಲ್ ನೋಡ್...' ಎಂದು ಗೀತೋಪದೇಶ ಮಾಡುವ ರೀತಿಯಲ್ಲಿ ಹೇಳಿದ್ದರು. ಇವರು ಉಪದೇಶಿಸುವಾಗ ತದೇಕಚಿತ್ತದಿಂದ ಆಲಿಸಿದಂತೆ ಅವರನ್ನೇ ದಿಟ್ಟಿಸಿ ನೋಡುತ್ತಿದ್ದ ನಾರಿ, ನಂತರ ಅದರ ಪಾಡಿಗದು ಪೀರ್‌ಸಾಬ್ ಮನೆ ಕಡೆ ಓಡಿಹೋಗುತ್ತಿತ್ತು.

ವಿಷಯ ಹೀಗಿರಬೇಕಾದರೆ ಭೀಮಾಚಾರಿ ಒಂದು ದಿನ ಅಪ್ಪನನ್ನು ಕೇಳಿದ ಪ್ರಶ್ನೆ ಅರಗಿಸಿ ಕೊಳ್ಳದಂತಾಗಿತ್ತು. 'ಅಲ್ಲಪ್ಪಾ, ನಾರಿ ದಿನಾ ಅದೇನನ್ನೋ ತಿನ್ನಾಕತೈತೀ. ಅದು ಏನ್ ತಿನ್ನೈತೀ. ಎಲ್ಲಿಂದ್ ಎತ್ತಿಕೊಂಡ್ ಬರಾಕತ್ಯಾದ... ಅದ್ನ ನಮ್ಮನಿಯಾಗ ಯಾಕ್ ಮಾಡಂಗಿಲ್ಲಾ...' ಇತ್ಯಾದಿಯಾಗಿ ಕೇಳಿದ್ದ. 'ಯೇ ಬಾಯ್ಮುಚ್ಚೋ... ಬ್ರಾಹ್ಮಣರ ಹೊಟ್ಟ್ಯಾಗ್ ಹುಟ್ಟೀ ಎಂಥಾ ಮಾತಂತ ಆಡ್ತೀಯೋ...' ಎಂಬ ನಾರಾಯಣಾಚಾರಿಯನ್ನು ಗಂಭೀರವಾಗಿ ತೆಗೆದುಕೊಳ್ಳದ ಭೀಮಾಚಾರಿ ತಲೆ ಕೆರೆದುಕೊಳ್ಳುತ್ತಾ, 'ಅಲ್ಲಾ ಅದ್ನ ತಿಂದ್ರಾ ಏನಾಗ್ತೈತೀ ಅಂತ... ನಾವೂ ತಿನ್ನೋದಾ...!?' ಎಂದು ಮುಗ್ಧವಾಗಿ ಮರುಪ್ರಶ್ನಿಸಿದ್ದ. 'ಯೇ ಭೀಮೂ ಬಾಯ್ಮುಚ್ಚೋ... ಇನ್ನೊಂದ್ ಮಾತಾಡೀಯಂದ್ರಾ ನನ್ನಾಣೆ...' ಎಂದು ಕಿರುಚಿಕೊಂಡಿದ್ದರು.




ತನ್ನ ಮಗ ಹೀಗೆ ಪ್ರಶ್ನೆ ಕೇಳಲು ತಾನು ಸಾಕಿದ ಮುದ್ದಿನ ನಾಯಿಯೇ ಕಾರಣವಾಯಿತಲ್ಲಾ ಎಂದು ಆಚಾರಿ ಸಿಡಿಮಿಡಿಗೊಂಡಿದ್ದ. ನಾರಿಯ ವಿಷಯ ದಲ್ಲಿ ಕೋಪ ಉಕ್ಕಿ ಉಕ್ಕಿ ಬರುತ್ತಿತ್ತು. ಇದನ್ನು ಹೀಗೆಯೇ ಬಿಟ್ಟರೆ ನನಗೆ ಕಂಟಕ ತಪ್ಪಿದ್ದಲ್ಲ ಎಂದುಕೊಂಡ ಆಚಾರಿ, ಇದಕ್ಕೆ ಮೂಲ ಕಾರಣ ವೆಂದುಕೊಂಡಿದ್ದ ಸೂಜಿ ಪೀರನ ಮನೆಗೆ ದಡಬಡಾಯಿಸಿ ಹೋಗಿದ್ದ. 'ಯೇ ಪೀರಾ... ಪೀರಾ... ಬಾರೋ ವೊರಾಗ್...' ಎಂದು ಕೂಗಿದ್ದರು. 'ಅರೆ ಆಚಾರೀ ಸಾಬ್ ನೀವ್ ಇಲ್ಲೀ...! ನಮ್ ಓಣ್ಯಾಗೇ ಇದ್ರೂ ಒಂದ್ಸಾರೀನೂ ನಮ್ದೂಕೇ ದವಾಖಾನ್ಯಾಗ್ ಕಾಲಿಟ್ಟಿಲ್ ನೀವ್... ತಬಿಯತ್ ಟೀಕ್ ಇಲ್ಲೇನ್... ಅಲ್ಲಾನ್ ಆದೇಶ್ ಆಗಿರ್ಬೇಕ್ ನೋಡ್ರೀ... ಅದ್ಕಾ ಇಲ್ಲೀತನಾ ಬಂದೀರ್ ನೀವ್... ಆವೋ... ಸಾಬ್ ಅಂದರ್ ಆವೋ...' ಎಂದು ಸೂಜಿ ಪೀರ ಒಳಗೆ ಆಹ್ವಾನ ನೀಡಿದ್ದ. 'ನಾನ್ ನಿನ್ ಮನ್ಯಾಗ್ ಆತಿಥ್ಯಕ್ ಬಂದಿಲ್ಲೋ... ನನ್ ಆರೋಗ್ಯ ನಟ್ಟಗೈತೆ ಗೊತ್ತಾಯ್ತೇನ್... ದಿನಾ ಆ ಕಪ್ಪೂ ಕಡೀ ತಿನ್ನೋ ಬದ್ಲೂ ಕಾಯೀ ಪಲ್ಯಾ ತಿಂದ್ ನಿನ್ನ ಆರೋಗ್ಯ ನೆಟ್ಟಗ್ ಇಟ್ಕೋ... ನಿನ್ಗೊಂದ್ ಮಾತ್ ಯೇಳಾಕ್ ಬಂದೀನೀ... ನಿನ್ನಿಂದಾಗೀ ನನ್ ಮಡೀ ಹಾಳಾಗ ಕತ್ಯಾದ. ನಿಮ್ಮನಿಯಾಗ್ ಏನಾದ್ರೂ ಹೊಲುಸ್ ತಿಂದ್ಕೋ...? ಆದ್ರಾ ಅದ್ನಾ ವೊರಾಗ್ ಯಾಕ್ ತಂದಾಕ್ತೀ...?

ಏಕಾಯೇಕಿ ನಾರಾಯಣಾಚಾರಿ ಹೀಗೆ ಮಾತನಾಡುತ್ತಿದ್ದಂತೆಯೇ ಸೂಜಿ ಪೀರನಿಗೂ ಪಿತ್ತ ನೆತ್ತಿಗೇರಿದಂತಾಗಿತ್ತು. 'ಏ ಆಚಾರೀ... ಕ್ಯಾ ಬೋಲ್ತಾ ಹೈ ತುಮ್... ನಮ್ದೂಕಿ ತಿಂಬೋದ್ ಹೊಲೂಸಾದ್ರೇ... ನಿಮ್ದೂಕಿ ತಿಂಬೋದ್‌ಕ ಏನಂತೀರಿ...? ಯಾರ್ ಏನ್ ತಿಂದ್ರೂ... ಅದೂ ಮುಂಜಾಲಿ ಹೊಲುಸಾಗೇ ಬಾಹರ್ ಬರೋದ್. ಏನೋ ಬೊಮ್ಮನ್ ಅಂತಾ ಮರ್ವಾದಿ ಕೊಟ್ರಾ, ನನ್ ಇಜ್ಜತ್ ಕಳೀತೀ... ನಮ್ದೂಕಿ ಮನ್ಯಾಗ್ ತಿಂದ್ರಾ ನಿಮ್ದೂಕಿ ಇಜ್ಜತ್ ಯಂಗ್ ಕರಾಬ್ ಆಗ್ತದಾ...? ಎಂದು ಆಚಾರಿಯ ಮೇಲೆ ಮಾತಿನ ದಾಳಿ ಮಾಡಿದ್ದ. ಇವರಿಬ್ಬರ ಗದ್ದಲ ಕೇಳಿಸಿಕೊಂಡು ಇಡೀ ಓಣಿಯವರು, ರಸ್ತೆಯಲ್ಲಿ ಹೋಗುತ್ತಿದ್ದ ಜನ ಸೂಜಿ ಪೀರನ ಮನೆಯ ಎದುರು ನೆರೆದು ಪುಕ್ಕಟೆ ಮನರಂಜನೆ ತೆಗೆದುಕೊಳ್ಳಲಾರಂಭಿಸಿದರು. ನಾರಾಯಣಾಚಾರಿಯಾಗಲಿ, ಸೂಜಿ ಪೀರನಾಗಲಿ ಎಂದೂ ಹೀಗೆ ಬೀದಿಯಲ್ಲಿ ನಿಂತು ಮಾತನಾಡಿ ದವರಲ್ಲ. ತಾವಾಯಿತು, ತಮ್ಮ ಕೆಲಸವಾಯಿತು ಎಂದುಕೊಳ್ಳುತ್ತಿದ್ದವರು, ಇಂದೇಕೆ ಹೀಗೆ ವಾಗ್ವಾದ ಕ್ಕಿಳಿದಿದ್ದಾರೆ ಎಂದು ಕೆಲವೊಬ್ಬರು ಗಂಭೀರ ಆಲೋಚನೆಯಲ್ಲಿ ಮುಳುಗಿದ್ದರು.

ಅಷ್ಟೇಕೆ ಆವೇಶದಿಂದ ಮಾತನಾಡಿದ್ದ ಸೂಜಿ ಪೀರನಿಗೂ ಆಚಾರಿಯ ಮಾತು ಸ್ಪಷ್ಟವಾಗಿ ಅರ್ಥ ವಾಗಿರಲಿಲ್ಲ. ತನ್ನ ಆಹಾರದ ಬಗ್ಗೆ ಪ್ರಶ್ನಿಸುತ್ತಿದ್ದಾನೆಂದು

ಆವೇಶದಲ್ಲಿ ಉತ್ತರ ನೀಡಿದ್ದನಷ್ಟೇ. 'ನೋಡೂ... ನೀ ಇಂಗಾ ಮಾಡ್ಕೊಂಡೋಗೀಯಂದ್ರಾ ನಿನ್ ಪಾಪದ್ ಕೊಡಾ ತುಂಬಿದಂಗಾ ತಿಳ್ಕೋ... ಘೋರ್ ನರಕಕ್ ವ್ಹೋಗ್ಬೇಕಾಗ್ತದಾ ನೋಡ್... ನಮ್ ರಾಮಾ... ಕೃಷ್ಣರು ಸುಮ್ನೇ ಬಿಡ್ತಾರ್ ಅಂದ್ಕೊಂಡೀಯೇನ್...' ಎಂದು ನಾರಾಯಣಾಚಾರಿ ಎಚ್ಚರಿಸಿದ್ದ. 'ಯೇ ಆಚಾರೀ, ಏ ಕ್ಯಾ ನರ್ಕಾ... ನರ್ಕಾ... ನೀವ್ ಬಡೀ ಆದ್ಮೀ ಅಂತಾ ಇಜ್ಜತ್ ಕೊಟ್ ಮಾತಾಡಾಕತ್ತೀನಿ... ನೀವ್ ಏನ್ ಶಾಪಾ ಕೊಟ್ರೂ ನನಗ್ ತಟ್ಟಾಕಿಲ್ ಬುಡ್ರೀ... ನನ್ ಮ್ಯಾಲ್ ಅಲ್ಲಾನಾ ದುವಾ ಅದಾ. ಕ್ಯಾ ಬಾತ್ ಅಂತಾ ಯೇಳಿದ್ರಾ, ನನ್ಗೂ ತಿಳೀತದಾ...' ಎಂದಿದ್ದ. 'ನಿನಗ್ ಮತ್ತಾ ಬಿಡಿಸ್ ಯೇಳ್ಬೇಕೇನ್... ನಮ್ ನಾಯೀ ನಾರೀ ಅದಾ ಅಲ್ಲಾ... ಅದ್ಕಾ ದಿನಾ ಹೊಲುಸ್ ತಿನ್ನೋದ್ನ್ ಕಲ್ಸಿದವ್ನೂ ನೀನೇ ತಾನೇ...?! ದಿನಾ ಹೊಲೂಸ್ ತಿನ್ಸೀ ತಿನ್ಸೀ... ನಮ್ಮನೀ ಮ್ಯಾಲ್ ಛೂಬಿಡಾಕತ್ತಿ..! ಅಷ್ಟೂ ಗೊತ್ತಾಗಾಕಿಲ್ಲೇನ್ ನನಗಾ...? ನಮ್ ಮಡೀಗ್ ಮುಡಚಟ್ ಆಗ್ಲಂತ್ ನೀ ಹಿಂಗ್ ಮಾಡಾಕತ್ತೀ...!' ಎಂಬ ಆಚಾರಿ ಮಾತು ಕೇಳಿ ಸೂಜಿ ಪೀರ ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದ. 'ಯೇ ಹುಯೀನಾ ಬಾತ್... ದೇಕೋ ಆಚಾರೀ... ನಿಮಗ್ ಭಾಳಾ ಶಾಣ್ಯಾ ಅಂತ್ ತಿಳಕೊಂಡಿದ್ದಾ... ಅಲ್ಲಾ ನಿಮ್ ಕುತ್ತೇ ಬಂದ್ ನಮ್ ಮನೀಮುಂದ್ ಆಕೀದ್ ಕಚ್ರಾ ತಿಂದ್ರಾ ನಾನೆಂಗ್ ಜುಮ್ಮೇದಾರನಾಗ್ತೀನಿ... ನಿಮ್ ಮನೀ ಕುತ್ತಾ ಅಂದ್ರಾ ನಿಮ್ದೂಕೇ ಮನ್ಯಾಗ್ ಕಟ್ಟಿ ಕೀಲೀ ಆಕ್ಕೋರೀ... ಅದ್ನ್ ಬಿಟ್ ನಮ್ ಅತ್ರಾ ಬಂದ್ ಆವಾಜ್ ಮಾಡಿದ್ರಾ ನಿಮಗ್ ಅಂಜೋರ್ ಯಾರೂ ಇಲ್ಲಾ... ಮೈ ಏಕ್ ಬಾತ್ ಪೂಚ್ತಾ... ಏ ಗಲ್ಲೀಮೇ ಮೈ ಏಕೀಚ್ ಖಾತಾ ಹೂ ಕ್ಯಾ...

ಮಾತು ವಿಕೋಪಕ್ಕೆ ಹೋಗುವುದನ್ನು ಗಮನಿಸಿದ ನೆರೆದ ಜನ ಇಬ್ಬರಿಗೂ ಸಮಾಧಾನ ಮಾಡಿದ್ದರು. ನಾರಾಯಣಾಚಾರಿಯನ್ನು ಒಂದು ಗುಂಪು ಮನೆಯತ್ತ ಕರೆತಂದಿತ್ತು. ತನ್ನ ಮನೆಯ ನಾಯಿಯನ್ನು ಕಟ್ಟಿಹಾಕಿದ್ದರೆ ಮುಗಿದೇ ಹೋಗಿತ್ತು. ಅದನ್ನು ಬಿಟ್ಟು ಅವನೊಡನೆ ಏಕೆ ಜಗಳವಾಡಬೇಕಿತ್ತು ಎಂದು ನಾರಾಯಣಾಚಾರಿ ತನ್ನನ್ನು ತಾನೇ ಪ್ರಶ್ನಿಸಿಕೊಂಡಿದ್ದ, ರಾಡಿಯ ಮೇಲೆ ಕಲ್ಲು ಹಾಕಿ ಮೈ ತುಂಬಾ ಹೊಲಸು ಸಿಡಿಸಿಕೊಂಡಂತೆ ಆಯಿತೆಂದುಕೊಂಡ. 'ನಾರಿಯನ್ನು ಕೊಂದು ಹಾಕಿ ಬಿಡುತ್ತೇನೆ' ಎಂಬಂತೆ ಮನೆಗೆ ಬಂದಿದ್ದ.

ಅದೇ ವೇಳೆಗೆ ಎದುರಿಗೆ ಕಂಡ ನಾರಿಯ ಹಿಂದೆ ಕೋಲು ಹಿಡಿದು ಬೆನ್ನು ಹತ್ತಿದ. ಅದು ಸೀದಾ ವಂಡ್ರಯ್ಯನ ಕೊಟ್ಟಿಗೆ ಹೊಕ್ಕಿತ್ತು. ನಾರಾಯಣಾಚಾರಿ ಮನೆಯೊಳಗೆ ಕಾಲಿಡಲು ಹಿಂದೇಟು ಹಾಕಿದರು. ಅಷ್ಟೊತ್ತಿಗಾಗಲೇ ಹಿಂದಿನ ಸಂದಿಯಿಂದ ಬುದುಗ್ಗನೆ ಹೊರಬಂದ ನಾರಿ, ಎದುರಿಗೆ ಸಿಕ್ಕ ಕೋಳಿಮರಿಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಶರವೇಗದಲ್ಲಿ ಕಣ್ಮರೆಯಾಗಿತ್ತು. ಕೋಳಿಯ ಕತ್ತಿನಿಂದ ರಕ್ತ ಚಿಲ್ಲನೆ ಚಿಮ್ಮಿ ನಾರಿಯ ಮೈಮೇಲೆ ಸಿಡಿದಿತ್ತು. ಅದನ್ನು ನೋಡಿ ಆಚಾರಿಗಳು ಇಸ್ಸೀ ಎಂದು ಅಸಹ್ಯಪಟ್ಟುಕೊಂಡರು. ಅದೇ ವೇಗದಲ್ಲಿ ಓಡಿದರೆ ಕಚ್ಚೆ ಬಿಚ್ಚುವುದು ಖಚಿತವೆಂದುಕೊಂಡು ವೇಗ ಕಡಿಮೆಗೊಳಿಸಿದರು.

ಕೋಳಿಮರಿಯನ್ನು ಹಿಡಿದುಕೊಂಡು ಹೋದದ್ದನ್ನು ನೋಡಿ ಓಡಿ ಬಂದ ವಂಡ್ರಯ್ಯ, 'ಕೋಳೀ... ಕೋಳೀ... ಯೇ ಬಿಡುಸ್ರೋ... ಆ ನಾಯೀನ ಇಡ್ಕೋರೋ...' ಎಂದು ಬೆನ್ನು ಹತ್ತಿದರೂ ನಾಯಿ ಪೊದೆಯಲ್ಲಿ ಮಾಯವಾಗಿತ್ತು. ಅಸಹಾಯಕನಾಗಿ ವಾಪಸ್ಸಾದ ವಂಡ್ರಯ್ಯ, ಕೋಲು ಹಿಡಿದು ಬರುತ್ತಿದ್ದ ನಾರಾಯಣಾಚಾರಿಯನ್ನು ತಡೆದು ಕೋಳಿಮರಿಯ ದುಡ್ಡು ಕಟ್ಟಿಕೊಡುವಂತೆ ಆಗ್ರಹಿಸಿದ. ನಾಯಿ ಸಿಗದೆ ಕುದಿಯುತ್ತಿದ್ದ ಆಚಾರಿಗಳನ್ನು ಹಣ ಕೇಳಿದರೆ ಹೇಗಿರಬೇಡ...? ಕೈಯಲ್ಲಿದ್ದ ಕೋಲನ್ನೇ ಹಿಡಿದು ವಂಡ್ರಯ್ಯನ ಮೇಲೆ ಹಲ್ಲೆ ಮಾಡಲು ಮುಂದಾಗಿದ್ದರು. 'ಅವ್ನೊಂದೇ ಅಲ್ಲಾ ನನ್ ನಾಯೀ ಹಾಳಾಗಾಕ ನೀನೂ ಕಾರ್ಣಾ...' ಎಂದು ಪೀರನ ಮನೆ ಕಡೆ ಕೈಮಾಡಿ ತೋರಿಸಿದ್ದರು. ಮುಂದುವರಿದು, 'ನೀ ಕಲಿಸಿದ್ನೇ ಅದು ನಿನಗಾ ಕಲಸಾಕತ್ಯಾದ. ನಿನ್ ಕೋಳೀನ್ ಎತ್ತಿಕೊಂಡು

ಹೋದ್ರಾ ನಾನೇನ್ ಮಾಡ್ಲೀ... ನಾನ್ಯಾಕ್ ರೊಕ್ಕಾ ಕಟ್ಟಿಕೊಡ್ಲೀ...? ಹೊಲಸ್ ತಿನ್ನೋದ್ ಕಲ್ಸಿದ್ ನೀವೇ ಅನಬವ್ಸರೀ...' ಎಂದು ಕಟ್ಟಿಗೆಯನ್ನು ಅಲ್ಲಿಯೇ ಎಸೆದು ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದರು.

ಇಷ್ಟು ದಿನ ಮುದ್ದಿನ ನಾರಿ ಬಾಯಿಯಲ್ಲಿ ಕೇವಲ ಮೂಳೆಗಳನ್ನು ಮಾತ್ರ ನೋಡಿದ್ದ ನಾರಾಯಣಾಚಾರಿ, ಇಂದು ಕೋಳಿಯನ್ನು ಹೊತ್ತೊಯ್ಯುವುದನ್ನು, ಚಿಲ್ಲನೆ ರಕ್ತ ಚಿಮ್ಮುವುದನ್ನು ನೋಡಿ ಹೇಸಿಗೆಪಟ್ಟು ಕೊಂಡಿದ್ದರು. ರಾತ್ರಿ ಮಲಗಿದಾಗ, ನಾಯಿ ಮೂಳೆ ತಿಂದಂತಾಗಿ, ಕಟ್ರ್ ಕಟ್ರ್ ಶಬ್ದ ಬಂದಂತಾಗಿ ನಿದ್ರೆಯಲ್ಲಿಯೇ ಒದ್ದಾಡಿದ್ದರು. ಕೋಳಿಯ ಕತ್ತು ಹಿಡಿದಾಗ ಹರಿದ ರಕ್ತ ತಮ್ಮ ಮನೆಯವರೆಗೂ ಹರಿದು ಬಂದಂತಾಗಿ ಬೆಚ್ಚಿಬಿದ್ದಿದ್ದರು. ರಾತ್ರಿಯೆಲ್ಲಾ ನಿದ್ರೆ ಇಲ್ಲದೆ ಒದ್ದಾಡಿದ ನಾರಾಯಣಾಚಾರಿಗೆ ಚಿತ್ರವಿಚಿತ್ರ ಕನಸುಗಳು ಬಿದ್ದಿದ್ದವು. ಸಾಮಾನ್ಯವಾಗಿ ಬೆಳ್ಳಂಬೆಳಿಗ್ಗೆ ಎದ್ದು ಸ್ನಾನ, ಸಂಧ್ಯಾವಂದನೆ ಎನ್ನುತ್ತಿದ್ದ ಆಚಾರಿಗಳು ಅಂದು ಎದ್ದದ್ದೇ ತಡವಾಗಿ. ಸೂರ್ಯ ನೆತ್ತಿಯ ಮೇಲೇರುತ್ತಿರುವುದನ್ನು ಗಮನಿಸಿ ಪೂಜೆಗೆ ಹೊತ್ತಾಗುವುದೆಂದು ದಡಬಡಾಯಿಸಿ ಸ್ನಾನಕ್ಕೆ ತೆರಳಲು ಅನುವಾದರು. ಅದೇ ವೇಳೆಗೆ ಅಲ್ಲಿಗೆ ಆಗಮಿಸಿದ ಗೋಪಾಲಾಚಾರಿಯನ್ನು ಕಂಡು ಕೂಡುವಂತೆ ಹೇಳಿದ್ದರು. ತಾನು ದೇವಸ್ಥಾನಕ್ಕೆ ಪೂಜೆಗೆ ಹೋಗಲು ವಿಳಂಬವಾಗಿರುವ ಹಿನ್ನೆಲೆಯಲ್ಲಿ ಗೋಪಾಲಾಚಾರಿಯೇ ಮನೆಯತನಕ ಬಂದಿರಬಹುದೆಂದು ಲಗುಬಗೆಯಲ್ಲಿ ಸ್ನಾನ ಮುಗಿಸಿದ್ದರು. ಅವರು ಸ್ನಾನ ಮುಗಿಸಿ ವಾಪಸ್ಸಾಗುವುದರೊಳಗಾಗಿ ನರಸಿಂಹ ಜೋಷಿ, ಪ್ರಭಾಕರರಾವ್ ಮತ್ತಿತರರು ಬಂದು ಮನೆಯೊಳಗೆ ಕುಳಿತದ್ದನ್ನು ನೋಡಿ ನಾರಾಯಣಾಚಾರಿ ಅಚ್ಚರಿಗೊಂಡಿದ್ದರು. ಪತ್ನಿಗೆ ಕಾಫಿ ತಂದುಕೊಡುವಂತೆ ಹೇಳಿ, ಉಭಯ ಕುಶಲೋಪರಿ ವಿಚಾರಿಸಿದ್ದರು. 'ಏನ್ ಎಲ್ರೂ ಒಮ್ಮೆಗೇ ದಯಮಾಡ್ಸೀರಿ. ಎಲ್ಲಾ ಸೌಖ್ಯ ತಾನೇ...? ಮತ್ತೇನು ವಿಶೇಷ...?' ಎಂಬ ಪ್ರಶ್ನೆಗೆ, 'ನಿಮ್ ಸೌಖ್ಯಾನೇ ನಮ್ ಸೌಖ್ಯಾ... ಎಲ್ಲಾನೂ ನೀನೇ ಹೇಳ್ಬೇಕ್ ನಾರಾಯಣಾ' ಎಂದ ಗೋಪಾಲಾಚಾರಿ, 'ಏನ್ ಊರ್ ತುಂಬಾ ನಿನ್ದೇ ಸುದ್ದಿ. ಪವಿತ್ರ ಗೋವಿನ್ ಮೂಳೆ ನಿಮ್ ಮನ್ಯಾಗ್ ಬಿದ್ದಿದ್ವಂತೆ ಹೌದಾ...?' ಎಂದು ಪ್ರಶ್ನಿಸಿದ್ದರು. ಅದೇ ವೇಳೆಗೆ 'ಎಂಥಾ ಪಾಪದ್ ಕೆಲ್ಸಾ ಮಾಡಾಕತ್ತೀರಿ ಆಚಾರೀ... ಮೂಳೇ ಮುಟ್ಟಿದ್ ಕೈಯಾಗ್ ದೇವ್ರ ಪೂಜೇನೂ ಮಾಡಾಕತ್ತೀರಲ್ಲಾ...? ಗೋಮಾತೇನ್ ಕೊಂದ್ ಪಾಪಾ ನಿಮ್ಗೂ ತಟ್ತಾದಾ...! ನೀವ್ ಘೋರ್ ನರಕಕ್ ವೋಗ್ತೀರಿ...' ಎಂದು ನರಸಿಂಹ ಜೋಷಿ ಜೋರು ಧ್ವನಿಯಲ್ಲಿ ಗುಡುಗಿದ್ದರು.

ಏಕಾಏಕಿ ಮಾತು ಬಿರುಸುಗೊಳ್ಳುತ್ತಿದ್ದಂತೆಯೇ ಇಡೀ ವಾತಾವರಣ ಬಿಸಿಯಾಗಿತ್ತು. ಅದೇ ವೇಳೆಗೆ ಶಕುಂತಲಾ ಬಿಸಿಬಿಸಿ ಕಾಫೀ ತಂದು ಎಲ್ಲರಿಗೂ ಕೊಟ್ಟಿದ್ದಳು. ಆದರೆ ಅವರಾರೂ ಕಾಫಿ ಕಪ್ ಮುಟ್ಟುವ ಗೋಜಿಗೆ ಹೋಗಿದ್ದಿಲ್ಲ. 'ನೋಡ್ರೀ ಆಚಾರೀ ಇವತ್ ಏನಾದ್ರೂ ಒಂದ್ ತೀರ್ಮಾನ್ ಮಾಡ್ಬೇಕಂತಾನೇ ಬಂದೀವಿ. ನಿಮ್ ಅಭಿಪ್ರಾಯ ಏನಂತ ಹೇಳ್ರೀ...' ಎಂದು ಪ್ರಾಣೇಶಾಚಾರಿ ನುಡಿದಿದ್ದರು. 'ಅಲ್ಲಾ ನಾನೇನ್ ತಪ್ಪ್ ಮಾಡೀನಂತ ನೀವ್ ಹಿಂಗೆಲ್ಲಾ ಮಾತಾಡಕ್ಕತ್ತೀರೀ... ನೀವ್ ಇಂಗ್ ಒಗಟಾಗಿ ಮಾತಾಡಿದ್ರಾ ನನಗೇನ್ ಗೊತ್ತಾಗ್ಬೇಕ್... ಬಿಡ್ಸಿ ಯೇಳಿದ್ರೆ ತಾನೇ ಗೊತ್ತಾಗೋದ್...' ಎಂದು ನಾರಾಯಣಾಚಾರಿ ನುಡಿದಿದ್ದರು. 'ಇನ್ನೂ ಬಿಡ್ಸಿ ಯೇಳ್ಬೇಕಾ ನಿಮಗ್. ಆ ದರಿದ್ರಾನಾ ಸಾಕೀರಲ್ಲಾ.. ಅದಕ್ ಅದೇನೋ ಯೆಸ್ರ್ ಬ್ಯಾರೇ ಇಟ್ಟೀರಲ್ಲಾ... ಅದೇ ನಾರೀ ಅಂತ್. ಆ ನಿಮ್ ನಾರೀ ದನದ್ ಮೂಳೇ ತರೋದೂ... ನಿಮ್ ಮನ್ಯಾಗ್ ತಿನ್ನೋದೂ ನಮಗೇನ್ ಗೊತ್ತಿಲ್ಲಂದ್‌ಕೊಂಡ್ರೇನ್... ಅದೇ ಹೊರಾಗ್ನಿಂದ್ ಮೂಳೀ ತಂತಾ... ಇಲ್ಲಾಂದ್ರಾ ಮನ್ಯಾಗಿಂದ್ಲೇ ಸಿಕ್ತಾ...!?' ಎಂದು ಗೋಪಾಲಾಚಾರಿ ನಾಯಿ ಮೂಸಿ ನೋಡುವ ರೀತಿಯಲ್ಲಿ ಮನೆಯ ಮೂಲೆ ಮೂಲೆಯನ್ನು ಮೂಸಿ ನೋಡಿದ್ದರು. 'ನಾ ಪೂಜೀ ಮಾಡೋ ಆ ರಾಮನ ಮ್ಯಾಲ ಆಣೀ ಮಾಡಿ ಯೇಳ್ತೀನಿ. ಯಾವತ್ತೋ ಒಂದ್ ದಿನಾ ಅದೇನನ್ನೋ ಬಾಯಾಗ್ ಇಡಕಂಡ್ ಬಂದಿತ್ತು. ಅವತ್ನಿಂದ್ಲೇ... ಅದ್ನ್ ವೊರಾಗ್ ಆಕೀನೀ... ಬೇಕಿದ್ರೇ ನೀವೇ...' ಎಂಬ ಮಾತು ಅರ್ಧಕ್ಕೆ ತಡೆದ ಪ್ರಾಣೇಶಾಚಾರಿ, 'ಅಗೋ ನೋಡ್ರಪ್ಪಾ... ಅಲ್ಲಿ ಬಂತ್ ನಮ್ ಆಚಾರೀ ಮುದ್ದಿನ ನಾಯೀ... ನೋಡ್ರೀ ಬಾಯೀ ಹತ್ರ ರಕ್ತಾ ಯಂಗ್ ಹೆಪ್ಪ್‌ಗಟ್ಟ್ಯಾದಾ... ನಾವ್ ಇಂಗಾ ಮಾತಾಡಿಕೆಂತ್ ಕುಂತ್ರಾ... ಆ ಪಾಪಾ ನಮ್ಗೂ ಹತ್ತ್‌ತಾದಾ... ನಡ್ರೀ ಹೋಗೋಣ್ ನಡೀರೀ...' ಎಂದು ನಾರಾಯಣಾಚಾರಿ ಕಡೆ ತಿರುಗಿ, 'ನೀ ನಮ್ಮವಾ ಅನ್ನೂ ಕಾರಣಕ್ಕಾ ಒಂದ್ ಅವಕಾಶಾ ನೀಡ್ತೀವಿ. ನಿನಗ್ ನಮ್ಮಾಜ್ತ್ಯಾಗ್ ಉಳಿಸ್ಕೊಳ್‌ಬೇಕಂದ್ರಾ, ರಾಮನ್ ಪೂಜೀ ಮಾಡ್‌ಬೇಕಂದ್ರಾ ನೀನ್ ಆ ಪೀಡೇನ್ ಮೊದ್ಲು ತೊಲಗಿಸ್ಬೇಕೆಂದು' ನಾಯಿಯ ಕಡೆ ಬೆರಳು ಮಾಡಿತೋರಿಸಿದ್ದರು. ಅಷ್ಟು ಹೇಳಿ ಎಲ್ಲರೂ ಎದ್ದು ಹೊರಟುಹೋಗಿದ್ದರು. ಮನೆ ಮುಂದೆ ಜೊಲ್ಲು ಸುರಿಸುತ್ತಾ ನಿಂತಿದ್ದ ನಾರಿಯತ್ತ ನಾರಾಯಣಾಚಾರಿ ಕಲ್ಲು ಬೀಸಿದ್ದರು. ಕಲ್ಲಿನ ಹೊಡೆತದಿಂದ ತಪ್ಪಿಸಿಕೊಂಡಿದ್ದ ನಾರಿ ಕ್ಷಣಾರ್ಧದಲ್ಲಿ ಮಾಯವಾಗಿತ್ತು.

ಹಾಯ್ಕು......

ಲಾಭದ ಜತೆ ಸೇರಿಯೇ ಸಿಕ್ಕಿತು
ಮರ ಕಡಿದವನಿಗೆ
ಹಕ್ಕಿಗಳ ಶಾಪವು।।

**ಡಾ॥ ವಿ. ಪುಗಳೇಂದಿ**
'ವಿವೇಕ್ ಮ್ಯಾನ್ಷನ್'
೪೬೭, ನಾಗಭೂಷಣ ಲೇಔಟ್
ವಿಜಯವಿಠಲನಗರ
ಸಿರುಗುಪ್ಪ – ೫೮೩ ೧೨೧

ಕೊನೆಗೂ ನಾರಿಯನ್ನು ಹಿಡಿದು ಕಾಡಿನತ್ತ ಕೊಂಡೊಯ್ಯಲಾಯಿತು. ಬಿಟ್ಟು ಬರಲು ಹೋದವರು ವಾಪಸ್ಸಾಗುವುದರೊಳಗಾಗಿಯೇ ನಾರಿ ಆಚಾರಿಯ ಮನೆಯಲ್ಲಿ ಪ್ರತ್ಯಕ್ಷಗೊಂಡಿತ್ತು. 'ನೀವು ನಾಯಿಯನ್ನು ಹಿಡಿದೂ ಇಲ್ಲ. ಕಾಡಿಗೆ ಬಿಟ್ಟೇ ಬಂದಿಲ್ಲ. ನಾಯೀ ಹೆಸರ್‌ನ್ಯಾಗ್ ಕೋಳೀನ್ ತಿಂದ್ ತೇಗೀರೀ, ಕುಡುದ್ ಮಜಾ ಮಾಡೀರೀ...' ಎಂದು ರೇಗಿದ್ದರು. ಆಚಾರಿ ಬಳಿ ವಾದ ಮಾಡಲಾಗದೇ ನಾಯಿ ಬಿಡಲು ಹೋದವರು ಸುಮ್ಮನೆ ವಾಪಸ್ಸಾಗಿದ್ದರು. ಇದಾದ ಬಳಿಕ ನಾರಿ ನಾರಾಯಣಾಚಾರಿಗೆ ಬೆಂಬಿಡದ ಭೂತವಾಗಿ ಕಾಡಿತು. ಇದರಿಂದ ಬಿಡಿಸಿಕೊಳ್ಳುವುದು ಹೇಗೆಂಬ ಚಿಂತೆಯಲ್ಲಿಯೇ ಅವರ ಆರೋಗ್ಯ ಹದಗೆಟ್ಟಿತು.

ಈ ಎಲ್ಲ ಗೊಂದಲಗಳ ನಡುವೆ ನಾರಿ ಗರ್ಭ ಧರಿಸಿದ್ದುದು ಅದರ ಹೊಟ್ಟೆಯ ಗಾತ್ರ ಬೆಳೆಯುವುದರಿಂದ ಎಲ್ಲರಿಗೂ ವೇದ್ಯವಾಗಿತ್ತು. ಆದರೆ ಅದನ್ನು ಅಕ್ಕರೆಯಿಂದ ಆರೈಕೆ ಮಾಡುವವರು ಯಾರೂ ಇದ್ದಿಲ್ಲ. ನಾಯಿ ಯಿಂದಾಗಿ ನಾರಾಯಣಾಚಾರಿಯ ಜೊತೆ ಜಗಳವಾಡಬೇಕಾಯಿತೆಂದು ಸೂಜಿ ಪೀರ ಅದನ್ನು ದುರುಗುಟ್ಟಿ ನೋಡಿದ್ದ. ಅವರ ಮನೆಯ ಬಳಿ ಸುಳಿಯಿತೆಂದರೆ ಸಾಕು, 'ಅರೆ ಇಸ್ಕೀ... ಓ ಬೊಮ್ಮನ್‌ಕಾ ಕುತ್ತಾ ಆಯಾ ದೇಕ್... ಮಾರೋ ಉಸ್ಕೋ ಮಾರೋ...' ಎಂದು ಮಕ್ಕಳಿಗೆ ಆದೇಶ ಮಾಡುತ್ತಿದ್ದ. ಇನ್ನು ವಂಡ್ರಯ್ಯನಂತೂ, ತನ್ನ ಕೋಳಿಯನ್ನು ಕದ್ದೊಯ್ದಿತೆಂದು ನಾರಿಯನ್ನು ಮನೆಯ ಕಡೆ ಸುಳಿಯದಂತೆ ನೋಡಿಕೊಂಡಿದ್ದ. ಶಾಂತಂ ಪಾಪಂ ಎಂಬಂತೆ ನಾರಾಯಣಾಚಾರಿಯಂತೂ ಅದರ ಕಡೆ ಕಣ್ಣೆತ್ತಿಯೂ ನೋಡಿರಲಿಲ್ಲ. ರಾಮನ ಗುಡಿಯ ಕಡೆಗೂ ಹಾಯ್ದಿರಲಿಲ್ಲ. ಮಲಗಿದ ಹಾಸಿಗೆಯಲ್ಲಿ ರಾಮನ ಜಪಮಾಡಲಾರಂಭಿಸಿದ್ದರು. ಎಂದಿನಂತೆ ಶಾಲೆಗೆ ಹೋಗಿಬರುವುದನ್ನು ಮಾಡುತ್ತಿದ್ದ ಭೀಮಾಚಾರಿ, ತನ್ನ ಅಪ್ಪನನ್ನು ನೋಡಿ ತಲೆಕೆರೆದುಕೊಳ್ಳುತ್ತಿದ್ದ. ಅವನಿಗೆ ಒಂದಿಷ್ಟೂ ಅರ್ಥವಾಗಿರಲಿಲ್ಲ. ಶಕುಂತಲಾ ಮಾತ್ರ ಕಣ್ಣೀರಲ್ಲಿಯೇ ಕೈತೊಳೆಯುತ್ತಾ ಪತಿ ಸೇವೆ ಮುಂದುವರಿಸಿದ್ದಳು. ನಾರಿಯನ್ನು ನೆನೆಸಿಕೊಂಡು ಪದೇ ಪದೇ ಶಪಿಸಿದ್ದಳು. 'ಕಳ್ ಮುಂಡೇಗಂಡನ್ ತಂದ್.. ಯಂಥಾ ಫಜೀತೀ ತಂದಿಡ್ತು ನಮ್ಮೆಜ್ಮಾನ್ರೀಗೆ.. ಎಲ್ಲಾದ್ರೂ ಹಾಳಾಗೀ ವೊಗ್ಬಾರ್ದಾ.. ಹಾಳ್‌ಮಾಡಾಕ ನಮ್ಮನ್ನೀನೇ ಬೇಕಿತ್ತಾ.. ಜೀವಾ ತಿನ್ನಾಕ ನಾವೇ ಬೇಕಿತ್ತಾ..?' ಎಂದು ನಾರಿಯನ್ನು ಕೇಳುವಂತೆ ತನ್ನಲ್ಲಿಯೇ ಪ್ರಶ್ನಿಸಿಕೊಂಡಿದ್ದಳು.

✶ ✶ ✶

ಒಂದು ದಿನ ರಾತ್ರಿ ಕಳ್ಳರ ತಂಡವೊಂದು ಸೂಜಿ ಪೀರನ ಮನೆಯಿಂದ ಹಿಡಿದು ಹಲವು ಮನೆಗಳಿಗೆ ಕನ್ನ ಹಾಕಿ ಗಂಟು ಕಟ್ಟಿಕೊಂಡು ಸೀದಾ ನಾರಾಯಣಾಚಾರಿ ಮನೆಗೆ ನುಗ್ಗಿತ್ತು. ಬಾತ್‌ರೂಮಿನ ಕಿಟಕಿಯಿಂದ

ಒಳನುಗ್ಗಿದ್ದ ಕಳ್ಳರು, ಮನೆಯೊಳಗಿನ, ನಗ, ನಾಣ್ಯ, ಬೆಲೆ ಬಾಳುವ ಸೀರಿ ಮತ್ತಿತರ ವಸ್ತುಗಳನ್ನು ಹಿಡಿದು ಹೊರಗೆ ಕಾಲಿಡುವುದರೊಳಗಾಗಿ ನಾರಿ ಪ್ರತ್ಯಕ್ಷವಾಗಿತ್ತು. ಕಳ್ಳತನಕ್ಕೆ ಬಂದ ನಾಲ್ವರು ಕಳ್ಳರ ಮೇಲೂ ಧುತ್ತೆಂದು ಜಿಗಿದಿತ್ತು. ಓರ್ವನ ಕಾಲನ್ನು ಬಿಗಿಯಾಗಿ ಹಿಡಿದು ಕಚ್ಚಿದಾಗ ಮೀನಖಂಡವೇ ಹೊರಬಂದಿತ್ತು. ಅದೇ ವೇಗದಲ್ಲಿ ಮತ್ತೊಬ್ಬನ ತೊಡೆಯನ್ನು ಹಿಡಿದಿತ್ತು. ಏಕಾಏಕಿ ನಾಯಿ ದಾಳಿ ಮಾಡಿದ್ದನ್ನು ನೋಡಿ ಬೆಚ್ಚಿ ಕೈಯಲ್ಲಿದ್ದ ಕಳ್ಳತನದ ಗಂಟನ್ನು ಕೆಳಗಿಟ್ಟು, ನಾಯಿಯನ್ನು ಓಡಿಸಲು ಯತ್ನಿಸಿದರು. ಒಬ್ಬ ಕಳ್ಳ ತನ್ನ ಕೈಯಲ್ಲಿದ್ದ ಚಾಕುವಿನಿಂದ ನಾಯಿಯನ್ನು ಇರಿಯಲು ಯತ್ನಿಸಿದ್ದ. ಆದರೆ ಅದು ಎಲ್ಲಿ ತಗುಲಿತೋ ಗೊತ್ತಿಲ್ಲವಾದರೂ, ನಾಯಿ ಕುಂಯ್... ಕುಂಯ್ ಎಂದು ರೋದಿಸಿತ್ತು. ಆ ವೇಳೆಗೆ ತೀವ್ರ ರಕ್ತಸ್ರಾವದಿಂದ ಒಬ್ಬ ಕಳ್ಳ 'ಯವ್ವೋ...' ಎಂದು ಕಿರುಚಿಕೊಂಡಿದ್ದ.

ನಾಯಿ ಬೊಗಳಾಟ, ಕಳ್ಳನ ಚೀರಾಟದಿಂದ ಜನ ದಡಬಡಿಸಿ ಎದ್ದಿದ್ದರು. ಜನ ಬರುತ್ತಿರುವ ಸುಳಿವು ಸಿಕ್ಕ ಕೂಡಲೇ ಕಳ್ಳರು ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಓಡಿ ಹೋಗಿದ್ದರು. ಹಾಗೆ ಹೋಗುವಾಗ ಮತ್ತೋರ್ವ ಕಳ್ಳ ತನ್ನ ಕೈಗೆ ಸಿಕ್ಕ ಕಲ್ಲನ್ನು ನಾಯಿಯತ್ತ ಬೀಸಿ ಪರಾರಿಯಾಗಿದ್ದ. ನಾರಿ ಒಂದೇಸಮನೆ ಬೊಗಳುತ್ತಿರುವುದನ್ನು ನೋಡಿ ನಾರಾಯಣಾಚಾರಿ ಲಗುಬಗೆಯಲ್ಲಿ ಎದ್ದು ಬಂದಿದ್ದರು. ಬ್ಯಾಟರಿ ಹಿಡಿದು ಹೊರಬಂದು ಮನೆಯ ಮುಂದಿನ ದೃಶ್ಯ ನೋಡಿ ದಂಗಾಗಿದ್ದರು. ನಾರಿಯ ತೊಡೆಯಿಂದ ರಕ್ತ ಸುರಿಯುತ್ತಿತ್ತು. ಅದನ್ನು ನೋಡಿ ಯಾವುದೋ ಪ್ರಾಣಿಯನ್ನು ತಿನ್ನಲು ಹೋಗಿ ಹೀಗೆ ಪೆಟ್ಟು ತಿಂದಿರಬೇಕೆಂದುಕೊಂಡಿದ್ದರು. ಆದರೆ ಹತ್ತಿರದಲ್ಲಿಯೇ ಇದ್ದ ಗಂಟುಗಳನ್ನು ಕಂಡು ಏನಿರಬಹುದೆಂದು ಪರಿಶೀಲಿಸಿದ್ದರು. ತಮ್ಮ ಪತ್ನಿಯ ಸೀರೆಗಳು, ಒಡವೆ ಇತ್ಯಾದಿಗಳನ್ನು ನೋಡಿ ಇವು ಇಲ್ಲಿಗೆ ಹೇಗೆ ಬಂದವೆಂದು ಪ್ರಶ್ನಿಸಿಕೊಂಡಿದ್ದರು. ಅದೇ ವೇಳೆಗೆ ಆಗಮಿಸಿದ ಸೂಜಿ ಪೀರ ಮತ್ತಿತರರು ತಮ್ಮ ಮನೆಗೆ ಕನ್ನ ಬಿದ್ದಿರುವುದನ್ನು ಹೇಳಿದ್ದರು. ಅಲ್ಲಿ ಬಿದ್ದಿದ್ದ ಗಂಟುಗಳನ್ನು ಹಿಡಿದು ಪರಿಶೀಲಿಸಿದ್ದರು.

ನಾಯಿಯ ದಾಳಿಗೆ ಹೆದರಿ ಜೀವಭಯದಿಂದ ಕಳ್ಳರು ಒಂದೆರಡು ಗಂಟು ಮಾತ್ರ ಹಿಡಿದೊಯ್ದಿದ್ದರು. ಅಂತೂ ನಾರಾಯಣಾಚಾರಿ, ಸೂಜಿ ಪೀರ, ವಂಡ್ರಯ್ಯ ಮತ್ತಿತರರ ಋಣವನ್ನು ನಾರಿ ತೀರಿಸಿತ್ತು. ಆದರೆ ಅದು ಒಂದೇ ಸಮನೆ ರೋದಿಸುತ್ತಿದ್ದರೂ, ಬಂದವರು ಕಳುವಾದ ಸಾಮಾನುಗಳ ಹುಡುಕಾಟ ನಡೆಸಿದ್ದರು. ನಸುಗತ್ತಲಲ್ಲಿಯೇ ತಮಗೆ ಸಿಕ್ಕ ಗಂಟುಗಳನ್ನು ಪರಿಶೀಲಿಸಿ, ತಮ್ಮ ತಮ್ಮ ವಸ್ತುಗಳನ್ನು ಹಿಡಿದು ಮನೆಗೆ ವಾಪಸ್ಸಾಗಿದ್ದರು. ಗಂಟನ್ನು ಹೆಂಡತಿ ಕೈಗೆ ಕೊಟ್ಟವರೇ ನಾರಾಯಣಾಚಾರಿ ಹೊರಬಂದು ನಾಯಿಯನ್ನು ಪರಿಶೀಲಿಸಿದ್ದರು. ಅಷ್ಟೊತ್ತಿಗಾಗಲೇ ಕುಂಯ್‌ಗುಡುತ್ತಾ ನಾರಿ ಮೂಲೆ ಸೇರಿ ಮುಲುಗುತ್ತಿತ್ತು. ಕಾಲಿನಿಂದ ರಕ್ತ ತೊಟ್ಟಿಕ್ಕುತ್ತಲೇ ಇತ್ತು. ಅದನ್ನು ನೋಡಿದ ಆಚಾರಿಯ ಕಣ್ಣು ತೇವಗೊಂಡಿದ್ದವು. ಎಷ್ಟೇ ತಿರಸ್ಕರಿಸಬೇಕೆಂದುಕೊಂಡರೂ ಮನಸ್ಸು ತಡೆಯಲಾಗದೆ ಅದರ ಬಳಿ ತೆರಳಿ ತಲೆಯ ಮೇಲೆ ಕೈಯಾಡಿಸಿದ್ದರು. ಆ ವೇಳೆ ಕಳ್ಳತನದ ನೆನಪಾಗಿ ಪೊಲೀಸರಿಗೆ ಮಾಹಿತಿ ನೀಡಿದ್ದರು.

ಸೂರ್ಯೋದಯವಾಗುವ ಮುಂಚೆಯೇ ಎದ್ದಿದ್ದ ನಾರಾಯಣಾಚಾರಿ 'ಕುಂಯ್... ಕುಂಯ್... ಕುಂಯ್...' ಎಂಬ ಶಬ್ದ ಕೇಳಿ ನೇರವಾಗಿ ನಾರಿಯ ಬಳಿ ಹೋಗಿದ್ದರು. ನಾಲ್ಕು ಮುದ್ದು ಮುದ್ದಾದ ಮರಿಗಳು ಕಣ್ಣುಬಿಡುವ ಪ್ರಯತ್ನ ನಡೆಸಿದ್ದವು. ತಾಯಿಯ ಹಾಲು ಕುಡಿಯಲು ವಿಫಲ ಯತ್ನ ಮಾಡಿದ್ದವು. ಆ ದೃಶ್ಯವನ್ನು ನೋಡಿದವರೇ ಖುಷಿಯಿಂದ ಪತ್ನಿಯನ್ನು ಕರೆದಿದ್ದರು. ಶಕುಂತಲಾ ಹೊರಬಂದವಳೇ ನಾಯಿಮರಿಗಳನ್ನು ಕಂಡು 'ಎಷ್ಟ್ ಮುದ್ ಮುದ್ದಾಗಿದಾವಲ್ಲಾ ಈ ಮರೀಗ್ಳೂ... ಯಂಗ್ ಹಾಲ್ ಕುಡೀಬೇಕಂತ್ ವದ್ದಾಡಕತ್ಯಾವ್ ನೋಡ್... ಆದ್ರಾ ನಾರೀ ಯಾಕ್ ಸುಮ್ನಾ ಮಕ್ಕೊಂಡಾದ... ಪಾಪ ಸುಸ್ತಾಗಿರ್ಬೇಕ್... ಏ ಭೀಮಾ... ಭೀಮಾ... ಬಾರೋ ಇಲ್ಲೀ... ನಾರೀ ಮರೀಗ್ ಹಾಕ್ಯಾದ್ ನೋಡ್...' ಎಂದು ಮಗನನ್ನು ಕರೆದಿದ್ದಳು. ಭೀಮಾಚಾರಿ ಕಣ್ಣು ಉಜ್ಜಿಕೊಳ್ಳುತ್ತಾ ಬಂದು ನಾಯಿಮರಿಗಳನ್ನು ನೋಡುತ್ತಾ ನಿಂತ.

ಮನೆಯೊಳಗೆ ಹೋದ ಶಕುಂತಲಾ ಹಾಲಿನೊಂದಿಗೆ ವಾಪಸ್ಸಾಗಿದ್ದಳು. ತಾಯಿಯ ಬಳಿ ಹಾಲು ಕುಡಿಯಲು ವಿಫಲವಾಗಿ, ಕೊನೆಗೆ ಬಟ್ಟಲಲ್ಲಿದ್ದ ಹಾಲು ಕುಡಿಯಲು ಹೋಗಿ ನಾಯಿಮರಿಯೊಂದು ಹಾಲಿನ ಬಟ್ಟಲಿನಲ್ಲಿಯೇ ಪಲ್ಟಿ ಹೊಡೆದಿತ್ತು. ಇಷ್ಟೆಲ್ಲಾ ನಡೆಯುತ್ತಿದ್ದರೂ ನಾರಿ ಎದ್ದೇಳದಿರುವುದಕ್ಕೆ ನಾರಾಯಣಾಚಾರಿಗೆ ಅನುಮಾನ ಬಂದಿತ್ತು. ಕೋಲಿನಿಂದ ಮುಟ್ಟಿ 'ನಾರೀ.. ಏ ನಾರೀ...' ಎಂದು ಎಬ್ಬಿಸಿದ್ದರು. ಆದರೆ ನಾರಿ ಕದಲಲೇ ಇಲ್ಲ. ನಾರಿ ಸತ್ತಿರುವುದು ಖಾತ್ರಿಯಾಗಿತ್ತು. 'ನಾರೀ... ನಾರಾಯಣಾ... ಅಯ್ಯೋ ಎಂಥಾ ಕೆಲ್ಸಾಯ್ತಲ್ಲೋ... ನಮ್ಮನ್ನೆಲ್ಲಾ ಬಿಟ್ ಹೊಂಟೋಯ್ತಲ್ಲೋ...' ಎಂದು ಜೋರು ಧ್ವನಿಯಲ್ಲಿ ಅತ್ತಿದ್ದರು. ಆಚಾರಿಗಳು ಎಂದೂ ಆ ರೀತಿ ಭಾವೋದ್ವೇಗಕ್ಕೆ ಒಳಗಾದವರಲ್ಲ. ಆ ಅಳುವನ್ನು ಕೇಳಿ ಏನೋ ಅನಾಹುತವಾಗಿದೆಯೆಂದು ಅಲ್ಲಿಗೆ ಕೆಲವರು ಓಡೋಡಿ ಬಂದಿದ್ದರು.

ಸೂಜಿ ಪೀರ, ಬಸ್ಯಾ, ವಂಡ್ರಯ್ಯ, ರಮೇಶ ಹೀಗೆ ಓಣಿಯ ಜನರೆಲ್ಲಾ ಅಲ್ಲಿ ನೆರೆದು ನಾರಿಯನ್ನು ಸುತ್ತುವರಿದಿದ್ದರು. ಆ ಮಾತು... ಈ ಮಾತು... ಆದ ನಂತರ ಕೊನೆಗೆ ನಾರಿಯ ಅಂತ್ಯಕ್ರಿಯೆ ನೆರವೇರಿಸುವ ತೀರ್ಮಾನವಾಗಿತ್ತು. ನಾರಾಯಣಾಚಾರಿ ನೇತೃತ್ವದಲ್ಲಿ ಕೇರಿಯ ಜನರೆಲ್ಲಾ ಸೇರಿ ನಾರಿಯ ಅಂತ್ಯಕ್ರಿಯೆ ನೆರವೇರಿಸಿದ್ದರು. ಅಲ್ಲಿಂದ ವಾಪಸ್ಸಾದವರೆ ತಾಯಿಯಿಲ್ಲದೆ ತಬ್ಬಲಿಯಾದ ನಾಯಿಮರಿಗಳನ್ನು ಒಬ್ಬೊಬ್ಬರು ಒಂದೊಂದಾಗಿ ಹಿಡಿದುಕೊಂಡಿದ್ದರು. ಸೂಜಿ ಪೀರ, ವಂಡ್ರಯ್ಯ, ಕೊಟ್ಲಪ್ಪ ಒಂದೊಂದು ನಾಯಿಮರಿಯನ್ನು ಹಿಡಿದು ತಮ್ಮ ಮನೆಯತ್ತ ಸಾಗಿದ್ದರು. ಅದನ್ನೇ ನೋಡುತ್ತಾ ನಿಂತಿದ್ದ ನಾರಾಯಣಾಚಾರಿಯನ್ನು, ಕುಂಯ್ ಕುಂಯ್ ಎನ್ನುವ ಮೂಲಕ ಕೈಯಲ್ಲಿದ್ದ ನಾಯಿಮರಿ ಎಚ್ಚರಿಸಿತ್ತು. ಅದು ನಾಲಿಗೆಯಿಂದ ನೆಕ್ಕುತ್ತಿದ್ದಂತೆಯೇ ಪುಳಕಿತಗೊಂಡ ಆಚಾರಿ ನಸುನಗುತ್ತಲೇ ಮನೆಯತ್ತ ಹೆಜ್ಜೆಹಾಕಿದ್ದರು.

ಡಾ॥ ಶಿವರಾಮ ಅಸುಂಡಿ
ಈಟಿವಿ, ಕಲಬುರಗಿ

# ಮೊಬೈಲ್ ಮೇನಿಯ!

ಈರಪ್ಪ ಎಂ. ಕಂಬಳಿ

‘ಸ್ಮಾರ್ಟ್ ಜನರೇಶನ್ ಕೈಯಲ್ಲಿ ಒಂದು ಸ್ಮಾರ್ಟ್ ಫೋನು’ ಇದೆಂಥಾ ಆಕರ್ಷಕ ‘ಸ್ಲೋ–ಗನ್ನು’! ಹುಟ್ಟಿದ ಹಳ್ಳಿ ಹಾಳುಬಿದ್ದ ಕೊಂಪೆಯಾದರೇನು? ಈಗ ಏನಿದ್ದರೂ ಸ್ಮಾರ್ಟ್‌ಸಿಟಿಯತ್ತ ನಮ್ಮ ನಡಿಗೆ! ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ! ಯಾರೇ ಆಗಲಿ, ವರ್ತಮಾನದ ತಲ್ಲಣಗಳಿಗೆ ತುಸು ತಲೆ ಕೊಡದಿದ್ದರೆ ಅವನೊಬ್ಬ ಮನುಷ್ಯನೇ? ಇದು ನನ್ನನ್ನು ಅನುದಿನವೂ ಕಾಡುತ್ತಿರುವ ಅಸಲು ಪ್ರಶ್ನೆ. ಉತ್ತರ ಕರ್ನಾಟಕದ ಕಡೆ, ಈ ಫೋನು ಮಾಡುವುದನ್ನು ‘ಫೋನು ಹಚ್ಚುವುದು’ ಎಂದೇ ಹೇಳುತ್ತಾರೆ. ಅತ್ಯಂತ ವಸ್ತುನಿಷ್ಠ ಉಲ್ಲೇಖ ಅದು. ಒಂದು ಕಡೆಯಿಂದ ದೂರದ ಮತ್ತೊಂದು ಕಡೆಗೆ ಸಂಪರ್ಕ ಸಾಧಿಸುವುದೆಂದರೆ ಅದು ಹಚ್ಚುವ ಕ್ರಿಯೆಯೇ ಸೈ. ಸೆಲ್‌ಫೋನು ಎಂದೆಲ್ಲ ಕರೆಯಲಾಗುವ ಈ ನಿಸ್ತಂತು ಮೊಬೈಲು ಬಂದ ಮೇಲಂತೂ ಆ ಕಡೆಯ ಕಿವಿಯಿಂದ ಈ ಕಡೆಯ ಕಿವಿಗೆ ಹಚ್ಚಿಕೊಂಡೇ ಸಂಭಾಷಿಸುವುದಲ್ಲವೆ? ಅದಕ್ಕೆಂದೇ ‘ಫೋನು ಹಚ್ಚುವುದು’ ಎನ್ನುತ್ತಾರವರು. ಕಿವಿಗೆ ಅಷ್ಟೆ ಅಲ್ಲ ತಲೆಗೂ! ನೋಡುಗರಿಗೆ ರೇಜಿಗೆ ಹಿಡಿಸಿದರೇನಾಯಿತು, ಅದನ್ನು ದೂರೀಕರಿಸಲು ಸಾಧ್ಯವೆ?

“ಪರಪಂಚ ಅನ್ನೂದೇ ಒಂದು ‘ಹುಚ್ಚರ ಸಂತಿ’ ಏನಪಾ. ನಾವೆಲ್ಲ ಈಗ ಐಲುಫೈಲು ಆಗೇವಿ ತಮ್ಮಾ. ಅದನ್ಯಾಕೆ ಕೇಳ್ತೀ?” ನಮ್ಮೂರ ಮಠದಯ್ಯ ಸದಾ ಉಗ್ಗಡಿಸುವ ಮಾತು, ಇದು.

‘ಮೊಬೈಲು’ ಎಂಬೋ ಪದದಲ್ಲಿಯೇ ಇಂಗ್ಲಿಷಿನ ‘ಮಾಬ್’ ಇದೆ, ಕನ್ನಡದ ‘ಐಲು’ ಇದೆ, ಇದೊಂದು ರೀತಿಯಲ್ಲಿ ‘ಮಾಬೈಲು’ (ಸಮೂಹ ಸನ್ನಿ) ವ್ಯಾಕರಣದ ಪ್ರಕಾರ ಅರಿಸಮಾಸ. ಕೇಳುವದೇನು? ಬಾಲ್ಯಕಾಲದಲ್ಲಿ, ‘ದೊಡ್ಡವರ ಮನೆಯ ಸಮಾಚಾರ’ ಎಂದು ನಾವೆಲ್ಲ ಸುಮ್ಮನಿರುತ್ತಿರಲಿಲ್ಲ. ಅವರ ಮನೆಯಲ್ಲಿ ಯಾರಾದರೂ ತೀರಿಕೊಂಡಾಗ ಹೆಣ ಎತ್ತುವ ವರೆಗೂ ಅಲ್ಲೇ ಠಳಾಯಿಸುತ್ತಿದ್ದೆವು, ಮಂಡಾಳ ಒಗ್ಗರಣೆಯ ಆಸೆಗಾಗಿ. ಸದರಿ ಮನೆಯ ಹಿರೀಕರು ಹತ್ತಿರದ ಊರಿನ ಅಂಚೆ ಕಚೇರಿಗೆ ಧಾವಿಸಿ, ಪೋಸ್ಟ್ ಮಾಸ್ತರನನ್ನು ಮಧ್ಯರಾತ್ರಿ ಮಲಗಿದ್ದಾಗಲೂ ಚಿಲಕ ಕುಟ್ಟಿ ಬಡಿದೆಬ್ಬಿಸಿ, ಪೂಸಿ ಮಾಡಿ – ಅವರ ಸುಪರ್ದಿನಲ್ಲಿರುತ್ತಿದ್ದ ಕರಿಪೆಟ್ಟಿಗೆಯ ಹ್ಯಾಂಡಲ್ ಹೊಡೆಹೊಡೆದು, ಅಂಕಿ ತಿರುತಿರುಗಿಸಿ ದೂರದ ನೆಂಟರು ಇಷ್ಟರ ಊರುಗಳಿಗೆ ಸತ್ತ ಸುದ್ದಿ ತಲುಪಿಸಲು ಟ್ರಂಕ್‌ಕಾಲ್ ಹಚ್ಚಿ ಹೆಣಗುತ್ತಿದ್ದುದನ್ನು, ‘ಹಚಾ’




**ಸೆಲ್‌ಫೋನು ಎಂದು ಕರೆಸಿಕೊಳ್ಳುವ ಇದು ಇವತ್ತು ಜಗತ್ತಿನ ಜನರ ನಿದ್ದೆಗೆಡಿಸಿದ್ದಂತೂ ನಿಜ. ಜೀವನಶೈಲಿಯನ್ನೇ ಬದಲಾಯಿಸಿದ ಶ್ರೇಯಸ್ಸು ಈ ಮೊಬೈಲಿಗಿದೆ ಎಂಬ ನನ್ನ ಮಾತನ್ನು ಈಗ ಒಪ್ಪುತ್ತೀರಲ್ಲವೇ? ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ ಬೇಕೇಬೇಕು ಅನ್ನುವ ತೆರದಲ್ಲಿಯೇ. ಏನೂ ಇಲ್ಲದಿದ್ದರೂ ಪರವಾಯಿಲ್ಲ ಕೈಯಲ್ಲೊಂದು ಮೊಬೈಲಿರಬೇಕು. ‘ಮಗುವಿಗೆ ಮೊಬೈಲೇ ಮೊದಲ ಪಾಠಶಾಲೆ’ ಎನ್ನುವಂತಾಗಿದೆ. ಮೊಬೈಲು ಬಂತೇ ಬಂತು. ಮುಂಗೈ ಅಲಂಕರಿಸುತ್ತಿದ್ದ ರಿಸ್ಟ್ ವಾಚು ಕಳಚಿಬಿತ್ತು. ಕೊರಳಲ್ಲಿ ನೇತಾಡುತ್ತಿದ್ದ ಕ್ಯಾಮರಾ ಕಣ್ಮರೆಯಾಯಿತು. ಅಷ್ಟೇ ಅಲ್ಲ ಯಾವುದಕ್ಕೂ ಅಂಚೆ ಕಾರ್ಡು ಬರೆಯುವ ರೂಢಿ ಮೊದಲೇ ತಪ್ಪಿತು – ಎಸ್‌ಎಂಎಸ್ ಮಾಡುವ ಚಟ ಹತ್ತಿದ ಮೇಲೆ. ಮೊಬೈಲ್ ಒಳಗೆ ಅಡಕವಾಗಿವೆಯಲ್ಲ ಟಾರ್ಚು, ರೇಡಿಯೋ, ಕ್ಯಾಲ್ಕುಲೇಟರ್ ಇತ್ಯಾದಿ, ಇತ್ಯಾದಿ. ಆಲ್ ಇನ್ ಒನ್! ಅದಕ್ಕೆಂದೇ ನಾನು ಇದನ್ನು ‘ಮಾಯಾಜಾಲ’ ಎಂದು ಕರೆದದ್ದು. ಕೆಲವರು ‘ಜಂಗಮವಾಣಿ’ ಎಂದರು, ಮತ್ತು ಕೆಲವರು ‘ಸಂಚಾರಿವಾಣಿ’ ಎಂದರು, ಅವರವರ ಭಾವಕ್ಕೆ ಅವರವರ ಬಾಯಿಗೆ ಎಟುಕಿದಂತೆ. ಇನ್ನೊಬ್ಬರ ಸಲುವಾಗಿಯಾದರೂ ನಾವೀಗ ಮೊಬೈಲು ಹಿಡಿಯಬೇಕಾಗಿದೆ. ಕತ್ತಲೆಯಲ್ಲಿ ಕುರುಡ ಕಂದೀಲು ಹಿಡಿದು ನಡೆದ ಹಾಗೇ!**



ಎಂದರೂ ಬಿಡದೆ, ನಾವು ಹುಡುಗರು ಸ್ವತಃ ಸಾಕು ನಾಯಿಗಳ ಹಾಗೆ ಅವರ ಬೆಂಬತ್ತಿ ಹೋಗಿ ಅದೊಂದು ಮೋಜಿನ ಪ್ರಸಂಗವೆಂಬಂತೆ ನೋಡುತ್ತ ನಿಲ್ಲುತ್ತಿದ್ದೆವು, ಗಂಟೆಗಟ್ಟಲೇ, ಕುತೂಹಲದಿಂದ. ಪಕ್ಕದಲ್ಲಿಯೇ 'ಕಟ್ ಕಡಾ ಕಟ್ ಕಡಾ' ಎಂದು ಅನವರತ ತನ್ನ ಪಾಡಿಗೆ ತಾನು ಶಬ್ದ ಮಾಡುತ್ತಿದ್ದ ಯಂತ್ರವೊಂದು, ಆ ಕಾಲದಲ್ಲಿ. ಇತ್ತೀಚೆಗಷ್ಟೆ ಸತ್ತು ಹೋಗಿ ಕಾಲಗರ್ಭ ಸೇರಿತದು, ಅದರ ಉಸಾಬರಿಗೆ ಹೋಗಲಾರೆ ಇಲ್ಲಿ.

ಇಪ್ಪತ್ತನೇ ಶತಮಾನದ ಎಪ್ಪತ್ತರ ದಶಕವೆಂದರೆ, ಅದು ಚೊಣ್ಣದಲ್ಲಿ ಚಿತ್ತಾರ ಬಿಡಿಸಿಕೊಳ್ಳುವ 'ಕಲೆಗಾರ'ರ ಹದಿ ವಯಸ್ಸು ನಮಗಿನ್ನೂ. ಊರಿನ ಯುವಕ ಮಂಡಳಿ 'ಮಹಾಜನ್ ವರದಿ ಜಾರಿಗೆ ಬರಲಿ, ಬೆಳಗಾವಿ ನಮ್ಮದು' ಎಂದು ಅರಚಿಕೊಂಡು ಪ್ರದರ್ಶನ/ಹರತಾಳ ಒಂದನ್ನು ನಡೆಸಲು ಕರೆ ನೀಡಿತ್ತು. ಬಿಟ್ಟಾವೆಯೇ ? ನಮಗಷ್ಟೇ ಸಾಕಾಗಿತ್ತು. ಕೇಂದ್ರದ ಧೋರಣೆಯನ್ನು ವಿರೋಧಿಸಲು ನಮ್ಮ ಮುಂದಿದ್ದ ಅಂಚೆ ಕಚೇರಿಗೆ ಬೆಂಕಿ ಹಚ್ಚುವಷ್ಟು ಧಾರ್ಷ್ಟ್ಯ ನಮಗಿರಲಿಲ್ಲ ಆಗಿನ್ನೂ. ಹೀಗಾಗಿ, ಊರಾಚೆಗಿನ ನಿರ್ಜನ ಪ್ರದೇಶದಲ್ಲಿ ರಸ್ತೆ ಪಕ್ಕ ನಿಂತಿರುತ್ತಿದ್ದ ಅಮಾಯಕ ಟೊಳ್ಳು ತಾರಿನ ಕಂಬಗಳನ್ನೇ ಮುರಿದು ಪ್ರತಿಭಟಿಸಲು ಮುಂದಾಗಿದ್ದೆವು, ಪೊಲೀಸರ ಕಣ್ಣುತಪ್ಪಿಸಿ. ಜೋಳದ ದಂಟಿನಂತೆ ಅರ್ಥಾತ್ ಅಡಿಕೆ ಮರದ ಕಾಂಡದಂತೆ ಸಪೂರವಾಗಿದ್ದು ನೀಟಾಗಿ ನಿಂತಿರುತ್ತಿದ್ದ ತಾರಿನ ಕಂಬಗಳಿಗೆ ಕಿವಿ ಒತ್ತಿ–ಹಚ್ಚಿ ಗುಂಯ್‌ಗುಡುವ ಅದರ ಸದ್ದಿನಲ್ಲಿ ಫೋನಿನಲ್ಲಿ ಸಂಭಾಷಿಸುವುದನ್ನೋ ಇಲ್ಲಾ ಕಟ್ ಕಡಾ ಕಟ್ ಎಂದು ಪೋಸ್ಟ್ ಮಾಸ್ತರ ಕುಟ್ಟಿ ಕುಟ್ಟಿ ಸಂದೇಶ ರವಾನಿಸುವುದನ್ನೋ ಕದ್ದು ಕೇಳುವ ವಿಫಲಯತ್ನ ಮಾಡುತ್ತಿದ್ದೆವು, ಬಾಲ್ಯ ಕಾಲದ ಆ ಮುಗ್ಧತೆಯಲ್ಲಿ. ಈಗ ಏನಿದ್ದರೂ ಖುಲ್ಲಾಂಖುಲ್ಲಾ ಕಿವಿಯಿಂದ ಕಿವಿಗೆ ಗಟ್ಟಿಯಾಗಿ ಒತ್ತಿ ಹಿಡಿದು, ಒಂದೇ ಸಮ ತಲೆ ಬಿಸಿಯಾಗುವಷ್ಟು ಸಂಭಾಷಿಸುವ ಮೊಬೈಲಿಗೆ 'ಫೋನು ಹಚ್ಚುವುದು' ಅಲ್ಲದೆ ಇನ್ನೇನು ಹೇಳಬೇಕು ಅದಕ್ಕೆ !

ನಮ್ಮ ಬಾಲ್ಯ ಕಾಲದಲ್ಲಿ ಹಾಗಿತ್ತು, ಅಂಚೆ ಕಚೇರಿಗೆ ಹೋಗಿ, ಪೋಸ್ಟ್ ಮಾಸ್ತರನಲ್ಲಿ ಇಂಥಾ ಊರು, ಇಂಥಾ ಹೆಸರಿನ, ಇಂಥಾ ಅಡ್ಡ ಹೆಸರಿನವರೆಂದು ವಿವರಿಸಿ ಹೇಳಿ, ಆ ಊರಿನ ಅವರನ್ನು ಕರೆತರುವವರೆಗೆ ಇಲ್ಲೇ ಅಂಚೆ ಕಚೇರಿಯ ಮುಂದೆ ಅಂಗಳದಲ್ಲಿ ಕಾಯುತ್ತ ಕೂರಬೇಕು, ಥೇಟ್, ಪೊಲೀಸ್ ಠಾಣೆಯ ಮುಂದೆ ಕಾದಿರುತ್ತಾರಲ್ಲ ಹಾಗೆ. ಆ ಕಡೆಯ ಊರಿನ ಸಂಬಂಧಪಟ್ಟವರು ಬಂದು ತಲುಪಿ ಅಂಚೆ ಕಚೇರಿಗೆ ಹಾಜರಾದ ಸುಳುಹು ಸಿಕ್ಕಮೇಲೆ ಇಲ್ಲಿ ಅಂಗಳದಲ್ಲಿ ಕಾದವರು, ಅಂಚೆ ಮಾಸ್ತರನ ಸೂಚನೆಯಂತೆ ದೂರವಾಣಿಯಲ್ಲಿ ಸಂಪರ್ಕ ಸಾಧ್ಯವಾದ ಮೇಲೆ, 'ಇಂಥವರು ಇಂಥ ಹೊತ್ತಿನಲ್ಲಿ ತೀರಿಕೊಂಡರು' ಎಂಬುದನ್ನು ಅರ್ಧ ಊರಿಗೆ ಕೇಳಿಸುವಷ್ಟು ಗಟ್ಟಿ ದನಿಯಲ್ಲಿ ಅರಚಿ ಕಿರುಚಿ ಹೇಳಬೇಕು. ಇತ್ತ ಕಡೆಯಿಂದ ಮಾತನಾಡುವವರ ಮೈಂಡ್ ಸೆಟ್ ಹಾಗಿರುತ್ತದೆ. ನೂರಾರು ಮೈಲು ದೂರದ ಊರಲ್ಲಿದ್ದವರಿಗೆ ವಿಷಯ ತಿಳಿಸಬೇಕಾದರೆ ಹಾಗೆ ಒದರಿಯೇ ಹೇಳಬೇಕು. ಸುಮ್ಮನೇ ಏನು ? ಹಾಗೆ ನೆಲಗುಮ್ಮ (ಲ್ಯಾಂಡ್‌ಲೈನ್) ಫೋನಿನಿಂದ ಈಗ ನಿಸ್ತಂತು – ಮೊಬೈಲು ದೂರವಾಣಿಗೆ ಬಂದು ಮುಟ್ಟಿದ ನಾಗರಿಕ ಜಗತ್ತಿನ ವೇಗದಲ್ಲಿ ನಾವೂ ಹಿಂದೆ

ಬೀಳಬಾರದಲ್ಲವೆ ? 'ಮೊಬೈಲು ಇದ್ದವರಿಗೆ ನಿದ್ದೆ ಇಲ್ಲ – ಮೊಬೈಲು ಇಲ್ಲದವರಿಗೆ ಮರ್ಯಾದೆ ಇಲ್ಲ' – ಇಕೋ ತಗೊಳ್ಳಿ ಹೊಸ ಗಾದೆ, ನಾನೇ ಕೈಯಾರೆ ಠಂಕಿಸಿದ್ದು. 'ಮದುವೆಯಾಗುವ ತನಕ ಹುಚ್ಚು ಬಿಡದು – ಹುಚ್ಚು ಬಿಡುವ ತನಕ ಮದುವೆ ಯಾಗದು' ಎಂಬ ಹಳೆಯ ಗಾದೆಯನ್ನು ನೆನಪಿಸುವಂತೇ ಥೇಟು !

ಅದ್ಯಾರೋ ತಮ್ಮ ವಿಸಿಟಿಂಗ್ ಕಾರ್ಡಿನಲ್ಲಿ, 'ಜಂಗಮವಾಣಿ' ಎಂದು ಕನ್ನಡೀಕರಿಸಿದ್ದರು. ನನಗೆ ಶರಣರ ಪರಿಕಲ್ಪನೆಗಳಾದ ಗುರುಲಿಂಗಜಂಗಮ ಒಟ್ಟೊಟ್ಟಿಗೇ ನೆನಪಾದವು. ಹಳೆ ಮೈಸೂರು ಕಡೆಗೆ ಮಾತಿಗೆ ಮೊದಲು 'ಏನ್ ಹೇಳ್ತಿದೀಯಾ ಗುರು ?' ಎಂದರೆ ಜಂಟಲ್ ಮ್ಯಾನನನ್ನು ಗುರು ಎಂದು ಕನ್ನಡೀಕರಿಸಿರುವುದಾದರೆ ಲಿಂಗ–ಜಂಗಮ ಅಂದರೆ ದೇಹ ಮತ್ತು ಮೊಬೈಲುಗಳ ನಡುವಿನ ಅವಿನಾಭಾವ ಸಂಬಂಧವೇ ಆಗಿದೆ. ಇದನ್ನು ಬೇಕಾದರೆ 'ಮೊಬೈಲ್ ಮೇನಿಯ' ಎಂಬ ಹೊಸ ಕಾಯಿಲೆ ಎಂದು ಬೇಕಾದರೆ ಕರೆಯಿರಿ. ಆಧುನಿಕ ನಾಗರಿಕ ಜಗತ್ತಿಗೆ ಅಂಟಿದ ಹೊಸ ಜಾಡ್ಯವೆಂದು ದೂರಿದರೇನು ಬಂತು ಭಾಗ್ಯ ? 'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ' ಎಂಬ ದಾಸವಾಣಿಯಂತೆ – ಅರೆಕ್ಷಣವೂ ಮೊಬೈಲಿನಿಂದ ಅಗಲಿ ದೂರವಿರಲಾರದ ಮನಸ್ಸುಗಳು. ತಾವು ದುಡಿದದ್ದಲ್ಲಿ ತಮ್ಮ ಹೊಟ್ಟೆಬಟ್ಟೆ ಕಟ್ಟಿಯಾದರೂ ಮೊಬೈಲ್ ಹೊಟ್ಟೆಗೆ ಹಾಕುವವರ ಸಂತತಿ ಹೆಚ್ಚಾಗುತ್ತಿದೆ ಅನ್ನುವದನ್ನು ನಂಬುತ್ತೀರಾ ? ಇದೇನ್ ಆಹಾ ! ಲಿಂಗವನ್ನು ಆಯತ ಮಾಡಿಕೊಂಡ ಜಂಗಮರಂತೆ ಎಲ್ಲಿಯೇ ಸಂಚರಿಸುತ್ತಿರಲಿ, ಅವರ ದೇಹದ ಮೇಲೆ ಲಿಂಗದ ಕಾಯಿಯಂತೆ ಸದಾ ಅಂಟಿಕೊಂಡಿರುವುದು, ಈ ಮೊಬೈಲ್ ಎಂಬೋ 'ದೇವಾಂಶ (ಸಂ)ಭೂತ' ಬಲ್ಲಿರಾ ? ಅದನ್ನು 'ಜಂಗಮವಾಣಿ' ಎನ್ನಿರಿ, ಗಾಳಿಯಲ್ಲಿ ಕೇಳಿ ಬರುವ 'ದೇವವಾಣಿ' ಅನ್ನಿರಿ, ನಡೆದಾಡಿಕೊಂಡೇ ಉಲಿಯುವ 'ಸಂಚಾರಿವಾಣಿ' ಎನ್ನಿರಿ. ಕವಿ ಇಂಚಲರ ಕವಿತೆಯ ಸಾಲುಗಳು ಬಾಯಿಗೆ ಬರುತ್ತಿವೆ :

*ದೇವನೊಬ್ಬ ತಾ ನಾಮ ಹಲವು ಬಗೆ*
*ದಾರಿ ಬೇರೆ ಬೇರೆ*
*ಅವನ ನಂಬಿ ಜನ ಬಾಳ ನೂಕಿದರೂ*
*ಬೇವು–ಬೆಲ್ಲ ತಾನೆ !*

ನಿತ್ಯ ಕಷ್ಟಪಟ್ಟು 'ಬಾಳ ನೂಕುವ ಜನ'ಗಳಿಗೂ ಮೊಬೈಲು ಹೀಗೆ ಹಲವು ಬಗೆಯಾಗಿ ಕಾಡುವುದೆಂಬುದನ್ನು ಯಾರಾದರೂ ಅಲ್ಲಗಳೆಯ ಲಾದೀತೆ ? ಮೊಬೈಲು ಹೊಸ ಸವಾಲುಗಳನ್ನು/ ಹೊಸ ಸಮಸ್ಯೆಗಳನ್ನು ಹುಟ್ಟುಹಾಕಿದ್ದು ನಿಜ. ಆದರೆ, ಅಪರಾಧಿಗಳನ್ನು ಅವರ ಜಾಡು ಹಿಡಿದು ಹುಡುಕಿಕೊಂಡು ಹೋಗಿ ಹಿಡಿದುಹಾಕಲು ಅವರ ಮೊಬೈಲು ಫೋನೇ ನೆರವಾಗುವುದೂ ಉಂಟು !

'ಪಿಳ್ಳಂಗೋವಿಯ ಚೆಲ್ವಕೃಷ್ಣನ ಎಲ್ಲಿ ನೋಡಿದಿರಿ ?' ಸೊಗಸಾದ ದಾಸರ ಹಾಡು. ಪಿಳ್ಳಂಗೋವಿಯ ಹಿಡಿದು ದನ ಮೇಯಿಸುತ್ತಿದ್ದ ಕಳ್ಳಕೃಷ್ಣನ ಕತೆ ಯಾರಿಗೆ ಗೊತ್ತಿಲ್ಲ ! ಕೃಷ್ಣನ ಜನನವೇ ಕಂಸ ವಧೆಯ ಸೂಚನೆ. ನಮ್ಮ ಪೌರಾಣಿಕ ಕತೆ ಗಳಲ್ಲಿ ಕೇಳಿಬರುವ ಆ ದೇವವಾಣಿ ಅಶರೀರವಾಣಿ ಯಾಗಿ, ಕಾಲಾಂತರದಲ್ಲಿ ಆಕಾಶವಾಣಿಯಾಗಿ ಈಗ ತಂತಿರಹಿತ ಸಂಚಾರಿವಾಣಿಯಾಗಿರುವುದೇ ಈ ಸೆಲ್ ಫೋನು ಎನ್ನುವವರಿದ್ದಾರೆ. ಹಾಗೆಯೇ 'ಸುಬ್ಬಾಶಾಸ್ತ್ರೀ' ಎಂಬೋ ಹಳೆ ಸಿನಿಮಾದ ಹಾಡು ಶಾಸ್ತ್ರೀಯ ರಾಗದಲ್ಲಿ ಕೇಳಿ ಬರುವ ಕೃಷ್ಣನ 'ಕರೆ' ಕೇಳಿರಿ :

*ಕೃಷ್ಣನಾ ಕೊಳಲಿನಾ ಕರೆ, ಆಲಿಸು*
*ಕೃಷ್ಣನಾ ಕೊಳಲಿನಾ ಕರೆ, ತ್ವರೇ ತ್ವರೇ*
*ತೊಟ್ಟಿಲಿನಾ ಹಸುಗೂಸಾ ಮರೇ ಮರೇ*
*ಪಕ್ಕದ ಗಂಡನಾ ತೊರೇ ತೊರೇ*
*ಬೃಂದಾವನಕೆ ತ್ವರೇ ತ್ವರೇ*
*ಕೃಷ್ಣನಾ ಕೊಳಲಿನಾ ಕರೆ*

ವಾಹ್ ! ಇದೇನಿದು 'ಕರೆ ಕರೆ' ಅನ್ನಬೇಡಿರಿ. ಇಂಗ್ಲಿಷಿನ ಕಾಲ್‌ಗೆ ಸಂವಾದಿ ಪದವೇ ಈ 'ಕರೆ' ಆಗಿದೆ. ದ್ವಾಪರದ ಕೃಷ್ಣ ಹಾಗೆ ಕೊಳಲು ನುಡಿಸಿದರೆ ಗೋವುಗಳಷ್ಟೇ ಏಕೆ ಗೋಪಿಕೆಯರೂ ಬರುತ್ತಿದ್ದರಂತೆ. ಅದು ಕೃಷ್ಣನ ಕೈಯೊಳಗಿನ ಕೊಳಲೆಂಬೋ ಮೊಬೈಲಿನ ಕರಾಮತ್ತು. ಮೊನ್ನೆ ನನ್ನ ಹಳ್ಳಿಗೆ ಹೋಗಿದ್ದೆ, ಊರು ಕೊಂಪೆಯಂತೆ ತೋರಿತ್ತು. ನನ್ನ ಸಮ ವಯಸ್ಕರೆಷ್ಟೋ ಬಾಳಿನ ಬಂಡೆಗಲ್ಲಿಗೆ ಉಜ್ಜಿ ಉಜ್ಜಿ, ಹತ್ತಾರು ದುಶ್ಚಟಗಳ ದಾಸರಾಗಿ ಹೋಗಿ, ಈಗ ತೋಪೆದ್ದು ಹೋದವರಂತೆ – ಐವತ್ತಕ್ಕೇ ಎಂಬತ್ತರ ಮುದುಕರಂತೆ ಕಂಡುಬಂದು ನನ್ನಲ್ಲಿ ಕೆಟ್ಟ ಕುತೂಹಲ ಹುಟ್ಟಿಸಿದ್ದರು. ಯಾಕೆ ಹೀಗೆ ? ಎನ್ನುವಂತೆ, ಹುಬ್ಬೇರಿಸಿದ್ದಕ್ಕೆ, "ನಮ್ಮ ಸಂತಿ ಮುಗದೈತಲೇ ತಮ್ಮಾ ಆಗಲೇ. ಗಂಟು ಮೂಟೆ ಕಟ್ಟಿಗೊಂಡು ಕುಂತೇವಿ. ಕರೆ ಬರೂದೊಂದಾ ಸೊನ್ನಿ. ಗಿಚ್ಚಿ ಕಟೆದು ಓಡೂದೊಂದೆ ಬಾಕಿ, ಯಾರ ಕೈಗೂ ಸಿಗದ್ಹಂಗ" ಎಂದು ಆಕಾಶಕ್ಕೆ ಮುಖ ಮಾಡಿದ್ದರು. ಅಲೇ ಇವನಾ 'ಕಾಲ್' ಅನ್ನುವುದರಲ್ಲಿ ಕಾಲನ ಕರೆ ಎಂಬೋ 'ದರ್ಶನ' ಕೂಡ ಅಡಗಿರುವ ವಿಶೇಷ ಅರ್ಥವೂ ಒಂದಿದೆ ಅಂತಾ ಆಗಲೇ ಹೊಳೆದದ್ದು, ನನಗೆ. ಈ ಮೊಬೈಲಿನ ಕರೆ ಕರೆಗೆ ಗುರಿಯಾಗಿ ಪಕ್ಕದಲ್ಲಿನ ಗಂಡನನ್ನೂ ತೊಟ್ಟಿಲಿನ ಹಸುಗೂಸನ್ನೂ ತೊರೆಯುವವರೂ ಮರೆ ಯುವವರೂ ಇದ್ದಾರೆ ಅಂದ ಹಾಗಾಯಿತು !




ಬೆಂಗಳೂರಿನ ರೇಡಿಯೋ ಸಿಟಿಯಲ್ಲಿ ನಿತ್ಯ ಮೇಡಂ ಉಲಿಯುತ್ತಾರೆ. "ನಾನು, ನಿಮ್ಮ ಸುಧಾ ಬರಗೂರು, ಎಲ್ಲೇ ಇರಿ, ಹೇಗೇ ಇರಿ, ನಾಳೆ ಬೆಳಿಗ್ಗೆ ಹನ್ನೊಂದು ಗಂಟೆಗೆ ರೇಡಿಯೊ ಸಿಟಿಯಲ್ಲಿ ಕಷ್ಟ ಸುಖಾ ಹಂಚಿಕೊಳ್ಳೋಣ, ಕಾಲ್ ಮಾಡಿಕೊಂಡು ಮಾತಾಡಾಣ", ಅಂತ. ನಮ್ಮ ಕನ್ನಡಾ ಎಂಥಾ ರಿಚ್ ಭಾಷೆ ಮಾರಾಯ್ರೇ. 'ಕೈ ಮಾಡೂದು' ಅಂದ್ರೆ ಮ್ಯಾನ್ ಹ್ಯಾಂಡಲಿಂಗ್ ಅರ್ಥಾತ್ 'ಬಡಿದಾಡೂದು' ಎಂದು. ಹಾಗಾದ್ರೆ ಕಾಲು ಮಾಡೊದು ಅಂದ್ರೆ – 'ಕೆಳಗೆ ಹಾಕಿ ಒದಿಯೂದು' ಅಂತ ಯಾಕಾಗಬಾರದು ? ಬೆಂಗಳೂರು ಕನ್ನಡ ಅಂದ್ರ ಹೀಂಗಾ ಅದು. ಕುಲಗೆಟ್ಟ ಕಸೂತಿ. ಇನ್ನ 'ಕಾಲು ಮಡಿಯೂದು' ಅಂತಾ ಯಾರಾದ್ರೂ ಕೇಳಿ ಗೀಳ್ಯಾರು ಅಂತಾ ಮೊದಲೇ ತಿಳಿಸಿಬಿಡತೀನಿ ? ಅದು ಬಯಲ ಕಡಿಗೆ ಹೋಗಿ, ಸುತ್ತಾಮುತ್ತಾ ಕಣ್ಣು ಹಾಯಿಸಿ, ಯಾರೂ ಇಲ್ಲಾ ಅನ್ನೋದನ್ನು ಖಾತ್ರಿ ಮಾಡಿಕೊಂಡು ದಬಕ್ಕನೇ ಕುಂತು ಮೈನೀರು ಹಣಿಸಿ 'ಸ್ಪ್ರಿಂಗ್ ಆ್ಯಕ್ಷನ್‌ನಲ್ಲಿ ಎದ್ದು ನಿಲ್ಲೋದು' ಅದನ್ನೇ ಸಾಂಕೇತಿಕ ಭಾಷೆಯಲ್ಲಿ ಹೇಳುವುದಾದರೆ ತೊಟ್ಟಿಲಲ್ಲಿರುವ ಮಗುವಿಗೆ ಸೂಸೂ ಮಾಡುವಂತೆ ಪುಸಲಾಯಿಸುತ್ತಾರಲ್ಲ ಹೆಂಗಸರು. ಇದೂ ಹಾಗೆಯೇ, ನಾಗರಿಕ ಜಗತ್ತಿಗೆ ಓಪನ್ ಆಗಿ ಹೇಳಬೇಕೆಂದರೆ ಅದುವೇ ಮೂತ್ರ ವಿಸರ್ಜನೆ.

ನೀವು ಎಂದಾದರೂ ರೈಲಿನಲ್ಲಿ ದಿಲ್ಲಿಯತ್ತ ಪ್ರಯಾಣಿಸಿದ್ದರೆ, ಪ್ರತಿ ದಿನದ ಬೆಳಗು ಆರಂಭ ವಾಗುವುದೇ ರೈಲು ಹಳಿಯ ಉದ್ದಕ್ಕೂ ಎರಡೂ ಬದಿಗೆ ಚೊಂಬು ಹಿಡಿದು ಕೂತವರ ಆ ಓಪನ್ ಏರ್ ದೃಶ್ಯದೊಂದಿಗೆ. ಹೀಗಾಗಿ ತಡವಾದರೂ ಚಿಂತೆಯಿಲ್ಲ ಇತ್ತೀಚೆಗೆ ನಮ್ಮ ನಾಗರಿಕ ಸರ್ಕಾರಗಳು ಶೌಚಾಲಯ ಒದಗಿಸುವ ನಿಟ್ಟಿನಲ್ಲಿ ತಲೆ ಕೊಡವಿ ನಿಂತಿವೆ. ದಯವಿಟ್ಟು ವಾಚಕ ಮಹಾಶಯರು ಮೂಗು ಮುರಿಯಬಾರದು. ಇದೇನಿದು ? 'ಮೊಬೈಲ್ ಕರೆ' ಅಂತಾ ಶುರು ಮಾಡಿ ರೈಲು ಹಳಿತಪ್ಪಿದಂತೆ ವಿಷಯಾಂತರ ಮಾಡುತ್ತಿದ್ದಾನಲ್ಲ, ಇವ ಪಾಪಿ ! ಅನ್ನದಿರಿ. ಮಲ/ಮೂತ್ರ ವಿಸರ್ಜನೆಯೆಂದರೆ ಇದು ಕೂಡ 'ನೈಸರ್ಗಿಕ ಕರೆ'ಯೇ ಅಲ್ಲವೇ ಬುದ್ಧೀ, ಕ್ಷಮಿಸಬೇಕು ದಯವಿಟ್ಟು.

ಮತ್ತೆ ದಾರಿಗೆ ಹತ್ತುತ್ತೇನೆ ಬನ್ನಿರಿ. ಒಂದು

ಕಾಲದ ಶ್ರೀಮಂತರ ಮನೆಯ ಪಡಸಾಲೆಯ ಟೇಬಲ್ ಮೇಲೆ ಅಲಂಕಾರಪ್ರಾಯವಾಗಿ ಸ್ಥಾಪನೆಯಾಗಿರುತ್ತಿದ್ದ ಲ್ಯಾಂಡ್‌ಲೈನ್ ಫೋನೆಂಬೊ ಕೃಷ್ಣ ಸುಂದರಿಯ ಪಕ್ಕದ ಕುರ್ಚಿಯ ಮೇಲೆ ಕಾಲ ಮೇಲೆ ಕಾಲು ಹಾಕಿಕೊಂಡು ಕೂತ ನಾಯಕ / ನಾಯಕಿ ಅತ್ಯಂತ ಆಢ್ಯತೆಯಲ್ಲಿ ಡಯಲ್ ತಿರುಗಿಸುತ್ತಿದ್ದ ದೃಶ್ಯವನ್ನು ಸಿನಿಮಾಗಳಲ್ಲಿ ಮಾತ್ರ ನೋಡಿ ಆನಂದ ಪಡುತ್ತಿದ್ದೆವು. ಶಂಶಾದ್ ಬೇಗಂ ಅವರ ಕಂಠಸಿರಿಯಲ್ಲಿ ಕೇಳಿ ಬರುತ್ತಿದ್ದ ಹಳೆ ಸಿನಿಮಾದ ಗಾನಾ ಪ್ಲೇಟೊಂದು ನೆನಪಾಗುತ್ತದೆ :

*ಓ ಮೇರೆ ಪಿಯಾ ಗಯೆ ರಂಗೂನ್*
*ಕಿಯಾ ಹೈ ವಹಾಂ ಸೇ ಟೆಲಿಫೂನ್*
*ತುಮ್ಹಾರೀ ಯಾದ್ ಸತಾತಿ ಹೈ*
*ತುಮ್ಹಾರೀ ಯಾದ್ ಸತಾತಿ ಹೈ*
*ಜಿಯಾ ಮೇ ಆಗ್ ಲಗಾತಿ ಹೈ !*

ವಾಹ್ ! ರಂಗೂನ್‌ಗೆ ತೆರಳಿದ್ದ ಗಂಡನ ಟೆಲಿಫೋನ್ ಕರೆ ಆ ನೆನಪೇ ಬೆಂಕಿಯಾಗಿ ಬಾಧಿಸುತ್ತಲೇ ಸತಾಯಿಸುತ್ತದಂತೆ, ನಮ್ಮ ನಾಯಕಿಯನ್ನು. ಅದೇನು ಸಾಹಿತ್ಯ, ಅದೇನು ಸಂಗೀತ. ಈ ಫೋನು ಎಲ್ಲ ಕಾಲಕ್ಕೂ ಕಾಡುವ ಗುಣ ಹೊಂದಿದೆ. ಸಂಪರ್ಕ ಕ್ರಾಂತಿಯ ಫಲವಾಗಿ, ಅತ್ಯಂತ ವೇಗ ಬಂದಿರುವ ನಾಗರಿಕತೆಯ ಹಾದಿಯಲ್ಲಿರುವ ನಾವೀಗ ನೆಲಪಟ್ಟಾಗಿದ್ದ ಆ ಲ್ಯಾಂಡ್‌ಲೈನ್ ಎಂಬೋ ಹೋಮ್ ಮೇಕರ್ – ಮನೆಯ ಹೆಂಡತಿ ಯಾರಿಗೆ ಬೇಕೀಗ ? ಏನಿದ್ದರೂ ಈಗ ತುದಿ ಬೆರಳಲ್ಲಿ ಪ್ರಪಂಚವನ್ನೇ ಜಾಲಾಡುವ ಮೊಬೈಲ್ ಎಂಬ ಸಂಚಾರಿ ಸವತಿ ಬಂದ ಮೇಲಂತೂ ಜನರ ನಡವಳಿಕೆಯಲ್ಲಿಯೂ ಏರುಪೇರಾಗಿದೆ, ಬಲ್ಲಿರಾ ?

ಖಾಸಗಿ ಕಂಪನಿಯ ಎಕ್ಸಿಕ್ಯೂಟಿವ್ ಒಬ್ಬ ಸ್ವಯಲ್ಲಾಗಿ ಕೊರಳಲ್ಲಿ ಟೈ ಎಂಬೋ ಕಂಠ ಲಂಗೋಟಿ ನೇತಾಡಿಸಿಕೊಂಡು ಟಾಕು ಟೀಕಾಗಿ, ಬ್ರೀಫ್‌ಕೇಸು ಹಿಡಿದು, ಕಚೇರಿಯಿಂದ ಕಚೇರಿಗೆ, ಊರಿಂದ ಊರಿಗೆ ಅಂಡಲೆಯುತ್ತಿರುತ್ತಾನೆ. ಅದು ಆತ ಆಯ್ದುಕೊಂಡ ವೃತ್ತಿ. ಮನೆಯಲ್ಲಿರುವ ಆತನ ಹೆಂಡತಿ ಯಾದರೂ ಏನು ಮಾಡಬೇಕು ? ಅನುಮಾನದ ಪ್ರಾಣಿಯಾಗಿದ್ದರಂತೂ ತೀರಿತು. ಆಧುನಿಕ ನಾಗರಿಕ ಜಗತ್ತು ಕರುಣಿಸಿರುವ 'ಅಂಗೈ ಅರಗಿಣಿ' ಈ ಮೊಬೈಲಿನೊಂದಿಗೆ ಆಟವಾಡಿಕೊಂಡು ಕಾಲ ಕಳೆಯಬೇಕು ಅಷ್ಟೆ, ಆಗೀಗ ಗಂಡನೆಂಬ ಪ್ರಾಣಿಗೆ ಹೊತ್ತಲ್ಲದ ಹೊತ್ತಿನಲ್ಲಿ ಫೋನಾಯಿಸುತ್ತ ತಿವಿತಿವಿದು ತನಿಖಿಸಬೇಕು. ಉಲ್ಲಾಸ ಕಾರಂತರು ನಾಗರಹೊಳೆಯ ಕಾಡಿನ ಹುಲಿಗೆ ರೇಡಿಯೋ ಕಾಲರ್ ಕಟ್ಟಿಬಿಟ್ಟಿದ್ದರಲ್ಲ. ಯಾವ ಹೊತ್ತಿನಲ್ಲಿ ತನ್ನ ಹುಲಿ ಎಲ್ಲಿ, ಏನು ಮಾಡುತ್ತದೆ ಎಂದು ತಿಳಿಯುವುದಕ್ಕೆ. ಇದೂ ಹಾಗೇ ಥೇಟು !

ಸೆಲ್‌ಫೋನು ಎಂದು ಕರೆಸಿಕೊಳ್ಳುವ ಇದು ಇವತ್ತು ಜಗತ್ತಿನ ಜನರ ನಿದ್ದೆಗೆಡಿಸಿದ್ದಂತೂ ನಿಜ. ಜೀವನಶೈಲಿಯನ್ನೇ ಬದಲಾಯಿಸಿದ ಶ್ರೇಯಸ್ಸು ಈ ಮೊಬೈಲಿಗಿದೆ ಎಂಬ ನನ್ನ ಮಾತನ್ನು ಈಗ ಒಪ್ಪುತ್ತೀರಲ್ಲವೇ ? ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ ಬೇಕೇಬೇಕು ಅನ್ನುವ ತೆರದಲ್ಲಿಯೇ. ಏನೂ ಇಲ್ಲದಿದ್ದರೂ ಪರವಾಯಿಲ್ಲ ಕೈಯಲ್ಲೊಂದು ಮೊಬೈಲಿರಬೇಕು. 'ಮಗುವಿಗೆ ಮೊಬೈಲೇ ಮೊದಲ ಪಾಠಶಾಲೆ' ಎನ್ನುವಂತಾಗಿದೆ. ಮೊಬೈಲು ಬಂತೇ ಬಂತು. ಮುಂಗೈ ಅಲಂಕರಿಸುತ್ತಿದ್ದ ರಿಸ್ಟ್ ವಾಚು ಕಳಚಿಬಿತ್ತು. ಕೊರಳಲ್ಲಿ ನೇತಾಡುತ್ತಿದ್ದ ಕ್ಯಾಮರಾ ಕಣ್ಮರೆಯಾಯಿತು. ಅಷ್ಟೇ ಅಲ್ಲ ಯಾವುದಕ್ಕೂ ಅಂಚೆ ಕಾರ್ಡು ಬರೆಯುವ ರೂಢಿ ಮೊದಲೇ ತಪ್ಪಿತು – ಎಸ್‌ಎಂಎಸ್ ಮಾಡುವ ಚಟ ಹತ್ತಿದ ಮೇಲೆ. ಮೊಬೈಲ್ ಒಳಗೆ ಅಡಕವಾಗಿವೆಯಲ್ಲ ಟಾರ್ಚು, ರೇಡಿಯೋ, ಕ್ಯಾಲ್ಕುಲೇಟರ್ ಇತ್ಯಾದಿ, ಇತ್ಯಾದಿ. ಆಲ್ ಇನ್ ಒನ್ ! ಅದಕ್ಕೆಂದೇ ನಾನು ಇದನ್ನು 'ಮಾಯಾಜಾಲ' ಎಂದು ಕರೆದದ್ದು. ಕೆಲವರು 'ಜಂಗಮವಾಣಿ' ಎಂದರು, ಮತ್ತು ಕೆಲವರು 'ಸಂಚಾರಿವಾಣಿ' ಎಂದರು, ಅವರವರ ಭಾವಕ್ಕೆ ಅವರವರ ಬಾಯಿಗೆ ಎಟುಕಿದಂತೆ. ನಮ್ಮ ಕರಾವಳಿ ಜನರ ಬಾಯಲ್ಲಿ 'ಎಂತದು ಮಾರಾಯ್ರೆ ? ನಿಮ್ಮ ಕೈಯಲ್ಲೊಂದು ಮೊಬೈಲು ಅಂತ ಇಲ್ಲದಿದ್ದ ಮೇಲೆ ನೀವೆಂಥ ಜನ, ಬುರ್ನಾಸು !' ಎಂದು ಹುಬ್ಬೇರಿಸಿದರೂ ಅಚ್ಚರಿಯಿಲ್ಲ. ಹೀಗಾಗಿ, ಇನ್ನೊಬ್ಬರ ಸಲುವಾಗಿಯಾದರೂ ನಾವೀಗ ಮೊಬೈಲು ಹಿಡಿಯಬೇಕಾಗಿದೆ. ಕತ್ತಲೆಯಲ್ಲಿ ಕುರುಡ ಕಂದೀಲು ಹಿಡಿದು ನಡೆದ ಹಾಗೇ !

ಏನೇ ಆಗಲಿ, ಇವತ್ತಿನ ಮಾಹಿತಿ ತಂತ್ರಜ್ಞಾನ ಬೀಸಿದ ಬಲೆಯ ಉರುಳಲ್ಲಿ ಸಿಕ್ಕಿ ಹಾಕಿಕೊಂಡು ವಿಲಿವಿಲಿ ಒದ್ದಾಡುವ ಬಲಿಪಶುಗಳು ನಾವೀಗ ಎಂದು ಜರಿದರಾಗುತ್ತದೆಯೇ ಆಧುನಿಕತೆಯನ್ನು ! ಚರಿತ್ರೆ ಹಿಮ್ಮುಖವಾಗಿ ಚಲಿಸಲಾರದು. ನಾವೂ ಒಂದಿಷ್ಟು ಅಪ್‌ಡೇಟ್ ಆಗಲು ಪ್ರಯತ್ನಿಸಬೇಡವೆ ? ನಾಗರಿಕತೆಯ ವೇಗಕ್ಕೆ ತಕ್ಕ ಹಾಗೆ ನಾವೂ ಶತಾಯ ಗತಾಯ ಒಂದಿಷ್ಟು ವೇಗ ಹೆಚ್ಚಿಸಿಕೊಳ್ಳಬೇಕು, ಓಟದಲ್ಲಿ ಹಿಂದೆ ಬಿದ್ದರಾಗುತ್ತದೆಯೆ ? ಮುಗ್ಗರಿಸಿ ಬೀಳದಂತೆ ತುಸು ನಿಗಾ ವಹಿಸಿದರಾಯಿತು. ಕಾಲ ನಮಗಾಗಿ ಕಾದು ನಿಲ್ಲುವುದಿಲ್ಲ. ನಮ್ಮ ತಲೆಮಾರು ಕಂಡು ಕೇಳರಿಯದ ವಿಸ್ಮಯಗಳನ್ನೆಲ್ಲ ಸ್ವತಃ ಅನುಭವಿಸಬೇಕು. ಮೂವತ್ತು ವರ್ಷದ ಕೆಳಗೆ – ಅದೇ ಆಗ ಬೆಂಗಳೂರಿಗೆ ಕಾಲಿಟ್ಟಾಗ ರೈಲು ತಿಕೀಟು, ಬಸ್ಸು ತಿಕೀಟು ಖರೀದಿಸಲು ಅಷ್ಟೇ ಏಕೆ ನಗರ ಸಾರಿಗೆಯ ಬಸ್ಸು ಹತ್ತುವುದಕ್ಕೂ ಉದ್ದನೆಯ ಸಾಲಿನಲ್ಲಿ ಶಿಸ್ತಾಗಿ – ತಾಳ್ಮೆಯಿಂದ ಕಾದು ನಿಲ್ಲುತ್ತಿದ್ದೆವು. ಸಾರ್ವಜನಿಕ ನಲ್ಲಿಯ ಮುಂದೆ ನೀರಿಗಾಗಿ, ರೇಷನ್ ಅಂಗಡಿಯ ಮುಂದೆ ಸೀಮೆಎಣ್ಣೆಯ ಸಲುವಾಗಿ ಸಾಲುಗಟ್ಟಿ ಹಿಂದಿನ ದಿನ ತಡರಾತ್ರಿಯೇ ಮನೆಯೊಳಗಿನ ಹಳೆಯ ಡಬ್ಬ ಕಲ್ಲು – ಕಟ್ಟಿಗೆಗಳೆಲ್ಲ ನೀಟಾಗಿ ಸಾಲು ಹಚ್ಚುತ್ತಿದ್ದದ್ದು ಮೋಜಿನದಾಗಿರುತ್ತಿತ್ತು. ಆಗ ಏನಿದ್ದರೂ ಸರತಿ ಸಾಲು – ಇನ್‌ಲೈನ್.

ಈಗ ಹಾಗಲ್ಲ. ಮನೆಯ ದಿನನಿತ್ಯದ ಕಾಳುಕಡಿಗೂ ಆನ್‌ಲೈನ್ ಮಾಡಿದ ರಾಯಿತು. ಮನೆಯ ಹೊಸ್ತಿಲಲ್ಲಿ ಬಂದು ಅಗತ್ಯ ವಸ್ತುಗಳೆಲ್ಲ ರಾಶಿ ಬೀಳುತ್ತಿವೆ. ಹಾಗೆ ನಿರಾಯಾಸವಾಗಿ ಕೊಳ್ಳಲು ಕೊಂಡುಕೊಳ್ಳುವ ತಾಕತ್ತೊಂದಿದ್ದರೆ ಸಾಕು, ನಿಮ್ಮ ಜೇಬಿಗೆ. ಎಲ್ಲ ಸುಖಭೋಗಗಳೂ ನಿಮ್ಮ ಮನೆ ಬಾಗಿಲಿಗೇ. 'ಡೇಲಿ ಆಬ್ಜೆಕ್ಟ್ಸ್' ಹೆಸರಿನ ಒಂದು ಆನ್‌ಲೈನ್ ಕಿರಾಣಿ ಅಂಗಡಿ ತೆರೆದಿದೆ ಹೊಸದಾಗಿ ಗೊತ್ತ ? ಹಾಗಂತ ಸಾರಾಸಗಟಾಗಿ ನಮ್ಮ ಇಂಡಿಯಾದ

ಜೀವನಮಟ್ಟ ಸುಧಾರಿಸಿದೆಯೆಂದು ಯಾರೂ ಭಾವಿಸಬಾರದು. ಈಗಲೂ ನಗರದ ಕೊಳಗೇರಿಗಳಲ್ಲಿ ವಾಸಿಸುವ ಬಡವರು ಅಂದಿನ ದಿನದ ಕೂಲಿ ಹಣದಲ್ಲಿಯೇ ಪಾವು ಕಿಲೋ ಅಕ್ಕಿ ತಂದು, ಸೀಮೆಎಣ್ಣೆ ಸ್ಟವ್ ಮೇಲೆ ಬೇಯಿಸಿಕೊಂಡು, ಹತ್ತಿರದ ಕ್ಯಾಂಟೀನಿನಿಂದ ಐದು ರೂಪಾಯಿಗೆ ಅಗ್ಗದ ಸಾಂಬಾರು ತಂದು 'ಶೇರು' ಮಾಡಿಕೊಂಡು ಕಲಸಿ ಪರಸ್ಪರ ಉಂಡು ಮಲಗುವವರಿದ್ದಾರೆ. ಇನ್ನೂ ಬಡತನದ ರೇಖೆಗಿಂತ ಕೆಳಗಿರುವ ಮಂದಿ.



ದೃಶ್ಯಗಳನ್ನೆಲ್ಲ ಮೊಬೈಲಿನಲ್ಲಿ ಸೆರೆ ಹಿಡಿದು ತಡಮಾಡದೆ ಫೇಸ್ ಬುಕ್ಕಿನಲ್ಲಿ ಅಪ್‌ಲೋಡ್ ಮಾಡಿ ಲೈಕು-ಕಾಮೆಂಟುಗಳಿಗಾಗಿ ಎದುರು ನೋಡುವುದೇ ಒಂದು ಚಟವಾಗಿದೆ, ಬಹುತೇಕರಿಗೆ. ಸಾಮಾಜಿಕ ಜಾಲತಾಣದಲ್ಲಿ ಹರಿಬಿಡುವುದೇ ನಮ್ಮ ಸ್ಟೇಟಸ್ಸು - ಗೀಳು! ಇದನ್ನೇ ಸೋಶಿಯಲ್ ನೆಟ್‌ವರ್ಕ್ ಅನ್ನುತ್ತದೆ ಲೋಕ. ಎಲ್ಲಿಯ ತತ್ವಜ್ಞಾನ - ಎಲ್ಲಿಯ ತಂತ್ರಜ್ಞಾನ? 'ಖಾನ್ ಖಾನ್ ಉತ್ತತ್ತಿ - ಎಲ್ಲಿಗೆ ಬಂತೋ ಸಂಗಯ್ಯ!'

'ಶೇರ್' ಅಂದ ತಕ್ಷಣ ಮತ್ತೇ ನಮ್ಮ ಮೊಬೈಲು ನೆನಪಾಗುತ್ತದೆ, ಬನ್ನಿರಿ. ಅದರಲ್ಲಿ ಏನುಂಟು ಏನಿಲ್ಲ ಹೇಳಿರಿ! ನಮ್ಮ ಬಾಲ್ಯ ಕಾಲದಲ್ಲಿ ಹತ್ತಿರದ ಗೆಳೆಯರನ್ನು ದಿನದಲ್ಲಿ ಒಮ್ಮೆಯಾದರೂ ಕಾಣದಿದ್ದರೆ, ಚಟಬರಿಸಿ ಅವರ ಮನೆಬಾಗಿಲಿಗೇ ಹುಡುಕಿಕೊಂಡು ಹೋಗುತ್ತಿದ್ದೆವು. ಈಗಿನ ನವಜಾತ ಪಡ್ಡೆಗಳಿಗೆ ಆ ಸುಖವೇ ಇಲ್ಲ. ಎಲ್ಲ 'ಹೋಂ ಸಿಕ್' ಆಗಿ ಬಂದಿಯಾಗಿವೆ ಮನೆಯ ಕೋಣೆಯೊಳಗೆ. ಬೇಕಾದರೆ ನಿನಗೆಷ್ಟು ಗೆಳೆಯರೆಂದು ಕೇಳಿ ನೋಡಿರಿ. ಊಹೂಂ. ಇಂಟರ್‌ನೆಟ್‌ನಲ್ಲಿ ಸಾಕಷ್ಟು ತನಗೇನು ಬೇಕೋ ಅದೆಲ್ಲ ಸಿಗುತ್ತದೆ ಅನ್ನುತ್ತಾನೆ. ಫೇಸ್ ಬುಕ್ಕಿದೆ, ವಾಟ್ಸಪ್ ಇದೆ, ಯೂ ಟ್ಯೂಬ್ ಇದೆ, ಟ್ವಿಟ್ಟರ್ ಇದೆ ಗೊತ್ತಾ? 'ಶೇರ್ ಮಾಡಿಕೊಳ್ಳುತ್ತೇನೆ ಅಂಕಲ್' ಎಂದು ಬೀಗುತ್ತಾನೆ, ಬಡಪಾಯಿ. ನಾವೇ ಗಪ್‌ಚಿಪ್ ಆಗಬೇಕು, ಕೇಳಿದ ತಪ್ಪಿಗೆ ನಮ್ಮಮ್ಮ ಪಂಚೇಂದ್ರಿಯಗಳನ್ನು ಅದುಮಿಕೊಂಡು! ಸೋಶಿಯಲ್ ಮೀಡಿಯಾದಲ್ಲಿ ಸೇರ್ಪಡೆಯಾದ ಬಳಿಕ ಪ್ರತಿಯೊಬ್ಬರೂ ಸೆಲೆಬ್ರಿಟಿಗಳೇ ಆದಂತೆ ವರ್ತಿಸುತ್ತಿದ್ದಾರೆ. ಇದೆಂಥಾ ಭ್ರಮಾಲೋಕ. ಲೆಕ್ಕವಿಲ್ಲದಷ್ಟು ಫಾಲೋಅರ್ಸ್ ತಮಗೆಂದು ತಮ್ಮಷ್ಟಕ್ಕೇ ತಾವೇ ಬೀಗುತ್ತಾರೆ, ವಾಹ್! ಎಲ್ಲ ಸೆಲ್ಫ್‌ಸೆಂಟರ್ಡ್ ಆಗಿ ಹೋದಂತಾಗಿ ಆತ್ಮರತಿ ಹೆಚ್ಚುತ್ತಿದೆಯ?

ನಿಮ್ಮನ್ನು ಎಲ್ಲೋ ನೋಡಿದ ಹಾಗಿದೆಯಲ್ಲ, ತುಂಬ ಪರಿಚಿತ ಮುಖ.

ಇನ್ನೆಲ್ಲಿ ನೋಡಿರುತ್ತೀರಿ, ಫೇಸ್ ಬುಕ್ಕಿನಲ್ಲಿ ನೋಡಿರಬೇಕು.

ಮಾತುಕತೆ ಅಲ್ಲಿಗೇ ಕಟ್ ಆಗುತ್ತದೆ. ಮುಖಾಮುಖೀ (ಫೇಸ್ ಟು ಫೇಸ್) ಅನ್ನುವುದೇ ಇಲ್ಲ. ತಡ ಮಾಡಬೇಡಿರಿ, ಮೊಬೈಲು ಮೂಲಕ ಶೇರ್ ಮಾಡಿಕೊಳ್ಳಿರಿ, ಶೇರ್! ಮುಖಾಮುಖಿಯಾಗಿ ಕೂತು ವಿರಾಮವಾಗಿ ಭರ್ಜರಿಯಾಗಿ ಹರಟುವ ವ್ಯವಧಾನವಾಗಲಿ, ಆ ಸಮುದಾಯ-ಸಂಪರ್ಕ-ಸಾಮರ್ಥ್ಯವಾಗಲಿ ಈಗ ಯಾರಿಗಿದೆ ಹೇಳಿರಿ. ಒಬ್ಬೊಬ್ಬರೂ ಒಂದೊಂದು ದ್ವೀಪವಾಗುತ್ತಿದ್ದೇವೆಯೆ ಎಂಬ ಹಳಹಳಿಕೆ ನನ್ನದು.

ನಮ್ಮ ಬೆಂಗಳೂರು ಈಗ ವಿಶ್ವ ನಕಾಶೆಯಲ್ಲಿ ಮಿರಿಮಿರಿ ಮಿಂಚುತ್ತಲಿದೆ. ಕಾಸ್ಮೋಪಾಲಿಟನ್ ಸಿಟಿ ಆಗುವ ಹವಣಿಕೆಯಲ್ಲಿದೆ. ಇಲ್ಲಿ ವಾಸಿಸುವ ನಮ್ಮದೇನಿದ್ದರೂ, ಇನ್ನು ಮೆಟ್ರೋ ಲೈಫು. ನಾವು ಹುಟ್ಟಿ ಬೆಳೆದ ಹಳ್ಳಿಗಳ ಉಸಾಬರಿ ನಮಗ್ಯಾಕೆ ಬೇಕೀಗ. ಅವನ್ನು ಯಥಾಸ್ಥಿತಿ ಅಲ್ಲೇ ಬಿಟ್ಟು ಬಂದಿದ್ದೇವೆ, ಅಪ್ಪ ಅವ್ವರ ಸಮೇತ. ಬೆಂಗಳೂರು ಬಿಟ್ಟಾಕಿ ಆಗಲೇ ಬೇಕಾಬಿಟ್ಟಿ ಬಡಾಯಿಸುವ ಮೂಲಕ ಆಕಾರಗೆಟ್ಟಿದೆ. ಮತ್ತೇ ಕೆಲವು ಬೇರೆ ಸಿಟಿಗಳು ಸ್ಮಾರ್ಟ್ ಸಿಟಿ ಆಗುವ ಹುನ್ನಾರದಲ್ಲಿವೆ. ಇನ್ನು ನಗರವಾಸೀ ಸ್ಮಾರ್ಟ್ ಜನರೇಶನ್‌ಗೆ ಸ್ಮಾರ್ಟ್‌ಫೋನೂ ಕೈಯಲ್ಲಿರಬೇಕಲ್ಲವೆ! ಅಂದರೆ ಟಚ್ ಸ್ಕ್ರೀನ್ ಮೊಬೈಲೇ ಆಗಬೇಕು. ಅದರರ್ಥ, ಆಗಲೇ ಹೇಳಿದಂತೆ ವೇಗದ ನಾಗರಿಕತೆಯಲ್ಲಿ ಹಿಂದೆ ಬೀಳದೆ ನಾವೂ ಅಪ್‌ಡೇಟ್ ಆಗಬೇಕಲ್ಲವೆ? ಒಂದು ಕಾಲದಲ್ಲಿ, ಫೋಟೋ ಸ್ಟುಡಿಯೊ ಹುಡುಕಿಕೊಂಡು ಹೋಗಿ, ಅವರೇ ಇಟ್ಟಿರುತ್ತಿದ್ದ ಪೌಡರು ಮುಖಕ್ಕೆ ಸವರಿಕೊಂಡು ವಿಪರೀತ ಕುತೂಹಲದಿಂದ ಫೋಟೋ ತೆಗೆಸಿಕೊಂಡು - ಚಾತಕ ಪಕ್ಷಿಯಂತೆ ಕಾಯುವ ಆ ಥ್ರಿಲ್ ಅಳಿಸಿ ಹೋಗಿದೆ ಈಗ. ಮೊಬೈಲು ಫೋನಿನ ಈ 'ಸೆಲ್ಫಿ' ಬಂದಮೇಲೆ. ಕಣ್ಣಿಗೆ ಬಿದ್ದ

ನೀವು ಏನೇ ಹೇಳಿರಿ, ಇವತ್ತು ನಮ್ಮ ಯುವ ಜನಾಂಗ ಭಯಂಕರ 'ಸೆಲ್ಫೀ'ಗಳಾಗುತ್ತಿದೆ. ಸೆಲ್ಫಿಶ್ ಪದದ ಸಂಕ್ಷಿಪ್ತ ರೂಪ 'ಸೆಲ್ಫೀ' ಎಂದು ನಮ್ಮ ಬಡಾವಣೆಯ ತಾತ ಒಬ್ಬರು ಅದಕ್ಕೆ ಹಚ್ಚಿದ ಹೊಸ ಅರ್ಥ, ವಾಹ್! ಏನೇನೂ ಸೌಲಭ್ಯಗಳಿಲ್ಲದ ಹಳ್ಳಿಗಳಲ್ಲಿ, ತಮ್ಮ ತಂದೆ-ತಾಯಿಗಳನ್ನು ಅಲ್ಲೇ ಬಿಟ್ಟು ನಗರಗಳಲ್ಲಿ ತಾನಾಯಿತು ತನ್ನ ಹೆಂಡತಿ ಮಕ್ಕಳಾಯಿತು ಎಂದು ಬದುಕುವ; ತನಗೆ ಬೇರೆ ಪ್ರಪಂಚವೇ ಬೇಡ ಅನ್ನುವ ಹೊಸ ಜೋಡಿಗೆ ಅದು ಸಲ್ಲುವಂಥ ಮಾತೇ. ಆದರೇನು ಮಾಡುವುದು? ಸವಲತ್ತುಗಳನ್ನೇ ಸುಖ ಎಂದು ಭಾವಿಸುವ; ದುಡ್ಡಿನಲ್ಲೇ ಎಲ್ಲ ಸುಖ ಕೊಳ್ಳಬಹುದೆಂಬ ವಿಚಿತ್ರ ಭ್ರಮೆಯಲ್ಲಿ ಬದುಕುವವರಿಗೆ ತಲೆ ಹಣ್ಣಾದ ಹಿರೀಕರ ಹಿತವಚನ ಅಷ್ಟಾಗಿ ರುಚಿಸಲಾರದು. ಹೀಗಾಗಿ ಸಾಂಸಾರಿಕ ಜೀವನವು ಬಹುಕಾಲ ಬಾಳುವ ದಿರಲಿ, ಬದುಕೇ ಮೂರಾಬಟ್ಟೆಯಾಗುವತ್ತ - ಜೀವಹತ್ಯೆ, ಆತ್ಮಹತ್ಯೆಗಳಂಥ ಹೊಸ ಸಮಸ್ಯೆಗಳಿಗೆ ತಲೆ ಕೊಡಬೇಕಾಗಿ ಬಂದುದೂ ಅಷ್ಟೇ ಅನಿವಾರ್ಯ. ಇದನ್ನು ಯಾರ ಮುಂದೆ ಹೇಳಿಕೊಳ್ಳಬೇಕು. ಮನೆಯೆಂದರೆ ಬರೀ ನಿರ್ಜೀವ ಗೋಡೆಗಳೆ? ಬಿಲ್‌ಕುಲ್ ಅಲ್ಲ. 'ಮನೆಯಲ್ಲಿ ಗಿಡಮರ ಬೆಳೆಸಿರಿ. ಅವು ನಿಮ್ಮಿಂದ ಅಗಲಿ, ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗಲಾರವು' - ಇದು ನಮ್ಮ ಹಿರಿಯ ವಕೀಲರೊಬ್ಬರ ಮಾರ್ಮಿಕ ಸಂದೇಶ. ಕ್ಷುಲ್ಲಕ ಕಾರಣಕ್ಕೆ ಡೈವೋರ್ಸು ಕೇಳಿ ಕೋರ್ಟಿನ ಮೆಟ್ಟಿಲೇರುವವರ ಹಾಗೂ ಉನ್ನತ ವಿದ್ಯಾಭ್ಯಾಸಕ್ಕೆಂದು ವಿದೇಶಗಳಿಗೊ ಮಹಾನಗರಗಳಿಗೊ ತೆರಳಿದವರು ತಾಯ್ತಂದೆಗಳ ಮರೆತು ಅಲ್ಲೇ ನೆಲೆನಿಲ್ಲುವವರ ಸಂಖ್ಯೆ ಏರುತ್ತಿರುವುದಕ್ಕೆ ಕನಲಿ ನುಡಿದ ಮಾತಿದು.

ಇದರಿಂದಾಗಿ, ಸಾಂಸಾರಿಕ ಬದುಕಿನ ರುಚಿ ಕೆಡಿಸಿಕೊಂಡಿದೆ ನಾಗರಿಕ ಸಮಾಜ. ಹೀಗಾಗಿ ನಮ್ಮ ಸಾಮಾಜಿಕ ಬದುಕು ಎಲ್ಲೋ ಹದ ತಪ್ಪುತ್ತದೆಂದು ಅನ್ನಿಸುತ್ತಿಲ್ಲವೆ ನಿಮಗೆ! 'ನಾವೆಷ್ಟು ಸ್ವಾರ್ಥಿಗಳು'? ಎಂಬುದಕ್ಕೆ ಕೆಲವು ನಿದರ್ಶನಗಳು ನೆನಪಾಗುತ್ತವೆ. ಹೆದ್ದಾರಿಯಲ್ಲಿ ಅಪಘಾತವಾಗಿರುತ್ತದೆ. ಇಲ್ಲಾ ನಡುಬೀದಿಯಲ್ಲಿ ಮಾರಾಮಾರಿ ನಡೆದಿರುತ್ತದೆ. ತಕ್ಷಣ ಜೋಬಿನಿಂದ ಮೊಬೈಲು ಹೊರತೆಗೆದವರೇ ಪ್ರಕರಣದ ವೀಡಿಯೋ ತೆಗೆಯಲು ಅಣಿಯಾಗುವವರೇ ಬಹಳ. ಅಷ್ಟೇ ಅಲ್ಲ, ಪ್ರವಾಹಕ್ಕೆ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಿದ್ದವನನ್ನು ಅಚಾನಕ್ಕಾಗಿ ಯಾರೋ ಎಳೆದು ಹಾಕಿರುತ್ತಾರೆ. ಜೀವಭಯದಿಂದ ಗಡಗಡ ನಡುಗುತ್ತಿದ್ದವನ ಮುಂದೆ ಮೈಕು ಹಿಡಿದು 'ಈ ಕ್ಷಣದಲ್ಲಿ ನಿಮಗೆ ಏನೆನ್ನಿಸುತ್ತದೆ'? ಎಂದು ದೂರದರ್ಶನ ವಾಹಿನಿಯವರು ಕೇಳುವಂತೇ ಥೇಟು!

ಓದುಗರು ಕ್ಷಮಿಸಬೇಕು. ಮತ್ತೇ ಇವ ಅಡ್ಡದಾರಿ ಹಿಡಿದ ಅಂದುಕೊಳ್ಳ ಬಾರದು. ಮೊಬೈಲು ಎಂದರೇನೇ ಅದು 'ವರ್ತಮಾನದ ತಲ್ಲಣ'ವೆಂದು ಮೊದಲೇ ಪೀಠಿಕೆ ಹಾಕಿದ್ದೇನೆ. ಪ್ರಪಂಚವನ್ನೇ ಕರತಲಾಮಲಕ ಮಾಡಿದ ಮೊಬೈಲು ಆಧುನಿಕ ನಾಗರಿಕ ಜಗತ್ತಿನ ನಿದ್ದೆಗೆಡಿಸಿದೆಯೆಂಬ ಕಾರಣಕ್ಕೆ ಇಷ್ಟೆಲ್ಲ ಬರೆಯುತ್ತಿದ್ದೇನೆ, ಆ ಬಗ್ಗೆ. ಟಚ್ ಸ್ಕ್ರೀನ್ ಮೊಬೈಲು ಹಿಡಿದ ಮೇಲೆ ಎಲ್ಲವನ್ನೂ ಟಚ್ ಮಾಡಬೇಕಾಗುತ್ತದೆ. ಬಳಿಸಾರದೇ ಮೈಯ ಮುಟ್ಟದೇ

'ನಿನ್ನ ಪ್ರೀತಿಸ್ತೀನಿ – ಐ ಲವ್ ಯೂ' ಎಂದು ಹೇಳಿಕೊಂಡಂತಾಗುತ್ತದೆ, ವ್ಯರ್ಥ! ಟಚ್ ಸ್ಕ್ರೀನ್ ಮೊಬೈಲೇನೊ ಕರತಲಾಮಲಕ. ಆದರೆ ಮನುಷ್ಯ–ಮನುಷ್ಯರ ನಡುವಿನ 'ಕೀಪ್ ಇನ್ ಟಚ್' ಎಂಬುದು ಮಾತ್ರ ಮಂಗಮಾಯ! "ಪ್ರೀತ್ಸೇ ಪ್ರೀತ್ಸೇ" ಅಂತಾ ಒನ್ ವೇ ಟ್ರ್ಯಾಫಿಕ್‌ನಲ್ಲಿ ದುಂಬಾಲು ಬಿದ್ದರೆ ಅದೂ ಯಶಸ್ವಿ ಆಗೋದಿಲ್ಲ. ಪ್ರೀತಿ ಅನ್ನೋದು ಬರೀ ಕಣ್ಣಿನ ತುತ್ತಲ್ಲ. ಪರಸ್ಪರ ಎರಡೂ ಹೃದಯಗಳ ಪ್ರತಿಸ್ಪಂದನೆ. ಪ್ರೀತಿ ವಿಷಯದಲ್ಲಿ ನಮ್ಮ ಯುವ ಜನಾಂಗ ಸಿನಿಕರಾಗಬಾರದು. ಪರಸ್ಪರ ಪ್ರೀತಿ ಮಾಡಬೇಕು, ಮಾಡಿಸಿಕೊಳ್ಳಬೇಕು. ಅದರೊಳಗೆ ಮುಳುಗಿ ತಮ್ಮನ್ನು ತಾವೇ ಕಳೆದುಕೊಳ್ಳದ ಹಾಗೆ ನಿಗಾಹ್ ವಹಿಸಬೇಕು. ಆ ಭ್ರಮಾಲೋಕದಿಂದ ಬೇಗ ಹೊರಬಂದು ಮದುವಿ ಮತ್ತೊಂದು ಆಗುವ ಮೂಲಕ, ಖಾಸಗಿ ಬದುಕು ಕಟ್ಟಿಕೊಳ್ಳೋದಕ್ಕ ಸಿದ್ಧರಾಗಬೇಕು; ದೇಶದ ಅಭಿವೃದ್ಧಿಯೊಳಗ ಪಾಲ್ಗೊಳ್ಳಲಿಕ್ಕೆ ಸಜ್ಜಾಗಬೇಕು. ಆವಾಗಲೇ ಬದುಕಿಗೊಂದು ಅರ್ಥ! ಇಲ್ಲದಿದ್ದರೆ ಎಲ್ಲ ವ್ಯರ್ಥ!! ಗಾಲಿಬ್ ಅವರ ಶಾಯಿರಿ ಒಂದಿದೆ :

ಇಶ್ಕ್ ಪರ್ ಝೋರ್ ನಹೀಂ ಹೈ ಎ ಓ ಆತಿಶ್ ಘಾಲಿಬ್
ಕೆ ಲಗಾಯೆ ನ ಲಗೆ ಔರ್ ಬುಝಾಯೆ ನ ಬುಝೆ!

'ಪ್ರೀತಿ' ಅನ್ನೋದು ಎಂಥಾ ಸುಡುಬೆಂಕಿ ಅಂತಂತಂದರ, ಮುದ್ದಾಂ ಹಚ್ಚಲು ಹೋದರೆ ಅಂಥ ಕಡೆ ಹೊತ್ತಿಕೊಳ್ಳುವುದಿಲ್ಲ; ಎಲ್ಲಿಯಾದರು ಹೊತ್ತಿಕೊಂಡಿದೆಯಾದರೆ ಅದನ್ನು ಆರಿಸಹೋದರೆ ಅದು ಆರುವಂತಹದಲ್ಲ. ಮಿರ್ಜಾ ಘಾಲಿಬರ ಶಾಯಿರಿಯಲ್ಲಡಗಿದ ಪ್ರೀತಿಯ ಅಂತರಂಗ ಇದು. ಹಾಗಂತ ಪ್ರೀತಿಯಲ್ಲಿಯೇ ಮೈಮರೆತು ಕೂತುಕೊಳ್ಳುವದಲ್ಲ; ಕಳೆದು ಹೋಗುವದಲ್ಲ. ಬೇಗನೆ ಅದರಿಂದ ಹೊರಬಂದು ಬದುಕು ಕಟ್ಟಿಕೊಳ್ಳವಲ್ಲಿಯೆ ಅದರ ಸಾರ್ಥಕತೆಯಿದೆ.

ಈಗ ಒಪ್ಪುತ್ತೀರಲ್ಲವೆ? ಮನುಷ್ಯನಿಗೂ ಮೊಬೈಲಿಗೂ ಅವಿನಾಭಾವ ಸಂಬಂಧವಿದೆಯೆಂಬ ನನ್ನ ಮಾತನ್ನು. ಹುಡುಗರ ಕೈಯಲ್ಲಿರುವ ಮೊಬೈಲು ಥೇಟ್ ಆತ್ಮಲಿಂಗವಿದ್ದಂತೆ. ವಿಪರೀತ ಭಕ್ತಿ–ಭಾವದಿಂದ ಅದನ್ನು ಕಾಪಾಡಿ ಕೊಳ್ಳುತ್ತಾರೆ. ರಾತ್ರಿ ಮಲಗಿದಾಗಲೂ ಅದು ತಮ್ಮ ತಲೆಯ ಹತ್ತಿರವೇ, ದಿಂಬಿನ ಕೆಳಗೆ ಕೈಗೆಟುಕುವ ಹಾಗಿರಬೇಕು. ಯಾವಾಗೆಂದರೆ ಆವಾಗ ಆ ಮೂಲಕ ಆತನಿಗೆ ಕಾಲು–ಗೀಲು ಬಂದರೆ ಅಟೆಂಡ್ ಮಾಡಬೇಡವೆ? ಅಂಥ ರಾಜಕಾರ್ಯ ಅವನದ್ದು. ಗಾರೆ ಕೆಲಸದ ಕೂಲಿಗೂ ಮೊಬೈಲು ಬೇಕು. ಬೆಳಗಾಗೆದ್ದು ಮೇಸ್ತ್ರಿಯ ಕೆಂಗಣ್ಣಿಗೆ ಗುರಿಯಾಗದಂತೆ ಸಕಾಲಕ್ಕೆ ಎದ್ದು ಕೂಲಿ ಕೆಲಸಕ್ಕೆ ಓಡಬೇಕು. ಆದರೇನು, ಮೊಬೈಲು ಆತನ ಆತ್ಮಸಂಗಾತಿ. ಇನ್ನು ಹುಡುಗಿಯರನ್ನು ನೋಡಿರಿ. ಪುಟ್ಟ ಕೈಗಳಲ್ಲೂ ಹಿಡಿಯ ಲಾಗದಷ್ಟು ದೊಡ್ಡ ಗಾತ್ರದ, ಪರ್ಸ್‌ಗಿಂತ ದೊಡ್ಡದಾದ ಟಚ್ ಸ್ಕ್ರೀನ್ ಮೊಬೈಲನ್ನು ಹಿಡಿದುಕೊಂಡ ಇಪ್ಪತ್ತು ನಾಕೂ ಗಂಟೆ ಆಕೆಯ ಒಡನಾಡಿ ಅದು. ಕೈ ಚಾಳಿಕಲಿತ ಕೈಗೂಸಿನಂತೆ ಎತ್ತಿಕೊಂಡೇ ಇರುತ್ತಾರೆ ಯಾವಾಗಲೂ. ಕೆಳಗಿಟ್ಟರೆ ಅರಚಿಕೊಂಡು ಅಳುತ್ತದೆಂದು ಆತಂಕಪಡುವ ಹಸಿ ಬಾಣಂತಿಯರ ತರವೇ, 'ಯಾರಿಗೂ ಹೇಳೋಣು ಬ್ಯಾಡ'!

ನಮ್ಮ ಯುವಕರ ನಡುವಿನ ಮಾತುಕತೆ ಕೇಳಬೇಕು. 'ಮದುವೆಯಾಗಿ ವರ್ಷವಾಗ್ತ ಬಂತು, ಇನ್ನೂ ಅಪ್‌ಲೋಡ್ ಆಗಿರೋದಾಗಲಿ ಪ್ರಿಂಟ್‌ಔಟ್ ಹೊರಬರೊ ಸೂಚನೆಯಾಗಲಿ ಯಾವ್ದೂ ಕಾಣ್ತಾ ಇಲ್ಲೋ ಲೇ, ಇನ್ನೂ' ಎಂದು ತಮ್ಮ ಸಹೋದ್ಯೋಗಿಯನ್ನು ಛೇಡಿಸುವವನೊಬ್ಬ, ಅದೂ ಮೊಬೈಲು ಭಾಷೆಯಲ್ಲಿಯೆ. 'ಹಬ್ಬಕ್ಕೆ ಬಟ್ಟೆ ಕೊಡಿಸ್ಲಿಲ್ಲ ಅಂತಾ, ನನ್ನ ಹೆಂಡ್ತಿ ಮೂರು ದಿನದಿಂದ ಮಾತಿಲ್ಲ ಕತೆಯಿಲ್ಲ, ಸೈಲೆಂಟ್ ಮೋಡಿಗೆ ಹೋಗಿಬಿಟ್ಟಿದಾಳೆ ಕಣೊ. ಹಿಂಸೆಯಾಗ್ತಿದೆ ಮಾತಿಗಿಂಥ ಮೌನವೇ ಹರಿತ' ಎಂದು ಅವನು. 'ನನ್ನ ಮನೆಯಲ್ಲೂ ಅದೇ ಗೋಳು, ತವರು ಮನೆಗೆ ತನ್ನ ಕಳಿಸ್ಲಿಲ್ಲ ಅಂತಾ, ಅಡುಗೆ ಮಾಡದೆ, ಊಟಕ್ಕಿಕ್ಕದೆ ಸರ್ವರ್ ಡೌನ್ ಆಗಿದೆ, ಕಣೋ' ಅಂತಾ ಇವನು.

'ನಿಂದು ಹೋಗಲಿ ಮಾರಾಯ ಅವಳು ಹೇಳಿದ್ದಂಗೆ ಕೇಳ್ತಿಲ್ಲ ನಾನು ಅಂತ ಸ್ವಿಚ್‌ಆಫ್ ಆಗಿದೆ ಕಣೋ ಅಕಾರಣ, ಜಜ್ಜಿ ಹಾಕಿ ಸೆಟ್ಟನ್ನೇ ಬದಲಾಯಿಸ ಬೇಕೆನ್ನೊ ಸಿಟ್ಟು ನನಗೆ' ಎಂದು ಮತ್ತೊಬ್ಬ. 'ಈ ಹಬ್ಬ ಅಂತಾ ಬಂದು, ನಮ್ಮ ಕರೆನ್ಸಿ ಎಲ್ಲ ಖಾಲಿ ಆಗಿ, ಕಂಡಕಂಡೋರಿಗೆ ಮಿಸ್‌ಕಾಲ್ ಮಾಡೋ ಗತಿ ಒದಗಿದೆ ಕಣೋ, 'ಮಿಸ್‌ಕಾಲ್ ಮಾಮಾ' ಅಂತ ಬೇರೆ ಜನ ಆಡಿಕೊಳ್ತಾರೆ' ಎಂದು ಇನ್ನಾವನೋ. ಅವರೆಲ್ಲರ ಮಾತುಗಳನ್ನು ಕೇಳಿಸಿಕೊಂಡ ಹಿರಿಯನೊಬ್ಬ 'ಅದಕ್ಯಾಕೆ ಚಿಂತಿ ಮಾಡ್ತೀರ ಲೇಯ್, ಮನೆಗೆ ಹೋಗುವಾಗ ಎರಡು ಪೆಗ್ ಹಾಕಿಕೊಂಡು ಹೋದರಾಯಿತು, ಬ್ಯಾಟರಿ ತಾನೇ ಚಾರ್ಜ್ ಆಗ್ತದೆ!' ಎಂದು ಪುಕ್ಕಟೆ ಸಲಹೆ ನೀಡಿದ್ದ, ಪಕ ಪಕ ನಗುತ್ತ. ಇದು ಮೊಬೈಲ್ 'ಪರಿಭಾಷೆ'! ಸ್ಮಾರ್ಟ್ ಜನರೇಶನಿಗೆ ಸ್ಮಾರ್ಟ್ ಫೋನು!! ಅದೂ ಸರಿ ಅದೂ ಸರಿ, ಆದ್ರೆ ನೆಟ್‌ವರ್ಕ್ ಸರಿಯಿದ್ದರೆ ಎಲ್ಲವೂ ನೆಟ್ಟಗಿರುತ್ತದೆ. ಅದೇ ಇಲ್ಲದಿದ್ದರೆ ಆಗ ಏನು ಕಿತ್ತುಗೊಳ್ತೀರಿ? ಈ ಮೊಬೈಲು ಬಂದಾಗಿನಿಂದ ಕೆಲವರ ಕಿಸೆಯ ಕರೆನ್ಸಿ ಖಾಲಿ, ಹಾಗೆಯೇ ತಲೇನೂ!

"ವ್ಯಾಪ್ತಿ ಪ್ರದೇಶದಿಂದ ಹೊರಗಿದ್ದಾರೆ; ಇನ್ನೊಂದು ಕರೆಯಲ್ಲಿ ವ್ಯಸ್ತವಾಗಿದೆ (ಇಂಗ್ಲಿಷಿನ ಬ್ಯೂಸಿ ಪದದ ಸಂವಾದಿ ಹಿಂದಿ ರೂಪಾಂತರ ಈ 'ವ್ಯಸ್ತ' ಪದ, ಕಾರ್ಯನಿರತವಾಗಿದೆ ಎಂದು ಹೇಳುವದಕ್ಕೆ, ಅದು ಕೇಳುಗರಿಗೆ 'ವ್ಯರ್ಥ' ಎಂತಲೇ ಕಿವಿಗೆ ಬೀಳುತ್ತದೆ – ಅನ್ಯಥಾ ಭಾವಿಸಬಾರದು ಇದು ಮುಂಬೈ ಭಾಷಾಂತರ); ನೀವು ಕರೆ ಮಾಡಿದ ಸಂಖ್ಯೆ (ನಿಮ್ಮ ಸಾಮಾನು) ಸರಿಯಿದೆಯೆ ಎಂದು ಮೊದಲು ಪರೀಕ್ಷಿಸಿಕೊಳ್ಳಿರಿ; (ಏನೇ ಆದರೂ) ಈಗ ಸಂಪರ್ಕಿಸಲು ಸಾಧ್ಯವಾಗುತ್ತಿಲ್ಲ, ವ್ಯಾಪ್ತಿ ಪ್ರದೇಶದಿಂದ ಹೊರಗಿದ್ದಾರೆ ಅರ್ಥಾತ್ ಯಾವುದೇ ಕರೆಗಳನ್ನು ಸ್ವೀಕರಿಸುತ್ತಿಲ್ಲ, ನಂತರ ಕರೆ ಮಾಡಿ, ಸದ್ಯಕ್ಕೆ ನಾಟ್ ರೀಚೆಬೆಲ್ ಆಗಿದೆ" ಎಂಬಿತ್ಯಾದಿ ಸಬೂಬುಗಳನ್ನು ನಂಬಬೇಕಾಗುತ್ತದೆ, ವಿಧಿಯಿಲ್ಲದೆ – ಕಟ್ಟಿಕೊಂಡ ತಪ್ಪಿಗೆ! ಕವಿವಾಣಿಯಂತೆ 'ಒಡನಾಡಿ ಬೇಕೆಂದು ಮಿಡುಕಿಯೇ ಮಿಡುಕಿದೆನು, ಒಡನೆಯೆ ಬಂದೆನ್ನ ಮಿಡುಕ ಕಳೆದೆ' ಅದೆಲ್ಲ ಸರಿ. ಒಡನಾಡಿಯಾಗಿ ಬಂದ ಈ ಮೊಬೈಲು ಕಡೆಕಡೆಗೆ ತನ್ನನ್ನು ಸಾಕಿದ ಒಡೆಯನ ಅಮೂಲ್ಯ ಸಮಯ ಕಬಳಿಸುವ ಮೂಲಕ, ಆತನ ಕೆಲಸ ಕಾರ್ಯಗಳನ್ನೆಲ್ಲ ಅತಿಕ್ರಮಿಸಿ, ಸಾಕಿದಾತನ ಕೈಯನ್ನೇ ಕಚ್ಚುತ್ತ – ತನ್ನೊಡೆಯನನ್ನೇ ಕಡೆಗೆ ಅಡನಾಡಿ ಮಾಡುತ್ತಿರುವುದು ಸುಳ್ಳೆ?

ಅದರ ಅತಿಕ್ರಮಣ ಅಷ್ಟಕ್ಕೇ ನಿಂತಿಲ್ಲ. ಇತ್ತೀಚಿನ ಸಮೀಕ್ಷೆಯ ಪ್ರಕಾರ, ಹಾಸಿಗೆ ಹಂಚಿಕೊಳ್ಳುವ ಸಂಗಾತಿಗೂ ಸವತಿ ಮಾತ್ಸರ್ಯ ಉಂಟು ಮಾಡಿದೆಯಂತೆ. ಹೆಂಡತ್ತಿಯತ್ತ ಬೆನ್ನು ತಿರುಗಿಸಿ ಮಲಗಿ ಮೊಬೈಲಿನಲ್ಲೇ ಮುಳುಗಿ ಮೈಮರೆತರೆ ಇನ್ನೇನಾಗಬೇಕು? ಇದು ಈ ತೆರನಾಗಿ ಖಾಸಗಿ ಬದುಕಿಗೂ ಲಗ್ಗೆಯಿಕ್ಕಬೇಕೇ! ಬಾಪ್‌ರೇ! ಆಧುನಿಕ ನಾಗರಿಕ ಜಗತ್ತಿನಲ್ಲಿ ಮೊಬೈಲ್‌ನ ಗೀಳು ಎಲ್ಲಿಗೆ ಬಂದು ಮುಟ್ಟಿದೆಯೆಂದರೆ, ನಿದ್ದೆಗಣ್ಣಿನಲ್ಲೂ ಅದು ತಲೆಯ ಬಳಿ, ಕೈಗೆಟುಕುವಂತಿರಬೇಕು. ಇಲ್ಲದಿದ್ದರೆ ತಮ್ಮ ಹೃದಯವೇ ನಿಂತುಹೋದಂತೆ ತಡವರಿಸಲಾರಂಭಿಸುತ್ತಾರಂತೆ. ಆಗಲೇ ಹೇಳಿದಂತೆ, ಇದನ್ನು 'ಮೊಬೈಲ್ ಮೇನಿಯ' ಎಂಬ ಹೊಸ ಕಾಯಿಲೆಯೆಂದು ಗುರುತಿಸುವ ದಿನಗಳೂ ದೂರವಿಲ್ಲ. ಅಷ್ಟರಮಟ್ಟಿಗೆ ಮುದುಕರು ತದುಕರನ್ನೂ ಬಿಡದೆ ಮೊಬೈಲ್ ವ್ಯಸನಿಗಳನ್ನಾಗಿ ಮಾಡಿದೆ. ಮೊಬೈಲಿಗೆ ಮರುಳಾಗಿದೆ, ಮೈಮರೆತಿದೆ ಪ್ರಪಂಚ. ಸಂಸಾರಕ್ಕೆ 'ಪ್ರಪಂಚ' ಎಂಬ ವಿಶಾಲ ಅರ್ಥವೂ ಇದೆ ಬಲ್ಲಿರಾ? ಅದೇ ಲೌಕಿಕ ಪ್ರಪಂಚ. ಮನೆಯನ್ನು ಗೆದ್ದವ ಹೊರ ಜಗತ್ತನ್ನೂ ಗೆದ್ದು, ನಿಭಾಯಿಸಬಲ್ಲ ಎಂಬುದು. ಮೊಬೈಲು ನಿಜವಾಗಿಯೂ 'ಮನುಷ್ಯ ಸಂಬಂಧಗಳನ್ನು ಬೆಸೆಯುತ್ತಿದೆಯೊ ಇಲ್ಲಾ ಕಸಿಯುತ್ತಿದೆಯೊ' ಎಂಬ ಹೊಸ ಅನುಮಾನ–ಅಯೋಮಯ ನನ್ನೊಳಗೆ.

ಐನೂರು ಕಿಲೋಮೀಟರು ದೂರದ ನನ್ನ ಹುಟ್ಟೂರಿಗೆ ಆಗೀಗ ಹೋಗಿ ಬರುವುದು ಅನಿವಾರ್ಯ, ನನಗೆ. ಜನರಲ್ ಬೋಗಿಯಿಂದ ಈಗ ಎರಡನೇ ದರ್ಜೆಯ ಪ್ರಯಾಣಕ್ಕೆ ಭಡ್ತಿ ಹೊಂದಿರುವ ನಾನು, ಒಮ್ಮೆ ತಿಂಗಳು ಮೊದಲೇ ಮುಂಗಡ ಟಿಕೇಟು ಕೊಂಡಿಟ್ಟುಕ್ಕೊಂಡಿದ್ದೆ. ಹೀಗಾಗಿ, ರಾಜಾ ರೋಷವಾಗಿ, ನನಗೋಸ್ಕರ ಮಲಗು ಹಲಗೆ ಕಾದಿರುವದೆಂದು ಕೈಬೀಸಿಕೊಂಡೆ ಹೋದೆ. ಆದರೆ, ನನ್ನ ಜಾಗದಲ್ಲಿ ಬೇರೊಬ್ಬ ಯಜಮಾನರು ಕೂತಿದ್ದರಿಂದ



# ಅಲೆಮಾರಿಗಳ ಸ್ವಗತ

ಗುಡುಗು ಸಿಡಿಲಿಗೆ ನಡುಗುವುದಿಲ್ಲ
ಆ ಮಿಂಚೆ ಕೊಂಚ ಬೆಳಕಾಗುತ್ತದೆ
ಬೀಸುವ ತಂಗಾಳಿ ಹೊಳೆವ ನಕ್ಷತ್ರಗಳು
ಜೋಗುಳ ಹಾಡಿ ನಮ್ಮನು ಮಲಗಿಸುತ್ತವೆ.




ಕಳ್ಳಕಾಕರ ಭಯವಿಲ್ಲ
ಮಳೆ ಚಳಿ ಬಿಸಿಲಿಗೆ ಬಗ್ಗುವುದಿಲ್ಲ
ಪುಟ್ಟ ಗೂಡಿಗೆ ಗೋಡೆಗಳೆ ಇಲ್ಲ
ನಮ್ಮದು ಬಯಲೆ ಆಲಯ.

ಚೋಟುಹೊಟ್ಟೆ ಗೇಣುಬಟ್ಟೆಗಾಗಿ
ಮಗಳು ತಂತಿಯ ಮೇಲೆ ನಡೆಯುತ್ತಾಳೆ
ನಾವು ಹೆಳವರಾಗುತ್ತೇವೆ; ಹಾವಾಡಿಗರಾಗುತ್ತೇವೆ
ಮುಖವಾಡ ಧರಿಸಿ ಬಹುರೂಪಿಗಳಾಗುತ್ತೇವೆ.

ಕುಂಚ ಮತ್ತು ಕ್ಯಾಮರಾ ಕಣ್ಣಲ್ಲಿ ಅರಳಿದ್ದೇವೆ
ಸರಕಾರದ ಕಣ್ಣಲ್ಲೊಂದಿಷ್ಟು ಅರಳಿಬಿಟ್ಟರೆ
ಎತ್ತು ನಾಯಿಯೊಡನೆ ಊರೂರು ತಿರುಗುವ
ನಮ್ಮ ಬಾಳಬಂಡಿಯ ಬಡತನದ ಚಿತ್ರ
ಇತಿಹಾಸದ ಪುಟ ಸೇರಬಹುದೇನೊ...!

**ಕೆ. ಬಿ. ವೀರಲಿಂಗನಗೌಡ್ರ**
ಎಸ್.ಆರ್.ಜಿ.ಹೆಚ್.ಎಂ. ಪ್ರೌಢಶಾಲೆ
ಸಿದ್ದಾಪುರ – ೫೮೧ ೩೫೫, ಉತ್ತರ ಕನ್ನಡ ಜಿಲ್ಲೆ

ಹೌಹಾರಿದೆ, ಏನೋ ಎಡವಟ್ಟಾಗಿದೆಯೆಂದು. ಅಷ್ಟು ದೂರದಲ್ಲಿ ಪ್ಲಾಟ್‌ಫಾರ್ಮಿನ ಮೇಲೆ ನಿಂತಿದ್ದ ಟೀಸಿ ಹತ್ತಿರ ಓಡಿ ಹೋದವನೆ 'ಏನ್ ಸಾರ್ ಇದು ಅನ್ಯಾಯ, ತಿಂಗಳು ಮೊದಲೇ ತಿಕೀಟು ಕೊಂಡಿದ್ದೆ', ಎಂದು ನನ್ನ ಅಹವಾಲು ಸಲ್ಲಿಸುವ ನನ್ನ ಬಾಯೊಳಗಿನ ಮಾತು ಬಾಯಲ್ಲಿರುವಾಗಲೇ ಚಾರ್ಟು ಓದಿ, 'ನಿಮ್ಮನ್ನು ಎರಡನೇ ದರ್ಜೆ ಎ.ಸಿ. ಬೋಗಿಗೆ ಅಪ್‌ಗ್ರೇಡ್ ಮಾಡಲಾಗಿದೆ ಹೋಗ್ರೀ' ಎಂದು ಹೇಳಿ ಕಳುಹಿಸಿದ್ದರು. ಸಿವ್ ಸಿವಾ, ಹೀಗೂ ಉಂಟೆ ? ಬಯಸದೇ ಬಂದ ಭಾಗ್ಯವೆಂದುಕೊಂಡು ಖುಷಿಯಾಗಿ, ಅವರು ತಿಳಿಸಿದ ಹವಾ ನಿಯಂತ್ರಿತ ಕೋಚಿನಲ್ಲಿ ಓಡಿ ಹೋಗಿ ಆತ ಹೇಳಿದ ನಂಬರಿನ ಆಸನದಲ್ಲಿ ತಣ್ಣಗೆ ಆಸೀನನಾಗಿದ್ದೆ. ರೈಲು ಕದಲಿತು. ನಾನು ಪ್ರಯಾಣಿಸುತ್ತಿದ್ದದ್ದು ಹಂಪಿ ಎಕ್ಸ್‌ಪ್ರೆಸ್ಸು ಅದು. ದಂಡು, ಯಲಹಂಕ, ದೊಡ್ಡಬಳ್ಳಾಪುರ ಸ್ಟೇಶನ್ ತಡ ಹಾಯುವ ಹೊತ್ತಿಗೆ ನನ್ನ ತರಹವೇ ಮತ್ತೇ ಆರೇಳು ಜನ, ಒಂದೇ ಸೆಲ್‌ಗೆ ಕೂಡಿ ಹಾಕಿದ ಖೈದಿಗಳಂತೆ ಬಂದು ಕೂತರು. ಮಜಾಶೀರ್ ಅನ್ನಿಸಿತ್ತು ನನಗೆ. ರೈಲ್ವೇ ಇಲಾಖೆಯ ಔದಾರ್ಯಕ್ಕೆ ಹ್ಯಾಟ್ಸ್‌ಆಫ್ !

ಆಸೀನವಾದ ಕೂಡಲೇ ಮನೆಯಿಂದ ಫೋನಾಯಿಸಿದ್ದ ದೊಡ್ಡ ಮಗಳಿಗೆ ನಡೆದ ಸಂಗತಿಯನ್ನು ಸಂಕ್ಷಿಪ್ತವಾಗಿ ವಿವರಿಸಿ, ಮೊಬೈಲು ಫೋನು ಆದಿಯಾಗಿ ಕಿಸೆಯಲ್ಲಿದ್ದ ಸರಕುಗಳೆಲ್ಲವನ್ನೂ (ಟಿಕೇಟೊಂದನ್ನು ಹೊರತುಪಡಿಸಿ), ಸೂಟ್‌ಕೇಸಿನ ಹೊಟ್ಟೆಗೆ ತುಂಬಿ, ಮಲಗಲು ಅಣಿಯಾಗುತ್ತಿದ್ದೆ. ಅಷ್ಟರಲ್ಲಿ ನನ್ನೆದುರು ಕೂತಿದ್ದ ಆಸಾಮಿ ಗಮನ ಸೆಳೆದರು. ಪುರುಸೊತ್ತಿಲ್ಲದಂತೆ ಮೊಬೈಲ್ ಮಾತುಕತೆಯಲ್ಲಿ ಮುಳುಗಿದ್ದ ಮಹಾತ್ಮ. ಇದ್ದಕ್ಕಿದ್ದಂತೆ ಬ್ಯಾಟರಿ ಖಾಲಿಯಾಯ್ತೇನೊ, ಅದು ನಿರ್ಜೀವವಾದಾಗ ಬೇಸರಿಸಿ, ಮತ್ತೊಂದು ಸೆಟ್ ಹೊರತೆಗೆದ ಆತ, ಅದರ ಹೊಟ್ಟೆಯಲ್ಲಿದ್ದ ಬ್ಯಾಟರಿಯನ್ನು ಮೀಟಿ ಹೊರ ತೆಗೆದು ಮೊದಲ ಸೆಟ್ಟಿನ ಹೊಟ್ಟೆಗೆ ಹಾಕಿ, ಪುನಃ ಮಾತುಕತೆಯಲ್ಲಿ ಮುಳುಗಿದ್ದ.

ಅಷ್ಟರಲ್ಲಿ ಮತ್ತೊಂದು ಕಿಸೆಯಲ್ಲಿದ್ದ ಮೊಬೈಲು ರಿಂಗಣಗುಣಿಸಿತ್ತು. ಆತನ ಬಳಿ ಕನಿಷ್ಠ ಮೂರು-ನಾಲ್ಕು ಸೆಟ್‌ಗಳಿರುವುದು ನನ್ನ ಗಮನಕ್ಕೆ ಬಂತು. ಆತ ಘನಂದಾರಿ ಇಸುಮೇ ಇರಬೇಕೆಂದು ನಾನು ಮನದಲ್ಲಿ ತರ್ಕಿಸಿದ್ದೆ. ಒಂದು ತಪ್ಪಿದರೆ ಇನ್ನೊಂದು ರಚ್ಚೆ ಹಿಡಿಯುತ್ತಿದ್ದ ಮೊಬೈಲು ಫೋನುಗಳು, ಆತನ ಬಳಿ. ತುಸು ವಿರಾಮ ಕೊಟ್ಟಾಗ, ಕುತೂಹಲದಿಂದಲೇ ಆತನನ್ನು ಮಾತಿಗೆಳೆಯುತ್ತ 'ಏನು ಮಾಡಿಕೊಂಡಿದ್ದೀರಿ'? ಎಂದದ್ದಕ್ಕೆ, ತಾನೊಬ್ಬ 'ಸೋಶಿಯಲ್ ವರ್ಕರ್' ಎಂದು ನುಡಿದು, ಮಲ್ಟಿಕಲರಲ್ಲಿ ಮುದ್ರಿಸಿದ್ದ ವಿಸಿಟಿಂಗ್ ಕಾರ್ಡು ಕೊಟ್ಟರು. ಸಮಾಜ ಸೇವೆ ಅನ್ನುವುದೂ ನಮ್ಮ ದೇಶದಲ್ಲಿ ಒಂದು ಘನತೆವೆತ್ತ ವೃತ್ತಿಯೇ ಎಂಬ ಬಗ್ಗೆ ಹತ್ತಾರು ಪ್ರಶ್ನೆಗಳು ನನ್ನ ಮನದ ಹುತ್ತದಲ್ಲಿ ಅನುಮಾನದ ಹೆಡೆ ಎತ್ತಿದ್ದವು. ನಮ್ಮ ದೇಶದಲ್ಲಿ ರಾಜಕಾರಣ ಅನ್ನುವದೂ ಒಂದು ಲಾಭದಾಯಕ ವ್ಯಾಪಾರೋದ್ಯಮವಾಗುತ್ತಿರುವಂತೆಯೇ ಸಮಾಜಸೇವೆಯೂ ಒಂದು ಪೂರ್ಣಪ್ರಮಾಣದ ವೃತ್ತಿಯಾಯಿತೇ ಎಂಬ ಸಂದೇಹ ನನ್ನ ಮನಸ್ಸಿನಲ್ಲಿ ಗುದ್ದಿಕೊಂಡು ಬಂತು. ಆತನ ಬಿಡುವಿಲ್ಲದ ಮಾತುಕತೆಗಳೇ ಅದನ್ನು ಸಾಬೀತುಪಡಿಸುವಂತಿತ್ತು, ವಾಹ್ ! ಅದೇನೇ ಇರಲಿ, ಮುಖ್ಯ ಪ್ರಶ್ನೆಯೆಂದರೆ ದೊಡ್ಡ ಹುದ್ದೆಯ ಸರ್ಕಾರಿ ಬಾಬೂ ಆದ ನಾನೇ ಒಂದು ಸಿಮ್ ನಿಭಾಯಿಸಲು ಕಷ್ಟಪಡುತ್ತಿರುವಾಗ, ಮೂರ್‍ನಾಲ್ಕು ಸಿಮ್‌ಕಾರ್ಡುಗಳನ್ನು ಹೊಟ್ಟೆಯಲ್ಲಿ ಅಡಗಿಸಿಟ್ಟುಕೊಂಡಿದ್ದ ನಾಕಾರು ಸೆಟ್ಟುಗಳನ್ನು ಆತ ಸಾಕಿಕೊಂಡಿರುವುದು ನನ್ನ ಕೆಟ್ಟ ಕುತೂಹಲಕ್ಕೆ ಕಾರಣವಾಗಿತ್ತು. ಕಂಪ್ಯೂಟರ್ ಯುಗ ಅನ್ನುವುದನ್ನು ಅಳಿಸಿ ಈಗ 'ಮೊಬೈಲ್ ಯುಗ' ಎಂದು ಹೊಸದಾಗಿ ದಾಖಲಿಸಬೇಕು.

ಚರಿತ್ರೆಯಲ್ಲಿ, ಏಕಪಾಠಿ, ದ್ವಿಪಾಠಿ, ತ್ರಿಪಾಠಿಗಳೆಂದು ಕರೆಯುತ್ತಿದ್ದುದಕ್ಕೆ ಅವರವೇ ಆದ ಕಾರಣಗಳಿದ್ದವಂತೆ. ಒಂದೇ ಒಂದು ಬಾರಿ ಕಿವಿಗೆ ಬಿದ್ದರೂ ಸಾಕು. ಯಾವನ ತಲೆಯಲ್ಲಿ ಅದು ಗಟ್ಟಿಯಾಗಿ ಉಳಿದು ಬಾಯಿಪಾಠವಾಗಿ ಬಿಡುತ್ತಿದೆಯೊ ಆತ ಏಕಪಾಠಿ. ಹಾಗೆಯೇ ಎರಡು ಬಾರಿ ಕೇಳಿಸಿಕೊಂಡಾಗ ಬಾಯಿಪಾಠವಾದರೆ ಅಂಥವನು ದ್ವಿಪಾಠಿ. ಆದರೆ, ಈ ಕ್ಯಾಲ್ಕುಲೇಟರ್‌ಯುಕ್ತ ಸೆಲ್ ಫೋನು ಬಂತೇ ಬಂತು, 'ಎರಡಾ ಎರಡಲೆ ಎಷ್ಟು'? ಎಂದು ಕೇಳಿ ನೋಡಿರಿ. ಅದಕ್ಕೂ ಜೋಬಿಂದ ಸೆಲ್‌ಫೋನು ಈಚೆ ತೆಗೆಯುವವರಿದ್ದಾರೆ, ಕ್ಯಾಲ್ಕುಲೇಟರ್‌ಗಾಗಿ. ಕುದುರೆ ಕಂಡು ಕಾಲು ನೋವು ಬಂದಂತೆ, ಮೆದುಳಿಗೆ ಕೆಲಸವೇ ಇಲ್ಲವಾಗುತ್ತದೇನೋ, ಮುಂದೊಂದು ದಿನ. ಆಧುನಿಕ ಮನುಷ್ಯನ ಜೀವಿತಾವಧಿಯ ಸಕಲ ಆಗುಹೋಗುಗಳನ್ನು ಚಾಚೂ ತಪ್ಪದೇ ದಾಖಲಿಸಿಟ್ಟುಕೊಳ್ಳುವ ಸೂಪರ್ ಕಂಪ್ಯೂಟರ್ ಆದ ಈ ಮೊಬೈಲು ಚಿತ್ರಗುಪ್ತನಂತೆಯೆ ಕೆಲಸ ಮಾಡಬಲ್ಲದು !

ಕಿವಿಗೆ ಇಯರ್ ಫೋನು ಸಿಕ್ಕಿಸಿಕೊಂಡು ದ್ವಿಚಕ್ರ ವಾಹನ ಓಡಿಸುತ್ತ ಅವಘಡಕ್ಕೆ ಈಡಾದ; ಹಾಡು ಕೇಳುತ್ತ ರೈಲ್ವೆ ಹಳಿ ದಾಟುವಾಗ ಜೀವ ಹಾನಿಗೊಳಗಾದ ಪ್ರಕರಣಗಳನ್ನು ನೋಡಿದಾಗ ಮೊಬೈಲ್ ಹಾವಳಿಗೆ ಲಂಗುಲಗಾಮು ಇಲ್ಲವೆ ಎಂಬುದು ನನ್ನ ಅಸಲು ಪ್ರಶ್ನೆ. ನಾಗರಿಕತೆಯ ಆರಂಭದ ದಿನಗಳಲ್ಲಿ ಕಡ್ಡಿಪೆಟ್ಟಿಗೆ (ಬೆಂಕಿಪೊಟ್ಟಣ) ಕಂಡುಹಿಡಿದಾಗಲೇ ಮನುಷ್ಯ ಅಪರಿಮಿತ ಖುಷಿಯಲ್ಲಿ ಕುಣಿದಾಡಿದ್ದಿರಬೇಕು. ಚುರ್ ಎಂದು ಕಡ್ಡಿ ಗೀರಿದರೆ ಸಾಕು ಬೆಂಕಿ ಹೊತ್ತಿ ಉರಿಯುವ ವಿಸ್ಮಯ. ಒಲೆ ಹೊತ್ತಿಸಲೂ ಆಗುತ್ತದೆ; ಅದೇ ಕಡ್ಡಿ ಗೀರಿ ತಮಗಾಗದವರ ಮನೆಗೆ ಬೆಂಕಿ ಹಾಕಲೂ ಆಗುತ್ತದೆ. ಒಟ್ಟಿನಲ್ಲಿ ಅದು ಬಳಸುವವರಲ್ಲಿ ಇರಬೇಕಾದ ವಿವೇಕವನ್ನು - ವಿವೇಚನೆಯನ್ನು ಅವಲಂಬಿಸಿರುತ್ತದೆ. ಇದೂ ಹಾಗೆಯೇ ಅಲ್ಲವೇ ? ಅಕಟಕಟಾ, ಮೊಬೈಲೆಂಬೋ ಮಾಯಾಜಾಲವೆ !! ವೈಜ್ಞಾನಿಕ - ತಂತ್ರಜ್ಞಾನದ ಕೊಡುಗೆಯಾದ ನಿನ್ನನ್ನು ವ್ಯಕ್ತಿತ್ವ ವಿಕಸನಕ್ಕೆ, ಸಚ್ಚಾರಿತ್ರ್ಯ ಬೆಳೆಸಿಕೊಳ್ಳುವದಕ್ಕೆ ಆ ಮೂಲಕ ದೇಶದ ಅಭಿವೃದ್ಧಿಗೆ ಸದ್ಬಳಕೆಯಾಗುವದಾಗಿದ್ದರೆ ಎಷ್ಟು ಚೆನ್ನ! ಇಲ್ಲದಿದ್ದರೆ ಕೋತಿ ಮಂಗನ ಕೈಯಲ್ಲಿ ಮಾಣಿಕ್ಯ ಕೊಟ್ಟಂತೆ !!


ಈರಪ್ಪ ಎಂ. ಕಂಬಳಿ
ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಕೇಂದ್ರ ಪೋಡಿಯಂ ಬ್ಲಾಕ್
ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು - ೫೬೦ ೦೦೧




# ಓದಿ; ಚಂದಾದಾರರಾಗಿ; ಚಂದಾ ಉಡುಗೊರೆ ನೀಡಿ




ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು
ಗಂಭೀರ ವಿಶ್ಲೇಷಣೆಗೆ ಒಳಪಡಿಸುವ



ತಿಂಗಳ ಪತ್ರಿಕೆ

## ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ







ಗೌರವ ಸಂಪಾದಕರು : ಡಾ|| ಜಿ. ರಾಮಕೃಷ್ಣ
ಸಂಪಾದಕರು : ಡಾ|| ಸಿದ್ದನಗೌಡ ಪಾಟೀಲ

ಆಕಾರ ಡೆಮ್ಮಿ ¼ ; ಪುಟಗಳು 64 (ವಿಶೇಷಾಂಕ 256)
ಬೆಲೆ : ಸಾದಾ ಪ್ರತಿ ₹ 20 (ವಿಶೇಷಾಂಕ ₹ 50)
ಚಂದಾ : 1 ವರ್ಷಕ್ಕೆ ₹ 250; 3 ವರ್ಷಕ್ಕೆ ₹ 500







ಈ ಪ್ರಗತಿಪರ – ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.

ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.







ಚಂದಾ ಹಣವನ್ನು 'ಹೊಸತು' ಹೆಸರಲ್ಲಿ ಡಿ.ಡಿ. / ಎಂ.ಓ. ಮಾಡಿ ಕೆಳಕಂಡ ವಿಳಾಸಕ್ಕೆ ಕಳಿಸಿ. ಇಲ್ಲವೇ, ಹಣವನ್ನು ನೇರವಾಗಿ ಬ್ಯಾಂಕ್ ಖಾತೆಗೆ ಜಮಾ ಮಾಡಿ ನಮ್ಮ ಕಛೇರಿಗೆ ತಿಳಿಸಿ (Current A/c No. 0788201015590; IFSC Code CNRB0000788, ಕೆನರಾ ಬ್ಯಾಂಕ್, ಮಾಧವನಗರ ಶಾಖೆ, ಬೆಂಗಳೂರು).

'ಹೊಸತು' ತಿಂಗಳ ಪತ್ರಿಕೆ, ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ
ಬೆಂಗಳೂರು – 1. ✆ 30578029, email : hosathu@gmail.com







ಮೂರು ವರ್ಷಗಳ ಚಂದಾದಾರರಿಗೆ ಚಂದಾ ಅವಧಿ ಮುಗಿಯುವವರೆಗೂ
ನವಕರ್ನಾಟಕ ಪ್ರಕಾಶನದ ಎಲ್ಲ ಪುಸ್ತಕಗಳ ಮೇಲೆ 20% ರಿಯಾಯಿತಿ

ನವಕರ್ನಾಟಕ ಮಳಿಗೆಗಳಲ್ಲೂ ಪುಸ್ತಕ ಪ್ರದರ್ಶನಗಳಲ್ಲೂ
ಚಂದಾ ನೀಡಬಹುದು




www.navakarnataka.com

ಡಾ॥ ಎಸ್. ಬಾಲಚಂದ್ರ ರಾವ್

# ಪ್ರಜಾಪತಿಯು ರೋಹಿಣಿಯ ಹಿಂದೆ ಬಿದ್ದಿದ್ದು ಮತ್ತು ಇತರ ರೂಪಕಗಳು

ಭಾರತೀಯ ಖಗೋಳಶಾಸ್ತ್ರದ ಇತಿಹಾಸದಲ್ಲಿ ಆಧುನಿಕ ಸಂಶೋಧಕರಿಂದ ಬಹಳಷ್ಟು ವಿಮರ್ಶೆಗೆ ಒಳಗಾದ ಒಂದು ವಿಷಯವೆಂದರೆ ಸಪ್ತರ್ಷಿಮಂಡಲದ ಚಲನೆ! ಎಲ್ಲರಿಗೂ ತಿಳಿದಂತೆ ಗ್ರಹಗಳು ಅವುಗಳ ವೈಯಕ್ತಿಕ ವೇಗಗಳಿಂದ ಚಲಿಸುತ್ತವೆ. ಆದರೆ ನಕ್ಷತ್ರಗಳು ಸ್ಥಿರವಾಗಿರುತ್ತವೆ. ಇಂದಿನ ಖಗೋಳವಿಜ್ಞಾನದಲ್ಲಿ ತಿಳಿದು ಬಂದಿರುವಂತೆ ಪ್ರತಿನಕ್ಷತ್ರಕ್ಕೂ ಅದರದೇ ಆದ ಚಲನವೇಗ (proper motion) ಇರುತ್ತದೆ. ಆದರೆ ಈ ನಕ್ಷತ್ರಗತಿಯ ವೇಗವು ಬಹಳ ಅಲ್ಪವಾಗಿದ್ದು ಒಂದು ಶತಮಾನದ ಅವಧಿಯಲ್ಲಿ ಆ ಚಲನೆಯು ಕೇವಲ ಕೆಲವು 'ಕಲೆ'ಗಳು (arc-minutes). ಆ ದೃಷ್ಟಿಯಲ್ಲಿ ಇತರ ನಕ್ಷತ್ರಪುಂಜಗಳ ಮಧ್ಯೆ 'ಸಪ್ತರ್ಷಿ ಮಂಡಲ'ಕ್ಕೆ ಹೇಳಿಕೊಳ್ಳುವಂತಹ ಚಲನೆ ಇರುವುದಿಲ್ಲ. ಆದರೆ ಪ್ರಾಚೀನ ಕೃತಿಗಳಲ್ಲಿ ಒಂದೊಂದು ನಕ್ಷತ್ರದಲ್ಲೂ ಸಪ್ತರ್ಷಿಗಳು ೧೦೦ವರ್ಷಗಳಷ್ಟು ಕಾಲ ವಾಸಮಾಡುತ್ತಾರೆ ಎಂಬ ಹೇಳಿಕೆಯಿದೆ.

ವೇದ ಸಮುಚ್ಚಯದಲ್ಲಿ ಬಹಳ ರೋಚಕವಾದ ಅನೇಕ ಪ್ರಸಂಗಗಳು ಬರುತ್ತವೆ. ಅವುಗಳಲ್ಲಿ ಕೆಲವನ್ನು ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದ ಘಟನೆಗಳ ರೂಪಕಗಳು ಎಂದು ಪರಿಗಣಿಸಲಾಗಿದೆ. ಬುದ್ಧಿವಂತ ಓದುಗರು ಪ್ರಶ್ನಿಸಬಹುದು : "ವೇದಗಳಲ್ಲಿ ಬರುವ ಕಥೆಗಳು ಖಾಗೋಳಿಕ ಘಟನೆಗಳ ಉಲ್ಲೇಖವೆನ್ನಲು ಆಧಾರವೇನು ? ಅವುಗಳು ಸಾಹಿತ್ಯಿಕವಾಗಿ ಮೌಲಿಕ ಮತ್ತು ರೋಚಕ ಕಥೆಗಳಿರಬಹುದಲ್ಲವೆ ?" ಎಂದು. ಅಂತಹ ಉಲ್ಲೇಖಗಳು ಆಕಾಶದಲ್ಲಿ ಬೇರೆಬೇರೆ ಕಾಲಘಟ್ಟಗಳಲ್ಲಿ ನಕ್ಷತ್ರಪುಂಜಗಳ ಹಾಗೂ ಬಿಡಿ ನಕ್ಷತ್ರಗಳ ವೀಕ್ಷಣೆಗಳ ದಾಖಲೆಗಳು ಎಂದು ನಿರ್ಧರಿಸಲು ಮುಖ್ಯವಾದ ಆಧಾರವೆಂದರೆ ನಕ್ಷತ್ರಗಳನ್ನು ಹೆಸರಿಸಿರುವುದು ! ಪ್ರಾಚೀನ ಭಾರತೀಯ ಹಾಗೂ ಆಧುನಿಕ ಖಗೋಳವಿಜ್ಞಾನದ ಪರಿಣತರು ವಸ್ತುನಿಷ್ಠವಾಗಿ ಸ್ಥಾಪಿಸಿರುವ ಘಟನೆಗಳು ನಿಜಕ್ಕೂ ನಮ್ಮ ದೇಶದಲ್ಲಿ ವಿಜ್ಞಾನದ ಬೆಳವಣಿಗೆಯ ದೃಷ್ಟಿಯಿಂದ ವಿಚಾರಪ್ರದ ಹಾಗೂ ಮೌಲಿಕವಾಗಿವೆ. ಇಲ್ಲಿ ಅಂತಹ ಕೆಲವು ಮಹತ್ವದ ಖಾಗೋಳಿಕ ರೂಪಕಗಳನ್ನು ಪರಾಮರ್ಶಿಸೋಣ.

**೧. ಪ್ರಜಾಪತಿಯು ರೋಹಿಣಿಯ ಹಿಂದೆ ಬಿದ್ದ ಪ್ರಸಂಗ !**

**'ಐತರೇಯ ಬ್ರಾಹ್ಮಣ'**ದಲ್ಲಿ ಒಂದು ರೋಚಕವಾದ ಸನ್ನಿವೇಶವಿದೆ:–

ಪ್ರಜಾಪತಿಯು ತನ್ನ ಒಬ್ಬ ಮಗಳನ್ನೇ ಮೋಹಿಸಿದನು. ಅವಳು ಒಂದು 'ರೋಹಿತ್' (ಹೆಣ್ಣು ಜಿಂಕೆಯ) ರೂಪವನ್ನು ತಾಳಿದಳು. ಇನ್ನು ಪ್ರಜಾಪತಿಯು 'ಋಷ್ಯ' (ಬಿಳಿ ಚುಕ್ಕಿಗಳ ಗಂಡುಜಿಂಕೆ) ರೂಪದಿಂದ ಮಗಳನ್ನು ಹಿಂಬಾಲಿಸಿದನು. ಇದನ್ನು ಗಮನಿಸಿದ ದೇವತೆಗಳು, "ಈ ಪ್ರಜಾಪತಿಯು ಒಂದು ಹೀನಕಾರ್ಯದಲ್ಲಿ ತೊಡಗಿದ್ದಾನೆ" ಎಂದು ಅಸಮಾಧಾನವನ್ನು ವ್ಯಕ್ತಪಡಿಸಿದರು. (**ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ...**). ಪ್ರಜಾಪತಿಯನ್ನು ಶಿಕ್ಷಿಸಲು ತಮ್ಮಲ್ಲೇ ಒಬ್ಬರನ್ನು ಹುಡುಕಿದರೂ ಯಾರೂ ಸರಿಯಾದವರು ಸಿಗಲಿಲ್ಲ. ಆಗ ತಮ್ಮಲ್ಲೇ ಇದ್ದ ಘೋರ ರೂಪಗಳನ್ನೆಲ್ಲಾ ಒಟ್ಟುಗೂಡಿಸಿ ಉಂಟಾದ ವಿಶಿಷ್ಟ ರೂಪದ ಹೆಸರಿನಲ್ಲಿ 'ಭೂತ' ಎಂಬ ಪದವು ಸೇರಿಕೊಂಡಿದೆ. ಆ ವಿಶಿಷ್ಟವಾದ ಘೋರ ರೂಪದ ಶಕ್ತಿಗೆ ದೇವತೆಗಳು, "ಪ್ರಜಾಪತಿಯು ಇಲ್ಲಿ ಈವರೆಗೆ ಕೇಳಿಲ್ಲದಂತಹ ಪಾತಕವನ್ನು ಎಸಗಿದ್ದಾನೆ. ಅವನನ್ನು ತಿವಿದು ನಾಶಮಾಡಿಬಿಡು" ಎಂದು ಆಜ್ಞಾಪಿಸಿದರು. ಆ ಶಕ್ತಿಯು "ಹಾಗೆಯೇ ಆಗಲಿ, ಆದರೆ ನನಗೆ ಒಂದು ವರವನ್ನು ಕೊಡಿ" ಎಂದು ಕೇಳಿಕೊಂಡನು. ದೇವತೆಗಳು ಒಪ್ಪಿಕೊಂಡು

'ವರವನ್ನು ಕೇಳಿಕೊ' ಎಂದರು. ಆತನು 'ಗೋವುಗಳ ಸರ್ವಾಧಿಪತ್ಯವನ್ನು' ಕೇಳಿಕೊಂಡನು. ಆದ್ದರಿಂದ ಅವನ ಹೆಸರು 'ಪಶುಮಾನ್' ಎಂದು ಅವನು ಪ್ರಜಾಪತಿಯನ್ನು ಗುರಿಯಿಟ್ಟು ತಿವಿದು ಬಿಟ್ಟನು. ಹೀಗೆ ತಿವಿಸಿಕೊಂಡ ಪ್ರಜಾಪತಿಯು ಆಕಾಶದತ್ತ ಹಾರಿದನು ಅವನನ್ನು 'ಮೃಗ' (ಜಿಂಕೆ) ಎಂದು ಕರೆಯುತ್ತಾರೆ. ಈ 'ಮೃಗ'ನನ್ನು ತಿವಿದವನು **'ಮೃಗವ್ಯಾಧ'**(ಲುಬ್ಧಕ). ಹೆಣ್ಣುಜಿಂಕೆಯ



ಚಿತ್ರ ೧ : ಮಹಾವ್ಯಾಧ (ಓರಾಯನ್)

(ರೋಹಿತ್) ರೂಪವನ್ನು ತಾಳಿದ ನಕ್ಷತ್ರವೇ **'ರೋಹಿಣಿ'** (Aldebaran)...

ಟಿಪ್ಪಣಿ : (೧) 'ಮೃಗವ್ಯಾಧ' (ಲುಬ್ಧಕ) ಎಂಬುದು 'ಸಿರಿಯಸ್' (Sirius) ಎಂಬ ಗರಿಷ್ಠ ಪ್ರಕಾಶಮಾನವಾದ ನಕ್ಷತ್ರವಾಗಿ ಗುರುತಿಸಿದ್ದಾರೆ. ಈ ನಕ್ಷತ್ರದ ಒಂದು ಪ್ರಖ್ಯಾತಿ ಎಂದರೆ ಹಿಂದೆ


ಚಿತ್ರ ೨ : ಬಿಲ್ಲನ್ನು ಹಿಡಿದ ಮಹಾವ್ಯಾಧ

### ಮಹಾವ್ಯಾಧ (Orion)

ಮಹಾವ್ಯಾಧ ಅಂದರೆ ಬೇಟೆಗಾರ ಎಂದರ್ಥ. ಇದು ನಮ್ಮ ರಾಶಿಚಕ್ರದ ನಕ್ಷತ್ರಪುಂಜವಲ್ಲ. ಆದರೆ ಬರಿಗಣ್ಣಿಗೆ ಸುಲಭವಾಗಿ ಗೋಚರಿಸಬಲ್ಲ ಮತ್ತು ಪ್ರಕಾಶಮಾನವಾದ ನಕ್ಷತ್ರಗಳನ್ನು ಹೊಂದಿದೆ. ಆರ್ದ್ರ (Betelgeuse) (ಕೆಂಪುದೈತ್ಯ ಹಂತದಲ್ಲಿರುವ ನಕ್ಷತ್ರ) ನಕ್ಷತ್ರದೆಡೆಗೆ ಮೇಲ್ಭಾಗದ ಎರಡು ಪ್ರಕಾಶಮಾನ ನಕ್ಷತ್ರಗಳು ಮಹಾವ್ಯಾಧನ ಎರಡು ಭುಜಗಳು, ಕೆಳಭಾಗದ ಎರಡು ಪ್ರಕಾಶಮಾನ ನಕ್ಷತ್ರಗಳು ಅವನ ಕಾಲುಗಳು, ಮಧ್ಯಭಾಗದಲ್ಲಿ ಒಂದೇ ನೇರದಲ್ಲಿರುವ ಮೂರು ನಕ್ಷತ್ರಗಳು ಅವನ ನಡುಪಟ್ಟಿ ಅದರ ಕೆಳಗೆ ಲಂಬವಾಗಿ ಸ್ವಲ್ಪ ಮಂಕಾಗಿ ಕಾಣುವ ನಕ್ಷತ್ರಗಳು ಅವನ ಸೊಂಟಪಟ್ಟಿಯಲ್ಲಿನ ಕತ್ತಿ ಎಂದು ಭಾವಿಸಿ ಊಹಾರೇಖೆಯಿಂದ ಕಲ್ಪಿಸಿಕೊಂಡರೆ, ಸುಂದರ ವ್ಯಾಧನ ಚಿತ್ರ ಕಣ್ಣಿಗೆ ಕಟ್ಟುತ್ತದೆ. ತಿಳಿದವರ ಮಾರ್ಗದರ್ಶನದಲ್ಲಿ ವೀಕ್ಷಿಸಿದರೆ ಅವನ ಕೈಲ್ಲಿರುವ ಬಿಲ್ಲು, ಅವನ ತಲೆ ಎಲ್ಲವನ್ನೂ ಗುರುತಿಸಬಹುದು. ಮಧ್ಯಭಾಗದಲ್ಲಿ ಒಂದೇ ನೇರದಲ್ಲಿರುವ ಮೂರು ನಕ್ಷತ್ರಗಳ ನೇರದಲ್ಲಿ ಕೆಳಗೆ ಆಕಾಶದಲ್ಲೇ ಅತ್ಯಂತ ಪ್ರಕಾಶಮಾನ ನಕ್ಷತ್ರವೊಂದನ್ನು ನೀವು ಕಾಣುತ್ತೀರಿ ಇದೇ ಸಿರಿಯಸ್. (Rigel - ರಾಜನ್ಯ–ಯೌವ್ವನಾವಸ್ಥೆಯಲ್ಲಿರುವ ನೀಲಿ ನಕ್ಷತ್ರ)




**ಚಿತ್ರ ೩ : ಒಂದೇ ದಿಕ್ಕಿನಲ್ಲಿ ಕಾಣುವ ಕಾಯಗಳು**

ವರ್ಷಕ್ಕೊಮ್ಮೆ ಪೂರ್ವ ದಿಗಂತದಲ್ಲಿ ಅರುಣೋದಯ ಕಾಲದಲ್ಲಿ ಲುಬ್ಧಕವು ಉದಯಿಸಿದಾಗ ಈಜಿಪ್ಟಿನ ನೈಲ್ ನದಿಯಲ್ಲಿ ಪ್ರವಾಹ ಉಂಟಾಗುತ್ತಿತ್ತು. ಲುಬ್ಧಕದ ಈ ಸೂರ್ಯ– ಸಹೋದಯದ (heliacal rising) ವೀಕ್ಷಣೆಗಳಿಂದ ಈಜಿಪ್ಟಿನ ಖಗೋಳಜ್ಞರು ಒಂದು ವರ್ಷದ ಅವಧಿಯನ್ನು ನಿಖರವಾಗಿ ಕಂಡುಹಿಡಿದರು.

(೨) ಪ್ರಜಾಪತಿ ಮತ್ತು ರೋಹಿಣಿ ನಕ್ಷತ್ರಗಳು ಬೇರೆ ಬೇರೆ ಸ್ಥಾನಗಳಲ್ಲಿ ಮತ್ತು ದಿಕ್ಕುಗಳಲ್ಲಿ ಇರುವುದರಿಂದ ಸಾಮಾನ್ಯವಾಗಿ ಅವುಗಳನ್ನು ಒಂದೇ ದಿಕ್ಕಿನಲ್ಲಿ ಕಾಣಲು ಸಾಧ್ಯವಿಲ್ಲ. ಆದರೆ ವೀಕ್ಷಕನು ಚಲಿಸಿದಂತೆ ಎರಡು ನಕ್ಷತ್ರಗಳ ಕೋನೀಯ ದೂರ (angular distance) ಬದಲಾಗುತ್ತ ಹೋಗುತ್ತದೆ. ಒಂದು ಕಾಲಘಟ್ಟದಲ್ಲಿ ಯಾವುದೋ ಒಂದು ನಿರ್ದಿಷ್ಟ ಸ್ಥಾನದಿಂದ ವೀಕ್ಷಿಸಿದಾಗ ಎರಡು ನಕ್ಷತ್ರಗಳು ಒಂದೇ ದಿಕ್ಕಿನಲ್ಲಿ ಕಾಣಿಸುತ್ತವೆ. ಚಿತ್ರ ೩ರಲ್ಲಿ $A$ ಮತ್ತು $B$ ಎರಡು ಕಾಯಗಳಾಗಿದ್ದು $C$ ನಲ್ಲಿರುವ ವೀಕ್ಷಕನು ಅವುಗಳನ್ನು ನೋಡಿದಾಗ ಈ ಕಾಯಗಳು ಬೇರೆ ಬೇರೆ ದಿಕ್ಕುಗಳಲ್ಲೇ ಇದ್ದು $ACB$ ಕೋನೀಯ ಅಂತರದಲ್ಲಿ ಇರುತ್ತವೆ. ಅದೇ $D$ ಬಿಂದುವಿನಿಂದ ವೀಕ್ಷಿಸಿದಾಗ ಅವೆರಡೂ ಒಂದೇ ದಿಕ್ಕಿನಲ್ಲಿ ಕಂಡುಬಂದು ಕೋನೀಯ ಅಂತರವೇ ಇರುವುದಿಲ್ಲ. ಚಿತ್ರ ೩ರಲ್ಲಿ $A$ ಮತ್ತು $B$ ಕಾಯಗಳನ್ನು $C$ಯಿಂದ ವೀಕ್ಷಿಸಿದಾಗ ಅವುಗಳ ಮಧ್ಯೆ ಇರುವ ಕೋನೀಯ ಅಂತರ $A\hat{C}B$. ವೀಕ್ಷಕನು ಚಲಿಸಿದಂತೆ ಈ $A\hat{C}B$ ಅಂತರವೂ ಬದಲಾಗುತ್ತ ಹೋಗಿ, $D$ಯಿಂದ ವೀಕ್ಷಿಸಿದಾಗ ಕೋನೀಯ ಅಂತರ $A\hat{D}B$ ಶೂನ್ಯವಾಗಿ $A$ ಮತ್ತು $B$ ಕಾಯಗಳು ಒಂದೇ $DBA$ ದಿಕ್ಕಿನಲ್ಲಿ ಕಾಣುತ್ತವೆ.

ಹಾಗೆಯೇ ಸಾವಿರಾರು ವರ್ಷಗಳ ಅವಧಿಯಲ್ಲಿ ಎರಡು ನಕ್ಷತ್ರಗಳ ಕೋನೀಯ ಅಂತರವು ಶೂನ್ಯವಾಗಿ ಅವೆರಡೂ ಒಂದೇ ದಿಕ್ಕಿನಲ್ಲಿ ಕಾಣಸಿಗುತ್ತವೆ. ಇದಕ್ಕೆ ಮುಖ್ಯವಾದ ಭೌತಿಕ ಕಾರಣವೆಂದರೆ ಭೂಮಿಯ ಮೇಲೆ ಸೂರ್ಯ–ಚಂದ್ರರ ಗುರುತ್ವಾಕರ್ಷಣೆಯಿಂದಾಗಿ ವಿಷುವಗಳ ಹಿಂಚಲನೆ (precession of the equinoxes). ಈ ಹಿಂಚಲನೆ ಒಂದು ಪೂರ್ಣ ಸುತ್ತು ಮುಗಿಸಲು ಸುಮಾರು ೨೬,೦೦೦ ವರ್ಷಗಳು ಬೇಕಾಗುತ್ತದೆ.

ಪ್ರಜಾಪತಿ ಮತ್ತು ರೋಹಿಣೀ ನಕ್ಷತ್ರಗಳು ಒಂದೇ ದಿಕ್ಕಿನಲ್ಲಿ(ಸಂಧಿಸಿದಂತೆ) ಕಾಣಸಿಗಬೇಕಾದರೆ ಕಾಲಾಂತರದಲ್ಲಿ ಅವೆರಡರ 'ವಿಷುವಾಂಶಗಳು' (right-ascension) ಸಮನಾಗಬೇಕು. ಪ್ರಸಿದ್ಧ ಗಣಿತ–ಖಗೋಳಜ್ಞ ಹಾಗೂ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಗಣಿತ ಪ್ರಾಧ್ಯಾಪಕರಾಗಿದ್ದ ಪ್ರೊ॥ ಪಿ. ಸಿ. ಸೇನ್‌ಗುಪ್ತ ಅವರು ತಮ್ಮ ಲೆಕ್ಕಾಚಾರಗಳಿಂದ ಪ್ರಜಾಪತಿ–ರೋಹಿಣೀ ನಕ್ಷತ್ರಗಳು ಒಂದೇ ದಿಕ್ಕಿನಲ್ಲಿ ಕಂಡುಬಂದಿದ್ದು ಸುಮಾರು ಕ್ರಿ. ಪೂ. ೩೩–೩೪ ಶತಮಾನದ ಕಾಲಘಟ್ಟದಲ್ಲಿ. ಈ ಪ್ರಸಂಗವು ಉಲ್ಲೇಖವಾಗಿರುವುದು ಮುಖ್ಯವಾಗಿ ಋಗ್ವೇದದಲ್ಲಿ ಮತ್ತು ಐತರೇಯ ಬ್ರಾಹ್ಮಣದಲ್ಲಿ.

**೨. ಕೃತಿಕಾ ನಕ್ಷತ್ರಗಳ ಅನವರತ ಪೂರ್ವೋದಯ**

'ಶತಪಥ ಬ್ರಾಹ್ಮಣ'ದಲ್ಲಿ ಕೃತ್ತಿಕಾ ನಕ್ಷತ್ರಪುಂಜದ ಬಗ್ಗೆ ಹೀಗೆ ಹೇಳಿದೆ:– 'ಕೃತ್ತಿಕೆಯಲ್ಲಿ ಮಾತ್ರ ಅನೇಕ ನಕ್ಷತ್ರಗಳಿವೆ. ಇತರ ನಕ್ಷತ್ರಪುಂಜಗಳಲ್ಲಿ ಒಂದು, ಎರಡು, ಮೂರು ಅಥವಾ ನಾಲ್ಕು ನಕ್ಷತ್ರಗಳು ಮಾತ್ರ ಇರುತ್ತವೆ. ...ಇವುಗಳು (ಕೃತ್ತಿಕಾ–ಪುಂಜ) ಮಾತ್ರ ಯಾವಾಗಲೂ ಪೂರ್ವ ದಿಕ್ಕಿನಿಂದ ಅತ್ತಿತ್ತ ಸರಿಯುವುದಿಲ್ಲ; ಆದರೆ ಇತರ ನಕ್ಷತ್ರಪುಂಜಗಳು (ಪೂರ್ವದಿಕ್ಕಿನಿಂದ) ಸರಿಯುತ್ತವೆ..."

ಒಂದು ನಕ್ಷತ್ರವು ಸರಿಯಾಗಿ ಪೂರ್ವದಲ್ಲೇ (due east) ಉದಯಿಸಬೇಕಾಗಿದ್ದರೆ ಅದು ವಿಷುವದ್‌ವೃತ್ತದ ಮೇಲೆ ಇರಬೇಕಾಗುತ್ತದೆ. ಅಂದರೆ ಆ ನಕ್ಷತ್ರದ ಕ್ರಾಂತಿ(declination) ಶೂನ್ಯವಾಗಿರಬೇಕಾಗುತ್ತದೆ. ಉದಾಹರಣೆಗೆ, ಸೂರ್ಯನು ಯಾವುದೇ ಸ್ಥಳದಿಂದ ನೋಡಿದರೂ ಸರಿಯಾದ ಪೂರ್ವದಲ್ಲೇ ಉದಯಿಸುವುದು ಸುಮಾರು ಮಾರ್ಚ್ ೨೧ ಮತ್ತು ಸೆಪ್ಟೆಂಬರ್ ೨೩ ದಿನಗಳಂದು ಮಾತ್ರ. ಆ ಸಂದರ್ಭಗಳಲ್ಲಿ ಸೂರ್ಯನ ಕ್ರಾಂತಿ, $\delta=0°$. ಈ ಶತಮಾನದಲ್ಲಿ ಕೃತ್ತಿಕಾ ನಕ್ಷತ್ರಪುಂಜವನ್ನು ಪ್ರತಿನಿಧಿಸುವ ಯೋಗತಾರೆ (ಅಲ್‌ಕ್ಯೋನ್, ಈಟಾ ಟೌರಿ) ಹೊಂದಿರುವ ಕ್ರಾಂತಿ (declination), δ=೨೪° ವಿಷುವದ್‌ವೃತ್ತದ ಉತ್ತರಕ್ಕಿದೆ. ಆದರೆ, ಸುಮಾರು ಕ್ರಿ. ಪೂ. ೩೦–೩೧ನೇ ಶತಮಾನದಲ್ಲಿ ಈ ಕೃತ್ತಿಕಾ ಯೋಗತಾರೆಯ ಕ್ರಾಂತಿ ಶೂನ್ಯವಾಗಿತ್ತು. ಅಂದರೆ ಸರಿಯಾಗಿ ಪೂರ್ವದಲ್ಲೇ ಉದಯಿಸುತ್ತಿತ್ತು. ಅಂದರೆ, 'ಐತರೇಯ ಬ್ರಾಹ್ಮಣ'ದ ರಚನೆಯು ಆ ಕಾಲದಲ್ಲೇ ಆಗಿರಬೇಕು. ಇದಕ್ಕೆ ಪೂರಕವಾಗಿ ಆ ಕೃತಿಯಲ್ಲಿ ಕೃತ್ತಿಕೆಯ ಅನವರತ ಪೂರ್ವೋದಯವನ್ನು ವರ್ತಮಾನ ಕಾಲದಲ್ಲಿ (present tense) ಹೇಳಿದೆ.

**೩. ರೋಹಿಣಿಯೊಂದಿಗೆ ಅಭಿಜಿತ್ ನಕ್ಷತ್ರದ ಸ್ಪರ್ಧೆ**

ಮಹಾಭಾರತದ ವನಪರ್ವದಲ್ಲಿ 'ಅಭಿಜಿತ್' (Vega), ರೋಹಿಣೀ (Aldebaran) ಹಾಗೂ 'ಕೃತ್ತಿಕಾ' ನಕ್ಷತ್ರಗಳ ಉಲ್ಲೇಖವಿದೆ. ಇಂದ್ರನು ಸ್ಕಂದ(ಮಹಾಸೇನ)ನಿಗೆ ಹೀಗೆ ಹೇಳುತ್ತಾನೆ :

**ಅಭಿಜಿತ್ ಸ್ಪರ್ಧಮಾನಾ ತು ರೋಹಿಣ್ಯಾ ಅನುಜಾಸ್ವಸಾ ।**
**ಇಚ್ಛಂತೀ ಜ್ಯೇಷ್ಠತಾಂ ದೇವೀ ತಪಸ್ತಪ್ತುಂ ವನಂ ಗತಾ ॥**

– ಮಹಾಸೇನ ! ಅಭಿಜಿತಳು ರೋಹಿಣಿಯ ತಂಗಿ. ಆದರೆ ರೋಹಿಣಿಗಿಂತಲೂ ಉನ್ನತ ಸ್ಥಾನವು ತನಗೆ ಬೇಕೆಂದು ಅಭಿಜಿತಳ ಇಚ್ಛೆ. ಜ್ಯೇಷ್ಠತ್ವವನ್ನು ಪಡೆಯಲು (ಧರೆಗೆ ಬಿದ್ದು) ತಪಸ್ಸನ್ನು ಮಾಡಲು ಕಾಡಿಗೆ ಹೋದಳು... (ಮ.ಭಾ., ವನ.೨೩೦. ಶ್ಲೋಕ ೮–೯)

**ಧನಿಷ್ಠಾದಿಸ್ತದಾ ಕಾಲೋ ಬ್ರಹ್ಮಣಾ ಪರಿಕಲ್ಪಿತಃ।**
**ರೋಹಿಣೀ ಹಿ ಅಭವತ್ ಪೂರ್ವಮೇವಂ ಸಂಖ್ಯಾಸಮಾಭತ್ ॥**

–ಧನಿಷ್ಠಾದಿಯಾದ ನಕ್ಷತ್ರಗಳನ್ನೊಳಗೊಂಡ ಕಾಲದಲ್ಲಿ ರೋಹಿಣಿಯು ಆ ನಕ್ಷತ್ರಮಾಲೆಯಲ್ಲಿದ್ದು ನಕ್ಷತ್ರಗಳ ಸಂಖ್ಯೆಯು ಪೂರ್ಣವಾಗಿತ್ತು. ಈಗ ಅಭಿಜಿತಳು ಹೊರಟುಹೋಗಿರುವುದರಿಂದ ಅವಳ ಸ್ಥಾನವನ್ನು ತುಂಬಬೇಕಾಗಿದೆ (ಶ್ಲೋಕ ೧೦).

.... ಕೃತ್ತಿಕೆಯರು ತಾರಾಮಂಡಲವನ್ನು ಸೇರಿಕೊಂಡರು.

ಟಿಪ್ಪಣಿ: (೧) ಇಲ್ಲಿ ಒಂದು ಕುತೂಹಲದ ವಿಷಯವನ್ನು ಉಲ್ಲೇಖಿಸಬಹುದು. ವಿವಾಹಪ್ರವೇಶ ಹೋಮದಲ್ಲಿ ಒಂದು ಮಂತ್ರದ ಅರ್ಥವು ಹೀಗಿದೆ – 'ಕೃತ್ತಿಕೆಯರು ಆರು ಜನ. ಧ್ರುವೆಯಾದ ಅರುಂಧತಿಯು ಏಳನೆಯವಳು. (ಈಗ) ವಿವಾಹಿತಳಾದ ವಧುವು ಎಂಟನೆಯವಳಾಗಿ ಅವರಂತೆಯೇ ಪತಿವ್ರತೆಯಾಗಲಿ'. ಈ ಆರು ಕೃತ್ತಿಕೆಯರೇ ಸಪ್ತರ್ಷಿಗಳಲ್ಲಿ ವಸಿಷ್ಠರಲ್ಲದೇ ಉಳಿದ ಆರು ಋಷಿಗಳ ಪತ್ನಿಯರೆಂದು ಭಾಷ್ಯಕಾರರ ಅಭಿಪ್ರಾಯ. ಅರುಂಧತಿಯು ವಸಿಷ್ಠರ ಧರ್ಮಪತ್ನಿಯಾಗಿದ್ದು ಆದರ್ಶ ಪಾತಿವ್ರತ್ಯಕ್ಕೆ ಮಾದರಿ! 'ಅರುಂಧತೀ' (Alcor) ನಕ್ಷತ್ರವು ಸಪ್ತರ್ಷಿಮಂಡಲದ (Ursa Major, the Great Bear) 'ವಸಿಷ್ಠ' ತಾರೆಗೆ ಸಂಗಾತಿ ತಾರೆ. (೨) ಭಾರತೀಯ ಸಿದ್ಧಾಂತ ಖಗೋಳ ಪದ್ಧತಿಯಲ್ಲಿ ಭಚಕ್ರದ (zodiac) ೨೭ ನಕ್ಷತ್ರಗಳಿದ್ದು, 'ಅಭಿಜಿತ್' ನಕ್ಷತ್ರಕ್ಕೆ ಜಾಗವಿಲ್ಲ. ಅದಕ್ಕೆ ಸಾಮಾನ್ಯವಾಗಿ ಕೊಡುವ ಕಾರಣವೆಂದರೆ ಈ ನಕ್ಷತ್ರದ ಶರ (ವಿಕ್ಷೇಪ, celestial latitude) ಸುಮಾರು ೬೧°೪೪"(ಉತ್ತರ) ಆಗಿದ್ದು ಭಚಕ್ರದಿಂದ ಮತ್ತು ಅದರ ಮಧ್ಯದಲ್ಲಿರುವ 'ಕ್ರಾಂತಿವೃತ್ತ'ದಿಂದ (ecliptic) ಬಹಳ ಉತ್ತರಕ್ಕಿದೆ. ಚಂದ್ರನು ತನ್ನ ಕಕ್ಷೆಯಲ್ಲಿ ಚಲಿಸುತ್ತ ಗರಿಷ್ಠ ಶರವು (maximum latitude, inclination) ಸುಮಾರು ೬°ಗಳಷ್ಟೇ ಆಗಿರುವುದರಿಂದ 'ಅಭಿಜಿತ್'

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಸಂಪುಟ 1; ರೂ. 320/-




ಸಂಪುಟ 2; ರೂ. 250/-




ಸಂಪುಟ 3; ರೂ. 425/-




ರೂ. 995/-

ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪ ವಾಗಿ ಮಾನವನ ವಿವಿಧ ಉದ್ಯೋಗ ಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿ ಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸ ಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭ ಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲ ದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮ ಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

285/ಎಫ್ - 6, ಉತ್ತರಾಧಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ
ಮೈಸೂರು -570004 ಇ-ಮೇಲ್ : kar_mas56@yahoo.co.in
ಮೊಬೈಲ್ : 9448074435, 9449853308, 9242459332




# ಒಡೆಯಲಿದೆ ಅಗ್ನಿಶಿಲೆ



ಓಡುತಿದೆ ಕುದುರೆ ಲಗಾಮು ಕಚ್ಚಿ
ಚತುರರಸ ತಬ್ಬಿಬ್ಬು ಈಗ
ಬೀಳದಂತವನ ಕಾವವನು ಎಲ್ಲಿಹನೊ
ನಳ ಸಮನು ಬಂದವನೆ ಪರಮಾತ್ಮ

ಸವಾರಿಗೇರಿದ ಕುದುರೆ ಅವನು
ನಿತ್ಯವೇರುವ ವಿಹಾರದ ಕುದುರೆಯಲ್ಲ
ಲಾಯದ ಹೊರಗೆ ಆಳುಗಳು ನಿಲಿಸಿದ್ದು
ಎಂದೆ ಏರಿದ್ದ ಪಳಗಿಸಿದ್ದವನಂತೆ

ಜೀವ ಕೈಯಲಿ ಹಿಡಿದು ನೋಡಿದ ಅರಸ
ಅಚ್ಚರಿಯದು ಬಡತನದ ಕುದುರೆ
ಕೆರಳಿ ಓಡುತ್ತಿದೆ ತನ್ನ ಮನ ಬಂದ ದಿಕ್ಕಿಗೆ
ಅಪರಿಚಿತ ಹಾದಿ ಅರಸನಿಗೆ

ಕೋಟೆ ಬಾಗಿಲಲಿದ್ದವ ಒಳ ಸರಿದು ನಿಂತಲ್ಲೆ
ನಿಂತಿತು ಕುದುರೆ ಮಂತ್ರಶಕ್ತಿಗೆ ಒಳಗಾದಂತೆ
ಆಳುವವನನೆ ಹೊತ್ತು ತಂದಿತ್ತು ಬಳಿಗೆ
ಇಳಿದು ಡವಡವಿಸುವೆದೆ ಮುಟ್ಟಿ ನಿಟ್ಟುಸಿರು ಎಳೆದ

ಹೇಳಿಕೊಂಬುದಿದೆಯರಸ ನೂರೆಂಟು
ಹೇಳಿಕೊಳ್ಳದ್ದು ಎದೆಗಳಲಿ ಗುಟ್ಟು
ತೆರೆದದ್ದೊಂದು ಸುತ್ತಿನ ಕೋಟೆಬಾಗಿಲು
ಉಳಿದಾರು ಬಾಗಿಲ ಮುಚ್ಚಿದೆ ಬಂಡೆಗಲ್ಲು

ಕಷ್ಟಕುಲದವರಿಹರು ನಿನ್ನಾಳಿಕೆಯ
ಏಳು ಸುತ್ತಿನ ಕೋಟೆಯೊಳಗೆ
ಒಡೆಯದೆ ಹೋಗಲಾರೆಯೊ ಒಳಗೆ
ಅವರೆ ಒಡೆದು ಬಂದರೆ ವಿದ್ರೋಹವೆಂಬೆ

ಗಡಿಗೆ ಹಿಡಿದವರೆಲ್ಲ ಹಾಲು ಕುಡಿದವರಲ್ಲ
ತಟ್ಟೆ ತೊಳೆದರೆ ಉಂಡರೆಂತಲ್ಲ
ಹಸಿವೆಯನೆ ಬಡಿಸಿ ಉಂಡಿರಬಹುದು
ನಾಳೆ ಸಿಗಬಹುದೆಂದು ತೊಳೆಯುತಿರಬಹುದು

ತೋರಣವ ನೋಡಿ ಹಬ್ಬ ಮಾಡಿದರೆಂದು
ನಿನ್ನಧಿಕಾರಿಗಳು ವರದಿ ಓದಬಹುದು
ಆರಿದೊಲೆಗಳ ಮೇಲೆ ಬರಿ ಮಡಕೆ
ನೋಟಕ್ಕಷ್ಟೆ ಅಂಗಳದ ರಂಗೋಲೆ

ಒಡೆಯಲಾದರೆ ನೋಡು ನಿನ್ನ ಹೆಸರಿನ ಈ ಏಳುಸುತ್ತಿನ ಕೋಟೆ
ಇಲ್ಲ, ನಿನ್ನ ಲಾಯದ ಕುದುರೆ ತರಿಸಿ ಹೊರಡು
ಸಿಡಿಯಲಿದೆ ಅಗ್ನಿಶಿಲೆ ನಿನ್ನ ಶಾಸನಗಳ ಸುಡಲು
ಕೋಟೆಗಳ ಕೆಡವಿ ಹೊಲಗಳ ಮಾಡಿ ಹಂಚು ಮೊದಲು

**ಸ. ರಘುನಾಥ**
ಕಂಟ್ರಾಕ್ಟರ್ ರಾಜಣ್ಣನವರ ಮನೆ, ವೇಣು ವಿದ್ಯಾ ಸಂಸ್ಥೆ ಎದುರು, ಶ್ರೀನಿವಾಸಪುರ – ೫೬೩ ೧೩೫, ಕೋಲಾರ ಜಿಲ್ಲೆ

ನಕ್ಷತ್ರವನ್ನು ದಾಟಲು ಸಾಧ್ಯವೇ ಇಲ್ಲ! (೩) ವೈದಿಕ ಸಾಹಿತ್ಯದಲ್ಲಿ 'ಅಭಿಜಿತ್' ಹೆಸರನ್ನು ಪುಲ್ಲಿಂಗವಾಗಿ ಬಳಸಿದೆ.

**೪. ಯಮ ಮತ್ತು ಅವನ ಜೋಡಿ ನಾಯಿಗಳು**

ದಕ್ಷಿಣ ದಿಕ್ಕಿನ ಅಧಿದೇವತೆಯು 'ಯಮ' ಎಂದು ಆ ದಿಕ್ಕನ್ನು 'ಯಾಮ್ಯ' ಎಂದೂ ವೈದಿಕ ಸಾಹಿತ್ಯದಲ್ಲಿ ಹೇಳಿದೆ. ಆದ್ದರಿಂದ ಯಮ ಎಂದರೆ ಸರಿಯಾಗಿ ದಕ್ಷಿಣ ದಿಕ್ಕಿನತ್ತ (due south) ಎಂದರ್ಥ. ಇನ್ನು ಈ ಯಮನ ಜೋಡಿ ನಾಯಿಗಳು ಯಾವುವು?

'ತೈತ್ತಿರೀಯ ಬ್ರಾಹ್ಮಣ'ದಲ್ಲಿ ಉಲ್ಲೇಖ ಹೀಗಿದೆ:–

**'ತ ಊರ್ಣಾವಭಯೋಭವನ್ । ದ್ವಾವುದಪತತಾಂ ।**

**ತೌ ದಿವ್ಯೌ ಶ್ವಾನೌ ಅಭವತಾಮ್' ॥ (ತೈ.ಬ್ರಾ. ೧,೧,೨)**

ಅಂದರೆ, ಮೇಲಕ್ಕೇರಿದ ಎರಡೂ ದಿವ್ಯ ನಾಯಿಗಳಾದವು.

ಕ್ಷೀರಪಥದ (milkyway) ಇಬ್ಬದಿಗಳಲ್ಲಿ, 'ಮೃಗ' ನಕ್ಷತ್ರಪುಂಜದ ಪೂರ್ವಕ್ಕೆ, 'ಕ್ಯಾನಿಸ್ ಮೇಜರ್' ಮತ್ತು 'ಕ್ಯಾನಿಸ್ ಮೈನರ್' ಎಂಬ ಎರಡು ನಕ್ಷತ್ರಪುಂಜಗಳಿವೆ. ಮೊದಲನೆಯದಾದ 'ಕ್ಯಾನಿಸ್ ಮೇಜರ್' ಗುಂಪಿನಲ್ಲಿ ಗರಿಷ್ಠ ಜಾಜ್ವಲ್ಯಮಾನವಾದ 'ಸಿರಿಯಸ್' (ಲುಬ್ಧಕ, ಮೃಗವ್ಯಾಧ, Alpha Canis Majoris) ಸೇರಿದೆ. ಎರಡನೇ ಗುಂಪಿನಲ್ಲಿ ಪುನರ್ವಸು ನಕ್ಷತ್ರಪುಂಜದ ಎರಡು ದಕ್ಷಿಣದ (southern latitude) ನಕ್ಷತ್ರಗಳು ಇವೆ.

ದಕ್ಷಿಣಾಭಿಮುಖವಾಗಿ ತೆರಳುವಾಗ, ಆ ದಿಕ್ಕನ್ನು ಗುರುತಿಸಲು, ನಾಲ್ಕು ಪ್ರಕಾಶಮಾನವಾದ ಕಣ್ಣುಗಳನ್ನು ಹೊಂದಿರುವ ಎರಡು ನಾಯಿಗಳನ್ನು ಋಗ್ವೇದದಲ್ಲಿ ಉಲ್ಲೇಖಿಸಿದೆ:–

**ಅತಿದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶವಲೌ ಸಾಧುನಾ ಯಥಾ ।**

**(ಋ.ವೇ.X, ೧೪,೧೦–೧೧)**

ಈ ಎರಡು ನಾಯಿಗಳು 'Alpha Canis Majoris' ಮತ್ತು 'Alpha Canis Minoris' ಎಂದು ಗುರುತಿಸಲಾಗಿದೆ. ಈ ಹಿಂದೆ ಹೇಳಿದಂತೆ 'ಆಲ್ಫ ಕ್ಯಾನಿಸ್ ಮೇಜೊರಿಸ್' (ಮಹಾಶ್ವಾನ) ಎಂಬುದು ಗರಿಷ್ಠ ಜಾಜ್ವಲ್ಯಮಾನವಾದ 'ಸಿರಿಯಸ್' (ಲುಬ್ಧಕ) ನಕ್ಷತ್ರದ ಹೆಸರು. ಇನ್ನು ಎರಡನೇ ನಕ್ಷತ್ರ 'ಲಘುಶ್ವಾನ' ಪುಂಜದಲ್ಲಿ ಪ್ರಧಾನ ತಾರೆ 'ಪೂರ್ವಶ್ವಾನ' (ಪ್ರೋಕ್ಯೋನ್, Procyon). ಇದರ ಉಜ್ವಲತಾಂಕ (magnitude) ೦.೩೮. ಅದೇ 'ಲುಬ್ಧಕ'ದ ಉಜ್ವಲತಾಂಕ, –೧.೫೮. ಈಗ ಈ ಎರಡು ಶ್ವಾನ–ನಕ್ಷತ್ರಗಳು ದಕ್ಷಿಣಾಭಿಮುಖವಾಗಿಲ್ಲ. ಆದರೆ ವೇದಗಳ ಕಾಲದಲ್ಲಿ ಅವುಗಳು ದಕ್ಷಿಣ ದಿಕ್ಕನ್ನು ಸೂಚಿಸಿದ್ದು ಅವೆರಡೂ ಒಂದೇ ದಿಕ್ಕಿನಲ್ಲಿದ್ದವೆ? ಹಾಗಿದ್ದಲ್ಲಿ ಸುಮಾರು ಯಾವ ಕಾಲಘಟ್ಟದಲ್ಲಿ ಅದು ಸಾಧ್ಯ?

ಪ್ರೊ॥ ಪಿ. ಸಿ. ಸೇನ್‌ಗುಪ್ತರ ಲೆಕ್ಕಾಚಾರಗಳಂತೆ, ಈ ಶ್ವಾನ ನಕ್ಷತ್ರಗಳೆರಡೂ ದಕ್ಷಿಣಾಭಿಮುಖವಾಗಿ ಒಂದೇ ದಿಕ್ಕಿನಲ್ಲಿದ್ದದ್ದು ಸುಮಾರಾಗಿ ಕ್ರಿ.ಪೂ. ೪೪–೪೬ನೇ ಎರಡು ಶತಮಾನಗಳ ಅವಧಿಯಲ್ಲಿ.

ಇಲ್ಲಿ ನಾವು ಯೋಚಿಸಬೇಕಾದ್ದು ಖಾಗೋಳಿಕ ಲೆಕ್ಕಾಚಾರಗಳಿಂದ ಬಂದಿರುವ ಈ ಕಾಲಘಟ್ಟಗಳು ವೇದಗಳ ಭಾಗಗಳಾದ ಅಂತಹ ಉಲ್ಲೇಖಗಳ ಕಾಲವನ್ನು ಸೂಚಿಸುತ್ತವೆಯೇ? ಹಾಗೆಯೇ, ವೇದಗಳಲ್ಲಿ ಕಂಡುಬರುವ ಅನೇಕ ಖಾಗೋಳಿಕ ಮಹತ್ವದ ಉಲ್ಲೇಖಗಳು ಕ್ರಿ.ಪೂ. ೪೦೦೦ಕ್ಕಿಂತ ಹಿಂದಿನವು ಎಂಬುದು ಗಮನಾರ್ಹ.

(ವೈದಿಕ ಸಾಹಿತ್ಯದಲ್ಲಿ ಆಗಾಗ್ಗೆ ನಮೂದಿಸಲಾಗಿರುವ ಖಗೋಳಶಾಸ್ತ್ರೀಯ ಅಂಶಗಳು ಸ್ವತಃ ಆ ಸಾಹಿತ್ಯದ ಕರ್ತೃಗಳು ವೀಕ್ಷಿಸಿ ದಾಖಲಿಸಿರುವಂಥವೇ ಆಗಿರುವುದಿಲ್ಲ. ಅವರಿಗೂ ಹಿಂದಿನ ವೀಕ್ಷಕರ ನೋಟಗಳು ಸ್ಮೃತಿಯಲ್ಲಿ ಉಳಿದುಬಂದಿದ್ದು, ಅವು ತಮ್ಮ ಕಾಲದ ವೀಕ್ಷಣೆಗಳೋ ಎಂಬಂತೆ ದಾಖಲಾಗಿರುತ್ತವೆ. ಅಂತೆಯೇ ಅವುಗಳ ಸುತ್ತ ಕತೆಗಳನ್ನು ಹೆಣೆಯಲಾಗಿರುತ್ತದೆ. ಹರಪ್ಪ ಸಂಸ್ಕೃತಿಯ ಕಾಲದ ಖಗೋಳ ವೀಕ್ಷಣೆಗಳು ವೈದಿಕ ಸಾಹಿತ್ಯದಲ್ಲಿ ತಮ್ಮ ಕಾಲದ ವೀಕ್ಷಣೆಗಳಂತೆ ಪ್ರಸ್ತಾಪಿಸಲ್ಪಟ್ಟಿರುವುದು ಅದಕ್ಕೆ ಒಂದು ಉದಾಹರಣೆ. ವೈದಿಕ ಸಾಹಿತ್ಯದ ಕಾಲವನ್ನು ಕೇವಲ ಖಗೋಳ ದತ್ತಾಂಶಗಳ ಆಧಾರದಿಂದ ನಿರ್ಧರಿಸಲಾಗದು. ಅದಕ್ಕೆ ಮಾನವಶಾಸ್ತ್ರ, ಭಾಷಾಶಾಸ್ತ್ರ ಮತ್ತು ಉತ್ಖನನಶಾಸ್ತ್ರದ ದತ್ತಾಂಶಗಳು ಮಹತ್ವದ ಸೂಚಕಗಳಾಗಿರುತ್ತವೆಂಬುದು ಗಮನಾರ್ಹ. – ಸಂ.)

**೫. "ಮಾಸಾನಾಂ ಮಾರ್ಗಶೀರ್ಷೋಽಹಂ" – ಶ್ರೀ ಭಗವಾನ್ ಉವಾಚ**

ಶ್ರೀಮದ್ ಭಗವದ್ಗೀತೆಯ 'ವಿಭೂತಿಯೋಗ' (೧೦ನೇ ಅಧ್ಯಾಯ)ದಲ್ಲಿ ಶ್ರೀಕೃಷ್ಣ ಪರಮಾತ್ಮನು "ಮಾಸಾನಾಂ ಮಾರ್ಗಶೀರ್ಷೋಽಹಂ ಋತೂನಾಂ ಕುಸುಮಾಕರಃ॥ (ಶ್ಲೋಕ ೩೫) ಎಂದು ಅಪ್ಪಣೆ ಕೊಟ್ಟಿದ್ದಾನೆ. ಅಂದರೆ, ಹನ್ನೆರಡು ಚಾಂದ್ರಮಾಸಗಳಲ್ಲಿ ಮಾರ್ಗಶಿರ(ಶೀರ್ಷ) ಮಾಸವು ಶ್ರೇಷ್ಠ(ಆದಿ); ಹಾಗೆಯೇ ಆರು ಋತುಗಳಲ್ಲಿ 'ವಸಂತ'(ಕುಸುಮಾಕರ) ಋತುವು ಶ್ರೇಷ್ಠ(ಆದಿ) ಎಂದು. ಈ ಹೇಳಿಕೆಗೆ ವೇದಸಾಹಿತ್ಯದಲ್ಲಿ ಖಾಗೋಳಿಕ ಆಧಾರವನ್ನು ಹುಡುಕೋಣ.

ಯಜುರ್ವೇದ ಸಂಹಿತೆಯಲ್ಲಿ ಪ್ರತಿವರ್ಷವೂ ವಸಂತ ಋತುವಿನೊಂದಿಗೆ ಆರಂಭವಾಗಿದ್ದು ಮೊದಲನೇ ಮಾಸದ ಹೆಸರೇ 'ಮಧು' ಎಂದು. ಆದರೆ, 'ವೇದಾಂಗ ಜ್ಯೋತಿಷ'ದ ಕಾಲದಲ್ಲಿ (ಸುಮಾರು ಕ್ರಿ.ಪೂ. ೧೨ನೇ ಶತಮಾನ) ವರ್ಷವು 'ಉತ್ತರಾಯಣ'ದೊಂದಿಗೆ (winter solstice, ಸುಮಾರು ಡಿಸೆಂಬರ್ ೨೨ರ ಹೊತ್ತಿಗೆ) ಆರಂಭಗೊಳ್ಳುತ್ತಿತ್ತು.

ಮುಂದೆ 'ಸೂತ್ರ'ಗಳ ಹಾಗೂ ಮಹಾಭಾರತದ ಕಾಲಘಟ್ಟದಲ್ಲಿ ವರ್ಷವು ವಸಂತ ಋತುವಿನೊಂದಿಗೆ ಆರಂಭವಾಗಿದ್ದು ಆ ಋತುವಿನಲ್ಲಿ ಚೈತ್ರ ಮತ್ತು ವೈಶಾಖ ಮಾಸಗಳಿರುತ್ತಿದ್ದವು. ಈಗಲೂ ಇದೇ ಪದ್ಧತಿ ಜಾರಿಯಲ್ಲಿದೆ. ಮಹಾಭಾರತದಲ್ಲೇ ಎರಡು ಸಂದರ್ಭಗಳಲ್ಲಿ ವರ್ಷವು ಮೃಗಶಿರ ಮಾಸದೊಂದಿಗೆ ಆರಂಭವಾಗುವ ಉಲ್ಲೇಖಗಳಿವೆ. ಮುಂದೆ ಕ್ರಿ.ಶ. ೧೨ನೇ ಶತಮಾನದಲ್ಲೂ ಸಿಂಧ್ ಮತ್ತು ಕೆಲವು ಇತರ ಪ್ರದೇಶಗಳಲ್ಲೂ ಈ ಪದ್ಧತಿ ಜಾರಿಯಲ್ಲಿತ್ತೆಂದು ಆ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ ಪರ್ಶಿಯಾದ ಯಾತ್ರಿಕ ಅಲ್–ಬಿರೂನಿಯ ಕೃತಿಯಿಂದ ಗೊತ್ತಾಗುತ್ತದೆ. 'ಮೃಗಶಿರ' (Lambda Orionis) ನಕ್ಷತ್ರಕ್ಕೆ 'ಅಗ್ರಹಾಯಣೀ' ಎಂದು ಹೆಸರು. ಇಲ್ಲಿ 'ಅಗ್ರ' ಎಂದರೆ ಮುಂಭಾಗ ಮತ್ತು 'ಹಾಯನ' ಎಂದರೆ ವರ್ಷ.

ವರ್ಷವು ವಸಂತ ಋತುವಿನಿಂದ ಆರಂಭಗೊಳ್ಳುತ್ತಿದ್ದ ಪದ್ಧತಿಯಲ್ಲಿ ವಸಂತವಿಷುವ (ಮಹಾವಿಷುವ, Vernal equinox) ಯಾವ ಯೋಗತಾರೆಯೊಂದಿಗೆ ಇರುತ್ತಿತ್ತೋ, ಆ ನಕ್ಷತ್ರದ (ಹುಣ್ಣಿಮೆಯಂದು, ಪೂರ್ಣಿಮಾಂತ) ಮಾಸದಿಂದ ವರ್ಷವು ಆರಂಭಗೊಳ್ಳುತ್ತಿತ್ತು. ಅಂದರೆ ವೇದಗಳ ಕಾಲದಲ್ಲಿ ವಸಂತ ವಿಷುವವು ಮೃಗಶಿರ ಯೋಗತಾರೆಯೊಂದಿಗೆ ಇರುತ್ತಿತ್ತು. ಖಗೋಳ–ಗಣಿತದ ಲೆಕ್ಕಾಚಾರಗಳ ಪ್ರಕಾರ ಇದು ಸುಮಾರು ಕ್ರಿ.ಪೂ.೪೧–೪೨ ಶತಮಾನದ ಕಾಲಘಟ್ಟ. ಮುಂದೆ, ಸುಮಾರು ಎರಡು ಸಾವಿರದ ವರ್ಷಗಳ ಅನಂತರ ವಸಂತ ವಿಷುವವು ತನ್ನ ಹಿಂಚಲನೆಯಲ್ಲಿ 'ಕೃತ್ತಿಕಾ' ಯೋಗತಾರೆಯತ್ತ (Alcyone, Eta Tauri) ಸರಿಯಿತು. ಆಗ ವರ್ಷವು ಕಾರ್ತಿಕಮಾಸದೊಂದಿಗೆ ಆರಂಭವಾಗುತ್ತಿತ್ತು.

ಮಾರ್ಗಶಿರ ನಕ್ಷತ್ರಕ್ಕೆ 'ಅಗ್ರಹಾಯಣ' (ಅಗ್ರಹಾಯಣೀ) ಎಂಬುದನ್ನು ಸಮಾನಪದವಾಗಿ ಬಳಸಿರುವುದನ್ನು 'ಅಮರಕೋಶ'ದಲ್ಲಿ ಹಾಗೂ ಪಾಣಿನಿಯ ವ್ಯಾಕರಣ ಸೂತ್ರಗಳಲ್ಲಿ ಕಾಣುತ್ತೇವೆ. ಪ್ರಖ್ಯಾತ ಖಗೋಳ ವಿಜ್ಞಾನತಜ್ಞರಾಗಿದ್ದ ಲೋಕಮಾನ್ಯ ಬಾಲಗಂಗಾಧರ ತಿಲಕ್‌ರ **'ಒರಾಯನ್ (Orion)'** ಎಂಬ ಪ್ರಸಿದ್ಧ ಗ್ರಂಥದಲ್ಲಿ ತೋರಿಸಿರುವಂತೆ, 'ಪುನರ್ವಸು' (Pollux, Alpha Germinorum) ಯೋಗತಾರೆಯೊಂದಿಗೆ ವಸಂತ ವಿಷುವವು ಇದ್ದ ವಿರಳವಾದ ಉಲ್ಲೇಖಗಳು ವೇದಗಳಲ್ಲಿ ಕಂಡುಬರುತ್ತವೆ. ಇದರ ಸಾಧ್ಯತೆ ಸುಮಾರು ಕ್ರಿ. ಪೂ. ೬೦೦೦ದ ಕಾಲಘಟ್ಟಕ್ಕೆ ಸೇರುತ್ತದೆ. ಅಷ್ಟೇ ಅಲ್ಲದೆ, 'ಸಂವತ್ಸರ ಸತ್ರ' ಎಂಬ ವಾರ್ಷಿಕ ಯಜ್ಞವನ್ನು ವಿವರಿಸುತ್ತ ತಿಲಕ್ ಅವರು ಆ ಕಾಲದಲ್ಲಿ ದಕ್ಷಿಣಾಯನವು (winter solstice) ಚಿತ್ರಾ ಪೌರ್ಣಿಮೆಯಂದು ಸಂಭವಿಸುತ್ತಿತ್ತು ಎಂದು ತೋರಿಸಿದ್ದಾರೆ. ದಕ್ಷಿಣಾಯನವು ಚಿತ್ರಾನಕ್ಷತ್ರದಲ್ಲಿ ಸಂಭವಿಸಿದರೆ, ವಸಂತ ವಿಷುವವು ಮೃಗಶಿರ ನಕ್ಷತ್ರದಲ್ಲಿ ಉಂಟಾಗಬೇಕು.

**೬. ಯೋಗತಾರೆಯಲ್ಲಿ ವಸಂತ ವಿಷುವ**

ಈ ಮೇಲೆ ವಿವರಿಸಿದಂತೆ ಸಾವಿರಾರು ವರ್ಷಗಳ ಅಂತರಗಳಲ್ಲಿ ವಸಂತ ವಿಷುವವು (Vernal equinox) ತನ್ನ ಹಿಂಚಲನೆಯಲ್ಲಿ (precession) ಬೇರೆ ಬೇರೆ ಯೋಗನಕ್ಷತ್ರಗಳ ದಿಕ್ಕಿನಲ್ಲಿ ಇರುತ್ತದೆ. ವೇದಸಾಹಿತ್ಯದಲ್ಲಿ ಮೃಗಶಿರ, ರೋಹಿಣೀ... ಹೀಗೆ ವಸಂತ ವಿಷುವದ ಸ್ಥಾನಗಳ ಉಲ್ಲೇಖಗಳು ನೇರವಾಗಿ ಇಲ್ಲವೇ ರೂಪಕಗಳ (metaphor) ಮೂಲಕ ಸಿಗುತ್ತವೆ. ಮುಂದಿನ ಕೋಷ್ಟಕ ೧ರಲ್ಲಿ ಸುಮಾರು ಯಾವ ಯಾವ ವರ್ಷಗಳ ಆಸುಪಾಸಿನಲ್ಲಿ ಯಾವ ಯೋಗ ತಾರೆಯರಲ್ಲಿ ವಸಂತವಿಷುವವು ಉಪಸ್ಥಿತವಾಗಿತ್ತು ಎಂಬುದನ್ನು ತೋರಿಸಿದೆ.

**ಕೋಷ್ಟಕ ೧ : ಯೋಗತಾರೆಯರಲ್ಲಿ ವಸಂತ ವಿಷುವ**

| ಯೋಗತಾರೆ | ಆಧುನಿಕ ಹೆಸರು | ನಿರಯಣ ಸ್ಥಾನಾಂಶ | ಕಾಲಘಟ್ಟ |
|---|---|---|---|
| ಮೃಗಶಿರ | ಲ್ಯಾಮ್ಡಾ ಒರಾಯನಿಸ್ | ೫೯° ೫೦' ೫೯ " | ಕ್ರಿ.ಪೂ.೪೧೬೦ |
| ರೋಹಿಣೀ | ಅಲ್‌ಡಿಬರಾನ್ | ೪೫° ೫೫' ೫೬ " | ಕ್ರಿ.ಪೂ.೩೧೦೮ |
| ಕೃತ್ತಿಕಾ | ಅಲ್‌ಕ್ಯೋನ್ | ೩೫° ೦೮' ೦೬ " | ಕ್ರಿ.ಪೂ. ೨೩೭೯ |
| ಭರಣೀ | ೪೧ ಎರ್‍ರೈಟಿಸ್ | ೨೪° ೨೦' ೪೪ " | ಕ್ರಿ.ಪೂ.೧೫೦೪ |
| ಅಶ್ವಿನೀ | ಬೀಟಾ ಎರ್‍ರೈಟಿಸ್ | ೧೦° ೦೬' ೪೩ " | ಕ್ರಿ.ಪೂ. ೪೫೭ |
| ರೇವತೀ | ಜ಼ೀಟಾ ಪಿಸ್ಸಿಯಮ್ | ೩೫೧° ೦೧' ೧೭" | ಕ್ರಿ.ಶ. ೫೭೮ |

'ಯೋಗತಾರೆ' ಎಂದರೇನು? ಭಚಕ್ರವನ್ನು ೨೭ ನಕ್ಷತ್ರಗಳನ್ನಾಗಿ ವಿಭಜಿಸಿ ಒಂದೊಂದು ನಕ್ಷತ್ರದ ಕೋನೀಯ ವಿಸ್ತಾರ (angular range) ೧೩° ೨೦' ಆಗಿದೆ. ಇಲ್ಲಿ 'ನಕ್ಷತ್ರ' ಎಂದರೆ ಒಂದು ಬಿಡಿನಕ್ಷತ್ರವಾಗಿರದೆ, ೧೩° ೨೦' ಕೋನೀಯ ವಿಸ್ತಾರದಲ್ಲಿರುವ ನಕ್ಷತ್ರಗಳ ಪುಂಜ. ಆ ನಕ್ಷತ್ರಪುಂಜದಲ್ಲಿ ಸುಲಭವಾಗಿ ಗುರುತಿಸಬಹುದಾದ ಅತಿ ಹೆಚ್ಚು ಪ್ರಕಾಶಮಾನವಾದ ಒಂದು ಬಿಡಿನಕ್ಷತ್ರವನ್ನು 'ಯೋಗತಾರೆ' ಎಂದು ಕರೆದರು. ಉದಾಹರಣೆಗೆ, ಶ್ರೀಕೃಷ್ಣ ಜಯಂತಿಯನ್ನು ಪ್ರತಿವರ್ಷ ಶ್ರಾವಣ ಮಾಸದ ರೋಹಿಣೀ ನಕ್ಷತ್ರದ ದಿನದಂದು ಆಚರಿಸುವುದು ವಿಶೇಷವಾಗಿ ಶ್ರೀವೈಷ್ಣವರಲ್ಲಿ ಪದ್ಧತಿ. ೨೦೧೫ರಲ್ಲಿ ಈ ನಕ್ಷತ್ರದಿನವು, ಭಾರತ ಸರಕಾರದ 'ರಾಷ್ಟ್ರೀಯ ಪಂಚಾಂಗ'ದ ಪ್ರಕಾರ ಸೆಪ್ಟೆಂಬರ್ ೪–೫ರ ಮಧ್ಯರಾತ್ರಿ ೦ ಗಂ. ೨೪ ನಿ.ದಿಂದ ಸೆಪ್ಟೆಂಬರ್ ೫–೬ರ ಮಧ್ಯರಾತ್ರಿ ೦ ಗಂ. ೧೦ ನಿ.ವರೆಗೆ ಇರುತ್ತದೆ. ಈ ಕಾಲಾವಧಿಯಲ್ಲಿ (ಸ್ಫುಟ) ಚಂದ್ರನು ೧೩° ೨೦' ಅಷ್ಟು ಚಲಿಸಿರುತ್ತಾನೆ. ಈ ರೋಹಿಣೀ ನಕ್ಷತ್ರಪುಂಜದಲ್ಲಿ ರೋಹಿಣೀ 'ಯೋಗತಾರೆ'ಯ (Aldebaran, Alpha Tauri) ಸಾಯನ ಸ್ಥಾನಾಂಶ (tropical longitude) ೬೯°೫೯'೦೬". 'ರಾಷ್ಟ್ರೀಯ ಪಂಚಾಂಗ'ದ ಪ್ರಕಾರ ೨೦೧೫ರ ಜನವರಿ ೧ರಂದು ಮಧ್ಯಮ (mean) 'ಅಯನಾಂಶ' ೨೪°೦೩'೧೦". ಇದನ್ನು ರೋಹಿಣೀ ಯೋಗನಕ್ಷತ್ರದ ಸಾಯನ ಸ್ಥಾನಾಂಶ

(ಭೋಗಾಂಶ)ದಲ್ಲಿ ಕಳೆದಾಗ ಬರುವ ‘ನಿರಯಣ’ (sidereal) ಸ್ಥಾನಾಂಶ : ೬೯°೫೯'೦೬" – ೨೪°೦೩'೧೦" = ೪೫°೫೫'೫೬". ಈ ನಕ್ಷತ್ರವು ಸುಲಭವಾಗಿ ಕಣ್ಣಿಗೆ ಗೋಚರವಾಗಿದ್ದು ಅದರ ಪ್ರಕಾಶಾಂಶ(ಉಜ್ವಲತಾಂಶ, magnitude) ೦.೮೫. ರೋಹಿಣೀ ನಕ್ಷತ್ರಪುಂಜದ ಕೋನವಿಸ್ತಾರ ೪೦° ಇಂದ ೫೩°೨೦'ರವರೆಗೆ. ಈ ಕೋನವಿಸ್ತಾರದಲ್ಲಿ ರೋಹಿಣೀ ಯೋಗತಾರೆಯು (೪೫°೫೫'೫೬") ಉಪಸ್ಥಿತವಾಗಿದೆ.

ಕೋಷ್ಟಕ ೧ರಲ್ಲಿ ವಸಂತ ವಿಷುವವು ಸಮೀಪಿಸಿದಂತಹ ಕೆಲವು ಯೋಗ ತಾರೆಗಳು, ಅವುಗಳ ಆಧುನಿಕ (ಪಾಶ್ಚಾತ್ಯ) ಹೆಸರುಗಳು ಹಾಗೂ ನಿರಯಣ ಸ್ಥಾನಾಂಶಗಳನ್ನು *Indian Astronomical Ephemeris* ಪ್ರಕಾರ ತೋರಿಸಿದೆ.

ಟಿಪ್ಪಣಿ: (೧) ಧನಿಷ್ಠಾ(ಬೀಟಾ ಡೆಲ್ಫಿನಿ) ಯೋಗತಾರೆಯಲ್ಲಿ ಉತ್ತರಾಯಣ ಬಿಂದು (winter solstice) ಇದ್ದಿದ್ದು ಸುಮಾರು ಕ್ರಿ.ಪೂ. ೧೩೬೦ರಲ್ಲಿ. ಆ ಕಾಲಘಟ್ಟದಲ್ಲಿ ವರ್ಷಾರಂಭವು ಉತ್ತರಾಯಣದಿಂದ ಆರಂಭಗೊಳ್ಳುತ್ತಿತ್ತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. (೨) ‘ಆರ್ಯಭಟೀಯ’ ಕೃತಿಯ ಶತಮಾನದಲ್ಲಿ ವಸಂತವಿಷುವವು ರೇವತೀ(ಜ಼ೀಟಾ ಪಿಸ್ಸಿಯಮ್) ಯೋಗತಾರೆಯಲ್ಲಿತ್ತು ಎಂಬುದು ಗಮನಾರ್ಹ.

**೭. ಸಪ್ತರ್ಷಿಗಳ ನಕ್ಷತ್ರಗಮನ**

ಭಾರತೀಯ ಖಗೋಳಶಾಸ್ತ್ರದ ಇತಿಹಾಸದಲ್ಲಿ ಆಧುನಿಕ ಸಂಶೋಧಕರಿಂದ ಬಹಳಷ್ಟು ವಿಮರ್ಶೆಗೆ ಒಳಗಾದ ಒಂದು ವಿಷಯವೆಂದರೆ ಸಪ್ತರ್ಷಿಮಂಡಲದ ಚಲನೆ! ಎಲ್ಲರಿಗೂ ತಿಳಿದಂತೆ ಗ್ರಹಗಳು ಅವುಗಳ ವೈಯಕ್ತಿಕ ವೇಗಗಳಿಂದ ಚಲಿಸುತ್ತವೆ. ಆದರೆ ನಕ್ಷತ್ರಗಳು ಸ್ಥಿರವಾಗಿರುತ್ತವೆ. ಇಂದಿನ ಖಗೋಳವಿಜ್ಞಾನದಲ್ಲಿ ತಿಳಿದುಬಂದಿರುವಂತೆ ಪ್ರತಿನಕ್ಷತ್ರಕ್ಕೂ ಅದರದೇ ಆದ ಚಲನವೇಗ (proper motion) ಇರುತ್ತದೆ. ಆದರೆ ಈ ನಕ್ಷತ್ರಗತಿಯ ವೇಗವು ಬಹಳ ಅಲ್ಪವಾಗಿದ್ದು ಒಂದು ಶತಮಾನದ ಅವಧಿಯಲ್ಲಿ ಆ ಚಲನೆಯು ಕೇವಲ ಕೆಲವು ‘ಕಲೆ’ಗಳು (arc-minutes). ಆ ದೃಷ್ಟಿಯಲ್ಲಿ ಇತರ ನಕ್ಷತ್ರಪುಂಜಗಳ ಮಧ್ಯೆ ‘ಸಪ್ತರ್ಷಿ ಮಂಡಲ’ಕ್ಕೆ ಹೇಳಿಕೊಳ್ಳುವಂತಹ ಚಲನೆ ಇರುವುದಿಲ್ಲ. ಆದರೆ ಪ್ರಾಚೀನ ಕೃತಿಗಳಲ್ಲಿ ಒಂದೊಂದು ನಕ್ಷತ್ರದಲ್ಲೂ ಸಪ್ತರ್ಷಿಗಳು ೧೦೦ ವರ್ಷಗಳಷ್ಟು ಕಾಲ ವಾಸಮಾಡುತ್ತಾರೆ ಎಂಬ ಹೇಳಿಕೆಯಿದೆ. ನಮಗೆ ಪರಿಚಿತವಾಗಿರುವ ೨೭ ನಕ್ಷತ್ರಗಳಲ್ಲಿ ಒಂದೊಂದರ ಕೋನಾವಧಿ (angular extent) ೧೩°೨೦'. ಈ ಕೋನಾವಧಿಯನ್ನು ಕ್ರಮಿಸಲು ಸಪ್ತರ್ಷಿಗಳು ೧೦೦ ವರ್ಷಗಳು ತೆಗೆದುಕೊಂಡರೆ ಅವುಗಳ ವಾರ್ಷಿಕವೇಗ (೧೩°೨೦'/೧೦೦)=೮೦೦'/೧೦೦=೮ಕಲೆಗಳು, ಅಂದರೆ ೪೮೦ವಿಕಲೆಗಳು (arc-seconds). ವಿಷುವಗಳ ಹಿಂಚಲನೆಯ (precession of the equinoxes) ವಾರ್ಷಿಕ ವೇಗ ಈಗ ಸರಾಸರಿ ೫೦.೨೬ವಿಕಲೆಗಳು (arc-seconds). ಆದ್ದರಿಂದ ಸಪ್ತರ್ಷಿಗಳ ‘ಚಲನೆ’ಯ ವಾರ್ಷಿಕ ವೇಗ ವಿಷುವಗಳ ಹಿಂಚಲನೆಗೆ ನೇರವಾಗಿ ಸಂಬಂಧಿಸಿದ್ದಲ್ಲ.

ಅಷ್ಟಕ್ಕೂ ಯಾರು ಈ ಸಪ್ತರ್ಷಿಗಳು? **ವಿಷ್ಣುಪುರಾಣ** ಮುಂತಾದವುಗಳಲ್ಲಿ ಉಲ್ಲೇಖಿಸಿರುವಂತೆ ಅವರ ಹೆಸರುಗಳು – ಕ್ರತು, ಪುಲಹ,... ಮರೀಚಿ. ಇವು ಸಪ್ತರ್ಷಿಮಂಡಲದ ಏಳು ಪ್ರಕಾಶಮಾನವಾದ ನಕ್ಷತ್ರಗಳಾಗಿದ್ದು, ಆಧುನಿಕ ಖಗೋಳ ವಿಜ್ಞಾನದಲ್ಲಿ ‘the Great Bear’ ಎಂಬ ನಕ್ಷತ್ರ ಪುಂಜದ ದುಭೆ, ಮೆರಕ್,... ಅಲ್‌ಕೈದ್ ಎಂದು ಕ್ರಮವಾಗಿ ಗುರುತಿಸಲಾಗಿದೆ (ಕೋಷ್ಟಕ ೨ಅನ್ನು ನೋಡಿ).



*ಚಿತ್ರ ೪ : ಸಪ್ತರ್ಷಿ ಮಂಡಲ (The Great Bear, Big Dipper)*

**ಕೋಷ್ಟಕ ೨: ಸಪ್ತರ್ಷಿ ಮಂಡಲ**

| ಭಾರತೀಯ ಹೆಸರು | ಆಧುನಿಕ ಹೆಸರು | ಪ್ರಕಾಶಮಾನಾಂಕ (ಸುಮಾರು) |
|---|---|---|
| ಕ್ರತು | ದುಭೆ | ೧.೭೯ |
| ಪುಲಹ | ಮೆರಕ್ | ೨.೩೭ |
| ಪುಲಸ್ತ್ಯ | ಫೆಕ್‌ಡ | ೨.೪೪ |
| ಅತ್ರಿ | ಮೆಗ್ರೇಜ಼್ | ೩.೩೧ |
| ಅಂಗೀರಸ | ಅಲಿಯೊತ್ | ೧.೭೭ |
| ವಸಿಷ್ಠ | ಮಿಜ಼ಾರ್ | ೨.೨೭ |
| ಮರೀಚಿ | ಅಲ್‌ಕೈದ್ | ೧.೮೬ |

ಮೇಲಿನ ಕೋಷ್ಟಕದಲ್ಲಿ ಬಲಕೊನೆಯಲ್ಲಿ ಪ್ರತಿನಕ್ಷತ್ರದ ಪ್ರಕಾಶಮಾನಾಂಕ (ಉಜ್ವಲತಾಂಕ)ವನ್ನು ಕೊಟ್ಟಿದೆ. ಈ ಅಂಕವು ಕಡಿಮೆ ಬೆಲೆ ಇದ್ದಷ್ಟೂ ನಕ್ಷತ್ರ ಹೆಚ್ಚು ಉಜ್ವಲವಾಗಿ ಕಾಣಿಸುತ್ತದೆ ಮತ್ತು ಅದನ್ನು ಗುರುತಿಸಲು ಸುಲಭ. ಈ ನಕ್ಷತ್ರ ಪುಂಜವನ್ನು ಚಿತ್ರ ೪–೫ರಲ್ಲಿ ತೋರಿಸಿದೆ. ಚಿತ್ರ ೬ರಲ್ಲಿ ಪುಲಹ–ಕ್ರತು ನಕ್ಷತ್ರಗಳು ಸೇರಿಸುವ ರೇಖೆಯನ್ನು ಉತ್ತರದ ತಗ್ಗಿಗೆ ವಿಸ್ತರಿಸಿದಾಗ ಅದು ಧ್ರುವ ನಕ್ಷತ್ರವನ್ನು (Polaris) ತಲುಪುತ್ತದೆ. ಅಂದರೆ, ಉತ್ತರ ದಿಕ್ಕನ್ನು ತೋರಿಸುತ್ತದೆ. ಇನ್ನು **ವಸಿಷ್ಠ**ತಾರೆಗೆ ಸಂಗಾತಿ ತಾರೆಯೇ ‘ಅರುಂಧತೀ’ (Alcor) ನಕ್ಷತ್ರ.


*ಚಿತ್ರ ೫ : ಸಪ್ತರ್ಷಿ ಮಂಡಲ (The Great Bear)*

ಪುರಾಣಗಳಲ್ಲಿ ಹಾಗೂ ರಾಮಾಯಣ – ಮಹಾಭಾರತಗಳಲ್ಲಿ ಬಹಳಷ್ಟು ಗ್ರಹಗತಿಗಳು ಮುಂತಾದ ಖಾಗೋಳಿಕ ಉಲ್ಲೇಖಗಳು ಬರುತ್ತವೆ. ಆದರೆ ಅವುಗಳಲ್ಲಿ ಕೆಲವು ಪ್ರಕ್ಷಿಪ್ತವೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಹಾಗಿದ್ದರೂ ಅಂತಹ ಘಟನೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಲು ಸಾಧ್ಯವಿದೆ.



*ಚಿತ್ರ ೬ : ಸಪ್ತರ್ಷಿಗಳು*

[ಆಧಾರ : **‘ವೇದಿಕ್ ಮ್ಯಾಥಮ್ಯಾಟಿಕ್ಸ್ ಮತ್ತು ವೇದಗಳಲ್ಲಿ ವಿಜ್ಞಾನ’**, ಡಾ॥ ಎಸ್.ಬಾಲಚಂದ್ರ ರಾವ್ (ಪ್ರಕಟಣೆಯಲ್ಲಿದೆ)]

**ಡಾ॥ ಎಸ್. ಬಾಲಚಂದ್ರ ರಾವ್**
ಗೌರವ ನಿರ್ದೇಶಕರು
ಭವನದ ಗಾಂಧೀಕೇಂದ್ರ, ಬೆಂಗಳೂರು – ೫೬೦ ೦೦೧



ಡಾ|| ರಂಗಾರೆಡ್ಡಿ ಕೋಡಿರಾಂಪುರ

# ಬುದ್ಧ ಮತ್ತು ಬಸವಣ್ಣ ತೌಲನಿಕ ತಾತ್ವಿಕತೆ

ಕ್ರಿಸ್ತಪೂರ್ವ ಆರನೇ ಶತಮಾನದಲ್ಲಿ ಬದುಕಿದ್ದ ಗೌತಮ ಬುದ್ಧ ಮತ್ತು ಕ್ರಿಸ್ತಶಕ ಹನ್ನೆರಡನೇ ಶತಮಾನದಲ್ಲಿ ಬದುಕಿದ್ದ ಬಸವಣ್ಣ ಇಬ್ಬರೂ ಸಮಾಜೋಧಾರ್ಮಿಕ ಆಂದೋಲನದ ಪ್ರಮುಖ ನೇತಾರರು. ಗೌತಮ ಬುದ್ಧರ ಸಾಮಾಜಿಕ ಮತ್ತು ಧಾರ್ಮಿಕ ಚಿಂತನೆಗಳು ಪಾಲಿ ಭಾಷೆಯಲ್ಲಿ ಪ್ರಕಟಗೊಂಡರೆ ಬಸವಣ್ಣನವರ ಸಮಾಜೋಧಾರ್ಮಿಕ ಚಿಂತನೆಗಳು ಕನ್ನಡದಲ್ಲಿ ಪ್ರಕಟಗೊಂಡವು. ಪಾಲಿ ಮತ್ತು ಕನ್ನಡ ಎರಡೂ ಜನಭಾಷೆಗಳು; ದುಡಿಯುವ ವರ್ಗದ ಅಭಿವ್ಯಕ್ತಿ ಮಾಧ್ಯಮಗಳು. ಇಂಥ ಸಾಮಾನ್ಯವಾದ ಜನಭಾಷೆಗಳಲ್ಲೂ ಅತ್ಯಂತ ಉನ್ನತವಾದ ಆಧ್ಯಾತ್ಮಿಕ ಮತ್ತು ಧಾರ್ಮಿಕ ವಿಚಾರಗಳನ್ನು ಹೇಳಬಹುದು ಎಂದು ಈ ಇಬ್ಬರು ಮಹಾನ್ ನೇತಾರರು ಪ್ರಾಯೋಗಿಕವಾಗಿ ತೋರಿಸಿಕೊಟ್ಟರು. ಇಂಥ ಪ್ರಯೋಗ ಈ ನೇತಾರರು ಬದುಕಿದ್ದ ಕಾಲಘಟ್ಟದ ಪುರೋಹಿತಶಾಹಿ, ಆಡಳಿತಶಾಹಿ, ಪುರುಷಶಾಹಿ ಹಿತಾಸಕ್ತಿಗಳಿಗೆ ನುಂಗಲಾರದ ತುತ್ತಾಗಿತ್ತು.

ಸಮಾಜದಲ್ಲಿ ಅನಾಚಾರ, ಮೌಢ್ಯ, ಕಂದಾಚಾರ ಮತ್ತು ಅಮಾನವೀಯ ಅಂಶಗಳು ಇರಲೇಬೇಕು ಎಂಬುದು ರಾಜಕೀಯ, ಧಾರ್ಮಿಕ, ಆರ್ಥಿಕ ಪ್ರಾಬಲ್ಯವಿರುವ ಜನ ಬಯಸುತ್ತಾರೆ. ಯಾಕೆಂದರೆ ದುಡಿಯುವ ವರ್ಗದ ಬಹುಪಾಲು ಜನರಿಗೆ ತಿಳುವಳಿಕೆ ಬಂದರೆ, ತಮ್ಮ ದುಡಿಮೆಯ ಫಲ ಯಾರಿಗೆ ದಕ್ಕುತ್ತಿದೆ ಎಂಬುದು ಗೊತ್ತಾಗಿಬಿಡುವುದರಿಂದ ಪ್ರಶ್ನೆ ಮಾಡುತ್ತಾರೆ. ಪ್ರಶ್ನೆ ಮಾಡಿದಾಗ ನಯವಂಚನೆ ಬಯಲಿಗೆ ಬರುತ್ತದೆ. ಆಗ ದುಡಿಯದೆ ಉಣ್ಣುವ ಸುಖಕ್ಕೆ ಧಕ್ಕೆ ಬರುತ್ತದೆ ಎಂಬ ಕಾರಣಕ್ಕೆ ಪುರೋಹಿತಶಾಹಿ ವರ್ಗದವರು, ಪ್ರಭುತ್ವಶಾಹಿ ವರ್ಗದೊಂದಿಗೆ ಸೇರಿ ದುಡಿಯುವ ಬಹುಸಂಖ್ಯಾತರನ್ನು ಕತ್ತಲಲ್ಲೇ ಇಡುವಂಥ ವ್ಯವಸ್ಥೆಯನ್ನು ರೂಪಿಸುತ್ತಾರೆ. ಕಾಣದಿರುವ ದೇವರು ಮತ್ತು ಧರ್ಮವನ್ನು ತಾವು ರೂಪಿಸಿರುವ ವಂಚನೆಯ ಜಾಲಕ್ಕೆ ಸಾಧನವನ್ನಾಗಿ, ಬೆಂಬಲವಾಗಿ ಬಳಸುತ್ತಾರೆ.



ಬುದ್ಧ ಬಸವರಿಬ್ಬರೂ ಮನುಷ್ಯರ ಬಗ್ಗೆಯೇ ಮಾತನಾಡಿದ್ದಾರೆ. ಅವರ ಮಾತು – ಕೃತಿಗಳಲ್ಲಿ ಒಂದು ತಾಯ್ತನದ ಸಂವೇದನೆಯಿದೆ. ಮನುಷ್ಯರ ಶೀಲ, ಸಮಾಧಿ, ಪ್ರಜ್ಞೆಗಳ ಬಗ್ಗೆ ಇಬ್ಬರೂ ಗಮನ ಕೊಟ್ಟಿದ್ದಾರೆ. ಬುದ್ಧ ಹೇಳಿದ ಪಂಚಶೀಲ ತತ್ವಗಳಲ್ಲಿ ಕಾಣುವಂಥ ನೈತಿಕತೆಯನ್ನೇ ಬಸವಣ್ಣನವರ ಅಂತರಂಗ ಮತ್ತು ಬಹಿರಂಗ ಶುದ್ಧಿಯ ವಚನದಲ್ಲೂ ಕಾಣುತ್ತೇವೆ.

ಅರ್ಥವಾಗದ ಭಾಷೆಯಲ್ಲಿ ದೇವರು 'ಹೇಳಿದ್ದೇ ಹೀಗಿದೆ' ಎಂದು ನಂಬಿಸುತ್ತಾರೆ. ಆಗ ಸಾಮಾನ್ಯ ದುಡಿಯುವ ವರ್ಗದ ಜನ ದೇವರ ವಿಚಾರಕ್ಕೆ ಮತ್ತು ಪ್ರಭುತ್ವಶಾಹಿಯ ಭಯಕ್ಕೆ ಪುರೋಹಿತಶಾಹಿ ವರ್ಗ ಹೇಳಿದಂತೆ ಕೇಳುತ್ತಾರೆ; ತಾವು ದುಡಿದದ್ದನ್ನು ಈ ಎರಡು ಶೋಷಕ ಪ್ರಾಬಲ್ಯದ ವರ್ಗಗಳಿಗೆ ಅರ್ಪಿಸಿ ಆರಾಧಿಸುತ್ತಾರೆ. ಇದು ಚರಿತ್ರೆಯ ತುಂಬ ಅನೂಚಾನವಾಗಿ ನಡೆದುಕೊಂಡು ಬಂದಿರುವ ದುರಂತದ ಕಥೆಯಾಗಿದೆ.

ಇಂಥ ಚಾರಿತ್ರಿಕ ಮೋಸ, ವಂಚನೆ, ಅನ್ಯಾಯಗಳನ್ನು ಕಂಡು ಕ್ರಿ. ಪೂ. ಆರನೇ ಶತಮಾನದಲ್ಲಿದ್ದ ಬುದ್ಧ ಪ್ರತಿಭಟಿಸಿದ. ಸಾಮಾನ್ಯ ಜನರಿಗೆ ಸ್ವರ್ಗ ನರಕಗಳ ಬಗ್ಗೆ, ಹಣೆಬರಹದ ಬಗ್ಗೆ, ಕರ್ಮ ಸಿದ್ಧಾಂತದ ಪೊಳ್ಳುತನದ ಬಗ್ಗೆ ತಿಳುವಳಿಕೆ ಹೇಳಿದ. ತಾನು ಏನು ಸತ್ಯವೆಂದು ಕಂಡುಕೊಂಡಿದ್ದನೋ ಅದನ್ನು ಜನರಿಗೆ ಅವರ ಭಾಷೆಯಲ್ಲೇ ಅರ್ಥವಾಗುವಂತೆ ಹೇಳಿದ. ಜನರಿಗೆ ಇದೆಲ್ಲ ಅರ್ಥವಾದ ಕೂಡಲೇ ಬುದ್ಧ ಮಾರ್ಗಾವಲಂಬಿಗಳಾದರು. ಸಹಜವಾಗಿ ರಾಜಶಾಹಿ ಮತ್ತು ಪುರೋಹಿತಶಾಹಿಗೆ ಇದರಿಂದ ತುಂಬ ತೊಂದರೆಯಾಯಿತು. ಬುದ್ಧನ ವಿರುದ್ಧ ಸಂಚು ರೂಪಿಸಲಾರಂಭಿಸಿದರು.

ಇಂಥದ್ದೇ ಪರಿಸ್ಥಿತಿ ಹನ್ನೆರಡನೇ ಶತಮಾನದಲ್ಲಿದ್ದ ಬಸವಣ್ಣನವರಿಗೂ ಎದುರಾಗಿತ್ತು. ಇವರೂ ಸಾಮಾನ್ಯ ಜನತೆ ರಾಜಶಾಹಿ ಮತ್ತು ಪುರೋಹಿತಶಾಹಿಯಿಂದ ನಲುಗಿಹೋಗುತ್ತಿದ್ದುದನ್ನು ಕಂಡು ಅದನ್ನು ತಪ್ಪಿಸಲು ಧಾರ್ಮಿಕ ವಿಚಾರಗಳನ್ನು ಜನಭಾಷೆಯಲ್ಲೇ ಪ್ರಸ್ತುತಪಡಿಸಿದರು. ಹೀಗಾಗಿ ಬಸವಣ್ಣನವರು ಕಟ್ಟಿದ ಹೊಸ ಧರ್ಮದ ಕಡೆ ಸಾಮಾನ್ಯರು ಆಕರ್ಷಿತರಾದರು. ಅಂದರೆ ಬುದ್ಧ ಮತ್ತು ಬಸವಣ್ಣ ಇಬ್ಬರೂ ಅರ್ಥವಾಗುವ ಜನ ಭಾಷೆಯಲ್ಲೇ ಮಾತನಾಡಿದರು ಎಂಬುದು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ.

ಸಾಮಾನ್ಯ ಜನರ ದುಃಖ ಕಂಡು ತಳಮಳಿಸಿಹೋದ ಬುದ್ಧ ಇದಕ್ಕೆ ಪರಿಹಾರ ಕಂಡುಹಿಡಿಯಲು ಅರಸೊತ್ತಿಗೆಯನ್ನೇ ತ್ಯಜಿಸಿದ. ಆರು ವರ್ಷಗಳ ಕಾಲ ಗಂಗಾನದಿಯ ಸುತ್ತಲಿನ ಪ್ರದೇಶದಲ್ಲೆಲ್ಲಾ ಅಲೆದಾಡಿ, ಪ್ರಸಿದ್ಧ ಧಾರ್ಮಿಕ ಗುರುಗಳ ಬಳಿ ಅಭ್ಯಾಸಮಾಡಿ ಕಠೋರವಾದ ತಪಸ್ಸಿನ ನಿಯಮ ಪಾಲನೆ ಮಾಡಿದ. ಆದರೂ ಆತನಿಗೆ ತೃಪ್ತಿ ಸಿಗಲಿಲ್ಲ. ಆಗ ಈ ಎಲ್ಲಾ ವಿಧಾನ ಬಿಟ್ಟು ತನ್ನದೇ ಹಾದಿ ಹುಡುಕುತ್ತಾ ಹೊರಟ. ಒಂದು ಸಂಜೆ ಮರದ ಕೆಳಗೆ ಕುಳಿತಿರುವ ಸಮಯದಲ್ಲಿ ಬುದ್ಧಗಯಾ ಸ್ಥಳದಲ್ಲಿ ಸಿದ್ಧಾರ್ಥ "ಬೋಧಿಜ್ಞಾನದ" ಸಿದ್ಧಿ ಪಡೆದ. ಅರಳಿಮರದ ಕೆಳಗೆ ಕುಳಿತ ಸಿದ್ಧಾರ್ಥನಿಗೆ ಜ್ಞಾನೋದಯವಾದ ಮೇಲೆ ಆ ಮರವನ್ನು 'ಬೋಧಿವೃಕ್ಷ' ಎಂದು ಕರೆದರು. ಸಿದ್ಧಾರ್ಥ ಇಲ್ಲಿಂದಾಚೆಗೆ 'ಬುದ್ಧ'ನಾಗಿ ಪರಿವರ್ತನೆ ಹೊಂದಿದ.

ಬಸವಣ್ಣ ಹುಟ್ಟುವ ಹೊತ್ತಿಗೆ ಕರ್ನಾಟಕದ ಧಾರ್ಮಿಕ ಕ್ಷೇತ್ರವನ್ನು ಅಗ್ರಹಾರ ಸಂಸ್ಕೃತಿ, ದೇವಾಲಯ ಸಂಸ್ಕೃತಿಗಳು ಆಳುತ್ತಲಿದ್ದವು. ಅಗ್ರಹಾರ ಸಂಸ್ಕೃತಿಯು ಮೂಲತಃ ಧಾರ್ಮಿಕವಾಗಿ ಕರ್ಮನಿಷ್ಠ, ಸಾಮಾಜಿಕವಾಗಿ ವರ್ಣಭೇದ ನಿಷ್ಠ ವಾದುದು. ಹುಟ್ಟುಹೋರಾಟಗಾರನಾದ ಬಸವಣ್ಣ ತನ್ನ ಎಳೆಯ ವಯಸ್ಸಿನಲ್ಲಿಯೇ ಸ್ಥಗಿತ ಮೌಲ್ಯದ ಆ ಅಗ್ರಹಾರ ಸಂಸ್ಕೃತಿಯನ್ನು ತೊರೆದು ಚಲನಶೀಲ ಮೌಲ್ಯದ ದೇವಾಲಯ ಸಂಸ್ಕೃತಿಗೆ ನೆಲೆಯಾದ ಕೂಡಲಸಂಗಮಕ್ಕೆ ಬಂದನು. ಇದು ಬಸವಣ್ಣನ ಜೀವನದಲ್ಲಿ "ಕರ್ಮದಿಂದ ಧರ್ಮಕ್ಕೆ" ದಾಟಿಬಂದ ಘಟ್ಟವಾಗಿದೆ.

ಸಾಮಾನ್ಯವಾಗಿ ಧರ್ಮಸ್ಥಾಪಕರು ಸ್ವತಃ ದೈವಗಳೆಂದೋ ಅಥವಾ ದೈವದ ಅವತಾರಗಳೆಂದೋ ಹೇಳಿಕೊಳ್ಳುತ್ತಾರೆ. ಆದರೆ ತಾನು ಕೇವಲ ಮಾನವ ಮಾತ್ರದವನು ಎಂದು ಬುದ್ಧ ಹೇಳಿಕೊಳ್ಳುತ್ತಾನೆ. ತನ್ನ ಎಲ್ಲಾ ಸಿದ್ಧಿಗಳು, ಸಾಧನೆಗಳು ಮತ್ತು ಜ್ಞಾನ ಗಳಿಕೆಗಳು ಮಾನವ ಶ್ರಮಶಕ್ತಿ ಮತ್ತು ಬುದ್ಧಿಶಕ್ತಿಯಿಂದ ಪಡೆದು ಕೊಂಡದ್ದು ಎಂಬುದನ್ನು ಬುದ್ಧ ಒತ್ತಿ ಹೇಳುತ್ತಾನೆ. 'ಮಾನವ'ನ ಅಸ್ತಿತ್ವದ ಸ್ಥಿತಿ ಬೌದ್ಧ ಧರ್ಮದ ಪ್ರಕಾರ ಅತ್ಯಂತ ಶ್ರೇಷ್ಠವಾದದ್ದು. ಮಾನವ ತನಗೆ ತಾನೇ ಒಡೆಯ, ಬೇರೆ ಯಾವುದೇ ಶಕ್ತಿ ಅಥವಾ ಜೀವಿ ಮಾನವನ ಭವಿಷ್ಯದ ಮೇಲೆ ಆಟವಾಡಲು, ತೀರ್ಮಾನ ಮಾಡಲು ಸಾಧ್ಯವಾಗುವುದಿಲ್ಲ ಎಂಬುದನ್ನು ಖಚಿತವಾಗಿ ಈ ಧರ್ಮ ಪ್ರತಿಪಾದಿಸುತ್ತದೆ. ಬುದ್ಧ ತನ್ನ ಅನುಯಾಯಿಗಳಿಗೆ, "ನಿಮಗೆ ನೀವೇ ರಕ್ಷೆ, ಬೇರೆ ಎಲ್ಲೂ ರಕ್ಷಣೆಗಾಗಿ ಹುಡುಕಬೇಡಿ ಅಥವಾ ಬೇರೆ ಯಾರನ್ನಾದರೂ ಸಹಾಯಕ್ಕಾಗಿ ಕರೆಯಬೇಡಿ" ಎಂದು ಕರೆ ನೀಡಿದ. ಇದಕ್ಕೆ ಸ್ವಲ್ಪ ಭಿನ್ನವಾಗಿ ಬಸವಣ್ಣ ಯೋಚಿಸುತ್ತಾನೆ :

ಎನ್ನ ವಾಮ-ಕ್ಷೇಮ ನಿಮ್ಮದಯ್ಯಾ,
ಎನ್ನ ಹಾನಿ-ವೃದ್ಧಿ ನಿಮ್ಮದಯ್ಯಾ,
ಎನ್ನ ಮಾನಾಪಮಾನವೂ ನಿಮ್ಮದಯ್ಯಾ
ಬಳ್ಳಿಗೆ ಕಾಯಿ ದಿಮಿತ್ತೆ, ಕೂಡಲಸಂಗಮದೇವಾ

(ಬಸವಣ್ಣನವರ ವ.ಸಂ. ೬೦)

ಬಸವಣ್ಣ 'ಕೂಡಲಸಂಗಮದೇವಾ' ಎಂಬ ದೇವರ ಹೆಸರಿನ ಅಂಕಿತದಲ್ಲಿ ತನ್ನ ವಚನಗಳನ್ನು ಸೃಷ್ಟಿಸಿದ್ದಾನೆ. ಇದನ್ನು ಆಸ್ತಿಕರು 'ದೇವರು' ಎಂದು ಭಾವಿಸಿದರೆ, ಆಸ್ತಿಕರಲ್ಲದವರು 'ಅಧ್ಯಾತ್ಮದ ಸಂಕೇತ' ಎಂದು ಭಾವಿಸುತ್ತಾರೆ. ಈ ಸಂಕೇತವನ್ನು ಎದುರಿಗೆ ಇಟ್ಟುಕೊಂಡು ತನ್ನ ಫಿಲಾಸಫಿಯನ್ನು ಬಸವಣ್ಣ ಇದಕ್ಕೆ ನಿವೇದಿಸುತ್ತಾನೆ. ಬುದ್ಧನಲ್ಲಿ ಬಂದಿರುವ ವಿಚಾರಗಳು ಬಸವಣ್ಣನಲ್ಲಿ ಬರದಿರಬಹುದು; ಆದರೆ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಗಳ ಹಿನ್ನೆಲೆಯಲ್ಲಿ ಇಬ್ಬರೂ ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ವೈಯಕ್ತಿಕ ನೆಲೆಯಿಂದ ಸಾಮುದಾಯಿಕ ನೆಲೆಗೆ ಇಬ್ಬರೂ ಏರುತ್ತಾರೆ. ಬಸವಣ್ಣನವರು ಪ್ರಜಾಪ್ರಭುತ್ವ ಮಾದರಿಯ 'ಅನುಭವ ಮಂಟಪ'ದಲ್ಲಿ ಎಲ್ಲಾ ವಚನಕಾರರನ್ನು ವಿಚಾರವಿನಿಮಯಕ್ಕಾಗಿ ಸೇರಿಸಿದರೆ ಬುದ್ಧ "ಬುದ್ಧಂ ಶರಣಂ ಗಚ್ಛಾಮಿ, ಧಮ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ" ಎಂದು ಸಂಘಕ್ಕೆ ಅರ್ಥಾತ್ ಸಮುದಾಯಕ್ಕೆ ಶರಣು ಎಂದು ಹೇಳಿ ಧರ್ಮಕ್ಕಿಂತಲೂ ಹೆಚ್ಚಿನ ಸ್ಥಾನ ಕೊಟ್ಟಿದ್ದಾರೆ.

ಬಸವಣ್ಣನವರ 'ಅನುಭವ ಮಂಟಪ', ಬುದ್ಧ ಭಗವಾನರ 'ಭಿಕ್ಕು ಸಂಘ' ವ್ಯಕ್ತಿಗಿಂತ ಸಮಾಜ ದೊಡ್ಡದು ಎಂಬುದನ್ನು ಪ್ರತಿಪಾದಿಸುತ್ತವೆ. ಈ ಸಾಂಘಿಕ ಕೇಂದ್ರಗಳಲ್ಲಿ ಹಲವಾರು ಜನ ಸೇರುವುದರಿಂದ ಹಲವಾರು ಅಭಿಪ್ರಾಯಗಳು ವಿನಿಮಯವಾಗುತ್ತವೆ. "ಒಬ್ಬರಿಗಿಂತ ಇಬ್ಬರು ಲೇಸು" ಎಂಬ ಕನ್ನಡದ ಗಾದೆ ಹುಟ್ಟಿಕೊಂಡಿರುವುದೇ ಈ ಅರ್ಥದಲ್ಲಿ. ಇಂಥ ಕಡೆ ಮಾತು ಮಾತು ಮಥಿಸಿ ಅನುಭವದ ನವನೀತ (ಬೆಣ್ಣೆ) ಮೂಡಿಬರುತ್ತದೆ. ಸಮಾಜದಿಂದ ಪಡೆದ ಅನುಭವ ದ್ರವ್ಯವನ್ನು ಒಂದು ಆಕೃತಿಯನ್ನಾಗಿ ಮಾಡಿ ಮರಳಿ ಸಮಾಜಕ್ಕೇ ಅರ್ಪಿಸುವ ಮಾದರಿ ಇದು. ಬುದ್ಧ ಪಾಲಿ ಭಾಷೆಯಲ್ಲಿ ಸಂಘದ ಮಹತ್ವವನ್ನು ಈ ರೀತಿ ತಿಳಿಸಿದ್ದಾರೆ :

*ಸುಪ್ಪಬುದ್ಧಂ ಪಬುಜ್ಝನ್ತಿ*
*ಸದಾ ಗೋತಮ ಸಾವಕಾ।*
*ಯೇಸಂ ದಿವಾಚ ರತ್ತೊಚ,*
*ನಿಚ್ಚಂ ಸಙ್ಘಗತಾ ಗತಿ ॥*

(ಧಮ್ಮ ಪದ–ಮಿಶ್ರವರ್ಗ : ೨೯೮)

ಇದರ ಅರ್ಥ: "ಬುದ್ಧ ಭಗವಾನರ ಶಿಷ್ಯರುಗಳಾದವರು ಹಗಲೂ ಮತ್ತು ರಾತ್ರಿ ನಿರಂತರವಾಗಿ "ಸಂಘಾನುಸ್ಮತಿ (ಸಂಘದ ಗುಣಧ್ಯಾನ) ಅಭ್ಯಾಸ ಮಾಡುವರೋ ಅವರುಗಳೂ ಸದಾ ಎಚ್ಚೆತ್ತ ಸುಖದಲ್ಲಿರುವರು." ಸುಖದಲ್ಲಿರುವವರು ಸಾಮಾನ್ಯವಾಗಿ ಮೈ ಮರೆವಿನಲ್ಲಿರುತ್ತಾರೆ. ಅದರಿಂದ ಸಾಕಷ್ಟು ತೊಂದರೆ ಅನುಭವಿಸುತ್ತಾರೆ. ಆದರೆ ಬುದ್ಧನ ಬಿಕ್ಕು ಸಂಘದ ಸದಸ್ಯರು ಸದಾ ಎಚ್ಚೆತ್ತಿರುತ್ತಾರೆ, ಜಾಗೃತಾವಸ್ಥೆಯಲ್ಲಿರುತ್ತಾರೆ. ಒಬ್ಬರು ಮೈಮರೆಯಬಹುದು. ಆದರೆ ಎಲ್ಲರೂ ಅಲ್ಲ. ಇದೇ ಸಂಘದಿಂದಾಗುವ ಪ್ರಯೋಜನ.

ದೀಘಜಾನು ಎಂಬ ವ್ಯಕ್ತಿ ಒಮ್ಮೆ ಬುದ್ಧನನ್ನು ಕಂಡು ಈ ರೀತಿ ಕೇಳಿಕೊಳ್ಳುತ್ತಾನೆ: "ಪೂಜ್ಯರೇ, ನಾನೊಬ್ಬ ಸಾಮಾನ್ಯ ಮನುಷ್ಯ. ನನ್ನ ಹೆಂಡತಿ ಮತ್ತು ಮಗುವಿನೊಂದಿಗೆ ಸಂಸಾರ ನಡೆಸುತ್ತಿದ್ದೇನೆ. ನೀವು ಆಶೀರ್ವದಿಸಿ, ಕೆಲವು ಸಿದ್ಧಾಂತಗಳನ್ನು ಬೋಧಿಸಿ ನಮ್ಮ ಹಳ್ಳಿಯಲ್ಲಿ ಸಂತೋಷ ಇಮ್ಮಡಿಯಾಗುವಂತೆ ಮಾಡಿ."



ಇದಕ್ಕೆ ಬುದ್ಧ ಜಗತ್ತಿನಲ್ಲಿ ಮನುಷ್ಯನ ಸಂತೋಷ ಹೆಚ್ಚಿಸಲು ನಾಲ್ಕು ಸಂಗತಿಗಳಿವೆ ಎಂದು ಅವುಗಳನ್ನು ಹೀಗೆ ವಿವರಿಸುತ್ತಾನೆ :

ಒಂದು : ಯಾವ ಕ್ಷೇತ್ರವಾದರೂ ಪ್ರತಿಭೆ, ಸಾಮರ್ಥ್ಯ, ಶ್ರದ್ಧೆ ಮತ್ತು ಶಕ್ತಿಯನ್ನು ಹೊಂದಿರಬೇಕು. ಸದಾ ಯಾವುದರಲ್ಲಾದರೂ ತೊಡಗಿಕೊಂಡಿರಬೇಕು ಮತ್ತು ಅದರ ಬಗ್ಗೆ ಅರಿವಿರಬೇಕು (ಉತ್ಥಾನ–ಸಂಪದಾ)

ಎರಡು : ವ್ಯಕ್ತಿ ತನ್ನ ಆದಾಯದಲ್ಲಿ ಉಳಿತಾಯ ಮಾಡಬೇಕು. ಹಣೆಯಲ್ಲಿ ಬೆವರು ಬರುವಂತೆ ದುಡಿದು ಆದಾಯವನ್ನು ಸನ್ಮಾರ್ಗದಿಂದ ಗಳಿಸಬೇಕು (ಅರಕ್ಕ–ಸಂಪದಾ)

ಮೂರು : ವ್ಯಕ್ತಿಗೆ ಒಳ್ಳೆಯ ಸ್ನೇಹಿತರಿರಬೇಕು. ಅವರು ನಂಬಿಗಸ್ಥರಾಗಿರಬೇಕು. ಶಿಕ್ಷಣ ಪಡೆದವರು, ಒಳ್ಳೆಯತನ, ಉದಾರತೆ, ಮತ್ತು ಬುದ್ಧಿವಂತಿಕೆ ಉಳ್ಳವರಾಗಿರಬೇಕು. ಕೆಟ್ಟತನದಿಂದ ದೂರವಾದ ಒಳ್ಳೆಯ ಹಾದಿಯಲ್ಲಿ ಸಹಾಯ ಮಾಡುವಂಥವರಾಗಿರಬೇಕು (ಕಲ್ಯಾಣ–ಮಿತ್ರ)

ನಾಲ್ಕು : ಆದಾಯಕ್ಕಿಂತ ಅತಿ ಹೆಚ್ಚಾಗಲೀ, ಅತಿ ಕಡಿಮೆಯಾಗಲೀ, ವ್ಯಯ ಮಾಡದೆ ಸರಾಸರಿಯಾಗಿ ಖರ್ಚು ಮಾಡಬೇಕು. ಅಂದರೆ ಸಂಪತ್ತನ್ನು ಅತ್ಯಾಸೆಯಿಂದ ಕ್ರೋಢೀಕರಿಸಲೂಬಾರದು, ಅತಿ ಖರ್ಚೂ ಸಲ್ಲದು, ಇನ್ನೊಂದರ್ಥದಲ್ಲಿ ಅವನ ಆದಾಯಕ್ಕೆ ತಕ್ಕಂತೆ ಬದುಕಬೇಕು (ಸಮಾಜಿವಿಕತ)

ಬುದ್ಧ ನೀಡಿದ ಈ ಉಪದೇಶ ಸಿದ್ಧಾಂತದಲ್ಲಿ ದುಡಿಮೆ ಬಗ್ಗೆ ಗೌರವ, ಮಾನವೀಯ ಸಹಕಾರ, ವ್ಯಕ್ತಿತ್ವ ಶುದ್ಧೀಕರಣ ಹಾಗೂ ನ್ಯಾಯಮಾರ್ಗದ ಹಣ ಗಳಿಕೆಯ ಪ್ರಸ್ತಾಪವಿದೆ. ಗಾಂಧೀಜಿಯವರೂ ಬೆವರು ಸುರಿಸಿ ದುಡಿಯದೆ ಸಂಪತ್ತನ್ನು ಗಳಿಸಬಾರದು ಎಂದು ಸಂದೇಶ ನೀಡಿದ್ದಾರೆ. ಬಸವಣ್ಣನವರ ಸಮಕಾಲೀನರಾದ ಆಯ್ದಕ್ಕಿ ಲಕ್ಕಮ್ಮ ಮತ್ತು ಮಾರಯ್ಯ ದಂಪತಿಗಳ ಕಾಯಕ–ದಾಸೋಹ ಚಿಂತನೆಯಲ್ಲೂ ಅವಶ್ಯಕತೆಗೆ ತಕ್ಕಷ್ಟು ಮಾತ್ರ ಗಳಿಸಬೇಕು ಎಂಬ ತತ್ವ ಪ್ರತಿಪಾದಿತವಾಗಿದೆ. ಬಸವಣ್ಣನವರ ವಚನಗಳಲ್ಲೂ ಈ ರೀತಿಯ ಚಿಂತನೆ ಬೇರೆ ಬೇರೆ ರೂಪದಲ್ಲಿ ಕಾಣಿಸಿಕೊಂಡಿದೆ; ಅವರ ವಚನಗಳಲ್ಲಿ ಯಾವ ರೀತಿಯ ಅರೆಕೊರೆಗಳೂ ಇಲ್ಲದಂತೆ ನನ್ನನ್ನು ಶುದ್ಧೀಕರಿಸು ಎಂಬ ಆರ್ತಭಾವ ಪ್ರಧಾನವಾಗಿ ಕಾಣುತ್ತದೆಯೇ ಹೊರತು ಇನ್ನೊಬ್ಬರಿಗೆ ಉಪದೇಶಿಸುವ ನಿರೂಪಣಾ ಧಾಟಿ ಇರುವುದಿಲ್ಲ.

*ಅರ್ಥ ಪ್ರಾಣ ಅಭಿಮಾನದಲ್ಲಿ ವಂಚನೆಯಿಲ್ಲದಿಹುದೆ ಭಕ್ತಿ,*
*ಹೆಚ್ಚು ಕುಂದಿಲ್ಲದಿಹುದೆ ಸಮಯಾಚಾರ,*
*ಜಂಗಮವೆ ಲಿಂಗವೆಂಬುದಕ್ಕೆ ಏನು ಗುಣ*
*ಮನದ ಲಂಪಟತನ ಹಿಂಗದಾಗಿ ?*
*ಒಡೆಯರ ಬರವಿಂಗೆ ಕುನ್ನಿ ಬಾಲವ ಬಡಿದಡೆ*
*ವೆಚ್ಚವೇನು ಹತ್ತೂದು ಕೂಡಲ ಸಂಗಮದೇವ*

(ಬ.ವ.ಸಂ. ೨೧೭)

ಬಸವಣ್ಣನವರಿಂದ ರೂಪಿತವಾದ ವೀರಶೈವ ಧರ್ಮ ಷಟ್ಸ್ಥಲ (ಷಟ್‌ಸ್ಥಲ) ಮಾರ್ಗಗಳನ್ನು ಒಳಗೊಂಡಿದೆ. ಅಂಗಾಂಗ ಸಾಮರಸ್ಯ ಸಾಧಿಸುವುದೇ ಷಟ್‌ಸ್ಥಲದ ಗರಿಮೆ. ಇವುಗಳಿಗೆ ತತ್ವಸೋಪಾನ ಎನ್ನುತ್ತಾರೆ. ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ ಎನ್ನುವ ಈ ಆರು ಬಗೆಯ ಹಂತಗಳನ್ನು ಭಕ್ತ ತನ್ನ ಸಾಧನೆಯಿಂದ ದಾಟಿ ಭಗವಂತನಲ್ಲಿ ಬೆರೆತು ಒಂದಾಗುವ ಐಕ್ಯಸ್ಥಿತಿಯನ್ನು ಹೀಗೆ ವಿವರಿಸಲಾಗಿದೆ: ಭಕ್ತಸ್ಥಲ ಮತ್ತು ಮಾಹೇಶ್ವರ ಸ್ಥಲಗಳು ದ್ವೈತವನ್ನು, ಪ್ರಸಾಧಿಸ್ಥಲವು ವಿಶಿಷ್ಟಾದ್ವೈತವನ್ನು, ಶರಣಸ್ಥಲ ಮತ್ತು ಐಕ್ಯಸ್ಥಲಗಳು ಅದ್ವೈತವನ್ನು ಪ್ರತಿಪಾದಿಸುತ್ತವೆ ಎಂದು ಸತ್ಯವಿಠಲ ಕಾವ್ಯನಾಮದ ಬಿ. ವಿ. ಸತ್ಯನಾರಾಯಣರಾವ್ ಭಾವಿಸುತ್ತಾರೆ. ಈ ಷಟ್‌ಸ್ಥಲಗಳ ಮೂಲಕ ಭಕ್ತನು ತನ್ನ ಮನದ ಕಾಳಿಕೆಗಳನ್ನೆಲ್ಲ ಕಳೆದುಕೊಳ್ಳುತ್ತ ಶಿವನಲ್ಲಿ ಐಕ್ಯವಾಗುವುದರ ಕಡೆಗೆ ಬಸವಣ್ಣನವರ ಆಲೋಚನೆ ಇದ್ದರೆ ಬುದ್ಧನು ನಾಲ್ಕು ಆರ್ಯಸತ್ಯಗಳು ಮತ್ತು ಅಷ್ಟಾಂಗ ಮಾರ್ಗಗಳ ಮೂಲಕ ಮಾನವ ಶುದ್ಧವಾಗುವುದರ ಕಡೆಗೆ ಚಲಿಸಬೇಕು ಎನ್ನುತ್ತಾನೆ. ದೇವರ ಬಗ್ಗೆ ಏನೂ ಮಾತನಾಡದೆ ತನ್ನ ಚಿಂತನೆಯನ್ನೆಲ್ಲ ಮನುಷ್ಯನನ್ನು ಕೇಂದ್ರೀಕರಿಸಿಕೊಂಡೇ ಬುದ್ಧ ಬೆಳೆಸುತ್ತಾನೆ. ಅತಿಯಾದ ಇಂದ್ರಿಯ ಸೌಖ್ಯದ ಬಯಕೆ ಮತ್ತು ದೇಹದಂಡನೆ ಎಂಬ ಎರಡು ಅತಿರೇಕಗಳನ್ನು ಬಿಟ್ಟು ತಥಾಗತನು ಕಂಡುಹಿಡಿದಿರುವ ಮಧ್ಯಮ ಮಾರ್ಗದ ಮೂಲಕ ಜ್ಞಾನ ಮತ್ತು ಶಾಂತಿಗಳನ್ನು ಪಡೆಯಬಹುದು. ಆ ಮಧ್ಯಮ ಮಾರ್ಗವನ್ನೇ ಅಷ್ಟಾಂಗ ಮಾರ್ಗ ಎಂದು ಕರೆಯುತ್ತಾನೆ ಬುದ್ಧ. ಇಲ್ಲಿ ಎಂಟು ವಿಭಾಗಗಳಿರುವುದರಿಂದ ಸಾಮಾನ್ಯವಾಗಿ ಈ ಮಧ್ಯಮ ಮಾರ್ಗವನ್ನು ಆರ್ಯ ಅಷ್ಟಾಂಗಿಕ ಮಾರ್ಗ (ಅರಿಯ ಅಟ್ಟಂಗಿಕ ಮಗ್ಗ) ಎಂದು ಹೆಸರಿಸಲಾಗಿದೆ. ಅವುಗಳೆಂದರೆ :

೧. ಸಮ್ಮಾ ದಿಟ್ಠಿ (ಸಮ್ಯಕ್ ದೃಷ್ಟಿ )
೨. ಸಮ್ಮಾ ಸಂಕಪ್ಪ (ಸಮ್ಯಕ್ ಸಂಕಲ್ಪ )
೩. ಸಮ್ಮಾ ವಾಚಾ (ಸಮ್ಯಕ್ ಮಾತು)
೪. ಸಮ್ಮಾ ಕಮ್ಮಂತ (ಸಮ್ಯಕ್ ಕರ್ಮ)
೫. ಸಮ್ಮಾ ಜೀವ (ಸಮ್ಯಕ್ ಜೀವನ)
೬.ಸಮ್ಮಾ ವಾಯಾಮ (ಸಮ್ಯಕ್ ಪ್ರಯತ್ನ)
೭.ಸಮ್ಮಾ ಸತಿ (ಸಮ್ಯಕ್ ಸ್ಮೃತಿ )
೮. ಸಮ್ಮಾ ಸಮಾಧಿ (ಸಮ್ಯಕ್ ಸಮಾಧಿ)

ಈ ರೀತಿಯ ವರ್ತನೆಗಳನ್ನು ಮನುಷ್ಯ ಅಳವಡಿಸಿಕೊಂಡಾಗ ಸತ್ಯವನ್ನು ತಿಳಿಯಬಲ್ಲ ದೃಷ್ಟಿ ಲಭಿಸುತ್ತದೆ, ಜ್ಞಾನ ಉಂಟಾಗುತ್ತದೆ, ಶಾಂತಿ ದೊರೆಯುತ್ತದೆ; ಪ್ರಜ್ಞೆ, ಸಂಬೋಧಿ ಮತ್ತು ನಿಬ್ಬಾಣಗಳು (ಸಾವಿಲ್ಲದ ಸ್ಥಿತಿ) ಲಭಿಸುತ್ತವೆ.

ಈ ಪಟ್ಟಿಯಲ್ಲಿರುವ ಮನುಷ್ಯ ವರ್ತನೆಗಳನ್ನು ಗಮನಿಸಿದಾಗ ಅದು ಒಳ್ಳೆಯ ವಿಷಯವಿರಲಿ ಅಥವಾ ಕೆಟ್ಟ ಸಂಗತಿಯಿರಲಿ ಅದು ಮನುಷ್ಯನಿಂದಲೇ ಬರುತ್ತದೆ ಎಂಬುದು ಸಿದ್ಧವಾಗುತ್ತದೆ. ಅದಕ್ಕೆ ಯಾವ ದೇವರಾಗಲೀ, ಕರ್ಮಫಲವಾಗಲೀ,

AMBEDKAR
DEVELOPMENT CORPORATION

# ಡಾ॥ ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

9 ಮತ್ತು10ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕಗೋಪುರ, ಡಾ॥ ಅಂಬೇಡ್ಕರ್ ವೀದಿ, ಬೆಂಗಳೂರು–560 001
e-mail address : mdadcl2011@gmail.com

**ಡಾ॥ ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಪರಿಶಿಷ್ಟ ಜಾತಿಯ ಜನಾಂಗದವರನ್ನು ಬಡತನ ರೇಖೆಯಿಂದ ಮೇಲೆ ತರುವ ಏಕೈಕ ಉದ್ದೇಶದಿಂದ ಕರ್ನಾಟಕ ಸರ್ಕಾರವು ಆಯವ್ಯಯದಲ್ಲಿ ನಿಗದಿಪಡಿಸುವ ಅನುದಾನದೊಂದಿಗೆ ರಾಷ್ಟ್ರೀಯ ಹಣಕಾಸು ನಿಗಮಗಳ ಸಹಯೋಗದೊಂದಿಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.**







**1. ಸ್ವಯಂ ಉದ್ಯೋಗ ಯೋಜನೆ :**
ಅ) ಪರಿಶಿಷ್ಟ ಜಾತಿಯ ನಿರುದ್ಯೋಗಿಗಳು ಸ್ವಾವಲಂಬಿಗಳಾಗಿ ಸ್ವಯಂಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ನಿಗಮವು ಈ ಕೆಳಕಂಡಂತೆ ಸಾಲಸೌಲಭ್ಯಗಳನ್ನು ಒದಗಿಸುತ್ತಿದೆ. ಆ) ರೂ. 1,00,000/–ದೊಳಗಿನ ಘಟಕ ವೆಚ್ಚಕ್ಕೆ ನಿಗಮದಿಂದ ಶೇ. 50ರಷ್ಟು ಗರಿಷ್ಠ ರೂ. 35,000/–ಗಳ ಸಹಾಯಧನ ನೀಡಿ, ಉಳಿದ ಮೊತ್ತವನ್ನು ಬ್ಯಾಂಕುಗಳ ಮುಖಾಂತರ ಸಾಲದ ರೂಪದಲ್ಲಿ ಒದಗಿಸಲಾಗುವುದು. ಇ) ರೂ. 1,00,000/–ದಿಂದ ಮೇಲ್ಪಟ್ಟ ಘಟಕ ವೆಚ್ಚದ ಯೋಜನೆಗಳಿಗೆ ನಿಗಮದಿಂದ ನೀಡುವ ಸಹಾಯಧನದ ಗರಿಷ್ಠ ಮಿತಿ ರೂ. 2.00 ಲಕ್ಷಗಳಿದ್ದು ಹಾಗೂ ಉಳಿದ ಭಾಗ ಬ್ಯಾಂಕ್/ಹಣಕಾಸು ಸಂಸ್ಥೆಗಳ ಸಾಲದ ರೂಪದಲ್ಲಿರುತ್ತದೆ. ಈ) ಕೆಲವೊಂದು ಯೋಜನೆಗಳಿಗೆ ರಾಷ್ಟ್ರೀಯ ಪರಿಶಿಷ್ಟ ಜಾತಿ ಹಣಕಾಸು ಹಾಗೂ ಅಭಿವೃದ್ಧಿ ನಿಗಮದಿಂದ ಸಾಲ ಪಡೆದು ನೇರವಾಗಿ ಫಲಾನುಭವಿಗಳಿಗೆ ಸಾಲಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚದಲ್ಲಿ ಶೇ. 5ರಷ್ಟು ಭಾಗ ಫಲಾನುಭವಿಯ ಪಾಲು, ಶೇ. 20 ಭಾಗ ನಿಗಮದಿಂದ ಅಂಚಿನ ಹಣ (ಗರಿಷ್ಠ ರೂ. 1.00 ಲಕ್ಷ) ಹಾಗೂ ಉಳಿದ ಶೇ. 75 ಭಾಗವನ್ನು ರಾಷ್ಟ್ರೀಯ ಹಣಕಾಸು ನಿಗಮದ ಹಣದಿಂದ ಸಾಲದ ರೂಪದಲ್ಲಿ ಭರಿಸಲಾಗುವುದು. ಪರಿಶಿಷ್ಟ ಜಾತಿಯ ನಿರುದ್ಯೋಗಿಗಳು ಸ್ವಾವಲಂಬಿಗಳಾಗಿ ಸ್ವಯಂಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ನಿಗಮವು ಈ ಕೆಳಕಂಡಂತೆ ಸಾಲ ಸೌಲಭ್ಯಗಳನ್ನು ಒದಗಿಸುತ್ತಿದೆ.

**2. ಭೂ ಒಡೆತನ ಯೋಜನೆ :**
ಈ ಯೋಜನೆಯಡಿ 2 ಎಕರೆ ಖುಷ್ಕಿ ಅಥವಾ 1 ಎಕರೆ ತರಿ/ಭಾಗಾಯ್ತು ಜಮೀನನ್ನು ಪರಿಶಿಷ್ಟ ಜಾತಿಯ ಕೃಷಿ ಕಾರ್ಮಿಕರಿಗೆ ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿಲ್ಲದವರಿಂದ, ಆಯಾ ಗ್ರಾಮದಲ್ಲಿ ಜಮೀನು ಮಾರಾಟ ನೋಂದಾಯಿತ ಬೆಲೆಯ ಮೂರುಪಟ್ಟು ಘಟಕ ವೆಚ್ಚದಲ್ಲಿ ಗರಿಷ್ಠಮಿತಿ ರೂ. 10.00ಲಕ್ಷಗಳನ್ನು ಮೀರದಂತೆ ಖರೀದಿಸಲು ಮಂಜೂರಾತಿ ನೀಡಲಾಗುವುದು. ಈ ಘಟಕ ವೆಚ್ಚದಲ್ಲಿ ಅರ್ಧಭಾಗ ಸಹಾಯಧನವಾಗಿಯೂ, ಉಳಿದರ್ಧ ಸಾಲದ ರೂಪದಲ್ಲೂ ಇರುತ್ತದೆ. ಈ ಸಾಲವನ್ನು 10 ವರ್ಷಗಳಲ್ಲಿ ವಾರ್ಷಿಕ ಸಮಕಂತುಗಳಲ್ಲಿ ಶೇಕಡ 6ರ ಬಡ್ಡಿದರದಲ್ಲಿ ಮರುಪಾವತಿ ಮಾಡಬೇಕಿರುತ್ತದೆ.

**3. ಗಂಗಾ ಕಲ್ಯಾಣ ಯೋಜನೆ :**
**ಅ) ಸಾಮೂಹಿಕ ನೀರಾವರಿ/ಏತ ನೀರಾವರಿ ಯೋಜನೆ :** ನದಿ ಮತ್ತು ನೈಸರ್ಗಿಕ ಹಳ್ಳಗಳ ಅಕ್ಕಪಕ್ಕದಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿದ ಸಣ್ಣ ಮತ್ತು ಅತಿಸಣ್ಣ ರೈತರ ಜಮೀನುಗಳನ್ನು ಗುರುತಿಸಿ 8ರಿಂದ 15 ಎಕರೆ ಇರುವ ಗುಂಪು ಜಮೀನಿಗೆ ನಿಗದಿಪಡಿಸಿದ ಘಟಕ ವೆಚ್ಚದಲ್ಲಿ ಪೂರ್ಣ ಸಹಾಯಧನದೊಂದಿಗೆ ಏತ ನೀರಾವರಿ ಯೋಜನೆಯನ್ನು ಕೈಗೊಳ್ಳಲಾಗುವುದು.
**ಆ) ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆ :** ಈ ಯೋಜನೆಯಡಿ ಸಣ್ಣ ಮತ್ತು ಅತಿಸಣ್ಣ ರೈತರ ಜಮೀನಿನಲ್ಲಿ ಕೊಳವೆಬಾವಿ ಕೊರೆಯಿಸಿ ಪಂಪ್ ಮೋಟಾರನ್ನು ಅಳವಡಿಸಲಾಗುವುದು. ಈ ಕಾರ್ಯಕ್ರಮದಡಿ ರೂ. 1,50,000/– ಸಹಾಯಧನವಾಗಿದ್ದು, ಉಳಿದ ಮೊತ್ತ ರೂ.50,000/– ಅವಧಿಸಾಲವಾಗಿರುತ್ತದೆ. ಅವಧಿಸಾಲವನ್ನು ಎನ್.ಎಸ್.ಸಿ.ಎಫ್.ಡಿ.ಸಿ.ಯಿಂದ ಭರಿಸಲಾಗುವುದು. ಕೊಳವೆಬಾವಿಗಳ ವಿದ್ಯುದ್ದೀಕರಣಕ್ಕಾಗಿ ಹಿಂದುಳಿದ ತಾಲ್ಲೂಕುಗಳಿಗೆ ಒದಗಿಸಿದ ಎಸ್‌ಸಿಎಸ್‌ಪಿ ಕ್ರೋಡೀಕೃತ ಹಣದಿಂದ ಎಸ್ಕಾಂಗಳಿಗೆ ನೀಡಲಾಗುವುದು.

**4. ಮೈಕ್ರೋ ಕ್ರೆಡಿಟ್ ಫೈನಾನ್ಸ್ (ಕಿರುಸಾಲ) :**
ಈ ಯೋಜನೆಯಡಿ ಗ್ರಾಮೀಣ, ಅರೆ ನಗರ ಮತ್ತು ನಗರ ಪ್ರದೇಶಗಳಿಗೆ ಸೇರಿದ ಪರಿಶಿಷ್ಟ ಜಾತಿಯ ಕುಶಲಿ ಅಥವಾ ಕುಶಲಿಯಲ್ಲದ ವ್ಯಕ್ತಿಗಳ ಅಭಿವೃದ್ಧಿಗಾಗಿ ಅವರು ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳನ್ನು ಕೈಗೊಳ್ಳಲು ಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚ ರೂ. 15,000/–ಗಳಿದ್ದು, ಇದರಲ್ಲಿ ರೂ. 10,000/– ಸಹಾಯಧನ ಮತ್ತು ರೂ. 5,000/– ಸಾಲವಿರುತ್ತದೆ.

**5. ಮೈಕ್ರೋ ಕ್ರೆಡಿಟ್ ಯೋಜನೆ (ಎನ್.ಎಸ್.ಸಿ.ಎಫ್.ಡಿ.ಸಿ) :**
ಈ ಯೋಜನೆಯನ್ನು ರಾಷ್ಟ್ರೀಯ ಪರಿಶಿಷ್ಟ ಜಾತಿ ಹಣಕಾಸು ಹಾಗೂ ಅಭಿವೃದ್ಧಿ ನಿಗಮದ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಘಟಕ ವೆಚ್ಚ ಗರಿಷ್ಠ ಮೊತ್ತ ರೂ. 25,000/–ವಾಗಿದ್ದು, ಇದರಲ್ಲಿ ರೂ. 15,000/– ಎನ್.ಎಸ್.ಸಿ.ಎಫ್.ಡಿ.ಸಿ. ಅವರ ಅವಧಿಸಾಲವಾಗಿರುತ್ತದೆ. ಅವಧಿಸಾಲಕ್ಕೆ ಶೇ. 5ರಷ್ಟು ಬಡ್ಡಿಯನ್ನು ವಿಧಿಸಲಾಗುವುದು. ಉಳಿದ ರೂ. 10,000/– ಜಿಲ್ಲಾ ಪಂಚಾಯತ್, ನಗರಾಭಿವೃದ್ಧಿ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಹಾಗೂ ವಿಶೇಷ ಘಟಕ ಯೋಜನೆಯಡಿ ಹಾಗೂ ಇತರೆ ಇಲಾಖೆಗಳಲ್ಲಿ ಲಭ್ಯವಿರುವ ಸಹಾಯಧನವನ್ನು ಪಡೆದು ಅನುಷ್ಠಾನಗೊಳಿಸಲಾಗುವುದು. ಸ್ತ್ರೀಶಕ್ತಿ ಯೋಜನೆಯಡಿ ರಚಿಸಿರುವ ಒಳ್ಳೆಯ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವ–ಸಹಾಯ ಸಂಘ / ವೈಯಕ್ತಿಕ ಫಲಾಪೇಕ್ಷಿಗಳಿಗೆ ಈ ಯೋಜನೆಯಡಿ ಸೌಲಭ್ಯವನ್ನು ಒದಗಿಸಲಾಗುವುದು.

**1. ವಿಕಲಚೇತನರಿಗೆ ನೆರವು** : ಈ ಯೋಜನೆಯಡಿ ಪರಿಶಿಷ್ಟ ಜಾತಿಯ ವಿಕಲಚೇತನ ಅಭ್ಯರ್ಥಿಗಳ ಆರ್ಥಿಕ ಅಭಿವೃದ್ಧಿಗಾಗಿ ಅವರು ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳನ್ನು ಕೈಗೊಳ್ಳಲು ಸಾಲ ಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚ ರೂ. 25,000/–ಗಳಿದ್ದು, ಇದರಲ್ಲಿ ರೂ. 10,000/– ಸಹಾಯಧನ ಮತ್ತು ರೂ. 15,000/– ಸಾಲವಿರುತ್ತದೆ.

**2. ಸಫಾಯಿ ಕರ್ಮಚಾರಿ ಪುನರ್ವಸತಿ ಯೋಜನೆ (ಎಸ್.ಆರ್.ಎಂ.ಎಸ್) :** ಈ ಯೋಜನೆಯಡಿ ಸಫಾಯಿ ಕರ್ಮಚಾರಿಗಳು ಮತ್ತು ಅವರ ಅವಲಂಬಿತರ ಪುನರ್ ವಸತಿಗಾಗಿ ರಾಷ್ಟ್ರೀಯ ಸಫಾಯಿ ಕರ್ಮಚಾರಿ ಪುನರ್‌ವಸತಿ ಹಣಕಾಸು ಮತ್ತು ಅಭಿವೃದ್ಧಿ ನಿಗಮ, ನವದೆಹಲಿ ಇವರ ಸಹಯೋಗದೊಂದಿಗೆ ಸಾಲ ಸೌಲಭ್ಯ ಕಲ್ಪಿಸಲಾಗುತ್ತಿದೆ. ಅದರಂತೆ, ರೂ. 1,00,000/–ಗಳವರೆಗಿನ ಸಾಲಗಳಿಗೆ ರೂ. 10,000/–ಗಳನ್ನು ರಾಜ್ಯ ಸರ್ಕಾರದ ಅನುದಾನದಿಂದ ಸಹಾಯಧನವಾಗಿ ನೀಡಲಾಗುತ್ತಿದೆ ಹಾಗೂ ರೂ. 1,00,000/–ಕ್ಕಿಂತ ಹೆಚ್ಚಿನ ಮೊತ್ತದ ಸಾಲ ಪಡೆಯುವವರಿಗೆ 90% ಬ್ಯಾಂಕ್/ ಎನ್.ಎಸ್.ಕೆ.ಎಫ್.ಡಿ.ಸಿ. ಅವಧಿಸಾಲ ಮತ್ತು ಶೇಕಡಾ 5 ಭಾಗ ಅಂಚಿನ ಹಣದ ಸಾಲ ನೀಡಲಾಗುವುದು. ಉಳಿಕೆ 5 ಭಾಗವನ್ನು ಪ್ರವರ್ತಕರು ಭರಿಸಬೇಕಾಗುವುದು. ಸದರಿ ಸಾಲದ ಮೊತ್ತಕ್ಕೆ ಶೇ. 6ರ ಬಡ್ಡಿ ವಿಧಿಸಲಾಗುವುದು.

**ಪ್ರಕಟಣೆ : ಶ್ರೀ. ಕೆ. ಸಿ. ಶ್ರೀರಾಮಯ್ಯ, ಕ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು**

ಪಾಪ-ಪುಣ್ಯಗಳೆಂಬ ಇಡುಗಂಟುಗಳಾಗಲೀ ಕಾರಣವಲ್ಲ ಎಂಬುದು ಗೊತ್ತಾಗುತ್ತದೆ. ಇದನ್ನೇ ಧಮ್ಮ ಪದದಲ್ಲಿರುವ ಗಾಥೆ ಹೀಗೆ ಹೇಳುತ್ತದೆ :

*ಅತ್ತನಾ ಚೋದಯತ್ತಾನಂ*
*ಪಟಿಮಂಸೇಥ ಅತ್ತನಾ ।*
*ಸೋ ಅತ್ತಗುತ್ತೊ ಸತಿಮಾ,*
*ಸುಖಂ ಭಿಕ್ಖು ವಿಹಾಹಿಸಿ ॥*

(ಧಮ್ಮಪದ : ಭಿಕ್ಖುವಗ್ಗೋ. ೩೭೯)

(ನಿನ್ನನ್ನು ನೀನೇ ಖಂಡಿಸಿಕೊಳ್ಳಬೇಕು. ನಿನ್ನನ್ನು ನೀನೇ ಪರಿಶೀಲಿಸಿಕೊಳ್ಳಬೇಕು. ಹೀಗೆ ತನ್ನನ್ನು ತಾನೇ ಕಾಯ್ದು ರಕ್ಷಿಸಿಕೊಂಡ ಮತ್ತು ಜಾಗರೂಕನಾದ ಭಿಕ್ಷುವು ಸದಾ ಸುಖದಲ್ಲಿ ಜೀವಿಸುತ್ತಾನೆ). ಇನ್ನೊಂದು ಇಂಥದ್ದೇ ಗಾಥೆ "ನಿನಗೆ ನೀನೇ ಒಡೆಯ. ನಿನಗೆ ನೀನೇ ಗತಿ. ಆದ್ದರಿಂದ ವ್ಯಾಪಾರಿಯು ತನ್ನ ಉತ್ತಮವಾದ ಕುದುರೆಯನ್ನು ಹೇಗೆ ಹತೋಟಿಯಲ್ಲಿಟ್ಟುಕೊಳ್ಳುವನೋ ಹಾಗೆ ನಿನ್ನನ್ನು ನೀನು ಅಂಕೆಯಲ್ಲಿಟ್ಟುಕೊ" ಎಂದು ಬೋಧಿಸುತ್ತದೆ. ಅಂದರೆ ಇಲ್ಲೆಲ್ಲ ಮನುಷ್ಯರ ಬಗೆಗೆ ಮಾತ್ರ ಮಾತುಗಳೂ ಹೊರಬಂದಿವೆ. ದೇವರ ಬಗೆಗಾಗಲೀ, ದೇವದೂತರ ಬಗೆಗಾಗಲೀ, ದೈವಸಂಬಂಧಿ ಸಂಕೇತಗಳ ಬಗೆಗಾಗಲೀ ಬುದ್ಧ ಮಾತನಾಡಿಲ್ಲ.

"ಬಹುಜನ ಹಿತಾಯ, ಬಹುಜನ ಸುಖಾಯ ಲೋಕಾನುಕಂಪಾಯ" ಎಂಬ ಉನ್ನತವಾದ ಧ್ಯೇಯೋದ್ದೇಶದಿಂದ ಗ್ರಾಮದಿಂದ ಗ್ರಾಮಕ್ಕೆ, ಪಟ್ಟಣದಿಂದ ಪಟ್ಟಣಕ್ಕೆ, ನಗರದಿಂದ ನಗರಕ್ಕೆ ಕಾಲ್ನಡಿಗೆಯಲ್ಲಿ ಹೋಗುತ್ತಿದ್ದ ಬುದ್ಧನನ್ನು ನೋಡಲು, ಅವರ ಧರ್ಮಬೋಧನೆಯನ್ನು ಕೇಳಲು ರಾಜಾಧಿರಾಜರಿಂದ ಹಿಡಿದು ಸಮಾಜದ ಕಟ್ಟಕಡೆಯ ವ್ಯಕ್ತಿಗಳವರೆಗೂ ಎಲ್ಲರೂ ಬರುತ್ತಿದ್ದರು. ಮಾನವ ಸ್ವಭಾವವನ್ನೂ, ಮಾನವಕುಲದ ವೈವಿಧ್ಯತೆಯನ್ನೂ ಚೆನ್ನಾಗಿ ಅರಿತಿದ್ದ ಬುದ್ಧಗುರು ಬಂದವರ ಸಂಸ್ಕಾರ, ಹಿನ್ನೆಲೆ, ಇತಿಮಿತಿಗಳನ್ನು ಗಣನೆಗೆ ತೆಗೆದುಕೊಂಡು ಯಾರಿಗೆ ಎಷ್ಟು ಹೇಳಬೇಕೋ ಅಷ್ಟನ್ನು ಹೃದಯಂಗಮವಾಗಿ ಹೇಳುತ್ತಿದ್ದರು. ಅವರು ಜನಸಾಮಾನ್ಯರ ಆಡುಭಾಷೆಯಲ್ಲಿ ತಮ್ಮ ಎಲ್ಲ ಚಿಂತನೆ, ಬೋಧನೆಗಳನ್ನು ಮಾಡುತ್ತಿದ್ದುದರಿಂದ ಜನರಿಗೆ ಅರ್ಥವಾಗಿ ಬುದ್ಧ ಗುರುವಿನ ಅನುಯಾಯಿಗಳಾಗುತ್ತಿದ್ದರು. ದಿನನಿತ್ಯದ ಲೋಕಾನುಭವ ದ್ರವ್ಯದಿಂದ ಅವರು ದೃಷ್ಟಾಂತಗಳನ್ನು ಆರಿಸಿ, ಪೋಣಿಸಿ, ತೊಂದರೆಯಲ್ಲಿದ್ದವರಿಗೆ ನೀಡುತ್ತಿದ್ದುದರಿಂದ ಅದ್ವಿತೀಯವಾದ ಅನುಭವವನ್ನು ಬಂದವರು ಪಡೆಯುತ್ತಿದ್ದರು. ನಾವು ಆಡುವ ಮಾತು, ಮಾಡುವ ಕರ್ಮಗಳೂ ನಮ್ಮ ಮನಸ್ಸಿನ ಸ್ಥಿತಿಗಳನ್ನೇ ಅವಲಂಬಿಸಿವೆ. ನಾವು ಅನುಭವಿಸುವ ಸುಖ ಮತ್ತು ದುಃಖಗಳು ಇಂಥ ಮಾತು ಮತ್ತು ಕರ್ಮಗಳನ್ನೇ ಅವಲಂಬಿಸಿವೆ. ನಮ್ಮ ಈ ಸ್ಥಿತಿಗತಿಗಳಿಗೆ ದೇವರನ್ನು ಹೊಣೆ ಮಾಡುವ ಅಗತ್ಯವಿಲ್ಲ ಎಂಬುದು ಬುದ್ಧ ಗುರುವಿನ ಚಿಂತನೆಯಾಗಿತ್ತು. ಅದಕ್ಕಾಗಿಯೇ ಬುದ್ಧ ದೇವರ ಬಗ್ಗೆ ಮಾತಾಡದೆ ಮೌನವಹಿಸಿದ.

ಬುದ್ಧ ದೇವರ ಬಗ್ಗೆ ಮೌನವಹಿಸಿ ಮನುಷ್ಯತ್ವದ ಘನತೆಯನ್ನು ಎತ್ತಿಹಿಡಿದರೆ ಬಸವಣ್ಣ ದೇವರ ಬಗ್ಗೆ ಮಾತಾಡುತ್ತಲೇ ದೇವರ ದುರುಪಯೋಗದ ಬಗ್ಗೆ ದನಿ ಎತ್ತಿದ. ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಎಲ್ಲ ಆಚಾರ-ವಿಚಾರ, ನಂಬಿಕೆ-ಸಂಪ್ರದಾಯ, ಬಲಿ-ಆಚರಣೆ ಮುಂತಾದ ಅಮಾನವೀಯ ಸಂಗತಿಗಳ ಬಗ್ಗೆ ಪ್ರತಿಭಟಿಸಿ ಭಕ್ತಿ ಒಂದೇ ದೇವರನ್ನು ಒಲಿಸಿಕೊಳ್ಳಲು ಇರುವ ದಾರಿ ಎಂಬುದನ್ನು ಗಟ್ಟಿ ದನಿಯಲ್ಲಿ ಹೇಳಿದ. "ನಂಬಿ ನೆಚ್ಚಿ ಕರೆದರೆ ಓ ಎನ್ನನೇ ಶಿವನು" ಎಂದು ಸಾರಿ ದೇವರು ಮತ್ತು ದೇವಾಲಯಗಳ ಸಂಬಂಧವನ್ನು ಪುನರ್‌ಸಂಯೋಜಿಸಿ "ದೇಹವೇ ದೇಗುಲ" ಎಂಬ ಪರ್ಯಾಯ ಕಲ್ಪನೆ ಕೊಟ್ಟ. "ದೇಹವೇ ದೇಗುಲ" ಎಂಬ ಈ ಪರಿಕಲ್ಪನೆಯು "ಧಾರ್ಮಿಕ ವಲಯದ ಒಂದು ಅದ್ಭುತ ಪಲ್ಲಟ ಪ್ರತೀಕ" ಎಂದು ಡಾ॥ ಬರಗೂರು ರಾಮಚಂದ್ರಪ್ಪನವರು ಅಭಿಪ್ರಾಯಪಡುತ್ತಾರೆ. "ದೇವಾಲಯ ಕಲ್ಪನೆಗೆ ಪ್ರತಿಯಾಗಿ ರೂಪುತಳೆದ ಈ ಪರಿಕಲ್ಪನೆಯು ದೇಹಕ್ಕೆ ದೇಗುಲದ ಪಾವಿತ್ರ್ಯವನ್ನು ತಂದುಕೊಟ್ಟಿದ್ದು ಹೊಚ್ಚ ಹೊಸ ಒಳನೋಟವೆಂದೇ ಹೇಳಬೇಕು. ಯಾಕೆಂದರೆ ದೇಹವನ್ನು ಮಾಯೆ, ಕಾಮನೆಗಳ ಆವಾಸ ಸ್ಥಾನ, ನಶ್ವರ ಎಂದೆಲ್ಲ ಕರೆಯುತ್ತಿದ್ದ ಸನ್ನಿವೇಶದಲ್ಲೇ ಅದೇ ದೇಹಕ್ಕೆ ದೇಗುಲದ ಅಸಾಧಾರಣ ತತ್ವವನ್ನು ಕಟ್ಟಿದ್ದು ದೇಹದ ಮೂಲಕ ಮನುಷ್ಯನಿಗೆ ಕೊಟ್ಟ ಗೌರವವಾಗಿದೆ."

ಅಂದರೆ ಬುದ್ಧ ಬಸವರಿಬ್ಬರೂ ಮನುಷ್ಯರ ಬಗ್ಗೆಯೇ ಮಾತನಾಡಿದ್ದಾರೆ. ಅವರ ಮಾತು – ಕೃತಿಗಳಲ್ಲಿ ಒಂದು ತಾಯ್ತನದ ಸಂವೇದನೆಯಿದೆ. ಮನುಷ್ಯರ ಶೀಲ, ಸಮಾಧಿ, ಪ್ರಜ್ಞೆಗಳ ಬಗ್ಗೆ ಇಬ್ಬರೂ ಗಮನ ಕೊಟ್ಟಿದ್ದಾರೆ. ಬುದ್ಧ ಹೇಳಿದ ಪಂಚಶೀಲ ತತ್ವಗಳಲ್ಲಿ ಕಾಣುವಂಥ ನೈತಿಕತೆಯನ್ನೇ ಬಸವಣ್ಣನವರ ಅಂತರಂಗ ಮತ್ತು ಬಹಿರಂಗ ಶುದ್ಧಿಯ ವಚನದಲ್ಲೂ ಕಾಣುತ್ತೇವೆ. ಬುದ್ಧನ ಪಂಚಶೀಲ ತತ್ವಗಳು ಹೀಗಿವೆ :

೧. ಪಾಣಾತಿ ಪಾತಾ ವೇರ ಮಣೀ ಸಿಕ್ಖಾಪದಂ ಸಮಾದಿಯಾಮಿ
(ಪ್ರಾಣಹತ್ಯೆ ಮಾಡುವುದರಿಂದ ಹಿಂತೆಗೆವ ಪ್ರತಿಜ್ಞೆ ಕೈಗೊಳ್ಳುತ್ತೇನೆ)

೨. ಅದಿನ್ನಾದಾನಾ ವೇರ ಮಣೀ ಸಿಕ್ಖಾಪದಂ ಸಮಾದಿಯಾಮಿ
(ಕಳ್ಳತನ ಮಾಡುವುದರಿಂದ ಹಿಂತೆಗೆವ ಪ್ರತಿಜ್ಞೆ ಕೈಗೊಳ್ಳುತ್ತೇನೆ)

೩. ಕಾಮೇಸು ಮಿಚ್ಚಾ ಚಾರಾ ವೇರಮಣೀ ಸಿಕ್ಖಾಪದಂ ಸಮಾದಿಯಾಮಿ
(ಅನೀತಿಯುತವಾದ ಕಾಮದಲ್ಲಿ ತೊಡಗದಿರುವ ಪ್ರತಿಜ್ಞೆ ಕೈಗೊಳ್ಳುತ್ತೇನೆ)

೪. ಮುಸಾವಾದ ವೇರಮಣೀ ಸಿಕ್ಖಾಪದಂ ಸಮಾದಿಯಾಮಿ
(ಸುಳ್ಳನ್ನು ಹೇಳದಿರುವ ಪ್ರತಿಜ್ಞೆ ಕೈಗೊಳ್ಳುತ್ತೇನೆ)

೫. ಸುರಾ-ಮೇರಯ-ಮಜ್ಜ-ಪಮಾದಟ್ಠಾನಾ ವೇರಮಣೀ ಸಿಕ್ಖಾಪದಂ ಸಮಾದಿಯಾಮಿ
(ಸುರೆ, ಹೆಂಡ, ಮುಂತಾದ ಬುದ್ಧಿಭ್ರಮಣೆ ಮಾಡುವ ಪದಾರ್ಥಗಳಿಂದ ದೂರವಿರುವ ಪ್ರತಿಜ್ಞೆ ಮಾಡುತ್ತೇನೆ).

ಈ ಪಂಚಶೀಲಗಳನ್ನೇ ಹೋಲುವ ಬಸವಣ್ಣನವರ ವಚನ ಹೀಗಿದೆ :

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,*
*ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ*
*ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ.*

(ಬ.ವ.ಸಂ. ೨೩೫)

ಬೌದ್ಧ ಧರ್ಮದ ಪ್ರಕಾರ ಮನುಷ್ಯನು ಸಂಪನ್ನನಾಗಿರಬೇಕಾದರೆ ಎರಡು ಗುಣಗಳನ್ನು ಸಮನಾಗಿ ಬೆಳೆಸಿಕೊಳ್ಳಬೇಕು. ಅಂದರೆ ಒಂದು ನಿಟ್ಟಿನಲ್ಲಿ ಕರುಣೆ, ಇನ್ನೊಂದು ನಿಟ್ಟಿನಿಂದ ವಿವೇಕ (ಪ್ರಜ್ಞೆ)ವನ್ನು ಬೆಳೆಸಿಕೊಳ್ಳಬೇಕು. ಇಲ್ಲಿ ಹೃದಯದ ಗುಣವಾಗಿ ಪ್ರೇಮ, ದಯೆ, ದಾನಗುಣ, ಸಹಿಷ್ಣುತೆ ಮತ್ತಿತರ ಅಂಶಗಳನ್ನು "ಕರುಣೆ" ಪ್ರತಿನಿಧಿಸುತ್ತದೆ. ಮನುಷ್ಯ ಬರೀ ಭಾವನಾತ್ಮಕವಾಗಿದ್ದರೆ ಅವನು ಸಹೃದಯ ಮೂರ್ಖನಾಗುತ್ತಾನೆ. ಕೇವಲ ಬೌದ್ಧಿಕ ಮಾತ್ರದವನಾದರೆ ಅವನು ಕಲ್ಲು ಹೃದಯದ ಜಡನಾಗುತ್ತಾನೆ. ಆದ್ದರಿಂದ ಕರುಣೆ ಮತ್ತು ವಿವೇಕ ಸಮಪ್ರಮಾಣದಲ್ಲಿ ವ್ಯಕ್ತಿಯಲ್ಲಿ ಬೆಸೆದುಕೊಂಡಿರಬೇಕು. ಇವೆರಡೂ ಒಂದನ್ನು ಬಿಟ್ಟು ಇನ್ನೊಂದಿಲ್ಲ. ಬುದ್ಧ ಮತ್ತು ಬಸವಣ್ಣನವರ ಚಿಂತನೆಗಳನ್ನು ನೋಡಿದರೆ ಅವರಿಬ್ಬರೂ ಅಪಾರ ಕರುಣಾಸಮುದ್ರರು, ಎಣೆಯಿಲ್ಲದ ವಿವೇಕವಂತರು. ಬಸವಣ್ಣನವರು,

*ದಯವಿಲ್ಲದ ಧರ್ಮವದೇವುದಯ್ಯಾ ?*
*ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ.*
*ದಯವೇ ಧರ್ಮದ ಮೂಲವಯ್ಯಾ,*
*ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ.*

– ಎನ್ನುತ್ತಾರೆ. ಬುದ್ಧನ ಸಮ್ಯಕ್‌ಕರ್ಮ (ಸಮ್ಮಾಕಮ್ಮಂತ) "ಮನುಷ್ಯ ಮತ್ತು ಪ್ರಾಣಿಗಳಿಗೆ ನೋವುಂಟುಮಾಡುವ ಯಾವ ಕೆಲಸವನ್ನೂ ಮಾಡಬೇಡಿರೆಂದು

## ಸಾವು – ನೋವು

ಸಾವು ನನ್ನದಷ್ಟೇ ಅಲ್ಲ
ನೋವು ನನಗಷ್ಟೇ ಅಲ್ಲ
ಯಾರದೋ ನೋವು
ನನ್ನದೂ ಆಗುವಾಗ
ನನ್ನದೇ ಸಾವು
ಯಾರದೋ ಆಗಬಹುದಲ್ಲವೇ ?

**ರಾಜುಗೌಡ**
ನಾಗಮಂಗಲ

ಬೋಧಿಸುತ್ತದೆ. ಜೀವದಿಂದ ಇರುವ ಪ್ರಾಣಿಗಳು, ಮಾಂಸ, ಮದ್ಯ, ವಿಷವಸ್ತುಗಳು ಮತ್ತು ಶಸ್ತ್ರಾಸ್ತ್ರಗಳು – ಇವುಗಳ ವ್ಯಾಪಾರ ಸಮ್ಯಕ್ ಜೀವನ ಅಲ್ಲ."

ಜಾತಿ ವಿರೋಧದ ವಿಷಯದಲ್ಲೂ ಬುದ್ಧ ಮತ್ತು ಬಸವಣ್ಣನವರ ಮಧ್ಯೆ ಸಾಮ್ಯವಿದೆ. ಮನುಷ್ಯರೆಲ್ಲ ಒಂದೇ ಎಂಬ ಚಿಂತನೆ ಇಬ್ಬರಲ್ಲೂ ಇದೆ. ಬಸವಣ್ಣನವರ ಕಾಲದಲ್ಲಿ ಸಮಾಜದ ತಳವರ್ಗದವರೂ, ಅಸ್ಪೃಶ್ಯರೂ ಎಲ್ಲರೂ ಒಂದುಗೂಡಿದರು. "ಅಂಗದ ಮೇಲೆ ಲಿಂಗವಿದ್ದವರನೆಲ್ಲ ಶರಣನೆಂಬೆ" ಎಂದು ಬಸವಣ್ಣನವರು ಸಾರಿದ ಕೂಡಲೇ ಎಲ್ಲರೂ 'ಅನುಭವ ಮಂಟಪ'ದಲ್ಲಿ ಒಂದುಗೂಡಿದರು. ಚರ್ಚೆ, ವಿನಿಮಯದ ಮೂಲಕ ಎಲ್ಲರೂ ಮೇಲ್ಮಟ್ಟಕ್ಕೇರಿದರು. ಆದರೂ ಅವರಲ್ಲಿ ವಿನಯ ತುಂಬಿ ತುಳುಕುತ್ತಿತ್ತು. ಬಸವಣ್ಣ ಹೇಳುತ್ತಾರೆ :

*ಹಿರಿಯಯ್ಯ ಶ್ವಪಚಯ್ಯ*
*ಕಿರಿಯಯ್ಯ ಡೋಹರ ಕಕ್ಕಯ್ಯ*
*ಅಯ್ಯಗಳಯ್ಯ ನಮ್ಮ ಮಾದಾರ ಚೆನ್ನಯ್ಯ*
*ಕೂಡಲಸಂಗಮದೇವಾ,*
*ನಿಮ್ಮ ಶರಣರು ಎನ್ನ ಸಲಹುವರಾಗಿ.*

ಇದೇ ರೀತಿ ಬುದ್ಧ, ಗುರುವಾದ ಮೇಲೆ ಊರೂರು ಸಂಚರಿಸುತ್ತಾ ತಿರುಗಾಡುತ್ತಿರುವಾಗ ಅನೂಪಿಯಾ ಎಂಬ ಪಟ್ಟಣದಲ್ಲಿ ತಂಗಿದ್ದನು. ಅಲ್ಲಿಗೆ ಅನುರುದ್ಧ, ಭದ್ದಿಯ, ಭಗು, ಕಿಂಬಿಲ, ಆನಂದ, ಮತ್ತು ದೇವದತ್ತ ಎಂಬ ಆರು ಜನ ಶಾಕ್ಯ ಪ್ರಮುಖರು ಹೋದರು. ಇವರು ಬುದ್ಧನ ಸಂಘವನ್ನು ಸೇರಿಕೊಳ್ಳುವ ಇಚ್ಛೆಯಿಂದ ಉಪಾಲಿ ಎಂಬ ನಾಪಿತನೊಂದಿಗೆ ಅನೂಪಿಯಾ ಪಟ್ಟಣಕ್ಕೆ ಹೋದರು. ಈ ಆರು ಶಾಕ್ಯ ಪ್ರಮುಖರೊಂದಿಗೆ ಉಪಾಲಿಗೂ ಸಂಘ ಸೇರಿಕೊಳ್ಳಬೇಕೆಂಬ ಆಸೆ ಉಂಟಾಯಿತು. ಇವರೆಲ್ಲರೂ ಬುದ್ಧ ಗುರುವನ್ನು ಕಂಡು ತಮ್ಮನ್ನು ಭಿಕ್ಷುಗಳನ್ನಾಗಿ ಸ್ವೀಕರಿಸಬೇಕೆಂದು ಕೇಳಿಕೊಂಡು, ತಮಗೆಲ್ಲರಿಗೂ ಹಿರಿಯನಾಗಿರುವ ಹಾಗೂ ಜಾತಿಯಿಂದ ಕೀಳಾಗಿರುವ ಉಪಾಲಿಗೆ ಮೊದಲು ದೀಕ್ಷೆ ಕೊಡಬೇಕೆಂದು ಕೇಳಿಕೊಂಡರು. ಯಾಕೆಂದರೆ ಈ ಆರು ಜನ ರಾಜಕುಮಾರರಿಗಿಂತ ಮೊದಲು ದೀಕ್ಷೆ ತೆಗೆದುಕೊಂಡ ನಾಪಿತ ಉಪಾಲಿ ಪಾದಕ್ಕೆ ಅವರು ನಮಸ್ಕರಿಸಬೇಕಾಗುತ್ತದೆ. ಆಗ ಅವರ ಅಹಂಕಾರ ತಾನೇತಾನಾಗಿ ಇಳಿಯುತ್ತದೆ ಎಂಬ ಅವರ ಬಿನ್ನಹವನ್ನು ಒಪ್ಪಿಕೊಂಡ ಭಗವಾನ್ ಬುದ್ಧ ಉಪಾಲಿಗೆ ಮೊದಲು ದೀಕ್ಷೆ ನೀಡುತ್ತಾನೆ. ಉಳಿದವರು ಉಪಾಲಿಗೆ ನಮಸ್ಕರಿಸಿದ ಮೇಲೆ ಅವರಿಗೆ ದೀಕ್ಷೆಯಾಗುತ್ತದೆ.

ಭಾರತದ ಸಾಮಾಜಿಕ ಇತಿಹಾಸದಲ್ಲಿ ಇದೊಂದು ಮಹತ್ತರವಾದ ಘಟನೆ. ಇಲ್ಲಿಯವರೆಗೆ ಉಚ್ಚವರ್ಗದವರಿಗೆ ಮೀಸಲಾಗಿದ್ದ ಉತ್ಕೃಷ್ಟ ಜ್ಞಾನವನ್ನು ಕೀಳು ಕುಲದವರು ಪಡೆಯಲು ಅನರ್ಹರೆಂಬ ನಂಬಿಕೆ ಇತ್ತು. ಬುದ್ಧ ಮತ್ತವನ ಶಿಷ್ಯರು ಈ ನಂಬಿಕೆಯನ್ನು ತಿರಸ್ಕರಿಸಿ ಎಲ್ಲ ಮಾನವರೂ ಉತ್ಕೃಷ್ಟ ಜ್ಞಾನ ಪಡೆಯಲು ಅರ್ಹರು ಎಂಬುದನ್ನು ತೋರಿಸಿಕೊಟ್ಟರು.

ಧಮ್ಮಪದದಲ್ಲೂ ಜಾತಿಯ ಚೌಕಟ್ಟನ್ನು ಮೀರುವಂತಹ ಒಂದು ಗಾಥೆ ಈ ಪ್ರಸಂಗವನ್ನು ಪುಷ್ಟೀಕರಿಸುವಂತಿದೆ :

*ನ ಜಟಾಹಿ ನಗೊತ್ತೇನ*
*ನ ಜಚ್ಚಾ ಹೋತಿ ಬ್ರಾಹ್ಮಣೋ !*
*ಯಮ್ಹಿ ಸಚ್ಚಞ್ಚ ಧಮ್ಮೋಚ*
*ಸೋ ಸುಚೀ ಸೋ ಚ ಬ್ರಾಹ್ಮಣೋ ॥* (ಧಮ್ಮಪದ–ಬ್ರಾಹ್ಮಣವಗ್ಗ. ೩೯೩)

(ಜಟೆಯಿಂದಾಗಲೀ, ಗೋತ್ರದಿಂದಾಗಲೀ, ಹುಟ್ಟಿನಿಂದಾಗಲೀ, ಒಬ್ಬನು ಬ್ರಾಹ್ಮಣ ನಾಗುವುದಿಲ್ಲ ಆದರೆ ಯಾರಲ್ಲಿ ಸತ್ಯ ಮತ್ತು ಧರ್ಮಗಳು ನೆಲೆಮಾಡಿವೆಯೋ ಅವನು ಪರಿಶುದ್ಧ ಮತ್ತು ಅವನು ಬ್ರಾಹ್ಮಣ)

ಮೂಢನಂಬಿಕೆಗಳ ವಿರುದ್ಧವಾಗಿ ಬಸವಣ್ಣ ಮತ್ತು ಬುದ್ಧ ಇಬ್ಬರೂ ಹೋರಾಡಿದ್ದಾರೆ. ಮೂಢನಂಬಿಕೆಗಳ ಹೆಸರಲ್ಲಿ ಪ್ರಾಣಿ ಬಲಿಯಾಗುವುದರ ಬಗ್ಗೆ ಇಬ್ಬರೂ ಪರಿತಪಿಸಿದ್ದಾರೆ. "ನೀರ ಕಂಡಲ್ಲಿ ಮುಳುಗಿ, ಮರವ ಕಂಡಲ್ಲಿ ಸುತ್ತಿ" ಸುತ್ತಿ ಬಸವಳಿದವರನ್ನು ಬೇರೆ ಬೇರೆ ರೀತಿ ಸಂತೈಸಿದ್ದಾರೆ. ಬಸವಣ್ಣನವರು ಏಕದೇವೋಪಾಸನೆಯನ್ನು ಕೈಕೊಂಡು "ಮಡಕೆದೈವ ಮೊರದೈವ, ಬೀದಿಯ ಕಲ್ಲುದೈವ" ಎಂದು ಬೀದಿಬೀದಿ ತಿರುಗುವವರನ್ನು ಸರಿದಾರಿಗೆ ತಂದಿದ್ದಾರೆ. ದಯೆ, ಕರುಣೆ, ಅಹಿಂಸೆ ಇಬ್ಬರ ಚಿಂತನೆಯಲ್ಲೂ ಮಡುಗಟ್ಟಿ ನಿಂತಿವೆ.

*ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು*
*ಎಲೆ ಹೋತೇ ಅಳು, ಕಂಡಾ ।*
*ವೇದವನೋದಿದವರ ಮುಂದೆ ಅಳು, ಕಂಡಾ ।*
*ಶಾಸ್ತ್ರ ಕೇಳಿದವರ ಮುಂದೆ ಅಳು, ಕಂಡಾ ।*
*ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.* (ಬ.ವ.ಸಂ. ೫೭೩)

ಅಜಮೇಧ, ಅಶ್ವಮೇಧ, ಗಜಮೇಧ ಮುಂತಾದ ಪ್ರಾಣಿಬಲಿಯಾಗುವ ಆಚರಣೆ ಗಳನ್ನು ಬುದ್ಧ, ಬಸವಣ್ಣ ಇಬ್ಬರೂ ತೀವ್ರವಾಗಿ ಖಂಡಿಸಿದರು. ಇವುಗಳಿಗೆಲ್ಲಾ ಪುರಾಣಗಳನ್ನು ಸೃಷ್ಟಿಮಾಡಿ ಅದೇ ಸರ್ವಸ್ವ , ಅದನ್ನಾರೂ ಪ್ರಶ್ನಿಸುವಂತಿಲ್ಲ ಎಂಬ ಶಾಸನ ರೀತಿಯ ನಂಬಿಕೆ ಸಂಪ್ರದಾಯಗಳನ್ನು ಪ್ರಶ್ನೆ ಮಾಡಿ ಅದರ ಠೊಳ್ಳುತನವನ್ನೆಲ್ಲ ಬಯಲಿಗೆ ತಂದರು.

ಪಾಲಿ ಭಾಷೆಯಲ್ಲಿ ಎರಡನೇ ಶೀಲ ಹೀಗೆ ಬರುತ್ತದೆ : "ಅದಿನ್ನ ದಾನಾವೇರ ಮನಿ" ಅಂದರೆ ಒಬ್ಬನಿಗೆ ಯಾವುದು ಕೊಡಲ್ಪಡಲಿಲ್ಲವೋ ಅವನು ಅದನ್ನು ತೆಗೆದು ಕೊಳ್ಳಬಾರದು. ತನಗೆ ನ್ಯಾಯವಾಗಿ ಸಲ್ಲಬೇಕಾದುದನ್ನು ಮಾತ್ರ ಸ್ವೀಕರಿಸಬೇಕು. ಈ ಒಂದು ಶೀಲವನ್ನು ನಮ್ಮ ಸಮಾಜ ಸರಿಯಾಗಿ ಪರಿಪಾಲಿಸಿದರೆ ರಾಜಕೀಯ ಹಾಗೂ ಸಮಾಜಗಳೂ ಪರಿಶುದ್ಧವಾಗುತ್ತವೆ. ಇಂದು ಸಾರ್ವಜನಿಕ ಜೀವನದಲ್ಲಿ ಅತಿಯಾದ ಲಾಭದ ಆಸೆಯಿಂದ ಬಹುತೇಕರು ತಮಗೆ ಸಲ್ಲಬಾರದ್ದೆಲ್ಲವನ್ನೂ ಪಡೆಯುತ್ತಿದ್ದಾರೆ. ಇದು ಶೋಷಣೆಗೆ, ಕೊಲೆ, ಸುಲಿಗೆ, ಆಕ್ರಮಣ ಅತ್ಯಾಚಾರಕ್ಕೆ ಕಾರಣವಾಗುತ್ತಿದೆ. ಬಸವಣ್ಣನವರೂ ಇದೇ ಶೀಲವನ್ನು ಪಾಲಿಸುವಂತರಾದ್ದರಿಂದಲೇ ಹಣ, ಆಸ್ತಿ, ಸಂಪತ್ತು ಕ್ರೋಢೀಕರಿಸುವುದನ್ನು ಅವರೂ ವಿರೋಧಿಸಿದ್ದಾರೆ :

*ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ*
*ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ*
*ನಿಮ್ಮಾಣೆ, ನಿಮ್ಮ ಪ್ರಮಥರಾಣೆ,*
*ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ*
*ಕೂಡಲಸಂಗಮದೇವಾ* (ಬ.ವ.ಸಂ. ೪೩೬)

ದೇವರ ವಿಚಾರ ಒಂದರಲ್ಲಿ ಮಾತ್ರ ಬುದ್ಧ ಬಸವಣ್ಣನವರಲ್ಲಿ ಸಹಮತವಿಲ್ಲ. ಈಗಾಗಲೇ ಹಿಂದೆ ಚರ್ಚಿಸಿದಂತೆ ಬುದ್ಧ ದೇವರ ಬಗೆಗೆ ಮೌನವಹಿಸುತ್ತಾನೆ. ಬಸವಣ್ಣ ದೇವರ ಮೂಲಕ ಮಾತನಾಡುತ್ತಾನೆ. ದೇವರ ಬಗೆಗಿರುವ ಜನರ ನಂಬಿಕೆಗಳನ್ನು ಘಾಸಿಗೊಳಿಸಬಾರದು ಎಂಬ ಎಚ್ಚರ ಬುದ್ಧನಿಗಿದ್ದರೆ, ಜನರ ನಂಬಿಕೆಗಳನ್ನುಪಯೋಗಿಸಿಕೊಂಡೇ ಬಸವಣ್ಣ ದೇವರ ದುರುಪಯೋಗ ತಪ್ಪಿಸುತ್ತಾನೆ. ಬುದ್ಧ ಶ್ರದ್ಧೆಯ ಬಗ್ಗೆ ಹೆಚ್ಚು ಒತ್ತುಕೊಟ್ಟು ಹೇಳಿದರೆ ಬಸವಣ್ಣ ಭಕ್ತಿಯ ಬಗ್ಗೆ ಹೆಚ್ಚು ಒತ್ತುಕೊಟ್ಟು ಹೇಳಿದ್ದಾನೆ. ಬಹುಸಂಸ್ಕೃತಿಯನ್ನು ಗೌರವಿಸುತ್ತಲೇ ಅದರಲ್ಲಿ ಏಕದೇವೋಪಾಸನೆಯ ಅಗತ್ಯವನ್ನು ಬಸವಣ್ಣ ಪ್ರತಿಪಾದಿಸುತ್ತಾನೆ.

'ವೇದ ಸ್ವಯಂಭು', ಅದು ಮನುಷ್ಯಾತೀತವಾದದ್ದು ಎಂಬ ನೂರಾರು ವರ್ಷಗಳ ಸುಳ್ಳನ್ನು ಬಸವಾದಿ ಪ್ರಮಥರು ಇಂಥ ಹಲವಾರು ವಚನಗಳ ಮೂಲಕ ನಿರಾಕರಿಸಿದರು. ಜಾತಿವ್ಯವಸ್ಥೆಯನ್ನು ಉಗ್ರವಾಗಿ ಖಂಡಿಸಿದರು. ಕಂದಾಚಾರ, ಮೂಢನಂಬಿಕೆಗಳ ವಿರುದ್ಧ ನಿಂತರು. ಭಕ್ತಿ ಮತ್ತು ಅರಿವಿನ ಮೂಲಕ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಗಳನ್ನು ಪ್ರತಿಪಾದಿಸಿದರು. "ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ" ಎಂಬುದು ಇಡೀ ವಚನಸಾಹಿತ್ಯದ ಕಾವ್ಯಧೋರಣೆಯೇ ಆಗಿದೆ. ಯಾಕೆಂದರೆ ಯಾರೂ ಯಾರನ್ನೂ ನಿಯಂತ್ರಿಸುತ್ತಿಲ್ಲ. ವೈಯಕ್ತಿಕ ಸ್ವಾತಂತ್ರ್ಯ ಎಲ್ಲಾ ಶರಣರಿಗಿದೆ. ಆದರೆ ಅವರಿಗೊಂದು ಸಾಮಾಜಿಕ ಜವಾಬ್ದಾರಿಯೂ ಇದೆ. ಜಾತಿರಹಿತ ಸಮಾಜ, ಶೋಷಣಾರಹಿತ ಸಮಾಜ ಕಟ್ಟಬೇಕೆಂಬ ವಿಶಾಲ ತಳಹದಿಯ ಒಂದು ಉದ್ದೇಶ ಎಲ್ಲರಲ್ಲೂ ಇದೆ. ಅದನ್ನು ಸಾಧಿಸಬೇಕಾದಾಗ ತುಂಬ 'ಎಚ್ಚರಿಕೆ'ಯಿಂದ ಹೆಜ್ಜೆ ಇಡುತ್ತಾರೆ. ಬುದ್ಧ ಗುರುವಿನ ಕೊನೆಯ ಸಂದೇಶವಾದರೂ ಇದೇ ಆಗಿದೆ. ತನ್ನ ಅಸಂಖ್ಯಾತ ಶಿಷ್ಯರನ್ನು ಕುರಿತು ಅವರು "ಅಪ್ಪ ಮಾದೇನ ಸಂಪಾದೇಥ" (ಎಚ್ಚರಿಕೆಯನ್ನು ಸಂಪಾದಿಸಿ) ಎಂದು ಹೇಳಿದರು. ದಿಕ್ಕುಗಾಣದೆ ಕುರುಡು ಕುರುಡಾಗಿ ಧಾವಿಸುತ್ತಿರುವ ಇಂದಿನ ಲೋಕಕ್ಕೆ ಇದು ಅಗತ್ಯವಾದ ಸಂದೇಶ.

**ಡಾ॥ ರಂಗಾರೆಡ್ಡಿ ಕೋಡಿರಾಂಪುರ**
೩೯, 'ಇರುವಂತೆ', ೧ನೇ ಮುಖ್ಯರಸ್ತೆ, ಪಾರ್ವತಿನಗರ, ಲಗ್ಗೆರೆ
ಬೆಂಗಳೂರು–೫೬೦೦೫೮

# ಮ್ಯೆನ್ಮಾರ್ : ಪ್ರಜಾಪ್ರಭುತ್ವ ಸರಕಾರ ಇನ್ನೂ ಬಲು ದೂರ



*ಆಂಗ್‌ಸಾನ್ ಸೂಕಿ*

**ಭಾ**ರತದ ಪೂರ್ವದಲ್ಲಿರುವ ರಾಷ್ಟ್ರ ಮ್ಯೆನ್ಮಾರ್. ಐದು ಕೋಟಿಯಷ್ಟು ಜನಸಂಖ್ಯೆ ಇರುವ, ಭಾರತ ಉಪಖಂಡಕ್ಕೆ ಸೇರಿದ ಈ ದೇಶ ಹಿಂದೆ ಬರ್ಮಾ ಎಂದೇ ಪ್ರಖ್ಯಾತವಾಗಿತ್ತು. ೧೯೬೨ರಲ್ಲಿ ಮಿಲಿಟರಿ ಸರ್ವಾಧಿಕಾರದ ಆಡಳಿತ ಬಂದಮೇಲೆ ಹೆಸರು ಬದಲಾವಣೆಯಾಗಿ ಮ್ಯೆನ್ಮಾರ್ ಆಯಿತು. ಕ್ರಿಸ್ತಪೂರ್ವದ ಕಾಲದಲ್ಲಿ ಟಿಬೆಟ್ ಮತ್ತು ಚೀಣಾಗಳಿಂದ ವಲಸೆ ಬಂದವರು ಇಲ್ಲಿನ ಪೂರ್ವಿಕರು ಎನ್ನುತ್ತಾರೆ ಇತಿಹಾಸಕಾರರು. ಬೌದ್ಧಮತೀಯರೇ ಅಧಿಕವಾಗಿರುವ ಈ ದೇಶ ಬ್ರಿಟಿಷ್ ವಸಾಹತು ಆದದ್ದು ಹತ್ತೊಂಬತ್ತನೇ ಶತಮಾನದ ಅಂತ್ಯದಲ್ಲಿ. ಇದನ್ನು ಬ್ರಿಟಿಷರು ಭಾರತದ ಒಂದು ಪ್ರಾಂತವಾಗಿ ಪರಿಗಣಿಸಿ ಆಳುತ್ತಿದ್ದರು. ೧೯೩೭ರಲ್ಲಿ ಅದನ್ನು ಪ್ರತ್ಯೇಕ ದೇಶವಾಗಿ ಪರಿಗಣಿಸಲಾಯಿತು. ೧೯೪೮ರಲ್ಲಿ ಸ್ವತಂತ್ರಗೊಂಡ ಈ ದೇಶ ಪ್ರಜಾತಂತ್ರ ವ್ಯವಸ್ಥೆ ಹೊಂದಿದ್ದುದು ಹದಿನಾಲ್ಕು ವರ್ಷಗಳು ಮಾತ್ರ. ಆಗಿನಿಂದ ಮಿಲಿಟರಿ ಆಡಳಿತದ್ದೇ ಕಾರುಬಾರು. ಪ್ರಪಂಚದ ಎಲ್ಲ ದೇಶಗಳೊಂದಿಗೂ ಸಂಬಂಧ ಕಳೆದುಕೊಂಡಿದ್ದು, ವಿಶ್ವಸಂಸ್ಥೆಯಿಂದಲೂ ದೂರ ಸರಿದಿದ್ದು, ಬರ್ಮಾ ವಿಶ್ವಸಂಸ್ಥೆಗೆ ಪ್ರಧಾನ ಕಾರ್ಯದರ್ಶಿಯನ್ನೂ ನೀಡಿತ್ತು ಮತ್ತು ಅಲಿಪ್ತ ಚಳುವಳಿಯಲ್ಲಿ ಸಕ್ರಿಯವಾಗಿತ್ತು. ೧೯೪೭ರಲ್ಲಿ ರಾಷ್ಟ್ರೀಯ ನಾಯಕ ಆಂಗ್‌ಸಾನ್ ನಾಯಕತ್ವದಲ್ಲಿ ಹಂಗಾಮಿ ಸರಕಾರವೊಂದನ್ನು ಬ್ರಿಟಿಷರು ರಚಿಸಿದರು. ಆದರೆ ಆರೇ ತಿಂಗಳಲ್ಲಿ ಆಂಗ್‌ಸಾನ್ ಮತ್ತು ಅವರ ಆರು ಮಂದಿ ಸಚಿವರೂ ಕೊಲೆಯಾದರು. ಈಗ ಆಂಗ್‌ಸಾನ್‌ರ ಮಗಳು ಆಂಗ್‌ಸಾನ್ ಸೂಕಿ ಮಿಲಿಟರಿ ಸರ್ವಾಧಿಕಾರವನ್ನು ಅಂತ್ಯಗೊಳಿಸಲು ಪ್ರಜಾಪ್ರಭುತ್ವಕ್ಕಾಗಿ ಹೋರಾಟ ನಡೆಸುತ್ತಿದ್ದಾರೆ. ಅವರ ಈ ಹೋರಾಟಕ್ಕೆ ಪೂರ್ಣ ಜಯ ಇನ್ನೂ ದೂರ.

ಈ ವರ್ಷ ನವೆಂಬರ್ ತಿಂಗಳಲ್ಲಿ ನಡೆದ ಚುನಾವಣೆಗಳಲ್ಲಿ ಆಂಗ್‌ಸಾನ್ ಸೂಕಿ ನಾಯಕತ್ವದಲ್ಲಿರುವ ನ್ಯಾಷನಲ್ ಲೀಗ್ ಫಾರ್ ಡೆಮಾಕ್ರಸಿ ಪಕ್ಷ ಬಹುಮತ ಗಳಿಸಿದೆ. ಸರಕಾರ ರಚಿಸಿ ಅಧಿಕಾರಕ್ಕೆ ಬಂದರೂ ಸೂತ್ರವೆಲ್ಲ ಮಿಲಿಟರಿ ಕೈಯ್ಯಲ್ಲೇ ಇರುತ್ತದೆ. ಈಗಿರುವ ಸಂವಿಧಾನದ ಪ್ರಕಾರ ಸರಕಾರದ ಯಾವುದೇ ತೀರ್ಮಾನವನ್ನು ಸೇನೆ ತಿರಸ್ಕರಿಸುವ ಅಧಿಕಾರ ಹೊಂದಿರುತ್ತದೆ. ಅದೇ ರೀತಿಯಲ್ಲಿ ಸೂಕಿ ಅಧಿಕಾರ ವಂಚಿತೆ. ಆಕೆ ಅಧ್ಯಕ್ಷ ಸ್ಥಾನ ಪಡೆಯುವಂತಿಲ್ಲ. ಆಕೆಯ ದಿವಂಗತ ಪತಿ ಬ್ರಿಟಿಷ್ ಪ್ರಜೆ ಆಗಿದ್ದುದರಿಂದ ಸಂವಿಧಾನದ ಪ್ರಕಾರ ಆಕೆ ಯಾವುದೇ ಅಧಿಕಾರ ಸ್ಥಾನಕ್ಕೆ ಬರುವಂತಿಲ್ಲ. ಮಿಲಿಟರಿ ಸರ್ವಾಧಿಕಾರ ಆಕೆ ಅಧಿಕಾರಕ್ಕೆ ಬರುವುದನ್ನು ತಡೆಯುವುದಕ್ಕಾಗಿಯೇ ಸಂವಿಧಾನದಲ್ಲಿ ಅಂಥ ವಿಧಿಯನ್ನು ಸೇರಿಸಿದೆ.

ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳಿಗಾಗಿ ಅವಿಶ್ರಾಂತವಾಗಿ ಹೋರಾಡುತ್ತಿರುವ ಸೂಕಿ ನೊಬೆಲ್ ಪ್ರಶಸ್ತಿ ವಿಜೇತೆ. ೧೯೯೦ರಲ್ಲಿ ಆಕೆಯ ನೇತೃತ್ವದಲ್ಲಿರುವ ಪಕ್ಷ ಚುನಾವಣೆಯಲ್ಲಿ ಬಹುಮತ ಗಳಿಸಿದ್ದಾಗ್ಯೂ ಮಿಲಿಟರಿ ಸರಕಾರ ಫಲಿತಾಂಶವನ್ನು ಒಪ್ಪಿಕೊಳ್ಳದೆ ಪಕ್ಷದ ಮೇಲೆ ದಬ್ಬಾಳಿಕೆ ನಡೆಸಿತು. ಪಶ್ಚಿಮ ರಾಷ್ಟ್ರಗಳು ಆರ್ಥಿಕ ದಿಗ್ಬಂಧನ ಹೊರಿಸಿದರೂ ಚೀಣಾ ಮಾತ್ರ ವಾಣಿಜ್ಯ ಸಂಬಂಧ ಹೊಂದಿತ್ತು. ಕಳೆದ ಒಂದು ದಶಕದಿಂದ ಭಾರತ ಮ್ಯೆನ್ಮಾರ್‌ನೊಂದಿಗೆ ಸಂಬಂಧವನ್ನು ಪುನಃ ಸ್ಥಾಪಿಸಿದೆ. ೨೦೧೧ರಲ್ಲಿ ಮಿಲಿಟರಿ ಸರಕಾರ ವಿದೇಶಾಂಗ ನೀತಿಯಲ್ಲಿ ಮಾರ್ಪಾಟುಗಳನ್ನು ತಂದಮೇಲೆ ಅಮೆರಿಕದೊಂದಿಗೂ ಸಂಬಂಧಗಳು ಉತ್ತಮಗೊಂಡವು. ಮಿಲಿಟರಿ ಆಡಳಿತ ಆಂಗ್‌ಸಾನ್ ಸೂಕಿಯನ್ನು ೧೯೮೯ರಲ್ಲಿ ಆಕೆಯನ್ನು ಬಂಧಿಸಿ ಹದಿನೈದು ವರ್ಷಗಳ ಕಾಲ ಗೃಹಬಂಧನದಲ್ಲಿರಿಸಿತ್ತು. ನ್ಯಾಷನಲ್ ಲೀಗ್ ಫಾರ್ ಡೆಮಾಕ್ರಸಿ ಪಕ್ಷದ ಸಾವಿರಾರು ಕಾರ್ಯಕರ್ತರನ್ನು ಬಂಧಿಸಿ ದೀರ್ಘಕಾಲ ಕಾರಾಗೃಹದಲ್ಲಿರಿಸಲಾಗಿತ್ತು.



ಎಲ್ಲವೂ ಸುಸೂತ್ರವಾಗಿ ನಡೆದರೆ ೨೦೧೬ರ ಮಾರ್ಚ್ ತಿಂಗಳಲ್ಲಿ ನಾಗರಿಕ ಸರಕಾರ ಅಧಿಕಾರಕ್ಕೆ ಬರುವುದು. ೬೬೪ ಸದಸ್ಯರನ್ನು ಹೊಂದಿರುವ ಪಾರ್ಲಿಮೆಂಟಿನಲ್ಲಿ ಸೂಕಿಯ ಪಕ್ಷ ಶೇ. ೮೦ರಷ್ಟು ಸ್ಥಾನಗಳನ್ನು ಪಡೆದುಕೊಂಡಿದೆ. ಸೇನೆ ೧೬೬ ಸದಸ್ಯರನ್ನು ನಾಮಕರಣ ಮಾಡಲಿದೆ. ೧೯೬೨ರ ನಂತರ ಮೊದಲ ಬಾರಿಗೆ ಚುನಾಯಿತ ಸದಸ್ಯರು ರಾಷ್ಟ್ರದ ಅಧ್ಯಕ್ಷರನ್ನು ಆಯ್ಕೆ ಮಾಡಲಿದ್ದಾರೆ. ಈ ಮೊದಲೇ ಹೇಳಿರುವ ಹಾಗೆ ಸೂಕಿ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸುವಂತಿಲ್ಲ, ಸಂವಿಧಾನಕ್ಕೆ ತಿದ್ದುಪಡಿ ತರುವವರೆಗೆ. ಸಂವಿಧಾನದ ತಿದ್ದುಪಡಿಯೂ ಸುಲಭವಲ್ಲ. ಸೇನೆ ನೇಮಕ ಮಾಡುವ ಸದಸ್ಯರ ಬೆಂಬಲವಿಲ್ಲದೆ ಸಂವಿಧಾನಕ್ಕೆ ತಿದ್ದುಪಡಿ ಸಾಧ್ಯವಿಲ್ಲ. ಹಾಗಾಗಿ ಹೊಸ ಸರಕಾರ ಅಧಿಕಾರಕ್ಕೆ ಬಂದರೂ ಸೇನೆಯ ಮರ್ಜಿಗೆ ಅನುಸಾರವಾಗಿ ಆಡಳಿತ ನಡೆಸಬೇಕಾಗುತ್ತದೆ. ಜನತೆಯ ಬೆಂಬಲ ಇದ್ದರೂ ನಾಗರಿಕ ಸರಕಾರ ಪ್ರಜಾಪ್ರಭುತ್ವ ರೀತಿಯಲ್ಲಿ ಕಾರ್ಯ ನಿರ್ವಹಿಸುವಂತಿಲ್ಲ. ಪ್ರಾಯಶಃ ಸೇನಾಧಿಕಾರಿಗಳು ಇಂಥ ಸಂದರ್ಭವನ್ನು ನಿರೀಕ್ಷಿಸಿಯೇ ಸರಕಾರದ ಮೇಲೆ ನಿಯಂತ್ರಣ ಇರಿಸಿಕೊಳ್ಳಲು ತಮಗೆ ಬೇಕಾದಂತೆ ಸಂವಿಧಾನವನ್ನು ರಚಿಸಿಕೊಂಡಿದ್ದಾರೆ. ಅದರಿಂದಾಗಿ ಸಂಪೂರ್ಣ ಪ್ರಜಾಪ್ರಭುತ್ವ ವ್ಯವಸ್ಥೆಗಾಗಿ ಹೋರಾಟ ಮುಂದುವರಿಯ ಬೇಕಾಗಿದೆ. ಇದಕ್ಕೆ ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳ ಬೆಂಬಲವೂ ಅಗತ್ಯ. ಸೇನೆಯ ಮೇಲೆ ಒತ್ತಡ ತರುವುದಕ್ಕೆ ಎಲ್ಲ ದೇಶಗಳೂ ಪ್ರಯತ್ನಿಸಬೇಕಾಗಿದೆ. ಮ್ಯೆನ್ಮಾರ್‌ನ ಪರಿಸ್ಥಿತಿ ಕೈಗೆ ಬಂದ ತುತ್ತು ಬಾಯಿಗಿಲ್ಲ ಎಂಬಂತಾಗಿದೆ. ಅಲ್ಲಿನ ಜನರ ಹೋರಾಟಕ್ಕೆ ಜಯ ಲಭಿಸಲಿ ಎಂದು ಹಾರೈಸೋಣ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್ ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ಕ್ಷ - ಕಿರಣ

- ಸಾನ್ವಿ ಪಿ.







## ಹೊಸ ವರ್ಷದ ಶುಭಾಶಯಗಳು



# ವಿವಿಧ ರೀತಿಯ ನಾಮಫಲಕಗಳಿಗೆ ನಮ್ಮನ್ನು ಸಂಪರ್ಕಿಸಿ































# The Arts

**FLEX, A C P, BRASS, STEEL**
**L E D, AND MURAL SIGNAGES**

**CONTACT: 9448278426 email:thearts007@yahoo.co.in**

# ಕೃಷಿಯಲ್ಲಿನ ಬಿಕ್ಕಟ್ಟು ರೈತರ ಆತ್ಮಹತ್ಯೆ ಮತ್ತು ಬರಗಾಲ

ಡಾ॥ ಟಿ. ಆರ್. ಚಂದ್ರಶೇಖರ



**ಕೃಷಿಯ ಬಿಕ್ಕಟ್ಟು ಮನುಷ್ಯನಿರ್ಮಿತ ಸಮಸ್ಯೆ. ಸರ್ಕಾರಗಳ ತಪ್ಪು ನೀತಿಗಳಿಂದಾಗಿ ಕೃಷಿಯ ಬೆಳವಣಿಗೆ ಕುಂಠಿತಗೊಂಡಿದೆ. ಕೃಷಿ–ರೈತ ಇಂದು ಕೇಂದ್ರ ಸರ್ಕಾರದ ಆದ್ಯತೆಯ ಸಂಗತಿಯಲ್ಲ. ಅದು ಕೇವಲ ಉದ್ದಿಮೆ, ಬಂಡವಾಳ, ತಂತ್ರಜ್ಞಾನ, ಫೇಸ್‌ಬುಕ್, ಟ್ವಿಟರ್, ಡಿಜಿಟಲ್ ಇಂಡಿಯಾ ಬಗ್ಗೆ ಮಾತನಾಡುತ್ತಿದೆ. ನೇಗಿಲಿನ ಬಗ್ಗೆ ಅದು ದಿವ್ಯ ಮೌನ ವಹಿಸಿದೆ. ಫಲಿತಾಂಶ ರೈತರ ಆತ್ಮಹತ್ಯೆ. ನಿಜ, ಇದಕ್ಕೆ ಅನೇಕ ಕಾರಣಗಳಿವೆ. ಕೃಷಿ ಬಿಕ್ಕಟ್ಟಿಗೆ ಕಾರಣವಾಗಿರುವ ಸಂಗತಿಗಳನ್ನು ಕುರಿತ ಚರ್ಚೆಯನ್ನು ಪ್ರವೇಶಿಸುವುದಕ್ಕೆ ಮೊದಲು ನಮ್ಮ ಸಮಾಜದ ಸಂದರ್ಭದಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಕ್ರಮವನ್ನು ಕುರಿತಂತೆ ಚರ್ಚೆ ಮಾಡುವ ಅಗತ್ಯವಿದೆ.**

## ಪ್ರಸ್ತಾವನೆ

ರಾಜ್ಯಾದ್ಯಂತ ಆತಂಕಕಾರಿಯಾಗಿ ರೈತರ ಆತ್ಮಹತ್ಯೆಗಳು ನಡೆಯುತ್ತಿವೆ. ಇದು ದಿನನಿತ್ಯದ ಸಂಗತಿಯಾಗಿಬಿಟ್ಟಿದೆ. ದೇಶದಲ್ಲಿ ರೈತರ ಆತ್ಮಹತ್ಯೆಗೆ ಸಂಬಂಧಿಸಿದಂತೆ ಕರ್ನಾಟಕವು ಎರಡನೆಯ ಕಳಂಕಿತ ಸ್ಥಾನ ಪಡೆದಿದೆ ಎಂದು ಹೇಳಲಾಗುತ್ತಿದೆ. ಪ್ರತಿ ದಿನ ಸರಾಸರಿ ಇಬ್ಬರು ಅಥವಾ ಮೂವರು ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇದೇ ಸಮಯದಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿ ಕೃಷಿಯ ಬಿಕ್ಕಟ್ಟನ್ನು ಕುರಿತಂತೆ, ರೈತರ ಆತ್ಮಹತ್ಯೆಯ ಬಗ್ಗೆ ಚರ್ಚೆಗಳು, ವಿಚಾರ ಸಂಕಿರಣಗಳು, ವಿಶೇಷ ಉಪನ್ಯಾಸಗಳು ನಡೆಯುತ್ತಿವೆ. ರೈತರಿಗೆ ಆತ್ಮಸ್ಥೈರ್ಯ ತುಂಬುವ ಕೆಲಸಗಳು ನಡೆಯುತ್ತಿವೆ. ಈ ಕಾಯಕದಲ್ಲಿ ರೈತ ಸಂಘಟನೆಗಳು ಮುಂಚೂಣಿಯಲ್ಲಿರುವುದು ಮೆಚ್ಚಬೇಕಾದ ಸಂಗತಿಯಾಗಿದೆ. ಆದರೆ ರಾಜ್ಯದ ಉದ್ದಿಮೆ–ವ್ಯಾಪಾರಿ ಬಳಗ ಮಾತ್ರ ರಾಜ್ಯದಲ್ಲಿ ಏನೇನೂ ನಡೆದೇ ಇಲ್ಲವೇನೋ ಅನ್ನುವ ರೀತಿಯಲ್ಲಿ ತಮ್ಮ ವ್ಯಾಪಾರ, ವ್ಯವಹಾರ, ಮಾರಾಟ, ಸರ್ಕಾರದ ರಿಯಾಯಿತಿ, ಬಡ್ಡಿ ಇಳಿಕೆ, ಅಮೆರಿಕಾ ವೀಸಾ ಮುಂತಾದವುಗಳ ಲೆಕ್ಕಾಚಾರದಲ್ಲಿ ಮುಳುಗಿ ರೈತರ ಆತ್ಮಹತ್ಯೆ ಬಗ್ಗೆ, ಕೃಷಿಯ ಬಿಕ್ಕಟ್ಟಿನ ಬಗ್ಗೆ ವಹಿಸಿರುವ ದಿವ್ಯ ಮೌನವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಒಕ್ಕಲುತನ ಮೂರಾಬಟ್ಟೆಯ ದಾರಿ ಹಿಡಿದಿದೆ. ಅದು ರೋಗಗ್ರಸ್ತವಾಗಿದೆ. ನಮ್ಮ ರೈತರು ತಮ್ಮ ಜೀವ ಕಳೆದುಕೊಳ್ಳುತ್ತಿದ್ದಾರೆ. ಹೀಗೆ ರೈತ ಜೀವ ಕಳೆದುಕೊಂಡ ಮೇಲೆ ಆ ಕುಟುಂಬದ ಬದುಕು ಏನಾಗುತ್ತದೆ? ಗಂಡನನ್ನು ಕಳೆದುಕೊಂಡ ರೈತ ಮಹಿಳೆಯರ ಜೀವನ ಮುಂದೆ ಹೇಗೆ?

ಈ ಪ್ರಬಂಧದಲ್ಲಿ ಸಂಕ್ಷಿಪ್ತವಾಗಿ ಕರ್ನಾಟಕದ ಕೃಷಿಯ ಸ್ಥಿತಿಗತಿ, ಅದರಲ್ಲಿ ೨೦೦೧ರಿಂದ ೨೦೧೧ರ ಅವಧಿಯಲ್ಲಿ ಉಂಟಾಗಿರುವ ಬದಲಾವಣೆಗಳು, ರೈತರ ಆತ್ಮಹತ್ಯೆಯ ಹಿಂದಿನ ಸಾಮಾಜಿಕ – ಆರ್ಥಿಕ ಕಾರಣಗಳು ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ.

**ಕರ್ನಾಟಕದ ಕೃಷಿಯ ಸ್ಥಿತಿಗತಿ : ೨೦೦೧–೨೦೧೧**

ಕರ್ನಾಟಕಸ್ಥರು ಕೃಷಿಯ ಬಗ್ಗೆ ಆಸಕ್ತಿ ಕಳೆದುಕೊಂಡಿದ್ದಾರೆ. ಅದು ಯಾರಿಗೂ ಬೇಡವಾದ ವೃತ್ತಿಯಾಗಿದೆ. ಕೃಷಿಯನ್ನು ಅವಲಂಬಿಸಿರುವವರ ಪ್ರಮಾಣ ಕುಸಿಯುತ್ತಿದೆ. ಹಿಂದೆ ಅರ್ಥಶಾಸ್ತ್ರದಲ್ಲಿ ಪಾಠ ಮಾಡುತ್ತಿದ್ದಂತೆ ಇಂದು ನಾವು ಕೃಷಿಯು ಕರ್ನಾಟಕದ ಬೆನ್ನೆಲುಬು, ಶೇ. ೭೦ರಷ್ಟು ಜನರು ಕೃಷಿಯನ್ನು ನಂಬಿ ಬದುಕುತ್ತಿದ್ದಾರೆ, ರಾಜ್ಯದ ವರಮಾನಕ್ಕೆ ಅದು ಶೇ. ೫೦ರಷ್ಟು ಕಾಣಿಕೆ ನೀಡುತ್ತಿದೆ ಎಂದೆಲ್ಲಾ ಹೇಳಲುಬರುವುದಿಲ್ಲ. ಇದಕ್ಕೆ ನಿದರ್ಶನವಾಗಿ ಕೆಳಗಿನ ಕೋಷ್ಟಕ ನೋಡಿ :

ಮೇಲಿನ ಕೋಷ್ಟಕದ ಅಂಕಿಅಂಶಗಳಲ್ಲಿ ಅಡಗಿರುವ ಸೂಕ್ಷ್ಮಗಳನ್ನು ನಾವು ಅರ್ಥಮಾಡಿಕೊಳ್ಳಬೇಕು. ಕೃಷಿಯನ್ನು ಅವಲಂಬಿಸಿರುವವರ ಒಟ್ಟು ಸಂಖ್ಯೆಯು ೨೦೦೧ರಿಂದ ೨೦೧೧ರ ಅವಧಿಯಲ್ಲಿ ಹೆಚ್ಚಾಗಿದೆ. ಕರ್ನಾಟಕದಲ್ಲಿ ಅವರ ಸಂಖ್ಯೆಯು ೧೩೧.೧೧ ಲಕ್ಷದಿಂದ ೧೩೭.೩೭ ಲಕ್ಷಕ್ಕೆ ಏರಿಕೆಯಾಗಿದೆ. ಇದು ಒಟ್ಟು ಸಂಖ್ಯೆಯಲ್ಲಾಗಿರುವ ಹೆಚ್ಚಳ. ಆದರೆ ಸಾಪೇಕ್ಷವಾಗಿ ಕೃಷಿಯ ಅವಲಂಬನೆಯು ರಾಜ್ಯದಲ್ಲಿ ಕುಸಿತಕ್ಕೆ ಒಳಗಾಗಿದೆ. ರಾಜ್ಯದಲ್ಲಿ ಕೃಷಿಯ ಅವಲಂಬನೆಯು ೨೦೦೧ರಲ್ಲಿ ಶೇ. ೫೫.೭೦ರಷ್ಟಿದ್ದುದು ೨೦೧೧ರಲ್ಲಿ ಅದು ಶೇ. ೪೯.೨೮ಕ್ಕಿಳಿದಿದೆ.

**ಕೋಷ್ಟಕ ೧ : ಕೃಷಿಯ ಮೇಲಿನ ಅವಲಂಬನೆ ೨೦೦೧ ಮತ್ತು ೨೦೧೧**

(ಅಂಕಿಗಳು : ಲಕ್ಷದಲ್ಲಿ)

| ರಾಜ್ಯ / ಜಿಲ್ಲೆಗಳು | ಒಟ್ಟು ದುಡಿಮೆಗಾರರು | | ಉಳುಮೆಗಾರರು | | ಭೂರಹಿತ ದಿನಗೂಲಿ ದುಡಿಮೆಗಾರರು | | ಒಟ್ಟು ಕೃಷಿಯನ್ನು ಅವಲಂಬನೆ | |
|---|---|---|---|---|---|---|---|---|
| | ೨೦೦೧ | ೨೦೧೧ | ೨೦೦೧ | ೨೦೧೧ | ೨೦೦೧ | ೨೦೧೧ | ೨೦೦೧ | ೨೦೧೧ |
| ಕರ್ನಾಟಕ | ೨೩೫.೩೫ | ೨೭೮.೭೨ | ೬೮.೮೪<br>ಶೇ. ೨೯.೨೫ | ೬೫.೮೧<br>ಶೇ. ೨೩.೬೧ | ೬೨.೨೭<br>ಶೇ. ೨೬.೪೬ | ೭೧.೫೬<br>ಶೇ. ೨೫.೬೭ | ೧೩೧.೧೧<br>ಶೇ. ೫೫.೭೧ | ೧೩೭.೩೭<br>ಶೇ. ೪೯.೨೮ |

| ಕರ್ನಾಟಕದ ವಲಯವಾರು ನಿವ್ವಳ ಆಂತರಿಕ ಉತ್ಪನ್ನ (ಚಾಲ್ತಿ ಬೆಲೆಗಳಲ್ಲಿ) ೨೦೧೪–೨೦೧೫. (ಕೋಟಿ ರೂಪಾಯಿಗಳಲ್ಲಿ) | | | | |
|---|---|---|---|---|
| ಕರ್ನಾಟಕ/ ವಲಯಗಳು | ಪ್ರಾಥಮಿಕ ವಲಯ<br>ರೂ. ೧೧೪೩೯೮<br>(ಶೇ. ೧೭.೫೦) | ದ್ವಿತೀಯ ವಲಯ<br>ರೂ. ೧೩೧೫೭೫<br>(ಶೇ. ೨೩.೪೦) | ತೃತೀಯ ವಲಯ<br>ರೂ. ೩೭೯೪೧೨<br>(ಶೇ. ೫೯.೧) | ಒಟ್ಟು<br>ರೂ. ೬೨೫೪೧೨<br>(ಶೇ. ೧೦೦.೦೦) |

*ಮೂಲ : (೧). ಸೆನ್ಸಸ್ ಆಫ್ ಇಂಡಿಯಾ, ೨೦೦೧ ಮತ್ತು ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್, ಸಿರೀಸ್ ೩೦. ಕರ್ನಾಟಕ, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್ಸ್, ಬೆಂಗಳೂರು. (೨). ಕರ್ನಾಟಕ ಸರ್ಕಾರ, ೨೦೧೪. ಕರ್ನಾಟಕ ಆರ್ಥಿಕ ಸಮೀಕ್ಷೆ ೨೦೧೪–೨೦೧೫. ಡೈರೆಕ್ಟೊರೇಟ್ ಆಫ್ ಎಕನಾಮಿಕ್ಸ್ ಆಂಡ್ ಸ್ಟ್ಯಾಟಿಸ್ಟಿಕ್ಸ್, ಬೆಂಗಳೂರು.*



ಇಲ್ಲಿನ ಕುಸಿತದ ಪ್ರಮಾಣ ಶೇ. ೬.೪೨ ಅಂಶಗಳಷ್ಟಿದೆ. ಇಲ್ಲಿ ಮತ್ತೊಂದು ಸೂಕ್ಷ್ಮವನ್ನು ಗಮನಿಸಬೇಕು. ಭೂ ಉಳುಮೆಗಾರರ ಸಂಖ್ಯೆಯು ಕಳೆದ ಹತ್ತು ವರ್ಷಗಳಲ್ಲಿ ಕಡಿಮೆಯಾಗಿದ್ದರೆ ಭೂರಹಿತ ದಿನಗೂಲಿ ದುಡಿಮೆಗಾರರ ಸಂಖ್ಯೆ ಅಧಿಕಗೊಂಡಿದೆ. ಅಂದರೆ ಅತಿಸಣ್ಣ ಮತ್ತು ಸಣ್ಣ ಹಿಡುವಳಿಗಾರರು ತಮ್ಮ ಜಮೀನನ್ನು ಮಾರಿ ಈಗ ಭೂರಹಿತ ಕೃಷಿ ಕಾರ್ಮಿಕರಾಗಿರುವ ಸಾಧ್ಯತೆಯಿದೆ. ಇದನ್ನು ನಾವು ಅರ್ಥಮಾಡಿಕೊಳ್ಳಬೇಕು. ರಾಜ್ಯದಲ್ಲಿ ೨೦೦೧ರಿಂದ ೨೦೧೧ರ ಅವಧಿಯಲ್ಲಿ ಭೂಮಾಲೀಕರ ಸಂಖ್ಯೆಯು ೩.೦೩ ಲಕ್ಷ ಕಡಿಮೆಯಾಗಿದೆ. ಆದರೆ ರಾಜ್ಯದಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಸಂಖ್ಯೆಯು ೯.೨೯ ಲಕ್ಷ ಅಧಿಕಗೊಂಡಿದೆ. ಈ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು ಆರಂಭದಲ್ಲಿ ರಾಜ್ಯದಲ್ಲಿ ಕೃಷಿಯು ಜನರ ಆಸಕ್ತಿಯ ವೃತ್ತಿಯಾಗಿ ಉಳಿದಿಲ್ಲ ಎಂದು ಹೇಳಲಾಗಿದೆ.

ಕೃಷಿಯ ಬಿಕ್ಕಟ್ಟಿನ ಸಂದರ್ಭದಲ್ಲಿ ಚರ್ಚೆ ಮಾಡಬೇಕಾಗಿರುವ ಮತ್ತೊಂದು ಸಂಗತಿಯೆಂದರೆ ಕುಸಿಯುತ್ತಿರುವ ಕೃಷಿಯ ವರಮಾನ. ರಾಜ್ಯದ ಒಟ್ಟು ವರಮಾನದಲ್ಲಿ ಕೃಷಿಯ ಪಾಲು ೨೦೦೦ಕ್ಕೆ ಪೂರ್ವದಲ್ಲಿ ಶೇ. ೫೦ರಷ್ಟಿರುತ್ತಿತ್ತು. ಆದರೆ ೨೦೧೪–೨೦೧೫ರಲ್ಲಿ ಅದು ಶೇ. ೧೬.೫ಕ್ಕಿಳಿದಿದೆ. ಇಂದು ರಾಜ್ಯದ ಒಟ್ಟು ವರಮಾನದಲ್ಲಿ ಸಿಂಹಪಾಲನ್ನು (ಶೇ. ೮೨.೫) ಕೃಷಿಯೇತರ ವಲಯಗಳು ಗುತ್ತಿಗೆ ಹಿಡಿದುಕೊಂಡುಬಿಟ್ಟಿವೆ. ಕೃಷಿಯು ಇಂದು ರೈತರಿಗೆ ವರಮಾನವನ್ನು ತಂದುಕೊಡುವ ಸ್ಥಿತಿಯಲ್ಲಿಲ್ಲ. ಕೃಷಿಯಲ್ಲಿ ರೈತರು ಸಮೃದ್ಧ ಸುಗ್ಗಿಯನ್ನು ಎದುರು ನೋಡುವುದಕ್ಕೆ ಪ್ರತಿಯಾಗಿ ದುಃಸ್ಥಿತಿಯ ಸುಗ್ಗಿಯನ್ನು ನೋಡಬೇಕಾಗಿದೆ.

ಕೃಷಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಸರಿಸುಮಾರು ಶೇ. ೫೦. ಆದರೆ ಆ ವಲಯದ ಉತ್ಪನ್ನದ ಪ್ರಮಾಣ ಶೇ. ೧೬.೫. ಆದರೆ ಕೃಷಿಯೇತರ ವಲಯವನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಸರಿಸುಮಾರು ಶೇ. ೫೦. ಆ ವಲಯದಲ್ಲಿ ಉತ್ಪತ್ತಿಯಾಗುತ್ತಿರುವ ವರಮಾನದ ಪ್ರಮಾಣ ಶೇ. ೮೨.೫. ಇದು ಅಸಮಾನತೆಯ ಪರಮೋಚ್ಚ ಸೂಚಿ. ಕೃಷಿಯ ಸಂಕಷ್ಟದ ಮೂಲ ಇಲ್ಲಿದೆ.

**ಕೃಷಿಯ ಬಿಕ್ಕಟ್ಟಿಗೆ ಕಾರಣವಾಗಿರುವ ಸಂಗತಿಗಳು**

ಕೃಷಿಯ ಬಿಕ್ಕಟ್ಟು ಮನುಷ್ಯನಿರ್ಮಿತ ಸಮಸ್ಯೆ. ಸರ್ಕಾರಗಳ ತಪ್ಪು ನೀತಿಗಳಿಂದಾಗಿ ಕೃಷಿಯ ಬೆಳವಣಿಗೆ ಕುಂಠಿತಗೊಂಡಿದೆ. ಕೃಷಿ–ರೈತ ಇಂದು ಕೇಂದ್ರ ಸರ್ಕಾರದ ಆದ್ಯತೆಯ ಸಂಗತಿಯಲ್ಲ. ಅದು ಕೇವಲ ಉದ್ದಿಮೆ, ಬಂಡವಾಳ, ತಂತ್ರಜ್ಞಾನ, ಫೇಸ್‌ಬುಕ್, ಟ್ವಿಟರ್, ಡಿಜಿಟಲ್ ಇಂಡಿಯಾ ಬಗ್ಗೆ ಮಾತನಾಡುತ್ತಿದೆ. ನೇಗಿಲಿನ ಬಗ್ಗೆ ಅದು ದಿವ್ಯ ಮೌನ ವಹಿಸಿದೆ. ಫಲಿತಾಂಶ ರೈತರ ಆತ್ಮಹತ್ಯೆ. ನಿಜ, ಇದಕ್ಕೆ ಅನೇಕ ಕಾರಣಗಳಿವೆ. ಕೃಷಿ ಬಿಕ್ಕಟ್ಟಿಗೆ ಕಾರಣವಾಗಿರುವ ಸಂಗತಿಗಳನ್ನು ಕುರಿತ ಚರ್ಚೆಯನ್ನು ಪ್ರವೇಶಿಸುವುದಕ್ಕೆ ಮೊದಲು ನಮ್ಮ ಸಮಾಜದ ಸಂದರ್ಭದಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಕ್ರಮವನ್ನು ಕುರಿತಂತೆ ಚರ್ಚೆ ಮಾಡುವ ಅಗತ್ಯವಿದೆ.

ಲಾಗಾಯ್ತಿನಿಂದ ಅಭಿವೃದ್ಧಿಯನ್ನು ವರಮಾನದ ಏರಿಕೆಗೆ, ಉತ್ಪಾದನೆಯಲ್ಲಿನ ಹೆಚ್ಚಳಕ್ಕೆ ಮತ್ತು ಬಂಡವಾಳ ಹೂಡಿಕೆಗೆ ಸಂವಾದಿಯಾಗಿ ಅರ್ಥ ಮಾಡಿಕೊಂಡು ಬರಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ವರಮಾನ, ಉತ್ಪಾದನೆ ಮತ್ತು ಬಂಡವಾಳಗಳು ಅಭಿವೃದ್ಧಿಯ ಸಾಧನಗಳು ಮಾತ್ರ. ಅದರ ಸಾಧ್ಯತೆ ಜನರ ಬದುಕನ್ನು ಉತ್ತಮಪಡಿಸುವುದು. ಅಭಿವೃದ್ಧಿ ಅನ್ನುವುದು ಮಹಿಳೆಯರನ್ನೂ ಸೇರಿಸಿಕೊಂಡು ಜನರಿಗೆ, ಜನರ ಬದುಕಿಗೆ, ಅವರ ಆರೋಗ್ಯಕ್ಕೆ, ಅವರ ಅಕ್ಷರ ಸಂಸ್ಕೃತಿಗೆ ಸಂಬಂಧಿಸಿದ ಸಂಗತಿ. ಅಮರ್ತ್ಯ ಸೇನ್ ಮತ್ತೆ ಮತ್ತೆ ನಮ್ಮನ್ನು ಎಚ್ಚರಿಸುತ್ತಿರುವಂತೆ ಅಭಿವೃದ್ಧಿ ಅನ್ನುವುದು ಜನರ ಬದುಕಿನ ಸಮೃದ್ಧಿಗೆ ಸಂಬಂಧಿಸಿದ ಸಂಗತಿಯೇ ವಿನಾ ಆರ್ಥಿಕ ಸಮೃದ್ಧಿಗೆ ಸಂಬಂಧಿಸಿದ ಸಂಗತಿಯಲ್ಲ. ಅಭಿವೃದ್ಧಿಗೆ ವರಮಾನ ಬೇಕು. ಆದರೆ ಅದೇ ಅಭಿವೃದ್ಧಿಯಲ್ಲ. ಏರಿಕೆಯಾದ ವರಮಾನವು ಯಾರಿಗೆ ದೊರೆಯುತ್ತಿದೆ ಎಂಬುದು ಮುಖ್ಯ. ಇದು ಕ್ಲೀಷೆಯ ಸಂಗತಿಯಾದರೂ ಇಂದು ನಾವು ಯಾರ ವರಮಾನ ಏರಿಕೆಯಾಗುತ್ತಿದೆ ಎಂಬ ಪ್ರಶ್ನೆಯನ್ನು ಕೇಳಬೇಕಾದ ಅಗತ್ಯವಿದೆ. ಇಂದು ರೈತಾಪಿ ಜನರ ಬದುಕು ಮೂರಾಬಟ್ಟೆಯಾಗಿದೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಅಭಿವೃದ್ಧಿಯ ಬಗ್ಗೆ, ವರಮಾನದ ಏರಿಕೆಯ ಬಗ್ಗೆ, ಉದ್ದಿಮೆಗಳ ಲಾಭದ ಪ್ರಮಾಣದಲ್ಲಿನ ಬೆಳವಣಿಗೆಯ ಬಗ್ಗೆ ಮಾತನಾಡುವುದು ಬಡವರಿಗೆ, ದುಃಸ್ಥಿತಿಯನ್ನು ಎದುರಿಸುತ್ತಿರುವವರಿಗೆ ಅವಮಾನ ಮಾಡಿದಂತೆ. ಅಭಿವೃದ್ಧಿ ಪ್ರಧಾನವಾಗಿ ಬಡವರಿಗೆ, ರೈತಾಪಿಗಳಿಗೆ, ದುಡಿಮೆಗಾರರಿಗೆ, ಮಹಿಳೆಯರಿಗೆ, ದಲಿತರಿಗೆ ಅಭಿಮುಖವಾಗಿರಬೇಕು. 'ಮೊದಲು ಅಭಿವೃದ್ಧಿ: ನಂತರ ವಿತರಣೆ' ಎಂಬ ಜಗದೀಶ್ ಭಗವತಿ ಪ್ರಣೀತ ಅಭಿವೃದ್ಧಿ ಪ್ರಣಾಳಿಕೆಗೆ ಕೊನೆ ಹಾಡಬೇಕು. ಎರಡನ್ನೂ ಸಮಾನವಾಗಿ ಮತ್ತು ಏಕಕಾಲದಲ್ಲಿ ಸಾಧಿಸಿಕೊಳ್ಳುವ ಬಗ್ಗೆ ನಾವು ಕ್ರಮ ತೆಗೆದುಕೊಳ್ಳಬೇಕು. ಡಿಜಿಟಲ್ ಇಂಡಿಯಾ, ಮೇಕ್ ಇನ್ ಇಂಡಿಯಾ, ಸ್ಟಾರ್ಟ್ ಇಂಡಿಯಾ, ಸ್ವಚ್ಛ ಭಾರತ ಮುಂತಾದವು ಮತ್ತು ಮೈಕ್ರೊಸಾಫ್ಟ್‌ನ ಸಿಇಓ ಸತ್ಯ ನಾದೆಲ್ಲ, ಫೇಸ್‌ಬುಕ್‌ನ ಮಾರ್ಕ್ ಜುಕರ್‌ಬರ್ಗ್, ಗೂಗಲ್‌ನ ಪಿಚಾವ್ – ಮುಂತಾದವು ಇಂದು ಅಭಿವೃದ್ಧಿ ಆದ್ಯತೆಯ ಸಂಗತಿಗಳಾಗಿವೆ. ದೇಶದ ಚುಕ್ಕಾಣಿ ಹಿಡಿದವರಿಗೆ ರೈತ ಎಂಬ ಪದವನ್ನು ಬಳಸುವುದರ ಬಗ್ಗೆಯೂ ಮನಸ್ಸಿಲ್ಲ. ಇದು ಬದಲಾಗದೆ ಕೃಷಿಯ ಸಮಸ್ಯೆಯು ಬಗೆಹರಿಯುವುದಿಲ್ಲ ಮತ್ತು ರೈತರ ಆತ್ಮಹತ್ಯೆಗಳು ನಿಲ್ಲುವುದಿಲ್ಲ.

ಈಗ ಕೃಷಿಯನ್ನು ಕಾಡುತ್ತಿರುವ ಮುಖ್ಯ ಕಾರಣಗಳ ಬಗ್ಗೆ ಚರ್ಚೆ ಮಾಡಬಹುದು.

ಮೊದಲನೆಯದಾಗಿ, ಇಡೀ ಸಮಾಜಕ್ಕೆ ಬಡವರ ಬಗ್ಗೆ, ದುಡಿಮೆಗಾರರ ಬಗ್ಗೆ, ರೈತಾಪಿಗಳ ಬಗ್ಗೆ ಅಸಹ್ಯಕರ ಭಾವನೆಯಿದೆ. ಸರ್ಕಾರ ಅನ್ನಭಾಗ್ಯವನ್ನು ನೀಡಿದರೆ ದುಡಿಮೆಗಾರರು ಸೋಮಾರಿಗಳಾಗುತ್ತಾರೆ ಎಂದು ಟಿವಿಗಳಲ್ಲಿ, ಪತ್ರಿಕೆಗಳಲ್ಲಿ, ಚರ್ಚೆಗಳಲ್ಲಿ, ಶಾಸನಸಭೆಗಳಲ್ಲಿ ಒದರಾಡುತ್ತಾರೆ. ರೈತರು ಕುಡಿತದಿಂದಾಗಿ, ಸೋಮಾರಿತನದಿಂದಾಗಿ, ಜೂಜಾಟದಿಂದಾಗಿ, ಸರ್ಕಾರ ನೀಡುವ ಪರಿಹಾರಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ ಎಂದು ಅಬ್ಬರಿಸುತ್ತಿದ್ದಾರೆ. ಇಂತಹ ಜೀವವಿರೋಧಿ – ಸಂವೇದನಾರಹಿತ ಸಾಮಾಜಿಕ ನಿಲುವುಗಳಿದ್ದಾಗ ರೈತರು ಆತ್ಮಹತ್ಯೆ ಮಾಡಿಕೊಳ್ಳದೆ ಮತ್ತೇನು ಮಾಡಿಕೊಂಡಾರು !

ಎರಡನೆಯದಾಗಿ, ೧೯೫೦ರಿಂದ ಕೃಷಿಯೆಂದರೆ ನೀರಾವರಿ ಎಂದು ಕಾಂಟ್ರ್ಯಾಕ್ಟ್‌ಗಿರಿಯನ್ನು ಪೋಷಿಸುವ ಬೃಹತ್ ಯೋಜನೆಗಳನ್ನು ಕಟ್ಟುತ್ತಾ ಬಂದೆವು. ಒಣಬೇಸಾಯವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದೆವು. ಬರಗಾಲಕ್ಕೆ ನೀರಾವರಿ ಉತ್ತರವಲ್ಲ. ಮಳೆ ನೀರು ಕೊಯ್ಲು, ಮಳೆ ಆಧರಿತ ಬೇಸಾಯ, ಬಹುಬೆಳೆ ಕೃಷಿ, ಬಹುವರಮಾನ ಒಕ್ಕಲುತನ ಮುಂತಾದವನ್ನು ಕೈಬಿಟ್ಟ ಪರಿಣಾಮವಾಗಿ ರೈತರು ಇಂದು ಕಂಗೆಟ್ಟಿದ್ದಾರೆ. ಒಣಭೂಮಿ ಬೇಸಾಯವು ಬರಗಾಲಕ್ಕೆ ಸರಿಯಾದ ಉತ್ತರವಾಗಿದೆ. ಆದರೆ ಅದಕ್ಕೆ ಪ್ರೋತ್ಸಾಹವಿಲ್ಲ. ಫಲಿತಾಂಶ ರೈತರ ಆತ್ಮಹತ್ಯೆ.

ಮೂರನೆಯದಾಗಿ, ಉದ್ದಿಮೆಯೇ ಅಭಿವೃದ್ಧಿ ಎಂದು ತಿಳಿದುಕೊಂಡಿದ್ದೇವೆ. ನಗರೀಕರಣವೇ ಅಭಿವೃದ್ಧಿ ಎಂದು ಭಾವಿಸಿದ್ದೇವೆ. ಥಳಥಳನೆ ಹೊಳೆಯುವ ರಸ್ತೆಗಳು, ಗಗನಚುಂಬಿ ಕಟ್ಟಡಗಳು, ಜಗಮಗಿಸುವ ಮಾಲುಗಳೇ ಅಭಿವೃದ್ಧಿಯೆಂದು ತಿಳಿದಿದ್ದೇವೆ. ನಮ್ಮ ಪ್ರಧಾನಮಂತ್ರಿ ಬಂಡವಾಳ, ಉದ್ದಿಮೆ, ಡಿಜಿಟಲ್ ಕ್ರಾಂತಿ, ಸ್ಟಾರ್ಟ್‌ಅಪ್ಪುಗಳು, ಉಪಗ್ರಹಗಳು, ಮಂಗಳಯಾನಗಳ ಬಗ್ಗೆ ಮಾತನಾಡುತ್ತಿದ್ದಾರೆಯೇ ವಿನಾ ರೈತರ ಬಗ್ಗೆ, ಕೃಷಿಯ ಬಗ್ಗೆ, ಗ್ರಾಮೀಣ ಬದುಕಿನ ಬಗ್ಗೆ ಚಕಾರವೆತ್ತುತ್ತಿಲ್ಲ. ಸರ್ಕಾರಕ್ಕೆ ಕೃಷಿ ಬೇಡವಾದ ಮೇಲೆ ರೈತರಿಗೆ ಆತ್ಮಹತ್ಯೆ ಮಾಡಿಕೊಳ್ಳದೆ ಬೇರೇನು ದಾರಿಯಿದೆ ?

ನಾಲ್ಕನೆಯದಾಗಿ ಕಬ್ಬು, ನೆಲ್ಲು, ಹತ್ತಿ, ಮೆಕ್ಕೆಜೋಳ, ತೊಗರಿ ಮುಂತಾದ

ಬೆಳೆಗಳನ್ನು ಬೆಳೆಯುವುದೇ ಕೃಷಿ ಎಂದು ನಮ್ಮ ರೈತರು ಇಂದು ಭಾವಿಸಿದ್ದಾರೆ. ಆದರೆ ಹಿಂದೆ ಹೀಗಿರಲಿಲ್ಲ. ಒಕ್ಕಲುತನದ ಜೊತೆಯಲ್ಲಿ ರೈತರು ಎರಡು ಕುರಿ, ನಾಲ್ಕು ಕೋಳಿ, ಮೂರು ಎಮ್ಮೆ/ಆಕಳುಗಳನ್ನು ಸಾಕುತ್ತಿದ್ದರು. ಮನೆಗೆ ಬೇಕಾದ ತರಕಾರಿ ಬೆಳೆದುಕೊಳ್ಳುತ್ತಿದ್ದರು. ಬಹುಬೆಳೆ ಪದ್ಧತಿ ಬಳಕೆಯಲ್ಲಿತ್ತು. ಅವುಗಳಿಂದ ನಾಲ್ಕು ಕಾಸು ಮಾಡಿಕೊಳ್ಳುತ್ತಿದ್ದರು. ಬರಗಾಲಕ್ಕವು ಉತ್ತರ ವಾಗಿದ್ದವು. ಇಂದು ಕೃಷಿ ಅಂದರೆ ಬೆಳೆ ಬೆಳೆಯುವುದು ಎಂದು ಭಾವಿಸಲಾಗಿದೆ. ಗ್ರಾಮೀಣ ರೈತರು ಪಾಕೆಟ್ ಹಾಲು ಮತ್ತು ನೀರಿನ ಬಾಟಲುಗಳನ್ನು ಬಳಸುವ ಅಧೋಗತಿಗೆ ಬಂದಿದ್ದಾರೆ. ಕೃಷಿಯ ಬಿಕ್ಕಟ್ಟಿನ ಮೂಲ ಇಲ್ಲಿದೆ.

ಐದನೆಯದಾಗಿ, ಕೃಷಿಯು ಇಂದು ದುಬಾರಿ ಯಾಗಿದೆ. ಕೃಷಿಗೆ ಬೇಕಾದ ಸಕಲ ಸರಕುಗಳನ್ನು ನಗರಗಳಿಂದ ಕೊಂಡು ತರಬೇಕಾಗಿದೆ. ಸ್ವಾವಲಂಬನೆ ಅನ್ನುವುದು ಕನಸಿನ ಮಾತಾಗಿದೆ. ಕೃಷಿಗೆ ಬೇಕಾದ ಸರಕುಗಳನ್ನು ಕೃಷಿಯಿಂದಲೇ ಪಡೆದುಕೊಳ್ಳುವ ಸ್ವಾವಲಂಬಿತನ ಮಾಯವಾಗಿದೆ. ಸಾವಯವ ನಾರಿನ ಹಗ್ಗಗಳಿಗೆ ಬದಲಾಗಿ ಪ್ಲಾಸ್ಟಿಕ್ ಹಗ್ಗಗಳು ಬಂದಿವೆ. ಈಚಲ–ಬಿದಿರಿನ ಪುಟ್ಟಿಗಳಿಗೆ ಪ್ರತಿಯಾಗಿ ಫೈಬರಿನ ಪುಟ್ಟಿಗಳು ಬಂದಿವೆ. ರೈತರು ಮಾರುವ ಸರಕುಗಳಿಗೆ ಬೆಲೆ ಕಡಿಮೆ: ನಗರಗಳಲ್ಲಿನ ವ್ಯಾಪಾರಿಗಳು ಮಾರಾಟ ಮಾಡುವ ಸರಕುಗಳ ಬೆಲೆ ದುಬಾರಿ. ಪರಿಣಾಮ ರೈತರು ದಿವಾಳಿಯಾಗುತ್ತಿದ್ದರೆ ನಗರಗಳ ವ್ಯಾಪಾರಿಗಳು ಶ್ರೀಮಂತರಾಗುತ್ತಿದ್ದಾರೆ. ಇಲ್ಲಿದೆ ಕೃಷಿಯ ಬಿಕ್ಕಟ್ಟಿನ ಇನ್ನೊಂದು ಮೂಲ.




ಕೃಷಿಯಲ್ಲಿ ಉತ್ಪಾದನೆಯಾಗುವ ಮೌಲ್ಯದಲ್ಲಿ ಮೂರು ಪಕ್ಷಗಳ ಪಾತ್ರವಿದೆ. ಮೊದಲನೆಯದು, ಕೃಷಿಗೆ ಕಚ್ಚಾ ಸಾಮಗ್ರಿಗಳನ್ನು ಸರಬರಾಜು ಮಾಡುವವರು. ಎರಡನೆಯದು, ಕೃಷಿಯಲ್ಲಿ ದುಡಿಯುವವರು. ಮೂರನೆಯ ವರ್ಗ ಸುಗ್ಗಿಯ ನಂತರ ಆಹಾರ ಧಾನ್ಯ ಮಾರಾಟ ಮಾಡುವ, ದಾಸ್ತಾನು ಇಡುವ, ಸಾಗಣಿಕೆ ಮಾಡುವ ವ್ಯಾಪಾರಿಗಳು. ಮೊದಲನೆಯ ವರ್ಗ ಮತ್ತು ಮೂರನೆಯ ವರ್ಗ ಬಂಡವಾಳ ಹಾಕದೆ, ಬೆವರು ಹರಿಸದೆ ಕೃಷಿಯ ಒಟ್ಟು ಮೌಲ್ಯದ ಶೇ. ೫೦ರಿಂದ ಶೇ. ೭೦ರಷ್ಟು ದೋಚಿಕೊಳ್ಳುತ್ತಿದ್ದಾರೆ. ಈ ವಿಕೃತಿಯನ್ನು ಸರಿಪಡಿಸಬೇಕು. ಯಾವುದನ್ನು ನಾವು ವ್ಯಾಲ್ಯೂ ಅಡಿಷನ್ ಎಂದು ಕರೆಯುತ್ತೇವೆಯೋ ಅದರ ಲಾಭ ಮೊದಲನೆಯ ಮತ್ತು ಎರಡನೆಯ ವರ್ಗಗಳಿಗಾಗುತ್ತಿದೆ. ಕೃಷಿಕರಿಗೆ ಉಳಿಯುವುದು ಸಾಲ, ಬಡ್ಡಿ, ಪರಿಶ್ರಮ, ಹಸಿವು, ದುಃಸ್ಥಿತಿ ಮತ್ತು ಆತ್ಮಹತ್ಯೆ.

ಆರನೆಯದಾಗಿ, ಇಂದು ನಾವು ಅಸಾಧಾರಣವಾದ ಮಹತ್ವಾಕಾಂಕ್ಷೆಯ ಕಾಲದಲ್ಲಿ ಬದುಕುತ್ತಿದ್ದೇವೆ. ಇದನ್ನು 'ಆಸ್ಪಿರೇಶನಲ್' ಕಾಲ ಎಂದು ಕರೆಯಲಾಗಿದೆ. ಪ್ರತಿಯೊಬ್ಬರೂ ಶ್ರೀಮಂತರಾಗುವ ಆಸ್ಪಿರೇಶನ್‌ನಲ್ಲಿ ಬದುಕುತ್ತಿದ್ದಾರೆ. ನಮ್ಮ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ೧೫–೩೫ ವಯೋಮಾನದ ಯುವಕರ ಪ್ರಮಾಣ ಶೇ. ೬೫ರಷ್ಟಿದೆ. ಇವರೆಲ್ಲ ದುಡಿಯುವ ವರ್ಗಕ್ಕೆ ಸೇರಿದವರು. ಇದೊಂದು ಸ್ವಾಗತಾರ್ಹ ಸಂಗತಿ. ಆದರೆ ಇವರಿಗೆ ಉದ್ಯೋಗದ ಅವಕಾಶಗಳನ್ನು ಒದಗಿಸುವುದು ಸುಲಭವಲ್ಲ. ಇವರನ್ನು ಆಸ್ಪಿರೇಶನಲ್ ವರ್ಗ ಎಂದು ಕರೆಯಲಾಗಿದೆ. ಇವರಿಗೆ ಗ್ರಾಮೀಣ ಬದುಕಿನ ಬಗ್ಗೆ, ಕೃಷಿಯ ಬಗ್ಗೆ ಆಸಕ್ತಿಯಿಲ್ಲ. ಇದನ್ನು ನಾವು ಹೇಗೆ ಎದುರಿಸುತ್ತೇವೆ ಎಂಬುದರ ಮೇಲೆ ನಮ್ಮ ಕೃಷಿಯ ಭವಿಷ್ಯ ನಿಂತಿದೆ.

ಏಳನೆಯದಾಗಿ, ನಮ್ಮ ರೈತರ ಆತ್ಮಹತ್ಯೆ ಮೂಲದಲ್ಲಿ ಲೇವಾದೇವಿಗಾರರ ಪಾತ್ರ ನಿರ್ಣಾಯಕವಾದುದು. ಕೃಷಿಯಲ್ಲಿ ಹಣ ಹೂಡುವುದಕ್ಕಾಗಿ ರೈತರು ದುಬಾರಿ ಬಡ್ಡಿಗೆ ಖಾಸಗಿ ಲೇವಾದೇವಿಗಾರರಿಂದ ಸಾಲ ತರುತ್ತಾರೆ. ಈ ಲೇವಾದೇವಿಗಾರರು ಮತ್ತಾರೂ ಅಲ್ಲದೆ ಕೃಷಿಯಲ್ಲಿರುವ ಶ್ರೀಮಂತ ರೈತರೇ ಆಗಿದ್ದಾರೆ. ಇವರು ಕೃಷಿಯ ಜೊತೆಯಲ್ಲಿ ವ್ಯಾಪಾರ, ಬಡ್ಡಿ ವ್ಯವಹಾರ, ರಿಯಲ್ ಎಸ್ಟೇಟ್ ದಂಧೆ ನಡೆಸುತ್ತಿರುತ್ತಾರೆ. ಇಲ್ಲಿ ಜಾತಿಯ ಸಮಸ್ಯೆಯೂ ಇದೆ. ಇವರ ಜಾಲದಲ್ಲಿ ನಮ್ಮ ರೈತರು ಸಿಲುಕಿದ್ದಾರೆ. ಎಲ್ಲಿಯವರೆಗೆ ನಮ್ಮ ರೈತರನ್ನು ಖಾಸಗಿ ಬಡ್ಡಿ ವ್ಯವಹಾರಸ್ಥರಿಂದ ಬಿಡುಗಡೆಗೊಳಿಸುವುದಿಲ್ಲವೋ ಅಲ್ಲಿಯವರೆಗೆ ಕೃಷಿ ಬದುಕುಳಿಯುವುದು ಸಾಧ್ಯವಿಲ್ಲ ಮತ್ತು ರೈತರ ಆತ್ಮಹತ್ಯೆ ನಿಲ್ಲುವುದಿಲ್ಲ.

ಒಟ್ಟಾರೆ, ಕೃಷಿಯ ಸಮಸ್ಯೆಯನ್ನು ಮತ್ತು ರೈತರ ಆತ್ಮಹತ್ಯೆಗಳನ್ನು ಪ್ರತ್ಯೇಕವಾಗಿ, ಅಂದರೆ ಅಲಾಯದವಾಗಿ ಪರಿಗಣಿಸಲು ಬರುವುದಿಲ್ಲ. ಇದು ಸಿವಿಲೈಸೇಷನಲ್ ಸಮಸ್ಯೆ. ಕೃಷಿಯು ಇಲ್ಲದೆ, ಪರಿಸರದ ಬಗ್ಗೆ ಕಾಳಜಿ ವಹಿಸದೆ, ಬಡವರನ್ನು, ಅಂಚಿನಲ್ಲಿರುವವರನ್ನು ಮತ್ತು ಮಹಿಳೆಯರನ್ನು ನಿರ್ಲಕ್ಷಿಸಿ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಬಹುದು ಎಂಬ ಧೋರಣೆಯಲ್ಲಿ ನಾವು ಮುಂದುವರಿಯುತ್ತಿದ್ದೇವೆ. ಮಣ್ಣನ್ನು ನೋಡದ, ಮಣ್ಣನ್ನು ಮುಟ್ಟದ, ಮಣ್ಣಿನ ವಾಸನೆಯನ್ನು ಆಘ್ರಾಣಿಸದ ಜನರು ನಮ್ಮ ಸಮಾಜದಲ್ಲಿದ್ದಾರೆ. ಇದಕ್ಕೇ ಇದು ಸಿವಿಲೈಸೇಷನಲ್ ಸಮಸ್ಯೆ. ಇದಕ್ಕೇ ಪರಿಹಾರ ಸುಲಭವಿಲ್ಲ. ಈ ಬಗ್ಗೆ ಕೂಲಂಕಷವಾಗಿ ಮತ್ತು ವಿಸ್ತೃತವಾಗಿ ಚರ್ಚೆ ನಡೆಯಬೇಕು.

**ಡಾ|| ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ
ಹೊಸಪೇಟೆ – ೫೮೩ ೨೦೧



ತಿಂಗಳ ಕಥೆ

# ಹೊರಳು

"ಏನ್ರೀ ರಂಗನಾಥ್, ನನ್ನ ಮಾತುಗಳನ್ನು ಕೇಳಿಸಿಕೊಂಡ್ರಿ ತಾನೆ? ಏನನಿಸ್ತು?" ಎಂದು ಕೇಳಿದರು. ರಂಗನಾಥನ ಪ್ರತಿಕ್ರಿಯೆಯ ನಿರೀಕ್ಷೆ ಅವರ ಕಂಗಳಲ್ಲಿ ಉತ್ತುಂಗವನ್ನು ತಲುಪಿತ್ತು. ರಂಗನಾಥ ಸ್ವಲ್ಪ ಹೊತ್ತು ಏನೆಂದು ಉತ್ತರಿಸುವುದು ಎಂಬ ಗೊಂದಲವನ್ನು ಹೊತ್ತು ಕಾರನ್ನು ಓಡಿಸತೊಡಗಿದ. ಪಾರ್ಥಸಾರಥಿ ಮತ್ತೊಮ್ಮೆ ಕೇಳಿದರು. ಕಾರು ವೇಗ ಪಡೆದುಕೊಂಡಿತ್ತು. ಈಗ ಅವನಿಗೆ ಉತ್ತರಿಸಲೇಬೇಕಾದ ಅನಿವಾರ್ಯತೆ ಎದುರುಗೊಂಡಿತು. ಆದರೂ ಅವನು ಪ್ರಶಾಂತನಾಗೆ ಇದ್ದ. "ಸರ್, ಮೊನ್ನೆ ಕಾರ್ಯಕ್ರಮದಲ್ಲಿ ಹೇಳಿದ ಬಹುತೇಕ ಮಾತುಗಳು ಇಂದೂ ರಿಪೀಟ್ ಆದವು. ಕೇಳಿದ್ದನ್ನೆ ಮತ್ತೆ ಮತ್ತೆ ಕೇಳ್ತಾ ಇದ್ರೆ ಬೋರ್ ಹೊಡೆಯುತ್ತೆ. ಹಾಗಾಗಿ ಪೂರ್ತಿ ಕೇಳಿಸಿಕೊಳ್ಳಲಿಲ್ಲ" ಶಾಂತಚಿತ್ತನಾಗೆ ಉತ್ತರಿಸಿದ. ಕಂಗಳಲ್ಲಿ ತುಸು ಅಸಹನೆಯನ್ನು ತುಂಬಿಕೊಂಡ ಪಾರ್ಥಸಾರಥಿ, "ಅಲ್ರಿ, ಆಫ್ಟ್ರಾಲ್ ಒಬ್ಬ ಕಾರ್ ಡ್ರೈವರ್ ನೀವು. ನನ್ನ ವಿದ್ವತ್ತನ್ನೆ ಪ್ರಶ್ನೆ ಮಾಡ್ತೀರಲ್ರಿ... ಎಷ್ಟ್ರೀ ಧೈರ್ಯ ನಿಮ್ಗೆ" ಎಂದು ತುಸು ರೇಗಿದರು.

**ಚೀಮನಹಳ್ಳಿ ರಮೇಶಬಾಬು**



ರಂಗನಾಥನಿಗೆ ಬೆಳಗ್ಗಿನಿಂದ ರವೀಂದ್ರ ಕಲಾಕ್ಷೇತ್ರದ ಹೊರಗೆ ಕಾದಿದ್ದೇ ಆಯಿತು. ಹತ್ತು ಗಂಟೆಗೆ ಶುರುವಾದ ಕಾರ್ಯಕ್ರಮ ಸದ್ಯಕ್ಕಂತೂ ಮುಗಿಯುವ ಲಕ್ಷಣಗಳು ಕಾಣಿಸಲಿಲ್ಲ. ಎರಡು ಮೂರು ಬಾರಿ ಕಲಾಕ್ಷೇತ್ರದ ಬಾಗಿಲಿಂದ ವೇದಿಕೆಯ ಕಡೆಗೆ ಇಣುಕಿ ನೋಡಿದ್ದ. ಹಾಗೆ ಇಣುಕಿ ಪಾರ್ಥಸಾರಥಿಯ ಸರದಿ ಬಂದಿಲ್ಲದಿರುವುದನ್ನು ಖಚಿತಪಡಿಸಿಕೊಂಡು ನಿರಾಶೆಯಿಂದ ಹಿಂದಿರುಗಿದ್ದ. ಆಗೆಲ್ಲ ಅವನ ಚಡಪಡಿಕೆ ಮತ್ತಷ್ಟು ಜಾಸ್ತಿಯಾಗಿ ಕಲಾಕ್ಷೇತ್ರದ ಆವರಣದಲ್ಲಿ ಅರೆ ಹುಚ್ಚನಂತೆ ಅಡ್ಡಾಡಿದ್ದ. ನಿನ್ನೆ ಮಗನ ರಕ್ತ ಪರೀಕ್ಷೆ ಮಾಡಿದ್ದ ವೈದ್ಯರು ಡೆಂಗೆ ಜ್ವರ ಇರುವುದನ್ನು ಖಚಿತಪಡಿಸಿದ್ದರು. ಮತ್ತೆ ಇವತ್ತೂ ರಕ್ತ ಪರೀಕ್ಷೆ ಮಾಡಿಸಿ ಪ್ಲೇಟ್‌ಲೆಟ್‌ಗಳ ಸಂಖ್ಯೆ ತೀರಾ ಕಮ್ಮಿಯಾಗಿದ್ದರೆ ಅಡ್ಮಿಟ್ ಮಾಡಿಸಬೇಕಾಗುತ್ತದೆಂದು ತಿಳಿಸಿದ್ದರು. ಅವನ ಚಿಂತೆಗೆ ಕಾರಣ ಅದುವೆ ಆಗಿತ್ತು. ಇತ್ತೀಚಿನ ದಿನಗಳಲ್ಲಿ ಮಹಾನಗರದಲ್ಲಿ ಡೆಂಗೆ ಜ್ವರದ ಪ್ರಕರಣಗಳು ಹೆಚ್ಚಿಗೆ ಕಂಡುಬರುತ್ತಿದ್ದು ನಗರವಾಸಿಗಳಲ್ಲಿ ಆತಂಕ ಉಂಟುಮಾಡಿದೆ. ಪ್ರತಿದಿನವೂ ದಿನಪತ್ರಿಕೆಗಳಲ್ಲಿ ಹಾಗೂ ಟೀವಿ ಮಾಧ್ಯಮಗಳಲ್ಲಿ ಮೂರ್‍ನಾಲಕ್ಕು ವ್ಯಕ್ತಿಗಳಾದರೂ ಡೆಂಗೆ ಜ್ವರದಿಂದ ಸಾಯುತ್ತಿರುವ ಪ್ರಕರಣಗಳು ಮತ್ತಷ್ಟು ದಿಗಿಲು ತುಂಬುವ ರೀತಿಯಲ್ಲಿ ವರದಿಯಾಗುತ್ತಿರುವುದರಿಂದ ಸಾಮಾನ್ಯ ಜ್ವರ ಬಂದರೂ ಹೆದರಿಕೊಳ್ಳುವಂತಾಗಿತ್ತು. ಜೊತೆಗೆ ನಾನಾ ರೀತಿಯ ಊಹಾಪೋಹಗಳು ಸೊಳ್ಳೆಗಳ ದಟ್ಟಣೆಯಂತೆಯೆ ಹರಡಿಕೊಂಡು ಮತ್ತಷ್ಟು ಆತಂಕದ ವಾತಾವರಣವನ್ನು ಹುಟ್ಟುಹಾಕಿತ್ತು. ನಿನ್ನೆ ರಾತ್ರಿ ಪಕ್ಕದ ಮನೆಯ ರವೀಂದ್ರ ರಂಗನಾಥನಿಗೆ, "ಡೆಂಗೆ ಬಂದ್ರೆ ತೊಂಬತ್ತೊಂಬತ್ತು ಪರ್ಸೆಂಟು ಉಳಿಯಾಂಗಿಲ್ಲ ರಂಗ. ಯಾವುದಕ್ಕೂ ಹುಷಾರಾಗಿರು. ಜೊತೆಗೆ ಕೆಲವು ಸರ್ತಿ ಲಕ್ಷಗಟ್ಟಲೆ ದುಡ್ಡು ಬೇಕಾಗ್ತೈತಂತೆ" ಎಂದು ಹೆದರಿಸಿದ್ದ. ಜೊತೆಗೆ ವೈದ್ಯರು ಕೊಡೋ ಔಷಧಿಗಿಂತ ಪಪ್ಪಾಯ ಎಲೆಗಳ ರಸವೇ ಮೇಲೆಂದು ತಿಳಿಸಿದ್ದ.

ರಂಗನಾಥನ ಹೆಂಡತಿಗೂ ಪಪ್ಪಾಯ ಎಲೆಗಳ ವಿಷಯ ಒಂದಿಬ್ಬರು ಹೇಳಿದ್ದರಾದ್ದರಿಂದ ತಮ್ಮದೇ ರಸ್ತೆಯ ಕೊನೆಗಿರುವ ಮನೆಯ ಮುಂದಿನ ಪಪ್ಪಾಯ ಗಿಡದಿಂದ, ಅವರ ಅನುಮತಿ ಪಡೆದು, ಎರಡು ಎಲೆಗಳನ್ನು ಕಿತ್ತು ತಂದಿದ್ದಳು. ಆ ಎಲೆಗಳನ್ನು ಮಿಕ್ಸಿಗೆ ಹಾಕಿ ಒಗರು ಕಮ್ಮಿಯಾಗಲೆಂದು ಒಂದಷ್ಟು ಸಕ್ಕರೆ ಸೇರಿಸಿ ಜ್ಯೂಸ್ ಮಾಡಿ ಕುಡಿಸಿದ್ದಳು. ಜೊತೆಗೆ ವೈದ್ಯರು ಕೊಟ್ಟ ಔಷಧಿಯನ್ನು ಹಾಕುವುದೊ ಬೇಡವೊ ಎಂಬ ಗೊಂದಲದಲ್ಲಿದ್ದಳು. ಅದೇ ವೇಳೆಗೆ ಅಲ್ಲಿಗೆ ಬಂದಿದ್ದ ರವೀಂದ್ರನ ಹೆಂಡತಿ ರೇವತಿ ಪಪ್ಪಾಯ ಎಲೆಗಳ ರಸದ ಜೊತೆಗೆ ವೈದ್ಯರು ಕೊಡುವ ಔಷಧಿಯನ್ನೂ ಕೊಡಬೇಕೆಂದು, ಇಲ್ಲವೆಂದರೆ ವಾಸಿಯಾಗುವುದಿಲ್ಲವೆಂದೂ ತಿಳಿಸಿದ್ದಳು. ಆಗ ಮತ್ತಷ್ಟು ಹೆದರಿಕೊಂಡಿದ್ದ ರಂಗನಾಥನ ಹೆಂಡತಿ ಮಗನಿಗೆ ಔಷಧಿಯನ್ನು ಕೊಟ್ಟು ದೇವರಿಗೆ ಕೈ ಮುಗಿದು ಕಣ್ಣಂಚಿನಲ್ಲಿ ನೀರು ತಂದುಕೊಂಡಿದ್ದಳು.

ರಂಗನಾಥ ಪಾರ್ಥಸಾರಥಿಯ ಬಳಿ ಡ್ರೈವರ್‌ರಾಗಿ ಕೆಲಸಕ್ಕೆ ಸೇರಿ ಹದಿನೈದು ದಿನಗಳಾಗಿದೆಯಷ್ಟೆ. ಇದಕ್ಕೂ ಮೊದಲು ಕಾಲ್ ಸೆಂಟರ್ ಕಂಪನಿಯೊಂದರಲ್ಲಿ ಡ್ರೈವರ್‌ರಾಗಿದ್ದ. ಅಲ್ಲಿನ ಅನಿಯಮಿತ ವೇಳೆ ಅವನಿಗೆ ಹೊಂದಿಕೆಯಾಗಿರಲಿಲ್ಲ. ಜೊತೆಗೆ ಬೆಂಗಳೂರಿನಂತಹ ನಗರದಲ್ಲಿ ರಾತ್ರಿಯ ವೇಳೆ ಹೆಂಡತಿ ಹಾಗೂ ಮಗ ಇಬ್ಬರನ್ನೇ ಮನೆಯಲ್ಲಿ ಬಿಡುವುದು ಕ್ಷೇಮವಲ್ಲವೆಂದು ಯೋಚಿಸಿ ಅಲ್ಲಿಯ ಕೆಲಸ ಬಿಟ್ಟು ಪಾರ್ಥಸಾರಥಿಯ ಬಳಿ ಕೆಲಸಕ್ಕೆ ಸೇರಿದ್ದ. ಪಾರ್ಥಸಾರಥಿಗೆ ರಾಜ್ಯದಲ್ಲಿ ಒಂದಷ್ಟು ಹೆಸರಿರುವುದರಿಂದ ಮುಂದೆಂದಾದರು ತನಗೆ ಬೇರೆ ರೀತಿಯಲ್ಲಿ ಸಹಾಯ ಮಾಡಬಹುದೆಂಬ ದೂರಾಲೋಚನೆಯೂ ಅವನಲ್ಲಿತ್ತು. ಅವರ ಬಳಿ ಕೆಲಸಕ್ಕೆ ಸೇರುವ ಮೊದಲು ಅವರೊಬ್ಬ ಬುದ್ಧಿಜೀವಿ, ಸಂಸ್ಕೃತಿ ಚಿಂತಕ ಎಂದು ಕೇಳಿದ್ದ. ಹಾಗೂ ಪತ್ರಿಕೆಗಳಲ್ಲಿ ಬರುತ್ತಿದ್ದ ಅವರ ಹೇಳಿಕೆಗಳನ್ನು ಆಧರಿಸಿ ಅವರೊಬ್ಬ ಕೆಳಸ್ತರದ ಜನರ ಸಮಸ್ಯೆಗಳ ಬಗ್ಗೆ ಚಿಂತಿಸುವ ವ್ಯಕ್ತಿ ಎಂದು ತೀರ್ಮಾನಿಸಿದ್ದ. ಹಾಗಾಗಿಯೆ ಮುಂದೆ ಎಂದಾದರು ತನಗೆ ಸಹಾಯ ಮಾಡಬಹುದೆಂಬ ತೀರ್ಮಾನಕ್ಕೆ ಬಂದಿದ್ದ. ಕೆಲಸ ಕೊಡುವ ಮೊದಲು ಪಾರ್ಥಸಾರಥಿ, "ನೋಡಯ್ಯ, ತಿಂಗಳಿಗೆ ಹನ್ನೆರಡು ಸಾವಿರ ಕೊಡ್ತೀನಿ. ಮತ್ತೆ ಪ್ರತಿವರ್ಷ ಜಾಸ್ತಿ ಮಾಡ್ತೀನಿ. ಕೆಲ್ಸದ ವಿಷಯದಲ್ಲಿ ಮಾತ್ರ ಕರೆಕ್ಟಾಗಿರ್ಬೇಕು. ಪ್ರತಿ ದಿನ ಬೆಳಗ್ಗೆ ಎಂಟು ಗಂಟೆಗೆಲ್ಲ ಮನೆ ಹತ್ರ ಇರ್ಬೇಕು. ಮೊಮ್ಮಕ್ಕಳ್ನ ಸ್ಕೂಲಿಗೆ ಬಿಡೋದು, ಕರ್ಕೊಂಬರೋದು, ಜೊತೆಗೆ ನನ್ನ ಓಡಾಟ, ಇವಿಷ್ಟು ನಿನ್ನ ಕೆಲ್ಸ, ತಿಳೀತೋ. ಮತ್ತೆ ತಿಂಡಿ ಊಟದ ಬಗ್ಗೆ ಯೋಚ್ನೆ ಬೇಡ ನಮ್ಮಲ್ಲೆ ಆಗುತ್ತೆ' ಎಂದು ಹೇಳಿದ್ದರು. ಅವನು ಮರುಮಾತನಾಡದೆ ಒಪ್ಪಿಕೊಂಡಿದ್ದ. ನಾಲಕ್ಕು ಸಾವಿರ ಮನೆ ಬಾಡಿಗೆ ಕಳೆದು ಉಳಿದ ಎಂಟು ಸಾವಿರದಲ್ಲಿ ಬೆಂಗಳೂರಿನಂಥ ನಗರದಲ್ಲಿ ತಮ್ಮಂತಹ ಕೆಳಸ್ತರದ ಜನಗಳು ಆರಾಮಾಗಿ ಜೀವನ ನಡೆಸಬಹುದೆಂಬುದು ಅವನ ನಂಬಿಕೆ. ನಿನ್ನೆ ಮಗನಿಗೆ ಡೆಂಗೆ ಎಂದು ದೃಢಪಟ್ಟ ಮೇಲೆ ಪಾರ್ಥಸಾರಥಿಗೆ ಫೋನ್ ಮಾಡಿ ವಿಷಯ ತಿಳಿಸಿ ನಾಳೆ ಬರಲಾಗುವುದಿಲ್ಲವೆಂದು ಹೇಳಿದ್ದ. ಆದರೆ ಪಾರ್ಥಸಾರಥಿ ಸೌಮ್ಯವಾಗಿಯೆ, "ರಂಗನಾಥ್, ನಾಳೆ ಕಲಾಕ್ಷೇತ್ರದಲ್ಲಿ ಒಂದು ಇಂಪಾರ್ಟೆಂಟ್ ಪ್ರೋಗ್ರಾಮಿದೆ. ಬೆಳಗ್ಗೆ ಬಂದು ಬಿಡಿ, ಮಧ್ಯಾಹ್ನದ ಹೊತ್ತಿಗೆ ಹೊರಡುವಿರಂತೆ" ಎಂದು ಕೇಳಿಕೊಂಡಿದ್ದರು. ರಂಗನಾಥ ಸರಿ ಎಂದು ಒಪ್ಪಿಕೊಂಡಿದ್ದ. ಜೊತೆಗೆ ಪಾರ್ಥಸಾರಥಿಯ ಬಳಿ ಒಂದಷ್ಟು ಸಾಲ ಕೇಳುವ ಉದ್ದೇಶವೂ ಅವನೊಳಗಿದ್ದುದರಿಂದ ಅವನೂ ಮರುಮಾತನಾಡದೆ ಒಪ್ಪಿಕೊಂಡಿದ್ದ.

ರಂಗನಾಥ ಜೇಬಿನಲ್ಲಿರುವ ಮೊಬೈಲ್ ತೆಗೆದು ಹೆಂಡತಿಗೆ ಫೋನ್ ಮಾಡಿ ಮಗನ ಆರೋಗ್ಯದ ಬಗ್ಗೆ ವಿಚಾರಿಸಿದ. ಅವನ ಹೆಂಡತಿ ಇಂದು ಮಗ ತುಸು ಆರಾಮಾಗಿದ್ದು, ಒಂದಷ್ಟು ಅನ್ನಾನೂ ತಿನ್ನುತ್ತಿರುವುದಾಗಿ ತಿಳಿಸಿದಳು. ಅವನ ಮುಖ ಅರಳಿಕೊಂಡು ತುಸು ನಿರಾಳನಾದ. ಮತ್ತೆ ಕಾಲ್ ಕಟ್ ಮಾಡಿ ಮೊಬೈಲಿನಲ್ಲಿ ಟೈಮೆಷ್ಟಾಗಿದೆಯೆಂದು ನೋಡಿದ. ಹನ್ನೆರಡೂಕಾಲಾಗಿತ್ತು. ಮೇಲೆ ಆಗಸದಲ್ಲಿ ಮೋಡಗಳ ದಟ್ಟಣೆ ಜೋರಾಗಿತ್ತು. ಜೊತೆಗೆ ದೇಹವನ್ನು ಹಿಂಡುವಂತಹ ಸೆಖೆ. ನಿನ್ನೆಯಂತೆ ಇಂದೂ ಸಹ ಜೋರು ಮಳೆ ಬರಬಹುದೆಂದು ಅಂದಾಜಿಸಿದ. ಜೊತೆಗೆ ತನ್ನೂರಿನಲ್ಲೂ ಮಳೆ ಇದೇ ರೀತಿಯಲ್ಲಿ ಬೀಳುತ್ತಿರಬಹುದಲ್ಲವೆ ಎಂದು ಯೋಚಿಸಿದ. ಒಂದು




# ಕನಸುಗಳು



ಬೆಳಗಾಗುತ್ತಲೆ ಗೂಡು ಬಿಟ್ಟು
ದಿಕ್ಕರಿಯದ ದಿಕ್ಕಿಗೆ
ರೆಕ್ಕೆ ಬಡಿವ ಹಕ್ಕಿಗಳಂತೆ
ನಾನು ನಿದ್ದೆಯಿಂದೇಳುವ ಹೊತ್ತಿಗೆ
ಸದ್ದಿಲ್ಲದೆ ಮಾಯವಾಗುವ ಕನಸುಗಳು
ರಾತ್ರಿಯ ಹೊತ್ತು ನನ್ನ ಒಳಾಂಗಣಕಿಳಿದು
ನನ್ನನ್ನು ಛೇಡಿಸುವುದೇಕೊ
ತುಂಟ ಮಕ್ಕಳಂತೆ ಪೀಡಿಸುವುದೇಕೊ
ಬೆಳಗಿನ ಧುಮು ಧುಮು ಮಂಜಿನಲಿ ಕರಗಿ
ಮಾಯವಾಗುವುದೇಕೊ
ನನ್ನ ತಾಳೆಗೆ ನಿಲುಕುವುದಿಲ್ಲ!
ಹೊತ್ತೇರುತ್ತ ಹೋದಂತೆ
ಗಾಳಿಯ ಸೆಳೆತಕ್ಕೆ ಶರಣಾಗುವ
ಧೂಳಿಯ ಕಣಗಳು ಕೈಗೆ ಸಿಲುಕುವುದಿಲ್ಲ!
ಕೆರೆ–ಕೊಳ್ಳಗಳ ತೀರದ ನೊರೆಯಂತೆ
ಮೈತುಂಬಿದ ಹಾವಿನ ಬೆಳ್ಳನೆ ಪೊರೆಯಂತೆ
ಯಾವ ಕೆಲಸಕ್ಕೂ ಬರುವುದಿಲ್ಲ!

ಅದೆಲ್ಲ ಕಾಣುವುದು ನಿಜವೆ.
ನಿಜವೆಂದರೂ ನಿಜವಾಗಿ ಉಳಿಯದ್ದು,
ಕನಸಿನಲಿ ನಕ್ಕದ್ದು ನಲಿದದ್ದು
ನರಳಿದ್ದು ಕೆರಳಿದ್ದು
ಮೆರೆದದ್ದು ಉರಿದದ್ದು
ಕಣ್ಮುಚ್ಚಿದ ಸ್ಥಿತಿಯಲ್ಲೆ
ಸಮಸ್ತ ಲೋಕದಾಚೀಚೆ ಸುತ್ತಿದ್ದು
ಮುಗಿಲಿನಟ್ಟಕ್ಕೇರಲು ಏಣಿಯನು ಹತ್ತಿದ್ದು
ಬಿಸಿಲಿನಲಿ ಬೆವರು ಸುರಿಸಿ
ರಾತ್ರಿಯ ಹೊತ್ತು ಲಕ್ಷ ಲಕ್ಷ
ನಕ್ಷತ್ರಗಳ ನಡುವೆ ಮಗುವಾಗಿ
ಆಡಿದ್ದು ಹಾಡಿದ್ದು ಕುಣಿದು ಕುಪ್ಪಳಿಸಿದ್ದು
ಅಬ್ಬ! ಬೆಳಗಾಗುತ್ತಲೆ
ಯಾವ ದನಗಾಹಿಯ ಕೈಯಲ್ಲಿ
ಕೊಳಲ ಸ್ವರವಾಗಿ ಹೊಮ್ಮುವುದೋ ತಿಳಿಯದಲ್ಲ!

ಅನುದಿನದ ಅನುಭವದ ನೆರಳಿನಲಿ ಕಳೆದಿರುಳು
ನನ್ನ ಕೌದಿಯ ಪದರಿನಲಿ ಅರಳಿದ ಸವಿಗನಸು
ಇನ್ನಾರ ಹಾಸಿಗೆಯನರಸುತ್ತ
ನನ್ನ ಹೊಸತಿಲದಾಚೆ ಸದ್ದಿರದೆ ಹಾರಬಹುದೆಂದು
ಅದನು ಹಿಡಿದಿಡಲು ದಡಬಡಿಸಿ
ನಾನೆ ಮಂಚದ ಕೆಳಗುರುಳಿದ್ದೂ
ಕನಸೆಂಬುದು ಮಾತ್ರ ಈ ಕ್ಷಣದ ನಿಜವೆನಿಸಿ
ಕಾಗದಕೆ ಇಳಿದದ್ದು ಈ ನಾಕು ಸಾಲು!

**ಬಿ. ಎ. ಸನದಿ**
'ಮಿಲನ', ಸಾ ಮಿಲ್ ಎದುರು, ಹೆರವಟ್ಟ
ಕುಮಟಾ – ೫೮೧ ೩೩೨ ಉತ್ತರ ಕನ್ನಡ ಜಿಲ್ಲೆ

ವೇಳೆ ಅಲ್ಲಿ ಬಿದ್ದಿಲ್ಲವಾದರೆ ಇಂದಾದರೂ ಜೋರು ಮಳೆ ಬೀಳಲಿ ಎಂದು ಆಕಾಶ ನೋಡಿ ಬೇಡಿಕೊಂಡ. ಅವನ ಹಳ್ಳಿಯ ಕಡೆ ಬರಡು ಭೂಮಿ, ಒಣ ಹವೆ, ರಣ ಬಿಸಿಲು ನಿತ್ಯದ ಒಡನಾಡಿಗಳೇ ಆಗಿರುವುದರಿಂದ ಮಳೆ ಎಂಬುದು ಭೂಮಿಯ ಮೇಲಷ್ಟೆ ಅಲ್ಲದೆ ಅವನ ಮನಸ್ಸು ಮತ್ತು ದೇಹದೊಳಗೆ ತಣ್ಣಗೆ ಹಿತವಾಗಿ ಇಳಿಯುವ ಪ್ರಕ್ರಿಯೆಯೆ ಆಗಿದೆ. ಹಾಗೆ ಒಳಗೆ ಹಿತವಾಗಿ ಇಳಿಯುವ ಹೊತ್ತಿಗೆ ಅವನೂ ನೀರಾಗಿ ಕರಗಿ ನೆಲದೊಳಗೆ ಇಳಿಯುವ ಪ್ರಯತ್ನದಲ್ಲೆ ಸದಾ ಇರುವವನಾದ್ದರಿಂದ ಅವನೂ ಮಳೆಯ ಭಾಗವೆ ಆಗಿರುತ್ತಿದ್ದ.

ಕಾರ್ಯಕ್ರಮ ಮುಗಿಯಲು ಇನ್ನೂ ಕನಿಷ್ಠ ಒಂದು ಗಂಟೆಯಾದರೂ ಬೇಕೆಂದು ಅಂದಾಜಿಸಿ ಲೆಮೆನ್ ಟೀಯಾದರು ಕುಡಿದುಕೊಂಡು ಬರಬಹುದಲ್ಲ ಎಂದುಕೊಂಡು ಕಲಾಕ್ಷೇತ್ರದ ಆವರಣದಲ್ಲೆ ಇರುವ ಹೋಟೆಲಿನ ಕಡೆಗೆ ನಡೆಯತೊಡಗಿದ. ಕಲಾಕ್ಷೇತ್ರದ ಎದುರಿಗಿನ ಜೆ.ಸಿ. ರಸ್ತೆಯಲ್ಲಿ ವಾಹನಗಳ ದಟ್ಟಣೆಯ ಸದ್ದು ಮುಗಿಲು ಮುಟ್ಟಿತ್ತು. ಅವನು ಅದರ ಕಡೆಗೆ ಗಮನ ಕೊಡದೆ ತನ್ನ ಮೊಬೈಲಿನ ಪರದೆಯ ಮೇಲೆ ವಾಟ್ಸ್‌ಆಪ್ ಸಂದೇಶಗಳನ್ನು ನೋಡುತ್ತಾ ಲೆಮೆನ್ ಟೀ ಕುಡಿದು ಮತ್ತೆ ಕಲಾಕ್ಷೇತ್ರದ ಒಳಗೆ ಬಂದ. ಒಳಗೆ ಬಂದವನೆ ಬಾಗಿಲ ಬಳಿ ನಿಂತುಕೊಂಡ. ಪಾರ್ಥಸಾರಥಿ ತನ್ನ ಮಾತುಗಳನ್ನು ಶುರುಮಾಡಿದ್ದರು. 'ಅಲ್ಲಾರಿ, ಈ ಸೀಯಮ್ಮು ಪೀಯಮ್ಮು ಆಕಾಶದಲ್ಲೇನಾದ್ರು ವಾಸ ಮಾಡ್ತಾರೇನ್ರಿ. ಅತಿವೃಷ್ಟಿ ಆಗ್ಲಿ ಅನಾವೃಷ್ಟಿ ಆಗ್ಲಿ, ದೊಂಬಿ ಗಲಾಟೆ ಆಗ್ಲಿ... ವೈ...ಮಾ..ನಿ..ಕ... ಸಮೀಕ್ಷೆ. ಅಲ್ಲಾರಿ, ಪ್ರತಿಯೊಂದಕ್ಕೂ ಹೆಲಿಕಾಪ್ಟರ್ ವಿಮಾನಾನೆ ಬೇಕ ಇವರ್ಗೆ. ಅಲ್ಲಾರಿ, ಸ್ಯಾಟಲೈಟ್ ರಿಯಾಲ್ಟಿಗಳ್ನೆ ನಿಜಾ ಅಂತ ತಿಳ್ಕೊಂಡುಬಿಟ್ರೆ ತಳಮಟ್ಟದ ಜನಗಳ ಉದ್ಧಾರ ಯಾವಾಗಾಗುತ್ತೆ? ಯಾವ ನಾಯಕ ಸ್ಯಾಟಲೈಟ್ ರಿಯಾಲ್ಟಿಗಳ್ನ ಬದಿಗಿಟ್ಟು ಗ್ರೌಂಡ್ ರಿಯಾಲ್ಟಿಗಳ್ಗೆ ಪ್ರಾಶಸ್ತ್ಯ ಕೊಡ್ತಾನೊ ಅವನು... ಅವನು ಕಣ್ರಿ ನಿಜವಾದ ನಾಯಕ. ಆದ್ರೆ ದುರಂತ ಅಂದ್ರೆ ನಮ್ಮಲ್ಲಿ ಇಂದು ಅಂತ ನಾಯಕರೆ ಕಾಣೆ ಆಗ್ತಾ ಇದಾರೆ...'– ಹೀಗೆ ಪಾರ್ಥಸಾರಥಿಯ ಮಾತು ಮುಂದುವರಿದಿತ್ತು. ರಂಗನಾಥನಿಗೆ ಅವರ ಮಾತುಗಳು ನಿಜವೆ ಅನಿಸಿದ್ರೂ, ಯಾಕೊ ಆ ಮಾತುಗಳು ಅವನಿಗೆ ಬೋರು ಹೊಡೆಯಲಾರಂಭಿಸಿದವು. ಕಳೆದ ಹದಿನೈದು ದಿನಗಳಲ್ಲಿ ಏನಿಲ್ಲವೆಂದರೂ ಇಂಥ ಐದು ಕಾರ್ಯಕ್ರಮಗಳಿಗೆ ಪಾರ್ಥಸಾರಥಿಯನ್ನು ಕರೆದುಕೊಂಡು ಹೋಗಿದ್ದಾನೆ. ಎಲ್ಲಾ ಕಡೆಯೂ ಇದೇ ರೀತಿಯ ಮಾತುಗಳನ್ನು ಕೇಳಿದ್ದನಾದ್ದರಿಂದ ಅವನಿಗೆ ಆ ಮಾತುಗಳಲ್ಲಿ ವಿಶೇಷವೇನೂ ಕಾಣಿಸಲಿಲ್ಲ. ಹಾಗಾಗಿ ಅವನಿಗೆ ಬೋರೆನಿಸಿ ಅಲ್ಲಿಂದ ಆಚೆ ನಡೆದ. ಜೊತೆಗೆ ಮಗನ ಕಡೆಗಿನ ಚಡಪಡಿಕೆ ಅವನನ್ನು ಎಲ್ಲೂ ನಿಲ್ಲದಂತೆ ಮಾಡಿತ್ತು. ಆಚೆ ಬಂದವನೆ ಮತ್ತೆ ಹೆಂಡತಿಗೆ ಫೋನ್ ಮಾಡಿ ಮಗನ ಬಗ್ಗೆ ವಿಚಾರಿಸಿದ. ಅವನ ಮುಖ ಮತ್ತಷ್ಟು ಅರಳಿತು. ಅವನು ಹೆಂಡತಿಗೆ ಇನ್ನೇನು ಕಾರ್ಯಕ್ರಮ ಮುಗಿಯುವ ಹಂತದಲ್ಲಿದೆಯೆಂದು ತಿಳಿಸಿ ನಂತರ ನಾಲಕ್ಕು ಗಂಟೆಯ ಸುಮಾರಿಗೆ ಡಾಕ್ಟರರ ಬಳಿಗೆ ಹೋಗೋಣವೆಂದು ಹೇಳಿದ. ನಂತರ ಅಲ್ಲೆ ಮೆಟ್ಟಿಲುಗಳ ಮೇಲೆ ಕುಳಿತುಕೊಂಡು ಜೇಬಿನಲ್ಲಿರುವ ಗೋಲ್ಡ್ ಫ್ಲೇಕ್ ಸಿಗರೇಟ್ ಪ್ಯಾಕಿನಿಂದ ಸಿಗರೇಟೊಂದನ್ನು ಆಚೆ ತೆಗೆದು ಲೈಟರ್ ಹತ್ತಿಸಿ ಒಂದು ದಮ್ ಎಳೆದು ಆಕಾಶದ ಕಡೆಗೆ ನೋಡುತ್ತಾ ಮೂಗು ಹಾಗೂ ಬಾಯಿಯಿಂದ ಹೊಗೆ ಬಿಡತೊಡಗಿದ.

ಸಿಗರೇಟು ಮುಗಿದು ಬಹಳ ಹೊತ್ತಾಗಿತ್ತು. ಕಲಾಕ್ಷೇತ್ರದ ಒಳಗೆ

ಚಪ್ಪಾಳೆಯ ಸದ್ದು ಜೋರಾಗಿ ಕೇಳತೊಡಗಿತು. ಪಾರ್ಥಸಾರಥಿಯ ಮಾತು ಮುಗಿದಿರಬೇಕು ಎಂದುಕೊಂಡ. ಅವನು ಅವರಿಗಾಗಿ ಕಾಯತೊಡಗಿದ. ಚಪ್ಪಾಳೆಯ ಸದ್ದು ಮುಗಿದ ಹತ್ತು ನಿಮಿಷಕ್ಕೆ ಸರಿಯಾಗಿ ಪಾರ್ಥಸಾರಥಿ ಕಲಾಕ್ಷೇತ್ರದಿಂದ ಹೊರಕ್ಕೆ ಬಂದರು. ರಂಗನಾಥ ಅವರನ್ನು ಕಾರಿನಲ್ಲಿ ಕೂರಿಸಿಕೊಂಡು ಹೊರಟ. ಪಾರ್ಥಸಾರಥಿಯ ಮುಖದಲ್ಲಿ ವಿಚಿತ್ರವಾದ ಕಳೆಯೊಂದು ಕೂತಿತ್ತು. ಅದೇ ಕಳೆಯನ್ನು ಹೊತ್ತು ರಂಗನಾಥನ ಕಡೆಗೆ ತಿರುಗಿ, "ಏನ್ರೀ ರಂಗನಾಥ್, ನನ್ನ ಮಾತುಗಳನ್ನು ಕೇಳಿಸಿಕೊಂಡ್ರಿ ತಾನೆ? ಏನನಿಸ್ತು?" ಎಂದು ಕೇಳಿದರು. ರಂಗನಾಥನ ಪ್ರತಿಕ್ರಿಯೆಯ ನಿರೀಕ್ಷೆ ಅವರ ಕಂಗಳಲ್ಲಿ ಉತ್ತುಂಗವನ್ನು ತಲುಪಿತ್ತು. ರಂಗನಾಥ ಸ್ವಲ್ಪ ಹೊತ್ತು ಏನೆಂದು ಉತ್ತರಿಸುವುದು ಎಂಬ ಗೊಂದಲವನ್ನು ಹೊತ್ತು ಕಾರನ್ನು ಓಡಿಸತೊಡಗಿದ. ಪಾರ್ಥಸಾರಥಿ ಮತ್ತೊಮ್ಮೆ ಕೇಳಿದರು. ಕಾರು ವೇಗ ಪಡೆದುಕೊಂಡಿತ್ತು. ಈಗ ಅವನಿಗೆ ಉತ್ತರಿಸಲೇಬೇಕಾದ ಅನಿವಾರ್ಯತೆ ಎದುರುಗೊಂಡಿತು. ಆದರೂ ಅವನು ಪ್ರಶಾಂತನಾಗೆ ಇದ್ದ. "ಸರ್ ಮೊನ್ನೆ ಕಾರ್ಯಕ್ರಮದಲ್ಲಿ ಹೇಳಿದ ಬಹುತೇಕ ಮಾತುಗಳು ಇಂದೂ ರಿಪೀಟ್ ಆದವು. ಕೇಳಿದ್ದನ್ನೆ ಮತ್ತೆ ಮತ್ತೆ ಕೇಳ್ತಾ ಇದ್ರೆ ಬೋರ್ ಹೊಡೆಯುತ್ತೆ. ಹಾಗಾಗಿ ಪೂರ್ತಿ ಕೇಳಿಸಿಕೊಳ್ಳಲಿಲ್ಲ" ಶಾಂತಚಿತ್ತನಾಗೆ ಉತ್ತರಿಸಿದ. ಕಂಗಳಲ್ಲಿ ತುಸು ಅಸಹನೆಯನ್ನು ತುಂಬಿಕೊಂಡ ಪಾರ್ಥಸಾರಥಿ, "ಅಲ್ರಿ, ಆಫ್ಟ್ರಾಲ್ ಒಬ್ಬ ಕಾರ್ ಡ್ರೈವರ್ ನೀವು. ನನ್ನ ವಿದ್ವತ್ತನ್ನೆ ಪ್ರಶ್ನೆ ಮಾಡ್ತೀರಲ್ರಿ... ಎಷ್ಟ್ರೀ ಧೈರ್ಯ ನಿಮ್ಗೆ" ಎಂದು ತುಸು ರೇಗಿದರು.

"ಇದರಲ್ಲಿ ಧೈರ್ಯದ ವಿಷಯ ಏನ್ ಬಂತು ಸಾರ್. ಪ್ರಾಮಾಣಿಕ ವಾಗಿದ್ರೆ ಸಾಕು".

"ಅಂದ್ರೆ ನನ್ನಲ್ಲಿ ಪ್ರಾಮಾಣಿಕತೆ ಇಲ್ಲ ಅಂತ್ಲೋ ನಿಮ್ಮ ಮಾತಿನ ಅರ್ಥ?"

"ಸಾರ್, ದಯವಿಟ್ಟು ಬೀಪಿ ಜಾಸ್ತಿ ಮಾಡ್ಕೋಬೇಡಿ. ನೀವು ಕೆಲವು ಮಾತುಗಳ್ನ ಮತ್ತೆ ಮತ್ತೆ ರಿಪೀಟ್ ಮಾಡ್ತೀರಿ ಅಂದೆ, ಅಷ್ಟೆ. ಇದು ನಾನು ಈ ಹದಿನೈದು ದಿನಗಳಿಂದ ಕಂಡುಕೊಂಡ ಸತ್ಯ".

"ಅಲ್ಲಾರಿ, ಸ್ವಲ್ಪಾನೂ ಕಾಮನ್‌ಸೆನ್ಸ್ ಬೇಡ್ವೆ ನಿಮ್ಗೆ? ಈಗ ಎಲ್ಲಾ ಕಡೇನು ಭ್ರಷ್ಟಾಚಾರದ ಬಗ್ಗೆ ಮಾತಾಡೋದಕ್ಕೆ ಕರೀತಾರಪ್ಪ. ಎಲ್ಲಾ ಕಡೇನು ಒಂದೇ ರೀತಿ ಮಾತ್ನಾಡಬೇಕಾಗುತ್ತೆ. ನೀವು ನನ್ನ ಮಾತ್ನ ಪೂರ್ತಿ ಕೇಳಿಸಿಕೊಂಡಿಲ್ಲ ಅಂತ ಕಾಣುತ್ತೆ. ಕೇಳಿಸಿಕೊಂಡಿದ್ರೆ ನನ್ನ ತಾತ್ವಿಕತೆಯ ನೆಲೆ ನಿಮಗೆ ಅರ್ಥ ಆಗಿರೋದು. ಇಷ್ಟಕ್ಕೂ ನಾನು ಮಾತಾಡೋದು ನಿಮ್ಮಂತವರಿಗೋಸ್ಕರ ಅಲ್ಲ. ಅಲ್ಲಿ ಸೆಪರೇಟಾದ ಕ್ಲಾಸ್ ಆಫ್ ಪೀಪಲ್ ಬಂದಿರ್ತಾರೆ. ಅವರ್ಗೆ ಗೊತ್ತು ನನ್ನ ಬೆಲೆ ಏನೂ ಅಂತ."

"ಅದೇ ಸಾರ್ ಎಲೀಟ್ ಕ್ಲಾಸ್ ಅನ್ನಿ."

"ಏನ್ರಿ ನಿಮ್ಮ ಸಕಾಸಿಸಂ... ಸುಮ್ನೆ ಬಾಯಿ ಮುಚ್ಕೊಂಡು ಗಾಡಿ ಓಡಿಸ್ರಿ. ಸ್ವಲ್ಪ ಸದರ ಕೊಟ್ರೆ ಸಾಕು..." ಪಾರ್ಥಸಾರಥಿಯ ಕೋಪ ಕಾರಿನ ವೇಗದ ಜೊತೆಗೆ ಪೈಪೋಟಿಗೆ ಇಳಿಯತೊಡಗಿತು. ಅವರ ಕೋಪದ ಅರಿವಿದ್ದ ರಂಗನಾಥ ಸ್ವಲ್ಪ ಹೊತ್ತು ಸುಮ್ಮನಾದ. ನಂತರ ಪಾರ್ಥಸಾರಥಿ ಕಡೆ ನೋಡಿದ. ಕೋಪ ತುಸು ಕಮ್ಮಿಯಾಗಿದೆ ಎಂದನಿಸಿತು. ನಂತರ, "ಸಾರಿ ಸರ್. ನಿಮ್ಮನ್ನು ಕೆಣಕುವ ಉದ್ದೇಶವಲ್ಲ. ನನ್ನ ಸ್ವಭಾವವೆ ಅಂಥದ್ದು. ಇದ್ದಿದ್ದನ್ನ ಇದ್ದ ಹಾಗೆ ನೇರವಾಗಿ ಮುಖದ ಮೇಲೆ ಹೇಳಿಬಿಡುತ್ತೇನೆ. ಆದ್ರೂ ನಿಮ್ಮ ಮಾತುಗಳಲ್ಲಿ ಏನೋ ಒಂದು ರೀತಿಯ ಮೋಡಿ ಇದೆ ಸರ್. ಇಲ್ಲಾಂದ್ರೆ ಅಷ್ಟು ಜನ ಮೈ ಮರೆತು ಕೇಳ್ತಾರಂದ್ರೆ ಸುಮ್ಮನೆಯೆ" ಎನ್ನುತ್ತ ಕಾರನ್ನು ಬಲಕ್ಕೆ ತಿರುಗಿಸಿದ.

"ರೀ ರಂಗನಾಥ್, ನೀವು ಬಾರಿ ಕಿಲಾಡಿ ಇದೀರ. ನಿಮ್ಮ ಮಾತಿನಲ್ಲೂ ಎಂಥಾದ್ದೊ ಒಂದು ಮ್ಯಾಜಿಕ್ ಇದೆ ಕಣ್ರಿ. ನನ್ನನ್ನೆ ಹೇಗೆ ಬೇಕೋ ಹಾಗೆ ಬಗ್ಗಿಸ್ಕೋತೀರಿ. ಹ್ಹ...ಹ್ಹ...ಹ್ಹ...ಹ್ಹ..." ಪಾರ್ಥಸಾರಥಿ ನಗತೊಡಗಿದರು. ರಂಗನಾಥ ಮೀಸೆಯಡಿಯ ತುಟಿಗಳನ್ನು ಹಿತವಾಗಿ ಅರಳಿಸಿ ಕಾರು ಓಡಿಸತೊಡಗಿದ. ಅವರು ಕುಮಾರಕೃಪ ರಸ್ತೆಯ ಮುಖೇನ ಹಾದು ವಿಂಡ್‌ಸರ್ ಮ್ಯಾನರ್ ಸೇತುವೆಯ ಕೆಳಗೆ ತೂರಿ ಕಾವೇರಿ ಚಿತ್ರಮಂದಿರದ ಬಳಿ ಇರುವ ಮ್ಯಾಜಿಕ್ ಬಾಕ್ಸಿನ ಬಳಿಗೆ ಬಂದರು. ಅಲ್ಲಿ ತುಸು ಟ್ರಾಫಿಕ್ ಜ್ಯಾಮಾಗಿತ್ತು. ಪಾರ್ಥಸಾರಥಿ ಅಲ್ಲೆ ನಿಂತಿರುವ ಟ್ರಾಫಿಕ್ ಪೊಲೀಸರ ಕಡೆಗೆ ಕೈ ತೋರಿಸಿ, "ನೋಡ್ರಿ, ಹೇಗ್ ನಿಂತಿದಾರೆ ಅವ್ರು. ಇಲ್ಲಿ ಇಷ್ಟೊಂದು ಜ್ಯಾಮ್ ಆಗಿದ್ರೂ ಏನೂ ಆಗೇ ಇಲ್ಲ ಎಂಬಂತೆ ಕಲ್ಲುಬಂಡೆಯ ರೀತಿ ನಿಂತಿದ್ದಾರೆ. ನಮ್ಮ ದೇಶದಲ್ಲಿ ಸೋಂಬೇರಿಗಳ ಸಂಖ್ಯೆ ಹೆಚ್ಚ್‌ತಾ ಇದೇರಿ. ಮುಂಡೇವಕ್ಕೆ ಒಂದ್ಚೂರಾದ್ರು ಕರ್ತವ್ಯ ಪ್ರಜ್ಞೆ ಬೇಡ್ವೆ? ಜೊತೆಗೆ ನಮ್ಮಲ್ಲಿ ಗಾಡಿಗಳ್ನ ಓಡಿಸೋರೂ ಹಂಗೆ ಓಡಿಸ್ತಾರೆ. ಸ್ವಲ್ಪಾನು ವ್ಯವಧಾನ ಇರೋದಿಲ್ಲ" ಎಂದು ನುಡಿದು ನಂತರ ಎದುರಿಗೆ ತುಸು ದೂರದಲ್ಲಿರುವ ರಾಯಲ್ ಎನ್ಫೀಲ್ಡ್ ಗಾಡಿಯ ಕಡೆಗೆ ತೋರಿಸುತ್ತಾ, "ನೋಡಿ, ಅವ್ನು ಹೇಗೆ ಎರಡು ಕಾರುಗಳ ಮಧ್ಯೆ ನುಗ್ಗಿಸ್ತಾ ಇದಾನೆ" ಎಂದು ವದರಿಕೊಳ್ಳುತ್ತಾ ಮುಖವನ್ನು ಸಿಂಡರಿಸಿಕೊಂಡರು. ರಂಗನಾಥ ಈ ಮನುಷ್ಯ ಪ್ರತಿಯೊಂದಕ್ಕೂ ಅಸಹನೆ ವ್ಯಕ್ತಪಡಿಸುತ್ತಾನಲ್ಲ ಎಂದುಕೊಳ್ಳುತ್ತಾ ಮುಂದೆ ಸಾಗತೊಡಗಿದ. ಜೊತೆಗೆ ಅಸಹನೆಯನ್ನು ವ್ಯಕ್ತಪಡಿಸಿದ ಮರುಕ್ಷಣವೆ ಸಹಜ ಸ್ಥಿತಿಗೆ ಬರುವ ಪಾರ್ಥಸಾರಥಿಯ ಗುಣ ಅವನಲ್ಲಿ ಹಲವು ವಿಸ್ಮಯಗಳಿಗೆ ಕಾರಣವಾಗಿತ್ತು. ಕಾರು ಮೇಖ್ರಿ ವೃತ್ತದ ಅಂಡರ್ ಪಾಸ್ ದಾಟುತ್ತಿದ್ದಂತೆ ರಂಗನಾಥನಿಗೆ ಮಗನ ಚಿಕಿತ್ಸೆಗೆ ದುಡ್ಡಿನ ಅವಶ್ಯಕತೆಯ ನೆನಪಾಗಿ ಸಾಲ ಕೇಳಲೋ ಬೇಡವೋ ಎಂದು ಯೋಚಿಸುತ್ತಾ ಕಾರು ಓಡಿಸತೊಡಗಿದ. ಸಾಲ ಸಿಕ್ಕೇ ಸಿಗುತ್ತದೆಂಬ ವಿಶ್ವಾಸದಲ್ಲಿರುವ ಅವನಿಗೆ ಒಂದು ವೇಳೆ ಅವರು ಇಲ್ಲವೆಂದುಬಿಟ್ರೆ ಮುಂದೇನು ಮಾಡುವುದು, ಯಾರನ್ನು ಕೇಳುವುದು ಎಂಬ ಸಂದೇಹ, ಗೊಂದಲಗಳಿಗೆ ಸಿಲುಕಿದ. ಅದೇ ಸಮಯಕ್ಕೆ ಸರಿಯಾಗಿ ಪಾರ್ಥಸಾರಥಿ, "ಏನ್ರಿ ರಂಗನಾಥ್, ಮಗನ್ಗೆ ಹೇಗಿದೆ? ಡೆಂಗೆ ಅಂತಿದ್ರಿ" ಎಂದು ಕೇಳಿದರು.

"ಪರವಾಗಿಲ್ಲ ಸರ್, ಈಗ ಸ್ವಲ್ಪ ಆರಾಮಿದಾನಂತೆ. ನಮ್ಮೆಂಗಸ್ರು ಹೇಳಿದ್ರು. ಮತ್ತೆ ಊಟಾನೂ ತಿಂತಿದಾನಂತೆ. ಸದ್ಯ ಈಗ ಮೊದಲಿನ ಆತಂಕ ಇಲ್ಲ ಸರ್. ಆದ್ರೂ ಇವತ್ತು ಮತ್ತೊಂದ್ಸಾರಿ ಬ್ಲಡ್ ಟೆಸ್ಟ್ ಮಾಡಿಸ್ಬೇಕು."

"ಅಯ್ಯೋ, ಇತ್ತೀಚಿನ ದಿನಗಳಲ್ಲಿ ಡೆಂಗೆ ಅನ್ನೋದು ಕಾಯಿಲೆಯಲ್ಲ. ಅದೊಂದು ರೀತಿಯ ಭಯ. ಇನ್ನಿಲ್ಲದಂತೆ ಕಾಡುವ ಭಯ. ಈ ಭಯಾನ ಎನ್‌ಕ್ಯಾಷ್ ಮಾಡ್ಕೋತಿರೋದು ಹಾಸ್ಪಿಟಲ್ಗಳು. ನೋಡಿ, ಮೂರು ತಿಂಗಳುಗಳ ಹಿಂದೆ ನನ್ನ ಮೊಮ್ಮಗನಿಗೆ ಡೆಂಗೆ ಬಂದಿತ್ತು. ಬರೋಬ್ಬರಿ ಒಂದೂಕಾಲು ಲಕ್ಷ ಖರ್ಚಾಯಿತು. ಮತ್ತೆ ಸುಮ್ನೆ ಜ್ವರಾಂತ ಹಾಸ್ಪಿಟಲ್ಗೆ ಹೋದ್ರೆ ಸಾಕು, ಡೆಂಗೆ ಅಥವಾ ಮತ್ತಾವುದೋ ರೋಗದ ಹೆಸರೇಳಿ ಹೆದರಿಸಿಬಿಡ್ತಾರೆ. ನನಗೊಂದು ಸಂದೇಹ ಇದೆ ಕಣ್ರಿ... ಹಾಸ್ಪಿಟಲ್ಗಳು ಈ ಭಯಾನ ಮಾಧ್ಯಮ ಗಳಲ್ಲಿ ಪ್ರಾಯೋಜನೆ ಮಾಡ್ತಿದಾರೇಂತ. ದಂಧೇರಿ, ದುಡ್ಡಿನ ದಂಧೆ. ಈ ಪ್ರಪಂಚ ನಡೀತಿರೋದೆ ಇಂಥ ದಂಧೆಗಳ ತಳಹದಿ ಮೇಲೆ. ಮೌಲ್ಯಗಳಿಗೆ, ನಂಬಿಕೆಗಳಿಗೆ ಈ ಪ್ರಪಂಚದಲ್ಲಿ ಬೆಲೇನೆ ಇಲ್ಲಾರಿ." ಹೀಗೆ ಹೇಳುತ್ತಾ ಪಾರ್ಥಸಾರಥಿ ಅಸಹನೆಯನ್ನು ಆವಾಹಿಸಿಕೊಂಡು ಮುಖದಲ್ಲಿ ಅದನ್ನು ವ್ಯಕ್ತಪಡಿಸತೊಡಗಿದರು. ನಂಬಿಕೆ, ಮೌಲ್ಯಗಳು ಎಂಬ ಪದಗಳು ಪಾರ್ಥಸಾರಥಿಯ ಬಾಯಲ್ಲಿ ಬಂದ ಮರುಕ್ಷಣದಲ್ಲೆ ರಂಗನಾಥ ತಾನು ಸಾಲ ಕೇಳಲು ಇದೇ ಸುಸಮಯವೆಂದು ತೀರ್ಮಾನಿಸಿ, "ಸಾರ್ ಒಂದಿಪ್ಪತ್ತು ಸಾವಿರ ಸಾಲ ಬೇಕಿತ್ತು. ಮಗನ ಹಾಸ್ಪಿಟಲ್ ಖರ್ಚಿಗೆ. ಬರುವ ಸಂಬಳದಲ್ಲಿ ಐದೈದು ಸಾವಿರ ನಾಲ್ಕು ತಿಂಗಳ ಮಟ್ಟಿಗೆ ಹಿಡಿದುಕೊಳ್ಳಿ" ಎಂದು ತುಸು ಸಂಕೋಚದಲ್ಲೆ ಕೇಳಿದ. ಪಾರ್ಥಸಾರಥಿಯ ಮುಖ ಗಂಟಿಕ್ಕಿತು.



ಮಂತ್ರಿ ಪದವಿ ಕೊಡುವವರೆಗೂ ಸಿ.ಎಂ. ಮನೆ ಮುಂದೆ ಸತ್ಯಾಗ್ರಹ ಮಾಡಿ, ಆಗ ಹೊಟ್ಟೇನು ಕರಗುತ್ತೆ, ಪದವಿನೂ ಸಿಗುತ್ತೆ...!

ಕಣ್ಣುಗಳು ತುಸು ಕೆರಳಿದ್ದವು. "ಅಲ್ಲಾರಿ, ಪರವಾಗಿಲ್ಲ ವಾಸಿಯಾಗಿದೆ ಅಂತ ಈಗ್ತಾನೆ ತಿಳಿಸಿದ್ರಿ. ಮತ್ತೆ ಸಾಲ ಯಾಕೆ? ಸುಮ್ನೆ ಹೆದರಿಕೊಂಡು ಅಲ್ಲಿ ಇಲ್ಲಿ ಸಾಲ ಯಾಕೆ ಮಾಡ್ತೀರಿ. ಇನ್ನೂ ಎರಡು ದಿವ್ಸ ಕಾಯ್ರಿ ಪರವಾಗಿಲ್ಲ. ಊಟ ಎಲ್ಲಾ ತಿಂತಿದಾನೆ ಅಂತಂದ್ರೆ ಅಂತ ಸೀರಿಯಸ್ ಇರಲಿಕ್ಕಿಲ್ಲ. ಅಲ್ಲಾರಿ, ಪರಿಚಯ ಆಗಿ ಇನ್ನೂ ಸರಿಯಾಗಿ ಹದಿನೈದು ದಿನ ಆಗಿಲ್ಲ ಆಗ್಩ೆ ಸಾಲ ಕೇಳ್ತೀರಲ್ಲ. ನಾಳೆ ನೀವು ಕೈ ಕೊಟ್ರೆ ನಾನೇನ್ರಿ ಮಾಡ್ಬೇಕು. ಈ ಸಿಟೀಲಿ ಯಾರ್ನೂ ನಂಬಕ್ಕಾಗಲ್ಲ ಕಣ್ರಿ. ದಿನಾ ಪೇಪರ್ನಲ್ಲಿ ನೋಡಲ್ವೆ? ಗಂಡ ಹೆಂಡ್ತೀನ ಸಾಯ್ಸೋದು, ಹೆಂಡ್ತಿ ಗಂಡನ್ನ ಸಾಯ್ಸೋದು, ಸ್ವಂತ ಮಕ್ಕಳೆ ಹೆತ್ತವರ್ನ ಸಾಯ್ಸೋದು... ಅಯ್ಯೋ, ಕುಲಗೆಟ್ಟ ಹೋಗಿದೇರಿ ಈ ಸಮಾಜ. ನಿಮ್ಗೆ ಅಷ್ಟಕ್ಕೂ ತೋರಿಸ್಩ೇ ಬೇಕಂತಿದ್ರೆ ಯಾವ್ದಾದ್ರೂ ಸರ್ಕಾರಿ ಆಸ್ಪತ್ರೇಲಿ ತೋರ್ಸಿ. ಸುಮ್ನೆ ಸಾಲ ಮಾಡ್ಕೊಂಡು ಯಾಕೆ ತಿರಗಾಡ್ತೀರ" ಎಂದ ಪಾರ್ಥಸಾರಥಿ ತನ್ನ ಎಂದಿನ ಅಸಹನೆಯನ್ನು ವ್ಯಕ್ತಪಡಿಸಿದರು. ರಂಗನಾಥನಿಗೆ ಮುಂದೆ ಮಾತು ಬರಲಿಲ್ಲ. ಅವನು ಇನ್ಯಾರಲ್ಲಿ ಸಾಲ ಕೇಳಬಹುದು ಎಂಬ ಯೋಚನೆಗೆ ಬಿದ್ದಿದ್ದ. ಅವನು ಈ ಮೊದಲು ಹೆಚ್ಚಿಗೆ ಯಾರ ಬಳಿಯೂ ಸಾಲ ಕೇಳಿದ್ದಿರಲಿಲ್ಲ. ಇರುವಷ್ಟರಲ್ಲೆ ಹೊಂದಿಕೊಂಡು ಹೋಗುವ ಶಕ್ತಿ ಅವನಿಗೆ ಕರಗತವಾಗಿತ್ತು. ತುಂಬ ಅನಿವಾರ್ಯ ಸಂದರ್ಭಗಳಲ್ಲಿ ಕೇಳಲೇಬೇಕೆಂದಾಗ ಯಾರನ್ನು ಕೇಳಿದರೆ ಅಸಹನೆ ವ್ಯಕ್ತಪಡಿಸದೆ ಪ್ರೀತಿಯಿಂದ ಕೊಡುತ್ತಾರೆಂಬುದನ್ನು ಅಂದಾಜಿಸಿ ಲೆಕ್ಕಾಚಾರ ಹಾಕಿ ಕೇಳುತ್ತಿದ್ದ. ಆದರೆ ಅವನಿಗೆ ಈಗ ಮೊದಲ ಬಾರಿಗೆ ತಾನು ಲೆಕ್ಕಾಚಾರದಲ್ಲಿ ಎಡವಿದೆ ಎಂದನಿಸತೊಡಗಿತು. ಅವನು ಪಾರ್ಥಸಾರಥಿಯ ಕಡೆಗೆ ನೋಡಿದ. ಅವರ ದೃಷ್ಟಿ ತನ್ನ ಮುಂದಿರುವ ರಸ್ತೆಯ ಮೇಲಿತ್ತು. ಮುಖದಲ್ಲಿ ತೆಳುವಾದ ನಗುವಿತ್ತು. ನೆತ್ತಿಯ ಮೇಲೆ ತುಸು ವಾಲಿದ್ದ ಸೂರ್ಯನ ಬೆಳಕು ಕಾಲುಗಳಿಂದ ಹಿಡಿದು ಕತ್ತಿನವರೆಗೂ ಹರಡಿತ್ತು. ಮರುಕ್ಷಣದಲ್ಲೆ ಸೂರ್ಯನನ್ನು ಮರೆಮಾಚಿದ ಕಡುಕಪ್ಪು ಮೋಡ ಮಳೆಗೆ ಮುನ್ನುಡಿಯೆಂಬಂತೆ ತನ್ನೆದೆಯ ನೆರಳನ್ನು ಅವರ ಕಾರಿನ ಮೇಲೆ ಹರಡಿತು. ರಂಗನಾಥ ಮತ್ತೇನನ್ನೂ ಮಾತನಾಡದೆ ಸುಮ್ಮನೆ ಕಾರನ್ನು ಓಡಿಸತೊಡಗಿದ. ಕಾರು ಹೆಬ್ಬಾಳ ಫ್ಲೈ ಓವರ್ ಹತ್ತಿ ತುಸು ದೂರ ಸಾಗಿ ಮತ್ತೆ ಎಡಕ್ಕೆ ಇಳಿದು ರಿಂಗ್ ರೋಡನ್ನು ತಲುಪಿತು. ರಿಂಗ್ ರೋಡಿನಲ್ಲಿ ಸ್ವಲ್ಪ ದೂರ ಸಾಗುತ್ತಿದ್ದಂತೆ ರಂಗನಾಥ ಇದ್ದಕ್ಕಿದ್ದಂತೆ ಕಾರಿನ ಬ್ರೇಕ್ ಹಾಕಿ ನಿಲ್ಲಿಸಿದ. ಅವರ ಎದುರಿಗೆ ನಾಲ್ಕೈದು ಗಾಡಿಗಳು ನಿಂತಿದ್ದವು. ಆ ಗಾಡಿಗಳ ಮುಂದೆ ನಡು ರಸ್ತೆಯಲ್ಲಿ ಬಿದ್ದುಕೊಂಡಿರುವ ಹಸುವೊಂದು ಯಮಯಾತನೆಯೋ ಎಂಬಂತೆ ಕಾಲುಗಳನ್ನು ಅಲ್ಲಾಡಿಸುತ್ತಾ ಒದ್ದಾಡುತ್ತಲಿತ್ತು. ಅದು ಸ್ವಲ್ಪ ಹೊತ್ತಿಗೆ ಮುಂಚೆ ರಸ್ತೆಯ ಮೇಲೆ ನಿಧಾನಕ್ಕೆ ನಡೆದುಕೊಂಡು ಬಂದು ಈಗಿರುವ ಜಾಗದಲ್ಲಿ ಅಷ್ಟೇ ನಿಧಾನಕ್ಕೆ ಕುಸಿದು ವಾಹನಗಳು ನಿಲ್ಲುವಂತೆ ಮಾಡಿತ್ತು. ರಂಗನಾಥ, ಕಾರನ್ನು ಆಫ್ ಮಾಡಿ, "ಸರ್ ಹಸುವೊಂದು ರಸ್ತೇಲಿ ಒದ್ದಾಡ್ತಿದೆ ಪಾಪ. ಹೋಗಿ ಏನಾಗಿದೆ ಅಂತ ನೋಡ್ಕಂಡು ಬರ್ತೀನಿ" ಎನ್ನುತ್ತ ಕಾರಿನ ಬಾಗಿಲು ತೆಗೆಯಲು ತನ್ನ ಬಲಗೈಯನ್ನು ಚಾಚಿದ. ಅಷ್ಟರಲ್ಲಿ ಪಾರ್ಥಸಾರಥಿ, "ರೀ ರಂಗನಾಥ್ ಸುಮ್ನೆ ಕೂತ್ಕೊಳ್ಳಿ. ನಂಗೆ ಮನೆ ಹತ್ರಾನೆ ಕಾಲೇಜೊಂದರಲ್ಲಿ ಮೂರು ಗಂಟೆಗೆ ಮತ್ತೊಂದು ಪ್ರೋಗ್ರಾಮ್ ಇದೆ. ಹೇಗಾದ್ರು ಮಾಡಿ ಇಲ್ಲಿಂದ ತಪ್ಪಿಸಿಕೊಂಡು ಮುಂದೆ ಹೋಗಿ. ಈಗ್ಲೆ ಸ್ವಲ್ಪ ಎಡಕ್ಕೆ ತೊಗೊಂಡು... ನೋಡಿ ಅಲ್ಲಿ ಉದ್ದಕ್ಕೂ ನಮ್ಮ ಕಾರು ಹೋಗುವಷ್ಟು ಜಾಗ ಇದೆ. ಈಗ್ಲೆ ಹೊರಟುಬಿಡೋಣ. ಮತ್ತೆ ತಡ ಆದ್ರೆ ಬೆಂಗಳೂರಿನ ಟ್ರಾಫಿಕ್ ಜ್ಯಾಮಿನ ಬಗ್ಗೆ ಗೊತ್ತಿದೆಯಲ್ಲ. ಒಂದು ಗಂಟೆಗೂ ಹೆಚ್ಚು ಕಾಲ ಇಲ್ಲೆ ಕಾಯಬೇಕಾಗುತ್ತೆ. ನಡೀರಿ ನಡೀರಿ ಬೇಗ. ಇಲ್ಲಿಂದ ಕಳಚಿಕೊಳ್ಳೋಣ" ಎಂದನು. ರಂಗನಾಥ ಪಾರ್ಥಸಾರಥಿಯ ಕಡೆಗೆ ನೋಡಿದ. ಎಂದಿನ ಅಸಹನೆ ತಾಂಡವವಾಡುತ್ತಿತ್ತು. ಅವರ ಕಾರಿನ ಹಿಂದೆ ವಾಹನಗಳು ಸಾಲಾಗಿ ಬಂದು

**ಕಾಣೆಯಾಗಿದ್ದಾರೆ**

ಸೂರ್ಯ
ಕೆಂಡದುಂಡೆ
ಯಾಗಿರಲು
ಬಿಡಬೇಕಲ್ಲ
ಕಾಡು ಕಡಿದು
ಓಝೋನ್ ಪದರ
ಹರಿದೇ ಹಾಕಿದರಲ್ಲ
ಎಲ್ಲಿದ್ದಾರೆ -
ಹುಡುಕಲೇ ಬೇಕಲ್ಲ!

**ವ. ಉಮೇಶ್, ಕಾರಂತ**
ಮಂಗಳೂರು – ೧

ನಿಲ್ಲತೊಡಗಿದವು. ಅವುಗಳ ಹಾರನ್ನಿನ ಸದ್ದು ಆಗಸ ಮುಟ್ಟಿ ಕಪ್ಪು ಮೋಡದ ಹೊಟ್ಟೆಯನ್ನು ತಡವುತ್ತಲಿತ್ತು. ರಸ್ತೆಯ ಮೇಲೆ ವಾಹನಗಳು ಒಂದರ ಹಿಂದೆ ಒಂದರಂತೆ ನಿಂತು ದಟ್ಟಣೆ ಅಧಿಕವಾಗುತ್ತಿರುವಂತೆಯೆ ಮೇಲೆ ಆಗಸದಲ್ಲೂ ಮೋಡಗಳ ದಟ್ಟಣೆ ಜಾಸ್ತಿ ಯಾಗಿತ್ತು. ಯಾವುದೇ ಕ್ಷಣದಲ್ಲಿ ಮಳೆ ಬರುವ ಹಾಗಿತ್ತು. ರಂಗನಾಥ, "ಸಾರ್, ಪಾಪ! ಏನು ಕಷ್ಟಾನೋ ಏನೊ. ಅಷ್ಟೊಂದು ಒದ್ದಾಡ್ತಿದೆ. ಸ್ವಲ್ಪ ಇಳಿದು ಚೆಕ್ ಮಾಡಿ ಯಾವುದಾದರು ಪ್ರಾಣಿ ದಯಾಸಂಘದವರಿಗಾದ್ರೂ ಫೋನ್ ಮಾಡಿ ಬರ್ತೀನಿ ಇರಿ" ಎನ್ನುತ್ತ ಮತ್ತೆ ಇಳಿಯಲು ವಾಲಿದ. ಪಾರ್ಥಸಾರಥಿಯ ಅಸಹನೆ ಮತ್ತಷ್ಟು ಕೆರಳಿತು. ಅವರು, "ರೀ, ಸುಮ್ನೆ ಮುಚ್ಕೊಂಡು ಕೂತ್ಕೊಳ್ಳಿ. ಅದಕ್ಕೇನಾಗಿದೇಂತೆ ಗೊತ್ತೇನ್ರಿ ನಿಮ್ಗೆ? ಅವರ್ತಾನೆ ಬಂದು ಏನ್ ಮಾಡ್ತಾರೆ. ನಾ ಹೇಳ್ತೀನಿ ಕೇಳಿ. ಈ ನಗರದಲ್ಲಿ ಅವು ತಿನ್ನೋದು ಹುಲ್ಲೋ ಅಥವಾ ಬಾಳೆಹಣ್ಣಿನ ಸಿಪ್ಪೇನೊ ಅಲ್ಲ. ಪ್ಲಾಸ್ಟಿಕ್... ಪ್ಲಾಸ್ಟಿಕ್ ತಿಂತಾವೆ ಅವು. ಹಾಗೆ ತಿಂದು ತಿಂದು ಹೊಟ್ಟೇಲ್ಲಿ ಜೀರ್ಣವಾಗ್ದೆ ಆಚೇನೂ ಬರಲಾಗದೆ ಹೊಟ್ಟೆ ಊದಿಕೊಂಡು ಪ್ರಾಣಸಂಕಟ ಅನುಭವಿಸತ್ವೆ. ಇದೂ ಹಾಗೇನೆ. ಅದರ ಹೊಟ್ಟೆ ನೋಡಿ ಹೇಗೆ ಊದಿಕೊಂಡಿದೆ. ಹೊಟ್ಟೇಲಿ ಅದೆಷ್ಟು ಕೇಜಿ ಪ್ಲಾಸ್ಟಿಕ್ ತುಂಬಿಕೊಂಡಿದೆಯೋ. ಇನ್ನೇನು ಇಷ್ಟರಲ್ಲೆ ಸಾಯುವ ಥರ ಇದೆ. ಥೂ! ನಮ್ಮ ಜನ ದರಿದ್ರದೋರು ರೀ. ಪ್ಲಾಸ್ಟಿಕ್‌ನ ಎಲ್ಲೆಂದರಲ್ಲಿ ಬಿಸಾಡ್ತಾರೆ. ಅವ್ರು ಮಾಡೊ ತಪ್ಪಿಗೆ ಪಾಪ ಇವು ಬಲಿಯಾಗುತ್ವೆ. ಅನ್‌ಕಲ್ಚರ್ಡ್ ಪೀಪಲ್. ಈ ಸೊಸೈಟಿ ಉದ್ಧಾರ ಆಗೋಲ್ಲ ಕಣ್ರಿ" ಎನ್ನುತ್ತ ಸೀಟಿಗೆ ತಲೆಯ ಆನಿಸಿ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟರು. ರಂಗನಾಥ, "ಅದಕ್ಕೆ ಸಾರ್ ಹೇಳಿದ್ದು, ಅಟ್‌ಲೀಸ್ಟ್ ಯಾವುದಾದ್ರು ಪ್ರಾಣಿಗಳ ಆಸ್ಪತ್ರೆಗೆ ಕೊಂಡೊಯ್ದರೆ ಆಪರೇಷನ್ ಮಾಡಿ ಅದನ್ನೆಲ್ಲಾ ತೆಗೆದು ಬದುಕಿಸಬಹುದಲ್ಲವೆ?" ಎಂದು ತನ್ನ ಕಾಳಜಿಯನ್ನು ವ್ಯಕ್ತಪಡಿಸಿದ. ಪಾರ್ಥಸಾರಥಿ, "ರೀ, ಎಷ್ಟು ಸರ್ತಿರೀ ನಿಮ್ಗೆ ಹೇಳೋದು. ಅರ್ಜೆಂಟ್ ಕೆಲ್ಸ ಇದೇಂತ. ಈಗಿಂದೀಗ್ಲೆ ಲೆಫ್ಟಿಗೆ ತೆಗೆದುಕೊಂಡು ಇಲ್ಲಿಂದ ಎಸ್ಕೇಪಾಗಿ. ಇಲ್ಲಾಂದ್ರೆ ಇವತ್ತೆ ನಿಮ್ಮನ್ನ ಕೆಲ್ಸದಿಂದ ತೆಗದಾಕ್ತೀನಿ" ಎಂದು ಗುಡುಗಿದರು. ರಂಗನಾಥ ಯಾವುದೇ ಭಾವನೆಯನ್ನು ವ್ಯಕ್ತಪಡಿಸದೆ ಸುಮ್ಮನೆ ಕಾರಿನ ಬಾಗಿಲು ತೆಗೆದು ಕೆಳಗಿಳಿದು ಹಸುವಿನ ಕಡೆಗೆ ನಡೆಯತೊಡಗಿದ. ಅಲ್ಲಿ ಹಸುವಿನ ಸುತ್ತಲೂ ಆಗಲೆ ಒಂದಷ್ಟು ಜನರು ಸುತ್ತುವರಿದು, ಏನಾಗಿರಬಹುದು ಎಂಬ ಯೋಚನೆಯಲ್ಲಿ ಹಸುವಿನ ಎಲ್ಲಾ ಭಾಗಗಳನ್ನೂ ಗಮನಿಸುತ್ತಿದ್ದರು. ರಂಗನಾಥ ಇಳಿದು ಹೋದ ಮೇಲೆ ಪಾರ್ಥಸಾರಥಿ ಸ್ವಲ್ಪ ಹೊತ್ತು ನೆತ್ತಿಯ ಮೇಲೆ ಬಲಗೈಯನ್ನು ಇಟ್ಟು ಕುಳಿತೇ ಇದ್ದರು. ನಂತರ ಏನನಿಸಿತೊ ತಾನೂ ಕೆಳಗಿಳಿದು ರಂಗನಾಥನ ಕಡೆಗೆ ಕೈ ತೋರಿಸಿ "ರೀ ರಂಗನಾಥ್, ಸ್ವಲ್ಪ ತಡೀರಿ ನಾನೂ ಬರ್ತೀನಿ... ಪಾಪ ದುಡ್ಡು ಬೇರೆ ಬೇಕು ಅಂತ ಕೇಳಿದ್ರಲ್ರಿ" ಎಂದು ಜೋರಾಗಿ ಕೂಗಿದರು. ಅವರ ಮಾತು ವಾಹನಗಳ ಹಾರನ್ನಿನ ಸದ್ದಿನ ನಡುವೆ ಸೇರಿಕೊಂಡು ರಂಗನಾಥನನ್ನು ತಲುಪಲು ವಿಫಲವಾಯಿತು. ಪಾರ್ಥಸಾರಥಿಯ ಸುತ್ತಲಿದ್ದ ಒಂದಷ್ಟು ಜನ ಮಾತ್ರ ಅವರನ್ನೆ ವಿಚಿತ್ರವಾಗಿ ನೋಡತೊಡಗಿದರು. ಇಷ್ಟು ಹೊತ್ತೂ ಆಗಸದಲ್ಲಿ ಗಟ್ಟಿಗೊಂಡಿದ್ದ ಮೋಡ ದಪ್ಪ ದಪ್ಪ ಹನಿಗಳನ್ನು ರಿಂಗ್ ರೋಡಿನ ಟಾರಿನ ಉದ್ದಕ್ಕೂ ಹನಿಸತೊಡಗಿತು. ಅಂತಹ ಒಂದು ಹನಿ ಸರಿಯಾಗಿ ಪಾರ್ಥಸಾರಥಿಯ ನಡು ನೆತ್ತಿಯ ಮೇಲೆ ಟಪಾರನೆ ಬಿದ್ದಿತು. ಅವರು 'ಆಹ್' ಎನ್ನುತ್ತ ರಂಗನಾಥನ ಕಡೆಗೆ ನಡೆಯತೊಡಗಿದರು.

**ಚೀಮನಹಳ್ಳಿ ರಮೇಶಬಾಬು**
ನಂ. ೫೨, ೭ನೇ ಅಡ್ಡರಸ್ತೆ, ಕಾಫಿ ಬೋರ್ಡ್ ಲೇಔಟ್
ಹೆಬ್ಬಾಳ, ಕೆಂಪಾಪುರ, ಬೆಂಗಳೂರು – ೫೬೦ ೦೨೪



# ನ್ಯಾಯಾಲಯದ ತೀರ್ಪುಗಳು ಕೆಲವೊಂದು ಪ್ರಶ್ನೆಗಳು

ಇತ್ತೀಚಿನ ಕೆಲವೊಂದು ಪ್ರಕರಣಗಳು ಎತ್ತಿರುವ ಎರಡು ಮುಖ್ಯ ಚರ್ಚೆಗಳೆಂದರೆ, ಮರಣದಂಡನೆಯ ಶಿಕ್ಷೆ ಇರಬೇಕೇ ಅಥವಾ ಅದನ್ನು ತೆಗೆದುಹಾಕಬೇಕೇ ಮತ್ತು ನಮ್ಮ ನ್ಯಾಯದಾನ ವ್ಯವಸ್ಥೆ ಹಣಉಳ್ಳವರಿಗೆ, ಪ್ರಭಾವಿಗಳಿಗೆ ಮಾತ್ರವೇ ಲಭ್ಯವೇ, ಬಡವರಿಗೆ / ಪ್ರಭಾವ ಹೀನರಿಗೆ ದುರ್ಲಭವೇ ಎನ್ನುವುದು. ಇದರೊಂದಿಗೆ ನ್ಯಾಯದಾನ ವ್ಯವಸ್ಥೆಯಲ್ಲಿನ ವಿಳಂಬವೇ ಸೃಷ್ಟಿಸುತ್ತಿರುವ ಒಂದು ರೀತಿಯ ಅಸಮಾನ ಪರಿಸ್ಥಿತಿ, ಸಮಾನತೆಯ ತತ್ತ್ವ ಕೇವಲ ಸಂವಿಧಾನದಲ್ಲಿ ಮಾತ್ರ ಇರುವ ಘೋಷಣೆಯೇ ಎನ್ನುವ ಸಂದೇಹವನ್ನು ಹುಟ್ಟುಹಾಕುತ್ತದೆ.

**ಹೇಮಲತಾ ಮಹಿಷಿ**

ಆಗಿಂದಾಗ್ಗೆ ನ್ಯಾಯಾಲಯದ ತೀರ್ಪುಗಳು ಚರ್ಚೆಗಳನ್ನು ಹುಟ್ಟುಹಾಕುತ್ತವೆ, ಅಸಮಾಧಾನದ ಅಲೆಗಳನ್ನು ಎಬ್ಬಿಸುತ್ತವೆ, ಪ್ರಶ್ನಾರ್ಥಕವಾಗಿ ಹುಬ್ಬೇರುವಂತೆ ಮಾಡುತ್ತವೆ. ಆರೋಗ್ಯಕರ ಸಮಾಜದಲ್ಲಿ, ತಮ್ಮ ದೇಶದಲ್ಲಿ ನಡೆಯುತ್ತಿರುವ ಆಗುಹೋಗುಗಳ ಬಗ್ಗೆ ಸದಾ ಎಚ್ಚರದಿಂದಿರುವ ಜನತೆ, ಸರ್ಕಾರವಿರಲಿ, ನ್ಯಾಯಾಲಯವಿರಲಿ, ಶಾಸನಸಭೆಗಳಿರಲಿ ಈ ರೀತಿ ಪ್ರಶ್ನೆಗಳನ್ನು ಕೇಳುವುದು, ಕೈಗೊಂಡ ಕ್ರಮಗಳನ್ನು, ನಿರ್ಣಯಗಳನ್ನು ಚರ್ಚಿಸುವುದು, ಪುನರ್ ಪರಿಶೀಲಿಸುವಂತೆ ಒತ್ತಾಯಿಸುವುದು ಯಾವುದೇ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಅತ್ಯಗತ್ಯವಾಗಿ ನಡೆಯಬೇಕಾದ ಕ್ರಿಯೆ. ಹಾಗಿಲ್ಲದಿದ್ದಲ್ಲಿ ಅದು ಹೆಸರಿಗಷ್ಟೇ ಪ್ರಜಾಪ್ರಭುತ್ವವಾಗಿರುತ್ತದೆ. ಸಮಾಜ ಸತ್ತುಹೋಗಿರುತ್ತದೆ. ಪ್ರಶ್ನೆ ಕೇಳುವುದೇ ಜೀವಂತಿಕೆಯ ಲಕ್ಷಣ.

ಇತ್ತೀಚಿನ ಕೆಲವೊಂದು ಪ್ರಕರಣಗಳು ಎತ್ತಿರುವ ಎರಡು ಮುಖ್ಯ ಚರ್ಚೆಗಳೆಂದರೆ, ಮರಣದಂಡನೆಯ ಶಿಕ್ಷೆ ಇರಬೇಕೇ ಅಥವಾ ಅದನ್ನು ತೆಗೆದುಹಾಕಬೇಕೇ ಮತ್ತು ನಮ್ಮ ನ್ಯಾಯದಾನ ವ್ಯವಸ್ಥೆ ಹಣಉಳ್ಳವರಿಗೆ, ಪ್ರಭಾವಿಗಳಿಗೆ ಮಾತ್ರವೇ ಲಭ್ಯವೇ, ಬಡವರಿಗೆ / ಪ್ರಭಾವ ಹೀನರಿಗೆ ದುರ್ಲಭವೇ ಎನ್ನುವುದು. ಇದರೊಂದಿಗೆ ನ್ಯಾಯದಾನ ವ್ಯವಸ್ಥೆಯಲ್ಲಿನ ವಿಳಂಬವೇ ಸೃಷ್ಟಿಸುತ್ತಿರುವ ಒಂದು ರೀತಿಯ ಅಸಮಾನ ಪರಿಸ್ಥಿತಿ, ಸಮಾನತೆಯ ತತ್ತ್ವ ಕೇವಲ ಸಂವಿಧಾನದಲ್ಲಿ ಮಾತ್ರ ಇರುವ ಘೋಷಣೆಯೇ ಎನ್ನುವ ಸಂದೇಹವನ್ನು ಹುಟ್ಟುಹಾಕುತ್ತದೆ.

ಮರಣದಂಡನೆಯ ಶಿಕ್ಷೆಯ ಪರ–ವಿರೋಧಿ ಚರ್ಚೆಗಳೆರಡೂ ಬಲವಾಗಿವೆ, ಸಮರ್ಥನೀಯವಾಗಿವೆ. ಹಿಂದೆ ಅನೇಕ ಅಪರಾಧಗಳಿಗೆ ಮರಣದಂಡನೆಯ ಶಿಕ್ಷೆ ಇತ್ತು. ಆದರೆ, ಕಾಲಕ್ರಮೇಣ ಅಂತಹ ಮರಣದಂಡನಾರ್ಹ ಅಪರಾಧಗಳ ಸಂಖ್ಯೆಯನ್ನು ಕಡಿಮೆ ಮಾಡಿ, ಈಗ ಕೆಲವೊಂದು ಗುರುತರ ಅಪರಾಧಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಅಂತಹ ಕೆಲವೊಂದು ಅಪರಾಧಗಳಿಗೂ, ಉದಾಹರಣೆಗೆ, ಕೊಲೆ, ಅತ್ಯಾಚಾರ, ಮರಣದಂಡನೆ ಕಡ್ಡಾಯವಾಗಿಲ್ಲ. ಅದರ ಬದಲು ಜೀವಾವಧಿ ಕಠಿಣ ಸಜಾ ವಿಧಿಸಬಹುದು. ಸರ್ವೋಚ್ಚ ನ್ಯಾಯಾಲಯವು ಈಗಾಗಲೇ ತನ್ನ ತೀರ್ಪಿನಲ್ಲಿ ಮರಣದಂಡನೆಯನ್ನು "ಅಪರೂಪದಲ್ಲಿ ಅಪರೂಪದ ಪ್ರಕರಣ"ಗಳಿಗೆ ಸೀಮಿತಗೊಳಿಸಿದೆ. ಚೀಣಾ, ಅರಬ್‌ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ ಮರಣದಂಡನೆ ಜಾರಿಗೊಳಿಸಿರುವ ಪ್ರಕರಣಗಳು ಕಡಿಮೆಯೇ. ಆದರೆ, ಇಲ್ಲಿಯೂ ಧನಂಜಯನಂತಹ ಕ್ರೂರಿಗಳನ್ನು ಗಲ್ಲಿಗೇರಿಸಿದಾಗ ಮರಣದಂಡನೆಯ ಚರ್ಚೆ ಅಷ್ಟಾಗಿ ಕಾಣಿಸುವುದಿಲ್ಲ. ಆದರೆ, ಅಫ್ಜಲ್‌ಗುರು, ಯಾಕೂಬ್ ಮೆಮನ್‌ರನ್ನು ಗಲ್ಲಿಗೇರಿಸಿದಾಗ ಪ್ರತಿಭಟನೆ ತಾರಕಕೇರುತ್ತದೆ, ಚರ್ಚೆ ಕಾವೇರುತ್ತದೆ, ಏಕೆ? ಇಲ್ಲಿಯೂ ಪ್ರಭಾವದ ಪಾತ್ರವಿದೆಯೆ?

ಇತ್ತೀಚಿನ ಯಾಕೂಬ್ ಮೆಮನ್ ಪ್ರಕರಣ ಹಲವಾರು ವಿಚಿತ್ರಗಳನ್ನು ಕಂಡಿತು, ಹಿಂದೆಂದೂ ನ್ಯಾಯಾಲಯದಲ್ಲಿ ಕಂಡಿರದ, ನಡೆದಿರದ ಪ್ರಕ್ರಿಯೆಗಳಿಗೆ ಸಾಕ್ಷಿಯಾಗಿ ಹುಬ್ಬು ಮೇಲೇರುವಂತೆ ಮಾಡಿತು, ಅನೇಕ ದಿನಗಳ ಚರ್ಚೆಗೆ ಗ್ರಾಸವಾಯಿತು.

೨೫೭ ಜನರನ್ನು ಬಲಿ ತೆಗೆದುಕೊಂಡ "ಬಾಂಬೆ ಬ್ಲಾಸ್ಟ್‌ಕೇಸ್" ಎಂದೇ ಹೆಸರಾಗಿರುವ ಪ್ರಕರಣದಲ್ಲಿ ಒಬ್ಬ ಮುಖ್ಯ ಅಪರಾಧಿಯಾಗಿದ್ದ ಯಾಕೂಬ್ ಮೆಮನ್, ೧೯೯೩ರಲ್ಲಿ ಮುಂಬಯಿನಲ್ಲಿ ನಡೆದ ಸರಣಿಸ್ಫೋಟದ ಮುಖ್ಯ ರೂವಾರಿಯಾಗಿದ್ದ ತನ್ನ ಸೋದರ ಟೈಗರ್ ಮೆಮನ್‌ಗೆ ಎಲ್ಲಾ ರೀತಿಯ ಸಹಾಯ ನೀಡಿದ್ದ ಎನ್ನುವ ಕಾರಣಕ್ಕೆ ಟಾಡಾ ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಗಾಗಿದ್ದು, ೨೦೦೭ರಲ್ಲಿ ಅಪರಾಧಿ ಎಂಬುದಾಗಿ ನಿರ್ಣಯಿಸಲ್ಪಟ್ಟು ಮರಣದಂಡನೆಯ ಶಿಕ್ಷೆಗೆ ಗುರಿಯಾಗಿದ್ದ. ಆಗಿದ್ದ ಟಾಡಾ ಕಾನೂನಿನಂತೆ ಆ ತೀರ್ಪಿನ ಮೇಲೆ ಮುಂಬಯಿ ಉಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸುವ ಅವಶ್ಯಕತೆ ಇಲ್ಲದೆ ನೇರವಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸುವ ಅವಕಾಶವಿದ್ದ ಪ್ರಕಾರ ಮೆಮನ್ ಪರವಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಲಾಯಿತು. ೨೧–೩–೨೦೧೩ರಂದು ಈ ಅಪೀಲು ವಜಾ ಆದಮೇಲೆ ಪುನರ್ ಪರಿಶೀಲನೆಗಾಗಿ ರಿವ್ಯೂ ಅರ್ಜಿಯನ್ನು ಸಲ್ಲಿಸಲಾಗಿದ್ದು ಅದು ದಿನಾಂಕ ೩೦–೭–೨೦೧೩ರಂದು ವಜಾ ಆಯಿತು. ಯಾಕೂಬ್ ಮೆಮನ್‌ನ ಅಣ್ಣ ಸುಲೇಮಾನ್ ಅವನ ಪರವಾಗಿ ಸಂವಿಧಾನದ ೭೨ನೇ ಅನುಚ್ಛೇದದಡಿ ಭಾರತದ ರಾಷ್ಟ್ರಾಧ್ಯಕ್ಷರಿಗೆ ದಿನಾಂಕ ೬–೮–೨೦೧೩ರಂದು ಒಂದು ಕ್ಷಮಾದಾನದ ಅರ್ಜಿ ಸಲ್ಲಿಸಿದರು. ಆ ಕ್ಷಮಾದಾನದ ಅರ್ಜಿಯೂ ದಿನಾಂಕ ೧೪–೧೧–೨೦೧೩ರಂದು ತಿರಸ್ಕೃತಗೊಂಡಿತು ಹಾಗೂ ಆ ಸಂಗತಿಯನ್ನು ೨೬–೫–೨೦೧೪ರಂದು ಅಪರಾಧಿಗೆ ತಿಳಿಸಲಾಯಿತು. ಅದನ್ನು ಪ್ರಶ್ನಿಸಲು ಅವಕಾಶವಿದ್ದರೂ

ಅಪರಾಧಿ ಅದನ್ನು ಒಪ್ಪಿಕೊಂಡಂತೆ ಸುಮ್ಮನಾದ. ಆದರೆ, ರಿವ್ಯೂ ಅರ್ಜಿಯು ವಜಾ ಆದ ನಂತರ ಮತ್ತೊಂದು ರಿವ್ಯೂ ಅರ್ಜಿಯನ್ನು ಸಲ್ಲಿಸಲಾಯಿತು. ಅದೂ ವಜಾ ಆದ ನಂತರ ಕ್ಯೂರೆಟಿವ್ ಅರ್ಜಿ ಹಾಕಲಾಯಿತು. ಅದೂ ವಜಾ ಆಯಿತು. ಅನಂತರ ಮರಣದಂಡನೆಯನ್ನು ದಿ. ೩೦–೭–೨೦೧೫ರಂದು ಬೆಳಿಗ್ಗೆ ೭ ಗಂಟೆಗೆ ಜಾರಿಗೊಳಿಸಲು ಟಾಡಾ ನ್ಯಾಯಾಲಯ ದಿನಾಂಕವನ್ನು ಗೊತ್ತುಮಾಡಿ ದಿ.೩೦–೪–೨೦೧೫ರ ವಾರಂಟನ್ನು ಹೊರಡಿಸಿತು. ಅದನ್ನೂ ಪ್ರಶ್ನಿಸಿ ಒಂದು ರಿಟ್ ಅರ್ಜಿಯನ್ನು ಹಾಕಲಾಯಿತು ಹಾಗೂ ಸ್ಟೇ ಆರ್ಡರ್ ಕೊಡಲು ಕೇಳಲಾಯಿತು. ಆ ರಿಟ್ ಅರ್ಜಿಯೂ ದಿನಾಂಕ ೨೯–೭–೨೦೧೫ ರಂದು ವಜಾ ಆಯಿತು. ಅದೇ ದಿನವೇ ಬೆಳಿಗ್ಗೆ ೧೧ ಗಂಟೆಗೆ ಯಾಕೂಬ್ ಮೆಮನ್ ರಾಷ್ಟ್ರಾಧ್ಯಕ್ಷರಿಗೆ ಪುನಃ ೧೪ ಪುಟಗಳ ಕ್ಷಮಾದಾನ ಅರ್ಜಿಯನ್ನು ಸಲ್ಲಿಸಿದ, ರಾತ್ರಿ ೧೦.೪೫ಕ್ಕೆ ಅದೂ ತಿರಸ್ಕೃತಗೊಂಡಿತು.

ಮುಂದೆ ನಡೆದ ಸಿನಿಮಾ ಮಾದರಿಯ ಘಟನೆಗಳು ನಭೂತೋ ನಭವಿಷ್ಯತಿ ಎಂಬಂತೆ ನಡೆದವು. ಯಾಕೂಬ್ ಮೆಮನ್‌ನನ್ನು ಏನಾದರೂ ಮಾಡಿ ಗಲ್ಲುಶಿಕ್ಷೆಯಿಂದ ಉಳಿಸಲೇಬೇಕೆಂದು ಪಣತೊಟ್ಟ ಅವನ ವಕೀಲರು ಹಾಗೂ ಪ್ರಶಾಂತ ಭೂಷಣರಂತಹ ಸಾಮಾಜಿಕ ಕಾರ್ಯಕರ್ತರು ಮಧ್ಯರಾತ್ರಿ ೧–೩೦ರ ವೇಳೆಗೆ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಎಚ್. ಎಲ್. ದತ್ತು ಅವರ ಮನೆಗೆ ಹೋಗಿ, ತಾವು ಹಿಂದಿನ ರಾತ್ರಿ ೮–೪೫ರ ವೇಳೆಗೆ ರಿಜಿಸ್ಟ್ರಾರ್ ಅವರ ಬಳಿ ದಾಖಲಿಸಿದ್ದ ಕೊನೆಯ ರಿಟ್ ಅರ್ಜಿಯನ್ನು ಆ ಕೂಡಲೇ ವಿಚಾರಣೆ ಮಾಡಬೇಕೆಂದು ಕೇಳಿಕೊಂಡರು. ಪ್ರಕರಣವನ್ನು ಪುನಃ ವಿಚಾರಣೆಗೆ ಎತ್ತಿಕೊಳ್ಳಲು ಸ್ಟೇ ಕೊಡಲು ಹೊಸದಾದ ಬಲವಾದ ಕಾರಣ ಇದೆ, ಅಪರಾಧಿಗೆ ಮತ್ತೊಂದು ಅವಕಾಶವನ್ನು ಕೊಡಬೇಕು ಎಂದು ಮುಖ್ಯ ನ್ಯಾಯಮೂರ್ತಿಗಳಿಗೆ ಮನದಟ್ಟು ಮಾಡಿದ್ದರಿಂದಾಗಿ, ಅವರು ನ್ಯಾ. ದೀಪಕ್ ಮಿಶ್ರಾ, ನ್ಯಾ. ಪ್ರಫುಲ್ಲಾ ಸಿ. ಪಂತ್ ಮತ್ತು ನ್ಯಾ. ಅಮಿತಾವ್ ರಾಯ್ ಅವರನ್ನೊಳಗೊಂಡ ಪೀಠವನ್ನು ಕೂಡಲೇ ಆ ಅರ್ಜಿಯ ವಿಚಾರಣೆಗೆ ಸಂಘಟಿಸಿದ್ದೇ ಅಲ್ಲದೆ, ಆ ಅಪರಾತ್ರಿಯ ಸಮಯದಲ್ಲಿ ಸರ್ವೋಚ್ಚ ನ್ಯಾಯಾಲಯದ ಗೇಟನ್ನು, ನ್ಯಾಯಾಂಗಣದ ಬಾಗಿಲನ್ನು ತೆರೆಸಿ ಬಹಿರಂಗ ವಿಚಾರಣೆ ನಡೆಸಲು ಅನುವು ಮಾಡಿಕೊಟ್ಟರು. ರಾತ್ರಿ ೩–೧೫ಕ್ಕೆ ಅಟಾರ್ನಿ ಜನರಲ್ ಸಹ ಬಂದರು. ಗಂಟೆ ೩–೩೦ಕ್ಕೆ ನ್ಯಾಯಾಂಗಣಕ್ಕೆ ಮೂವರು ನ್ಯಾಯಮೂರ್ತಿಗಳೂ ಬಂದು ಆಸೀನರಾದ ಮೇಲೆ ವಾದ–ವಿವಾದಗಳು ನಡೆದು ೩೦ ಜುಲೈ, ೨೦೧೫ರಂದು ಬೆಳಗಿನ ಜಾವ ೫ ಗಂಟೆಗೆ ರಿಟ್ ಅರ್ಜಿಯನ್ನು ಕೊನೆಯದಾಗಿ ವಜಾ ಮಾಡಲಾಯಿತು. ಅಂದೇ ಬೆಳಿಗ್ಗೆ ೭ ಗಂಟೆ ೧ ನಿಮಿಷಕ್ಕೆ ಯಾಕೂಬ್ ಮೆಮನ್‌ನನ್ನು ಗಲ್ಲಿಗೇರಿಸಲಾಯಿತು ಹಾಗೂ ಮೃತಪಟ್ಟಿದ್ದನ್ನು ಖಚಿತಪಡಿಸಲಾಯಿತು.



*ಮುಂಬಯಿನಲ್ಲಿ ನಡೆದ ಬಾಂಬ್ ಸರಣಿಸ್ಫೋಟ*

ಇದುವರೆಗಿನ ಸರ್ವೋಚ್ಚ ನ್ಯಾಯಾಲಯದ ಇತಿಹಾಸದಲ್ಲಿ ಈ ರೀತಿ ರಾತ್ರಿ, ಅದೂ ತೆರೆದ ನ್ಯಾಯಾಲಯದಲ್ಲಿ ವಿಚಾರಣೆ ನಡೆದ ಉದಾಹರಣೆ ಇಲ್ಲ. ಸಾಮಾನ್ಯವಾಗಿ ಮ್ಯಾಜಿಸ್ಟ್ರೇಟರ ಮನೆಗಳಲ್ಲಿ ಪೊಲೀಸರು ರಾತ್ರಿ ಅಪರಾಧಿಗಳನ್ನು ಹಾಜರುಪಡಿಸಿ ತುರ್ತು ಆದೇಶಗಳನ್ನು ಪಡೆಯುತ್ತಾರೆ. ಆದರೆ ಇಲ್ಲಿ ನ್ಯಾಯಾಧೀಶರ ಮನೆಯಲ್ಲಿಯೂ ವಿಚಾರಣೆ ನಡೆಯದೆ ನ್ಯಾಯಾಲಯದಲ್ಲಿ ಬಹಿರಂಗ ವಿಚಾರಣೆ ನಡೆದುದು ಬಹುಶಃ ಎಲ್ಲಿಯೂ ಕಂಡುಬಂದಿಲ್ಲ. ಇದು ಈ ಪ್ರಕರಣಕ್ಕೆ ಮಾತ್ರ ಸಂಬಂಧಿಸಿದಂತೆ ನಮ್ಮ ನ್ಯಾಯಾಂಗದ ನ್ಯಾಯದ ಬಗ್ಗೆಯ ಕಾಳಜಿಯನ್ನು ಎತ್ತಿಹಿಡಿಯುತ್ತದೆಯೇ ಅಥವಾ ಮುಂದಿನ ಪ್ರಕರಣಗಳಿಗೆ ಪೂರ್ವನಿದರ್ಶನವಾಗುತ್ತದೆಯೇ ? ಯಾಕೂಬ್ ಮೆಮನ್‌ಗೆ ಮಾತ್ರ ಈ ಅವಕಾಶ ಕೊಡಲಾಯಿತೇ ಅಥವಾ ಮುಂದೆ ಯಾರು ಬೇಕಾದರೂ ಇದನ್ನು ಉದಾಹರಿಸಿ ತನಗೂ ಆ ಅವಕಾಶ ಕೊಡುವಂತೆ ಕೇಳಬಹುದೇ ? ಕೇಳಿದರೆ ನಿರಾಕರಿಸಲು ಸಾಧ್ಯವೇ ? ಬೇರೆಯ ಟಾಡಾ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಮೂರು ಬಾರಿ, ಎಂದರೆ ಅಪೀಲು, ರಿವ್ಯೂ ಮತ್ತು ಕ್ಯೂರೇಟಿವ್ ಅರ್ಜಿಹಾಕಿ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳಬಹುದು. ಆದರೆ, ಯಾಕೂಬ್ ಮೆಮನ್ ಪ್ರಕರಣದಲ್ಲಿ ಮಾತ್ರ ಅವರ ವಕೀಲರ ಹರಸಾಹಸದಿಂದಾಗಿ ಆರು ಬಾರಿ ಸರ್ವೋಚ್ಚ ನ್ಯಾಯಾಲಯದ ಮುಂದೆ ವಿಚಾರಣೆ ನಡೆದಿರುವುದು ಇದರ ವಿಶಿಷ್ಟತೆ. ಅಲ್ಲದೆ, ಇಂತಹ ರಿವ್ಯೂ ಪ್ರಕರಣದಲ್ಲಿ ೩೦ ನಿಮಿಷಗಳ ವಾದ-ವಿವಾದ ನಡೆಸಲು ಮಾತ್ರ ಅವಕಾಶವಿದ್ದರೂ ಈ ಪ್ರಕರಣದಲ್ಲಿ ೧೦ ದಿನಗಳ ಕಾಲ ವಾದ ಮಾಡಲು ಅವಕಾಶವನ್ನು ನೀಡಲಾಯಿತು. ಆದರೂ ಹಲವರಿಗೆ ಸಮಾಧಾನ ವಾಗಲಿಲ್ಲ. ಇನ್ನೂ ಹಲವಾರು ಇಂತಹ ಮರಣದಂಡನೆಯ ಪ್ರಕರಣಗಳು ಸರ್ವೋಚ್ಚ ನ್ಯಾಯಾಲಯದ ಮುಂದೆ ಬರಲಿದ್ದು, ಎಲ್ಲಾ ಪ್ರಕರಣಗಳಲ್ಲೂ ಈ ರೀತಿಯ ಅವಕಾಶಗಳನ್ನು ಕೊಡಲಾಗುತ್ತದೆಯೇ? ಹಾಗೊಮ್ಮೆ ಕೊಡದಿದ್ದರೆ ತಾರತಮ್ಯನೀತಿಯನ್ನು ಅನುಸರಿಸಿದಂತಾಗುವುದಿಲ್ಲವೇ ?

ಮಧ್ಯರಾತ್ರಿಯ ವಾದ-ವಿವಾದದಲ್ಲಿ ಯಾಕೂಬ್ ಮೆಮನ್‌ರ ವಕೀಲರು ಕೇಳಿದ್ದಾದರು ಏನು ? ರಾಷ್ಟ್ರಪತಿಗಳು ಸ್ವತಃ ಮೆಮನ್ ಸಲ್ಲಿಸಿದ್ದ ಕ್ಷಮಾದಾನದ ಅರ್ಜಿಯನ್ನು ಆ ದಿನವೇ ರಾತ್ರಿ ತಿರಸ್ಕರಿಸಿರುವುದರಿಂದ, ಅಪರಾಧಿಗೆ ಅದನ್ನು ತಿಳಿಸಿದ ಸಮಯದಿಂದ ೧೪ ದಿನಗಳ ಕಾಲ ಮರಣದಂಡನೆಗೆ ಮಾನಸಿಕ ಸಿದ್ಧತೆ ಮಾಡಿಕೊಳ್ಳಲು, ತನ್ನ ಬಂಧುಮಿತ್ರರನ್ನು ಭೇಟಿಯಾಗಲು ಅವಕಾಶಕೊಟ್ಟು ನಂತರವೇ ಗಲ್ಲಿಗೇರಿಸಬೇಕೆಂಬ ನಿಯಮವಿರುವುದರಿಂದ, ಹಾಗೂ ಈಗ ನಿಗದಿಪಡಿಸಿದ ಗಲ್ಲಿಗೇರಿಸಬೇಕಾದ ಸಮಯಕ್ಕೆ ಕೆಲವೇ ಗಂಟೆಗಳಿರುವುದರಿಂದ ಆ ಆದೇಶಕ್ಕೆ ಸ್ಟೇ ಆರ್ಡರ್ ಕೊಟ್ಟು, ೧೪ ದಿನಗಳ ನಂತರವೇ ಕ್ರಮ ಕೈಗೊಳ್ಳಬೇಕು. ತಾವು ಮರಣದಂಡನೆಯ ಶಿಕ್ಷೆಯನ್ನು ಪ್ರಶ್ನಿಸುತ್ತಿಲ್ಲ ಎಂದು ಅವರು ನ್ಯಾಯಾಲಯಕ್ಕೆ ತಿಳಿಸಿದರು. ಆದರೆ, ನ್ಯಾಯಾಧೀಶರು, ಈಗಾಗಲೇ ಅವರ



ಯಾಕೂಬ್ ಮೆಮನ್

ಅಣ್ಣ ಕಳಿಸಿದ್ದ ಕ್ಷಮಾದಾನದ ಅರ್ಜಿ ಬಹಳ ಹಿಂದೆಯೇ ತಿರಸ್ಕೃತಗೊಂಡಿದ್ದು, ಅದನ್ನು ತಿಳಿದ ಮೇಲೂ ಅಪರಾಧಿ ಅದನ್ನು ಒಪ್ಪಿಕೊಂಡಿದ್ದರಿಂದ ಈಗ ಪುನಃ ೧೪ ದಿನಗಳ ಕಾಲ ಮರಣದಂಡನೆಯನ್ನು ತಡೆಹಿಡಿಯಬೇಕಾಗಿಲ್ಲ ಎಂದು ಆ ವಾದವನ್ನು ತಳ್ಳಿ ಹಾಕಿದರು. ಇಲ್ಲಿ ಒಂದು ಕಾನೂನಿನ ಅಂಶವನ್ನು ಗಮನಿಸಬೇಕು. ರಾಷ್ಟ್ರಪತಿಗಳಿಗೆ ಒಬ್ಬ ವ್ಯಕ್ತಿ ಎಷ್ಟು ಕ್ಷಮಾದಾನದ ಅರ್ಜಿಗಳನ್ನು ಸಲ್ಲಿಸಬಹುದೆಂಬ ಬಗ್ಗೆ ಯಾವುದೇ ನಿಯಮವಿಲ್ಲ. ಇನ್ನೂ ಒಂದು ಅಂಶವೆಂದರೆ, ಹಿಂದಿನ ಅರ್ಜಿಯನ್ನು ಅಪರಾಧಿಯ ಅಣ್ಣ ಸಲ್ಲಿಸಿದ್ದು, ಅಪರಾಧಿಯೇ ಸ್ವಯಂ ಸಲ್ಲಿಸಿರಲಿಲ್ಲ. ಒಟ್ಟಾರೆ, ವಕೀಲರು ಏನೇ ಕಾನೂನಿನ ಸರ್ಕಸ್ ಮಾಡಿದರೂ ಫಲ ನೀಡಲಿಲ್ಲ, ನಿಗದಿಪಡಿಸಿದಂತೆ ಯಾಕೂಬ್ ಮೆಮನ್ ಗಲ್ಲಿಗೇರಿ ಬಾಂಬೆ ಬ್ಲಾಸ್ಟ್‌ಕೇಸಿನ ಕೊನೆಯ ಅಧ್ಯಾಯ ಬರೆದ.

ಮಳೆ ನಿಂತರೂ ಮಳೆ ಹನಿ ಉದುರುತ್ತಲೇ ಇರುವಂತೆ ಅನಂತರವೂ ಈ ಪ್ರಕರಣ ಚರ್ಚೆಗೆ ಗ್ರಾಸ ಒದಗಿಸಿತು. ೧೪ ದಿನಗಳು ಮುಂದೂಡಿದ್ದರೆ ಏನಾಗುತ್ತಿತ್ತು, ಅಷ್ಟು ತರಾತುರಿಯಲ್ಲಿ ರಾತ್ರಿ ಕೋರ್ಟಿನ ಬಾಗಿಲು ತೆರೆದು ಹಲವಾರು ಗಂಟೆಗಳ ಕಾಲ ವಿಚಾರಣೆ ನಡೆಸುವ ಬದಲು ಮನೆಯಲ್ಲಿಯೇ ಸ್ಟೇ ಆರ್ಡರ್ ನೀಡಿ, ಮಾರನೆಯ ದಿನ ವಿಚಾರಣೆ ನಡೆಸಬಹುದಿತ್ತಲ್ಲವೇ ? ಆರು ಬಾರಿ ವಿಚಾರಣೆ ನಡೆಸಿದ ನಂತರವೂ ಅತೃಪ್ತಿ ಏಕೆ? ಅಥವಾ ಸಾರ್ವಜನಿಕರಲ್ಲಿ ಯಾಕೂಬ್ ಮೆಮನ್ ಬಗ್ಗೆ ಸ್ವಲ್ಪ ಸಹಾನುಭೂತಿ ಹುಟ್ಟಿದ್ದರಿಂದ, ಏನಾದರೂ ಮಾಡಿ ೧೪ ದಿನಗಳ ಸಮಯ ಪಡೆದರೆ ಸಾರ್ವಜನಿಕರಲ್ಲಿ ಹೆಚ್ಚಿನ ಸಹಾನುಭೂತಿ ಮೂಡಿಸಿ ಮತ್ತೊಮ್ಮೆ ಕ್ಷಮಾದಾನಕ್ಕೆ ಒತ್ತಾಯ ಬರುವಂತೆ ಮಾಡಬಹುದೆನ್ನುವ ಯೋಚನೆ ಇತ್ತೇ ?

ಸಾರ್ವಜನಿಕರಲ್ಲಿ ಯಾಕೂಬ್ ಮೆಮನ್ ಬಗ್ಗೆ ಸಹಾನುಭೂತಿ ಹುಟ್ಟಲೂ ಒಂದು ಕಾರಣವಿತ್ತು. ಮೆಮನ್ ತಾನಾಗಿಯೇ ಪೊಲೀಸರಿಗೆ ಶರಣಾಗಿದ್ದ, ಇತರ ಅಪರಾಧಿಗಳ ಬಗ್ಗೆ ಮಾಹಿತಿ ಕೊಟ್ಟು ಪ್ರಕರಣ ಭೇದಿಸಲು ನೆರವಾಗಿದ್ದ, ಅಲ್ಲದೆ ಪೊಲೀಸರು ಶರಣಾಗತಿಯ ಸಮಯದಲ್ಲಿ ಅವನಿಗೆ ಶಿಕ್ಷಣ ಪ್ರಮಾಣ ಕಡಿಮೆಯಾಗಲು ನೆರವಾಗುವುದಾಗಿ ಮಾತು ಕೊಟ್ಟಿದ್ದರು, ಆದರೆ, ವಿಚಾರಣೆಯ ಸಮಯದಲ್ಲಿ ಮಾತನ್ನು ಉಳಿಸಿಕೊಳ್ಳಲಿಲ್ಲ. ಅಲ್ಲದೆ, ಮೆಮನ್ ಈಗಾಗಲೇ ಹಲವಾರು ವರ್ಷಗಳ ಕಾಲ ಜೈಲಿನಲ್ಲಿ ಕಾಲಕಳೆದಿದ್ದ. ಹಾಗಾಗಿ ಮರಣದಂಡನೆಯ ಬದಲು ಜೀವಾವಧಿಯ ಶಿಕ್ಷೆ ವಿಧಿಸಬಹುದಿತ್ತು ಎನ್ನುವುದು ಹಲವಾರು ವಿಚಾರವಾದಿಗಳ ಅಭಿಪ್ರಾಯವಾಗಿತ್ತು.

ಆದರೆ, ಇದಕ್ಕೂ ಹೆಚ್ಚಿನ ಸಾರ್ವಜನಿಕ ಚರ್ಚೆ ಹುಟ್ಟುಹಾಕಿದ ಪ್ರಕರಣ ಇದಾಗಿತ್ತು. ಮರಣದಂಡನೆಯನ್ನೇ ರದ್ದುಪಡಿಸಬೇಕು, ಕಾನೂನಿನ ಪುಸ್ತಕದಿಂದ ತೆಗೆದುಹಾಕಬೇಕು ಎಂದು ಬಲವಾದ ಒತ್ತಡ ಸರ್ಕಾರದ ಮೇಲೆ ಬಿದ್ದಿತು. ಯಾವುದೇ ಕಾರಣಕ್ಕೆ ವ್ಯಕ್ತಿಯ ಜೀವ ತೆಗೆಯುವುದು ಸರಿಯಿಲ್ಲ, ಅದು ಮಾನವತಾವಾದದ ಉಲ್ಲಂಘನೆಯಾಗುತ್ತದೆ, ಪ್ರತಿಯೊಬ್ಬ ವ್ಯಕ್ತಿಗೂ ಬದುಕಲು ಹಕ್ಕಿದೆ. ಬೇಕಾದರೆ ಜೀವಾವಧಿ ಶಿಕ್ಷೆ (ಜೀವವಿರುವವರೆಗೆ ಸೆರೆವಾಸದ ಶಿಕ್ಷೆ) ನೀಡಬಹುದು, ಮರಣದಂಡನೆ ಅಪರಾಧಗಳನ್ನು ನಡೆಯದಂತೆ ತಡೆಗಟ್ಟುತ್ತದೆ ಎನ್ನುವುದು ಸುಳ್ಳು ಎಂದು ಈಗಾಗಲೇ ಸಾಬೀತಾಗಿದೆ. ಹಾಗಾಗಿ ಮರಣದಂಡನೆಯ ಬದಲು ಜೀವಾವಧಿ ಸೆರೆವಾಸವೇ ತಕ್ಕ ಶಿಕ್ಷೆ ಎನ್ನುವ ವಾದಕ್ಕೆ ಪುಷ್ಟಿ ದೊರೆತಿದೆ. ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ಶ್ರೀ ಗಂಗೂಲಿಯವರೂ ಮರಣದಂಡನೆಯ ಶಿಕ್ಷೆಯನ್ನು ವಿರೋಧಿಸಿದ್ದಾರೆ. ಇನ್ನೂ ಹಲವಾರು ಸಂಘ-ಸಂಸ್ಥೆಗಳು, ವಿಚಾರವಾದಿಗಳು ಮರಣದಂಡನೆಯ ರದ್ದತಿಯನ್ನು ಬೆಂಬಲಿಸುತ್ತಿದ್ದಾರೆ. ಲಾ ಕಮೀಷನ್ ಸಹ ಇತ್ತೀಚೆಗೆ ಉಳಿದೆಲ್ಲಾ ಅಪರಾಧ ಗಳಿಗೆ ಮರಣದಂಡನೆ ಶಿಕ್ಷೆಯನ್ನು ತೆಗೆದುಹಾಕಿ ಭಯೋತ್ಪಾದಕ ಕೃತ್ಯಗಳಿಗೆ ಮಾತ್ರ ಅದನ್ನು ಉಳಿಸಬೇಕೆಂದು ಶಿಫಾರಸ್ಸು ಮಾಡಿದೆ. ಆ ಅಪರಾಧಗಳಿಗೂ ಕೂಡದೆಂದು ಒಂದು ಗುಂಪು ಹೇಳುತ್ತಿದ್ದರೆ, ಸಂತ್ರಸ್ತರ ಧ್ವನಿಗೆ, ನೋವಿಗೆ ಬೆಲೆಯಿಲ್ಲವೇ, ಇಷ್ಟು ಸಾವು-ನೋವನ್ನು ವಿನಾ ಕಾರಣ ಉಂಟುಮಾಡಿ, ಅವರ ಕುಟುಂಬದವರಿಗೆ ಭರಿಸಲಾಗದ ಸಂಕಟ ತಂದುಕೊಟ್ಟವರಿಗೆ ಸರಿಯಾದ ಶಿಕ್ಷೆ ಬೇಡವೇ, ಅವರಿಗೂ ಅದೇ ಸಾವೇ ತಕ್ಕ ಶಿಕ್ಷೆಯಲ್ಲವೇ, ಅದರಿಂದ ಮಾತ್ರ ಸತ್ತವರ ಹತ್ತಿರದ ಬಂಧುಗಳಿಗೆ ನ್ಯಾಯ

# ಗಝಲ್

ಮನುಷ್ಯ ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಗಿಡದಿಂದ ಉದುರಿದ ಎಲೆಯಂತೆ ಒಣಗಿ ಸದ್ದು ಮಾಡುತಾ
ನೆರಳು ನೀಡಲಾಗದೆ ಜೊತೆ ಬದುಕಲಾಗದೆ ಧ್ಯಾನದ ಮೋಜಿನಲಿ ಜೀವಕುಲದಿಂದ ದೂರಾಗುತ್ತಾ

ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಸಿದಿಗೆಗೆ ಬಿಗಿದಿಟ್ಟ ಸೊಪ್ಪೆಯ ದಂಟಿನಂತೆ ಬರಿ ಕುರ್ಚಿ ಬಡಿಯುತ್ತಾ
ಗುಡಿ ಚರ್ಚು ಮಸೀದಿಯಲಿ ಹಿಲಾಲು ಹಿಡಿದು ಮೆರವಣಿಗೆಗಳಲಿ ಜೋಲಿ ಹೊಡೆಯುತ್ತಾ

ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಗರ್ಭಗುಡಿಯಲಿ ರೋಗಗಳ ಮಾರುತ್ತಾ
ಅಡ್ಡಪಲ್ಲಕ್ಕಿಯಲಿ ಸುಖವ ಸಾರುತ್ತಾ
ತರ್ಕ ಶಾಸ್ತ್ರ ರಸಗಳಿಂದ ಶೃಂಗಾರಗೊಂಡು ಶಿಲುಬೆ ತ್ರಿಶೂಲ ಹಿಡಿದು ಒಲ್ಲದ ಶಾಂತಿಯ ಮಾರುತ್ತಾ

ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಸಮವಸ್ತ್ರವ ತೊಟ್ಟು ಹೊಲದ ಬೇಲಿಯಂತೆ ಪಾಳಿ ಕಾಯುತ್ತಾ
ಅಭಿಷೇಕಗಳಾಗಿ ಆರತಿ ತಟ್ಟೆಗೆ ಬೀಳುವ ಮಂತ್ರದ ಉಗುಳಾಗಿ ಹೊತ್ತಿನ ಅನ್ನವ ಕಸಿಯುತ್ತಾ

ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಗೆದ್ದಲುತಿಂದ ಮತದ ಹಾಳೆಯ ಮಾತನಂಬಿ ನಾವೇ ಅವನಾಗುವ
ಪ್ರಶ್ನೆ ಮರೆಯುತ್ತಾ
ಮಾಲೀಕನೆ ನಾನೆನುವ ಸಂತ ಶರಣ ಸೂಫಿಗಳ ಮನದ ಮೇಲೆ ಯುದ್ಧ ಸಾರಿ ದಫನ್ ಮಾಡುತ್ತಾ

ಧರ್ಮಗಳು ಮಾತಾಡುತ್ತಿವೆ ಗೆಳೆಯಾ ಪ್ರಾರ್ಥನೆ ಪೂಜೆ ನಮಾಜಿಗೆ ರೋಗದ ಸೋಂಕು ತಗುಲಿಸುತ್ತಾ
ಅಂತೆಯೇ ಮತವೆಂಬ ಧರ್ಮವನು ಮಂಕುಕವಿಸಿಕೊಳ್ಳದ 'ದಾಸ'ನ ಸುಡಲು ಪಾದಯಾತ್ರೆಗೆ ಸಜ್ಜಾಗುತ್ತಾ




**ರಮೇಶ ಗಬ್ಬೂರು**
ಗ್ರಂಥಪಾಲಕರು
ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು
ಗಂಗಾವತಿ
ಕೊಪ್ಪಳ ಜಿಲ್ಲೆ – ೫೮೩ ೨೨೭



ದೊರಕಿದಂತಾಗುವುದಿಲ್ಲವೇ ಎನ್ನುವ ಸಂತ್ರಸ್ತರ ಕ್ಷೀಣ ಧ್ವನಿ ಇನ್ನೊಂದು ಕಡೆ ಕೇಳಿಬರುತ್ತಿದೆ. ಈ ವಿಧ್ವಂಸಕರು ಯಾವುದೋ ಧಾರ್ಮಿಕ – ತಾತ್ತ್ವಿಕ ನಂಬಿಕೆ ಇಟ್ಟುಕೊಂಡು ಸಾಯಲು, ಹುತಾತ್ಮರಾಗಲು ಸಿದ್ಧರಾಗಿಯೇ ಬಂದಿರುತ್ತಾರೆ. ಅವರಿಗೆ ಮರಣದಂಡನೆಯ ಮೂಲಕ ಹುತಾತ್ಮರ ಪಟ್ಟಕಟ್ಟಿ ಅದರ ಉದ್ದೇಶ ಸಫಲವಾಗುವಂತೆ ಮಾಡುವುದು ಸರಿಯೇ, ಅದರ ಬದಲು ಆಜೀವ ಸೆರೆಮನೆವಾಸ ಅನುಭವಿಸಿ ತಮ್ಮ ತಪ್ಪನ್ನು ಅರಿತುಕೊಳ್ಳಲು ಅವಕಾಶಕೊಡಬೇಕೇ, ಆಗ ಹುತಾತ್ಮರಾಗುವ ಭ್ರಮೆ ಕಳಚಿ, ಬೇರೆಯವರಿಗೂ ಅದು ಉದಾಹರಣೆಯಾಗಿ ತಮ್ಮ ತಲೆಯನ್ನು ಯಾರೂ ಕೆಡಿಸದಂತೆ ಕಾಪಾಡಿಕೊಳ್ಳಲು ಅನುವಾಗುವುದೇ ? ಮರಣದಂಡನೆಯ ಶಿಕ್ಷೆ ತೆಗೆದುಹಾಕಲು ಕಾಲಪಕ್ವವಾಗಿದೆಯೇ ? ಕಾದು ನೋಡಬೇಕು.

ಚರ್ಚೆಯ ಅಲೆ ಎಬ್ಬಿಸಿದ ಇನ್ನೊಂದು ಪ್ರಕರಣವೆಂದರೆ, ೧೯೯೭ರ ಉಪಹಾರ್ ಸಿನಿಮಾ ದುರಂತ ಪ್ರಕರಣ. ಇತ್ತೀಚೆಗೆ, ೨೦೧೫ರ ಆಗಸ್ಟ್ ತಿಂಗಳಿನಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಒಂದು ಹಂತದ ತೀರ್ಪು ಹೊರಬಂದು ಅಧ್ಯಾಯವೊಂದು ಕೊನೆಗೊಂಡಿದೆ. ಆದರೆ, ನ್ಯಾಯಕ್ಕಾಗಿ ದೀರ್ಘಕಾಲದ ಹೋರಾಟ ನಡೆಸುತ್ತಾ ಬಂದಿರುವ ಉಪಹಾರ್ ಸಿನಿಮಾ ಬೆಂಕಿ ದುರಂತದ ಸಂತ್ರಸ್ತರಿಗೆ ಈ ತೀರ್ಪಿನಿಂದ ಖಂಡಿತಾ ಸಮಾಧಾನವಾಗಿಲ್ಲ. ತಮ್ಮ ಹೋರಾಟಕ್ಕೆ ತಕ್ಕ ಪ್ರತಿಫಲ ದೊರಕಲಿಲ್ಲ ಎಂಬ ಆಕ್ರೋಶ ಅವರಲ್ಲಿದೆ. ತೀರ್ಪಿನ ವಿರುದ್ಧ ಧ್ವನಿ ಎತ್ತಿ ಪುನರ್ ಪರಿಶೀಲನೆ ನಡೆಸಬೇಕೆಂದು ಅವರು ಬಲವಾಗಿ ಒತ್ತಾಯಿಸುತ್ತಿದ್ದಾರೆ. ನ್ಯಾಯಾಲಯದಲ್ಲಿ ಆಗುವ ವಿಳಂಬಕ್ಕೆ ಅಪರಾಧಿಗಳಿಗೆ ಶಿಕ್ಷೆಯನ್ನೇಕೆ ಕಡಿಮೆ ಮಾಡಬೇಕು. ತಮಗೇಕೆ ಪರಿಹಾರ ಸಿಗಲು ಮತ್ತಷ್ಟು ವಿಳಂಬವಾಗಬೇಕು, ಇಷ್ಟು ವರ್ಷ ಹೋರಾಡಿದ್ದಕ್ಕೆ ತಮಗೆ ಸಿಕ್ಕ ಪ್ರತಿಫಲವಾದರೂ ಏನು ಎನ್ನುವುದು ಅವರ ಅಳಲು. ದುರಂತಕ್ಕೆ ಸರ್ಕಾರಿ ಸಂಸ್ಥೆಗಳ ನಿರ್ಲಕ್ಷ್ಯವೇ ಕಾರಣವಾದರೂ ಅವರಿಗೇಕೆ ಶಿಕ್ಷೆಯಿಲ್ಲ, ಅವರೇಕೆ ಜವಾಬ್ದಾರರಾಗುವುದಿಲ್ಲ ಎನ್ನುವುದು ಪ್ರಶ್ನೆ.

ದಕ್ಷಿಣ ದೆಹಲಿಯ ಜನನಿಬಿಡ ಪ್ರದೇಶದಲ್ಲಿರುವ ಉಪಹಾರ್ ಸಿನಿಮಾ ಮಂದಿರದಲ್ಲಿ ಜೂನ್ ೧೩, ೧೯೯೮ರ ಸಂಜೆ ಸಿನಿಮಾವೊಂದನ್ನು ತೋರಿಸುತ್ತಿದ್ದಾಗ, ವಾಹನ ನಿಲುಗಡೆ ಪ್ರದೇಶದಲ್ಲಿ ಟ್ರಾನ್ಸ್‌ಫಾರ್ಮರ್‌ಗೆ ಬೆಂಕಿ ಹತ್ತಿ, ಸಿನಿಮಾ ಮಂದಿರಕ್ಕೂ ಬೆಂಕಿ ವ್ಯಾಪಿಸಿ ಸಿನಿಮಾ ನೋಡುತ್ತಿದ್ದ ೫೯ ವೀಕ್ಷಕರು ಸತ್ತು, ೧೦೦ ಜನ ಗಾಯಗೊಂಡರು. ಉಸಿರು ಕಟ್ಟಿ, ಕಾಲ್ತುಳಿತಕ್ಕೆ ಸಿಕ್ಕಿ ಈ ದೊಡ್ಡ ಅನಾಹುತ ಜರುಗಿತ್ತು. ದೇಶದಾದ್ಯಂತ ಸುದ್ದಿ ಮಾಡಿದ ದುರಂತವಾಗಿತ್ತು ಈ ಘಟನೆ. ಬೆಂಕಿ ಅನಾಹುತವೇನಾದರೂ ಆದರೆ ತುರ್ತುನಿರ್ಗಮನಕ್ಕೆ ಅವಕಾಶ ಮಾಡಿಕೊಡದೆ, ಇದ್ದ ಬಾಗಿಲನ್ನು ಮುಚ್ಚಿ, ದುಡ್ಡಿನ ಆಸೆಗೆ ಹೆಚ್ಚಿನ ಬಾಲ್ಕನಿ ಸೀಟುಗಳನ್ನು ಹಾಕಿ ಇಂತಹ ಅನಾಹುತಕ್ಕೆ ಕಾರಣರಾದವರು ಸಿನಿಮಾ ಮಂದಿರದ ಮಾಲೀಕರಾದ ಗೋಪಾಲ ಮತ್ತು ಸುಶೀಲ್ ಅನ್ಸಾಲ್‌ರವರು. ಈರೀತಿ ಕಾನೂನನ್ನು ಉಲ್ಲಂಘಿಸಿದವರ ವಿರುದ್ಧ ಮೊದಲೇ ಕ್ರಮತೆಗೆದುಕೊಳ್ಳದೆ ನಿರ್ಲಕ್ಷ್ಯ ತೋರಿದ ದೆಹಲಿ ಕಾರ್ಪೋರೇಶನ್ ಅಧಿಕಾರಿಗಳು ಮತ್ತು ದೆಹಲಿ ಪೊಲೀಸ್ ಕಮಿಷನರ್ ಮತ್ತು ಅಂತಹ ಸ್ಥಳದಲ್ಲಿದ್ದ ಟ್ರಾನ್ಸ್‌ಫಾರ್ಮರ್ ಬಗ್ಗೆ ಎಚ್ಚರಿಕೆ ವಹಿಸದ ದೆಹಲಿ ವಿದ್ಯುತ್ ಮಂಡಳಿ ಇವರ ವಿರುದ್ಧ ಸಂತ್ರಸ್ತರ ಸಂಘಟನೆ ರಿಟ್ ಅರ್ಜಿಹಾಕಿ ಕಾನೂನಿನ ಸಮರ ಆರಂಭಿಸಿತ್ತು. ದೆಹಲಿ ಉಚ್ಚನ್ಯಾಯಾಲಯವು ವಿಚಾರಣೆ ನಡೆಸಿ ಮೃತರು ೨೦ ವರ್ಷಕ್ಕೆ ಮೇಲ್ಪಟ್ಟಿದ್ದರೆ ಹತ್ತಿರದ ಸಂಬಂಧಿಗಳಿಗೆ ೧೮ ಲಕ್ಷ ರೂಪಾಯಿಗಳು, ೨೦ ವರ್ಷಕ್ಕೆ ಕೆಳಗಿನ ಮೃತರ ಸಂಬಂಧಿಗಳಿಗೆ ೧೫ ಲಕ್ಷ ರೂ.ಗಳು, ಗಾಯಗೊಂಡವರಿಗೆ ತಲಾ ೧ ಲಕ್ಷ ರೂ.ಗಳ ಪರಿಹಾರಧನವನ್ನು ಗೊತ್ತುಮಾಡಿ ಅದರ ಮೇಲೆ ೯% ಬಡ್ಡಿಯನ್ನೂ ಕೊಡುವಂತೆ ಆದೇಶ ನೀಡಿತ್ತು. ಅದರಲ್ಲಿ ೫೫% ಪರಿಹಾರ ಧನವನ್ನು ಸಿನಿಮಾ ಮಂದಿರದ ಮಾಲೀಕರು ಭರಿಸಬೇಕು, ಉಳಿದಂತೆ ದೆಹಲಿ ವಿದ್ಯುತ್ ನಿಗಮ ದೆಹಲಿ ಮುನಿಸಿಪಲ್ ಕಾರ್ಪೋರೇಶನ್ ಮತ್ತು ಲೈಸೆನ್ಸಿಂಗ್ ಅಥಾರಿಟಿಯಾದ ದೆಹಲಿ ಪೊಲೀಸ್ ಕಮೀಶನರ್ ತಲಾ ೧೫% ಪರಿಹಾರವನ್ನು ಭರಿಸಬೇಕೆಂದು ಆದೇಶಿಸಿತು. ಇದರೊಂದಿಗೆ, ಸಿನಿಮಾ ಮಂದಿರದ ಮಾಲೀಕರು ೨.೫ ಕೋಟಿ ರೂಪಾಯಿಗಳನ್ನು ದಂಡದ ರೂಪದಲ್ಲಿ ಕೊಡಬೇಕೆಂದು ನಿರ್ದೇಶಿಸಿತು. ಕೊಡಲು ತಪ್ಪಿದಲ್ಲಿ ೨ ವರ್ಷಗಳ ಕಾಲ ಕಠಿಣ ಸಜಾ ಅನುಭವಿಸಬೇಕಿತ್ತು. ಈ ಆದೇಶದ ವಿರುದ್ಧ ಸಿನಿಮಾ ಮಂದಿರದ ಮಾಲೀಕರು, ದೆಹಲಿ ಮುನಿಸಿಪಲ್ ಕಾರ್ಪೋರೇಶನ್ ಮತ್ತು ಪೊಲೀಸ್ ಕಮೀಶನರ್ ಸರ್ವೋಚ್ಚ ನ್ಯಾಯಾಲಯದಲ್ಲಿ ಅಪೀಲು ಸಲ್ಲಿಸಿದರು. ಸಂತ್ರಸ್ತರು ಈ ಆದೇಶದಿಂದ ತೃಪ್ತರಾದಂತೆ ಕಂಡುಬಂದಿತ್ತು. ಏಕೆಂದರೆ, ಅವರು ದೆಹಲಿ ಉಚ್ಚನ್ಯಾಯಾಲಯದ ಆದೇಶವನ್ನು ಪ್ರಶ್ನಿಸಿ ಅಪೀಲು ಹಾಕಲಿಲ್ಲ.

ಆದರೆ ಸರ್ವೋಚ್ಚ ನ್ಯಾಯಾಲಯ ಈ ತೀರ್ಪನ್ನು ಎತ್ತಿ

ಹಿಡಿಯದೇ ಅದಕ್ಕೆ ತಿದ್ದುಪಡಿ ತಂದು ಸಂತ್ರಸ್ತರ ಅತೃಪ್ತಿಗೆ ಕಾರಣವಾಯಿತು. ಜೊತೆಗೆ ಹಲವಾರು ಪ್ರಶ್ನೆಗಳನ್ನೂ ಹುಟ್ಟುಹಾಕಿತು. ತನ್ನದೇ ಲೆಕ್ಕಚಾರದ ಮೇಲೆ ಪರಿಹಾರಧನವನ್ನು ಕಡಿಮೆ ಮಾಡಿ ಅದನ್ನು ೧೦ ಲಕ್ಷ ಮತ್ತು ೭.೫ ಲಕ್ಷ ರೂ.ಗಳಿಗೆ ಇಳಿಸಿ, ಮೃತರ ಸಂಬಂಧಿಗಳು ಹೆಚ್ಚಿನ ಪರಿಹಾರ ಬಯಸಿದರೆ ದೆಹಲಿ ಉಚ್ಚನ್ಯಾಯಾಲಯದ ರಿಜಿಸ್ಟ್ರಾರ್ ಅವರಿಗೆ ಅರ್ಜಿ ಸಲ್ಲಿಸಿ ಸಾಬೀತುಪಡಿಸಬೇಕೆಂದು ಹೇಳಿದ್ದಲ್ಲದೆ ಗಾಯಗೊಂಡವರಿಗೆ ೧ ಲಕ್ಷ ರೂ. ಪರಿಹಾರವನ್ನು ಒಪ್ಪಿಕೊಂಡು, ಹೆಚ್ಚಿನ ಪರಿಹಾರ ಕೋರಿದವರು ಸಿವಿಲ್ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕೆಂದು ಹೇಳಿತು. ದಂಡವನ್ನು ೨.೫ ಕೋಟಿ ರೂಪಾಯಿಗಳಿಂದ ೨೫ ಲಕ್ಷ ರೂ.ಗಳಿಗೆ ಇಳಿಸಿತು. ಮುಖ್ಯವಾಗಿ ಸಾರ್ವಜನಿಕ ಪ್ರಾಧಿಕಾರಗಳು ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದಿದ್ದರೆ ಅಥವಾ ಅವರು ಕೈಗೊಂಡ ಕ್ರಮ ಆಮೇಲೆ ಕಾನೂನಿನ ಅಧಿಕಾರ ಹೊಂದಿರಲಿಲ್ಲವೆಂದು ಕಂಡುಬಂದರೆ ಅಥವಾ ಕ್ರಮ ಕೈಗೊಳ್ಳ ಬೇಕಾದ ಅಧಿಕಾರಿಗಳು ಕ್ರಮಕೈಗೊಳ್ಳದೆ ಕರ್ತವ್ಯದ ಬಗ್ಗೆ ಅಲಕ್ಷ್ಯ ತೋರಿದರೆ, ಅದಕ್ಕೆ ಅವರನ್ನು ಹೊಣೆಗಾರರನ್ನಾಗಿಸಲು ಬರುವುದಿಲ್ಲ, ಕಾನೂನುಬದ್ಧ ಜವಾಬ್ದಾರಿ / ಕ್ರಮಕೈಗೊಳ್ಳುವ ಸಂಬಂಧದಲ್ಲಿ ನ್ಯಾಯಾಲಯಗಳು ನಷ್ಟ ಭರ್ತಿಮಾಡುವಂತೆ ಸಾರ್ವಜನಿಕ ಪ್ರಾಧಿಕಾರ / ಅಧಿಕಾರಿಗಳನ್ನು ಕೇಳಲಾಗದು, ಹಾಗೆ ನಷ್ಟ ಭರ್ತಿಮಾಡಲು ಕೇವಲ ಕರ್ತವ್ಯದಲ್ಲಿ ಅಲಕ್ಷ್ಯ, ನಿರ್ಲಕ್ಷ್ಯವಿದ್ದರೆ ಸಾಲದು, ಅದಕ್ಕೂ ಹೆಚ್ಚಿನ ಹಾನಿ ಉಂಟುಮಾಡುವ ಕೆಟ್ಟ ಉದ್ದೇಶವಿರಬೇಕು ಅಥವಾ ಗೊತ್ತಿದ್ದೂ ಅಧಿಕಾರದ ದುರುಪಯೋಗಮಾಡಿಕೊಂಡಿರಬೇಕು ಎಂದು ಸರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿರುವುದು ಸಾರ್ವಜನಿಕ ವಲಯದಲ್ಲಿ ಅಸಮಾಧಾನಕ್ಕೆ ಕಾರಣವಾಗಿದೆ. ಮೊದಲೇ ಸರ್ಕಾರಿ ಅಧಿಕಾರಿಗಳು / ಪ್ರಾಧಿಕಾರಗಳು ಸಾರ್ವಜನಿಕರ ಹಿತಕ್ಕೆ ಬೆಲೆ ಕೊಡದೆ ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿಸಿ ಸಾರ್ವಜನಿಕರ ಆಕ್ರೋಶಕ್ಕೆ ಒಳಗಾಗುತ್ತಿದ್ದರೂ ಯಾವುದೇ ಅಂಕುಶವಿಲ್ಲದೇ ಕರ್ತವ್ಯದ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರಿಸುತ್ತಿರುವಾಗ ಈ ರೀತಿಯ ತೀರ್ಪು ತೂಕಡಿಸುವವರಿಗೆ ಹಾಸಿಗೆ ಹಾಕಿಕೊಟ್ಟಂತಾಗುವುದಿಲ್ಲವೇ ಎನ್ನುವ ಅಸಮಾಧಾನಕ್ಕೆ ಕಾರಣವಾಗಿದೆ. ಸರ್ವೋಚ್ಚ ನ್ಯಾಯಾಲಯ ಈ ಬಗ್ಗೆ ಕಾನೂನು ರೂಪಿಸಬೇಕೆಂದು ಮಾತ್ರ ಸೂಚಿಸುವ ಬದಲು ಎಷ್ಟೋ ಪ್ರಕರಣಗಳಲ್ಲಿ ಮಾಡಿರುವಂತೆ, ಈ ಪ್ರಕರಣದಲ್ಲಿ ಕಾನೂನು ಇಲ್ಲದಿರುವುದರಿಂದ ತಾನೇ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಿ, ಕಾನೂನು ಆಗುವವರೆಗೆ ಅದೇ ಕಾನೂನಾಗಿರುತ್ತದೆಂದು ಘೋಷಿಸಬಹುದಿತ್ತಲ್ಲವೇ, ಇದರಿಂದ ಈ ಪ್ರಕರಣದ ಸಂತ್ರಸ್ತರಿಗೆ ನ್ಯಾಯ ದೊರಕಿದ ಸಮಾಧಾನವಲ್ಲದೇ ಅಧಿಕಾರಿಗಳಿಗೂ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುವಂತೆ ಎಚ್ಚರಿಕೆ ನೀಡಬಹುದಿತ್ತಲ್ಲವೇ?

ಸಿವಿಲ್ ಪ್ರಕರಣದಲ್ಲಿ ಈ ರೀತಿಯ ಅಸಮಾಧಾನದ ಅಲೆ ಎದ್ದಿದ್ದರೆ, ಕ್ರಿಮಿನಲ್ ಪ್ರಕರಣ ಸುನಾಮಿಯನ್ನೇ ಎಬ್ಬಿಸಿದೆ. ಇದೇ ಉಪಹಾರ್ ಸಿನಿಮಾ ಮಂದಿರದ ದುರ್ಘಟನೆಯ ಬಗ್ಗೆ ಅದರ ಮಾಲೀಕರಾದ ಅನ್ಸಾಲ್ ಸಹೋದರರ ವಿರುದ್ಧ ಹೂಡಿದ್ದ ಕ್ರಿಮಿನಲ್ ಮೊಕದ್ದಮೆಯಲ್ಲಿ ಕೆಳನ್ಯಾಯಾಲಯವು, ಇಬ್ಬರೂ ಸಹೋದರರು ತಲಾ ೩೦ ಕೋಟಿ ರೂಪಾಯಿಗಳನ್ನು ೩ ತಿಂಗಳೊಳಗೆ ಸರ್ಕಾರಕ್ಕೆ ದಂಡವಾಗಿ ಕಟ್ಟಬೇಕೆಂದು ಹಾಗೂ ೨ ವರ್ಷ ಜೈಲು ಶಿಕ್ಷೆ ಅನುಭವಿಸಬೇಕೆಂದು ಹೇಳಿ, ಹಣವನ್ನು ೩ ತಿಂಗಳೊಳಗೆ ಕಟ್ಟಿದಲ್ಲಿ ಈಗಾಗಲೇ ಅವರು ಜೈಲಿನಲ್ಲಿದ್ದ ಅವಧಿಗೆ ಕಠಿಣ ಸೆರೆವಾಸದ ಶಿಕ್ಷೆಯನ್ನು ಸೀಮಿತಗೊಳಿಸಿತ್ತು. (ಸುಶೀಲ್ ಅನ್ಸಾಲ್ ಜೈಲಿನಲ್ಲಿದ್ದುದು ಸುಮಾರು ೫ ತಿಂಗಳು, ಗೋಪಾಲ ಅನ್ಸಾಲ್ ಇದ್ದುದು ೪ ತಿಂಗಳು ಮಾತ್ರ. ಇದು ದುರ್ಘಟನೆ ಸಂಭವಿಸಿದ ಕೂಡಲೇ ಇದ್ದುದು. ಅನಂತರ ಅವರು ಬೇಲ್ ಮೇಲೆ ಹೊರಗಿದ್ದರು). ಉಚ್ಚ ನ್ಯಾಯಾಲಯ ಅಪೀಲಿನಲ್ಲಿ ಆ ಶಿಕ್ಷೆಯನ್ನು ಒಂದು ವರ್ಷದ ಸೆರೆವಾಸಕ್ಕೆ ಇಳಿಸಿತು.

ಇದರ ವಿರುದ್ಧ ಸಂತ್ರಸ್ತರು ಮತ್ತು ಸಿ.ಬಿ.ಐ. ಉಚ್ಚನ್ಯಾಯಾಲಯದಲ್ಲಿ ಅಪೀಲು ಮಾಡಿದಾಗ, ಇಬ್ಬರು ನ್ಯಾಯಾಧೀಶರ ಪೀಠದಲ್ಲಿ ಶಿಕ್ಷೆಯ ಬಗ್ಗೆ ಒಮ್ಮತ ಮೂಡಲಿಲ್ಲ. ನ್ಯಾ. ಠಾಕೂರ್‌ರವರು ಉಚ್ಚನ್ಯಾಯಾಲಯದ ಒಂದು ವರ್ಷ ಸೆರೆವಾಸದ ಶಿಕ್ಷೆಯನ್ನು ಎತ್ತಿಹಿಡಿದರೆ, ನ್ಯಾ. ಜ್ಞಾನಸುಧಾ ಮಿಶ್ರಾರವರು ಸೆರೆವಾಸದ ಶಿಕ್ಷೆಯನ್ನು, ಅಪರಾಧಿ ಸುಶೀಲ್‌ನ ವಯಸ್ಸನ್ನು ಪರಿಗಣಿಸಿ, ಅವರು ಈಗಾಗಲೇ ಜೈಲಿನಲ್ಲಿದ್ದ ಅವಧಿಗೆ ಶಿಕ್ಷೆಯನ್ನು ಸೀಮಿತಗೊಳಿಸಿ, ಗೋಪಾಲರ ಸೆರೆವಾಸವನ್ನು ಎರಡು ವರ್ಷಕ್ಕೆ ಏರಿಸಿದರು. ಈ ಭಿನ್ನ ತೀರ್ಪಿನಿಂದಾಗಿ ಪ್ರಕರಣವನ್ನು ೩ ಜನ ನ್ಯಾಯಾಧೀಶರ ಪೀಠಕ್ಕೆ ಒಪ್ಪಿಸಲಾಯಿತು. ಆಗಸ್ಟ್ ೧೯, ೨೦೧೫ರಂದು ಈ ಪೀಠವು ತನ್ನ ಮೌಖಿಕ ತೀರ್ಪಿನಲ್ಲಿ ಅಪರಾಧಿಗಳಾದ ಸುಶೀಲ್ (೭೬ ವರ್ಷ) ಮತ್ತು ಗೋಪಾಲ್ (೬೭ ವರ್ಷ) ಅವರ ವಯಸ್ಸನ್ನು ಪರಿಗಣಿಸಿ, ತಲಾ ೩೦ ಕೋಟಿ ರೂ. ದಂಡವನ್ನು ಒಪ್ಪಿದರೂ, ಸೆರೆವಾಸದ ಶಿಕ್ಷೆಯನ್ನು ಈಗಾಗಲೇ ಅವರು ಅನುಭವಿಸಿದ ಸೆರೆವಾಸದ ಅವಧಿಗೆ ಸೀಮಿತಗೊಳಿಸಿತು.

ಇಷ್ಟು ವರ್ಷಗಳ ಕಾಲ ದೀರ್ಘ ಕಾನೂನಿನ ಸಮರ ನಡೆಸಿದ ಸಂತ್ರಸ್ತರಿಗೆ ಇದರಿಂದ ಬಹಳಷ್ಟು ನಿರಾಸೆಯಾಗಿ ಅವರ ಅಸಮಾಧಾನ ಭುಗಿಲೆದ್ದಿತು, ದೇಶದಾದ್ಯಂತ ಈ ತೀರ್ಪಿನ ಬಗ್ಗೆ ಟೀಕೆ ವ್ಯಕ್ತವಾಯಿತು. ಇದರ ಫಲವಾಗಿ ದಿನಾಂಕ ೨೫ ಆಗಸ್ಟ್ ೨೦೧೫ರಂದು ಲಿಖಿತ ಆದೇಶ ಹೊರಬಿದ್ದಾಗ, ಎರಡು ವರ್ಷದ ಸೆರೆವಾಸ ಶಿಕ್ಷೆ ವಿಧಿಸಲ್ಪಟ್ಟು, ಇಬ್ಬರು ಅಪರಾಧಿಗಳು ೬೦ ಕೋಟಿ ರೂಪಾಯಿಗಳನ್ನು ೩ ತಿಂಗಳೊಳಗೆ ಪಾವತಿಸಿದರೆ ಈ ಸೆರೆವಾಸದ ಶಿಕ್ಷೆಯನ್ನು ಅವರು ಈಗಾಗಲೇ ಅನುಭವಿಸಿದ ಸೆರೆವಾಸಕ್ಕೆ ಸೀಮಿತ ಗೊಳಿಸುವುದಾಗಿ ಪ್ರಕಟಿಸಿತು. ಎಂದರೆ, ಹಣವನ್ನು ಅವಧಿಯೊಳಗೆ ಪಾವತಿಸದಿದ್ದರೆ ಅವರಿಬ್ಬರೂ ಹೆಚ್ಚಿನ ಎರಡು ವರ್ಷದ ಸೆರೆವಾಸ ಅನುಭವಿಸಬೇಕು. ಈ ೬೦ ಕೋಟಿ ರೂಪಾಯಿಗಳು ದೆಹಲಿ ಸರ್ಕಾರಕ್ಕೆ ಟ್ರೌಮಾಸೆಂಟರ್ ಸ್ಥಾಪನೆಗೆ ಹೋಗುತ್ತದೆ.

ಒಟ್ಟಾರೆಯಾಗಿ, ಅನ್ಸಾಲ್ ಸೋದರರ ಹಣದಾಸೆಗೆ ೫೯ ಜನ ಅಮಾಯಕರು ಸತ್ತು ೧೦೩ ಜನರು ಗಾಯಗೊಂಡ ಉಪಹಾರ್ ಸಿನಿಮಾ ಮಂದಿರದ ೧೯೯೭ರ ಪ್ರಕರಣ ೨೦೧೫ರಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಕೊನೆಗೊಂಡಾಗ ದೀರ್ಘಕಾಲ ಕಾನೂನಿನ ಹೋರಾಟ ನಡೆಸಿದ ಸತ್ತವರ ಬಂಧುಗಳಿಗೆ, ಗಾಯಗೊಂಡವರಿಗೆ ತೀರ್ಪು ಸಮಾಧಾನ ತರಲಿಲ್ಲ, ನ್ಯಾಯ ದೊರಕಲಿಲ್ಲವೆಂಬ ಅಸಮಾಧಾನ ಅವರಲ್ಲಿ ಉಳಿಯಿತು. ನ್ಯಾಯಾಲಯದ ವಿಳಂಬದಿಂದಾಗಿ ಅಪರಾಧಿಗಳಿಗೆ ವಯಸ್ಸಾದ ಕಾರಣ ಅವರು ಶಿಕ್ಷೆಯಿಂದ ತಪ್ಪಿಸಿಕೊಳ್ಳಬಹುದೇ, ಪರಿಹಾರವೂ ಸಹ ಸೂಕ್ತವಾಗಿ ಸಿಗಲಿಲ್ಲ, ಹೆಚ್ಚಿನ ಪರಿಹಾರ ಪಡೆಯಲು ಪುನಃ ಕ್ರಮಕೈಗೊಂಡು ಮತ್ತಷ್ಟು ವರ್ಷ ಹೋರಾಟ



**ಉಪಹಾರ್ ಸಿನಿಮಾ ದುರಂತ ದೃಶ್ಯ**

ಮುಂದುವರಿಸಬೇಕು. ಯಾರಿಗೆ ಅಷ್ಟು ಶಕ್ತಿ ಉಳಿದಿರುತ್ತದೆ? ಅಲ್ಲದೆ, ಸರ್ಕಾರಿ ಅಧಿಕಾರಿಗಳ / ಪ್ರಾಧಿಕಾರಗಳ ಕರ್ತವ್ಯ ಲೋಪವಿದ್ದರೂ ಅವರು ಅದಕ್ಕೆ ಸಾರ್ವಜನಿಕರಿಗೆ ಉತ್ತರವನ್ನಾಗಲಿ, ಪರಿಹಾರವನ್ನಾಗಲಿ ಕೊಡಬೇಕಾಗಿಲ್ಲ ಎಂದು ಹೇಳಿರುವುದು ಸಾರ್ವಜನಿಕ ಹಿತಾಸಕ್ತಿಗೆ ಬಲವಾದ ಪೆಟ್ಟು ಕೊಟ್ಟಿದೆ. ಈ ಬಗ್ಗೆ ಸೂಚಿಸಿರುವಂತೆ ಕಾನೂನು ಮಾಡದೇ ಹೋದರೆ ಅಧಿಕಾರಿಗಳ ನಿರ್ಲಕ್ಷ್ಯಕ್ಕೆ ಕರ್ತವ್ಯಲೋಪಕ್ಕೆ ಮತ್ತಷ್ಟು ಬಲ ತಂದುಕೊಟ್ಟಂತಾಗುತ್ತದೆ. ಯಾವುದೇ ಭಂಗವಿಲ್ಲದೆ ಅವರು ತಮ್ಮ ನಿರ್ಲಕ್ಷ್ಯ, ಹೊಣೆಗೇಡಿತನವನ್ನು ಮುಂದುವರಿಸಬಹುದು. ಇದರಿಂದ ಸಾರ್ವಜನಿಕರ ಅಸಹಾಯಕತೆ ಹೆಚ್ಚುತ್ತದೆ. ಇದರಂತೆ ರಸ್ತೆ ಗುಂಡಿಗಳನ್ನು ಮುಚ್ಚದೆ ಅಪಘಾತ ಸಂಭವಿಸಿ ಸಾವು – ನೋವು ಉಂಟಾದರೆ ವಾಹನದ ಚಾಲಕರು ಜವಾಬ್ದಾರರೇ ಹೊರತು, ಗುಂಡಿ ಮುಚ್ಚಲು ನಿರ್ಲಕ್ಷ್ಯ ತೋರಿದ ಅಧಿಕಾರಿಗಳು ಜವಾಬ್ದಾರರಾಗುವುದಿಲ್ಲ. ಚಾಲಕರ ಮೇಲೆ ಪೊಲೀಸರು ಕೇಸು ದಾಖಲಿಸುತ್ತಾರೆ, ಬೆಂಗಳೂರಿನಲ್ಲಿ ಇತ್ತೀಚೆಗೆ ಪೊಲೀಸರು ಮಾಡಿರುವಂತೆ. ಇಲ್ಲದೆ, ಹಣವಂತರಿಗೆ / ಪ್ರಭಾವಿಗಳಿಗೆ ಒಂದು ನ್ಯಾಯ, ಬಡವರಿಗೆ ಒಂದು ನ್ಯಾಯ ಎನ್ನುವುದು ಹಲವಾರು ಇತ್ತೀಚಿನ ಪ್ರಕರಣಗಳಿಂದ ಎದ್ದುಕಾಣುತ್ತಿದೆ. ಬಡವರು ಜಾಮೀನು ಕೊಡಲು ಸಾಧ್ಯವಾಗದೆ, ವಕೀಲರನ್ನು ನೇಮಿಸಿ ಕೊಳ್ಳಲು ಸಾಧ್ಯವಾಗದೆ ಜೈಲಿನಲ್ಲೇ ಉಳಿದರೆ, ಹಣವಂತರು / ಪ್ರಭಾವಿಗಳು, ಹಣದ ಬಲದಿಂದ, ಅಧಿಕಾರದ ಬಲದಿಂದ, ಬಲಿಷ್ಠ ವಕೀಲರ ತಂಡವನ್ನೇ ನೇಮಿಸಿಕೊಂಡು, ಸೆರೆವಾಸದ ಶಿಕ್ಷೆಗೆ ಒಳಗಾಗಿದ್ದರೂ ಒಂದು ದಿನವೂ ಜೈಲಿನಲ್ಲಿರದೆ ಹೊರಗಿದ್ದು ಆರಾಮ ಜೀವನ ನಡೆಸುತ್ತಾರೆ, ಇದಕ್ಕೆ ಇತ್ತೀಚಿನ ನಟ ಸಲ್ಮಾನ್‌ಖಾನ್ ಪ್ರಕರಣವೇ ಸಾಕ್ಷಿ. ಫುಟ್‌ಪಾತ್ ಮೇಲೆ ಮಲಗಿದ್ದ ಬಡಜನರ ಮೇಲೆ ಕುಡಿದ ಮತ್ತಿನಲ್ಲಿ ಕಾರು ಚಲಾಯಿಸಿದನೆಂದು ಹೇಳಲಾದ ನಟ ಕೆಳನ್ಯಾಯಾಲಯದಲ್ಲಿ ೫ ವರ್ಷ ಕಾಲದ ಸೆರೆವಾಸದ ಶಿಕ್ಷೆಯ ತೀರ್ಪಿಗೆ ಒಳಪಟ್ಟರೂ, ತಕ್ಷಣವೇ ಅವನ ವಕೀಲರ ತಂಡ ಉಚ್ಚನ್ಯಾಯಾಲಯದಲ್ಲಿ ಅಪೀಲು ಹಾಕಿ ಅವನು ಒಂದು ದಿನವೂ ಜೈಲಿನಲ್ಲಿರದಂತೆ ವ್ಯವಸ್ಥೆ ಮಾಡಿತು. ಬಡವನಿಗೆ ಇದು ಸಾಧ್ಯವೇ? ಇತ್ತೀಚೆಗೆ ಉಚ್ಚ ನ್ಯಾಯಾಲಯ ಸಲ್ಮಾನ್ ಖಾನ್‌ರನ್ನು ನಿರ್ದೋಷಿಯಾಗಿ ಘೋಷಿಸಿ ಅಸಮಾಧಾನದ ಅಲೆಯನ್ನು ಎಬ್ಬಿಸಿದೆ. ಬೇರೆಯವರಿಗೆ ಒಮ್ಮೆಯೂ ಸಿಗದ ಪೆರೋಲ್ ನಟ ಸಂಜಯ್‌ದತ್‌ಗೆ ವರ್ಷಕ್ಕೆ ೨–೩ ಬಾರಿ ದೀರ್ಘಕಾಲ ದೊರಕುತ್ತದೆ. ನಾನಾ ಕಾರಣಗಳಿಗಾಗಿ, ಶಿಕ್ಷೆಯೂ ಕಡಿತಗೊಳ್ಳುತ್ತದೆ.

ತಮಿಳುನಾಡಿನ ಮುಖ್ಯಮಂತ್ರಿ ಶ್ರೀಮತಿ ಜಯಲಲಿತಾ ವಿಚಾರಣೆ ನಡೆಸಿದಾಗ ಸ್ವಲ್ಪ ಕಾಲ ಜೈಲುವಾಸ ಅನುಭವಿಸಿದರೂ, ಸದ್ಯ ಸುಪ್ರೀಂ ಕೋರ್ಟಿನಲ್ಲಿ ಅಪೀಲು ಇದ್ದರೂ, ಉಚ್ಚ ನ್ಯಾಯಾಲಯ ತನ್ನ ಪರ ಇತ್ತ ತೀರ್ಪಿನ ಬಲದ ಮೇಲೆ ಪುನಃ ಮುಖ್ಯಮಂತ್ರಿಯಾಗಿ ಅಧಿಕಾರದ ಗದ್ದುಗೆ ಹಿಡಿದಿದ್ದಾರೆ. ಬಹುಶಃ ಸರ್ವೋಚ್ಚ ನ್ಯಾಯಾಲಯದಲ್ಲಿ ಅವರ ಪ್ರಕರಣ ವಿಚಾರಣೆಗೆ ಬರುವ ವೇಳೆಗೆ ಅವರ ಅಧಿಕಾರಾವಧಿ ಮುಗಿದು ಮತ್ತೊಂದು ಚುನಾವಣೆ ಬರಬಹುದು. ಇತ್ತೀಚಿನ ತಲವಾರ್ ದಂಪತಿಗಳ ಪ್ರಕರಣದ ತೀರ್ಪು, ನಿಠಾರಿ ಕೊಲೆ ಪ್ರಕರಣದ ತೀರ್ಪು ಸಹ ಒಂದಿಲ್ಲೊಂದು ಕಾರಣಕ್ಕೆ ಸುದ್ದಿ ಮಾಡಿವೆ. ನ್ಯಾಯಾಲಯದ ತೀರ್ಪುಗಳು ಸಹ ವಿಶ್ಲೇಷಣೆಗೆ ಒಳಪಡುತ್ತಿರುವುದು, ಸಾರ್ವಜನಿಕರು ಆ ಬಗ್ಗೆ ಪ್ರಶ್ನಿಸುತ್ತಿರುವುದು, ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಿರುವುದು ಪ್ರಜಾಪ್ರಭುತ್ವ ಪದ್ಧತಿ ಇರುವ ನಮ್ಮ ದೇಶದಲ್ಲಿ ಒಂದು ಶುಭಸೂಚನೆ, ಜೀವಂತಿಕೆಯ ಲಕ್ಷಣ. ಸದಾ ಎಚ್ಚರದಿಂದ ಗಮನಿಸುವ ಜನತೆ ಇರುವವರೆಗೆ ಬದಲಾವಣೆಗೆ ಅವಕಾಶ ಇದ್ದೇ ಇರುತ್ತದೆ, ಬದಲಾವಣೆ ಅನಿವಾರ್ಯವೂ ಆಗುತ್ತದೆ, ನ್ಯಾಯಾಂಗವೂ ಅದಕ್ಕೆ ಹೊರತಲ್ಲ.

ದೇಶದ ಸರ್ವೋಚ್ಚ ನ್ಯಾಯಾಲಯ ನ್ಯಾಯಾಧೀಶರ ನೇಮಕಾತಿ ಬಗ್ಗೆ ಕೊಟ್ಟಿರುವ ೧೦೦೦ ಪುಟಗಳ ತೀರ್ಪು ಇಂತಹ ಬದಲಾವಣೆಗಳ ಬಗ್ಗೆ ಚರ್ಚೆಯನ್ನು ಹುಟ್ಟುಹಾಕಿದೆ. ಉಚ್ಚನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳ ನ್ಯಾಯಾಧೀಶರ, ಮುಖ್ಯ ನ್ಯಾಯಾಧೀಶರ ನೇಮಕಾತಿ ಬಗ್ಗೆಯ ಅಧಿಕಾರ ಮೊದಲು ಕಾರ್ಯಾಂಗದ ಕೈಯಲ್ಲಿತ್ತು. ಮುಖ್ಯ ನ್ಯಾಯಾಧೀಶರೊಂದಿಗೆ ಸಮಾಲೋಚಿಸಿ ನೇಮಕಾತಿಯ ನಿರ್ಣಯ ಕೈಗೊಳ್ಳಬೇಕಾಗಿತ್ತು, ಆದರೆ, ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ನ್ಯಾಯಾಂಗ ನಡೆದುಕೊಂಡ ರೀತಿಯನ್ನು ಕಂಡು ಸರ್ವೋಚ್ಚ ನ್ಯಾಯಾಲಯ ತನ್ನ ತೀರ್ಪಿನ ಮೂಲಕ ಈ ನೇಮಕಾತಿಯ ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡು ಅದರಲ್ಲಿ ಕಾರ್ಯಾಂಗದ ಹಸ್ತಕ್ಷೇಪವಿಲ್ಲದಂತೆ ಮಾಡಿತು. ಈ ವ್ಯವಸ್ಥೆಯೂ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲ. ಇಲ್ಲಿಯೂ ಅನೇಕ ಲೋಪ–ದೋಷಗಳಿವೆ, ಪ್ರಭಾವ, ಹಿತಾಸಕ್ತಿಗಳು ಕೆಲಸ ಮಾಡುತ್ತಿವೆ. ಯೋಗ್ಯರ ನೇಮಕಾತಿಯಾಗುತ್ತಿಲ್ಲ, ನ್ಯಾಯಾಧೀಶರ ಮಕ್ಕಳು, ಹತ್ತಿರದ ಸಂಬಂಧಿಗಳಿಗೆ ನೇಮಕಾತಿಯಲ್ಲಿ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗುತ್ತಿದೆ, ಮುಖ್ಯವಾಗಿ ನೇಮಕಾತಿಗೆ ಯಾವುದೇ ಮಾನದಂಡವಿಲ್ಲ, ಪಾರದರ್ಶಕತೆಯಿಲ್ಲ. ಹಾಗಾಗಿ ವೈಯಕ್ತಿಕ ತೀರ್ಮಾನ ಮುಖ್ಯವಾಗುತ್ತದೆ. ಅಷ್ಟೇಕೆ, ನ್ಯಾಯಾಧೀಶರು / ವ್ಯಕ್ತಿಗಳ ವಿರುದ್ಧ ಆಪಾದನೆಗಳಿದ್ದಾಗ್ಯೂ ನೇಮಕಾತಿಯಾಗಿರುವುದು, ಉಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶರಾಗಿ, ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಯಾಗಿ ಬಡ್ತಿ ಪಡೆದಿರುವುದು ಇತ್ಯಾದಿ ಟೀಕೆಗಳು, ಆಪಾದನೆಗಳು ನ್ಯಾಯಾಂಗದ ನೇಮಕಾತಿಗಳ ಮೇಲೂ ಇವೆ, ಹಾಗಾಗಿ ಅದೇನು ಬಹಳ ಆದರ್ಶಪ್ರಾಯವಾದ ವ್ಯವಸ್ಥೆಯಲ್ಲ, ಕಾರ್ಯಾಂಗದ ವಿರುದ್ಧ ಇದ್ದಂತಹ ಆಪಾದನೆಗಳೇ ನ್ಯಾಯಾಂಗದ ನೇಮಕಾತಿಗಳ ಬಗ್ಗೆಯೂ ಇರುವಾಗ ಆ ವ್ಯವಸ್ಥೆ ನ್ಯಾಯಾಂಗದ ಸ್ವಾತಂತ್ರ್ಯವನ್ನು ಹೇಗೆ ಕಾಪಾಡುತ್ತದೆ? ನ್ಯಾಯಾಂಗವೇ ನೇಮಕಾತಿಯ ಅಧಿಕಾರ ಹೊಂದಿದೆ ಎಂದ ಮಾತ್ರಕ್ಕೆ ಅದು ನ್ಯಾಯಾಂಗದ ಸ್ವಾತಂತ್ರ್ಯವನ್ನು ಕಾಪಾಡುತ್ತದೆಯೇ? ಈಗಲೂ ಕಾರ್ಯಾಂಗದ ಮಾತು ನೇಮಕಾತಿಯಲ್ಲಿ ನಡೆಯುತ್ತಿಲ್ಲವೇ? ಇಷ್ಟು ದಿನಗಳ ಕಾಲದ ಕೊಲಿಜಿಯಂ ಕಾರ್ಯ ನಿರ್ವಹಣೆಯ ನಂತರ ಪ್ರಶ್ನೆಗಳು, ಸಂದೇಹಗಳು ಪುನಃ ಎದ್ದಿವೆ. ತುರ್ತುಪರಿಸ್ಥಿತಿಯ ಹಿನ್ನೆಲೆಯಲ್ಲಿ ಆಗಿನ ನ್ಯಾಯಾಲಯದ ತೀರ್ಪು ಸ್ವಾಗತಾರ್ಹವೆನಿಸಿದ್ದರೂ ಈಗ ಕೊಲಿಜಿಯಂ ವ್ಯವಸ್ಥೆಯ ಬಗ್ಗೆಯೂ ಅಪಸ್ವರವೆದ್ದಿದೆ. ನ್ಯಾಯಾಧೀಶರ ನೇಮಕಾತಿಯನ್ನು ನ್ಯಾಯಾಂಗಕ್ಕೆ ಬಿಡಬಾರದು. ಅದರಲ್ಲಿ ಶಾಸಕಾಂಗ – ಕಾರ್ಯಾಂಗದ ಹಾಗೂ ನಾಗರಿಕ ಸಮಾಜದ ಭಾಗವಹಿಸುವಿಕೆಯೂ ಇರಬೇಕು, ಇದರಿಂದ ಆಡಳಿತದಲ್ಲಿ ಸಮತೋಲನ – ಚೆಕ್ಸ್ ಅಂಡ್ ಬ್ಯಾಲೆನ್ಸ್ – ಇರುತ್ತದೆ, ಅದೇ ಪ್ರಜಾಪ್ರಭುತ್ವದ ಬುನಾದಿ, ಮುಖ್ಯವಾಗಿ ನ್ಯಾಯಾಂಗವೂ ಉಳಿದ ಅಂಗಗಳಂತೆ ಉತ್ತರದಾಯಿತ್ವ ಹೊಂದಿರಬೇಕು, ಅದರ ಕಾರ್ಯವೈಖರಿಯನ್ನು ಯಾರೂ ಪ್ರಶ್ನಿಸಬಾರದು ಎನ್ನುವ ಅಭಿಪ್ರಾಯ ಸರಿಯಲ್ಲ ಎನ್ನುವುದು ಮುಖ್ಯವಾದ ವಾದವಾಗಿದೆ.

ಐವರು ನ್ಯಾಯಾಧೀಶರಿದ್ದ ಪೀಠದಲ್ಲಿ ನಾಲ್ಕು ನ್ಯಾಯಾಧೀಶರು ನ್ಯಾಯಾಂಗ ನೇಮಕಾತಿ ಮತ್ತು ಉತ್ತರದಾಯಿತ್ವದ ಕಾನೂನನ್ನು ಬಹುಮತದಿಂದ ಸಂವಿಧಾನದ ಆಶಯಕ್ಕೆ ವಿರುದ್ಧವಾದುದೆಂದು ತಳ್ಳಿಹಾಕಿದ್ದಾರೆ. ಆದರೆ ನ್ಯಾಯಮೂರ್ತಿ ಚಲಮೇಶ್ವರರವರು ತಮ್ಮ ಭಿನ್ನ ತೀರ್ಪಿನಲ್ಲಿ ಈ ಎಲ್ಲಾ ಪ್ರಶ್ನೆಗಳನ್ನು ಎತ್ತಿದ್ದಾರೆ. ಹಾಗೆಂದೇ, ಸರ್ವೋಚ್ಚ ನ್ಯಾಯಾಲಯವೂ ನವೆಂಬರ್ ೫ರಂದು ತನ್ನ ನೇಮಕಾತಿ ಪ್ರಕ್ರಿಯೆಯನ್ನು ಸುಧಾರಿಸಲು, ಪಾರದರ್ಶಕವಾಗಿಸಲು ಏನು ಕ್ರಮಕೈಗೊಳ್ಳಬೇಕೆಂಬ ಬಗ್ಗೆ ಅಭಿಪ್ರಾಯ ಪಡೆಯಲು ಅವಕಾಶ ಕಲ್ಪಿಸಿದೆ. ಒಟ್ಟಿನಲ್ಲಿ ನ್ಯಾಯಾಂಗವೂ ಉಳಿದ ಅಂಗಗಳಂತೆ ಉತ್ತರದಾಯಿಯಾಗಬೇಕು, ಪಾರದರ್ಶಕವಾಗಬೇಕು, ಯೋಗ್ಯವ್ಯಕ್ತಿಗಳ ನೇಮಕಾತಿ ನಡೆಯಬೇಕು, ಅದೇ ನ್ಯಾಯಾಂಗದ ಸ್ವಾತಂತ್ರ್ಯವನ್ನು ಕಾಪಾಡಬಲ್ಲುದು. ಇದು ಸಾಧ್ಯವಾದಲ್ಲಿ, ನ್ಯಾಯಾಲಯದ ತೀರ್ಪು ಹುಟ್ಟುಹಾಕಿರುವ ಪ್ರಶ್ನೆಗಳಿಗೆ ಸಮರ್ಥ ಉತ್ತರ ಕಂಡುಕೊಳ್ಳಲು ಸಾಧ್ಯವಾದಲ್ಲಿ ನಮ್ಮ ದೇಶದ ಪ್ರಜಾಪ್ರಭುತ್ವ ಪದ್ಧತಿ ಜೀವಂತವಾಗಿದೆ, ಮಾಗಿದೆ ಎಂದೇ ತಿಳಿಯಬೇಕು. ಇಂತಹ ಆರೋಗ್ಯಕರ ಚರ್ಚೆಗೆ ಎಂದೂ ಸ್ವಾಗತವಿರಬೇಕು. ಪ್ರಶ್ನೆ ಕೇಳುವವರ ಬಾಯಿ ಮುಚ್ಚಿಸುವುದು ಅನಾರೋಗ್ಯಕರ ಸಮಾಜದ ಲಕ್ಷಣ.

**ಹೇಮಲತಾ ಮಹಿಷಿ**
ಶಶಿಕಿರಣ್ ಅಪಾರ್ಟ್‌ಮೆಂಟ್ಸ್, ನಂ. ೨೦೯, ೧೮ನೇ ಮುಖ್ಯರಸ್ತೆ
ಮಲ್ಲೇಶ್ವರಂ, ಬೆಂಗಳೂರು – ೫೬೦ ೦೫೫

ಹಸನ್ ನಯೀಂ ಸುರಕೋಡ ಬೆಳಗಾವಿ ಜಿಲ್ಲೆಯ ರಾಮದುರ್ಗದಲ್ಲಿ ೩೦-೧೨-೧೯೪೫ ರಂದು ಹುಟ್ಟಿದರು. ಎಂ. ಎ. ಅರ್ಥಶಾಸ್ತ್ರ ಪದವೀಧರರು. ಇಂಗ್ಲಿಷ್ , ಉರ್ದು, ಹಿಂದಿ ಮತ್ತು ಕನ್ನಡ ಭಾಷೆಗಳಲ್ಲಿ ಪರಿಣತರು. ಸಮಾಜವಾದಿ ಚಿಂತನೆಗಳನ್ನು ಕನ್ನಡಕ್ಕೆ ತಂದವರು. ಈ ನಿಟ್ಟಿನಲ್ಲಿ ರಾಮಮನೋಹರ ಲೋಹಿಯಾ, ಕಿಶನ್ ಪಟ್ನಾಯಕ್, ಮಧು ಲಿಮಯೆ ಮುಂತಾದವರ ಬರೆಹಗಳನ್ನು ಅನುವಾದಿಸಿದ್ದಾರೆ. ಕೋಮು ಸೌಹಾರ್ದದ ನೆಲೆಗಳನ್ನು ಬಿಂಬಿಸುವ ಹಲವಾರು ಬರೆಹಗಳು ಇವರಿಂದ ಕನ್ನಡಕ್ಕೆ ಅನುವಾದಿತ ವಾಗಿವೆ. ಉರ್ದು ಭಾಷೆಯ ಮಹಾಕವಿ ಫೈಜ್ ಅಹಮದ್ ಫೈಜ್ ಅವರ ಕಾವ್ಯ ಮತ್ತು ಬದುಕು, ಸಾದತ್ ಹಸನ್ ಮಂಟೋ ಅವರ ಕಥನ ಕೃತಿಗಳು, ಅಮೃತಾ ಪ್ರೀತಂ ಅವರ ಆತ್ಮಕತೆ ಹಾಗೂ ಅಸ್ಗರ್ ಅಲಿ ಎಂಜಿನಿಯರ್ ಅವರ ಕೃತಿಗಳನ್ನೊಳಗೊಂಡ ಒಟ್ಟು ೨೨ ಕೃತಿಗಳನ್ನು ಹಿಂದಿ, ಉರ್ದು, ಇಂಗ್ಲಿಷ್ ಭಾಷೆಯ ವೈಚಾರಿಕ ಬರೆಹಗಳನ್ನು ಅನುವಾದಿಸಿದ್ದಾರೆ. ಉರ್ದುವಿನ ಕ್ರಾಂತಿಕಾರಿ ಕವಿ ಸಾಹಿರ್ ಲುಧಿಯಾನವಿ ಅವರ ಜೀವನ ಮತ್ತು ಕಾವ್ಯ ಕುರಿತ 'ಪ್ರೇಮ ಲೋಕದ ಮಾಯಾವಿ' ಇವರ ವಿಶಿಷ್ಟ ಕೃತಿ.

# ಕನ್ನಡದ ಅನನ್ಯ ಅನುವಾದಕ
# ಹಸನ್ ನಯೀಂ ಸುರಕೋಡ



ಸಂದರ್ಶನ

**ಡಾ|| ಸರಜೂ ಕಾಟ್ಕರ್**

ಇಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ಇವರಿಗೆ ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಗೌರವ ಪ್ರಶಸ್ತಿ ಸೇರಿದಂತೆ ಕೇಂದ್ರ ಸಾಹಿತ್ಯ ಅಕಾಡೆಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿವೆ. ಜೊತೆಗೆ ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನದ 'ಕನ್ನಡ ಗಡಿ ತಿಲಕ', ಶ್ರೀಮತಿ ಚಂದಮ್ಮ ನೀರಾವರಿ ಸ್ಮಾರಕ ಪ್ರಶಸ್ತಿ, ಶ್ರೀ ಕಾಗೋಡು ತಿಮ್ಮಪ್ಪ ಪ್ರಶಸ್ತಿ ಮುಂತಾದ ಪ್ರಶಸ್ತಿ ಪುರಸ್ಕಾರಗಳು ಇವರಿಗೆ ಸಂದಿವೆ. ಕನ್ನಡದ ಖ್ಯಾತ ಲೇಖಕ, ಅನುವಾದಕ ಡಾ|| ಸರಜೂ ಕಾಟ್ಕರ್, ಅವರು 'ಹೊಸತು' ಪರವಾಗಿ ಸುರಕೋಡ ಜೊತೆಗೆ ಮಾತನಾಡಿದ್ದಾರೆ. ಸಂದರ್ಶನ ಪೂರ್ಣ ಪಾಠ ಇಲ್ಲಿದೆ.

**ಹೊಸತು :** ನಿಮ್ಮ ಮನೆತನದ ಹಿನ್ನೆಲೆ ಮತ್ತು ಬಾಲ್ಯದ ನೆನಪುಗಳು...

**ಹಸನ್ ನಯೀಂ ಸುರಕೋಡ :** ನಾನು ನನ್ನ ಅಜ್ಜನ ಪ್ರೀತಿಯ ಮೊಮ್ಮಗನಾಗಿದ್ದೆ. ಅವನು ತನ್ನ ಜೀವನದ ಹಲವಾರು ಘಟನೆಗಳನ್ನು ಸ್ವಾರಸ್ಯಕರವಾಗಿ ನನಗೆ ನಿರೂಪಿಸುತ್ತಿದ್ದ. ನನ್ನ ಅಜ್ಜ ಧಾರವಾಡ (ಈಗಿನ ಗದಗ ಜಿಲ್ಲೆ) ಜಿಲ್ಲೆಯ ನರಗುಂದ ತಾಲೂಕಿನ ಸುರಕೋಡ ಗ್ರಾಮದಿಂದ ವಲಸೆ ಬಂದು ರಾಮದುರ್ಗದಲ್ಲಿ ನೆಲೆ ನಿಂತಿದ್ದ. ನೇಕಾರನೂ ರೈತನೂ ಆಗಿದ್ದ ನನ್ನ ಅಜ್ಜ ಹಿಂದೂ ಧರ್ಮ ಅಥವಾ ಇಸ್ಲಾಂ ಧರ್ಮಕ್ಕಿಂತ ತನ್ನ ವೃತ್ತಿಧರ್ಮಕ್ಕೆ ಹೆಚ್ಚಿನ ಬೆಲೆ ಕೊಟ್ಟವನು. ಅವನು ಸಾಯುವವರೆಗೂ ಮನೆಯಲ್ಲೊಂದು ಎತ್ತು ಮತ್ತು ಒಂದು ಆಕಳನ್ನು ಸಾಕುವುದು ಮುಂದುವರಿದುಕೊಂಡು ಬಂದಿತ್ತು. ಎಕ್ಕಾಗಾಡಿ (ಒಂಟಿ ಎತ್ತಿನ ಚಕ್ಕಡಿ) ನನ್ನ ಅಜ್ಜನ ಬದುಕಿನ ಬಂಡಿಗೆ ಸಂಕೇತದಂತಿತ್ತು. ಹೊಲ ಉಳುಮೆ ಮಾಡುವುದನ್ನು ಕಂಡ ಹಳ್ಳಿಯ ಅನುಭವಿ ರೈತರೂ ನಿಬ್ಬೆರಗಾಗುತ್ತಿದ್ದರಂತೆ. ಹೊಲದಲ್ಲಿನ ಪೈರಿನ ಬೆಳವಣಿಗೆಯಲ್ಲೇ ಅವನು ಸಂತೋಷ ಕಾಣುತ್ತಿದ್ದ. ಒಮ್ಮೆ ಪೈರು ಕಟಾವಾದ ಮೇಲೆ ಸಜ್ಜೆ ಮತ್ತು ಜೋಳದ ಗೂಡು ಬಡಿಯುವುದರೊಂದಿಗೆ ಬೇಸಾಯದ ಒಂದು ಹಂತ ಮುಗಿಯುತ್ತಿತ್ತು. ಮುಂದೆ ಸ್ವಾತಿ ಮಳೆಯ ನಂತರ ತೆನೆ ಮುರಿಸುತ್ತಿದ್ದ. ಅವನು ಕಣ ಮಾಡುವುದನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬವಾಗುತ್ತಿತ್ತು.

ಕಣ ತಯಾರು ಮಾಡಿ ಸಾರಿಸಿ ಐದು ಗುಂಡುಕಲ್ಲು ತಂದು ಅವುಗಳಿಗೆ ಸುಣ್ಣ ಬಳಿದು ನಡುವೆ ಕುಂಕುಮದಿಂದ ಕೆಂಪಾಗಿಸಿ ಪಾಂಡವರನ್ನಾಗಿ ಮಾಡಿ ಊದಿನ ಕಡ್ಡಿ ಬೆಳಗಿ ತೆಂಗಿನ ಕಾಯಿ ಒಡೆದು ಪೂಜೆ ಮಾಡುತ್ತಿದ್ದ. ತನ್ನ ಎಕ್ಕಾಗಾಡಿಯಲ್ಲಿ ರಾಶಿ ತರುತ್ತಿದ್ದ ನನ್ನ ಅಜ್ಜ. ಸಜ್ಜೆ, ಜೋಳ, ಹೆಸರು, ತೊಗರಿ, ಮಡಿಕೆ ಅವರೆ, ಅಲಸಂದಿ ಚೀಲಗಳನಿಟ್ಟು ಕಂಡಿದ್ದ ನನಗೆ ಅದು ಇನ್ನೂ ಮರೆಯಲಾಗದ ದೃಶ್ಯ. ಹೀಗೆ ಸಾಗಿತ್ತು ನನ್ನ ಅಜ್ಜನ ಸಂಸಾರ. ಒಂದು ವರ್ಷ ಬರ ಬಿತ್ತು. ಎಂತಹ ಭೀಕರ ಬರವೆಂದರೆ ರೈತರೆಲ್ಲ ಗುಳೆ ಹೋಗತೊಡಗಿದರು. ನನ್ನ ಅಜ್ಜನಿಗೆ ಗುಳೆ ಹೋಗುವುದು ಅಷ್ಟು ಸುಲಭವಾಗಿರಲಿಲ್ಲ. ಕಾರಣ ಇದ್ದ ಒಂದು ಎತ್ತನ್ನು ಯಾರಿಗೋ ದಾನ ಮಾಡಿದ. ಆದರೆ ಆಕಳನ್ನು ಕೇಳುವವರೇ ಇದ್ದಿರಲಿಲ್ಲ. ಐತವಾರ (ಆದಿತ್ಯವಾರ) ನಮ್ಮ ಊರ ಸಂತೆ. ಸಂತೆಗೆ ಆಕಳನ್ನು ಒಯ್ದ. ಅದನ್ನು ಕೇಳಿದವರೆಲ್ಲ ಕಟುಕರೇ. ಆಕಳೊಂದಿಗೆ ಮನೆಗೆ ವಾಪಸ್ಸಾದ. ಮತ್ತೆ ಒಂದು ವಾರ ಕಳೆಯುವುದು ಹೇಗೆ ಎಂದು ಚಿಂತಿಸತೊಡಗಿದ.

ಮುಂದಿನ ವಾರ ಅಜ್ಜ ಮತ್ತೆ ಆಕಳನ್ನು ಸಂತೆಗೆ ಒಯ್ದ. ಕಟುಕರನ್ನು ತನ್ನ ಸಮೀಪ ಬರಗೊಡುತ್ತಿರಲಿಲ್ಲ. ಇನ್ನೇನು ಮತ್ತೆ ಆಕಳನ್ನು ಮನೆಗೊಯ್ಯದೆ ವಿಧಿಯಿಲ್ಲ ಎನ್ನುವ ಸ್ಥಿತಿ. ಅಷ್ಟರಲ್ಲಿ ಒಬ್ಬ ಗಿರಾಕಿ ಬಂತು. 'ನಾನು ದ್ಯಾಮವ್ವನ ಗುಡಿ ಪೂಜಾರಿ. ನಂದ ಮೇವಿನ ಬಣಿವಿ, ಹೊಟ್ಟು ಐತಿ. ಇದನ್ನು ನಾ ಸಾಕ ಬೇಕಂತೀನಿ. ಎಷ್ಟು ಕೊಡಲಿ ಹಿರ್‍ಯಾರ? ಎಂದು ಗಿರಾಕಿ ಕೇಳಿದ ಕೂಡಲೇ ಅಜ್ಜ ಕಣ್ಣು ಕಿಸಿದವನೇ, 'ಎಲೆ ಹುಚಪ್ಯಾಲಿ, ಇದನ್ನ ನಾ ಮಾರಾಕ ಬಂದಿಲ್ಲ. ಒಯ್ದು ಬಿಡು.' ಎಂದವನೇ ಮನೆ ಹಾದಿ ಹಿಡಿದ ಅಜ್ಜನಿಗೆ ತನ್ನ ಪ್ರೀತಿಯ ಆಕಳು ತನ್ನಿಂದ ದೂರಾಗಿದ್ದಕ್ಕೆ ತುಂಬ ದುಃಖವಾದರೂ ಒಂದು ರೀತಿಯಲ್ಲಿ ನಿರುಮ್ಮಳವಾದ. ಕಡೆಗೂ ಮೂಕಪ್ರಾಣಿ ಹೊಟ್ಟು ಕಣಕಿ ಇದ್ದ ರೈತನ ಮನೆ ಸೇರಿದ್ದರಿಂದ ನಿಶ್ಚಿಂತನಾಗಿದ್ದ ಅಜ್ಜ ಮನೆಗೆ ಬಂದವನೇ ಬೆಳಿಗ್ಗೆ ಎದ್ದು ನಮ್ಮ ತಾಯಿಯ ತವರೂರು ಕೆರೂರಿಗೆ ಹೊರಡುವ ತಯಾರಿ ಮಾಡತೊಡಗಿದ.

ಬೆಳಿಗ್ಗೆ ಏಳುತ್ತಲೇ ಅದ್ಯಾರೋ, 'ಸಾಹೇಬ್ರ, ನಿಮ್ಮ ಆಕಳನ್ನು ಬಡಿದು ಮಾವಿನ ತೋಪಿನ್ಯಾಗ ಒಗೆದ ಹೋಗ್ಯಾರಲ್ರಿ?' ಎಂದದ್ದನ್ನು ಕೇಳಿದವನೇ ನನ್ನ ಅಜ್ಜ 'ಎಲಾ ಪಾಪಿ, ನಿನಗಿಂತ ಕಟುಕರೇ ಮೇಲು' ಎಂದು ಕಿರುಚಿಕೊಂಡ. ಹೊಲದಲ್ಲಿ ಅದನ್ನು ದಫನ್ ಮಾಡಿಬಂದವನೇ, 'ನಡೀರಿ ಇನ್ನ ಹೋಗೂಣು. ನನ್ನ 'ಕಲ್ಯಾಣಿ' ಶಾಪ ನಮಗ ತಟ್ಟದ ಬಿಡೂದಿಲ್ಲ' ಎಂದು ಕೆರೂರಿಗೆ ಹೊರಟು ನಿಂತ. ನಮ್ಮ ನೆರೆಹೊರೆಯವರಿಗೆ ನನ್ನ ಅಜ್ಜನ ಮಾತು ಕೇಳಿ ದುಃಖ ಉಮ್ಮಳಿಸಿ ಬಂತಂತೆ. ಅಜ್ಜ ತನ್ನ ಹೆಂಡತಿ, ಮಗ, ಸೊಸೆ ಹಾಗೂ ಮೂವರು ಮೊಮ್ಮಕ್ಕಳೊಂದಿಗೆ ಕೆರೂರು ತಲುಪಿದ.

ಬೆಳಿಗ್ಗೆ ಎದ್ದವರೇ ಹಿರಿಯರು ಖಡಿ ಒಡೆಯಲು ಗುಡ್ಡಕ್ಕೆ ಹೋಗುತ್ತಿದ್ದರು. ಮಕ್ಕಳನ್ನು ಓಣಿಯ ಮಕ್ಕಳ ಜೊತೆ ಆಡಲು ಬಿಟ್ಟುಹೋಗುತ್ತಿದ್ದರು. ಕೆಲವೇ ದಿನಗಳ ನಂತರ, ಆ ಮಕ್ಕಳು ಅನ್ನಛತ್ರದಲ್ಲಿ ಉಂಡು ಬಂದವರೇ ಕ್ವಾಡಿಗ್ಗೆಮ್ಮಿನಿಂದ ಬಳಲತೊಡಗಿದರು. ರೋಗ ಉಲ್ಬಣಿಸಿದ್ದನ್ನು ಕಂಡ ನನ್ನ ಅಜ್ಜ ಮೊಮ್ಮಗಳನ್ನು ದವಾಖಾನೆಗೆ ಒಯ್ದ. ಮನೆಯಲ್ಲಿ ಆಗಲೇ ನಿಧನನಾಗಿದ್ದ ಮೊಮ್ಮಗನ ಹೆಣವನ್ನು ಪಕ್ಕದ ಮನೆಯವರ ಸುಪರ್ದಿಗೆ ವಹಿಸಿ ಹಿರಿಯರು ದವಾಖಾನೆಗೆ ಧಾವಿಸಿದರು. ಮಗುವು ಬದುಕಿ ಉಳಿಯುವ ಸಾಧ್ಯತೆ ಇಲ್ಲವೆಂದು ಡಾಕ್ಟರ್ ನನ್ನ ಅಜ್ಜನಿಗೆ ತಿಳಿಸಿದರು. ಮನೆಗೆ ಬಂದ ಮೇಲೆ ತನ್ನ ಮೊಮ್ಮಗನನ್ನು ದಫನ್ ಮಾಡುವ ಕೆಲಸ ಬಾಕಿ ಉಳಿದಿತ್ತು. ದಫನ್ ಮಾಡಿಯಾದ ಮೇಲೆ ಓಣಿಯ ಹಿರಿಯರು ನನ್ನ ಅಜ್ಜನಿಗೆ ಸಾಂತ್ವನದ ಮಾತುಗಳನ್ನು ಆಡುತ್ತಾ, 'ಈ ನಿನ್ನ ಮೊಮ್ಮಗ ನಡಪಂಚಕದಾಗ ಸತ್ತ. ಅದೂ ಐತ್ವಾರ, ಅಮಾಶಿ ದಿವಸ. ಇದಕ್ಕ ಒಂದು ತೋಟಕಾ ಐತಿ. ನೀವು ಈ ಮನಿ ಬಿಡ್ರಿ. ಮಸೂತ್ಯಾಗ ಇದ್ದ ಬಿಡ್ರಿ' ಎಂದು ಒಂದು ಹಿರಿಯ ಜೀವ ಸಲಹೆ ಕೊಟ್ಟಿತಂತೆ. ಆದರೆ ನನ್ನ ಅಜ್ಜ ಬಲು ಹಠಮಾರಿ. ಯಾರ ಮಾತಿಗೂ ಕಿವಿಗೊಡಲಿಲ್ಲ. ಮೂರನೆಯ ದಿನ ತೀರಿ ಹೋದ ತನ್ನ ಇನ್ನೊಬ್ಬ ಮೊಮ್ಮಗಳನ್ನು ದಫನ್ ಮಾಡಿ ಬಂದ ಮೇಲೆ ಯಾವ ಹಿರಿಯನೂ ನನ್ನ ಅಜ್ಜನಿಗೆ ಒಂದು ಮಾತೂ ಹೇಳದಾದನಂತೆ. ಒಂದು ವಾರ ಕಳೆದ ಮೇಲೆ ಮತ್ತೊಬ್ಬ ಮೊಮ್ಮಗಳನ್ನೂ ಮಣ್ಣು ಮಾಡಿ ಬಂದ ಮೇಲೆ, 'ಇಲ್ಲಿಗೆ ನನ್ನ ಸಂತಿ ಮುಗೀತು. ತಂದಿದ್ದ ಗಂಟು ಕಳಕೊಂಡೆ. ನಡೀರಿ ನಮ್ಮೂರಿಗಿ' ಎಂದು ನನ್ನ ಅಜ್ಜ ತನ್ನ ಅಳಿದುಳಿದ ಪರಿವಾರವನ್ನು ಕಟ್ಟಿಕೊಂಡು ತನ್ನ ಊರಿಗೆ ಮರಳಿದ.

ಕಾಲವೇ ನೊಂದ ಮನಸ್ಸಿಗೆ ಮದ್ದಾಗಬಲ್ಲದು. ಮತ್ತೆ ನೇಕಾರನಾಗಿ, ರೈತನಾಗಿ ಬದುಕನ್ನು ಕಟ್ಟಿಕೊಳ್ಳಲು ಅಜ್ಜ ಸಿದ್ಧವಾದ. ಹೊಲದಲ್ಲಿ ಪೈರು

ನಳನಳಿಸತೊಡಗಿತು. ಪೈರು ಕಟಾವಾದ ಮೇಲೆ ಗೂಡು ಬಡಿದಾಯಿತು. ಕೆಲ ದಿನಗಳ ನಂತರ ಅಜ್ಜ ಮತ್ತೆ ಕಣ ಮಾಡಿದ. ಮೊದಲಿನ ಸಂಭ್ರಮದಲ್ಲಿ ಏನೂ ಕೊರತೆ ಇದ್ದಿರಲಿಲ್ಲ. ಕಣ ಸಾರಿಸಿ, ಐದು ಗುಂಡು ಕಲ್ಲುಗಳನ್ನು ಪಾಂಡವರನ್ನಾಗಿ ಪ್ರತಿಷ್ಠಾಪಿಸಿ ಎಡೆ ಮಾಡಿ, ತೆಂಗಿನ ಕಾಯಿ, ಊದಿನ ಕಡ್ಡಿ ಬಂಡಲ್, ಕಡ್ಡಿಪೊಟ್ಟಣ ಇಟ್ಟು, 'ಎಲೆ ಇಟ್ಟ್ಯಾ, ಬಾ ಪೂಜಿ ಮಾಡ ಬಾ' ಎಂದು ತನ್ನ ರೈತ ಮಿತ್ರನ ಮಗನಿಗೆ ಹೇಳಿ ಹೊಲದ ಬದುವಿನಲ್ಲಿ ಕುಳಿತುಕೊಂಡು ಎಲೆ ಅಡಿಕೆ ಚೀಲ ಬಿಚ್ಚಿದ್ದನಂತೆ. ಅತ್ತ ಇಟ್ಟಪ್ಪ ಎನ್ನುವ ಆ ವ್ಯಕ್ತಿ, 'ಆಗ್ಲಿ ಕಾಕಾ.' ಎಂದು ತನಗೆ ವಹಿಸಿಕೊಟ್ಟ ಕೆಲಸವನ್ನು ನಿರ್ವಹಿಸಿದ್ದ. ಅಜ್ಜ ಪ್ರತಿ ವರ್ಷ ಇದೇ ತೆರನಾಗಿ ರಾಶಿ ಮಾಡಿಕೊಂಡು ಬಂದ ಮೇಲೆ ಮೊದಲಿನಂತೆಯೇ ಕಾಳುಕಡ್ಡಿ ನಿಟ್ಟನ್ನು ಹಚ್ಚುತ್ತಿದ್ದ.

ಹೀಗೆ ಒಬ್ಬ ಗೊಡ್ಡು ವ್ಯಕ್ತಿಯಾಗಿದ್ದ ನನ್ನ ಅಜ್ಜ ಹೇಗೆ ವೈಚಾರಿಕನಾಗಿ ಬೆಳೆದಿದ್ದನೋ ಯಾರಿಗೂ ಗೊತ್ತೇ ಆಗಲಿಲ್ಲ. ನಂತರ ಅವನು ಎಂ. ಎನ್. ರಾಯ್ ಅನುಯಾಯಿಯಾದ. ಆದರೆ ನನ್ನ ತಂದೆ ಪಕ್ಕಾ ಧರ್ಮನಿಷ್ಠ ದೈವಭೀರು ವ್ಯಕ್ತಿಯಾಗಿದ್ದರು. ಅವರಿಗೆ ಇಸ್ಲಾಂ ಧರ್ಮ ಕುರಿತ ಅಗಾಧ ತಿಳಿವಳಿಕೆ ಇತ್ತು. ಪರಧರ್ಮಸಹಿಷ್ಣುತೆ ಕುರಿತು ಬರೀ ಮಾತನಾಡುವವರಿಗೆ ಲೆಕ್ಕವಿಲ್ಲ. ನನ್ನ ತಂದೆ ಆಡದೆ ಮಾಡಿ ತೋರಿಸುವವರಾಗಿದ್ದರು. ಆ ಇಟ್ಟಪ್ಪ ಮತ್ತು ನನ್ನ ತಂದೆ ಒಡಹುಟ್ಟಿದವರಂತೇ ಇದ್ದರು. ನನ್ನ ತಂದೆಯವರನ್ನು 'ಅಣ್ಣ' ಎಂದೇ ಇಟ್ಟಪ್ಪ ಸಂಬೋಧಿಸುತ್ತಿದ್ದ. ಇಂದು ಅವನ ಮಗ ಬಸಪ್ಪ ನನ್ನನ್ನು 'ಅಣ್ಣಾ' ಎಂದೇ ಸಂಬೋಧಿಸುವುದು. ಅವನ ಮಕ್ಕಳು ನನ್ನನ್ನು 'ದೊಡ್ಡಪ್ಪಾ' ಎಂದೂ ನನ್ನ ಮಕ್ಕಳು ಅವನನ್ನು 'ಕಾಕಾ' ಎಂದೂ ಸಂಬೋಧಿಸುತ್ತಾರೆ. ಆದರೆ ಕೊನೆಕೊನೆಗೆ ನಾನು ದೇವರಲ್ಲಿ ನಂಬಿಕೆ ಹಾಗೂ ಧರ್ಮದ ವಿಷಯವಾಗಿ ಮೊದಲಿನಂತೆ ಆಸಕ್ತಿ ಉಳಿಸಿಕೊಳ್ಳದೇ ಇದ್ದದ್ದು ನನ್ನ ತಂದೆಯವರ ಗಮನಕ್ಕೆ ಬಂದಿತ್ತು. ಆದರೆ ಅವರು ಈ ವಿಷಯವಾಗಿ ಪಿಟ್ಟೆಂದಿರಲಿಲ್ಲ.

ಇಂದು ನಮ್ಮ ಮನೆಯಲ್ಲಿ ನನ್ನ ಮಕ್ಕಳು ಮತ್ತು ನನ್ನ ತಮ್ಮನ ಮಕ್ಕಳೆಲ್ಲ ಧಾರ್ಮಿಕ ಮನೋಧರ್ಮದವರಾಗಿದ್ದಾರೆ. ನನ್ನ ತಮ್ಮನ ಎಲ್ಲಕ್ಕೂ ಕಿರಿಯ ಮಗ, 'ದೊಡ್ಡಪ್ಪಾ, ನೀವು ನಿಮ್ಮ ಅಜ್ಜನ ಹಾಂಗ ಅದೀರಿ ಬಿಡ್ರಿ' ಎಂದಾಗ ನಾನು ಹೇಳುವುದು, 'ಹೌದು, ಬರೋಬ್ಬರಿ. ನೀವು ನಿಮ್ಮ ಅಜ್ಜನ ಹಾಂಗ ಆದ್ರ ನನಗೇನೂ ಕೆಟ್ಟ ಅನಿಸೂದಿಲ್ಲ. ಬದಲಿಗೆ ಸಂತೋಷ ಆಗ್ತೈತಿ' ಎಂದು.

**ಹೊ.** : ನಿಮ್ಮ ವಿದ್ಯಾಭ್ಯಾಸ, ಆಸಕ್ತಿ ಮತ್ತು ಉದ್ಯೋಗ ಕುರಿತು ಹೇಳಿರಿ.

**ಹ.ನ.ಸು.** : ರಾಮದುರ್ಗ ಭಾವೆ ಮನೆತನದ ಆಳ್ವಿಕೆಯಲ್ಲಿದ್ದ ಸಂಸ್ಥಾನವಾಗಿತ್ತು. ನಮ್ಮೂರಲ್ಲಿ ಮರಾಠಿ ಜೊತೆಗೆ ಕನ್ನಡ ಮತ್ತು ಉರ್ದು ಪ್ರಾಥಮಿಕ ಶಾಲೆಗಳಿದ್ದವು. ವಿಮೋಚನಾ ಹೋರಾಟದ ಫಲಶ್ರುತಿಯಾಗಿ ರಾಮದುರ್ಗ ಸಂಸ್ಥಾನ ಭಾರತ ಒಕ್ಕೂಟದಲ್ಲಿ ಸೇರಿತು. ಮರಾಠಿ ಮಾಧ್ಯಮದಲ್ಲಿ ತಮ್ಮ ಶಿಕ್ಷಣ ಕೊಡಿಸಿದರೆ ಭವಿಷ್ಯವೇ ಇಲ್ಲವೆಂದು ಮರಾಠಿ ಭಾಷಿಕರು ತಮ್ಮ ಮಕ್ಕಳಿಗೆ ಕನ್ನಡ ಶಾಲೆಗೆ ಕಳಿಸತೊಡಗಿದರು. ಮುಂದೆ ಕ್ರಮೇಣ ಮರಾಠಿ ಶಾಲೆ ತಂತಾನೇ ಮುಚ್ಚಿಬಿಟ್ಟಿತು. ಆದರೆ ಮುಸಲ್ಮಾನ ನಾಯಕರಿಗೆ ಉರ್ದು ಭಾಷೆ ಇಸ್ಲಾಮೀ ಸಂಸ್ಕೃತಿಯ ಸಂಕೇತ ಎಂದು ಅನ್ನಿಸಿತ್ತೇನೋ. ಉರ್ದು ಶಾಲೆ ಇಂದಿಗೂ ಮುಂದುವರಿದಿದೆ. ನಮ್ಮ ಸರ್ಕಾರವೂ ಉರ್ದು ಶಾಲೆಗಳಿಗೆ ಇನ್ನಿಲ್ಲದ ಸವಲತ್ತು ಒದಗಿಸುತ್ತಿದೆ – ಪ್ರಾಯಃ ಮುಸಲ್ಮಾನ ನಾಯಕರ ಅಭಿಪ್ರಾಯವೇ ಜನಸಾಮಾನ್ಯರ ಆಗ್ರಹವೆಂದು ಭಾವಿಸಿ.

ಆಗ ನಮ್ಮೂರಲ್ಲಿ ಇದ್ದದ್ದು ಒಂದೇ ಮಸೀದಿ. ಮಸೀದಿ ಎಂದರೆ ಮುಸಲ್ಮಾನರ ಅಧಿಕಾರ ಕೇಂದ್ರ. ಈ ಕೇಂದ್ರದಿಂದ ದೂರದಲ್ಲಿ ವಾಸಿಸುವವರು ಇಸ್ಲಾಮಿನಿಂದ ದೂರವಿದ್ದವರು ಎನ್ನುವ ಅಭಿಪ್ರಾಯ ಇನ್ನೂತನಕ ಮುಂದುವರಿದಿದೆ. ನನ್ನ ಅಜ್ಜ ನನ್ನ ವಿದ್ಯಾಭ್ಯಾಸದಲ್ಲಿ ತುಂಬ ಆಸಕ್ತಿ ವಹಿಸಿದ್ದ. ಕನ್ನಡದ ಜೊತೆಗೆ ಹಿಂದಿ, ಉರ್ದು, ಮರಾಠಿ ಬಲ್ಲವನಾಗಿದ್ದ. ನನಗೆ ಅಕ್ಷರಾಭ್ಯಾಸ ಮಾಡಿಸಿದವ ನನ್ನ ಅಜ್ಜನೇ. ಕನ್ನಡ ಮಾಧ್ಯಮದಲ್ಲೇ ನಾನು ಕಲಿಯಬೇಕೆನ್ನುವುದು ಅವನ ಆಸೆಯಾಗಿತ್ತು. ಅದೃಷ್ಟವಶಾತ್ ನನಗೆ ಕನ್ನಡದ ವ್ಯಾಕರಣ, ಛಂದಸ್ಸು ಇತ್ಯಾದಿ ಕಲಿಸಿದ ನನ್ನ ಗುರುಗಳನ್ನು ನಾನು ಮರೆಯಲಾರೆ. ಅದರಲ್ಲೂ ಹೋಳ್ಕರ್ ಗುರುಗಳು ಇಂದಿಗೂ ನನ್ನ ಎದುರು ನಿಂತು ನನ್ನ ತಪ್ಪುಗಳನ್ನು ತಿದ್ದುತ್ತಿದ್ದಾರೇನೋ ಎನಿಸುತ್ತದೆ. ಗಾಂಧಿವಾದಿಯಾಗಿದ್ದ ಈ ಗುರು ನನ್ನ ಬೆನ್ನ ಹಿಂದೇ ಇದ್ದಾರೆ ಎನ್ನಿಸುತ್ತದೆ. ಗುರುವಿಗೆ ಸಾವು ಬರಲಾರದು. ನಾನು ಮುಲ್ಕಿ ಪರೀಕ್ಷೆ ಬರೆಯುವುದಕ್ಕೆ ಸನ್ನದ್ಧನಾಗಿದ್ದೆ. ನನ್ನಂತೇ ಇತರರಿಗೂ ಮುಲ್ಕಿ ಪರೀಕ್ಷೆ ಕೊನೆಯದಾಗಿತ್ತು. ಅಷ್ಟೇ ಏಕೆ ಇನ್ನು ನಾನು ಯಾವ ಪರೀಕ್ಷೆಯನ್ನೂ ಬರೆಯಲಾರೆ ಎನ್ನುವುದು ಖಚಿತವಾಗಿತ್ತು. ಕಾರಣ ಬಡತನ. ಆದರೆ ತುಂಬ ಜಾಣ ವಿದ್ಯಾರ್ಥಿಯಾಗಿದ್ದ ನನಗೆ ವಿದ್ಯಾಭ್ಯಾಸ ಮುಂದುವರಿಸಲು ನನ್ನ ಹಿತೈಷಿಗಳು ನೆರವಾದರು.

ನಾನು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ೮೩% ಅಂಕ ಪಡೆದಿದ್ದರೂ ಇನ್ನು ಮುಂದೆ ಓದುವುದು ಸಾಧ್ಯವಿಲ್ಲವೆನ್ನುವುದು ನನಗೆ ಖಾತ್ರಿಯಾಗಿತ್ತು. ಅಷ್ಟೊತ್ತಿಗೆ ನಮ್ಮ ಊರಲ್ಲಿ ಕಾಲೇಜ್ ಶುರುವಾಗುವುದರಲ್ಲಿತ್ತು. ಕಾಲೇಜಿನ ಪ್ರಿನ್ಸಿಪಾಲ್ ಕಡ್ಡಿಪುಡಿ ನನ್ನ ಫೀಜ್ ಕಟ್ಟಿ ಅಡ್‌ಮಿಶನ್ ಮಾಡಿಸಿಕೊಂಡರು. ಬಿ.ಎ.ವರೆಗೆ ಅವರೇ ನನ್ನ ವಿದ್ಯಾಭ್ಯಾಸದ ಖರ್ಚುವೆಚ್ಚ ಭರಿಸಿದರು. ಪರೀಕ್ಷೆಯಲ್ಲಿ ಸೆಕೆಂಡ್ ಕ್ಲಾಸ್‌ನಲ್ಲಿ ಪಾಸಾದೆ. ಇನ್ನು ಯಾವುದಾದರೂ ಕೆಲಸ ನೋಡಬೇಕು ಎಂದು ಯೋಚಿಸತೊಡಗಿದ್ದೆ. ಈ ಹಿಂದೆ ನಾನು ಪಿ.ಯು.ಸಿ.ಯಲ್ಲಿ ಓದುತ್ತಿದ್ದಾಗ ನನಗೆ ಅಂಚೆ ಇಲಾಖೆಯಲ್ಲಿ ಸಂದರ್ಶನವಿಲ್ಲದೆ ಆರ್ಡರ್ ಬಂದಿತ್ತು. ಆದರೆ ಇದೇ ಪ್ರಿನ್ಸಿಪಾಲ್ ಕಡ್ಡಿಪುಡಿ ಅವರು "ಛೇ, ನೀ ಗುಮಾಸ್ತನಾಗುವುದೆ?" ಎಂದು ನಾನು ಮುಂದೆ ಓದಲು ಒತ್ತಾಯಿಸಿದ್ದರು. ಅವರು ನನಗೆ ಎಂ.ಎ.ವರೆಗೆ ಓದಿಸಿದರು. ಆದರೆ ಸಂದರ್ಶನವೆನ್ನುವುದು ಒಂದು ನಾಟಕವೆನಿಸತೊಡಗಿತು. ನಾನೆಂತಹ ಬೇಜವಾಬ್ದಾರ ಮನುಷ್ಯ ಎಂದು ಯಾರಾದರೂ ಭಾವಿಸಬಹುದು. ಕೊನೆಗೂ ನೌಕರಿ ಮಾಡುವುದೇ ಬೇಡವೆಂದು ತೀರ್ಮಾನಿಸಿಬಿಟ್ಟೆ.

ನನ್ನ ನಿರುದ್ಯೋಗ ಪರ್ವಕ್ಕೆ ಕೊನೆಯೇ ಇಲ್ಲವೆನಿಸಿತು. ನನ್ನಂತೇ ನಿರುದ್ಯೋಗಿಯಾಗಿದ್ದ (ಇಂದು ಪ್ರಜಾವಾಣಿಯ ಸಹಸಂಪಾದಕ) ಪದ್ಮರಾಜ್ ದಂಡಾವತಿ ಜೊತೆ ಸೇರಿ ಸಾಹಿತ್ಯ ಕುರಿತು ನಿತ್ಯವೂ ಗಂಭೀರ ಚರ್ಚೆಗೆ ತೊಡಗುತ್ತಿದ್ದೆ. ನಾನು ಓದಿದ ಕನ್ನಡ, ಉರ್ದು, ಹಿಂದಿ ಮತ್ತು ಇಂಗ್ಲಿಷ್ ಭಾಷೆಯ ಕೃತಿಗಳನ್ನು ಪದ್ಮರಾಜ್‌ಗೆ ಪರಿಚಯಿಸ ತೊಡಗಿದೆ. ನಮ್ಮನ್ನು ಮೀರಿಸಬಲ್ಲ ಸಾಹಿತ್ಯಾಸಕ್ತರೇ ಇಲ್ಲವೆಂದು ನಾವು ಬೀಗುತ್ತಿದ್ದೆವು. ಆ ಸಮಯದಲ್ಲಿ ನಮಗೆ ಪರಿಚಯವಾದ ಸಾಲಹಳ್ಳಿಯ ಬಿ. ಸಿ. ದೇಸಾಯಿ ಎದುರು ನಮ್ಮ ಅಹಂಕಾರವೆಲ್ಲ ಕರಗಿ ಹೋಯಿತು. ಸಾಹಿತ್ಯ, ಸಂಗೀತ, ರಾಜಕೀಯ ನನ್ನ ಆಸಕ್ತಿಯ ಕ್ಷೇತ್ರಗಳಾಗಿದ್ದವು. ಕಟ್ಟಾ ಮಾರ್ಕ್ಸ್‌ವಾದಿಯಾಗಿದ್ದ ದೇಸಾಯಿ ಜೊತೆಗೆ ಸಮಾಜವಾದಿಯಾಗಿದ್ದ ನಾವು ಐಡಿಯಲಾಜಿಕಲ್ ವಾಗ್ವಾದಕ್ಕಿಳಿದದ್ದರಿಂದ ನಮ್ಮ ಅರಿವಿನ ದಿಗಂತ ವಿಸ್ತರಿಸಿತು.




ಕೆಲಕಾಲ ಮುಂಗಾರು, ಸುದ್ದಿ ಸಂಗಾತಿ ಪತ್ರಿಕೆಗಳಲ್ಲಿ ಕೆಲಸ ಮಾಡಿ ನಮ್ಮೂರಿನಲ್ಲೇ ನೆಲೆ ನಿಲ್ಲುವುದು ಅನಿವಾರ್ಯವೆನಿಸಿತು. ಮುಂದೆ ನಮ್ಮ ಮುಸ್ಲಿಂ ಸಮಾಜದ ನಾಯಕರು ಒಂದು ಹೈಸ್ಕೂಲ್ ಸ್ಥಾಪನೆ ಕುರಿತು ಸಮಾಲೋಚನೆಗಾಗಿ ಒಂದು ಬೃಹತ್ ಸಭೆ ಏರ್ಪಡಿಸಿದರು. ನಾನು ನಿಜಕ್ಕೂ ಹಿರಿ ಹಿರಿ ಹಿಗ್ಗಿದೆ. ಆದರೆ ಸಭೆಯಲ್ಲಿ ಉರ್ದು ಮಾಧ್ಯಮ ಹೈಸ್ಕೂಲು ತೆರೆಯುವುದು ಅವರ ಉದ್ದೇಶವಾಗಿತ್ತು.



ನನಗೆ ಎಲ್ಲಿಲ್ಲದ ಕೋಪ ಬಂದುಬಿಟ್ಟಿತು. ಕನ್ನಡ ಮಾಧ್ಯಮ ಹೈಸ್ಕೂಲ್ ನಮಗೆ ಅನಿವಾರ್ಯವೆಂದು ನಾನು ಒತ್ತಿ ಹೇಳಿದ್ದೆ. ನಮ್ಮ ಸಮಾಜದ ನಾಯಕರು ಕೆಂಡಾಮಂಡಲವಾದರು. ನನ್ನನ್ನು ಸಭಾಗೃಹದಿಂದ ಹೊರದಬ್ಬುವುದೊಂದೇ ಬಾಕಿ ಇತ್ತು. ವಿಪರ್ಯಾಸವೆಂದರೆ ಹೈಸ್ಕೂಲ್ ಶುರುವಾಗುವುದು ಖಚಿತವಾಯಿತು. ನಾನು ಹೈಸ್ಕೂಲ್ ಹೆಡ್‌ಮಾಸ್ಟರ್ ಆಗಿ ಕೆಲಸ ನಿರ್ವಹಿಸುವುದು ಅನಿವಾರ್ಯವಾಗಿಬಿಟ್ಟಿತು. ಒಂದೇ ವರ್ಷದಲ್ಲಿ ಆ ಕೆಲಸಕ್ಕೆ ರಾಜೀನಾಮೆ ನೀಡಿದೆ. ಇನ್ನು ಮುಂದೆ ಎಲ್ಲಿಯೂ ನೌಕರಿ ಮಾಡುವುದು ನನ್ನಿಂದ ಸಾಧ್ಯವಿಲ್ಲವೆನಿಸಿತು.

**ಹೊ.** : ಲೋಹಿಯಾರ ಕಡೆಗೆ ಒಲಿಯಲು ಕಾರಣವೇನು?

**ಹ.ನ.ಸು.** : ನಾನು ಇನ್ನೂ ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಜನಪರ ರಾಜಕೀಯಕ್ಕೆ ಹೆಸರಾಗಿದ್ದ ಶಾಂತವೇರಿ ಗೋಪಾಲಗೌಡರು ನನ್ನ ಹೀರೋ ಆಗಿಬಿಟ್ಟಿದ್ದರು. ವಿಧಾನಸಭೆಯಲ್ಲಿ ಅವರ ಆವೇಶಭರಿತ ಭಾಷಣಗಳು, ವಿಧಾನಸಭೆ ಹೊರಗೆ ಅವರ ಚಟುವಟಿಕೆಗಳಲ್ಲಿ ನನಗೆ ಎಲ್ಲಿಲ್ಲದ ಆಸಕ್ತಿ. ಮುಂದೆ ಈ ದೇಶದ ಸಮಾಜವಾದಿ ಆಂದೋಲನದ ಮುಂಚೂಣಿಯ ನಾಯಕ ಲೋಹಿಯಾ ನಮಗೆ ಅನಿವಾರ್ಯವೆನಿಸಿದರು. ಮನುಷ್ಯರು ಉಸಿರಾಡ ಬೇಕಿದ್ದ ಗಾಂಧೀಜಿಯ ಹಳ್ಳಿಗಳಿಂದ ಕೂಡಿದ ಭಾರತವನ್ನು ಅವರ ನೆಚ್ಚಿನ ಶಿಷ್ಯ ನೆಹರೂ ಅವರೇ ರಾತ್ರೋರಾತ್ರಿ ಬೃಹತ್ ಉದ್ದಿಮೆಗಳ ಮೂಲಕ ಅಭಿವೃದ್ಧಿ ಹೊಂದಿದ ದೇಶವನ್ನಾಗಿ ಮಾಡುವ ತರಾತುರಿಯಲ್ಲಿದ್ದರು. ಅವರಿಗೆ ಸಂಪತ್ತೇ ಅಭಿವೃದ್ಧಿಯ ಮಾನದಂಡವಾಗಿತ್ತು. ಮನುಷ್ಯ ದೇಶದ ಬಹು ದೊಡ್ಡ ಸಂಪತ್ತು ಎನ್ನುವುದು ಅವರಿಗೆ ನಗಣ್ಯವೆನಿಸಿಬಿಟ್ಟಿತು.

ಆಧುನೀಕರಣದ ಗುಂಗಿನಲ್ಲಿದ್ದ ನೆಹರೂ ಮತ್ತು ಅವರ ಸರ್ಕಾರಕ್ಕೆ ನಮ್ಮ ದೇಶದ ಭಾಷೆ, ಸಂಸ್ಕೃತಿಗಳು ಅಮುಖ್ಯವೆನಿಸಿದ್ದವು. ಹುಟ್ಟಿನೊಂದಿಗೇ ಈ ದೇಶದಲ್ಲಿ ಗಲ್ಲಿಗೇರಿಸಲ್ಪಡುವ, ಆಜೀವ ಸೆರೆವಾಸದ ಶಿಕ್ಷೆಗೆ ಗುರಿಯಾಗುವ ಬಹುಸಂಖ್ಯಾತರ ಮೇಲೆ ಒಂದು ಆಳುವ ವರ್ಗ ತನ್ನ ದಬ್ಬಾಳಿಕೆ ಮುಂದುವರಿಸುತ್ತಿರುವುದು ಲೋಹಿಯಾರಿಗೆ ಅಸಹನೀಯವೆನಿಸಿತು. ಹೀಗೆ ಮೊದಲೇ ಜಾತಿಪದ್ಧತಿಯಿಂದ ನಿರ್ವಿಣ್ಣವಾಗಿ ಬಿಟ್ಟಿದ್ದ ಭಾರತಕ್ಕೆ ಜಾತಿ ವಿನಾಶದಿಂದ ಮಾತ್ರ ಕಾಯಕಲ್ಪ ಸಾಧ್ಯವೆನಿಸಿತ್ತು. ಮೀಸಲಾತಿ ನಮ್ಮ ಜಾತಿಪದ್ಧತಿಯನ್ನು ಬಲಪಡಿಸುವ ಹುನ್ನಾರದ ಬಗ್ಗೆ ಸಹ ಅವರು ಎಚ್ಚರ ಮೂಡಿಸಲೆತ್ನಿಸಿದ್ದರು. ತೀರ ಕೃತ್ರಿಮವೆನಿಸಿದ ಭಾರತ ವಿಭಜನೆ ನಮ್ಮ ದೇಶದ ಅಭಿವೃದ್ಧಿಗೆ ಮಾರಕವಾಗಿದೆ ಎನ್ನುವುದು ಅವರ ಬಲವಾದ ನಂಬಿಕೆಯಾಗಿತ್ತು. ಭಾರತ ಮತ್ತು ಪಾಕಿಸ್ತಾನದ ಎರಡೂ ದೇಶಗಳ ಸರ್ಕಾರಗಳು ಉಭಯ ದೇಶಗಳ ಜನತೆಯನ್ನು ಪರಸ್ಪರ ದೂರವಿಡಲು ಪ್ರಯತ್ನಿಸುತ್ತಿದ್ದುದು ಲೋಹಿಯಾರ ದೃಷ್ಟಿಯಲ್ಲಿ ಸ್ವಾರ್ಥದ ರಾಜಕೀಯವಾಗಿತ್ತು.

**ಹೊ.** : ಲೋಹಿಯಾವಾದದ ವರ್ತಮಾನ ಮತ್ತು ಭವಿಷ್ಯದ ಬಗೆಗೆ ನಿಮ್ಮ ಅನಿಸಿಕೆ ಏನು?

**ಹ.ನ.ಸು.** : ಇಂದು ಲೋಹಿಯಾವಾದಿ ರಾಜಕೀಯ ಪಕ್ಷ ಎನ್ನುವುದೇ ಇಲ್ಲವೆನ್ನುವುದು ಈ ಪ್ರಶ್ನೆ ಹಾಕುವವರ ಉದ್ದೇಶವಾಗಿರುತ್ತದೆ. ಹೌದು ಇಂತಹದೊಂದು ರಾಜಕೀಯ ಪಕ್ಷ ಈಗ ಅಸ್ತಿತ್ವದಲ್ಲಿಲ್ಲ. ಈಗ ಇರುವ ಸಮಾಜವಾದಿ ಪಕ್ಷಗಳಿಗೂ ಲೋಹಿಯಾರ ಸಮಾಜವಾದಕ್ಕೂ ಯಾವುದೇ ಸಂಬಂಧವಿಲ್ಲ ಎಂದು ಹೇಳಬಹುದು. ಒಂದು ಸಿದ್ಧಾಂತವನ್ನಾಧರಿಸಿದ ರಾಜಕೀಯ ಪಕ್ಷವೇ ನಿರ್ಣಾಯಕವೆನಿಸಲಾರದು. ಪಕ್ಷಕ್ಕೆ ನಿಷ್ಠೆ, ಬದ್ಧತೆ ಇರುವವರೇ ಆ ಸಿದ್ಧಾಂತವನ್ನು ಸಾಕಾರಗೊಳಿಸಬಲ್ಲವರು. ಉಳಿದವರಿಗೂ ಆ ಸಿದ್ಧಾಂತಕ್ಕೂ ಸಂಬಂಧವೇ ಇರುವುದಿಲ್ಲವೆನ್ನುವುದು ಮಾರಕವಾಗಬಲ್ಲದು. ಹಿಂದೆ ಕಾಂಗೆಸ್ಸಿಗೆ ಪರ್ಯಾಯವಾಗಬಲ್ಲ ಸಾಮರ್ಥ್ಯ ಹೊಂದಿದ್ದ ಸಮಾಜವಾದಿ ಪಕ್ಷ ಇಂದು ತನ್ನ ಅಸ್ತಿತ್ವ ಕಳೆದುಕೊಂಡಿರಬಹುದು. ಆದರೆ ಇಂದಿಗೂ ಲೋಹಿಯಾವಾದ ತನ್ನ ಪ್ರಸ್ತುತತೆ ಉಳಿಸಿಕೊಂಡಿದೆ. ಮುಂದೆಯೂ ಅದಕ್ಕೆ ಭವಿಷ್ಯ ಇದೆ. ಲೋಹಿಯಾ ವಾದವೆನ್ನುವುದು ಯಾವತ್ತೂ ತೆರೆದ ವಿಚಾರಧಾರೆ.

**ಹೊ.** : ನೀವು ಅನುವಾದ ಕ್ಷೇತ್ರವನ್ನೇ ಏಕೆ ಆಯ್ಕೆ ಮಾಡಿಕೊಂಡಿರಿ?

**ಹ.ನ.ಸು.** : ಇದಕ್ಕೆ ನನ್ನ ಜೀವನದ ಒಂದು ಪ್ರಸಂಗವನ್ನೇ ನಿರೂಪಿಸುವುದು ಸೂಕ್ತವೆನಿಸುತ್ತದೆ. ಯಾರಾದರೂ ಇದು ನನ್ನ ಮಾತೃಭಾಷೆ ಎಂದು ಹೇಳುವುದು. ಕನ್ನಡ ನನ್ನ ಮಾತೃಭಾಷೆ ಎಂದು ನಾನು ಸಹ ಹೇಳುತ್ತೇನೆ. ಜೊತೆಗೇ ಉರ್ದು ನನ್ನ ಪಿತೃಭಾಷೆಯಾಗಿದೆ ಎಂದು ನಾನು ಹೇಳುವುದು ಉಂಟು. ಕಾರಣ ನನ್ನ ತಾಯಿ ಮಾತಾಡುತ್ತಿದ್ದುದು ಕನ್ನಡದಲ್ಲೇ. ನಮ್ಮ ತಂದೆ ಮಾತನಾಡುತ್ತಿದ್ದುದು ಉರ್ದುವಿನಲ್ಲೇ. ನನ್ನ ತಾಯಿ ಹನ್ನೊಂದು ಮಕ್ಕಳನ್ನು ಹಡೆದಿದ್ದಳು. ಆದರೆ ಬದುಕಿ ಉಳಿದವರು ನನ್ನ ಅಕ್ಕ, ನಾನು ಮತ್ತು ನನ್ನ ತಮ್ಮ ಮಾತ್ರ. ತುಂಬ ಚಿಕ್ಕಪ್ರಾಯದಲ್ಲೇ ನನ್ನ ಅಕ್ಕನಿಗೆ ಮದುವೆ ಮಾಡಿಕೊಟ್ಟಿದ್ದರು. ಮದುವೆಯಾದ ಒಂದು ವರ್ಷದಲ್ಲೇ ಅವಳ ಗಂಡ ತೀರಿಹೋದ. ಮಗಳ ವೈಧವ್ಯ ನನ್ನ ತಂದೆ, ತಾಯಿಯರನ್ನು ಕೊರಗುವಂತೆ ಮಾಡಿತ್ತು. ಮರುಮದುವೆಗೆ ನನ್ನ ಅಕ್ಕನ ಮನವೊಲಿಸುವುದು ಅಸಾಧ್ಯವೆನ್ನುವಂತಹ ಸ್ಥಿತಿಯಾಗಿತ್ತು. ಕೊನೆಗೂ ನಮ್ಮ ತಂದೆ ಅವಳಿಗೆ ಇದ್ದೂರಲ್ಲೇ ಬಂದು ನೆಲೆಸಿದ್ದ ಒಬ್ಬ ವ್ಯಕ್ತಿಯೊಂದಿಗೆ ಮದುವೆ ಮಾಡಿಕೊಟ್ಟರು. ಅವನು ಒಂದು ತಿಂಗಳು ಮನೆ ಹಿಡಿದುಕೊಂಡಿರುತ್ತಿದ್ದ. ಮನೆಬಿಟ್ಟು ಹೋದನೆಂದರೆ ತಿಂಗಳುಗಟ್ಟಲೆ ಅವನು ನಾಪತ್ತೆಯಾಗಿ ಬಿಡುತ್ತಿದ್ದ. ಹೀಗೇ ಒಮ್ಮೆ ಮನೆ ಬಿಟ್ಟುಹೋದ. ಅವನು ಸತ್ತ ಸುದ್ದಿ ಬಂದಿತು. ಮತ್ತೆ ನನ್ನ ಅಕ್ಕ ತನ್ನ ತಾಯಿ ಮನೆಗೆ ಮರಳಿ ಬರುವುದು ಅನಿವಾರ್ಯವಾಯಿತು. ಏಳು ಹೆಣ್ಣು ಮಕ್ಕಳಲ್ಲಿ ಉಳಿದಿದ್ದವಳು ಇವಳೊಬ್ಬಳೇ. ಅವಳಿಗೊಬ್ಬ ಬಾಳ್ವೆ ಮಾಡುವಂತಹ

ಜೀವನ ಸಂಗಾತಿಯನ್ನು ಹುಡುಕಲಿಲ್ಲವೆನ್ನುವುದು ನನ್ನ ತಂದೆಯ ಅಕ್ಷಮ್ಯ ಅಪರಾಧವೆನಿಸಿತು ನನ್ನ ತಾಯಿಗೆ. ಅವಳು ನನ್ನ ತಂದೆ ಜೊತೆ ಮಾತು ಬಿಟ್ಟಳು.

ನನ್ನ ತಂದೆ ಹಾಗೂ ನನ್ನ ತಾಯಿಗೆ ನಾನೇ ದುಭಾಷಿ ಯಾಗಬೇಕಾಯಿತು. ನನ್ನ ತಾಯಿಗೆ ಉರ್ದುವಿನ ಒಂದೇ ಒಂದು ಪದ ಅರ್ಥವಾಗುತ್ತಿರಲಿಲ್ಲ. ನಮ್ಮ ತಂದೆಗೆ ಕನ್ನಡ ಬರುತ್ತಿರಲಿಲ್ಲ. ಹೀಗೆರಡು ಮುರಿದ ಮನಸ್ಸುಗಳಿಗೆ ಅನುವಾದಕನು ಸೇತುವಾಗಬಲ್ಲನು ಎನ್ನುವುದಕ್ಕೆ ನಾನೇ ಒಂದು ನಿದರ್ಶನ. ಬಹುತ್ವವೇ ಉಸಿರಾಗಿರುವ ನಮ್ಮ ದೇಶದ ಬೇರೆ ಭಾಷೆಯ ಸಾಹಿತ್ಯ ಕೃತಿಗಳು ಇನ್ನೊಂದು ಭಾಷೆಗೆ ಹೋಗಲೇಬೇಕು. ಎರಡು ಭಾಷೆಗಳನ್ನು ಬಲ್ಲವನು ಅನುವಾದಕನಾಗಬಹುದು. ಆದರೆ ಎರಡೂ ಭಾಷೆಗಳಿಗಿರುವ ವೈಶಿಷ್ಟ್ಯಗಳು, ಸಾಂಸ್ಕೃತಿಕ ಹಿನ್ನೆಲೆ, ಪ್ರಾದೇಶಿಕ ಹಿನ್ನೆಲೆಗಳ ಅರಿವಿದ್ದವನು ಮಾತ್ರ ಸಮರ್ಥ ಅನುವಾದಕನಾಗಬಲ್ಲನು. ನನಗೆ ಅನುವಾದ ಕ್ಷೇತ್ರವೇ ಸೂಕ್ತ ಎನಿಸಿತು.

**ಹೊ.** : ಅನುವಾದ ಕ್ರಿಯೆಯ ಬಗೆಗೆ ನೀವು ಹೇಳಿಕೊಳ್ಳಲೇ ಬೇಕಾದ ಅನುಭವಗಳು ಇದ್ದಾವೆಯೆ?

**ಹ.ನ.ಸು.** : ಬಾಬ್ರಿ ಮಸೀದಿ ಧ್ವಂಸಗೊಂಡ ಸಂದರ್ಭದಲ್ಲಿ ನಾನು ಲೋಹಿಯಾರ ಎರಡು ಲೇಖನಗಳನ್ನು ಅನುವಾದಿಸಿದ್ದೆ. ಅದನ್ನು ಆದಷ್ಟು ಬೇಗ ಪ್ರಕಟಿಸುವುದು ಅನಿವಾರ್ಯವಾಗಿತ್ತು. ಆ ಮೊದಲು ನನ್ನ ಒಂದೇ ಕೃತಿ ಪ್ರಕಟಗೊಂಡಿತ್ತು. ಆ ಕೃತಿಯ ಪ್ರಕಾಶಕರಾಗಿದ್ದ ಲಂಕೇಶರನ್ನು ಸಂಪರ್ಕಿಸಿ ವಿಷಯ ತಿಳಿಸಿದೆ. ಅವರಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಕೊನೆಗೆ ನನ್ನ ಗೆಳೆಯರು ಕೂಡಿಕೊಂಡು ಪುಸ್ತಕ ಪ್ರಕಟಿಸಲು ತೀರ್ಮಾನಿಸಿದರು. ಲೋಹಿಯಾರ 'ಹಿಂದೂ ಧರ್ಮ' ಎನ್ನುವ ಲೇಖನದಲ್ಲಿ ಒಬ್ಬ ವ್ಯಕ್ತಿಯ ಪ್ರಸ್ತಾಪವಿದೆ. ಅವನ ಕುರಿತು ಅಡಿ ಟಿಪ್ಪಣಿ ಕೊಡದೆ ಹೋದರೆ ಲೇಖನದ ಅನುವಾದದ ಓದು ಮುಕ್ಕಾಗುತ್ತದಲ್ಲವೆನ್ನುವುದು ನನ್ನ ಸಮಸ್ಯೆಯಾಗಿತ್ತು. ಕಿತ್ತೂರ ರಾಣಿ ಚೆನ್ನಮ್ಮ ಕುರಿತ ಒಂದು ಕನ್ನಡ ಲೇಖನದಲ್ಲಿ ಸಂಗೊಳ್ಳಿ ರಾಯಣ್ಣನ ಪ್ರಸ್ತಾಪ ಬಂದೇ ಬರುತ್ತದೆ. ದೂರದ ದೆಹಲಿಯ ಸಾಹಿತಿ ಆ ಲೇಖನವನ್ನು ಹಿಂದಿಗೆ ಅನುವಾದಿಸ ತೊಡಗಿದರೆ ಅವನಿಗೆ ಸಂಗೊಳ್ಳಿ ರಾಯಣ್ಣ ಯಾರೆನ್ನುವುದು ಗೊತ್ತಿರಲೇಬೇಕು. ಇಲ್ಲವಾದರೆ ಚೆನ್ನಮ್ಮ ಕುರಿತ ಲೇಖನದ ಅನುವಾದ ಮೂಲದ ಆಶಯಕ್ಕೆ ಧಕ್ಕೆ ತರಬಲ್ಲದು.

ಭಾರತದ ಇತಿಹಾಸದಲ್ಲಿನ ಯಾವ ವ್ಯಕ್ತಿ ನಮ್ಮವನು ಹಾಗೂ ಯಾವ ವ್ಯಕ್ತಿ ಪರಕೀಯನು ಎನ್ನುವ ವಿಷಯ ಕುರಿತು ಲೋಹಿಯಾ ಲೇಖನದಲ್ಲಿ ಚರ್ಚೆ ಮಾಡಿದ್ದಾರೆ. ಯಾರು ಸ್ವದೇಶೀ ಮುಸ್ಲಿಮರು ಎನ್ನುವುದಕ್ಕೆ ಅಕಬರ್, ಶೇರ್‌ಶಾಹ್ ಸೂರಿ, ಮೌಲ್ವಿ ಅಹಮದುಲ್ಲಾಹ್ ಮುಂತಾದ ವರನ್ನು ಉದಾಹರಿಸಿದ್ದಾರೆ. ಮೌಲ್ವಿ ಅಹಮದುಲ್ಲಾಹ್ ಕುರಿತು ಮಾಹಿತಿಗಾಗಿ ನಾನು ಹರಸಾಹಸಪಟ್ಟೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ ಮೊದಲು ಮಾಡಿ ಅನೇಕ ಕಡೆ ನಾನು ಹುಡುಕಾಡಿದೆ. ನನಗೆ ಮಾಹಿತಿ ಸಿಗಲೇ ಇಲ್ಲ. ನಾನು ಈ ಮೌಲ್ವಿ ಕುರಿತು ಎಲ್ಲೋ ಓದಿದ್ದ ನೆನಪು ಇತ್ತು. ಅದು ನನ್ನ ಬಳಿ ಯಾವುದೋ ಪತ್ರಿಕೆಯಲ್ಲೇ ಇದ್ದಿರಬಹುದೆನಿಸಿತು.

ನಾನು ಸಂಗ್ರಹಿಸಿದ್ದ ಹಿಂದಿಯ 'ಸಾರಿಕಾ' ಪತ್ರಿಕೆಯ ಸಂಚಿಕೆಗಳ ಮೂಟೆ ಬಿಚ್ಚಿದೆ. ಮೌಲ್ವಿ ಕಡೆಗೂ ಸಿಕ್ಕಿಬಿಟ್ಟ. ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದ ಮೌಲ್ವಿಯನ್ನು ಜೀವಂತವಾಗಿ ಇಲ್ಲವೆ ಅವನ ರುಂಡ ತಂದು ಒಪ್ಪಿಸಿದವರಿಗೆ ಬ್ರಿಟಿಷ್ ಸರ್ಕಾರ



*ಸುರಕೋಡ ಅವರೊಂದಿಗೆ ಸಂದರ್ಶಕ ಡಾ॥ ಸರಜೂ ಕಾಟ್ಕರ್*

ಐವತ್ತು ಸಾವಿರ ರೂಪಾಯಿ ಇನಾಮು ನೀಡುವುದಾಗಿ ಘೋಷಿಸಿತ್ತು. ಅಯೋಧ್ಯೆ ಬಳಿ ಪವನ ಸಂಸ್ಥಾನದ ರಾಜ ಬ್ರಿಟಿಷರ ವಿರುದ್ಧ ನಡೆದ ಹೋರಾಟಕ್ಕೆ ಬೆಂಬಲ ನೀಡಲು ನಿರಾಕರಿಸಿದ್ದ. ಆಗ ಡಂಕಾಶಾಹ್ ಎಂದೇ ಖ್ಯಾತನಾಗಿದ್ದ ಮೌಲ್ವಿ ಅಹಮದುಲ್ಲಾಹ್ ರಾಜನ ಕೋಟೆಗೆ ಮುತ್ತಿಗೆ ಹಾಕುತ್ತಾನೆ. ಹಣಾಹಣಿಯಲ್ಲಿ ರಾಜನ ತೋಪಿಗೆ ಮೌಲ್ವಿಯ ರುಂಡ ಅವನ ಮುಂಡದಿಂದ ಬೇರ್ಪಡುತ್ತದೆ. ರಾಜನ ಸೋದರ ತಕ್ಷಣ ಮೌಲ್ವಿಯ ರುಂಡ ಒಯ್ದು ಫೈಜಾಬಾದ್ ಕಲೆಕ್ಟರ್‌ಗೆ ಒಪ್ಪಿಸಿದ. ಆ ರುಂಡ ತುಂಬ ಬೆಲೆಬಾಳುವುದಾಗಿತ್ತಲ್ಲ. ಐವತ್ತು ಸಾವಿರ ರೂಪಾಯಿ ಜೇಬಿಗಿಳಿಸಿಕೊಂಡ ರಾಜನ ಸೋದರ. ಈ ಸ್ವಾತಂತ್ರ್ಯ ಹೋರಾಟಗಾರ ಮೌಲ್ವಿ ಅಹಮದುಲ್ಲಾಹ್ ಶಾಹ್‌ನನ್ನು ವಿ. ಡಿ. ಸಾವರ್ಕರ್ ಅವರೇ ಮನಸಾರೆ ಹೊಗಳಿದ್ದಾರೆ.

ಹೀಗೆ ಮೌಲ್ವಿ ಕುರಿತ ಅಡಿ ಟಿಪ್ಪಣಿಯೊಂದಿಗೆ 'ಹಿಂದೂ ಧರ್ಮ ಮತ್ತು ಹಿಂದೂ ಮುಸಲ್ಮಾನ ಸಮಸ್ಯೆ' ಪುಸ್ತಿಕೆ ಪ್ರಕಟವಾಯಿತು. ನನಗೆ ಆಗ ಸಮಾಧಾನವಾಯಿತು.

**ಹೊ.** : ಕನ್ನಡ ಅನುವಾದ ಸಾಹಿತ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು? ಕನ್ನಡದಿಂದ ಬೇರೆ ಭಾಷೆಗಳಿಗೆ ಹೋಗುವ ಕೃತಿಗಳು ತೀರ ಕಡಿಮೆ. ಆ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಹ.ನ.ಸು.** : ಜಗತ್ತಿನ ಬೇರೆ ಭಾಷೆಯ ಕೃತಿಗಳೆಲ್ಲ ಸಾಮಾನ್ಯವಾಗಿ ಇಂಗ್ಲಿಷಿಗೆ ಅನುವಾದ ವಾಗುತ್ತವೆ. ಕಡೆಗೂ ಆ ಕೃತಿಗಳು ಇಂಗ್ಲಿಷಿನಿಂದಾದರೂ ಕನ್ನಡಕ್ಕೆ ಅನುವಾದವಾಗುತ್ತವೆ.

## ಹೊನ್ನಿಯನೇರಿ ಹೊರಟಿದ್ದೇನೆ

ಸುತ್ತು ಕತ್ತಲು ಕವಿದರೂ
ಹೊನ್ನಿಯನೇರಿ ಹೊರಟಿದ್ದೇನೆ;
ಅಪನಂಬಿಕೆಗಳ ಮಧ್ಯೆ ನಿಂತು
ನಂಬಿಕೆ ಬಿತ್ತಿದ್ದೇನೆ;
ಆಸ್ತಿಕ ನಾಸ್ತಿಕ ವಾದಗಳ ಕೊಡಲು
ಬಟ್ಟ ಬಯಲಲ್ಲಿ ನೆಲದಾಸೆಯಾಗಿ
ಬಿಚ್ಚಿಕೊಂಡು ಅರಳಿದ್ದೇನೆ;
ಎಡ-ಬಲದ ಕಣ್ಣಕಿಡಿ ಹೊತ್ತದಂತೆ
ಚಕಮಕಿ ಅಡಗಿಸಿದ್ದೇನೆ;
ದಟ್ಟ ದರಿದ್ರ ಹೃದಯಹೀನರ ನಡುವೆ
ಬದುಕುವುದನ್ನೂ ಕಲಿತಿದ್ದೇನೆ;
ಕನ್ನಡೇಶ್ವರಿಯ ಕಲಾತೇರ
ಮಿಣಿಗೆ ಕೈಹಚ್ಚಿದ್ದೇನೆ.




**ಸೋಮನಾಥ ಗೀತಯೋಗಿ**
ಮು.ಪೋ. : ಸಾಲೋಟಗಿ, ಇಂಡಿ ತಾಲೂಕು, ವಿಜಯಪುರ ಜಿಲ್ಲೆ

ವಿಚಿತ್ರವೆಂದರೆ ನಮ್ಮ ಪ್ರಾದೇಶಿಕ ಭಾಷೆಗಳಿಗಿಂತ ಹೆಚ್ಚಾಗಿ ವಿದೇಶಿ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸುವವರಿದ್ದಾರೆ. ನಮ್ಮ ನೆರೆ ರಾಜ್ಯಗಳ ತಮಿಳು, ಮರಾಠಿ ಮುಂತಾದ ಭಾಷೆಗಳಲ್ಲಿನ ಶ್ರೇಷ್ಠ ಕೃತಿಗಳು ನಮಗೆ ಇನ್ನೂ ಅಲಭ್ಯವಾಗಿವೆ. ಇನ್ನು ಕನ್ನಡದಿಂದ ಬೇರೆ ಭಾಷೆಗಳಿಗೆ ಹೋಗುವ ಕೃತಿಗಳು ತೀರ ಕಡಿಮೆ ಎನ್ನುವುದು ನಿಜ. ಕನ್ನಡದ ಅತ್ಯುತ್ತಮ ಕೃತಿಗಳು ಬೇರೆ ಭಾಷೆಗಳಿಗೆ ಹೋದರೆ ಮಾತ್ರ ಕನ್ನಡ ಸಾಹಿತ್ಯ ತನ್ನ ಹಿರಿಮೆ ಸಾರಿದಂತಾಗುತ್ತದೆ. ಈ ನಿಟ್ಟಿನಲ್ಲಿ ಕುವೆಂಪು ಭಾಷಾ ಭಾರತಿ ಮಾಡುತ್ತಿರುವ ಕೆಲಸ ನಿಜಕ್ಕೂ ಶ್ಲಾಘನೀಯ.

**ಹೊ.** : ರಾಮದುರ್ಗದಂತಹ ಗ್ರಾಮೀಣ ಪರಿಸರದಲ್ಲಿದ್ದು ಮುಸ್ಲಿಂ ಸಮುದಾಯದ ಲೇಖಕರಾಗಿ ಸಿಕ್ಕಂತಹ ಪ್ರತಿಕ್ರಿಯೆಗಳೇನು?

**ಹ.ನ.ಸು.** : ನಿಜ. ನಾನು ಗ್ರಾಮೀಣ ಪರಿಸರದಲ್ಲಿದ್ದವನು. ಮುಸ್ಲಿಂ ಸಮುದಾಯಕ್ಕೆ ಸೇರಿದ ಲೇಖಕನಾಗಿ ನನ್ನ ಸಮುದಾಯದ ಓದುಗರಿಂದ ಅಂತಹ ಪ್ರೋತ್ಸಾಹದ ಮಾತು ಕೇಳಿಲ್ಲ ಎಂದೇನಲ್ಲ. ಮುಸ್ಲಿಂ ಸಮುದಾಯ ದಲ್ಲೂ ಸಹೃದಯ ಓದುಗರಿದ್ದಾರಲ್ಲವೆಂದು ಸಮಾಧಾನವೆನಿಸಿದೆ. ಬೇರೆ ಸಮುದಾಯದ ಓದುಗರು ನನ್ನ ಕೃತಿಗಳನ್ನು ತುಂಬ ಮೆಚ್ಚಿಕೊಂಡಿದ್ದಾರೆ. ನನ್ನ ಅನುವಾದ ಕೃತಿಗಳಿಗೆ ಸಿಕ್ಕ ಪ್ರಶಸ್ತಿ ಪುರಸ್ಕಾರಗಳೇ ಅದಕ್ಕೆ ಪುರಾವೆ ಎನ್ನಬಹುದು.

**ಹೊ.** : ಈಗ ಅನುವಾದಕ್ಕೆ ಎತ್ತಿಕೊಂಡಿರುವ ಕೃತಿ ಯಾವುದು? ಅದನ್ನು ಏಕೆ ಆಯ್ಕೆ ಮಾಡಿಕೊಂಡಿರಿ?

**ಹ.ನ.ಸು.** : ಇತ್ತೀಚೆಗೆ ನಾನು ಅನುವಾದಕ್ಕೆ ಆಯ್ದುಕೊಂಡ ಕೃತಿ 'ಸಾರಾ ಶಗುಫ್ತಾ : ಜೀವನ ಮತ್ತು ಕಾವ್ಯ'. ಪಾಕಿಸ್ತಾನದ ಬಲು ಸೂಕ್ಷ್ಮ ಮನಸ್ಸಿನ ಕವಯಿತ್ರಿ ಸಾರಾ ಅಮೃತಾ ಪ್ರೀತಂ ಅವರ ಗೆಳತಿಯಾಗಿದ್ದಳು. ಅಷ್ಟೇ ಅಲ್ಲ, ಅವಳು ಅಮೃತಾ ಅವರ ಪಡಿಯಚ್ಚಿನಂತಿದ್ದಳು. ವ್ಯತ್ಯಾಸವಿಷ್ಟೇ, ಒಬ್ಬ ಬಂಡುಕೋರ ಯುವತಿ ಸಮಾಜವನ್ನು ಎದುರಿಸಲು ಅಸಮರ್ಥಳಾದಳು ಹಾಗೂ ಇನ್ನೊಬ್ಬ ಮಹಿಳೆ ಸಮಾಜವನ್ನು ಎದುರು ಹಾಕಿಕೊಂಡಳು, ಯಾರೂ ತನ್ನ ದನಿಯನ್ನು ಅಲಕ್ಷಿಸುವುದು ಸಾಧ್ಯವಿಲ್ಲವೆನ್ನುವುದನ್ನು ಕೊನೆಯತನಕ ತೋರಿಸಿಕೊಟ್ಟಳು. ಹೆಣ್ಣಿನ ಹೋರಾಟ ಒಂದೆಡೆ ಅನಿವಾರ್ಯ ಆದರೆ ಅಸಾಧ್ಯವೆನಿಸಿದರೆ ಇನ್ನೊಂದೆಡೆ ಅದು ಕಷ್ಟಸಾಧ್ಯವೆನಿಸೀತು, ಅಷ್ಟೇ. ಸಾರಾಳ ಕತೆ ಮನಕಲಕು ವಂತಹದ್ದು. ತನ್ನ ನವಜಾತ ಗಂಡು ಮಗುವಿನ ಮರಣ ಮತ್ತು ತಾಯ್ತನದ ಅಂತಹ ದಾರುಣ ಪ್ರಸಂಗದಲ್ಲಿ ಆ ಬಗ್ಗೆ ತನ್ನ ಎರಡನೆಯ ಗಂಡನ ದಿವ್ಯ ನಿರ್ಲಕ್ಷ್ಯದಿಂದ ಆಳವಾದ ನೋವು ಅನುಭವಿಸಿದ ಅವಳು ಕಾವ್ಯ ಕೃಷಿಗೆ ಮುಂದಾದಳು. ಕಾವ್ಯ ಅವಳ ಜೀವದುಸಿರಾಗಿತ್ತು. ತನ್ನ ಗಂಡಂದಿರು ಮತ್ತು ಅಸೂಕ್ಷ್ಮ ಸಮಾಜದ ಕ್ರೂರ ನಡವಳಿಕೆಯಿಂದಾಗಿ ಅವಳು ಮತಿಭ್ರಮಣೆಗೆ ಈಡಾದಳು. ಹುಚ್ಚಾಸ್ಪತ್ರೆಗೆ ದಾಖಲಾಗಿ ಚೇತರಿಸಿಕೊಂಡು ಮತ್ತೆ ಪದೇ ಪದೇ ಅದೇ ಹುಚ್ಚಾಸ್ಪತ್ರೆ ಸೇರುವುದು ಅವಳಿಗೆ ಅನಿವಾರ್ಯವಾಯಿತು. ಅವಳ ಕಾವ್ಯ ಕೃಷಿ ಅಪರೂಪದ ಜೀವನೋತ್ಸಾಹದಿಂದ ಮುಂದುವರಿಯಿತು. ಹಲವಾರು ಸಲ ವಿಷ ಸೇವಿಸಿ ಆತ್ಮಹತ್ಯೆ ಪ್ರಯತ್ನ ಮಾಡಿದಳು. ಸಾರಾಳಿಗೆ ಅಕ್ಷರವೆನ್ನುವುದು ಅವಳ ಕೈಗೆ ಶಕ್ತಿಯಾಗಿ ಪರಿಣಮಿಸಿತ್ತು. ಅವಳ ಅಕಾಲಿಕ ಮರಣದ ಹೊರತಾಗಿಯೂ ಅವಳು ಮೌಲ್ಯಯುತ ಕಾವ್ಯ ಸಂಪತ್ತನ್ನು ಬಿಟ್ಟು ಹೋದಳು. ಇದು ಕನ್ನಡಕ್ಕೆ ಅನುವಾದವಾಗಲೇಬೇಕಾದ ಕೃತಿ ಎನಿಸಿತು.

**ಹೊ.** : ಈಗಿನ ಅಸಹಿಷ್ಣುತೆಯ ಪರಿಸರದಲ್ಲಿ ಲೇಖಕನ ಜವಾಬ್ದಾರಿ ಏನು? ಯಾವ ರೀತಿಯಾಗಿ ಅವನು ಅದನ್ನು ನಿಭಾಯಿಸಬಲ್ಲನು?

**ಹ.ನ.ಸು.** : ಸಾಹಿತಿಗಳೆಲ್ಲ ಸ್ವಸಂತೋಷಕ್ಕಾಗಿ ಬರೆಯುವವರಲ್ಲ. ವ್ಯವಸ್ಥೆಯನ್ನು ಪ್ರಶ್ನಿಸುವುದೇ ಸಾಹಿತಿಯ ಮುಖ್ಯ ಉದ್ದೇಶವೆಂದು ಬರವಣಿಗೆಗೆ ತೊಡಗು ವವರ ಸಂಖ್ಯೆ ಕಡಿಮೆಯೇನಿಲ್ಲ. ಜೀ ಹುಜೂರ್ ಎನ್ನುವವನಿಗೆ ಸಹಿಷ್ಣುತೆ ಪರಿಸರವೂ ಅಷ್ಟೇ, ಅಸಹಿಷ್ಣುತೆಯ ಪರಿಸರವೂ ಅಷ್ಟೇ. ಆದಷ್ಟು ಮಟ್ಟಿಗೆ ಸಾಹಿತಿಯ ಸೃಜನಶೀಲತೆ ಪರಿಣಾಮಕಾರಿಯಾದಂತೆಲ್ಲ ಅಸಹಿಷ್ಣುತೆ ವಿರುದ್ಧ ಅವನ ಪ್ರತಿಭಟನೆಯಾಗಬಲ್ಲದು. ಬೀದಿಗೆ ಇಳಿದೇ ಅವನು ಪ್ರತಿಭಟಿಸಬೇಕಾಗಿಲ್ಲ.


**ಸರಜೂ ಕಾಟ್ಕರ್**
'ಕಾವ್ಯ', ಎಮ್.ಐ.ಜಿ. ೨೧೫, ಮಹಾಂತೇಶ ನಗರ, ಬೆಳಗಾವಿ – ೫೯೦ ೦೦೨



ಗೌರಿ ಕೂಡಲು ಕಲಿತಿದ್ದು ಎರಡು ವರ್ಷಗಳ ನಂತರ. ಅಂಬೆಗಾಲಿಟ್ಟಿದ್ದು ನಾಲ್ಕು ವರ್ಷಗಳಿಗೆ. ತಡವರಿಸುತ್ತ ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟಿದ್ದು ಆರು ವರ್ಷಗಳ ನಂತರ. ಇವತ್ತಿಗೂ ಆಕೆ ನಮ್ಮ ಕಣ್ಣನ್ನು ೨-೩ ಸೆಕೆಂಡ್‌ಗಳಿಗಿಂತ ಹೆಚ್ಚು ನೋಡುವುದಿಲ್ಲ. ಕೆಲವು ಶಬ್ದಗಳನ್ನು ಬಿಟ್ಟರೆ ಬೇರೆ ಶಬ್ದಗಳನ್ನು ಆಡಿಲ್ಲ. ಇವತ್ತಿಗೂ ನಡಿಗೆ ಅಸಹಜ. ತೀರಾ ಪರಿಚಯದವರ ಹತ್ತಿರ ಕೊಂಚ ಬೆರೆಯುವುದನ್ನು ಬಿಟ್ಟರೆ, ತನ್ನದೇ ಓರಗೆಯ ಇತರ ಮಕ್ಕಳೊಂದಿಗೆ ಬೆರೆಯುವುದಿಲ್ಲ. ಗುಂಪಿನಲ್ಲಿದ್ದರೂ ಆಕೆ ಒಂಟಿಯೇ. ಆಟಿಸಂ ಮತ್ತು ಬುದ್ಧಿಮಾಂದ್ಯತೆಗಳೆರಡರ ಲಕ್ಷಣಗಳನ್ನೂ ಆಕೆಯಲ್ಲಿ ಗುರುತಿಸಿದ್ದಾರೆ ತಜ್ಞರು. ಈಗ ವಿಶೇಷ ಶಾಲೆಗೆ ಹೋಗುತ್ತಿದ್ದಾಳೆ. ಫಿಸಿಯೋಥೆರಪಿ, ಸ್ಪೀಚ್ ಥೆರಪಿ ಮುಂತಾದುವೆಲ್ಲ ನಡೆದಿವೆ. ಈಗ ಆಕೆಗೆ ತಿಳುವಳಿಕೆ ನಿಧಾನವಾಗಿ, ಬಲು ನಿಧಾನವಾಗಿ ಬೆಳೆಯುತ್ತಿದೆ. ಕೆಲವೊಂದು ಸರಳ ಮಾತುಗಳು ಅರ್ಥವಾಗುತ್ತವೆ. ಕೆಲವು ಸರಳ ಕೆಲಸಗಳನ್ನು ಮಾಡುತ್ತಾಳೆ. ಇವತ್ತಿಗೆ ಹದಿನಾಲ್ಕು ವರ್ಷಗಳಾಗುತ್ತ ಬಂದಿದ್ದರೂ ಗೌರಿ ನಮ್ಮ ಪಾಲಿಗೆ ಒಂದೆರಡು ವರ್ಷದ ಮಗು.

# ಥ್ಯಾಂಕ್ಸ್ ಗೌರಿ ನಮ್ಮ ಮಗಳಾಗಿದ್ದಕ್ಕೆ ನಮಗೆ ಗುರುವಾಗಿದ್ದಕ್ಕೆ

**ಚಾಮರಾಜ ಸವಡಿ**

೨೦೧೫ರ ಏಪ್ರಿಲ್‌ಗೆ ಹದಿನಾಲ್ಕು ವರ್ಷಗಳಾಗುತ್ತವೆ.

ಕಳೆದ ಹದಿನಾಲ್ಕು ವರ್ಷಗಳಲ್ಲಿ ಬದುಕು ನಮ್ಮನ್ನು ಅವಶ್ಯಕತೆಗಿಂತ ಹೆಚ್ಚು ಪ್ರಬುದ್ಧರನ್ನಾಗಿಸಿದೆ. ಮಾಗಿಸಿದೆ. ಪೀಡಿಸಿದೆ. ಎಂದೂ ಮರೆಯದ ಪಾಠಗಳನ್ನು ಕಲಿಸಿದೆ.

ಇವೆಲ್ಲಕ್ಕಿಂತ ಹೆಚ್ಚಿನ ಪಾಠಗಳನ್ನು ನಮ್ಮ ಪುಟ್ಟ ಮಗಳು ಗೌರಿ ಕಲಿಸಿದ್ದಾಳೆ. ಇನ್ನೂ ಕಲಿಸುತ್ತಲೇ ಇದ್ದಾಳೆ. ವ್ಯತ್ಯಾಸ ಇಷ್ಟೇ: ಮೊದಮೊದಲು ಆ ಪಾಠಗಳನ್ನು ಬಹಳ ಕಷ್ಟಪಟ್ಟು ಕಲಿಯುತ್ತಿದ್ದೆವು. ಕಣ್ಣೀರಿಡುತ್ತ ಕಲಿಯುತ್ತಿದ್ದೆವು. ನಮ್ಮ ನಮ್ಮ ವೃತ್ತಿಯ ಸವಾಲುಗಳೇನೇ ಇರಲಿ, ಅವು ನಮ್ಮ ಕೈಯೊಳಗೆ ಇರುವಂಥವು. ಅವನ್ನು ಸಮರ್ಥವಾಗಿ ಎದುರಿಸಬಲ್ಲೆವು. ಆದರೆ, ಕೆಲವು ಸವಾಲುಗಳು ನಮ್ಮ ವ್ಯಾಪ್ತಿಯಾಚೆಗೂ ಇರುತ್ತವೆ ಎಂಬ ಮಹಾಪಾಠವನ್ನು, ಮಾತು ಬಾರದ, ಇದುವರೆಗೂ ಮಾತನ್ನು ಆಡದ ಮಗಳು ಕಲಿಸುವಾಗ ಅದನ್ನು ಜೀರ್ಣಿಸಿಕೊಳ್ಳಲು ನಿಜಕ್ಕೂ ತುಂಬ ಕಷ್ಟಪಟ್ಟೆವು. ಅವು ನಿಜಕ್ಕೂ ಯಾತನಾಮಯ ದಿನಗಳು.

* * *

ಮೊದಲ ಮಗುವಿನ ನಿರೀಕ್ಷೆಯ ದಿನಗಳ ಸೊಗಸೇ ಬೇರೆ. ಅಲ್ಲಿ ಸಡಗರದ ಜೊತೆಗೆ ಕೊಂಚ ಆತಂಕವೂ ಇರುತ್ತದೆ. ನಮ್ಮ ಪಾಡಿಗೆ ನಾವು, ಮದುವೆಯಾಗಿದ್ದರೂ ಅವಿವಾಹಿತರ ಮನಃಸ್ಥಿತಿಯಲ್ಲಿರುತ್ತೇವೆ. ವೃತ್ತಿಯಲ್ಲಿ ಬಲಿಯುತ್ತಿರುತ್ತೇವೆ. ಏನೇ ಸಮಸ್ಯೆ ಬಂದರೂ, ಎದುರಿಸಿಯೇನು ಎಂಬ ಆತ್ಮವಿಶ್ವಾಸ ಧಂಡಿಯಾಗಿರುತ್ತದೆ. ಪ್ರತಿಯೊಂದನ್ನೂ ಉತ್ಸಾಹದಿಂದ, ಸವಾಲಿನಿಂದ, ವಿಶ್ವಾಸದಿಂದ ಎದುರಿಸುವ ದಿನಗಳವು. ಅಂಥ ಒಂದು ಬೇಸಿಗೆಯ ದಿನದಲ್ಲಿ ಕೊಪ್ಪಳದಲ್ಲಿ ಹುಟ್ಟಿದಳು ನನ್ನ ಮೊದಲ ಮಗಳು ಗೌರಿ.

ನಾನಾಗ ಸ್ವಂತ ಪತ್ರಿಕೆಯೊಂದನ್ನು ನಡೆಸುತ್ತಿದ್ದೆ. ಕಣ್ಣ ಮುಂದೆ ಭವಿಷ್ಯದ ಸ್ವಪ್ನ ಕಲ್ಪನೆಗಳಿದ್ದವು. ಪತ್ರಿಕೆಯ ಜೊತೆಗೆ ಶಾಲೆ, ಇಂಗ್ಲಿಷ್ ಕಲಿಸುವ ಸಂಸ್ಥೆ, ಕೃಷಿ – ಹೀಗೆ ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಳ್ಳುವ, ಆ ಮೂಲಕ, ಕೊಪ್ಪಳದಲ್ಲೇ ನೆಲೆನಿಲ್ಲುವ ಕನಸುಗಳಿದ್ದವು. ಗೌರಿ ಆ ಕನಸುಗಳನ್ನು ಮತ್ತಷ್ಟು ಗಟ್ಟಿ ಮಾಡಿದ್ದಳು.

ಬಲು ಕೆಂಪಗಿತ್ತು ಮಗು. ಆಕೆಯನ್ನು ಮೊದಲ ಬಾರಿ ನೋಡಿದಾಗಿನ ಕ್ಷಣಗಳು ಇವತ್ತಿಗೂ ನೆನಪಿನಲ್ಲಿ ಹಚ್ಚಹಸಿರು. ಹೆರಿಗೆ ನೋವು, ಸಿಸೇರಿಯನ್ ರಗಳೆಯಲ್ಲಿ ಬಾಡಿದಂತಿದ್ದ ಹೆಂಡತಿ ರೇಖಾಳ ಮೊಗದಲ್ಲಿ ಬೆಳದಿಂಗಳು. ಪಕ್ಕದಲ್ಲೇ ಮಲಗಿತ್ತು ಪುಟ್ಟ ಗೌರಿ – ಕೆಂಪಗೆ, ದಪ್ಪಗೆ, ಮುಷ್ಟಿ ಬಿಗಿದುಕೊಂಡು. ಆ ಕ್ಷಣದಲ್ಲಿ, ಈಕೆ ಮುಂದೆ ನನಗೆ ಗುರುವಾಗುತ್ತಾಳೆಂದು ಖಂಡಿತ ಅಂದುಕೊಂಡಿರಲಿಲ್ಲ. ಹುಟ್ಟಿ ಮೂರು ತಿಂಗಳಾದರೂ ಗೌರಿಯ ಕತ್ತು ಸ್ಥಿರವಾಗಲಿಲ್ಲ. ದೃಷ್ಟಿ ಎತ್ತಲೋ. ಆದರೆ, ಮಗು ಗೆಲುವಾಗಿತ್ತು. ಊಟ, ನಿದ್ದೆ, ತನ್ನ ಪಾಡಿಗೆ ತಾನು ಆಟವಾಡುವುದು ಎಲ್ಲಾ ಇದ್ದರೂ, ಸುತ್ತಲಿನ ಜಗತ್ತಿನೊಂದಿಗೆ ಸಂಬಂಧ ಇಲ್ಲದಂತಿತ್ತು. ತೊಟ್ಟಿಲ ಮೇಲೆ ಬಾಗಿ, ಲಟಿಕೆ ಹೊಡೆದು, ಗಿಲಿಗಿಲಿ ಆಡಿಸಿದರೂ ನಮ್ಮತ್ತ ದೃಷ್ಟಿ ಕೊಟ್ಟು ನೋಡುತ್ತಿರಲಿಲ್ಲ. ಶಬ್ದಕ್ಕೆ ಮುಖವರಳಿಸುತ್ತಿದ್ದುದನ್ನು ಬಿಟ್ಟರೆ, ಬಾಹ್ಯ ಜಗತ್ತಿಗೆ ಪ್ರತಿಕ್ರಿಯಿಸುತ್ತಿರಲಿಲ್ಲ.

'ಕೆಲ ಮಕ್ಕಳು ಹಾಗೇ. ಅದರಲ್ಲೂ ಮೊದಲ ಮಗು ಕೊಂಚ ನಿಧಾನ' ಅಂದರು ಹಿರಿಯರು.

ಆರು ತಿಂಗಳುಗಳಾದವು. ಕತ್ತು ಕೊಂಚ ಸ್ಥಿರವಾಗಿದ್ದರೂ, ಉಳಿದೆಲ್ಲ ವಿಷಯಗಳಲ್ಲಿ ಅದಿನ್ನೂ ಹಸುಗೂಸೇ.

'ಕೆಲ ಮಕ್ಕಳು ಹಾಗೇ. ನಿಧಾನವಾಗಿ ಪ್ರತಿಕ್ರಿಯಿಸುತ್ತವೆ' ಅಂದರು ಕೊಪ್ಪಳದ ಮಕ್ಕಳ ಡಾಕ್ಟರು.

ಎಂಟು ತಿಂಗಳಾದರೂ ಗೌರಿ ಅದೇ ಸ್ಥಿತಿಯಲ್ಲಿ ಉಳಿದಾಗ ಪಕ್ಕದ ಹೊಸಪೇಟೆಗೆ ಹೋಗಿ ಬೇರೊಬ್ಬ ಮಕ್ಕಳ ತಜ್ಞರಿಗೆ ತೋರಿಸಿದೆವು. ಕೆಲ ಪರೀಕ್ಷೆಗಳನ್ನು ಮಾಡಿ, ಗೌರಿಯ ತಲೆಯ ಗಾತ್ರವನ್ನು ಟೇಪ್‌ನಲ್ಲಿ ಅಳೆದ ಆ ವೈದ್ಯರು ಹೇಳಿದರು:

'ಈಕೆಯ ಮೆದುಳಿನ ಬೆಳವಣಿಗೆ ಸಹಜವಾಗಿಲ್ಲ. ಬುದ್ಧಿಮಾಂದ್ಯತೆಯ ಲಕ್ಷಣಗಳು ಕಾಣಿಸ್ತಿವೆ. ನೀವೊಮ್ಮೆ ತಲೆಯ ಸ್ಕ್ಯಾನ್ ಮಾಡಿಸೋದು ಉತ್ತಮ. ಹುಬ್ಬಳ್ಳಿ ಅಥವಾ ಬೆಂಗಳೂರಿಗೆ ಹೋಗಿ' ಎಂದರು.

ಮಗುವನ್ನು ಕರೆದುಕೊಂಡು ಹತ್ತಿರದ ಒಣಗಿದ ಪಾರ್ಕ್‌ನಲ್ಲಿ ಮೌನವಾಗಿ ಕೂತೆವು. ರೇಖಾ ನಿರಂತರವಾಗಿ ಅಳುತ್ತಿದ್ದರೆ, ನಾನು ಒಳಗೊಳಗೇ ಅಳುತ್ತ ಮಂಕಾಗಿ ಕೂತಿದ್ದೆ. ಗೌರಿಯೊಬ್ಬಳೇ ತನ್ನ ಪಾಡಿಗೆ ತಾನು ನಗುತ್ತಿದ್ದಿದ್ದಳು.

✶ ✶ ✶




ಧಾರವಾಡದ ಮಕ್ಕಳ ವೈದ್ಯರು ಆಕೆಯ ಮೆದುಳಿನ ಬೆಳವಣಿಗೆ ಅಸಮರ್ಪಕವಾಗಿದ್ದನ್ನು ಸ್ಕ್ಯಾನಿಂಗ್ ಮಾಡಿ ತೋರಿಸಿದರು. ಅಲ್ಲಿಗೆ ಚಿತ್ರಣ ಸ್ಪಷ್ಟವಾಗಿತ್ತು. ನಡೆಸುತ್ತಿದ್ದ ಪತ್ರಿಕೆ ಮುಚ್ಚಿ ರೇಖಾ ಮತ್ತು ಗೌರಿಯನ್ನು ಕರೆದುಕೊಂಡು ಬೆಂಗಳೂರಿಗೆ ಬಂದೆ. ದುಬಾರಿ ಬೆಂಗಳೂರಿನಲ್ಲಿ ಸಿಕ್ಕ ಸಿಕ್ಕ ಕೆಲಸ ಮಾಡುತ್ತ, ಅವರಿವರು ಶಿಫಾರಸು ಮಾಡಿಸಿದ ಆಸ್ಪತ್ರೆಗಳಲ್ಲಿ ಗೌರಿಯನ್ನು ತೋರಿಸಿದೆವು. ಪ್ರತಿಯೊಬ್ಬರೂ ದುಬಾರಿ ಶುಲ್ಕ ಪಡೆದುಕೊಂಡರೂ ನಿಖರ ಮಾಹಿತಿ ನೀಡಲಿಲ್ಲ. ಮೆದುಳು ಬೆಳವಣಿಗೆ ನಿಧಾನ. ಫಿಸಿಯೋಥೆರಪಿ ಮಾಡಿಸಬೇಕು. ಬೇರೆ ಬೇರೆ ಥೆರಪಿಗಳಿವೆ. ಗಂಟೆಗಳ ಲೆಕ್ಕದಲ್ಲಿ, ವಾರಕ್ಕೆ ನಿಮಗೆಷ್ಟು ಬೇಕೋ ಅಷ್ಟು ಗಂಟೆ ಥೆರಪಿ ಪಡೆಯಿರಿ. ಮಗು ಸ್ವಾವಲಂಬಿಯಾಗುವಂತೆ ಮಾಡಲು ಪ್ರಯತ್ನಿಸಬಹುದು ಅಂದರು. ಕೊನೆಗೆ ನಿಮ್ಹಾನ್ಸ್‌ನಲ್ಲಿಯೂ ಗೌರಿಯನ್ನು ತೋರಿಸಿದೆವು. ಅಲ್ಲಿಯೂ ಗೌರಿಯ ಅಸಲಿ ಸಮಸ್ಯೆ ಏನೆಂಬುದು ಸ್ಪಷ್ಟವಾಗಲಿಲ್ಲ. ನಿಮ್ಹಾನ್ಸ್ ನಿಜಕ್ಕೂ ಅತ್ಯುತ್ತಮ ಆಸ್ಪತ್ರೆಯೇ. ಆದರೆ, ಅದು ಪ್ರಬುದ್ಧರ ಮಾನಸಿಕ ಬೆಳವಣಿಗೆಯಲ್ಲಿ ತಜ್ಞ ಸಂಸ್ಥೆಯೇ ಹೊರತು, ಮಕ್ಕಳಿಗೆ ಅಲ್ಲ. ಬಹುಶಃ ಈಗಲೂ ಅದು ಹಾಗೇ ಇದೆ. ಈ ಎಲ್ಲ ಅಲೆದಾಟದಲ್ಲಿ ಗೊತ್ತಾದ ಒಂದೇ ಒಂದು ಅಂಶ ಎಂದರೆ, ಗೌರಿಯ ಮೆದುಳಿನ ಶೇ.೪೦ರಿಂದ ೪೫ ಭಾಗದಲ್ಲಿ ಚಟುವಟಿಕೆಯೇ ಇಲ್ಲ. ಮೆದುಳಿನ ಯಾವ್ಯಾವ ಭಾಗ ಬೆಳವಣಿಗೆಯಾಗಿಲ್ಲವೋ, ಆಯಾ ಭಾಗಗಳಿಗೆ ಸಂಬಂಧಿಸಿದ ದೈಹಿಕ ಹಾಗೂ ಮಾನಸಿಕ

ಚಟುವಟಿಕೆಗಳು ಮಂದವಾಗಿವೆ ಎಂಬುದು. ಮಗುವನ್ನು ನೋಡಿದ್ದ ಒಂದೆರಡು ಕರುಣಾಮಯಿ ವೈದ್ಯರು, 'ಕೆಲವೊಂದು ಮಕ್ಕಳು ಹೀಗಿರುತ್ತಾರೆ. ಇದಕ್ಕೆ ಇಂಗ್ಲಿಷ್ ಪದ್ಧತಿಯಲ್ಲಿ ಯಾವುದೇ ಔಷಧಿ ಇಲ್ಲ. ಆಯುರ್ವೇದ ಪದ್ಧತಿಯಲ್ಲಿ ಔಷಧಿ ನೀಡುವುದಾಗಿ ಕೇಳಿದ್ದೇವೆ. ಬೇಕಾದರೆ ಪ್ರಯತ್ನಿಸಿ. ಆದರೆ, ಏನೇ ಮಾಡಿದರೂ ನೀವು ಆಕೆಗೆ ನಿಯಮಿತವಾಗಿ ಫಿಸಿಯೋಥೆರಪಿ ಮಾಡಿಸಬೇಕು. ನಿತ್ಯ ಮಗುವಿನೊಂದಿಗೆ ಸಹಜವಾಗಿ ಮಾತನಾಡುತ್ತ ಹೋಗಿ. ನಿರಂತರವಾಗಿ ಆಕೆಯ ಸಂಪರ್ಕದಲ್ಲಿರಿ. ತನಗೆ ಸಂಬಂಧಿಸಿದ ಪ್ರತಿಯೊಂದು ವಸ್ತುವಿನ ಸ್ಪರ್ಶ, ವಾಸನೆ ಹಾಗೂ ಸಾಂಗತ್ಯವನ್ನು ಆಕೆ ಅನುಭವಿಸಲಿ. ಎಲ್ಲಕ್ಕಿಂತ ಮೊದಲು ನೀವು ಧೈರ್ಯ ತಂದುಕೊಳ್ಳಬೇಕು. ನೀವು ಎಷ್ಟು ಸಮಾಧಾನಿತರಾಗುತ್ತೀರೋ, ಪ್ರಬುದ್ಧರಾಗಿ ವರ್ತಿಸುತ್ತೀರೋ, ನಿಮ್ಮ ಮಗು ಅಷ್ಟರಮಟ್ಟಿಗೆ ಬೆಳೆಯಲು ಸಾಧ್ಯ. ಒಳ್ಳೆಯದಾಗಲಿ' ಎಂದರು. ಅವತ್ತು ಮತ್ತೆ ಅತ್ತಿದ್ದೆವು ಇಬ್ಬರೂ.

✷ ✷ ✷

ಗೌರಿ ಸಾಮಾನ್ಯ ಮಕ್ಕಳಂತಿಲ್ಲ ಎಂಬುದು ಅಲ್ಲಿಗೆ ಸ್ಪಷ್ಟವಾಗಿತ್ತು. ಅದು ನಮಗೆ ಆದ ಮೊದಲ ದೊಡ್ಡ ಆಘಾತ. ಏಕೆಂದರೆ, ಅಲ್ಲಿಯವರೆಗೆ ಬದುಕು ಹೀಗೂ ಇರಬಹುದು ಅಥವಾ ಆಗಬಹುದೆಂಬ ಸಣ್ಣ ಯೋಚನೆಯೂ ಇದ್ದಿಲ್ಲ. ಬುದ್ಧಿ ಬಲಿಯದ ಯಾವ ಮಕ್ಕಳನ್ನೂ ಅದುವರೆಗೆ ಹತ್ತಿರದಿಂದ ನೋಡಿದ್ದಿಲ್ಲ. ಅಂಥ ಕುಟುಂಬಗಳ ಪರಿಚಯವೂ ಇದ್ದಿಲ್ಲ. ಪತ್ರಕರ್ತನಾಗಿದ್ದರಿಂದ, ಇಂಥ ಮಕ್ಕಳ ಕುರಿತು ಆಗಾಗ ಫೋಟೊ, ಒಂದೆರಡು ಸಣ್ಣಪುಟ್ಟ ಮಾಹಿತಿಯಿಲ್ಲದ ವರದಿಗಳನ್ನು ಮಾತ್ರ ನೋಡಿದ್ದ ನಾನು ನಿಜಕ್ಕೂ ಆಘಾತಗೊಂಡಿದ್ದೆ. ಇದಕ್ಕೆ ಪರಿಹಾರ ಏನೆಂಬುದನ್ನು ನಿಮ್ಹಾನ್ಸ್ ಸಹಿತ ನಾವು ಹೋಗಿದ್ದ ಯಾವೊಂದು ಆಸ್ಪತ್ರೆಯೂ ಖಚಿತವಾಗಿ ಹೇಳಿದ್ದಿಲ್ಲ. ಈಕೆ ದೇವರಿಗೆ ಹರಕೆ ಹೊತ್ತೆವು. ನಾನು ತಜ್ಞರ ಶೋಧದಲ್ಲಿ ತೊಡಗಿದೆ. ಭರವಸೆ ಹುಟ್ಟಿಸಿದ ಪ್ರತಿಯೊಬ್ಬ ವೈದ್ಯರಲ್ಲೂ ತೋರಿಸಿದೆವು. ಅವರ ಚಿಕಿತ್ಸಾ ವಿಧಾನಗಳನ್ನು ಅನುಸರಿಸಿದೆವು. ನಿಮ್ಹಾನ್ಸ್‌ನಲ್ಲೇ ಇದ್ದ ಆಯುರ್ವೇದ ವಿಭಾಗದಲ್ಲಿ ವಾರಪೂರ್ತಿ ಚಿಕಿತ್ಸೆ ಆಯಿತು. ಅವನ್ನೇ ಮನೆಯಲ್ಲೂ ಮಾಡುತ್ತ ಹೋದೆವು. ಊಹೂಂ. ಅವ್ಯಾವುವೂ ತಕ್ಷಣದ ಭರವಸೆ ಮೂಡಿಸಲಿಲ್ಲ. ಹೋಮಿಯೋಪತಿ ಚಿಕಿತ್ಸೆಯ ಬೆನ್ನು ಹಿಡಿದು ಹುಬ್ಬಳ್ಳಿ, ಪುಣೆ ಎಂದೆಲ್ಲಾ ಓಡಾಡಿದೆವು. ಯಾವುದೂ ಕೈ ಹಿಡಿಯಲಿಲ್ಲ. ಅಷ್ಟೊತ್ತಿಗೆ ಪ್ರಜಾವಾಣಿ ಸೇರಿಕೊಂಡಿದ್ದ ನಾನು ಧಾರವಾಡಕ್ಕೆ ವರ್ಗ ಕೇಳಿ ಪಡೆದೆ. ಹೋದಲ್ಲೆಲ್ಲ ದೇವರು, ಶಾಸ್ತ್ರದವರು, ತಜ್ಞರು ಎಂದೆಲ್ಲಾ ಅಲೆದೆವು. ಇವೆಲ್ಲ ಪ್ರಯೋಗಗಳು ಫಲ ನೀಡದೇ ಹೋದಾಗ ಕೆಲ ಕರುಣಾಮಯಿ ವೈದ್ಯರು ಹೇಳಿದ್ದ ಮಾತುಗಳು ನೆನಪಾದವು. ಸಾಮಾನ್ಯ ಮಗುವಿನೊಂದಿಗೆ ಮಾತಾಡುವಂತೆ ಗೌರಿಯೊಂದಿಗೆ ಮಾತಾಡುವುದು ಶುರುವಾಯ್ತು. ಫಿಸಿಯೋಥೆರಪಿ ಪ್ರಾರಂಭಿಸಿದೆವು. ವಿಶೇಷ ಶಾಲೆಗೂ ಗೌರಿಯನ್ನು ಸೇರಿಸಿದೆವು. ಬದುಕು ನಿಧಾನವಾಗಿ ತಿರುಗಲು ಶುರುವಾಯ್ತು.

✷ ✷ ✷

ಗೌರಿ ಕೂಡಲು ಕಲಿತಿದ್ದು ಎರಡು ವರ್ಷಗಳ ನಂತರ. ಅಂಬೆಗಾಲಿಟ್ಟಿದ್ದು ನಾಲ್ಕು ವರ್ಷಗಳಿಗೆ. ತಡವರಿಸುತ್ತ ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟಿದ್ದು ಆರು ವರ್ಷಗಳ ನಂತರ. ಇವತ್ತಿಗೂ ಆಕೆ ನಮ್ಮ ಕಣ್ಣನ್ನು ೨–೩ ಸೆಕೆಂಡ್‌ಗಳಿಗಿಂತ ಹೆಚ್ಚು ನೋಡುವುದಿಲ್ಲ. ಕೆಲವು ಶಬ್ದಗಳನ್ನು ಬಿಟ್ಟರೆ ಬೇರೆ ಶಬ್ದಗಳನ್ನು ಆಡಿಲ್ಲ. ಇವತ್ತಿಗೂ ನಡಿಗೆ ಅಸಹಜ. ತೀರಾ ಪರಿಚಯದವರ ಹತ್ತಿರ ಕೊಂಚ ಬೆರೆಯುವುದನ್ನು ಬಿಟ್ಟರೆ, ತನ್ನದೇ ಓರಗೆಯ ಇತರ ಮಕ್ಕಳೊಂದಿಗೆ ಬೆರೆಯುವುದಿಲ್ಲ. ಗುಂಪಿನಲ್ಲಿದ್ದರೂ ಆಕೆ ಒಂಟಿಯೇ.

ಆಟಿಸಂ ಮತ್ತು ಬುದ್ಧಿಮಾಂದ್ಯತೆಗಳೆರಡರ ಲಕ್ಷಣಗಳನ್ನೂ ಆಕೆಯಲ್ಲಿ ಗುರುತಿಸಿದ್ದಾರೆ ತಜ್ಞರು. ಈಗ ವಿಶೇಷ ಶಾಲೆಗೆ ಹೋಗುತ್ತಿದ್ದಾಳೆ. ಫಿಸಿಯೋಥೆರಪಿ, ಸ್ಪೀಚ್ ಥೆರಪಿ ಮುಂತಾದುವೆಲ್ಲ ನಡೆದಿವೆ. ಈಗ ಆಕೆಗೆ ತಿಳಿವಳಿಕೆ ನಿಧಾನವಾಗಿ, ಬಲು ನಿಧಾನವಾಗಿ ಬೆಳೆಯುತ್ತಿದೆ. ಕೆಲವೊಂದು ಸರಳ ಮಾತುಗಳು ಅರ್ಥವಾಗುತ್ತವೆ. ಕೆಲವು ಸರಳ ಕೆಲಸಗಳನ್ನು ಮಾಡುತ್ತಾಳೆ. ಇವತ್ತಿಗೆ ಹದಿನಾಲ್ಕು ವರ್ಷಗಳಾಗುತ್ತ ಬಂದಿದ್ದರೂ ಗೌರಿ ನಮ್ಮ ಪಾಲಿಗೆ ಒಂದೆರಡು ವರ್ಷದ ಮಗು.

✷ ✷ ✷

ಎಷ್ಟೋ ಸಾರಿ ಯೋಚಿಸುತ್ತೇನೆ: ಮಾತೇ ಆಡದ ಈಕೆ ನಮಗೆ ಎಷ್ಟೊಂದು ಕಲಿಸಿದಳಲ್ಲ ಎಂದು. ಆಕೆ ಬದುಕಿನ ರೀತಿ ನೀತಿಗಳ ಬಗ್ಗೆ ನನಗಿದ್ದ ಎಷ್ಟೊಂದು ಭ್ರಮೆಗಳನ್ನು ಹೋಗಲಾಡಿಸಿದಳು! ವಾಸ್ತವ ಪ್ರಪಂಚದ ಮಗ್ಗುಲುಗಳನ್ನು ಪರಿಚಯಿಸಿದಳು. ನನಗೇ ಗೊತ್ತಿರದ ನನ್ನ ಮಿತಿ ಮತ್ತು ಸಾಮರ್ಥ್ಯವನ್ನು ತಿಳಿಸಿದಳು. ಕಿರಾಣಿ ಅಂಗಡಿಗೆ ಹೋಗಿ ರೇಶನ್ ತರಲು ಹಿಂಜರಿಯುತ್ತಿದ್ದ ರೇಖಾಳಿಗೆ ಇಡೀ ಬೆಂಗಳೂರನ್ನು ಕಾರಲ್ಲಿ ಸುತ್ತಿಬರುವಂತೆ ಮಾಡಿದಳು. ನಾನು ಕೆಲಸದ ಮೇಲೆ ಕೆಲಸಕ್ಕೆ ರಾಜೀನಾಮೆ ಬಿಸಾಡಿ ಬಂದು ಕೂತಾಗ, ಹೊಸ ಭರವಸೆ ಇನ್ನೂ ಇದೆ ಎಂಬುದನ್ನು ತೋರಿಸಿದಳು. ಮಂಕಾಗಿ ಕೂತವನಲ್ಲಿ ಹೊಸ ಕನಸು, ಸೋತ ಭಾವದ ಜಾಗದಲ್ಲಿ ಗೆಲುವಿನ ದಾರಿ ಮೂಡಿಸಿದಳು. ಅವಳು ಮೂಡಿಸಿದ ಸ್ಫೂರ್ತಿಯಿಂದ ರೇಖಾ ಮತ್ತೆ ಸಂಗೀತ ಕಲಿಯಲು, ದಿನಾ ಜಿಮ್‌ಗೆ ಹೋಗಲು, ನಾನು ವೃತ್ತಿಯ ಹೊಸ ಸಾಧ್ಯತೆಗಳತ್ತ ಮುಖ ಮಾಡಲು ಸಾಧ್ಯವಾಯಿತು. ಗೌರಿಯಂಥ ಮಗುವನ್ನು ನಾವೇ ನೋಡಿಕೊಳ್ಳಬೇಕೆಂಬ ಅನಿವಾರ್ಯತೆ ನಮ್ಮನ್ನು ನಿತ್ಯ ಚುರುಕಾಗಿರಿಸಿದೆ. ನಿತ್ಯ ಗೆಲುವಾಗಿರಿಸಿದೆ. ಅಪರಿಚಿತರಲ್ಲಿ ಆತ್ಮೀಯರನ್ನು ಹುಟ್ಟುಹಾಕಿದೆ. ಸವಾಲಿನ ಜಾಗದಲ್ಲಿ ಅವಕಾಶ, ಸೋಲಿನ ಜಾಗದಲ್ಲಿ ಹೊಸ ಯತ್ನವನ್ನು ಮೂಡಿಸಿದೆ. ಕಳೆದ ಹದಿಮೂರು ವರ್ಷಗಳಿಂದ ಅಂಥದೊಂದು ಪ್ರಯತ್ನ ನಡೆಸುತ್ತ, ಧೈರ್ಯ ತಂದುಕೊಳ್ಳುತ್ತ, ಸಮಾಧಾನಿತರಾಗಿ ಇರಲು ಯತ್ನಿಸುತ್ತ, ಪ್ರಬುದ್ಧತೆ ಗಳಿಸುವ ದಿಕ್ಕಿನಲ್ಲಿ ಬದುಕು ಸಾಗಿದೆ. ನಾವು ಬೆಳೆದಷ್ಟೂ ನಮ್ಮ ಮಗು ಬೆಳೆಯುತ್ತದೆ. ಹೀಗಾಗಿ ನಾವು ಪ್ರಬುದ್ಧರಾಗಲೇಬೇಕಿದೆ. ಸಾಮಾನ್ಯ ಬದುಕು ನೀಡುವುದಕ್ಕಿಂತ ಹೆಚ್ಚಿನ ಪಾಠವನ್ನು ನಮ್ಮ 'ಅಸಾಮಾನ್ಯ' ಮಗಳು ಕಲಿಸಿದ್ದಾಳೆ, ಕಲಿಸುತ್ತಿದ್ದಾಳೆ. ಪ್ರಬುದ್ಧತೆಯತ್ತ ನಮ್ಮನ್ನು ಕರೆದೊಯ್ಯುತ್ತಿದ್ದಾಳೆ.

ಮಾತೇ ಆಡದ ಗೌರಿ ನಮಗೆ ಬದುಕಲು ಕಲಿಸಿದ್ದಾಳೆ. ಭರವಸೆ ಮೂಡಿಸಿದ್ದಾಳೆ. ನಿತ್ಯ ಹೊಸದೊಂದನ್ನು ಕಲಿಸುತ್ತ, ಹೊಸ ಭರವಸೆ ಮೂಡಿಸುತ್ತ, ತನ್ನ ಪಾಡಿಗೆ ತಾನು ನಗುತ್ತಲೇ ಇದ್ದಾಳೆ.

ಥ್ಯಾಂಕ್ಸ್ ಗೌರಿ, ನೀನು ನಮ್ಮ ಮಗಳಾಗಿದ್ದಕ್ಕೆ, ನಮ್ಮ ಗುರುವಾಗಿದ್ದಕ್ಕೆ.

✷ ✷ ✷

ನಿಧಾನ ಬೆಳವಣಿಗೆಯ ಲಕ್ಷಣಗಳು

- **ಶಿಶುವಾಗಿದ್ದಾಗ**
  - ಮೇಲ್ನೋಟಕ್ಕೇ ಮಗು ಸಹಜ ಅನಿಸದು
  - ಕೆಲ ಮಕ್ಕಳಲ್ಲಿ ತಲೆಯ ಭಾಗ ಅಗತ್ಯಕ್ಕಿಂತ ದೊಡ್ಡದು ಅಥವಾ ಚಿಕ್ಕದಾಗಿರುವುದು
  - ಹುಬ್ಬುಗಳ ನಡುವಿನ ಭಾಗ ಸಾಮಾನ್ಯಕ್ಕಿಂತ ಹೆಚ್ಚೇ ಅಗಲ ಇರಬಹುದು
  - ಕಣ್ಣಿನತ್ತ ನೋಡುವ ಪ್ರಮಾಣ ತೀರಾ ಕಡಿಮೆ
  - ದೃಷ್ಟಿ ಎಲ್ಲೋ ಇರುವುದು
  - ವ್ಯಕ್ತಿಗಳಿಗಿಂತ ವಸ್ತುಗಳೆಡೆಗೆ ಹೆಚ್ಚು ಗಮನ
  - ಕರೆದಾಗ ಪ್ರತಿಕ್ರಿಯಿಸದಿರುವುದು
  - ಸಣ್ಣ ಶಬ್ದಕ್ಕೂ ಬೆಚ್ಚಿಬಿದ್ದು ಅಳುವುದು
  - ಕಾರಣವಿಲ್ಲದೇ ನಿರಂತರ ಅಳುವುದು
- **ವರ್ಷ ತುಂಬುವ ಮುನ್ನ**
  - ಹಾಲೂಡಿಸಿ, ಮಗುವನ್ನು ತೇಗಿಸಲು

**ಮಹತ್ವ**

ದೀಪ ಮಣ್ಣಿನದ್ದೋ ಚಿನ್ನದ್ದೋ<br>
ಎಂಬುದು ಬಾರದು ಗಣನೆಗೆ<br>
ಕತ್ತಲಲಿ ನೀಡುವ ಪ್ರಕಾಶವು<br>
ಮಾತ್ರ ಬರುವುದು ಗಣನೆಗೆ<br>
ಮಿತ್ರ ಬಡವನೋ ಶ್ರೀಮಂತನೋ<br>
ಎಂಬುದು ಬಾರದು ಗಣನೆಗೆ<br>
ಕಷ್ಟಕಾಲದಲಿ ಜೊತೆಗೆ ನಿಂತದ್ದು<br>
ಮಾತ್ರವೇ ಬರುವುದು ಗಣನೆಗೆ

**ಶ್ರೀನಿವಾಸ ಕುಂಡಂತಾಯ**<br>
ಸಂಜಯನಗರ<br>
ಬೆಂಗಳೂರು – ೫೬೦ ೦೯೪

(ಹಾಲಿನೊಂದಿಗೆ ಹೊಟ್ಟೆ ಸೇರಿದ ಗಾಳಿಯನ್ನು ಹೊರಹಾಕಲು) ಎದೆಗೊರಗಿಸಿ ಕೊಂಡಾಗ, ಕುಡಿದ ಹಾಲು ಅನಾಯಾಸವಾಗಿ ಹೊರಬರುವುದು. ಕೆಲವೊಮ್ಮೆ ಎರಡು–ಮೂರು ವರ್ಷಗಳವರೆಗೆ ಕುಡಿದ ಹಾಲು, ತಿಂದ ಆಹಾರವನ್ನು ಮಗು ಈ ರೀತಿ ಕಕ್ಕಿಕೊಳ್ಳಬಹುದು.

- ದೃಷ್ಟಿ ಸ್ಥಿರವಾಗಿರದು. ಮಾತಾಡಿಸಿದರೂ ನಿಮ್ಮತ್ತ ನೋಡುವುದಿಲ್ಲ. ಕಣ್ಣಿನೊಂದಿಗೆ ದೃಷ್ಟಿ ಬೆರೆಸುವುದಿಲ್ಲ.
- ಕಂಕುಳ ಕೆಳಗೆ ಕೈಯಿರಿಸಿ ನೆಲದ ಮೇಲೆ ನಿಲ್ಲಿಸಲು ಪ್ರಯತ್ನಿಸಿದರೆ ಕಾಲು ಊರುವುದಿಲ್ಲ. ಕಾಲ ಮೇಲೆ ಭಾರ ಹಾಕಿ ನಿಂತುಕೊಳ್ಳ ಲಾಗದಿರುವುದು.
- ಕತ್ತು ಬೇಗ ನಿಲ್ಲದು.
- ಪಕ್ಕಕ್ಕೆ ಹೊರಳಲು ಯತ್ನಿಸಲಿಕ್ಕಿಲ್ಲ. ನೀವಾಗಿ ಹೊರಳಿಸಿದರೂ ಮಗು ತಲೆ ಎತ್ತಲೂ ಕಷ್ಟಪಡಬಹುದು.
- ಕಾರಣವಿಲ್ಲದೇ ನಿರಂತರ ಅಳುವುದು.
- ಸುತ್ತಮುತ್ತಲಿನ ಬೆಳವಣಿಗೆಗೆ ಯಾವುದೇ ಸ್ಪಂದನೆ ತೋರದಿರುವುದು.
- ತಂದೆತಾಯಿಗಳನ್ನು, ಹತ್ತಿರದವರನ್ನು ಗುರುತಿಸದು.
- ತೊದಲು ಮಾತು ಬಾರದು.

**● ವರ್ಷದ ನಂತರ**

- ಮಗು ಸಹಜವಾಗಿಲ್ಲ ಎಂದು ಅನಿಸುವುದು.
- ಅಸ್ಥಿರ ದೃಷ್ಟಿ.
- ವರ್ಷ ತುಂಬಿದ್ದರೂ, ಸಹಜ ಮಕ್ಕಳಿಗಿರುವ ಹಲವಾರು ಸಾಮರ್ಥ್ಯಗಳು ಕಾಣದಿರುವುದು.
- ಕತ್ತು ನಿಂತಿದ್ದರೂ ಮಗು ಕತ್ತು ತಿರುಗಿಸಿ ನೋಡುವ ಪ್ರಯತ್ನ ಮಾಡದಿರುವುದು.
- ಮಗು ಮಲಗಿದ ಸ್ಥಿತಿಯಲ್ಲೇ ಇರುವುದು. ಪಕ್ಕಕ್ಕೆ ಹೊರಳುವ, ಹೊಟ್ಟೆಯ ಮೇಲಿದ್ದಾಗ ತಲೆ ಎತ್ತಿ ನೋಡುವ ಪ್ರಯತ್ನ ಬಹುತೇಕ ಕಡಿಮೆ.
- ಅಂಬೆಗಾಲಿಡುವ ಸಾಧ್ಯತೆಗಳು ಕಾಣಿಸವು.
- ತಂದೆತಾಯಿ ಅಥವಾ ಮನೆಯವರನ್ನು ಗುರುತಿಸದಿರುವುದು.
- ಮಾತಿಲ್ಲ. ಕೆಲ ಶಬ್ದಗಳನ್ನು ಹೊರಡಿಸಿದರೂ ಅವಕ್ಕೆ ಯಾವ ನಿರ್ದಿಷ್ಟ ಅರ್ಥವೂ ಇರದು.
- ಇತರರೊಂದಿಗೆ ಬೆರೆಯದಿರುವುದು.

ಕೆಲ ಮಕ್ಕಳು ನಾಲ್ಕೈದು ವರ್ಷಗಳಾದರೂ ಇದೇ ಸ್ಥಿತಿಯಲ್ಲಿರುತ್ತವೆ. ದೈಹಿಕ ಬೆಳವಣಿಗೆ ಚೆನ್ನಾಗಿದ್ದರೂ, ಬುದ್ಧಿ ಬೆಳವಣಿಗೆ ಕುಂಠಿತವಾಗಿರುತ್ತದೆ. ಕಣ್ಣಿನ ನೋಟ ಸ್ಥಿರವಾಗಿರುವ ಪ್ರಮಾಣ ತೀರಾ ಕಡಿಮೆ. ಇಂಥ ಮಕ್ಕಳು ಕಣ್ಣಲ್ಲಿ ಕಣ್ಣಿಟ್ಟು ನೋಡಲಾರರು. ನೋಡಿದರೂ, ಅದರ ಪ್ರಮಾಣ ಮೂರ್‍ನಾಲ್ಕು ಸೆಕೆಂಡ್‌ಗಿಂತ ಹೆಚ್ಚಿರದು. ಯಾವುದೇ ನಿರ್ದಿಷ್ಟ ವಸ್ತುವಿನ ಮೇಲೆ ಗಮನ ಇಡಲಾರರು. ಸುತ್ತಮುತ್ತಲಿನ ಬೆಳವಣಿಗೆಗಳಿಗೆ ಸ್ಪಂದಿಸರು. ಮುಗುಳ್ನಗು ಬೀರುವುದು ಬಲು ಅಪರೂಪ. ನಕ್ಕರೂ ಅದು ತನ್ನ ಪಾಡಿಗೆ ತಾನು. ಹೆಸರು ಹಿಡಿದು ಕೂಗಿದರೂ ಪ್ರತಿಕ್ರಿಯಿಸರು. ಒಬ್ಬರೇ ಇರಲು ಬಯಸುವರು. ದೈಹಿಕ ವಿಸರ್ಜನೆಗಳನ್ನು ಸ್ವತಂತ್ರವಾಗಿ ನಿಭಾಯಿಸರು. ಟಾಯ್ಲೆಟ್‌ಗೆ ಹೋಗಬೇಕಿದೆ ಎಂಬ ಸೂಚನೆ ಕೂಡ ನೀಡರು. ಆಟಿಕೆಗಳನ್ನು ಬಳಸಿ ಆಟವಾಡುವುದು ಕಡಿಮೆ. ಏನೇ ಕೊಟ್ಟರೂ ಅದನ್ನು ಕೈಯಲ್ಲಿ ಕೆಲ ಸೆಕೆಂಡ್‌ಗಳಿಗಿಂತ ಹೆಚ್ಚು ಹೊತ್ತು ಹಿಡಿದುಕೊಳ್ಳಲಾರರು. ಎಷ್ಟೋ ಮಕ್ಕಳಿಗೆ ಈ ಹಂತದಲ್ಲೂ ಸ್ವತಂತ್ರವಾಗಿ ಕೂಡಲು ಬಾರದು. ನಡೆಯುವುದಂತೂ ತೀರಾ ಅಪರೂಪ. ಸೂಕ್ತ ಫಿಸಿಯೋಥೆರಪಿ ಕೊಡಿಸದಿದ್ದರೆ, ಮಗು ಕೂಡುವ, ನಿಲ್ಲುವ, ನಡೆಯುವ ಸಾಮರ್ಥ್ಯ ಬರುವುದು ತೀರಾ ನಿಧಾನವಾಗಬಹುದು.

✶ ✶ ✶

**ನಿಧಾನ ಬೆಳವಣಿಗೆ**

ಅಸಹಜ ಮಗುವಿನ ಲಕ್ಷಣಗಳನ್ನು ಬಹುತೇಕರು ಬುದ್ಧಿಮಾಂದ್ಯ ಎಂಬ ಹೆಸರಿನಲ್ಲಿ ಗುರುತಿಸುತ್ತಾರೆ. ಆದರೆ, ಇದರಲ್ಲಿಯೂ ಹಲವಾರು ವಿಧಗಳಿವೆ. ಬುದ್ಧಿಮಾಂದ್ಯತೆ, ಆಟಿಸಂ, ಸೆರೆಬ್ರಲ್ ಪಾಲ್ಸಿ, ರೆಟ್ ಸಿಂಡ್ರೋಮ್, ನಿಧಾನ ಬೆಳವಣಿಗೆ (ಡೆವಲಪ್‌ಮೆಂಟಲ್ ಡಿಲೇ) ಎಂಬೆಲ್ಲ ವಿಧಗಳನ್ನು ತಜ್ಞರು ಗುರುತಿಸಿದ್ದಾರೆ. ಮಗು ಯಾವ ವಿಭಾಗಕ್ಕೆ ಸೇರುತ್ತದೆಂಬುದನ್ನು ಎಷ್ಟು ಬೇಗ ಗುರುತಿಸುತ್ತೇವೋ, ಅಷ್ಟು ಬೇಗ ಅದಕ್ಕೆ ಸಂಬಂಧಿಸಿದ ಚಿಕಿತ್ಸೆ ಪ್ರಾರಂಭಿಸಬಹುದು.

**ಒಂದಂತೂ ನಿಜ:** ನಿಮ್ಮ ಮಗುವಿನಲ್ಲಿ ಅಸಹಜ ಬೆಳವಣಿಗೆಗಳನ್ನು ಗುರುತಿಸಿದರೆ, ತಕ್ಷಣ ತಜ್ಞರ ಹತ್ತಿರ ತೋರಿಸಿ ಸಂಬಂಧಿಸಿದ ಚಿಕಿತ್ಸೆ ಪ್ರಾರಂಭಿಸಬೇಕು. ಇದರಿಂದ ಮಗು ಬೇಗ ಸಹಜ ಸ್ಥಿತಿಗೆ ಬರುವ ಸಾಧ್ಯತೆಗಳಿರುತ್ತವೆ. ಅದರಲ್ಲೂ ಮೊದಲ ಎರಡು ವರ್ಷಗಳು ತುಂಬ ಅಮೂಲ್ಯ. ಈ ಅವಧಿಯಲ್ಲಿ ಚಿಕಿತ್ಸೆ ಕೊಡಿಸಿದರೆ, ಮಗು ಮತ್ತಷ್ಟು ಅಸಹಜ ಸ್ಥಿತಿಗೆ ಹೋಗುವುದನ್ನು ಸಾಕಷ್ಟು ಪ್ರಮಾಣದಲ್ಲಿ ತಡೆಗಟ್ಟಬಹುದು.

✶ ✶ ✶

**ಮುಚ್ಚಿಡಬೇಡಿ**

ತುಂಬ ಜನ ತಂದೆತಾಯಿ, ತಮ್ಮ ಮಗು ಎಲ್ಲರಂತಿಲ್ಲ ಎಂಬ ಸತ್ಯವನ್ನು ಸುಲಭವಾಗಿ ಒಪ್ಪಿಕೊಳ್ಳರು. ನನಗೆ ತಿಳಿದಿರುವ ಹಾಗೆ, ಬಹುತೇಕ ತಂದೆತಾಯಿ, ಇಂಥ ಮಗು ಹುಟ್ಟಿದ್ದು ತಮ್ಮ ಕರ್ಮ ಎಂಬಂತೆ ಭಾವಿಸುತ್ತಾರೆ. ನಾನು ಬುದ್ಧಿವಂತ, ನನ್ನ ಹೆಂಡತಿ ಬುದ್ಧಿವಂತೆ, ನಮ್ಮನಮ್ಮ ತಲೆಮಾರುಗಳಲ್ಲಿ ಎಲ್ಲಿಯೂ ಇಂಥದೊಂದು ಮಗು ಹುಟ್ಟಿಲ್ಲ. ಇದ್ಹೇಗೆ ಹುಟ್ಟಿತು? ಎಂದು ಯೋಚಿಸುತ್ತಾರೆ. ಎಷ್ಟೋ ಜನ, ಇಂಥ ಮಗು ಹುಟ್ಟಲು ಹೆಂಡತಿ ಕಾರಣ ಎಂದೂ ದೂಷಿಸುತ್ತಾರೆ. ಇದಕ್ಕಾಗಿ ವಿಚ್ಛೇದನ ನೀಡಿದವರಿದ್ದಾರೆ. ಎಷ್ಟೋ ಜನ ದಂಪತಿ ಪರಸ್ಪರ ದೂರವಾಗಿದ್ದಾರೆ. ಕೆಲವರು ಮಗುವನ್ನು ಇಂಥ ಮಕ್ಕಳನ್ನು ನೋಡಿಕೊಳ್ಳುವ ನೆಪದಲ್ಲಿ ಹುಟ್ಟಿಕೊಂಡಿರುವ ಕೆಟ್ಟ ವಸತಿಸಹಿತ ಶಾಲೆಗಳಿಗೆ ಸೇರಿಸಿ ಕೈತೊಳೆದುಕೊಂಡಿದ್ದಾರೆ.

ಏಕೆಂದರೆ, ತಮಗೆ ಬುದ್ಧಿಮಾಂದ್ಯ ಅಥವಾ ದೈಹಿಕವಾಗಿ ಸಮಸ್ಯೆ ಇರುವ ಸೆರೆಬ್ರಲ್ ಪಾಲ್ಸಿ ಮಗು ಹುಟ್ಟಿದ್ದು ಅವಮಾನಕರ ಎಂದು ಇಂಥವರು

ಭಾವಿಸುವುದುಂಟು. ಇಂಥ ಎಷ್ಟೋ ಜನ ತಮ್ಮ ಮಗುವನ್ನು ಹೊರಜಗತ್ತಿಗೆ ಪರಿಚಯಿಸದೆ ಮುಚ್ಚಿಟ್ಟುಬಿಡುತ್ತಾರೆ. ಇಂತಹ ಮಗುವನ್ನು ಕೀಳಾಗಿ ನೋಡುವುದು, ಇದು ಹುಟ್ಟಿದ್ದೇ ನಮ್ಮ ಜೀವ ತಿನ್ನಲು ಎಂಬಂತೆ ಆಡುವುದು, ಅದನ್ನು ಸರಿಯಾಗಿ ನೋಡಿಕೊಳ್ಳದಿರುವುದು, ಸಾಮಾಜಿಕವಾಗಿ ಅದನ್ನು ದೂರವಿಡುವುದು ಮಾಡುತ್ತಾರೆ. ತಂದೆತಾಯಿಗಿಂತ ಹೆಚ್ಚಾಗಿ ಮನೆಯ ಸಂಬಂಧಿಕರು ಇಂಥ ವರ್ತನೆ ತೋರುವುದುಂಟು.



ಇಂಥ ತಂದೆತಾಯಿ ಸಾಮಾನ್ಯವಾಗಿ ಮಗುವಿಗೆ ಚಿಕಿತ್ಸೆ ಕೊಡಿಸಲು ಮುಂದಾಗುವುದು ಕಡಿಮೆ. ಕಾಟಾಚಾರಕ್ಕೆ ಚಿಕಿತ್ಸೆ ಕೊಡಿಸಬಹುದು. ಇನ್ನು ಕೆಲವರು, ದೇವರ ಮೇಲೆ ಭಾರ ಹಾಕಿ ಹರಕೆ ಹೊತ್ತುಕೊಂಡು ಸುಮ್ಮನಾಗುತ್ತಾರೆ. ಇಂಥ ಮಕ್ಕಳ ಶಾಲೆಗಳ ಶುಲ್ಕ ತೀರಾ ದುಬಾರಿಯಾದ್ದರಿಂದ ಹಾಗೂ ಎಲ್ಲಾ ಕಡೆ ಇಲ್ಲವಾದ್ದರಿಂದ, ಬಹಳಷ್ಟು ಪಾಲಕರಿಗೆ ಮಕ್ಕಳಿಗೆ ಚಿಕಿತ್ಸೆ ಅಥವಾ ತರಬೇತಿ ಕೊಡಿಸುವುದು ಆಗದು. ನನ್ನ ವೈಯಕ್ತಿಕ ಅನಿಸಿಕೆ ಏನೆಂದರೆ, ದಯವಿಟ್ಟು ಇಂಥ ತಪ್ಪುಗಳನ್ನು ಮಾಡಬೇಡಿ. ಮಗು ಹಾಗೆ ಆಗಿದ್ದಕ್ಕೆ ಬೇರೆ ಬೇರೆ ಕಾರಣಗಳಿವೆ. ಅದಕ್ಕೂ, ನಿಮ್ಮ ಸಾಮಾಜಿಕ ಅಂತಸ್ತಿಗೂ ಏನೂ ಸಂಬಂಧವಿಲ್ಲ. ನೀವು ಮಗುವನ್ನು ಮುಚ್ಚಿಡುವುದರಿಂದ ಅಥವಾ ದೂಷಿಸುವುದರಿಂದ ನಿಮ್ಮ ನೆಮ್ಮದಿ ಹಾಳಾಗುತ್ತದಷ್ಟೇ ಅಲ್ಲ, ಮಗು ಬೆಳವಣಿಗೆಯಾಗುವ ಸಾಧ್ಯತೆಗಳೂ ಇಲ್ಲವಾಗುತ್ತವೆ. ನಿಮ್ಮ ಮಗುವನ್ನು ಪ್ರೀತಿಯಿಂದ ನೋಡಿಕೊಳ್ಳಿ. ಅದಕ್ಕಿಂತ ಅತ್ಯುತ್ತಮ ಔಷಧಿ ಜಗತ್ತಿನಲ್ಲಿ ಇನ್ನೊಂದಿಲ್ಲ. ಆ ಪ್ರೀತಿ ಮಗುವನ್ನು ಸುಧಾರಿಸುವ ಸಾವಿರಾರು ದಾರಿಗಳನ್ನು ನಿಮಗೆ ತೋರಿಸಿಕೊಡುತ್ತದೆ. ಇಂಥ ಮಕ್ಕಳನ್ನು ಹೊಂದಿರುವ ಸಾವಿರಾರು ತಂದೆತಾಯಿಯರನ್ನು ಪರಿಚಯಿಸುತ್ತದೆ. ಹುಡುಕುತ್ತ ಹೋದಂತೆ, ನಿಮ್ಮ ಮಗುವಿನ ಬೆಳವಣಿಗೆಗೆ ನೆರವಾಗುವ ಅತ್ಯುತ್ತಮ ದಾರಿಯೊಂದು ನಿಮಗೆ ಸಿಕ್ಕಿಬಿಡಬಹುದು.

* * *

**ಕೆಟ್ಟ ತಂದೆತಾಯಿ ಇದ್ದಾರೆ**

ಸ್ವಾಮಿ ವಿವೇಕಾನಂದರು ಒಂದು ಮಾತು ಹೇಳಿದ್ದಾರೆ: ಜಗತ್ತಿನಲ್ಲಿ ಕೆಟ್ಟ ತಂದೆ ಇರಬಹುದು. ಆದರೆ, ಕೆಟ್ಟ ತಾಯಿ ಇರಲಾರಳು.

ನನ್ನ ಅನುಭವದಲ್ಲಿ ಹೇಳುವುದಾದರೆ, ಒಂದಲ್ಲ, ಹಲವಾರು ಕೆಟ್ಟ ತಾಯಂದಿರನ್ನು ನೋಡಿದ್ದೇನೆ. ಬುದ್ಧಿಮಾಂದ್ಯ ಮಗು ಹುಟ್ಟಿದೆ ಎಂಬ ಕಾರಣಕ್ಕೆ ಅದನ್ನು ಕೀಳಾಗಿ ನೋಡುವ, ಅದನ್ನು ಸರಿಯಾಗಿ ನೋಡಿಕೊಳ್ಳದ, ಇದೊಂದು ಪೀಡೆ ಎಂಬಂತೆ ವರ್ತಿಸುವ ತಾಯಂದಿರನ್ನು ನೋಡಿದ್ದೇನೆ. ಮಗುವನ್ನು ಕೂಡಿಹಾಕುವ ಅಥವಾ ಅದನ್ನು ಯಾವುದಾದರೂ ವಸತಿಶಾಲೆಗೆ ಹಾಕಿ ತನ್ನ ಪಾಡಿಗೆ ತಾನು ಜೀವನವನ್ನು ಆಸ್ವಾದಿಸುವ ಕೆಟ್ಟ ತಾಯಂದಿರನ್ನು ಕಂಡಿದ್ದೇನೆ. ಅಫ್ ಕೋರ್ಸ್, ಇಂಥ ಕೆಟ್ಟ ತಂದೆಯರೂ ಬೇಕಾದಷ್ಟಿದ್ದಾರೆ. ತೀರಾ ಇತ್ತೀಚೆಗೆ ಮೃತಪಟ್ಟ ಹಾಗೂ ಮಾಧ್ಯಮಗಳಿಗೆ ಸಾಕಷ್ಟು ಪರಿಚಯ ಇರುವ ವ್ಯಕ್ತಿಯೊಬ್ಬ ತನ್ನ ಒಂದು ಮಗು ಹೀಗೆ ಹುಟ್ಟಿತ್ತು ಎಂಬ ಕಾರಣಕ್ಕೆ, ಕಾನೂನು ವ್ಯಾಪ್ತಿಗೆ ಸಿಲುಕದ ರೀತಿ ಮಗುವನ್ನು ಸಾಯುವಂತೆ ನೋಡಿಕೊಂಡಿದ್ದನ್ನೂ ನಾನು ಕೇಳಿದ್ದೇನೆ. ಆದರೆ, ನೆನಪಿಡಿ: ಮಗು ಹಾಗಾಗಿರುವುದಕ್ಕೆ ಅದರ ತಪ್ಪೇನೂ ಇಲ್ಲ. ತಾನು ಹೀಗಾಗಬೇಕೆಂದು ಅದೇನೂ ಪ್ರಯತ್ನಿಸಿ ಹುಟ್ಟಿಲ್ಲ. ನೀವು ಹೀಗೆ ಅದನ್ನು ತಿರಸ್ಕರಿಸುವುದರಿಂದ ಸಮಸ್ಯೆ ಇಲ್ಲವಾಗದು.

* * *

**ಏನು ಕಾರಣ?**

ಮಗು ಬುದ್ಧಿಮಾಂದ್ಯವಾಗಲು ಅಥವಾ ಬೆಳವಣಿಗೆ ಕುಂಠಿತವಾಗಲು ಸಾಕಷ್ಟು ಕಾರಣಗಳಿವೆ. ಇದರಲ್ಲಿ ಹತ್ತಿರದ ಸಂಬಂಧದಲ್ಲಿ ಮದುವೆಯಾಗುವುದು ಒಂದು ಮುಖ್ಯ ಕಾರಣ. ಅತಿ ಹತ್ತಿರದ ಸಂಬಂಧಿಗಳನ್ನು ಮದುವೆಯಾಗುವುದರಿಂದ, ವಂಶವಾಹಿನಿ ದೋಷಗಳ ಕಾರಣದಿಂದ ಇಂಥ ಮಕ್ಕಳು ಹುಟ್ಟುವ ಸಾಧ್ಯತೆಗಳು ಹೆಚ್ಚು. ಇದರ ಹೊರತಾಗಿಯೂ ಸಾಕಷ್ಟು ಇತರ ಕಾರಣಗಳಿವೆ. ಗರ್ಭಿಣಿಯಾದ ಸಂದರ್ಭದಲ್ಲಿ ವಿಕಿರಣಕ್ಕೆ ಒಡ್ಡಿಕೊಂಡಿದ್ದರೆ, ಹೆಚ್ಚು ಪ್ರಮಾಣದ ಸಿಗರೇಟ್ ಅಥವಾ ಮದ್ಯ ಸೇವನೆ ಮಾಡಿದ್ದರೆ, ತುಂಬ ಚಿಂತೆ ಮಾಡಿದ್ದರೆ, ಗರ್ಭಪಾತಕ್ಕೆ ಯತ್ನಿಸಿ ವಿಫಲವಾಗಿದ್ದರೆ, ಮಗು ಜನಿಸುವಾಗ ಸಮಸ್ಯೆಗಳಾಗಿದ್ದರೆ, ಜನಿಸಿದ ಸಂದರ್ಭದಲ್ಲಿ ಮಗು ಅತ್ತಿರದಿದ್ದರೆ, ಮಗುವಿನ ಜನನ ಸಂದರ್ಭದಲ್ಲಿ ವೈದ್ಯರು ಇಕ್ಕಳ ಬಳಸಿ ಮಗುವನ್ನು ಹೊರತೆಗೆಯುವಾಗ ಹೆಚ್ಚು ಒತ್ತಡ ಹಾಕಿದ್ದರೆ, ನವಜಾತ ಶಿಶು ಆಕಸ್ಮಿಕವಾಗಿ ಕೈಜಾರಿ ಬಿದ್ದಿದ್ದರೆ, ತಲೆಗೆ ಪೆಟ್ಟಾಗಿದ್ದರೆ ಆಗ ಬುದ್ಧಿಮಾಂದ್ಯವಾಗುವ ಸಾಧ್ಯತೆಗಳು ದಟ್ಟ.

* * *

**ಮೋಸ ಹೋಗಬೇಡಿ**

ಬುದ್ಧಿಮಾಂದ್ಯ ಮಕ್ಕಳಿರುವ ತಂದೆತಾಯಿ ಸಾಮಾನ್ಯವಾಗಿ ಮಾನಸಿಕವಾಗಿ ಮೆತ್ತಗಾಗಿರುತ್ತಾರೆ. ಇಂಥ ಸಂದರ್ಭದಲ್ಲಿ, ಮಗು ಸಹಜವಾಗಬಹುದು ಎಂಬ ಯಾವುದೇ ಸಲಹೆಯನ್ನು ಹೆಚ್ಚು ಪರೀಕ್ಷೆಯಿಲ್ಲದೆ ಸ್ವೀಕರಿಸುವ ಮನಃಸ್ಥಿತಿಯಲ್ಲಿರುತ್ತಾರೆ. ಹೀಗಾಗಿ, ಇಂಥ ಮನಃಸ್ಥಿತಿಯ ತಂದೆತಾಯಿಗಳನ್ನು ವಂಚಿಸುವವರೂ ದೊಡ್ಡ ಪ್ರಮಾಣದಲ್ಲಿದ್ದಾರೆ. ದೇವರ ಹೆಸರು ಹೇಳಿಕೊಂಡು ಹೊಟ್ಟೆ ಹೊರೆಯುವವರು, ಅರೆಬರೆ ವೈದ್ಯಕೀಯ ಓದಿಕೊಂಡವರು, ಪಾರಂಪರಿಕ ಔಷಧಿ ಕೊಡುವವರು, ಜ್ಯೋತಿಷಿಗಳು, ಶಾಸ್ತ್ರ ಹೇಳುವವರು, ಕೆಲವು ಪರಮ ಆಸ್ತಿಕರು, ಪಕ್ಕಾ ವಂಚಕರು – ಹೀಗೆ ತುಂಬ ಜನ, ತಂತಮ್ಮ ವ್ಯಾಪ್ತಿಯಲ್ಲಿ ಬುದ್ಧಿಮಾಂದ್ಯ ಮಕ್ಕಳನ್ನು ಹೊಂದಿರುವ ಪಾಲಕರಿಂದ ಹಣ ಕೀಳಲು ನಾನಾ ಮಾರ್ಗಗಳನ್ನು ಸೂಚಿಸುತ್ತಾರೆ. ಒಂದಂತೂ ನಿಜ: ಬುದ್ಧಿಮಾಂದ್ಯ ಮಕ್ಕಳನ್ನು ಸಹಜ ಮಕ್ಕಳಾಗಿಸುವ ಯಾವೊಂದು ಔಷಧವೂ ಇಲ್ಲ. ಯಾವ ಆಪರೇಶನ್ನೂ ಇಲ್ಲ. ಆಕರಕೋಶ (ಸ್ಟೆಮ್ ಸೆಲ್) ಚಿಕಿತ್ಸೆ ಸಹ ಕೆಲಸ ಮಾಡದು. ಹೀಗಾಗಿ, ಔಷಧ ಅಥವಾ ವೈದ್ಯಕೀಯ ಚಿಕಿತ್ಸೆ ಮೂಲಕ ಗುಣಪಡಿಸುವ ಯಾರ ಮಾತನ್ನೂ ನಂಬಬೇಡಿ. ನಂಬಿ ಹಣ ಮತ್ತು ನೆಮ್ಮದಿ ಕಳೆದುಕೊಳ್ಳಬೇಡಿ. ದೇವರಿಗೆ ಹರಕೆ ಹೊರುವುದರಿಂದ ಮನಃಶಾಂತಿ ಸಿಗುವುದಾದರೆ ಮಾಡಬಹುದು. ಆದರೆ, ಅದರಿಂದ ಗುಣಮುಖವಾಗುತ್ತದೆಂಬ ನಿರೀಕ್ಷೆ ಇಟ್ಟುಕೊಳ್ಳಬೇಡಿ. ನಿಮ್ಮ ಮಗುವನ್ನು ಪ್ರಯೋಗಪಶುವಾಗಿ ಮಾಡಬೇಡಿ. ಅವರಿವರು ಹೇಳಿದ್ದನ್ನೆಲ್ಲ ಮಗುವಿನ ಮೇಲೆ ಪ್ರಯೋಗಿಸುತ್ತ, ಅದನ್ನು ಇನ್ನಷ್ಟು ದುಃಸ್ಥಿತಿಗೆ ತಳ್ಳಬೇಡಿ.

ಅತ್ಯುತ್ತಮ ಔಷಧಿ ಎಂದರೆ ಪ್ರೀತಿ. ನಿಮ್ಮ ಮಗುವನ್ನು ಪ್ರೀತಿಯಿಂದ ನೋಡಿಕೊಳ್ಳಿ. ಫಿಸಿಯೋಥೆರಪಿ, ಫಿಟ್ಸ್ (ಮೂರ್ಛೆ) ಬರುತ್ತಿದ್ದರೆ ಅದಕ್ಕೆ ನೀಡಬೇಕಾದ ಔಷಧ, ಆರೋಗ್ಯಕರ ಆಹಾರ, ಸದಾ ಅದರೊಂದಿಗೆ ಸಾಮಾನ್ಯ ಮಕ್ಕಳೊಂದಿಗೆ ಮಾತನಾಡುವ ರೀತಿ ಮಾತನಾಡುವುದು, ತಜ್ಞರು ಸೂಚಿಸುವ ವಿಧಾನಗಳನ್ನು ಅನುಸರಿಸುವ ಮೂಲಕ, ಮಗುವನ್ನು ಸ್ವಾವಲಂಬನೆಯತ್ತ ಕರೆತರಲು ಖಂಡಿತ ಸಾಧ್ಯವಿದೆ.

**ಚಾಮರಾಜ ಸವಡಿ**
ಪತ್ರಕರ್ತ, ಕನ್ನಡ ಪ್ರಭ
ಕ್ರೆಸೆಂಟ್ ರೋಡ್, ಮಲ್ಲಿಗೆ ನರ್ಸಿಂಗ್ ಹೋಮ್ ಎದುರು
ಬೆಂಗಳೂರು – ೫೬೦ ೦೦೧

# ಖಗೋಳ ಮತ್ತು ನಾವಿಕರು



*ಜೆರುಸಲೆಂ ಅಕ್ಷಾಂಶ ಕಂಡುಹಿಡಿಯುವ ಉಪಾಯ*

**ಜೆರುಸಲೆಂಗೆ ಪಯಣಿಸುತ್ತಿದ್ದ ಯಾತ್ರಿಕರು ಮರಳುಗಾಡಿನಲ್ಲಿ ನಡೆದು ದಿಕ್ಕುಕಾಣದಂತಾದಾಗ ಧ್ರುವನಕ್ಷತ್ರದ ಎತ್ತರವನ್ನು ಅಳೆಯಲು ಅಂಗಾತ ಮಲಗಿ ಮೊಣಕಾಲನ್ನು ಮಡಚುತ್ತಿದ್ದರು. ತೋಳನ್ನು ಚಾಚಿ ಮಂಡಿಯ ನೇರಕ್ಕೆ ಹಿಡಿದಾಗ ಧ್ರುವ ನಕ್ಷತ್ರ ಕಂಡರೆ ಸರಿಯಾದ ಅಕ್ಷಾಂಶದಲ್ಲಿದ್ದೇವೆ; ನೇರವಾಗಿ ಪೂರ್ವಕ್ಕೆ ನಡೆಯಬೇಕು ಎಂದರ್ಥ.**

ಅಪೋಲೋ ೧೩ ಎಂಬ ಬಾಹ್ಯಾಕಾಶ ನೌಕೆ ಗುರಿ ಮುಟ್ಟದೆ ಹಿಂದಿರುಗಬೇಕಾಗಿ ಬಂದದ್ದು ಹಳೆಯ ಕತೆ. ಅದನ್ನು ೧೩ ಎಂಬ ಸಂಖ್ಯೆಯ ಕುರಿತ ಮೂಢನಂಬಿಕೆಯನ್ನು ಪುಷ್ಟೀಕರಿಸುವುದಕ್ಕೆ ಯಥೇಚ್ಛವಾಗಿ ಬಳಸಿಕೊಂಡು ಜನಪ್ರಿಯಗೊಳಿಸಿದ್ದು ಕೂಡ ಹಳೆಯ ಕತೆಯೇ. ಆದರೆ ಅದರಲ್ಲಿನ ಯಾತ್ರಿಗಳು ಭೂಮಿಯ ಮೇಲಿಳಿದಿದ್ದು ಚಮತ್ಕಾರ ಎಂಬಂತೆ ಬಿಂಬಿಸಿದ್ದು ಮಾತ್ರ ಮರೆತ ಅಧ್ಯಾಯ. ನಕ್ಷತ್ರಗಳೇ ದಿಕ್ಸೂಚಿಗಳೆಂಬ ಅವರ ತಿಳುವಳಿಕೆಯೇ ಅವರನ್ನು ಉಳಿಸಿತು.

ಧ್ರುವ ನಕ್ಷತ್ರದ ಎತ್ತರವನ್ನು ಅಳೆದು ಭೂಗೋಳದ ಮೇಲೆ ತಾವೆಲ್ಲಿದ್ದೇವೆ ಎಂದು ಕಂಡುಕೊಳ್ಳುವುದು ಬಹಳ ಪುರಾತನ ತಿಳುವಳಿಕೆ (ಇಂದಿನವರು ಅದನ್ನು ಮರೆತಿದ್ದಾರೆ ಎಂಬ ಸಂಗತಿ ಬೇರೆ. ಏಕೆಂದರೆ ೧೦೦ಕ್ಕೆ ೯೦ರಷ್ಟು ಜನ ಧ್ರುವ ನಕ್ಷತ್ರವನ್ನೇ ಗುರುತಿಸಲಾರರು. ಇನ್ನು ಅದರ ಎತ್ತರವನ್ನು ಅಳೆಯುವ ಮಾತು ದೂರವೇ ಉಳಿಯಿತು). ಸೂರ್ಯ ಮತ್ತು ಚಂದ್ರರ ಸ್ಥಾನಗಳನ್ನು ಅಳತೆ ಮಾಡಿ ತಿಳಿದು ಸಮಯ ಮತ್ತು ತಮ್ಮ ಸ್ಥಾನಗಳನ್ನು ತಿಳಿದುಕೊಳ್ಳುವ ವಿಧಾನಗಳು ಪ್ರತಿಯೊಂದು ಖಗೋಳ ಪಠ್ಯ ಪುಸ್ತಕದಲ್ಲಿಯೂ ಕಡ್ಡಾಯವಾಗಿ ಇರುತ್ತಿದ್ದವು. ಹಿಂದೆಯೂ ಅಷ್ಟೆ; ಇಂದಿಗೂ ಅಷ್ಟೆ. ಆದ್ದರಿಂದ ಪ್ರವಾಸಿಗಳು, ನಾವಿಕರ ಸರಕಿನ ನಡುವೆ ಪಂಚಾಂಗ ಮತ್ತು ಸರಳ ಉಪಕರಣಗಳು ಕಡ್ಡಾಯವಾಗಿ ಇರುತ್ತಿದ್ದವು. ಕೆಳದಿ ಸಂಸ್ಥಾನಕ್ಕೆ ೧೬ನೆಯ ಶತಮಾನದಲ್ಲಿ ಭೇಟಿಕೊಟ್ಟಿದ್ದ ಪಿಯತ್ರೋ ದ ಲಾ ವಿಲೆ ಸೂರ್ಯನ ಮಧ್ಯಾಹ್ನದ ಎತ್ತರ (ಉನ್ನತಾಂಶ)ವನ್ನು ಅಳೆದು ಕೆಳದಿ ಮತ್ತು ಇಕ್ಕೇರಿಗಳ ಅಕ್ಷಾಂಶವನ್ನು ಲೆಕ್ಕ ಮಾಡಿ ಬರೆದಿಟ್ಟಿದ್ದಾನೆ.

ಭಾರತೀಯ ಖಗೋಳ ಶಾಸ್ತ್ರಗಳ ಪುಸ್ತಕಗಳಲ್ಲಿ "ತ್ರಿಪ್ರಶ್ನಾಧಿಕಾರ" ಎಂಬ ಪರಿಚ್ಛೇದಗಳು ಇರುತ್ತಿದ್ದವು. ಭಾರತೀಯ ಖಗೋಳ ಶಾಸ್ತ್ರ ಎಂದೊಡನೆ ಸಾಮಾನ್ಯವಾಗಿ ಆರ್ಯಭಟ, ಭಾಸ್ಕರ ಎಂಬ ಹೆಸರುಗಳು ನೆನಪಾಗುವುವು. ಕೆಲವರಿಗೆ ಗಣೇಶ ದೈವಜ್ಞನ ಹೆಸರೂ ನೆನಪಾಗಬಹುದು. ಅಂದರೆ, ಖಗೋಳಶಾಸ್ತ್ರವು ಬ್ರಾಹ್ಮಣ ಸಮುದಾಯದ "ಸ್ವತ್ತೇ" ಆಗಿತ್ತು ಎಂಬ ಅಭಿಪ್ರಾಯ ಬರುತ್ತದೆ. ಆರ್ಯಭಟನು ಬ್ರಾಹ್ಮಣನಲ್ಲ; ಭಟ ಮಾತ್ರ. (ಭಟ್ಟ ಎಂದು ಕೆಲವರು ತಪ್ಪಾಗಿ ಬರೆಯುತ್ತಾರೆ).

ಉಳಿದ ಯಾವುದೇ ಜನಾಂಗದವರಿಗೆ ಖಗೋಳಜ್ಞಾನದ ಅವಶ್ಯಕತೆಯೇ ಇರಲಿಲ್ಲವೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಜಾನಪದದ ಉಕ್ತಿಗಳಲ್ಲಿ ನಕ್ಷತ್ರಗಳ ಹೆಸರು ನುಸುಳಿರುವುದನ್ನು ಗಮನಿಸಿದಾಗ ಉತ್ತರ ಹೊಳೆಯುವುದು. ಕೃಷಿಕರಿಗೆ ಅತ್ಯವಶ್ಯವಾಗಿದ್ದ ಮಳೆಯ ಬರುಹೋಗುವಿಕೆಯನ್ನು ಅವರು ನಕ್ಷತ್ರಗಳಿಂದಲೇ ಗುರುತಿಸಿಕೊಳ್ಳುತ್ತಿದ್ದರು. ವಾಸ್ತವದಲ್ಲಿ ಮಳೆ ನಕ್ಷತ್ರ ಎಂಬುದು ಸೂರ್ಯನ ಸ್ಥಾನವನ್ನು ಆಕಾಶದಲ್ಲಿ ಕಂಡುಹಿಡಿಯುವ ಉಪಾಯ. ಭಾರತೀಯರಲ್ಲಿ ಮೂಲತಃ ಬಳಕೆಯಲ್ಲಿದ್ದುದು ೨೭ ನಕ್ಷತ್ರಗಳ ಪಂಚಾಂಗ ಮಾತ್ರ (ಇಲ್ಲಿ ಪಂಚಾಂಗ ಎಂದರೆ ಕ್ಯಾಲೆಂಡರ್ ಎಂದರ್ಥ – ಐದು ಅಂಗಗಳ ಪಂಚಾಂಗ ಅಲ್ಲ). ಈಗ ಬಳಸುತ್ತಿರುವ ೧೨ ರಾಶಿಗಳ ಕ್ಯಾಲೆಂಡರ್ ಹೊರಗಿನಿಂದ ಆಮದಾದ ಮೇಲೆ ಪಠ್ಯಪುಸ್ತಕಗಳಲ್ಲಿ ಸೇರಿತಾದರೂ, ಜಾನಪದಕ್ಕೆ ಸೇರಲಿಲ್ಲ. ಆದ್ದರಿಂದ ಕೃಷಿಕರ ನುಡಿಗಟ್ಟುಗಳು ಹಳೆಯ ಪದ್ಧತಿಯಲ್ಲಿ ಹಾಗೆಯೇ ಉಳಿದುಕೊಂಡು ಬಂದಿವೆ. ಹೀಗೆ ಜಾನಪದದಲ್ಲಿ ಬೆರೆತುಹೋಗಿರುವ ನಕ್ಷತ್ರಗಳ ಹೆಸರುಗಳು ಬಹುಮುಖ್ಯವಾದ ಚಾರಿತ್ರಿಕ ಅಂಶವೊಂದನ್ನು ಎತ್ತಿತೋರಿಸುತ್ತವೆ.

ಕೃಷಿಕರಲ್ಲದೇ ಇದ್ದರೂ ಆಕಾಶಜ್ಞಾನವನ್ನು ಬಳಸಿಕೊಂಡ ಇನ್ನೊಂದು

---

**ಬಿ. ಎಸ್. ಶೈಲಜಾ**

ವರ್ಗವೆಂದರೆ ನಾವಿಕರು ಮತ್ತು ಯಾತ್ರಿಗಳು.

ಜೆರುಸಲೆಂಗೆ ಪಯಣಿಸುತ್ತಿದ್ದ ಯಾತ್ರಿಕರು ಮರಳುಗಾಡಿನಲ್ಲಿ ನಡೆದು ದಿಕ್ಕುಕಾಣದಂತಾದಾಗ ಧ್ರುವನಕ್ಷತ್ರದ ಎತ್ತರವನ್ನು ಅಳೆಯಲು ಅಂಗಾತ ಮಲಗಿ ಮೊಣಕಾಲನ್ನು ಮಡಚುತ್ತಿದ್ದರು. ತೋಳನ್ನು ಚಾಚಿ ಮಂಡಿಯ ನೇರಕ್ಕೆ ಹಿಡಿದಾಗ ಧ್ರುವ ನಕ್ಷತ್ರ ಕಂಡರೆ ಸರಿಯಾದ ಅಕ್ಷಾಂಶದಲ್ಲಿದ್ದೇವೆ; ನೇರವಾಗಿ ಪೂರ್ವಕ್ಕೆ ನಡೆಯಬೇಕು ಎಂದರ್ಥ.

ನಾವಿಕರು ಧ್ರುವ ನಕ್ಷತ್ರದ ಎತ್ತರವನ್ನು ಅಳೆದದ್ದು ತಮ್ಮ ಸ್ಥಾನವನ್ನು ನಿರ್ಧರಿಸಿಕೊಳ್ಳಲು ಎಂಬ ಕಾರಣಕ್ಕಾಗಿಯೇ ಆದರೂ ಅವರು ಲೆಕ್ಕ ಮಾಡಲು ಹಲವಾರು ಸೂತ್ರಗಳನ್ನು ಕಂಡುಹಿಡಿದುಕೊಂಡದ್ದೇ ವಿಶೇಷ ಎನ್ನಬಹುದು. ಕೆರೋಲೀನ್ ದ್ವೀಪಸಮೂಹದ ಜನರು ಯಾವ ಯಾವ ದ್ವೀಪಕ್ಕೆ ಯಾವ ಯಾವ ನಕ್ಷತ್ರ ಸರಿಯಾಗಿ ನೆತ್ತಿಯ ಮೇಲಿರುತ್ತದೆ ಎಂದು ಗುರುತು ಮಾಡಿಕೊಂಡಿದ್ದರು. ಟ್ಯುನಿಸಿಯಾ ಸಮೀಪದ ಕೆರ್‌ಕೆನ್ನಾಹ್ ಎಂಬ ದ್ವೀಪದಲ್ಲಿ ಮೊನ್ನೆ ಮೊನ್ನೆಯವರೆಗೂ (೧೯೭೦) ನಕ್ಷತ್ರಗಳಿಂದ ದಿಕ್ಕು ಮಾತ್ರವಲ್ಲದೆ ಸಮಯವನ್ನೂ ಅಳತೆ ಮಾಡುತ್ತಿದ್ದರು.

ದ್ವೀಪಗಳ ನಡುವೆ ಸಣ್ಣ ಹಡಗು ಅಥವಾ ದೋಣಿಗಳಲ್ಲಿ ಓಡಾಡುತ್ತಿದ್ದ ನಾವಿಕರು ಉದ್ದೇಶಿತ ದ್ವೀಪ ತಲುಪಲು ಕ್ರಮಿಸಬೇಕಾದ ದೂರವನ್ನು ಅಂದಾಜು ಮಾಡಲು ಬಿದಿರಿನ ಕೊಳವೆಗೆ ನೀರು ತುಂಬಿಸಿ ಅಂಗೈಯಲ್ಲಿ ನಿಲ್ಲಿಸಿಕೊಂಡು ನಿಗದಿತ ನಕ್ಷತ್ರ ನೆತ್ತಿಗೆ ಬಂದಿದೆಯೇ ಎಂದು ಪರೀಕ್ಷಿಸುತ್ತಿದ್ದರು. ಬಿದಿರಿನ ಕೊಳವೆಯಿಂದ ನೀರು ಹೊರಚೆಲ್ಲಿದ ಪ್ರಮಾಣಕ್ಕೆ ಅನುಗುಣವಾಗಿ ಕ್ರಮಿಸಬೇಕಾದ ದೂರವನ್ನು ಲೆಕ್ಕಮಾಡುತ್ತಿದ್ದರು.

ಹೀಗೆ ನಾವಿಕರು ವಿಶೇಷವಾಗಿ ಬಳಸುತ್ತಿದ್ದ ಉಪಕರಣಗಳು ಹಾಗೂ ವಿಧಾನಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದರೆ ಎದ್ದುತೋರುವ ಆಶ್ಚರ್ಯಕರ ಸಂಗತಿಯೊಂದಿದೆ. ಅದೇ ಅವುಗಳಲ್ಲಿನ ಸಾಮ್ಯ. ಮೆಡಿಟರೇನಿಯನ್ ನಾವಿಕರು, ಭಾರತದ ಕರಾವಳಿಯ ನಾವಿಕರು ಅಲ್ಲದೆ ಇಂಡೋನೇಷಿಯದ ಬೂಗಿಸ್ ನಾವಿಕರು – ಎಲ್ಲರೂ ಒಂದೇ ರೀತಿಯ ಉಪಕರಣಗಳನ್ನು, ವಿಧಾನಗಳನ್ನು ರೂಢಿಗೊಳಿಸಿಕೊಂಡಿದ್ದರು. ಅವರ ಮಾರ್ಗ ಸೂಚಿಯ ವಿಧಾನವನ್ನು ತಿಳಿಸುವ ಉದಾಹರಣೆಗಳು ನೀಲಕಂಠಶಾಸ್ತ್ರಿಯವರ ಪುಸ್ತಕದಲ್ಲಿದೆ.

**ಕರೆ**

ಮೆಟ್ಟಿಕೊಂಡೇ
ಚಪ್ಪಲಿಯ
ಬೊಬ್ಬೆ ಹೊಡೆಯ
ಬೇಡ – ವ್ಯರ್ಥ
ಕಳಚಿಟ್ಟು
ಹೊರಗೆ ನಡೆ
ಬಿಟ್ಟು – ಸ್ವಾರ್ಥ

**ವ. ಉಮೇಶ್ ಕಾರಂತ್**
ಮಂಗಳೂರು – ೧

**ಆಡೆನ್‌ನಿಂದ ಗುಜರಾತ್‌ಗೆ ಹೋಗುವ ಮಾರ್ಗ**

ಆಡೆನ್‌ನಿಂದ ಪೂರ್ವದಿಕ್ಕಿಗೆ ಪ್ರಯಾಣ ಮಾಡಬೇಕು; ಆಡೆನ್‌ನ ಬೆಟ್ಟಗಳು ಕಾಣದಂತಾಗುವವರೆಗೂ ಅದೇ ದಿಕ್ಕಿಗೇ ಚಲಿಸಬೇಕು – ದಕ್ಷಿಣದಿಂದ ಒಂದು ರಾತ್ರಿ ಕಳೆದ ಮೇಲೆ ಉತ್ತರಕ್ಕೆ ತಿರುಗಬೇಕು – ದಕ್ಷಿಣದಿಂದ ಗಾಳಿ ಬೀಸುವವರೆಗೆ. ಆಮೇಲೆ ಈಶಾನ್ಯ ದಿಕ್ಕಿಗೆ ತಿರುಗಬೇಕು –––––– ಲೈರಾ (ಅಭಿಜಿತ್) ೫ ಅಂಗುಲ, ಸಾಜಿತಾ ೬ ಅಂಗುಲ, ಮುಂದೆ ಲೈರಾ ಮತ್ತು ಕನೋಪಸ್ (ಅಗಸ್ತ್ಯ) ಎರಡೂ ಮೂರುವರೆ ಅಂಗುಲ ಆಗುವವರೆಗೂ ಚಲಿಸಬೇಕು. ಸಮುದ್ರದಲ್ಲಿ ಹಾವುಗಳು ಬಹಳ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತಿದೆಯೇ ಎಂದು ಗಮನಿಸಬೇಕು. ಅಲ್ಲಿಂದ ಪೂರ್ವಕ್ಕೆ ಚಲಿಸಿ, ಪುನಃ ಈಶಾನ್ಯಕ್ಕೆ ತೀರ ಕಾಣುವವರೆಗೂ ಚಲಿಸಬೇಕು.

(ನೀಲಕಂಠಶಾಸ್ತ್ರಿಯವರ ಪುಸ್ತಕದಿಂದ)

ಏಳು ನಕ್ಷತ್ರಗಳ ಗುಂಪು ನಮ್ಮ ಜಾನಪದದಲ್ಲಿ ಅಜ್ಜಿಯ ಮಂಚವಾಗಿದೆ. ತಮಿಳರಲ್ಲಿ ಕಪ್ಪಲ್‌ವೆಳ್ಳಿ (ಹಡಗುನಕ್ಷತ್ರ), ಕೊಂಕಣಿಯಲ್ಲಿ ಪಲಂಗ್ ಚೋರ್ (ಮಂಚವನ್ನು ಕದ್ದೊಯ್ಯುವ ಕಳ್ಳ) ಈ ಹೆಸರುಗಳಿವೆ. ಪುನರ್ವಸುವನ್ನು ಶ್ರಾವು (ಶಾರ್ಕ್ ಮೀನು) ಒಡಕೋಲು (ತಮಿಳು) ಹುಟ್ಟುಗೋಲು ಎಂದು ಕರೆದಿದ್ದಾರೆ. ಕೃತ್ತಿಕಾ ನಕ್ಷತ್ರಗುಚ್ಛಕ್ಕೆ ಕೋಳಿಪಿಳ್ಳೆ, ಆರನ್‌ಕೊಟ್ಟೈ, ಆರ್‌ಮೀನ್, ಸಪ್ತರ್ಷಿಯ ಉತ್ತರ ಭಾಗದ ನಕ್ಷತ್ರಗಳಿಗೆ ಕಬಿಲ್ಲಿಮೀನ್, ಅಗಸ್ತ್ಯ ನಕ್ಷತ್ರಕ್ಕೆ ಪಲ್ಲಿಮೀನ್, ತ್ರಿಶಂಕುವಿಗೆ ಕುರಸುವೆಳ್ಳಿ, ವೇಲಾ (ನೌಕಾ) ಪುಂಜಕ್ಕೆ ಅಮಾವೆಳ್ಳಿ ಅಥವಾ ಕಡಲುವೆಳ್ಳಿ, ಒರೈಯನ್ ಪುಂಜದ ಮಧ್ಯದ ಮೂರು ನಕ್ಷತ್ರಗಳಿಗೆ, ಒಟ್ಟು ನಕ್ಷತ್ರಂ, ಮುಳಕ್ಕಮೀನ್ – ಹೀಗೆಲ್ಲಾ ಹೆಸರುಗಳಿವೆ.

ಅಗಸ್ತ್ಯ ನಕ್ಷತ್ರಕ್ಕೆ ಪಲ್ಲಿಮೀನು (ಹಲ್ಲಿಯಂತಿರುವ ಮೀನು, ಮೊಸಳೆ) ಎಂಬ ಹೆಸರೇನೋ ಇದೆ. ಆದರೆ, ಪ್ರಚಲಿತವಿರುವ ಇನ್ನೊಂದು ಹೆಸರು ಯೇಸುನಕ್ಷತ್ರಂ. ಏಕೆಂದರೆ, ಕ್ರಿಸ್‌ಮಸ್ ಹಬ್ಬದ ಆಚರಣೆಗೆ ಅದು ನಡುನೆತ್ತಿಗೆ ಬರುತ್ತದೆ. ಪಾಶ್ಚಾತ್ಯರ ಪ್ರಭಾವ ಈ ಹೆಸರಿನಲ್ಲಿ ಎದ್ದು ಕಾಣುತ್ತದೆ. ಹಾಗೆಯೇ ಕಪೆಲ್ಲಾ (ಬ್ರಹ್ಮಹೃದಯ)ಕ್ಕೆ ಕಿಬಿಲ್ಲಾ ಎಂಬ ಹೆಸರೂ ಹೀಗೆಯೇ ಪಾಶ್ಚಾತ್ಯರ ಪ್ರಭಾವದಿಂದ ಬಂದಿರಬೇಕು.

ಸಪ್ತರ್ಷಿ ಮತ್ತು ಕೃತ್ತಿಕಾ ಹೊರತಾಗಿ ನಾವಿಕರು ಸಾಮಾನ್ಯವಾಗಿ ದಕ್ಷಿಣ ಆಕಾಶದ ಪುಂಜಗಳನ್ನೇ ಆಯ್ಕೆ ಮಾಡಿಕೊಂಡಿರುವುದು ಸಹಜವೇ ಆಗಿದೆ. ಮೀನು ಹಿಡಿಯಲು ಹೊರಡುವಾಗ ಸಪ್ತರ್ಷಿ ನಮ್ಮ ಬಲಕ್ಕೆ ಇರಬೇಕು; ಹಿಂದಿರುಗುವಾಗ ಎಡಕ್ಕೆ ಇರಬೇಕು – ಇದು ಮಲಬಾರ್ ನಾವಿಕರ ಸರಳ ಸೂತ್ರ. ಇದಲ್ಲೆ ಒಂದನೆಯ ನಕ್ಷತ್ರಕ್ಕೆ ಹೊರಡಬೇಕು. ಎರಡನೆಯ ನಕ್ಷತ್ರಕ್ಕೆ ತಿರುಗಬೇಕು. ಮೂರನೆಯ ನಕ್ಷತ್ರಕ್ಕೆ ಮರಳಬೇಕು – ಹೀಗೊಂದು ಹೇಳಿಕೆ ಇದೆ. ಇಲ್ಲಿ ಸೂಚಿಸಿರುವ ಸಮಯದ ಆಧಾರದ ಮೇಲೆ ಮೊದಲನೆಯದು ಆಲ್ಫಾಎರಿಡನೀಸ್ (ವೈತರಣೀ ಮುಖ), ಎರಡನೆಯದು ಲುಬ್ಧಕ, ಮೂರನೆಯದು ಅಗಸ್ತ್ಯ – ಹೀಗೆ ಲೆಕ್ಕ ಹಾಕಿ ತಿಳಿಯಬಹುದು.

ಮುಂಗಾರು ಆರಂಭವಾಗುತ್ತಿದ್ದಂತೆಯೇ ನಾವಿಕರ ಚಲನವಲನಕ್ಕೆ ತಡೆಉಂಟಾಗುತ್ತಿತ್ತು. ಆದ್ದರಿಂದ, ಧನು, ವೃಶ್ಚಿಕ, ಮಕರ – ಈ ನಕ್ಷತ್ರಪುಂಜಗಳಿಗೆ ಅವರು ಹೆಸರುಗಳನ್ನೇ ಕೊಟ್ಟಿಲ್ಲದೇ ಇರುವುದು ಆಶ್ಚರ್ಯವೇನಲ್ಲ.

ನಾವಿಕರು ಬಳಸುತ್ತಿದ್ದ ಇನ್ನೊಂದು ಉಪಕರಣಕ್ಕೆ ಕಮಾಲ್ ಎಂಬ ಹೆಸರಿದೆ. ಸಣ್ಣ ಹಲಗೆಯಲ್ಲೊಂದು ರಂಧ್ರದ ಮೂಲಕ ದಾರ, ಅದಕ್ಕೆ ನಿಗದಿತ ದೂರದಲ್ಲಿ ಗಂಟುಗಳು, ಇಷ್ಟೇ ಈ ಉಪಕರಣ ಅಥವಾ ಯಂತ್ರ. ಇದು ಅರಬ್ಬರಲ್ಲಿ ಬಹಳ ಜನಪ್ರಿಯವಾಗಿದ್ದು,





**ಗುಜರಾತಿನ ನಾವಿಕರು ಬಳಸುತ್ತಿದ್ದ ಒಂದು ಹಳೆಯ ನಕ್ಷೆ; ದೂರಗಳನ್ನು ಝೂಮ್ ಅಳತೆಯಲ್ಲಿ ಗುರುತಿಸಲಾಗಿದೆ**

ಇಲ್ಲಿ ಸೂಚಿಸಿರುವ ಅಂಗುಲದ ಅಳತೆ ಅವರು ಉಪಯೋಗಿಸುತ್ತಿದ್ದ ಉಪಕರಣದ ಮೇಲಿನ ಅಳತೆಗಳು. ಗುಜರಾತ್‌ನಲ್ಲಿ ಈಚೆಗೆ ಪತ್ತೆಯಾದ ಒಂದು ನಕ್ಷೆಯಲ್ಲಿ ಯಮೆನ್‌ನ ದಕ್ಷಿಣಕ್ಕಿರುವ ದ್ವೀಪದಿಂದ ಬೇರೆ ಬೇರೆ ಸ್ಥಳಗಳಿಗೆ ಇರುವ ದೂರವನ್ನೂ ಸಹ ಗುರುತಿಸಲಾಗಿದೆ. ಝೂಮ್ ಎಂಬುದು ದೂರದ ಅಳತೆ. ಒಂದು ದಿನದಲ್ಲಿ ಸಾಧಾರಣ ವೇಗದ ಹಡಗು ಕ್ರಮಿಸುವ ದೂರ ಎಂಟು ಝೂಮ್‌ಗಳು. ಇದು ಬಹುಶಃ ಸಂಸ್ಕೃತ ಶಬ್ದ 'ಯಾಮ'ದ ಅಪಭ್ರಂಶವಾಗಿರಬಹುದು. ಕನ್ನಡದಲ್ಲಿ ಜಾಮ, ಮಾಲ್ಡೀವಿಸ್ ಭಾಷೆಯಲ್ಲಿ ದಾಮ... ಹೀಗೆ ಶಬ್ದಗಳಿವೆ. ಧ್ರುವ ನಕ್ಷತ್ರ ಒಂದು ಡಿಗ್ರಿಯಷ್ಟು ವ್ಯತ್ಯಾಸವಾಗಲು ಮೂರು ಗಂಟೆ ಬೇಕು. ಹೀಗೆ ಝೂಮ್‌ಗೂ ಧ್ರುವ ನಕ್ಷತ್ರದ ಎತ್ತರಕ್ಕೂ ನಂಟು ಹಾಕಿದ್ದರು.

**ಕೋನಗಳನ್ನು ಅಳೆಯುವ ಸರಳ ಉಪಾಯ**

ಒಂದು ಡಿಗ್ರಿ ಅಳೆಯಲು ತೋರ್ಬೆರಳೇ ಅಳತೆ. ತೋಳನ್ನು ಚಾಚಿ ಹಿಡಿದರೆ (ವಯಸ್ಕರ) ತೋರ್ಬೆರಳಿನ ಅಗಲವೇ ಒಂದು ಡಿಗ್ರಿ. ಇದು ಈಗ ಹವ್ಯಾಸೀ ಖಗೋಳ ವೀಕ್ಷಕರಲ್ಲಿ ಪ್ರಚಲಿತವಿದೆ. ನಾವಿಕರಲ್ಲಿ ಇದನ್ನೇ ಹೆಚ್ಚಿಸಿ **"ಪಿಡಿ"**, ಕೋರ್‌ತಂಬು ಮುಂತಾದ ಅಳತೆಗಳೂ ಪ್ರಚಲಿತವಿದ್ದವು. ಪಿಡಿ ಎಂದರೆ ಹಿಡಿ – ಅಂದರೆ ಚಾಚಿಹಿಡಿದ ಮುಷ್ಟಿಯ ಅಗಲ ೨೨½ ಡಿಗ್ರಿಗಳು. ಅಂದರೆ ಎರಡು ಮುಷ್ಟಿ ೪೫ ಡಿಗ್ರಿ; ನಾಲ್ಕು ಮುಷ್ಟಿ ೯೦ ಡಿಗ್ರಿ. ಇದನ್ನು ಪರೀಕ್ಷಿಸಿ ನೋಡಬಹುದು.

ಧ್ರುವ ನಕ್ಷತ್ರ ಎಂಬುದು ನಾವಿಕರಿಗೆ ಅತಿ ಅಗತ್ಯವಾದ ನಕ್ಷತ್ರ. ಜಾನಪದದಲ್ಲಿ ಮತ್ತು ಮೀನುಗಾರರಲ್ಲಿ ಇದರ ಹೆಸರು ಬೇರೆ ಇರುವುದು ಸಾಧ್ಯ. ವಿರಳಎಣಕ್ಕು ಎಂದು ತಮಿಳಿನಲ್ಲಿ, ಲಕ್ಷದ್ವೀಪದಲ್ಲಿ ಕೌ ಕಣಕ್ಕು, ಮಲಬಾರ್‌ನಲ್ಲಿ ಒಣ್ಣಂ ನಕ್ಷತ್ರಂ ಎಂಬ ಹೆಸರುಗಳಿವೆ. ಇತರ ನಕ್ಷತ್ರಗಳಿಗೂ ಬೇರೆ ಬೇರೆ ಹೆಸರುಗಳಿವೆ. ಗ್ರಂಥಗಳಲ್ಲಿ ಸಪ್ತರ್ಷಿ ಎಂದು ಪರಿಚಿತವಾಗಿರುವ




**ಕಮಾಲ್ ಬಳಸುವ ವಿಧಾನ**




**ನಾವಿಕರು ಬಳಸುತ್ತಿದ್ದ ಉಪಕರಣ ಕಮಾಲ್**

ಅವರಿಂದ ಭಾರತದ ನಾವಿಕರಿಗೂ ಪರಿಚಯವಾಯಿತು ಎಂದು ಇತಿಹಾಸಕಾರರ ಅಭಿಪ್ರಾಯ. ಇದನ್ನು ಕಣ್ಣನೇರಕ್ಕೆ ಚಾಚಿಹಿಡಿದು ಧ್ರುವ ನಕ್ಷತ್ರವನ್ನು ಹಲಗೆಯ ಮೇಲ್ಭಾಗದಲ್ಲಿ ಕಾಣುವಂತೆ ಎತ್ತಿಹಿಡಿಯಬೇಕು. ಇದಕ್ಕೆ ಗಂಟುಗಳ ದಾರದ ಸಹಾಯ ಅಗತ್ಯ. ಹಲಗೆಯನ್ನು ಹಿಂದಕ್ಕೂ ಮುಂದಕ್ಕೂ ಓಡಾಡಿಸಿ ಧ್ರುವ ನಕ್ಷತ್ರ ಕಂಡ ಮೇಲೆ ಯಾವ ಗಂಟು ಹೊಂದಿಕೆಯಾಯಿತು ಎಂದು ಗುರುತು ಮಾಡಿಕೊಳ್ಳಬೇಕು. ಗಂಟುಗಳ ದೂರ ಅಕ್ಷಾಂಶವನ್ನೇ ತಿಳಿಸುತ್ತದೆ.

ಅರಬ್ ನಾವಿಕರು ಪಶ್ಚಿಮ ಕರಾವಳಿಯಗುಂಟ ಸಾಗಿ, ಗುಜರಾತ್ ಬಳಿ ಪಶ್ಚಿಮಕ್ಕೆ ತಿರುಗುತ್ತಿದ್ದರು. ಆದ್ದರಿಂದ ಯಾವ ಗಂಟು ಯಾವ ಊರಿಗೆ ಎಂಬುದೂ ಅವರಿಗೆ ತಿಳಿದಿರುತ್ತಿತ್ತು. ಕೊಚ್ಚಿಯಿಂದ ಹೊರಟವರು ಕಾಸರಗೋಡು, ಮಂಗಳೂರು, ಮಲ್ಪೆ, ಹೊನ್ನಾವರ, ಗೋವಾ........ ಹೀಗೆ ಪಯಣಿಸುವಾಗ ಈ ಗಂಟುಗಳ ಆಧಾರದಿಂದ ತಮ್ಮ ಸ್ಥಾನ ಎಲ್ಲಿದೆ ಎಂದು ತಿಳಿದುಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ ಇತರ ಬಂದರುಗಳಿಗೆ ಹೋಗಲು ಆಯಾ ಸ್ಥಳಗಳಲ್ಲಿ ಪೂರ್ವಕ್ಕೆ ತಿರುಗಿ ತೀರ ಮುಟ್ಟುತ್ತಿದ್ದರು.

ಈ ಯಂತ್ರ ಲಕ್ಷದ್ವೀಪದಲ್ಲಿ ಐವತ್ತು ವರ್ಷಗಳ ಹಿಂದಿನವರೆಗೂ ಬಳಕೆಯಲ್ಲಿತ್ತು. ಆದರೆ, ಅಲ್ಲಿ ಹೇಗೆ ಬಳಸುತ್ತಿದ್ದಿರಬಹುದು ಎಂಬುದೇ ಪ್ರಶ್ನೆ. ಏಕೆಂದರೆ, ೧೩° ಎತ್ತರದಲ್ಲಿ ಕಾಣುವ ಧ್ರುವ ನಕ್ಷತ್ರವನ್ನು ಬೆಂಗಳೂರಿನಿಂದ ಗುರುತಿಸುವುದೇ ಕಷ್ಟ. ಅದು ಅಷ್ಟೇನೂ ಪ್ರಕಾಶಮಾನವಾದ ನಕ್ಷತ್ರವಲ್ಲ. ಇನ್ನೂ ದಕ್ಷಿಣಕ್ಕೆ ಹೋದಂತೆ ಅದು ಇನ್ನೂ ದಿಗಂತದ ಅಂಚಿಗೆ ಸರಿಯುತ್ತದೆ. ಆದ್ದರಿಂದ ಗುರುತಿಸುವುದು ಇನ್ನೂ ಕಷ್ಟವೇ ಆಗುತ್ತದೆ.

ಭಾರತದ ನೌಕಾಯಾನದ ಇತಿಹಾಸದ ಬಗ್ಗೆ ಸಂಶೋಧನೆ ಮಾಡಿರುವವರಲ್ಲಿ ಮೊದಲ ಹೆಸರು ದಿವಂಗತ ಬಿ. ಅರುಣಾಚಲಂ ಅವರದ್ದು. ಇವರು ರಚಿಸಿದ ಸಂಪುಟಗಳು ಯಾನದ ಪ್ರತಿ ಹಂತವನ್ನೂ – ಹಡಗು ಕಟ್ಟುವುದರಿಂದ ಆರಂಭಿಸಿ – ವಿವರಿಸುತ್ತವೆ. ನಾವಿಕರನ್ನು ಮತ್ತು ಅವರ ವಂಶದ ಹಿರಿಯರನ್ನು ಮುಖತಃ ಭೇಟಿಮಾಡಿ ವಿವರಗಳನ್ನು ಸಂಗ್ರಹಿಸಿದ್ದಾರೆ. ಇವರ ಜೊತೆ ಕೆಲಸ ಮಾಡಿದ ವಿಕ್ಟರ್ ರಾಜಮಾಣಿಕ್ಯಂ(ಈಗ ಅವರಿಗೆ ಸುಮಾರು ೭೫ ವರ್ಷ)ರನ್ನು ಈಚೆಗೆ ಭೇಟಿಯಾಗಿದ್ದಾಗ, ಕಮಾಲ್ ಭಾರತದಲ್ಲಿ ಉಪಯೋಗಿಸುತ್ತಿದ್ದರೇ ಎಂಬ ನನ್ನ ಸಮಸ್ಯೆಯನ್ನು ಮುಂದಿಟ್ಟೆ. ಅವರು ಕೊಟ್ಟ ಉತ್ತರ ಸ್ವಾರಸ್ಯವಾಗಿತ್ತು. ಕನ್ಯಾಕುಮಾರಿಯಿಂದ ಸುಮಾರು ಗೋವಾವರೆಗಿನ ನಾವಿಕರು ಧ್ರುವವನ್ನು ಅಷ್ಟೇನೂ ನೆಚ್ಚಿಕೊಂಡಿರಲಿಲ್ಲ. ರೋಹಿಣಿ, ಕೃತ್ತಿಕಾ ಈ ಹೆಸರುಗಳ ಬದಲು ಅವರು ತಮ್ಮದೇ ಆಕೃತಿಗಳನ್ನು ಗುರುತಿಸಿ ಮೂರು ಮೀನು, ಆರು ಮೀನು, ಒರುಮೀನ್ – ಹೀಗೆ ಹೆಸರುಗಳನ್ನು ಇರಿಸಿಕೊಟ್ಟಿದ್ದರು. ಮೂರು ಮೀನು ಎಂಬುದು (ಒರೈಯನ್) ಮಹಾವ್ಯಾಧದ ಮಧ್ಯದ ಮೂರು; ಆರು ಮೀನ್ ಎಂಬುದೇ ಕೃತ್ತಿಕಾ; ಒರುಮೀನ್ ಎಂಬುದು ಸಿರಿಯಸ್ – ಲುಬ್ಧಕ!

ಅವರು ಹಡಗಿನ ಮೇಲೆಯೇ ಪ್ರಾಯೋಗಿಕವಾಗಿ ಕಲಿಸಿಕೊಡುತ್ತಿದ್ದ ಈ ಜ್ಞಾನ ಇಂದಿನ ಜಿ.ಪಿ.ಎಸ್. ಯುಗದಲ್ಲಿ ಮೂಲೆ ಗುಂಪಾಗಿರುವುದೇ ದುರದೃಷ್ಟದ ಸಂಗತಿ.

**ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರೂ ತಾರಾಲಯ, ಟಿ. ಚೌಡಯ್ಯ ರಸ್ತೆ
ಹೈ ಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಕೊಂದುಣ್ಣುವವರ ಮಧ್ಯೆ






ಎಡಗೈಯಲ್ಲಿ ರಾಮಾಯಣ
ಬಲಗೈಯಲ್ಲಿ ಮಹಾಭಾರತ
ತಲೆಯ ಮೇಲೆ ಭಗವದ್ಗೀತೆ
ಬಾಯಲ್ಲಿ ಪಠಣ ಮಾಡುತ್ತ

ಮನೆಯ ಬಾಗಿಲ ತಟ್ಟುತ್ತಾರೆ
ಎಚ್ಚರ ?
ನಾವಿರುವುದು
ಕೊಂದುಣ್ಣುವವರ ಮಧ್ಯೆ

ಗೋ ಪಾಲಕರೆಂದು
ವೇಷದ ಮೇಲೆ ವೇಷತೊಟ್ಟು
ನಿಮ್ಮ ಹಿತ್ತಲ ಕರುಗಳ ಎಳೆದೊಯ್ದು
ಗೋ ಶಾಲೆಯೆಂದು
ಕಸಾಯಿಖಾನೆ ಮಾಡಿಕೊಳ್ಳುವ ವಂಚಕರಿದ್ದಾರೆ
ಎಚ್ಚರ ?
ನಾವಿರುವುದು
ಕೊಂದುಣ್ಣುವವರ ಮಧ್ಯೆ

ಸ್ತ್ರೀ ಮಾತಾ
ಮಾತೃಭೂಮಿ
ಮಾತೃದೇವೋಭವ
ಎಂದು ಜಪಿಸುತ್ತಾ
ಬಂಗಾರದ ಬೇಡಿ ಹಾಕಿ
ಸ್ತ್ರೀ ಸ್ವತಂತ್ರ ಅನರ್ಹಳಂ ಎಂದು
ಅನೈತಿಕ ಪೊಲೀಸ್‌ಗಿರಿ ಹೆಸರಿನ
ಗೂಂಡಾಗಳಿದ್ದಾರೆ
ಎಚ್ಚರ ?

ನಾವಿರುವುದು
ಕೊಂದುಣ್ಣುವವರ ಮಧ್ಯೆ

ರಾಷ್ಟ್ರೀಯವಾದ
ದೇಶಪ್ರೇಮ
ನಾವಿರುವುದು ದೇಶಕ್ಕಾಗಿ
ಎನ್ನುತ್ತಾ
ತಲೆಯ ಸವರುತ್ತಾ
ಆಸುಪಾಸಿನಲ್ಲೆ
ಗೋಡ್ಸೆಯಂತಹ ಭಯೋತ್ಪಾದಕರು
ನರಬಲಿಗೆ
ನಾಲಿಗೆ ಚಾಚಿಕೊಂಡಿದ್ದಾರೆ
ಎಚ್ಚರ ?
ನಾವಿರುವುದು
ಕೊಂದುಣ್ಣುವವರ ಮಧ್ಯೆ

ಬುದ್ಧನಿಂದ್ಹಿಡಿದು
ಕಲಬುರ್ಗಿಯವರೆಗೆ
ಬಂದವರು
ಹೋದವರು
ಹೇಡಿ ಭಯೋತ್ಪಾದಕರು
ಎಚ್ಚರ ?
ನಿಮ್ಮ ಬಳಿ ನಾಲ್ಕಾರು ಗುಂಡುಗಳಿವೆ
ನಮ್ಮ ಬಳಿ
ಕೋಟ್ಯಂತರ ಗುಂಡಿಗೆಗಳಿವೆ

**ಹಾರೋಹಳ್ಳಿ ರವೀಂದ್ರ**
# ೫೬೮, ೩ನೇ ತಿರುವು, ೪ನೇ ಮುಖ್ಯರಸ್ತೆ, ೨ನೇ ಹಂತ
ಇ ಅಂಡ್ ಎಫ್ ಬ್ಲಾಕ್, ರಾಮಕೃಷ್ಣ ನಗರ, ಮೈಸೂರು –೨೩

ಊರಿಗೆಲ್ಲಾ ಒಂದು ದಾರಿಯಾದರೆ 'ಹೊಸತು'ವಿನದೇ ಒಂದು ದಾರಿ. ಬೇರೆ ಪತ್ರಿಕೆಗಳವರನ್ನು ನೋಡಿಯಾದರೂ ಬುದ್ಧಿ ಕಲಿಯದಿದ್ದರೆ ಹೇಗೆ? ರಾಶಿ ಭವಿಷ್ಯವಿಲ್ಲದೆ, ಸಿನಿಮಾ ಸುದ್ದಿಯಿಲ್ಲದೆ ಏನಯ್ಯ ನಿಮ್ಮ ಕರಾಮತ್ತು - ಎಂದು ಓದುಗರು ಧಮಕಿ ಹಾಕಿದ ಪರಿಣಾಮವೇ 'ನಿಮ್ಮ ಭವಿಷ್ಯ ನಿಮ್ಮ ಕೈಯಲ್ಲಿ.' ಆದರೆ ಕಾಲಂ ಬರೆಯಲು ಭವಿಷ್ಯಕಾರರನ್ನು ಹುಡುಕಿ ತೆಗೆಯುವುದೇನೂ ಸರಳವಾಗಿರಲಿಲ್ಲ.

ನಮ್ಮ ಜೋತಿಷಿಗಳ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ಪಂಡಿತೋತ್ತಮರು, ಜೋತಿಷಿಭಯಂಕರ ಬಿರುದಾಂಕಿತರು, ಸರ್ವಗ್ರಹಗಳ ಸ್ನೇಹಿ.

ನಮ್ಮ ಓದುಗರ ದೀರ್ಘಕಾಲದ ಬೇಡಿಕೆ ನೆರವೇರಿಸಿದ್ದೇವೆ ಎಂಬ ತೃಪ್ತಿ ನಮಗಿದೆ. - ಸಂಪಾದಕರು.



# ನಿಮ್ಮ ಭವಿಷ್ಯ ನಿಮ್ಮ ಕೈಯಲ್ಲಿ

## ಜ್ಯೋತಿಷಿ ಭಯಂಕರ, ಪಂಡಿತ ಪ್ರೊ|| ಭಗವಂತಪ್ಪ (ಟಿ. ವಿ. ಚಾನೆಲ್ ಖ್ಯಾತಿ)

**ಮೇಷ**



ಮಲಗಿ ಗೊರಕೆ ಹೊಡೆಯುತ್ತಿದ್ದರೂ ಅದೃಷ್ಟ ದೇವತೆ ಕಿಟಕಿ ಮೂಲಕ ಹಣ ಸುರಿದು ಹೋಗುತ್ತದೆ – ಎಂದು ನಂಬುವವರು ಈ ರಾಶಿಯವರು. ಹಿಂದುಳಿದು ಬಿಡುವ ಅಪಾಯವಿದೆ. ರಾಹು ವಕ್ರನಾಗಿದ್ದಾನೆ. ಮಾತಿಗೆ ಮಾತು ಬೆಳೆದು ವಿಕೋಪಕ್ಕೆ ಹೋಗಬಹುದು. ಅಶ್ವಿನಿ ನಕ್ಷತ್ರಿಕರಿಗೆ ದಿಢೀರ್ ಧನಾಗಮನ. ಥಟ್ಟನೆ ಕೋಪಿಸಿಕೊಳ್ಳುವುದರಿಂದ 'ಮನೆ' ದೇವರ ಕೋಪಕ್ಕೆ ತುತ್ತಾಗುವಿರಿ. ಓಂ ಸಾರಿ ಸಾರಿ ಸಾರಿಃ – ಎಂಬ ಮಂತ್ರ ೩೦ ಬಾರಿ ಜಪಿಸಿರಿ. ಭರಣಿ ನಕ್ಷತ್ರಿಕರ ಬದುಕು ನಿರಾಳ. ಮಕ್ಕಳು ಉನ್ನತ ಅಂಕ ಗಳಿಸುವರು.

ಮಹಿಳೆಯರಿಗೆ ಮಿಶ್ರಫಲ. ಮೂಲೆ ಮನೆಯ ಮಿಟಕಲಾಡಿಯ ಬಗ್ಗೆ ಪಿಸುಮಾತಾಡದಿರುವುದು ಒಳ್ಳೆಯದು. ಮೂಡಲ ದಿಕ್ಕಿಗೆ ಪಯಣ ಬೇಡ. ಮಕ್ಕಳ ತರಲೆ ಬಗ್ಗೆ ತಲೆ ಕೆಡಿಸಿಕೊಳ್ಳುವ ಪ್ರಸಂಗ ಉಂಟಾಗಬಹುದು. ಹಸಿರು ಬಣ್ಣ – ಎಂದರೆ ಮೈಸೂರು ಸಿಲ್ಕ್ ಸೀರೆ ಧರಿಸಿದರೆ ಅತೀ ಶುಭ!



**ವೃಷಭ**

ಈ ರಾಶಿಯವರ ಗಂಟು ಕರಗುವ ಸಮಯ! ನೆಂಟರಿಷ್ಟರು ಅನಿರೀಕ್ಷಿತ ವಕ್ಕರಿಸಿ ತಲೆ ಬಿಸಿಯಾಗ ಬಹುದು. ಗೆಳೆಯರು ಸಹಾಯಕ್ಕೆ ಬರುವರು. ರಾಹು ಒಳ್ಳೆಯ ಫಲ ನೀಡುತ್ತಾನೆ. ರೋಹಿಣಿ ನಕ್ಷತ್ರಿಕರ ಮೂಗು ಸೋರಬಹುದು. ಸರಕಾರಿ ಹುದ್ದೆಯವರಾದರೆ ಆಗಾಗ ಕ್ಯಾಂಟೀನ್‌ಗೆ ಹೋಗುವುದನ್ನು ಕಡಿಮೆ ಮಾಡಿ. ಕೇತು (ಅಧಿಕಾರಿ)ವಿನ ಕೆಂಗಣ್ಣಿಗೆ ಬೀಳುವಿರಿ. ವಾಹನ ಅರ್ಧ ದಾರಿಯಲ್ಲಿ ಕೈಕೊಡಬಹುದು. ಕುಜ ದೋಷವಿದೆ. ಸತ್ಪಾತ್ರರಿಗೆ ಧನ, ಕನಕ, ಪಶು ದಾನ ಮಾಡಿರಿ. ಪಶು ಇಲ್ಲದಿದ್ದರೆ ಸೈಕಲ್ ಅಥವಾ ಸ್ಕೂಟರ್ ದಾನವೂ ನಡೆಯುತ್ತದೆ! ರೈತರಿಗೆ ಸಾಲದವರ ಕಾಟ, ಬಟ್ಟೆ ವ್ಯಾಪಾರಿಗೆ ಕೈತುಂಬಾ ಲಾಭ!

ಮಹಿಳೆಯರು ಮೈಮುರಿಯ ದುಡಿಯಬೇಕಾಗಬಹುದು. ಗುರುವಿನ ಕಟಾಕ್ಷವಿದೆ. ಮಕ್ಕಳು ಮಾತು ಕೇಳದೆ ಮತ್ತಷ್ಟು ತಲೆನೋವಿಗೆ ಕಾರಣವಾಗ ಬಹುದು. ಪತಿಯ ಸಹಕಾರವಿದೆ. ಕೆಂಪು ಹಳದಿ ಮಿಶ್ರಿತ ದಾವಣಗೆರೆಯ ಕಾಟನ್ ಸೀರೆ ಅಥವಾ ಕಾಂಜೀವರಂ ಸೀರೆ ಉಡುವುದರಿಂದ ಒಳ್ಳೆಯ ಫಲವಿದೆ.

**ಮಿಥುನ**



ಹಸನ್ಮುಖಿ ಶನಿ ಏಳರಲ್ಲಿದ್ದಾನೆ. ಹೊಸ ವಾಹನ ಖರೀದಿಸುವ ಯೋಗವಿದೆ. ಮಗಳು ಲವ್ ಬಾನಗಡಿಗೆ ಬೀಳುವ ಸೂಚನೆ ಇದೆ. ನಿಮ್ಮ ಬಿಪಿ ಏರುವ ಸಾಧ್ಯತೆ ಇದೆ. 'ಮನೆ' ದೇವರ ಸಹಾಯ, ಸಹಕಾರ ಪಡೆಯಲು ಹಿಂದೆ–ಮುಂದೆ ನೋಡ ಬೇಡಿ. ಬಹಳ ದಿನ ಎಳೆದಾಡಿದ ಕುಟುಂಬ ವ್ಯಾಜ್ಯ ತೀರುತ್ತದೆ. ದೂರದ ಗೆಳೆಯರ ಪತ್ರ ಬರುತ್ತದೆ. ಆರ್ದ್ರಾ ನಕ್ಷತ್ರಿಕರಿಗೆ ಅಪಘಾತ ಭಯವಿದೆ. ಮನೆಯಲ್ಲೆ ಉಳಿದು ಟಿ.ವಿ. ನೋಡುತ್ತ ಕಾಲ ಕಳೆಯಿರಿ. ರೈತರ ಕಷ್ಟ ಮುಂದುವರಿಯುತ್ತದೆ. ಬಡ್ಡಿ ಮನ್ನಾ ಭಾಗ್ಯದ ಸೂಚನೆಗಳಿವೆ.

ಮಹಿಳೆಯರಿಗೆ ಚಿನ್ನ ಖರೀದಿಸುವ ಯೋಗವಿದೆ. ಮಗ ಪ್ರೀತಿಸುವ ಹುಡುಗಿಯನ್ನೇ ಸೊಸೆಯಾಗಿ ಬರಮಾಡಿಕೊಳ್ಳುವುದು ಸೂಕ್ತ.

ಕಾಡುಹರಟೆಯಲ್ಲಿ ಹೆಚ್ಚು ಹೊತ್ತು ತೊಡಗುವುದರಿಂದ ಗೆಳತಿಯರ ನಡುವೆ ಮನಸ್ತಾಪ ಉಂಟಾಗುತ್ತದೆ. ಡಾ॥ ಸಿ. ಆರ್. ಚಂದ್ರಶೇಖರ್ ಬರೆದಿರುವ ಪುಸ್ತಕಗಳನ್ನು ಓದಿರಿ. ಮಾನಸಿಕ ಕ್ಷೋಭೆ ಕಡಮೆಯಾಗುತ್ತದೆ. ನೀಲಿಬಣ್ಣದ ಚೂಡಿದಾರ್, ಬೂದು ಬಣ್ಣದ ವೇಲ್ ಅಥವಾ ಧರ್ಮಾವರಂ ಸೀರೆ ಧರಿಸಿದರೆ ಶುಭವಾಗುತ್ತದೆ.

**ಕರ್ಕಾಟಕ**



ಗುರು ಮುನಿದಿದ್ದಾನೆ! ಉದ್ಯೋಗದಲ್ಲಿ ಬಡ್ತಿ, ವರ್ಗಾವಣೆಯ ಸಾಧ್ಯತೆ ಇದೆ. ನೀವು ಪ್ರೀತಿಸುವ ಹುಡುಗಿಯೇ ನಿಮ್ಮ ಕೈ ಹಿಡಿಯುತ್ತಾಳೆ. ಮನೆಯಲ್ಲಿ ಅತ್ತೆ–ಸೊಸೆಯರ ಮಧ್ಯೆ ಘರ್ಷಣೆಯಾಗುತ್ತದೆ. ಲೇಖಕರ ಬರಹಗಳು ಅಸ್ವೀಕಾರ ಮುದ್ರೆ ಒತ್ತಿಸಿಕೊಳ್ಳುತ್ತವೆ. 'ಮರಳಿ ಯತ್ನವ ಮಾಡು' ಮಂತ್ರ ಜಪಿಸಬೇಕು. ಪುಷ್ಯ ನಕ್ಷತ್ರಿಕರಿಗೆ ಮಿಶ್ರಫಲಗಳಿವೆ.

ರೈತರಿಗೆ ಸೊಸೈಟಿ ಸಾಲ ಭಾಗ್ಯವಿದೆ! ಬೈಕಿನಲ್ಲಿ ಪಟ್ಟಣದ ಬಾರುಗಳತ್ತ ಎಡತಾಕಬಾರದು. ಚಕ್ರಬಡ್ಡಿಯವರ ಕಾಟವಿದೆ. ಬುಧನ ದಯೆಯಿಂದ ಸದ್ಯ ಪರಿಹಾರವಿದೆ. ತುಡುಗು ಜಾನುವಾರುಗಳು ನಿಮ್ಮ ಬೆಳೆ ಕಬಳಿಸುವ ಯೋಗವಿದೆ! ಮನೆಯಲ್ಲಿ ಲಟಾಪಟಿ ನಡೆಯಬಹುದು. ಬಾಯಿ ಬಿಗಿ ಹಿಡಿಯಿರಿ! ಒತ್ತಡ ಪರಿಹಾರಕ್ಕೆ ಸಂಗೀತ ಕೇಳಿ.

ಮಹಿಳೆಯರಿಗೆ ತವರಿನಿಂದ ಸಹಾಯ ಲಭ್ಯವಾಗಲಿದೆ. ಗೃಹಸ್ವಾಮಿಯ ಕೃಪೆಯಿಂದ ಹೊಸ ಉಡುಪು ಖರೀದಿಸುವಿರಿ. ಪುಷ್ಯ ನಕ್ಷತ್ರಿಯರಿಗೆ ಸುವರ್ಣ ಯೋಗವಿದೆ. ಬಡ್ತಿ ತಡವಾಗಬಹುದು. ಮೇಲಧಿಕಾರಿಣಿಯ ವಕ್ರದೃಷ್ಟಿ ನಿಮ್ಮ ಮೇಲಿದೆ. ನೇರಿಳೆ ಬಣ್ಣದ ಧರ್ಮಾವರಂ ಸೀರೆ ಅಥವಾ ಪೋಚಂಪಲ್ಲಿ ಧರಿಸಿ. ಇಷ್ಟ ದೇವರ ಕೃಪೆಗೆ ಪಾತ್ರರಾಗಲು ಪ್ರಯತ್ನಿಸಿರಿ.



**ಸಿಂಹ**

ದಾಯಾದಿ ಕಲಹದಿಂದ ಹೈರಾಣಾಗುವಿರಿ. ಹಣಕಾಸಿನ ಕೊರತೆ ಬಾಧಿಸುತ್ತದೆ. ಯಾರಿಗೂ ಪುಕ್ಕಟೆ ಭರವಸೆ ಕೊಡಬೇಡಿ. ಢೋಂಗಿ ಮಂತ್ರವಾದಿಯನ್ನು ನಂಬಿ ಮೋಸ ಹೋಗುವಿರಿ. ವಾಹನ ಭಾಗ್ಯವಿದೆ. ಅದರಿಂದ ಹೊಸ ಸ್ನೇಹಭಾಗ್ಯದ ಯೋಗವಿದೆ. ಕುಜದೋಷದ ಕಾರಣ ರಾತ್ರಿ ನಿದ್ದೆಬಾರದೆ ಬರಿದೆ ಹೊರಳಾಡುವಿರಿ.

ಮಘ ನಕ್ಷತ್ರಿಕರಿಗೆ ಮಾನಸಿಕ ಅಶಾಂತಿ ಕಾಡಲಿದೆ. 'ಇಂಟಾಲರೆನ್ಸ್' ವೈರಾಣುವಿನ ಬಾಧೆ. ಸೂಕ್ತ ಚಿಕಿತ್ಸೆ ಪಡೆಯಿರಿ. ಮನಸ್ಸನ್ನು ಸ್ವಸ್ಥ ಸ್ಥಿತಿಯಲ್ಲಿರಿಸಿಕೊಳ್ಳಿ. ಶುಕ್ರನ ಪ್ರಭಾವದಿಂದ ಪಿತ್ತ ನೆತ್ತಿಗೇರಬಹುದು, ಕಣ್ಣು ಮಂಜಾಗಬಹುದು! ನಾಲಿಗೆ ತಡವರಿಸಬಹುದು. ಆದರೆ ಗುರುಕೃಪೆಯಿಂದ ಎಲ್ಲ ದೋಷಗಳು ಪರಿಹಾರವಾಗುತ್ತವೆ.

ಮಹಿಳಾ ಉದ್ಯೋಗಿಗಳು ಮನೆಯಿಂದ ಪಯಣ ಮಾಡುವಾಗ ಬಹಳ ಜಾಗರೂಕರಾಗಿರಬೇಕು. ಬಸ್ಸಿನ ನೂಕು ನುಗ್ಗಲಿನಲ್ಲಿ ನಿಮ್ಮ ಪರ್ಸ್ ಕಳೆದು ಹೋಗಬಹುದು. ಅಜೀರ್ಣ ಬಾಧೆ ಕಾಡಿಸುವುದು. ತುಣುಕು ಪದ್ಯಗಳು ಪ್ರಕಟಗೊಂಡು ಮನಸ್ಸು ಗರಿಗೆದರಿ ಹಾರಾಡುವುದು. ಬೂದು ಬಣ್ಣದ ಜೀನ್ಸ್ ಮತ್ತು ಹಸಿರು ಟಾಪ್ಸ್ ಧರಿಸಿರಿ ಅಥವಾ ಮೊಳಕಾಲ್ಮೂರು ಸೀರೆ ಧರಿಸಿರಿ.



**ಕನ್ಯಾ**

ರಾಜಕಾರಣಿಗಳಿಗೆ ಶುಭ ಫಲಗಳಿವೆ. ವಿಧಾನಸೌಧ ದಲ್ಲಿ ವಿರೋಧ ಪಕ್ಷದವರ ನಿರೀಳಿಸುವ ಪ್ರಶ್ನೆಗಳಿಂದ ಗಲಿಬಿಲಿಗೊಳ್ಳುವಿರಿ. ಆದರೆ ಸ್ಪೀಕರ್ ದೇವತೆ ನಿಮ್ಮ ಕಡೆಗಿರುವುದರಿಂದ ಪರಿಸ್ಥಿತಿ ಶಾಂತವಾಗುವುದು. ನಿರುದ್ಯೋಗಿಗಳು ಇನ್ನು ಕಾಯಬೇಕು. ಕೆಲವರಿಗೆ ಉದ್ಯೋಗ ಬಡ್ತಿಯ ಭಾಗ್ಯವಿದೆ. ಷೇರುಪೇಟೆಯಲ್ಲಿ ವ್ಯವಹರಿಸುವವರಿಗೆ ಒಮ್ಮೆ ಲಾಭ. ಒಮ್ಮೆ ನಷ್ಟ. ಪುಸ್ತಕ ವ್ಯಾಪಾರಿಗಳಿಗೆ ಒಳ್ಳೆಯ ಫಲವಿದೆ. ವಿಮರ್ಶಕರು ಛೀಮಾರಿಗೊಳಗಾಗ ಬಹುದು! ಪ್ರೊಫೆಸರುಗಳಿಗೆ ವಿದ್ಯಾರ್ಥಿಗಳಿಂದ ಲೇವಡಿ ಮಾಡಿಸಿಕೊಳ್ಳುವ ಯೋಗವಿದೆ.

## ಅಭಿನಂದನೆ

ಸಂದೇಶ ಸಂಸ್ಕೃತಿ ಮತ್ತು ಶಿಕ್ಷಣ ಪ್ರತಿಷ್ಠಾನದ ವತಿಯಿಂದ ೨೫ನೇ ವರ್ಷದ 'ಸಂದೇಶ ಪ್ರಶಸ್ತಿ'ಯು ನವಕರ್ನಾಟಕ ಬಳಗದ ಬರಹಗಾರರಾದ ಪ್ರೊ॥ ಜಿ. ಎಸ್. ಜಯದೇವ ಮತ್ತು ಡಾ॥ ಎಚ್. ಎಸ್. ವೆಂಕಟೇಶಮೂರ್ತಿ ಅವರಿಗೆ ದೊರೆತಿದೆ. ಅವರಿಗೆ 'ಹೊಸತು' ಹಾಗೂ ನವಕರ್ನಾಟಕ ಪ್ರಕಾಶನ ಬಳಗದ ಅಭಿನಂದನೆಗಳು.

ಹಸ್ತ ನಕ್ಷತ್ರಿಕರಿಗೆ ಗೊಂದಲದ ಕಾಲ. ಪ್ರಶಸ್ತಿ ಹಿಂದಿರುಗಿಸಲು ಮನಸ್ಸಾಗ ಬಹುದು. ಅದಕ್ಕಾಗಿ ಬಹುಸಂಖ್ಯಾತ ಸುಭಗರ ಟೀಕೆ ಎದುರಿಸಬೇಕಾಗಬಹುದು. ಉಪಶಮನಕ್ಕೆ ಪರಿಹಾರವಿದೆ. ಕುವೆಂಪು ಅವರ 'ನಿರಂಕುಶಮತಿಗಳಾಗಿ' ಲೇಖನ ನಲವತ್ತು ಬಾರಿ ಮನನ ಮಾಡಿರಿ.

ಮಹಿಳೆಯರು 'ವಾಟ್ಸಪ್' ಪೀಡನೆ ಎದುರಿಸಬೇಕಾಗಬಹುದು. ಅನಾಥರ 'ಗುಡಿ'ಗಳ ಪ್ರದಕ್ಷಿಣೆ ಮಾಡಿರಿ. ಹಸಿದ ಮಕ್ಕಳಿಗೆ ತಿಂಡಿ ಕೊಡಿಸಿರಿ. ಅಕ್ಷರ ಕಲಿಯಲು ಅವರಿಗೆ ಸಹಾಯ ಮಾಡಿ. ಕಾಂಜೀಪುರದ ಗಿಳಿ ಹಸಿರು ಬಣ್ಣದ ರೇಶಿಮೆ ಸೀರೆ ಅಥವಾ ನಾರಾಯಣಪೇಟೆ ಸೀರೆ ಧರಿಸಿ. ಮನೆಯಲ್ಲಿ ಗುಲಾಬಿ ಬಣ್ಣದ ನೈಟಿ ಧರಿಸಿ. ಬಂಗಾರದ ಒಡವೆಗಳನ್ನು ಭದ್ರವಾಗಿಡಿ.



**ತುಲಾ**

ತೊಗರಿ ಬೇಳೆ ಅಡಗಿಸಿಡುವುದರಿಂದ ಅಪಾರ ಲಾಭ ಗಳಿಕೆ ಇದೆ. ಸರ್ಕಾರದಿಂದ ಸದ್ಯಕ್ಕೆ ಯಾವ ಅಪಾಯವೂ ಇಲ್ಲ. ಮಳೆಯಿಂದ ಹಾನಿಯಾಗುವ ಸಂಭವವಿದೆ. ಮಂಗಳ ವಕ್ರನಾಗಿದ್ದಾನೆ. ಬ್ಯಾಂಕ್ ಬ್ಯಾಲೆನ್ಸ್ ಕರಗಿ ಹೋಗುತ್ತದೆ. ಅಪಘಾತವಾಗುವ ಸಂಭವವಿದೆ. ರಸ್ತೆ ದಾಟುವಾಗ ಎಚ್ಚರ ಅಗತ್ಯ.

ಸ್ವಾತಿ ನಕ್ಷತ್ರದವರಿಗೆ ಶನಿಕಾಟವಿದೆ. ದೂರದ ನೆಂಟರು ಬಂದು ತಿಂಗಳಾನುಗಟ್ಟಲೆ ಠಿಕಾಣಿ ಹೂಡಬಹುದು. ಪತ್ನಿಯ ಅಸಮಾಧಾನ ಎದುರಿಸಬೇಕಾಗುತ್ತದೆ. ಉದ್ಯೋಗದಲ್ಲಿ ಹಿಂಬಡ್ತಿ, ಗೆಳೆಯರು ತೆಗೆದುಕೊಂಡ ಸಾಲ ಹಿಂದಿರುಗಿಸದೆ ಸತಾಯಿಸುತ್ತಾರೆ. ಶಿಕ್ಷಣ ಕ್ಷೇತ್ರದಲ್ಲಿರುವವರಿಗೆ, ಸಣ್ಣ ವ್ಯಾಪಾರಿಗಳಿಗೆ ಅನಿರೀಕ್ಷಿತ ಧನಲಾಭವಿದೆ.

ಮಹಿಳೆಯರಿಗೆ ಅನಾಯಾಸ ಧನಲಾಭ ಯೋಗವಿದೆ. ಆದರೆ ತಲೆನೋವು, ಹೊಟ್ಟೆನೋವು ಮುಂತಾದ ಕಿರಿಕಿರಿ ಅನುಭವಿಸಬೇಕಾಗುತ್ತದೆ. ಕಡಿಮೆ ಆಹಾರ ತೆಗೆದುಕೊಳ್ಳಿ, ಗಂಡ ಪುಸಲಾಯಿಸಿದರೂ ಫಾಸ್ಟ್‌ಫುಡ್ ಗಾಳಕ್ಕೆ ಸಿಕ್ಕಿಕೊಳ್ಳಬೇಡಿ. ನೀಲಿ ಅಂಚಿನ ಕೆಂಪು ಹಸಿರು ಪೋಚಂಪಳ್ಳಿ ಇಳಕಲ್ಲು ಸೀರೆ ಧರಿಸಿದರೆ ಶುಭ. ಚೂಡಿದಾರ ಧರಿಸಿದರೆ ವೇಲಿನ ಬಣ್ಣ ನೀಲಿಯದಾಗಿರಲಿ.



**ವೃಶ್ಚಿಕ**

ಪೂರ್ವಿಕರ ಆಸ್ತಿಯಿಂದ ಪ್ರಯೋಜನವಾಗಲಿದೆ. ಹಬ್ಬದ ಸಂತೋಷ ಅನುಭವಿಸುವಿರಿ. ದೂರ ಪ್ರವಾಸದ ಯೋಗವಿದೆ. ವಿದೇಶದಿಂದ ಪತ್ರ ಬರಲಿದೆ. ಲೇಖಕರಿಗೆ ಪ್ರಕಟಣ ಭಾಗ್ಯವಿದೆ. ಪ್ರಾಯಕ್ಕೆ ಬಂದಿರುವ ಮಗಳಿಗೆ ತಾಳಿ ಭಾಗ್ಯವಿದೆ.

ಅನುರಾಧಾ ನಕ್ಷತ್ರಿಕರು ಆಸ್ಪತ್ರೆಗೆ ಅಲೆಯಬೇಕಾಗಬಹುದು. ಟಿ.ವಿ. ಭವಿಷ್ಯ ನೋಡುವುದರಿಂದ ಮನಸ್ಸಿನ ಕಿರಿಕಿರಿ ಹೆಚ್ಚುತ್ತದೆ. 'ವಿಜ್ಞಾನಕ್ಕೀಗತಿಯೆ?' ಶೀರ್ಷಿಕೆಯ ಪದ್ಯ ರಚಿಸಲು ಪ್ರಯತ್ನಿಸಿ. ವಿನಾಕಾರಣ ಜಗಳದಲ್ಲಿ ಸಿಕ್ಕಿಕೊಳ್ಳ ಬಹುದು. ಕಿಸೆಗಳ್ಳರ ಬಗ್ಗೆ ಎಚ್ಚರವಿರಲಿ. ಬಾರಿನಲ್ಲಿ ಜಗಳವಾಗಬಹುದು. 'ಮನೆ' ದೇವರ ಮಾತು ಕೇಳಿ, ಅದರಂತೆ ನಡೆದುಕೊಳ್ಳಿ.

ಮಹಿಳೆಯರು ಅತ್ತೆ ಕಾಟದಿಂದ ರೋಸಿಹೋಗಿ ತವರು ಮನೆ ದಾರಿ ಹಿಡಿಯಬಹುದು. ಸೋದರರು ಸಹಾಯಕ್ಕೆ ಬರುತ್ತಾರೆ. ನಿಮ್ಮ ಪತಿಗೆ ಧಮಕಿ ಹಾಕಿ ಸಮಸ್ಯೆ ಬಗೆಹರಿಸಬಹುದು. ಚಿನ್ನಾಭರಣ ಖರೀದಿಸುವ ಯೋಗವಿದೆ.

ಮಕ್ಕಳ ಶಿಕ್ಷಣ ವೆಚ್ಚ ಭರಿಸಲಾಗದೆ ತಿಣುಕಾಟವಾಗುತ್ತದೆ. ನೀಲಿ ಹರಳಿನ ಉಂಗುರ ಧರಿಸಿದರೆ ದೋಷ ಪರಿಹಾರವಾಗುತ್ತದೆ. ಲೇಖಕಿಯರಿಗೆ ಮಾನ್ಯತೆ ಲಭಿಸುತ್ತದೆ. ತಿಳಿಬಣ್ಣದ ಉಡುಪು ಅಥವಾ ಕೊಂಡಾಲಪಲ್ಲಿ ಸೀರೆ ಧರಿಸಿರಿ.



**ಧನು**

ಗುರು–ಶುಕ್ರ ಇಬ್ಬರ ದೃಷ್ಟಿಯೂ ಇದೆ. ಗೆಳೆಯರ ಸಹಾಯದಿಂದ ವ್ಯವಹಾರಗಳು ಉತ್ತಮಗೊಳ್ಳುತ್ತವೆ. ಕಂಪ್ಯೂಟರಿನ ಮುಂದೆ ಹೆಚ್ಚು ಸಮಯ ವ್ಯಯವಾಗುವುದು. ಮನೆಗೆ ಬೇಕಾದ ವಸ್ತುಗಳ ಖರೀದಿಯಿಂದ ಬಂದ ಹಣ ಕರಗುತ್ತದೆ. ವಾಹನ ಖರೀದಿ ಯೋಗವೂ ಉಂಟು.

ಮೂಲಾ ನಕ್ಷತ್ರಿಕರು ಅನ್ಯತಾ ಅಪವಾದ ಎದುರಿಸಬೇಕಾಗುತ್ತದೆ. ಸೋದರಮಾವ ಸಕಾಲದಲ್ಲಿ ಸಹಾಯಕ್ಕೆ ಬರುತ್ತಾನೆ. ಔತಣ ಕೂಟಗಳಲ್ಲಿ ಮಜಾ ಉಡಾಯಿಸುವ ಯೋಗವಿದೆ. ರಾತ್ರಿ ಕೆಟ್ಟ ರಸ್ತೆಯಲ್ಲಿ ವಾಹನ ಓಡಿಸುವಾಗ ಎಚ್ಚರ ಅಗತ್ಯ. ಮಕ್ಕಳ ಚಟುವಟಿಕೆ ಬಗ್ಗೆ ಗಮನಹರಿಸಿ.

ಮಹಿಳೆಯರಿಗೆ ಹೊಸ ಉಡುಪು, ಮೇಕಪ್ ಕಿಟ್ ಖರೀದಿಸುವ ಯೋಗವಿದೆ. ಮನೆಯಲ್ಲಿ ಚಿನ್ನದ ವಡ್ಯಾಣ ಧರಿಸಿದರೆ ಶುಕ್ರನ ಮುನಿಸು ಕಡಿಮೆಯಾಗುತ್ತದೆ. ಕೇಸರಿ ಬಣ್ಣದ ಚೂಡಿದಾರ್, ಬಿಳಿಬಣ್ಣದ ದುಪ್ಪಟ್ಟಾ ಧರಿಸಿದರೆ ಸತ್ಫಲ ಉಂಟಾಗುತ್ತದೆ ಅಥವಾ ಆರಣಿ ಸೀರೆ ಧರಿಸಿರಿ. ಸಂತಾನಪ್ರಾಪ್ತಿ. ಮೊಬೈಲಿಗೆ ಬರುವ ಅಶ್ಲೀಲ ಸಂದೇಶಗಳಿಂದ ಮನಸ್ಸಿಗೆ ಕಿರಿಕಿರಿಯಾಗುವುದು. ಮನೆ ದೇವರ ಸಹಾನುಭೂತಿ ಗಳಿಸಿರಿ.



**ಮಕರ**

ಗುರು ಕರುಣೆಯ ದೃಷ್ಟಿ ಬೀರುತ್ತಾನೆ. ದುಂದುವೆಚ್ಚ ಮಾಡಲು ಮನಸ್ಸಾಗುತ್ತದೆ. ಟಿ.ವಿ. ಧಾರವಾಹಿಗಳಲ್ಲಿ ಕೆಲಸ ಮಾಡುವವರ ಅದೃಷ್ಟ ಖುಲಾಯಿಸುತ್ತದೆ. ಮನೆ ಖರೀದಿಸುವ ಯೋಗವಿದೆ. ಜಲಮೂಲದಿಂದ ಅಪಾಯವಿದೆ. ಮನಸ್ಸಿಗೆ ಕಿರಿಕಿರಿ ಉಂಟಾಗುವ ಪ್ರಕರಣಗಳು ಜರುಗುತ್ತವೆ. ಬಿಗ್ ಬಾಸ್ ಮನೆಯಲ್ಲಿ ತಂಗಿ ಪಿಸಪಿಸ ಗುಸಗುಸ ಮಾತಾಡುವ ಅವಕಾಶವಿದೆ. ಹುಚ್ಚಾಟಕ್ಕಿಳಿಯದಿದ್ದರೆ ಕ್ಷೇಮ!

ನೇಗಿಲಯೋಗಿಗಳಿಗೆ ಆದಾಯವಿದೆ. ಅಳಿಯನ ಕಿರುಕುಳ. ಜಾನುವಾರುಗಳು ರೋಗರುಜಿನಗಳಿಗೆ ತುತ್ತಾಗುತ್ತವೆ. ನೆಂಟರಿಷ್ಟರ ಮಧ್ಯೆ ಮನಸ್ತಾಪ ಉಂಟಾಗುತ್ತದೆ. ಹೆಂಡತಿಯ ಸಲಹೆಯಂತೆ ನಡೆದುಕೊಂಡರೆ ಮನೆಯಲ್ಲಿ ಶಾಂತಿ ನೆಲೆಸುತ್ತದೆ.

ಮಹಿಳಾ ಉದ್ಯೋಗಿಗಳಿಗೆ ಬಡ್ತಿ ಜೊತೆಗೆ ಸಂತಾನ ಪ್ರಾಪ್ತಿ ಯೋಗವಿದೆ. ಹಳೆಯ ಗೆಳತಿಯ ದರ್ಶನದಿಂದ ಸಂತೋಷ ಹೆಚ್ಚುತ್ತದೆ. ಆದರೆ ಹಳೆಯ ಕಹಿ ನೆನಪಿನಿಂದ ಮನಸ್ಸಿನ ಶಾಂತಿ ಕೆಡುತ್ತದೆ. ಆಪ್ತಸಲಹೆ ಕುರಿತ ಪುಸ್ತಕ ಓದಿ. ಕೆಂಪು ಬಣ್ಣ ಹಸಿರು ಅಂಚಿನ ಇಳಕಲ್ ಸೀರೆ ಧರಿಸಿ. ಮಂಗಳವಾರ ಕೆಂಪು ಹರಳಿನ ಉಂಗುರ ಧರಿಸಿ.



**ಕುಂಭ**

ಭಾಷಣ ಮಾಡುವಾಗ ಆಡುವ ಒಂದು ಮಾತಿನಿಂದ ವಾದ–ವಿವಾದಕ್ಕೆ ಸಿಕ್ಕಿಕೊಳ್ಳುವಿರಿ. ಎಂಟರ ಶನಿ ಕಂಟಕದಿಂದ ಪಾರುಮಾಡುತ್ತಾನೆ. ಚಿನ್ನದ ವ್ಯಾಪಾರಿಗಳಿಗೆ ಅಪಾರ ಲಾಭವಾಗುತ್ತದೆ. ಆಧುನಿಕ ಮಾಲ್‌ಗಳಿಗೆ ಹೋಗುವ ಯೋಗವಿದೆ. ಬೆಲೆಬಾಳುವ ಮೊಬೈಲ್ ಕಳೆದುಕೊಳ್ಳುವಿರಿ. ಜಂಕ್‌ಫುಡ್‌ನಿಂದ ಅನಾರೋಗ್ಯಕ್ಕೆ ತುತ್ತಾಗುವಿರಿ.

ಶತಭಿಷಾ ನಕ್ಷತ್ರಿಕರಿಗೆ ಶುಭಫಲಗಳಿವೆ. ರೈತರ ಸಂಕಷ್ಟಕ್ಕೆ ತಾತ್ಕಾಲಿಕ ಪರಿಹಾರವಿದೆ. ಗುರುವಿನ ಕೃಪೆ ಇದೆ. ಮಗಳು ಉನ್ನತ ಅಂಕಗಳಿಸಿ ಉತ್ತೀರ್ಣಳಾಗಿ ಮನೆಯ ಸಂತೋಷ ಹೆಚ್ಚಿಸುತ್ತಾಳೆ. ಹೊಸ ವಾಹನ ಖರೀದಿಸುವ ಯೋಗವಿದೆ.

ಮಹಿಳೆಯರಿಗೆ ರೋಗರುಜಿನಗಳು ಕಾಡಿಸುತ್ತವೆ. ಮೈತುಂಬ ಬಂಗಾರದ ಒಡವೆ ಧರಿಸಿದರೆ ರೋಗ ಶಮನವಾಗುತ್ತದೆ! ನೀಲಿ ಜೀನ್ಸ್ ಕೆಂಪು ಟಾಪ್ಸ್ ಧರಿಸಿದರೆ ಶುಭಫಲ! ಅಥವಾ ಮಂಗಳಗಿರಿ ಸೀರೆ ಧರಿಸಿ. ಒಮ್ಮೆ ತವರಿಗೆ ಹೋಗುವ, ಅಮ್ಮನ ಕೈ ಅಡುಗೆ ಉಣ್ಣುವ ಯೋಗವಿದೆ!

**ಮೀನ**

ಪತ್ರಿಕೋದ್ಯಮದಲ್ಲಿರುವವರು ಶ್ಲಾಘನೆ ಗಳಿಸುತ್ತಾರೆ. ಮಗನಿಗೆ ವಿದೇಶದಲ್ಲಿ ಹುದ್ದೆ ದೊರೆಯುತ್ತದೆ. ದೀರ್ಘಕಾಲದ ವ್ಯಾಜ್ಯ ಮುಗಿದು ತೀರ್ಪು ನಿಮ್ಮ ಪರವಾಗುತ್ತದೆ. ಉತ್ತರ ದಿಕ್ಕಿಗೆ ಪಯಣ ಮಾಡುವ ಯೋಗವಿದೆ. ಶ್ರೀಮತಿಯೊಂದಿಗೆ ಹೆಚ್ಚು ವಾದ ಮಾಡಬೇಡಿ.

ಪೂರ್ವಾಭಾದ್ರ ಮತ್ತು ರೇವತಿ ನಕ್ಷತ್ರಿಕರಿಗೆ ಮಿಶ್ರ ಫಲಗಳಿವೆ. ಪೊಲೀಸು ಇಲಾಖೆಯಲ್ಲಿರುವವರಿಗೆ ಬಡ್ತಿ ದೊರೆಯುತ್ತದೆ. ಮನೆಯಲ್ಲಿ ಅಶಾಂತಿಯ ವಾತಾವರಣ ಉಂಟಾಗುತ್ತದೆ. ಕರ್ತವ್ಯ ನಿಷ್ಠೆಯೇ ಇದಕ್ಕೆ ಪರಿಹಾರ! ವಕೀಲರು ವಾಕ್ಚಾತುರ್ಯದಿಂದ ಕಕ್ಷಿದಾರರ ಮುಖದಲ್ಲಿ ಗೆಲವು ಮೂಡಿಸುವುದು. ಋತುಮಾನದ ಪ್ರಭಾವದಿಂದ ನೆಗಡಿ ಕಾಡಿಸಬಹುದಾದರೂ ಅಶ್ವಿನಿ ದೇವತೆಯ ಕೃಪಾಕಟಾಕ್ಷವಿದೆ!

ಮಹಿಳೆಯರಿಗೆ ಒಳ್ಳೆಯ ಫಲಗಳಿವೆ. ಚಿನ್ನಾಭರಣ ಖರೀದಿಸುವ, ಮನೆಯವರ ಜೊತೆಗೆ ವಿದೇಶ ಪ್ರವಾಸ ಕೈಗೊಳ್ಳುವ ಯೋಗವಿದೆ. ಚುನಾವಣೆಯಲ್ಲಿ ಗೆಲವು. ವಕೀಲ ವೃತ್ತಿಯವರಿಗೆ ಧನ ಭಾಗ್ಯವಿದೆ. ಕಪ್ಪು ಕೋಟಿನೊಳಗೆ ಹ್ಯಾಂಡ್‌ಲೂಮ್ ಚೂಡಿದಾರ್ ಧರಿಸಿ ಅಥವಾ ಉತ್ಪಪರೇಶಿಮೆ ಸೀರೆ ಶುಭ.

ಸರ್ವೇಜನಾ ಸುಖಿನೋಭವನ್ತು!

(ಈ ಭವಿಷ್ಯವಾಣಿಯನ್ನು ನಂಬಿದರೆ ಅದಕ್ಕೆ ನೀವೇ ಜವಾಬ್ದಾರರು)

---


**ಬೀರಣ್ಣ**
ನಂ. ೧೦, ೧ನೇ ಮಹಡಿ
೨೧–ಬಿ ಅಡ್ಡರಸ್ತೆ, ಶ್ರೀರಾಮ ದೇವಸ್ಥಾನದ ರಸ್ತೆ ಎದುರು
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

# ಸರ್ವವ್ಯಾಪಿ ನ್ಯೂಟ್ರಿನೊ – ರಟ್ಟಾದ ಒಂದಿಷ್ಟು ಗುಟ್ಟು

**ಪ್ರೊ॥ ಅಡ್ಯನಡ್ಕ ಕೃಷ್ಣಭಟ್**

**ಫೋ**ಟಾನು (ಬೆಳಕಿನ ಕಣ)ಗಳನ್ನು ಬಿಟ್ಟರೆ ನ್ಯೂಟ್ರಿನೊಗಳಷ್ಟು ಸಮೃದ್ಧವಾದ ಮುಕ್ತ ಕಣಗಳು ಇಡೀ ವಿಶ್ವದಲ್ಲಿ ಬೇರೆ ಬೇರೆ ಯಾವುದು ಇಲ್ಲ. ಸುಮಾರು ೧೫೦೦ ಕೋಟಿ ವರ್ಷಗಳ ಹಿಂದೆ ನಡೆಯಿತೆನ್ನಲಾದ ಮಹಾಸ್ಫೋಟ (ಬಿಗ್ ಬ್ಯಾಂಗ್)ದಿಂದ ಹುಟ್ಟಿದ ನ್ಯೂಟ್ರಿನೊಗಳು ಎಲ್ಲೆಲ್ಲೂ ಪಸರಿಸಿದುವು. ಈಗ ಪ್ರತಿ ಸೆಕೆಂಡಿಗೆ ಒಂದು ಲಕ್ಷ ಕೋಟಿ (ಟ್ರಿಲಿಯನ್) ನ್ಯೂಟ್ರಿನೊಗಳು ನಮ್ಮ ದೇಹವನ್ನು ಹಾದುಹೋಗುತ್ತವೆ. ನಮ್ಮ ಅರಿವಿಗೆ ಇದು ಬರುವುದೇ ಇಲ್ಲ. ಏಕೆಂದರೆ ದೇಹದ ಯಾವುದೇ ಪರಮಾಣುವಿನೊಂದಿಗೆ ಅವು ಪ್ರತಿವರ್ತಿಸುವುದಿಲ್ಲ – ಅಥವಾ ಹಾಗೆ ಪ್ರತಿವರ್ತಿಸುವ ಸಂಭವ ತೀರ ಕಡಮೆ. ಅವನ್ನು ಉತ್ಪಾದಿಸುವ ವಿದ್ಯಮಾನಗಳು ವಿಶ್ವದಲ್ಲಿ ಇಂದಿಗೂ ನಡೆಯುತ್ತವೆ. ಹಿಡಿತಕ್ಕೆ ಸಿಗದೆ ಬೆಳಕಿನ ವೇಗವನ್ನು ಸುಮಾರಾಗಿ ಸರಿಗಟ್ಟುವಷ್ಟೇ ವೇಗದಿಂದ ಸಾಗುವ ನ್ಯೂಟ್ರಿನೊಗಳ ಸ್ವಭಾವ–ಸ್ವರೂಪಗಳನ್ನು ತಿಳಿಯಲು ನಡೆಸಿದ ಸಂಶೋಧನೆಗಾಗಿ ಜಪಾನಿ ಭೌತವಿಜ್ಞಾನಿ ತಕಾಕಿ ಕಜಿತ ಮತ್ತು ಕೆನಡದ ಆರ್ಥರ್ ಮೆಕ್‌ಡೊನಾಲ್ಡ್ ೨೦೧೫ನೇ ವರ್ಷದ ಭೌತ ನೊಬೆಲ್ ಪ್ರಶಸ್ತಿ ಪಡೆದರು. ಅಷ್ಟೇ ಅಲ್ಲ, ರಷ್ಯದ ಬಂಡವಾಳತಜ್ಞ–ಭೌತಜ್ಞ ಯೂರಿ ಮಿಲ್ನರ್ (೧೯೬೧– ) ಸ್ಥಾಪಿಸಿದ – ನೊಬೆಲ್ ಪ್ರಶಸ್ತಿ ಮೌಲ್ಯದ ಇಮ್ಮಡಿ ಮೌಲ್ಯದ – ಬ್ರೇಕ್ ಥ್ರೂ (ಸೀಮೋಲ್ಲಂಘನ) ಪ್ರಶಸ್ತಿಗೂ ಅವರು ಅರ್ಹರಾದರು. ಅವರೊಂದಿಗೆ ದುಡಿದ ಸುಮಾರು ೧೩೦೦ ವಿಜ್ಞಾನಿಗಳೂ ಈ ಪ್ರಶಸ್ತಿಗೆ ಭಾಜನರಾದರು. ನ್ಯೂಟ್ರಿನೊ ಸಂಶೋಧನೆ ಬೇಡುವ ಚಟುವಟಿಕೆಗಳ ವಿಸ್ತಾರಕ್ಕೆ ಈ ಸಂಖ್ಯೆಯೊಂದು ಮಾನವಾದರೂ ಆದೀತು!

**ಹಿಂದಿನ ನೆಲೆ**

ವಸ್ತುವಿನ ಆಂತರಿಕ ರಚನೆಯನ್ನು ತಿಳಿಯಲು ಮನುಕುಲ ನಡೆಸಿದ ಪ್ರಯತ್ನಗಳ ತಾರ್ಕಿಕ ಫಲಿತಾಂಶವೇನೋ ಎಂಬಂತೆ ಇಂದೀಗ ಹಲವೆಡೆ ಹಲವು ಭೌತವಿಜ್ಞಾನಿಗಳು ನ್ಯೂಟ್ರಿನೊ ಸಂಶೋಧನೆಗೆ ತೊಡಗಿದ್ದಾರೆ.

ಒಂದು ತುಂಡು ಕಲ್ಲನ್ನು ಎರಡು–ನಾಲ್ಕು–ಎಂಟು... ಹೀಗೆ ಅಧಿಕಾಧಿಕ ಸಂಖ್ಯೆಯಲ್ಲಿ ವಿಭಜಿಸುತ್ತ ಹೋದರೆ ಕೊನೆಗೆ ಏನನ್ನು ಪಡೆದೇವು? ಮುಂದೆ ವಿಭಜಿಸಲಾಗದ ಅತಿ ಸಣ್ಣ ಕಣ ಸಿಗಬಹುದು. ಪ್ರಾಚೀನ ಗ್ರೀಸ್‌ನಲ್ಲಿ ಇದನ್ನು 'ಅಟೊಮಾಸ್' ಎಂದು ಕರೆದರು. ಭಾರತದಲ್ಲಿ 'ಅಣು' ಎಂದರು. ಇಂಥ ಕಣವನ್ನು ನಾವು 'ಪರಮಾಣು' (ಇಂಗ್ಲಿಷ್‌ನಲ್ಲಿ ಆ್ಯಟಂ) ಎನ್ನುತ್ತೇವೆ. ರಾಸಾಯನಿಕ ಪ್ರತಿಕ್ರಿಯೆಗಳನ್ನು ಸಮರ್ಥವಾಗಿ ವಿವರಿಸುವ ಆಧುನಿಕ ಪರಮಾಣು ಸಿದ್ಧಾಂತವನ್ನು ಇಂಗ್ಲೆಂಡಿನ ಜಾನ್ ಡಾಲ್ಟನ್ (೧೭೬೬–೧೮೪೪), ೧೮೦೩ರಲ್ಲಿ ಮಂಡಿಸಿದ 'ಧಾತುವೊಂದರ ಪರಮಾಣುಗಳು ಬದಲಾಗುವುದಿಲ್ಲ. ಪ್ರತಿಯೊಂದು ಪರಮಾಣುವಿಗೂ ತನ್ನದೇ ರಾಶಿ (ದ್ರವ್ಯದ ಪರಿಮಾಣ) ಇದೆ. ಪರಮಾಣುವನ್ನು ವಿಭಜಿಸಲಾಗುವುದಿಲ್ಲ' ಎಂದು ಪರಮಾಣು ವೈಶಿಷ್ಟ್ಯವನ್ನು ಸಾರಿದ್ದ.

ಪರಮಾಣುಗಳ ಆಂತರಿಕ ರಚನೆಯಲ್ಲಿ, ಋಣ ವಿದ್ಯುದಾವೇಶ ಇರುವ ಇಲೆಕ್ಟ್ರಾನ್‌ಗಳೆಂಬ ಕಣಗಳಿವೆ. ಅವನ್ನು ಪರಮಾಣುಗಳಿಂದ ಪ್ರತ್ಯೇಕಿಸಿ – ಅಂದರೆ ಪರಮಾಣುಗಳನ್ನು ವಿಭಜನೆಗೊಳಪಡಿಸಿ, ಅಧ್ಯಯಿಸಬಹುದು ಎಂದು ಇಂಗ್ಲೆಂಡಿನ ಜೆ. ಜೆ. ಥಾಮ್ಸನ್ (೧೮೫೬ – ೧೯೪೦) ತೋರಿಸಿ ಕೊಟ್ಟ. ಇಲೆಕ್ಟ್ರಾನ್ ಎಂಬ ಕಣವನ್ನು ಆವಿಷ್ಕರಿಸಿದ (೧೮೯೭) ಕೀರ್ತಿ ಅವನದಾಯಿತು. ಪರಮಾಣುವೆಂದರೆ ಒಡೆಯಲಾಗದ ಮೂಲಕಣ ಎಂಬ ನಂಬಿಕೆ ಮಾಯವಾಯಿತು. ಯುರೇನಿಯಂನಂಥ ಕೆಲವು ಧಾತುಗಳು ತಾವಾಗಿ, ಉಚ್ಚ ವೇಧಕ ಸಾಮರ್ಥ್ಯವುಳ್ಳ – ವಸ್ತುಗಳ ಮೈ ಮೇಲಿನಿಂದ ಒಳ ಸಾಗಬಲ್ಲ – ವಿಕಿರಣವನ್ನು ಬಿಡುಗಡೆ ಮಾಡುವುದನ್ನು ಫ್ರಾನ್ಸಿನ ಹೆನ್ರಿ ಬೆಕ್ವೆರಲ್ (೧೮೫೨ – ೧೯೦೮) ಆವಿಷ್ಕರಿಸಿದ (೧೮೯೬). ವಿಕಿರಣವನ್ನು ಬಿಡುಗಡೆ ಮಾಡುವ ವಸ್ತುಗಳನ್ನು 'ವಿಕಿರಣ ಪಟು' ಎಂದು ಅವನು ವಿಶ್ಲೇಷಿಸಿದ. ಇಂಗ್ಲೆಂಡಿನ ರದರ್‌ಫರ್ಡ್ (೧೮೭೧ – ೧೯೩೭) ಫ್ರಾನ್ಸಿನ ಮೇರಿಕ್ಯೂರಿ (೧೮೬೭ – ೧೯೩೪) ಮತ್ತು ಪಿಯರೆ ಕ್ಯೂರಿ (೧೮೫೯ – ೧೯೦೬) ಪರಮಾಣುವಿನಿಂದ ಹೊಮ್ಮುವ ವಿಕಿರಣದ ಬಗ್ಗೆ ವಿವರವಾದ ಅಧ್ಯಯನವನ್ನು ಕೈಗೊಂಡರು. ಅದು ವಾಸ್ತವವಾಗಿ ಮೂರು ಬಗೆಯ ವಿಕಿರಣಗಳನ್ನು ಒಳಗೊಂಡಿತ್ತು. ಅವನ್ನು ಆಲ್ಫ, ಬೀಟ ಮತ್ತು ಗಾಮ ವಿಕಿರಣಗಳೆಂದು ಕರೆದರು. ಆಲ್ಫ ವಿಕಿರಣದಲ್ಲಿರುವ ಆಲ್ಫ ಕಣಗಳು, ಬೀಟ ವಿಕಿರಣದಲ್ಲಿರುವ ಬೀಟ ಕಣಗಳು ಹಾಗೂ ಗಾಮ ವಿಕಿರಣದ ಫೋಟಾನುಗಳ ವಿವರಗಳನ್ನು ತಿಳಿಯುವ

ಪ್ರಯೋಗಗಳು ನಡೆದುವು. ಪರಮಾಣುವೊಂದರ ಹೆಚ್ಚಿನ ರಾಶಿ ಮತ್ತು ಧನ ಆವೇಶಗಳು ಪರಮಾಣುವಿನ ಕೇಂದ್ರದಲ್ಲಿರುವ ಕಣದಲ್ಲಿ ಒಟ್ಟೈಸಿದುದನ್ನು ಪ್ರಾಯೋಗಿಕವಾಗಿ ತಿಳಿದ ರದರ್ ಫರ್ಡ್ ಆ ಕಣವನ್ನು ನ್ಯೂಕ್ಲಿಯಸ್ ಎಂದು ಕರೆದ. ನ್ಯೂಕ್ಲಿಯಸ್ ನಲ್ಲಿ ಧನ ವಿದ್ಯುದಾವಿಷ್ಟ ಪ್ರೋಟಾನ್ ಕಣಗಳಿವೆ; ಇವುಗಳ ಧನಾವೇಶವನ್ನು ತಟಸ್ಥೀಕರಿಸುವಂತೆ(ಪ್ರೋಟಾನ್‌ಗಳಷ್ಟೇ ಸಂಖ್ಯೆಯಲ್ಲಿ ಪರಮಾಣುವಿನಲ್ಲಿ) ಇಲೆಕ್ಟ್ರಾನುಗಳಿವೆ ಎಂದು ತಿಳಿಯಲಾಯಿತು. ಇಂಗ್ಲೆಂಡಿನ ಜೇಮ್ಸ್ ಚಾಡ್‌ವಿಕ್ (೧೮೯೧ – ೧೯೭೪) ಬೆರಿಲಿಯಂ ಧಾತುವಿಗೆ ಆಲ್ಫ ಕಣಗಳನ್ನು ತಾಡಿಸಿ (೧೯೩೨) 'ನ್ಯೂಟ್ರಾನ್' ಎಂದು ಮುಂದೆ ಹೆಸರಾದ ಕಣಗಳನ್ನು ಪಡೆದ. ಪ್ರೋಟಾನ್‌ನಿಂದ ಬಹಳ ಅಲ್ಪಪ್ರಮಾಣದಲ್ಲಿ ನ್ಯೂಟ್ರಾನಿನ ರಾಶಿ ಹೆಚ್ಚಿದ್ದು ಯಾವುದೇ ವಿದ್ಯುದಾವೇಶವಿಲ್ಲದೆ ಅದು ತಟಸ್ಥ ಕಣವಾಗಿರುತ್ತದೆ. 'ಪ್ರೋಟಾನ್ ಮತ್ತು ನ್ಯೂಟ್ರಾನುಗಳನ್ನೊಳಗೊಂಡ ನ್ಯೂಕ್ಲಿಯಸ್, ಪ್ರೋಟಾನ್ ಮತ್ತು ಇಲೆಕ್ಟ್ರಾನ್‌ಗಳಿಂದ ಕೂಡಿದ ನ್ಯೂಕ್ಲಿಯಸ್ಸಿಗಿಂತ ಸೈದ್ಧಾಂತಿಕವಾಗಿ ಹೆಚ್ಚು ತೃಪ್ತಿಕರ' ಎಂದು ಜರ್ಮನಿಯ ಹೈಸನ್ ಬರ್ಗ್ (೧೯೦೧ – ೧೯೭೬) ಹೇಳಿದ ಮಾತು ಉಳಿದಿದ್ದು ಇಂದು ಎಲ್ಲರೂ ಒಪ್ಪಿರುವ ನ್ಯೂಕ್ಲಿಯಸ್ ಮಾದರಿಗೆ ದಾರಿ ಮಾಡಿತು.




ಪರಮಾಣುವಿನಲ್ಲಿ ನ್ಯೂಕ್ಲಿಯಸ್ ಮತ್ತು ಇಲೆಕ್ಟ್ರಾನುಗಳಿವೆ. ನ್ಯೂಕ್ಲಿಯಸ್‌ನಲ್ಲಿ ಪ್ರೋಟಾನ್ ಮತ್ತು ನ್ಯೂಟ್ರಾನುಗಳಿವೆ. ಧಾತುವನ್ನು ನಿಷ್ಕರ್ಷಿಸುವ 'ಪರಮಾಣು ಸಂಖ್ಯೆ' ಎಂದರೆ ಪ್ರೋಟಾನುಗಳ ಸಂಖ್ಯೆ. ಪರಮಾಣು ತೂಕವನ್ನು ನಿರ್ಧರಿಸುವ 'ರಾಶಿ ಸಂಖ್ಯೆ' ಎಂದರೆ ಪ್ರೋಟಾನು ಮತ್ತು ನ್ಯೂಟ್ರಾನುಗಳ ಒಟ್ಟು ಸಂಖ್ಯೆ. ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳಿಗೆ, ಕ್ವಾರ್ಕ್‌ಗಳೆಂಬ ಮೂಲಕಣಗಳು ಕೂಡಿ ಮೂಡುವ ಪ್ರತ್ಯ ಪ್ರತ್ಯೇಕ ಸಂರಚನೆಗಳಿವೆ. ಅಂದರೆ ಪರಮಾಣು, ನ್ಯೂಕ್ಲಿಯಸ್, ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳು ಮೂಲಕಣಗಳಲ್ಲ. ತಮ್ಮದೇ ಸಂರಚನೆ ಇಲ್ಲದ ಇಲೆಕ್ಟ್ರಾನ್, ಕ್ವಾರ್ಕ್, ಮ್ಯೂಯಾನ್, ಟೌಆನ್‌ಗಳು ಮೂಲಕಣಗಳು. ಈ ಮೂಲಕಣಗಳಿಗೆ ವಿರುದ್ಧವಾದ ವಿದ್ಯುದಾವೇಶ, ಸ್ಪಿನ್ (ಭ್ರಮಣ)ಗಳಿರುವ ಕಣಗಳಿವೆ. ಇವನ್ನು ಪ್ರತಿಕಣಗಳೆಂದು ಕರೆಯುವುದು ವಾಡಿಕೆ. ಇಲೆಕ್ಟ್ರಾನಿನ ಪ್ರತಿಕಣ – ಪಾಸಿಟ್ರಾನ್. ಇದರ ರಾಶಿ ಮತ್ತು ಆವೇಶಗಳ ಪ್ರಮಾಣ ಇಲೆಕ್ಟ್ರಾನಿನಷ್ಟೇ. ಆದರೆ ವಿದ್ಯುದಾವೇಶ ಮಾತ್ರ ಋಣಾತ್ಮಕ. ಪ್ರತಿ ಪ್ರೋಟಾನ್ – ಪ್ರೋಟಾನಿನ ಪ್ರತಿ ಕಣ. ನಾವು ಸಾಮಾನ್ಯವಾಗಿ ನೋಡುವ ದ್ರವ್ಯವು ಸಾಮಾನ್ಯ ಮೂಲಕಣಗಳಿಂದಾಗಿದೆ. ಪ್ರತಿ ಕಣಗಳಷ್ಟೇ ಕೂಡಿದಾಗ 'ಪ್ರತಿ ದ್ರವ್ಯ' ಸೃಷ್ಟಿಯಾಗುತ್ತದೆ. ವಿಶ್ವದಲ್ಲಿ ಸಾಮಾನ್ಯ ದ್ರವ್ಯಕ್ಕಿಂತ ಕಡಮೆ ಪ್ರಮಾಣದಲ್ಲಿ ಪ್ರತಿ ದ್ರವ್ಯ ಕಂಡುಬಂದಿರುವುದು ಬಿಡಿಸಲಾಗದೆ ಉಳಿದ ಒಂದು ಒಗಟಾಗಿದೆ.

**ಅಂತರ್ವರ್ತನೆಗಳು ಹಾಗೂ ಧಾತು ಪರಿವರ್ತನೆ**

ಕಣಗಳು ಪರಸ್ಪರ ಪ್ರಯೋಗಿಸುವ ಬಲಗಳನ್ನು ಅಂತರ್ವರ್ತನೆಗಳೆನ್ನುತ್ತಾರೆ. ಪ್ರಕೃತಿಯಲ್ಲಿ ನಾಲ್ಕು ಮೂಲಭೂತ ಬಲಗಳನ್ನು ಗುರುತಿಸಿದ್ದಾರೆ : ಒಂದು ಫೆಮ್ಟೋಮೀಟರ್ ವ್ಯಾಪ್ತಿಯ (ಮೀಟರನ್ನು ಹತ್ತು ಕೋಟಿಕೋಟಿ ಪಾಲು ಮಾಡಿದಾಗ ಸಿಗುವ ಉದ್ದ) ಪ್ರಬಲ ಬಲ ನ್ಯೂಕ್ಲಿಯಸ್ಸುಗಳನ್ನು

ಬಂಧಿಸುತ್ತದೆ, ನ್ಯೂಕ್ಲಿಯಸ್ಸಿನೊಳಗಿನ ಪ್ರೋಟಾನ್, ನ್ಯೂಟ್ರಾನ್‌ಗಳನ್ನು ಬಂಧಿಸಿ ಸ್ಥಿರ ಸ್ಥಿತಿಯನ್ನು ಕಾಪಾಡುತ್ತದೆ.

ವಿದ್ಯುದಾವೇಶವಿರುವ ಎಲ್ಲ ಕಣಗಳಲ್ಲಿ ಕಂಡುಬರುವ ವಿದ್ಯುತ್ಕಾಂತೀಯ ಬಲ ದೂರ ವ್ಯಾಪ್ತಿಯದ್ದು. ದಿನನಿತ್ಯ ಅನುಭವಿಸುವ ಘರ್ಷಣೆ, ವಾಯುರೋಧ – ಈ ಬಲದಿಂದ ಉಂಟಾಗುತ್ತವೆ. ಒಂದು ಫೆಮ್ಟೊಮೀಟರಿನ ಒಳಗೆ ಇದು ಪ್ರಬಲ ಬಲಕ್ಕಿಂತ ನೂರು ಮಡಿ ಕ್ಷೀಣ.

ನ್ಯೂಕ್ಲಿಯಸ್ಸಿನ ಬೀಟ ಕ್ಷಯಕ್ಕೆ ಕ್ಷೀಣ ಬಲ ಕಾರಣವಾಗಿದೆ. ಒಂದು ಫೆಮ್ಟೊಮೀಟರ್‌ನೊಳಗಷ್ಟೇ ಇದರ ವ್ಯಾಪ್ತಿ. ಅಲ್ಲೂ ಇದು ಪ್ರಬಲ ಬಲಕ್ಕೆ ಹೋಲಿಸಿದಾಗ ಕೋಟ್ಯಂಶದಷ್ಟು ಕ್ಷೀಣ. ನಮ್ಮನ್ನು ಭೂಮಿಯಲ್ಲಿ ಸೆಳೆದಿಟ್ಟಿರುವುದು ಗುರುತ್ವ ಬಲ. ದ್ರವ್ಯವಿರುವಲ್ಲೆಲ್ಲ ಗುರುತ್ವವಿದೆ. ಪ್ರಬಲ ಬಲಕ್ಕೆ ಹೋಲಿಸಿದಾಗ ಗುರುತ್ವ ಬಲ $೧೦^{-೩೮}$ರಷ್ಟು ಕಡಮೆ ಇರುತ್ತದೆ.

ಇವುಗಳಲ್ಲಿ ಪ್ರಬಲ ಬಲ ಮತ್ತು ಕ್ಷೀಣ ಬಲಗಳು ನಮಗೆ ಅಷ್ಟೊಂದು ಪರಿಚಿತವಾದುವಲ್ಲ. ಆದರೆ ವಿದ್ಯುತ್ಕಾಂತೀಯ ಬಲ ಮತ್ತು ಗುರುತ್ವ ಬಲಗಳು ಸಾಕಷ್ಟು ಪರಿಚಿತವಾದಂಥವು. ಒಂದು ಧಾತುವಿನ ಪರಮಾಣುಗಳು ಆಲ್ಫ ಅಥವಾ ಬೀಟ ಕಿರಣಗಳನ್ನು ಹೊಮ್ಮಿಸುವಾಗ ಪರಮಾಣು ಸಂಖ್ಯೆಯಲ್ಲಿ (ಅಂದರೆ ನ್ಯೂಕ್ಲಿಯಸ್‌ನಲ್ಲಿರುವ ಪ್ರೋಟಾನ್ ಸಂಖ್ಯೆಯಲ್ಲಿ) ಬದಲಾವಣೆಯಾಗಿ ಬೇರೆಯೇ ಧಾತುವಾಗುತ್ತದೆ. ನ್ಯೂಕ್ಲಿಯಸ್ಸಿನಲ್ಲಿ ನ್ಯೂಟ್ರಾನು ಪ್ರೋಟಾನು ಆಗುವಾಗ ಅಥವಾ ಪ್ರೋಟಾನು ನ್ಯೂಟ್ರಾನು ಆಗುವಾಗ ಬೀಟ ಕಣದ (ಇಲೆಕ್ಟ್ರಾನ್ ಅಥವಾ ಪಾಸಿಟ್ರಾನ್) ಉತ್ಸರ್ಜನೆಯಾಗಿ ಮೂಲಧಾತು ಕ್ಷಯಿಸುತ್ತದೆ. ಇದನ್ನು 'ಬೀಟ ಕ್ಷಯ' ಎನ್ನುತ್ತಾರೆ.

**ಅನಾಮಿಕ ಕಣದ ಸುಳಿವು**

ಸ್ವತಂತ್ರ ಹಾಗೂ ಇತರ ವ್ಯವಸ್ಥೆಗಳೊಡನೆ ಸಂಬಂಧವಿಲ್ಲದ ಪ್ರತ್ಯೇಕ ವ್ಯವಸ್ಥೆಯನ್ನು ಸಂವೃತ ವ್ಯವಸ್ಥೆ ಎನ್ನಬಹುದು. ಇಂಥ ವ್ಯವಸ್ಥೆಗಳಲ್ಲಿ ಒಟ್ಟು ಶಕ್ತಿ ಸ್ಥಿರವಾಗಿರುತ್ತದೆ. ಭೌತದಲ್ಲಿ ಇದನ್ನು ಶಕ್ತಿ ಸಂರಕ್ಷಣೆಯ ನಿಯಮ ಎನ್ನುತ್ತಾರೆ. ಬೀಟ ಕ್ಷಯದ ಪ್ರಕ್ರಿಯೆಯಲ್ಲಿ ಈ ನಿಯಮದ ಪ್ರಕಾರ ಪ್ರತಿಕ್ರಿಯೆಯ ಮೊದಲು ಮತ್ತು ಅನಂತರ ನ್ಯೂಕ್ಲಿಯಸ್ ಮತ್ತು ಬೀಟ ಕಣದ ಒಟ್ಟು ಶಕ್ತಿ ಸ್ಥಿರವಾಗುತ್ತದೆ. ಅಂದರೆ ಬೀಟ ಕಣ ಹೊಮ್ಮುವಾಗ ಅದರ ಶಕ್ತಿ ಪ್ರತಿಯೊಂದು ನ್ಯೂಕ್ಲಿಯಸ್ಸಿನ ಕ್ಷಯದಲ್ಲಿ ಸ್ಥಿರವಾಗಿರಬೇಕು. ಆದರೆ ಪ್ರಯೋಗಗಳಲ್ಲಿ ಕಂಡುಬಂದದ್ದೇ ಬೇರೆ. ಸೊನ್ನೆಯಿಂದ ಒಂದು ಗರಿಷ್ಠ ಮೌಲ್ಯದ ತನಕ ಬೀಟ ಕಣದ ಶಕ್ತಿ ಬದಲಾಗುತ್ತದೆ. ಅಂದರೆ ಪ್ರತಿಕ್ರಿಯೆಗಳಲ್ಲಿ ಬೀಟ ಕಣದ ಶಕ್ತಿ ಸತತವಾಗಿ ನಿಶ್ಚಿತ ಮಿತಿಯೊಳಗೆ ಏರುಪೇರಾಗುತ್ತದೆ. ಭೌತ ನಿಯಮದ ಈ ಉಲ್ಲಂಘನೆ ಹೇಗೆ ಸಾಧ್ಯ? ಆಸ್ಟ್ರಿಯದ ವೂಲ್ಫ್‌ಗಾಂಗ್ ಪೌಲಿ (೧೯೦೦ – ೧೯೫೮) ಇದಕ್ಕೊಂದು ಪರಿಹಾರ ನೀಡಿದ (೧೯೩೦): 'ಬೀಟ ಕ್ಷಯ ನಡೆಯುವಾಗ ಇರುವ ಸಂವೃತ ವ್ಯವಸ್ಥೆಯಲ್ಲಿ ನ್ಯೂಕ್ಲಿಯಸ್



ಮತ್ತು ಬೀಟ ಕಣಗಳಷ್ಟೇ ಅಲ್ಲದೆ ಮತ್ತೊಂದು ಕಣವೂ ಇದೆ. ಈ ಕಣ ವಿದ್ಯುತ್ ತಟಸ್ಥ. ಅಂದರೆ ಅದರಲ್ಲಿ ವಿದ್ಯುದಾವೇಶ ಇರುವುದಿಲ್ಲ. ರಾಶಿಯೋ ಶೂನ್ಯ ಎನಿಸಬಹುದಾದಷ್ಟು ಅಲ್ಪ. ಬೀಟ ಕಣದಲ್ಲಿ ಕಾಣೆಯಾದ ಶಕ್ತಿಯನ್ನು ಈ ಅನಾಮಿಕ ಕಣ ಕೊಂಡೊಯ್ಯುತ್ತದೆ.' ಬೀಟ ಕ್ಷಯಕ್ಕೆ ಸಿದ್ಧಾಂತವನ್ನು ರೂಪಿಸಿದ ಎನ್ರಿಕೋ ಫರ್ಮಿ (ಇಟಲಿ, ಅಮೆರಿಕ; ೧೯೦೧ – ೧೯೫೪) 'ತಟಸ್ಥ ಚಿಕಣಿ' ಎಂಬರ್ಥದಲ್ಲಿ ಆ ಕಣವನ್ನು 'ನ್ಯೂಟ್ರಿನೊ' ಎಂದು ಕರೆದ (೧೯೩೪). ಅಂತೂ 'ಬೀಟ ಕ್ಷಯ ಎರಡು ಕಣಗಳನ್ನು ಒಳಗೊಂಡ ಪ್ರಕ್ರಿಯೆಯಲ್ಲ, ಅದು ಮೂರು ಕಣಗಳ ಪ್ರಕ್ರಿಯೆ' ಎಂಬುದು ಖಚಿತವಾಯಿತು.

**ಮೂರನೇ ಕಣದಲ್ಲೂ ಹಲವು ವಿಧಗಳು**

ಯಾವ ಕಣದೊಂದಿಗೆ ನ್ಯೂಟ್ರಿನೊ ಕಾಣಿಸುತ್ತದೆ ಎಂಬುದನ್ನು ಅವಲಂಬಿಸಿ ಅದು ಯಾವ ವಿಧದ್ದು ಎಂದು ನಿಶ್ಚಯವಾಗುತ್ತದೆ. ಇಲೆಕ್ಟ್ರಾನ್‌ನೊಂದಿಗೆ ಇಲೆಕ್ಟ್ರಾನ್ ನ್ಯೂಟ್ರಿನೊ, ಮ್ಯೂಯಾನ್‌ನೊಂದಿಗೆ ಮ್ಯೂಯಾನ್ ನ್ಯೂಟ್ರಿನೊ ಟೌಆನ್‌ನೊಂದಿಗೆ ಟೌಆನ್ ನ್ಯೂಟ್ರಿನೊ.... ಹೀಗೆ. ಇವನ್ನು ಮೂರು ಬಗೆಯ 'ಸ್ವಾದ'ಗಳೆಂದು ಆಲಂಕಾರಿಕವಾಗಿ ಕರೆದಿದ್ದಾರೆ. ಅಷ್ಟೇ ಅಲ್ಲ, ಪ್ರತಿ ಕಣಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಪ್ರತಿ ಇಲೆಕ್ಟ್ರಾನ್ ನ್ಯೂಟ್ರಿನೊ, ಪ್ರತಿ ಮ್ಯೂಯಾನ್ ನ್ಯೂಟ್ರಿನೊ, ಪ್ರತಿ ಟೌಆನ್ ನ್ಯೂಟ್ರಿನೊಗಳಿವೆ. ಈ ಹೇಳಿಕೆಯೊಂದಿಗೆ 'ಫೋಟಾನ್ (ಬೆಳಕಿನ ಕಣ) ಕಣದ ಪ್ರತಿ ಕಣ ಫೋಟಾನೇ. ಹಾಗೆಯೇ ನ್ಯೂಟ್ರಿನೋ ಕಣದ ಪ್ರತಿ ಕಣ ನ್ಯೂಟ್ರಿನೋ ಏಕಾಗಬಾರದು?' ಎಂಬ ಪ್ರಶ್ನೆಯೂ ಬಂದಿದೆ. ನ್ಯೂಟ್ರಿನೊ ಕಣಗಳನ್ನು ಉತ್ಪಾದಿಸುವ ಹಲವು ಆಕರಗಳು ವಿಶ್ವದಲ್ಲಿವೆ. ಸೂರ್ಯನಲ್ಲಿ ನಡೆಯುವ ನ್ಯೂಕ್ಲಿಯರ್ ಸಮ್ಮಿಲನ ಕ್ರಿಯೆಯಲ್ಲಿ ಅವು ಹುಟ್ಟುತ್ತವೆ. ಅವನ್ನು ಸೌರ ನ್ಯೂಟ್ರಿನೊಗಳೆಂದು ಕರೆಯುವುದುಂಟು. ನ್ಯೂಕ್ಲಿಯರ್ ರಿಯಾಕ್ಟರ್‌ನಲ್ಲಿ ನಡೆಯುವ ಪ್ರತಿಕ್ರಿಯೆ ಭೂ ವಾತಾವರಣದ ಪರಮಾಣುಗಳೊಂದಿಗೆ ವಿಶ್ವಕಿರಣಗಳ ಸಂಘರ್ಷ, ಸೂಪರ್ನೋವದಲ್ಲಿ ನಡೆಯುವ ಪ್ರತಿಕ್ರಿಯೆ, ವಿಕಿರಣಪಟುತ್ವ – ಇವೆಲ್ಲ ನ್ಯೂಟ್ರಿನೊ ಸೃಷ್ಟಿಗೆ ಕಾರಣವಾಗುತ್ತವೆ.

ನ್ಯೂಟ್ರಿನೊ ತುಬ್ಬು ಹೇಗೆ? ಆವೇಶವಿಲ್ಲ. ಆದ್ದರಿಂದ ವಿದ್ಯುತ್ಕಾಂತೀಯ ಬಲದ ಪ್ರಯೋಗ ಸಾಧುವಲ್ಲ. ನ್ಯೂಕ್ಲಿಯರ್ ಪ್ರಬಲ ಬಲವೂ ಅದರ ಮೇಲೆ ವರ್ತಿಸದು. ಕ್ಷೀಣಬಲ ಮತ್ತು ಗುರುತ್ವವನ್ನಷ್ಟೇ ಬಳಸಬೇಕಷ್ಟೆ. ಅತ್ಯಂತ ಚಂಚಲವೆಂದು ಕಂಡುಬಂದರೂ ಸೀಸಲೋಹದಲ್ಲಿ ಜ್ಯೋತಿರ್ವರ್ಷ (ಅಂದರೆ ಬೆಳಕು ಒಂದು ವರ್ಷದಲ್ಲಿ ಸಾಗಬಹುದಾದ ದೂರ) ಸಾಗಿದರೂ ಸ್ಥಿರತೆಯನ್ನು ಉಳಿಸಿಕೊಳ್ಳಬಹುದಾದದ್ದು ನ್ಯೂಟ್ರಿನೊ ಕಣ. ಸೂರ್ಯನಿಗೆದುರಾದ ಭೂ ಮೈಮೇಲೆ ಬಿದ್ದ ನ್ಯೂಟ್ರಿನೊಗಳು ಮತ್ತೊಂದು – ಸೂರ್ಯನಿಂದ ದೂರದ – ಮೈಯಿಂದ ಸರಾಗವಾಗಿ ಹೊರಬರ ಬಲ್ಲುವು. ದಂಗುಗೊಳಿಸುವ ವಿಪುಲತೆ ಅವುಗಳದ್ದು. ಆದರೆ ಎಲ್ಲಿಯೂ ಸಿಕ್ಕಿಹಾಕಿಕೊಳ್ಳದೆ ತಪ್ಪಿಸಿಕೊಂಡು ಸುಮಾರು ಬೆಳಕಿನ ವೇಗದಲ್ಲಿ ಸಾಗಬಲ್ಲ ನ್ಯೂಟ್ರಿನೊಗಳನ್ನು ಪತ್ತೆಹಚ್ಚುವ ದಾರಿ ಯಾವುದು?

**ನ್ಯೂಟ್ರಿನೊ ತುಬ್ಬುಕಾರಿ**

ಅಮೆರಿಕದ ಕ್ಲೈಡ್ ಕೊವನ್ ಮತ್ತು ಫ್ರೆಡರಿಕ್ ರೀನ್ಸ್ ನ್ಯೂಟ್ರಿನೊವನ್ನು ಪತ್ತೆಮಾಡಿ ಅದರ ಅಸ್ತಿತ್ವವನ್ನು ದೃಢೀಕರಿಸಲು ಅಗತ್ಯವಾದ

## ದಾದ್ರಾ




ಬಾಬ್ರಿ ಕರಿನೆರಳಲಿ
ಗೋದ್ರಾ ನಲುಗಿತು.

ದಾದ್ರಾ ಹೆಮ್ಮರವಾಗಿ
ನಮ್ಮ ನಿಮ್ಮ ನಡುವೆ
ಬಿಡಿಸಲಾಗದ
ಬರಸಿಡಿಲಾಗಿ ಎರಗಿತು.

ಮನುಕುಲ ಬುಡಕೆ
ಅಸುರ ರೂಪದಿ ಬಂದು
ತಾಳ ಮದ್ದಳೆ ಕಳೆ
ಕಂಗಾಲಾಗಿ ಹೋಯಿತು.

ಪ್ರಭುತ್ವ ಸೋಂಕು ತಳೆ
ಜನಸಮೂಹ ತಲ್ಲಣ ಬಿಂಬ
ಎಳೆ ಎಳೆ ಗಾನ ತಾಕಲಾಟ
ತೊರೆಯಾಗಿ ಹರಿಯಿತು.


**ದ್ವಾರನಕುಂಟೆ ಪಾತಣ್ಣ**
ನಂ. ೧೧೮, 'ಹೊಂಬೆಳಕು', ಹೆಚ್.ಎಂ.ಟಿ. ಲೇಔಟ್, ನಾಗಸಂದ್ರ ಅಂಚೆ
ಬೆಂಗಳೂರು – ೫೬೦ ೦೭೩

ಪ್ರಯೋಗವನ್ನು ಸಿದ್ಧಗೊಳಿಸಿದರು (೧೯೫೬). ತುಬ್ಬುಕಾರಿ ಉಪಕರಣದಲ್ಲಿ ನೀರಿನ ಎರಡು ತೊಟ್ಟಿಗಳಿದ್ದುವು. ಅವು ದ್ಯುತಿ ಗುಣಕ ನಳಿಗೆಗಳಿರುವ ಫೋಟೊ ಮಲ್ಟಿಪ್ಲಯರ್ ಟ್ಯೂಬುಗಳಿರುವ ಮೂರು ಮಿನುಗುಕಾರಿಗಳ (ಸಿಂಟಿಲೇಟರ್) ಮಧ್ಯೆ ಇದ್ದುವು. ಮಂದ ಬೆಳಕಿನ ಕಿರಣಗಳ ತೀವ್ರತೆಯನ್ನು ೧೦ ಕೋಟಿ ಪಟ್ಟು ಹೆಚ್ಚಿಸುವ ಸಾಮರ್ಥ್ಯ ನಳಿಗೆಗಳಿಗಿತ್ತು. ನೀರಿನಲ್ಲಿ ಕ್ಯಾಡ್ಮಿಯಂ ಕ್ಲೋರೈಡನ್ನು ಕರಗಿಸಿ ನ್ಯೂಟ್ರಾನನ್ನು ಕ್ಯಾಡ್ಮಿಯಂ ಧಾತು ಹೀರುವಂತೆ ಮಾಡಲಾಗಿತ್ತು. ಪ್ರಕೃತಿಯಲ್ಲಿರುವ ಆಕರಗಳನ್ನು ಅವಲಂಬಿಸದೆ ನ್ಯೂಕ್ಲಿಯರ್ ರಿಯಾಕ್ಟರ್‌ನಿಂದ ಬರಬಹುದಾದ ನ್ಯೂಟ್ರಿನೊಗಳನ್ನು ಕೊವನ್ ಮತ್ತು ರೀನ್ಸ್ ಬಳಸಿಕೊಂಡರು. ಸಂಶೋಧನೆಗಾಗಿ ನ್ಯೂಟ್ರಿನೊಗಳನ್ನು ಪಡೆಯಲು ಪ್ರಾರಂಭದಲ್ಲಿ ಅವರು ಪರಮಾಣು ಬಾಂಬಿನ ಸ್ಫೋಟಕ್ಕೆ ಕೂಡ ಅನುಮತಿ ಕೇಳಿದ್ದರು ! ಆದರೆ ಚದರ ಸೆಂಟಿಮೀಟರ್ ಸಲೆಯಲ್ಲಿ ಸೆಕೆಂಡಿಗೆ ಹತ್ತು ಲಕ್ಷ ಕೋಟಿ ನ್ಯೂಟ್ರಿನೊಗಳನ್ನು ಹಾದುಹೋಗುವಂಥ ಏರ್ಪಾಟು ನ್ಯೂಕ್ಲಿಯರ್ ರಿಯಾಕ್ಟರಿನಿಂದ ಸಾಧ್ಯವಿದೆ ಎಂದು ತಿಳಿದ ಮೇಲೆ ಅವರು ರಿಯಾಕ್ಟರನ್ನೇ ನ್ಯೂಟ್ರಿನೊ ಆಕರವಾಗಿ ಆರಿಸಿದರು. ವಿಶ್ವಕಿರಣಗಳಿಗೆ ತುಬ್ಬುಕಾರಿಯು ಎರವಾಗದಂತೆ ನೆಲವನ್ನೇ ಅಡ್ಡಣವಾಗಿ ಬಳಸಿ ಪ್ರಯೋಗವನ್ನು ನೆಲದೊಳಗೆ ೧೧ ಮೀಟರ್ ಆಳದಲ್ಲಿ ನಡೆಸಿದರು. ಹಾನ್‌ಫರ್ಡ್ ಮತ್ತು ಸವಾನ್ನ ನದಿ ಸ್ಥಾವರ (ದಕ್ಷಿಣ ಕೆರೊಲಿನ)ಗಳನ್ನು ಅವರು ಪ್ರಯೋಗಕ್ಕಾಗಿ ಆರಿಸಿದರು. ತಿಂಗಳುಗಟ್ಟಲೆ ದತ್ತಾಂಶಗಳನ್ನು ಸಂಗ್ರಹಿಸಿ ಅವರು ಗಂಟೆಗೆ ಸರಾಸರಿ ಮೂರು ನ್ಯೂಟ್ರಿನೊಗಳ ವಿವರಗಳನ್ನು ದಾಖಲಿಸಿದರು.

ನೀರ ತೊಟ್ಟಿಗಳಲ್ಲಿದ್ದ ಪ್ರೋಟಾನುಗಳೊಂದಿಗೆ (ಇವು ಹೈಡ್ರೊಜನ್ ಪರಮಾಣುಗಳ ನ್ಯೂಕ್ಲಿಯಸ್ಸುಗಳು) ನ್ಯೂಟ್ರಿನೊಗಳು ವರ್ತಿಸಿದಾಗ ನ್ಯೂಟ್ರಾನ್ ಮತ್ತು ಪಾಸಿಟ್ರಾನ್‌ಗಳು ಸೃಷ್ಟಿಯಾಗುತ್ತವೆ. ಮಾಧ್ಯಮದಲ್ಲಿರುವ ಮುಕ್ತ ಇಲೆಕ್ಟ್ರಾನ್‌ನೊಂದಿಗೆ ಪಾಸಿಟ್ರಾನ್ ವರ್ತಿಸಿದಾಗ ಎರಡೂ ಕಣಗಳು ನಿರ್ನಾಮವಾಗಿ ಎರಡು ಗಾಮ ಕಿರಣಗಳುಂಟಾಗುತ್ತವೆ. ಮಿನುಗುಕಾರಿಯು ಈ



ಕಿರಣಗಳನ್ನು ಪತ್ತೆಹಚ್ಚಿತೆಂದರೆ ನ್ಯೂಟ್ರಿನೊ (ಅಥವಾ ಪ್ರತಿ ನ್ಯೂಟ್ರಿನೊ) ಅಸ್ತಿತ್ವ ಖಚಿತವಾದಂತೆಯೇ ಸರಿ. ಆದರೆ ಪ್ರಯೋಗನಿರತ ಕೊವನ್ ಮತ್ತು ರೀನ್ಸ್ ಈ ಬಗ್ಗೆ ಇನ್ನೂ ಅಧಿಕ ಖಚಿತತೆಯನ್ನು ಬಯಸಿದರು. ಅದಕ್ಕಾಗಿ ನ್ಯೂಟ್ರಾನನ್ನು ಹೀರಿ ಶಕ್ತಿಯ ಉದ್ರಿಕ್ತ ಸ್ಥಿತಿಯನ್ನು ತಲಪುವ ಕ್ಯಾಡ್ಮಿಯಂ ನ್ಯೂಕ್ಲಿಯಸ್ ಬಿಟ್ಟುಕೊಡುವ ಗಾಮ ಕಿರಣವನ್ನು ಕೂಡ ಅವರು ದಾಖಲಿಸಿದರು. ಅಂದರೆ ನ್ಯೂಟ್ರಿನೊದಿಂದ ನಿರೀಕ್ಷಿಸಿದ ಪ್ರತಿಕ್ರಿಯೆಗಳನ್ನು ಯಾವ ಸಂದೇಹಕ್ಕೂ ಎಡೆ ಇಲ್ಲದಂತೆ ದೃಢೀಕರಿಸಿದರು. ರಿಯಾಕ್ಟರನ್ನು ಮುಚ್ಚಿದಾಗ ನ್ಯೂಟ್ರಿನೊ ಇಳುವರಿಯಲ್ಲಿ ವ್ಯತ್ಯಾಸವನ್ನೂ ಅವರು ತೋರಿಸಿದರು. ೧೯೫೬ನೇ ಜುಲೈ ೨೦ರಂದು ತಾವು ಪಡೆದ ಫಲಿತಾಂಶಗಳ ಆಧಾರದ ಮೇಲೆ ನ್ಯೂಟ್ರಿನೊ ಕಣದ ಅಸ್ತಿತ್ವವನ್ನು ಸಾರಿದರು. ರೀನ್ಸ್ ೧೯೯೫ರ ನೊಬೆಲ್ ಭೌತ ಪ್ರಶಸ್ತಿ ಪಡೆದ. ಆ ವೇಳೆಗೆ ಕೊವನ್ ತೀರಿಹೋಗಿದ್ದ.

ಸಡ್ಬಂ ನ್ಯೂಟ್ರಿನೊ ವೀಕ್ಷಣಾಲಯ ಕೆನಡದಲ್ಲಿದೆ. ಇಲ್ಲಿ ನ್ಯೂಟ್ರಿನೊ ಅಂತರ್ವರ್ತನೆಗೆ ಸಾಮಾನ್ಯ ನೀರಿನ ಬದಲಾಗಿ ಭಾರ ಜಲವನ್ನು ಉಪಯೋಗಿಸಿದರು. ಸೌರ ನ್ಯೂಟ್ರಿನೊಗಳ ಅಧ್ಯಯನಕ್ಕೆ ಇಲ್ಲಿ ಮಹತ್ವ ಕೊಟ್ಟರು. ಇದರ ನಿರ್ದೇಶಕ ಆರ್ಥರ್ ಮೆಕ್‌ಡೊನಾಲ್ಡ್ ೨೦೧೫ನೇ ವರ್ಷದ ನೊಬೆಲ್ ಭೌತ ಪ್ರಶಸ್ತಿಯನ್ನು ಹಂಚಿಕೊಂಡುದನ್ನು ಮೊದಲಿಗೇ ತಿಳಿಸಲಾಗಿದೆ. ನ್ಯೂಟ್ರಿನೊ ತೂಗಾಟ (ಅಥವಾ ನ್ಯೂಟ್ರಿನೊ ದೋಲಿನದ) ಕುರಿತ ಸಂಶೋಧನೆಗೆ ಇದರಿಂದ ಗೌರವ ಸಂದಂತಾಯಿತು.

**ಸೌರ ನ್ಯೂಟ್ರಿನೊಗಳ ಸಮಸ್ಯೆ**

ಸೂರ್ಯನ ಆಂತರಿಕ ಸಂರಚನೆಯ ಮಾದರಿಯನ್ನು ರೂಪಿಸಿ ಸೂರ್ಯನಿಂದ ಬರುವ ನ್ಯೂಟ್ರಿನೊ ಹರಿವನ್ನು ಅಂದಾಜು ಮಾಡಬಹುದು. ಹಾಗೆಯೇ ಸೂರ್ಯನಿಂದ ಭೂಮಿಗೆ ವಾಸ್ತವವಾಗಿ ಬರುವ ನ್ಯೂಟ್ರಿನೊ ಸಂಖ್ಯೆಯನ್ನು ಪ್ರಯೋಗಗಳಿಂದ ನಿರ್ಧರಿಸಬಹುದು. ಮಾದರಿಯ ಜಾಡು ಹಿಡಿದುಕೊಂಡು ಹೋದರೆ ನ್ಯೂಟ್ರಿನೊ ಹುಟ್ಟಿಕೊಂಡ ನಮೂನೆಯೇ ಮುಂದೆಯೂ ಸತತವಾಗಿ ಮುಂದುವರಿಯಬೇಕು; ಹೈಡ್ರೊಜನ್ ಪರಮಾಣುಗಳ ಸಮ್ಮಿಲನದ ಸನ್ನಿವೇಶದಲ್ಲೇ ಹುಟ್ಟಿಕೊಂಡ ಇಲೆಕ್ಟ್ರಾನ್ ನ್ಯೂಟ್ರಿನೊಗಳನ್ನೇ ಸೂರ್ಯ ಹೊಮ್ಮಿಸಬೇಕು. ಆದರೆ ಪ್ರಯೋಗ ಫಲಿತಾಂಶಗಳು ತೋರಿಸಿದ್ದೇ ಬೇರೆ. ನಿರೀಕ್ಷಿತ ಸಂಖ್ಯೆಯ ೧/೩ ಅಥವಾ ಅರ್ಧದಷ್ಟು ಇಲೆಕ್ಟ್ರಾನ್ ನ್ಯೂಟ್ರಿನೊಗಳಷ್ಟೇ ಕಂಡುಬಂದವು. ದಕ್ಷಿಣ ಡಕೋಟ (ಅಮೆರಿಕಾ) ಹೋಮ್‌ಸ್ಟಿಕ್‌ನಲ್ಲಿ ರೇಮಂಡ್ ಡೇವಿಡ್ (೧೯೧೪ – ೨೦೦೬) ನಡೆಸಿದ ಪ್ರಯೋಗ ಸುಮಾರು ೨೫ ವರ್ಷ ದೀರ್ಘಾವಧಿಯದ್ದು. ಸೌರ ನ್ಯೂಟ್ರಿನೊಗಳ ಸಂಖ್ಯೆಯಲ್ಲಿರುವ ಕೊರತೆಯನ್ನು ಅದು ಮೊತ್ತಮೊದಲಿಗೆ ತೋರಿಸಿತು. ಆಗ ನ್ಯೂಟ್ರಿನೊ ರಾಶಿ ಶೂನ್ಯ ಎಂದೇ ಭಾವಿಸಿದ್ದರು. ಸೂರ್ಯನದ್ದೆಂದು ಭಾವಿಸಲಾದ ಮೊದ ಮೊದಲ ಮಾದರಿಗಳೆಲ್ಲ ತಪ್ಪಾಗಿದ್ದವು. ನ್ಯೂಟ್ರಿನೊಗಳ ಗುಣಲಕ್ಷಣಗಳು ನಿಷ್ಕೃಷ್ಟವಾಗಿ ತಿಳಿಯುತ್ತಿದ್ದಂತೆ ಸಮಸ್ಯೆಗೂ ಪರಿಹಾರ ಸಿಕ್ಕಿತು. ರೇಮಂಡ್ ಡೇವಿಡ್ ೨೦೦೨ರ ಭೌತ ನೊಬೆಲ್ ಪ್ರಶಸ್ತಿ ಪಡೆದ. ನ್ಯೂಟ್ರಿನೊಗಳಲ್ಲಿ ಮೂರು ನಮೂನೆಗಳು ಅಥವಾ ಸ್ವಾದಗಳು ಇವೆ; ನ್ಯೂಟ್ರಿನೊಗಳ ರಾಶಿ ಶೂನ್ಯವಲ್ಲ; ಅವು ಒಂದು ಸ್ವಾದದಿಂದ ಮತ್ತೊಂದು ಸ್ವಾದಕ್ಕೆ ಬದಲಾಗಬಲ್ಲುವು. ಜಪಾನಿನ ಕಾಮಿಯೊಕಂಡೆ ಹಾಗೂ ಕೆನಡದ ಸಡ್ಬಂ ವೀಕ್ಷಣಾಲಯ,

ಈರಿ ಸರೋವರದ ದಡದಲ್ಲಿರುವ ಐಎಮ್‌ಬಿ (ಇರ್ವಿನ್–ಮಿಷಿಗನ್–ಬ್ರೂಕ್‌ಹೇವನ್) ತುಬ್ಬುಕಾರಿ – ಇಲ್ಲೆಲ್ಲ ಕಂಡುಬಂದ ಪ್ರಯೋಗ ಫಲಿತಾಂಶಗಳು ನ್ಯೂಟ್ರಿನೊ ದೋಲನವನ್ನು ಸಮರ್ಥಿಸಿದುವು. ಸುಮಾರು ನಲವತ್ತು ವರ್ಷಗಳ ತನಕ ಸೌರ ನ್ಯೂಟ್ರಿನೊ ಗೊಂದಲದಿಂದಾಗಿ ಹುಟ್ಟಿದ ಅನಿಶ್ಚಿತತೆ ನ್ಯೂಟ್ರಿನೊ ದೋಲನದ ಆವಿಷ್ಕಾರದಿಂದ ಪರಿಹಾರವಾಯಿತು. ೨೦೧೫ನೇ ವರ್ಷದ ಭೌತ ನೊಬೆಲ್ ಪ್ರಶಸ್ತಿ ನ್ಯೂಟ್ರಿನೊ ದೋಲನದ ಆವಿಷ್ಕಾರಕ್ಕೆ ಲಭಿಸಿತು.

**ಮುಂದುವರಿಯುತ್ತಿರುವ ಪ್ರಯೋಗಗಳು**

ನ್ಯೂಟ್ರಿನೊ ಸ್ವಾದಗಳನ್ನು ಪರಿಗಣಿಸಿ (ಇಲೆಕ್ಟ್ರಾನ್ ನ್ಯೂಟ್ರಿನೊ, ಮ್ಯೂಯಾನ್ ನ್ಯೂಟ್ರಿನೊ ಮತ್ತು ಟೌಆನ್ ನ್ಯೂಟ್ರಿನೊ) ಪಡೆಯುವ ಒಟ್ಟು ನ್ಯೂಟ್ರಿನೊಗಳು ಯಾವುದೇ ಆಕರದಿಂದ ಹರಿಯುವ ನ್ಯೂಟ್ರಿನೊ ಸಂಖ್ಯೆಗೆ ಸಮವಾಗಿದೆಯೆ ? ಅಂಥ ಸಮತೆ ಇಲ್ಲವಾದರೆ ಅದಕ್ಕೇನು ಕಾರಣ ? ಮೂರು ಸ್ವಾದಗಳಿಗೆ ಒಳಗಾಗದ ಬರಡು ನ್ಯೂಟ್ರಿನೊ ಅಥವಾ ಜಡ ನ್ಯೂಟ್ರಿನೊ ಇರಬಹುದೆ ? ಅದನ್ನು ಪತ್ತೆಮಾಡುವ ಬಗೆ ಹೇಗೆ ? ಈಗ ಅಜ್ಞಾತವಾಗಿರುವ ಗುಣಗಳಿರುವ – ಡಿರಾಕ್ ನ್ಯೂಟ್ರಿನೊ, ಮಜೊರಾನ ನ್ಯೂಟ್ರಿನೊ ಎಂದೆಲ್ಲ ಹೆಸರಿಸಿ ಊಹಿಸುವ – ನ್ಯೂಟ್ರಿನೊಗಳಿರಬಹುದೆ ? ಈಗ ಮೂಲ ಕಣಗಳ ಶಿಷ್ಟ ಮಾದರಿಯೆಂದು ಭಾವಿಸಿರುವ ಕೋಷ್ಟಕದಲ್ಲಿ ನ್ಯೂಟ್ರಿನೊ ಸ್ವಾದಗಳ ರಾಶಿಗಳು ಏರುತ್ತ ಅಥವಾ ಇಳಿಯುತ್ತ ಸಾಗುವ ಪ್ರಮಾಣದಲ್ಲಿ ಬದಲಾವಣೆ ಬೇಕಾಗಬಹುದೆ ? ಹೀಗೆ ಏಳುವ ಹಲವು ಪ್ರಶ್ನೆಗಳಿಗೆ ಪರಿಹಾರ ಬೇಕೆಂದೇ ವಿವಿಧ ರಾಷ್ಟ್ರಗಳು ಒಂದೊಂದಾಗಿಯೋ ಸಾಮೂಹಿಕವಾಗಿಯೋ ಬೃಹತ್ ಗಾತ್ರದ ಉಪಕರಣಗಳನ್ನು ಒಳಗೊಂಡ ಪ್ರಯೋಗಗಳಿಗೆ ಅಣಿಯಾಗಿವೆ.

ವಿಜ್ಞಾನಿಗಳ ಅಂತರರಾಷ್ಟ್ರೀಯ ತಂಡವೊಂದು ದಕ್ಷಿಣಧ್ರುವದ ಮಂಜುಗಡ್ಡೆಯಡಿಯಲ್ಲಿ ರಾಶಿರಹಿತ ನ್ಯೂಟ್ರಿನೊಗಳ ಹುಡುಕಾಟ ನಡೆಸಿದೆ. ಸುಮಾರು ೧ ಘನ ಕಿಲೊಮೀಟರ್ ಗಾತ್ರದಲ್ಲಿ, ಒಂದೂವರೆಯಿಂದ ಎರಡೂವರೆ ಕಿಲೊಮೀಟರ್ ಆಳದಲ್ಲಿ ೫೦೦೦ಕ್ಕಿಂತಲೂ ಅಧಿಕ ದ್ಯುತಿ ಸಂವೇದಕಗಳಿವೆ. ಅತಿಶಕ್ತಿಯುತ ನ್ಯೂಟ್ರಿನೊಗಳನ್ನು ಹುಡುಕುವುದೇ ಈ 'ನೆಲಾಂತರ್ಗತ ದೂರದರ್ಶಕ'ದ ಗುರಿ.

ಚಿಕಾಗೊ ಸಮೀಪದ ಫರ್ಮಿಲ್ಯಾಬ್‌ನಿಂದ ನ್ಯೂಟ್ರಿನೊಗಳ ತೀವ್ರ ರಶ್ಮಿ ನೆಲದಡಿಯಲ್ಲಿ ಸುಮಾರು ೭೫೦ ಕಿ.ಮೀ. ದೂರ ಹಾದು ಮಿನೆಸೋಟದ ಸೌಡನ್ ಗಣಿಯನ್ನು ತಲಪುತ್ತದೆ. ನ್ಯೂಟ್ರಿನೊ ದೋಲನದ ಸಂಶೋಧನೆಗಾಗಿ ಈ ವ್ಯವಸ್ಥೆಯನ್ನೊಳಗೊಂಡ ಪ್ರಯೋಗ ನಡೆದಿದೆ.

ಚೀನದಲ್ಲಿ ನಡೆಯುತ್ತಿರುವ ದಯಬೇ ರಿಯಾಕ್ಟರ್ ನ್ಯೂಟ್ರಿನೊ ಪ್ರಯೋಗವು ಒಂದು ಬಹುರಾಷ್ಟ್ರೀಯ ಯೋಜನೆ. ಇಪ್ಪತ್ತು ಸಾವಿರ ಟನ್ ದ್ರವ ಮಿನುಗುಕಾರಿಯನ್ನೊಳಗೊಂಡ ಈ ಪ್ರಯೋಗ ಪ್ರತಿ ನ್ಯೂಟ್ರಿನೊ ಪತ್ತೆಗೆ ಹೆಚ್ಚು ಒತ್ತು ನೀಡಿದೆ. ನ್ಯೂಟ್ರಿನೊ ದೋಲನವೇ ಇಲ್ಲಿನ ಮುಖ್ಯ ಪ್ರಮೇಯ.

ತಮಿಳುನಾಡಿನ ಥೇಣಿ ಸಮೀಪದ ಪರ್ವತ ಶಿಖರದ ಅಡಿಯಲ್ಲಿ, ಸುಮಾರು ೧.೩ ಕಿಲೊಮೀಟರ್ ಆಳದಲ್ಲಿ ಕೊರೆಯಲಾಗುವ ಸುರಂಗದಲ್ಲಿ ಭಾರತದ ನ್ಯೂಟ್ರಿನೊ ವೀಕ್ಷಣಾಲಯ ನಿರ್ಮಾಣವಾಗುತ್ತದೆ. ಅದು ಪೂರ್ಣವಾದಾಗ ಜಗತ್ತಿನ ಅತ್ಯಂತ ಹೆಚ್ಚು ತೂಕದ ಕಾಂತ (ಸುಮಾರು ೫೦ ಸಾವಿರ ಟನ್) ಇಲ್ಲಿ ಸ್ಥಾಪನೆಯಾಗುತ್ತದೆ. ವಾತಾವರಣದ ನ್ಯೂಟ್ರಿನೊಗಳು ಇಲ್ಲಿ ಸಂಶೋಧನೆಗೊಳಗಾಗುತ್ತವೆ.

ಜಪಾನಿನ ಇಕೆನೊಯಾಮ ಶಿಖರದ ಕೆಳಗೆ 'ಸೂಪರ್ ಕಾಮಿಯೊಕಂಡೆ' ನ್ಯೂಟ್ರಿನೊ ವೀಕ್ಷಣಾಲಯವಿದೆ. ಸೌರ ನ್ಯೂಟ್ರಿನೊ ಮತ್ತು ವಾತಾವರಣದ ನ್ಯೂಟ್ರಿನೊ ಅಧ್ಯಯನ, ಆಕಾಶಗಂಗೆ ಗೆಲಕ್ಸಿಯಲ್ಲಿ ಸೂಪರ್‌ನೋವ ಘಟನೆಗಳ ಪಹರೆ ಇಲ್ಲಿ ನಡೆದಿದೆ. ೫೦ ಸಾವಿರ ಟನ್ ಅತಿಶುದ್ಧ ನೀರನ್ನು ತುಂಬಬಹುದಾದ ತೊಟ್ಟಿಯಲ್ಲಿ ೪೧ ಮೀಟರ್ ಎತ್ತರ ಮತ್ತು ೩೯ ಮೀಟರ್ ವ್ಯಾಸದ ತುಕ್ಕುರಹಿತ ಉಕ್ಕಿನ ಸಂರಚನೆ, ಹನ್ನೊಂದು ಸಾವಿರಕ್ಕಿಂತಲೂ ಅಧಿಕ ಸಂಖ್ಯೆಯ ದ್ಯುತಿಗುಣಕ ನಳಿಗೆಗಳು ಇಲ್ಲಿನ ತುಬ್ಬುಕಾರಿಯಲ್ಲಿವೆ. ಜಪಾನಿನ ಟಿಟುಕ (ಟೊಕಾಯಿಂದ ಕಾಮಿಯೋಕಕ್ಕೆ ಎಂಬುದರ ಇಂಗ್ಲಿಷ್ ಅನುವಾದದ ಹ್ರಸ್ವರೂಪ) ಪ್ರಯೋಗದಲ್ಲಿ ಹಲವು ದೇಶಗಳು ಭಾಗಿಯಾಗಿವೆ. ದೀರ್ಘ ರೇಖಾಪಥದಲ್ಲಿ ಸಾಗುವ ನ್ಯೂಟ್ರಿನೊಗಳ ದೋಲನವೇ ಇಲ್ಲಿ ಸಂಶೋಧನೆಯ ಪ್ರಮೇಯ.




ಮೇಲೆ ಸೂಚಿಸಿದ ಪ್ರಯೋಗಗಳು ಜಗತ್ತಿನಲ್ಲಿ ನಡೆಯುವ ಪ್ರಯೋಗಗಳ ಪ್ರಾತಿನಿಧಿಕ ಚಿತ್ರಣ ಮಾತ್ರ. ನ್ಯೂಟ್ರಿನೊಗಳು ಸೂಚಿಸಿರುವ ಸಾಧ್ಯತೆ ಸಂಭವನೀಯತೆಗಳಿಂದಾಗಿ ಚುರುಕಾದ, ಕ್ರಿಯಾತ್ಮಕ ಸಂಶೋಧನೆಗಳೆಡೆ ಅವು ಬೊಟ್ಟು ಮಾಡಿ ತೋರಿಸಿವೆ.

**ಆಸೆ, ಪ್ರಶ್ನೋತ್ತರ**

ನ್ಯೂಟ್ರಿನೊಗಳ ವಿಶಿಷ್ಟ ವರ್ತನೆಗಳು ಭವಿಷ್ಯದ ಬಗ್ಗೆ, ಸಮಸ್ಯಾ ಪರಿಹಾರಗಳ ಬಗ್ಗೆ ಆಸೆ ಹುಟ್ಟಿಸಿವೆ. ಅಂಥ ಆಸೆಗಳಿಗೆ ಅವಕಾಶವಿಲ್ಲದಾಗ ಪ್ರಶ್ನೆಗಳನ್ನು ಹುಟ್ಟುಹಾಕಿವೆ.

ನಾವು ನಮ್ಮ ಸುತ್ತಲಿನ ವಿಶ್ವದಲ್ಲಿ ಅನುಭವಿಸುವ ದ್ರವ್ಯ–ಪ್ರತಿದ್ರವ್ಯಗಳ ಅಸಮತೆಗೆ ಕಾರಣಗಳೇನು ?

ಬಹುದೂರದ ಲೇಸರ್‌ನಂಥ ಆಕಾಶಕಾಯ ಮತ್ತು ಭೂಮಿಯ ನಡುವೆ ಇರುವ ಗೆಲಕ್ಸಿಯಂಥ ಕಾಯಗಳು ಬೆಳಕಿನ ಕಿರಣಗಳನ್ನು ಗುರುತ್ವಬಲಕ್ಕೆ ಒಳಪಡಿಸಿ ಬಾಗುವಂತೆ ಮಾಡುತ್ತವೆ. ಇದಕ್ಕೆ 'ಗುರುತ್ವ ಮಸೂರನ' ಎನ್ನಬಹುದು. ಈ ಪರಿಣಾಮವನ್ನು ನ್ಯೂಟ್ರಿನೊಗಳು ಕ್ಷೀಣಿಸುತ್ತವೆ. ಅವು ರಾಶಿಯುಕ್ತವೆ ಅಲ್ಲದೆ ಎಂಬುದನ್ನು ಇದರಿಂದ ನಿರ್ಧರಿಸಬಹುದೆ ?

ನಮಗೆ ನೋಡಲಾಗುವ ನಕ್ಷತ್ರ, ಗೆಲಕ್ಸಿ, ಗ್ರಹ, ಉಪಗ್ರಹಗಳೆಲ್ಲ ವಿಶ್ವದ ಕೇವಲ ಸೇಕಡ ೪ರಷ್ಟು ದ್ರವ್ಯವನ್ನಷ್ಟೇ ಒಳಗೊಂಡಿವೆ. ನೋಡಲಾಗದ, ಪತ್ತೆ ಮಾಡಲಾಗದ, ತಿಳಿಯುವುದಕ್ಕೇ ಸಾಧ್ಯವಿಲ್ಲದಂತಿರುವ ಭಾಗ ವಿಶ್ವದಲ್ಲಿ ಸೇಕಡ ೯೬ರಷ್ಟಿದೆ. ಈ ವಿಚಿತ್ರ ಪದಾರ್ಥವನ್ನು 'ಕತ್ತಲು ಶಕ್ತಿ–ಕತ್ತಲು ದ್ರವ್ಯ' ಎಂದು ಕರೆದಿದ್ದಾರೆ. 'ಅದು ಇಂದಿಗೆ ಅಜ್ಞಾತ. ಪ್ರಾಯಶಃ ಮುಂದೆ ಎಂದೆಂದಿಗೂ ಅಜ್ಞಾತ' ಎಂಬಂಥ ಹತಾಶೆಯ ಮಾತನ್ನು ನ್ಯೂಟ್ರಿನೊಗಳು ಇಲ್ಲವಾಗಿಸಬಹುದೆ ? ಅರ್ಥಾತ್ ಕತ್ತಲು ದ್ರವ್ಯಕ್ಕೆ ಪರ್ಯಾಯವಾಗಿ ನ್ಯೂಟ್ರಿನೊಗಳು ಇರಬಲ್ಲವೆ ? ಸೂರ್ಯ, ಸೂಪರ್‌ನೋವಗಳ ಅತ್ಯಂತ ಒಳಭಾಗದಲ್ಲಿ ನಡೆಯುವ ಪ್ರತಿಕ್ರಿಯೆಗಳನ್ನು ತಿಳಿಯಲು ಅವುಗಳಿಂದ ಹೊರಬರುವ ಬೆಳಕಿನಂಥ ವಿಕಿರಣಗಳು ಸಹಾಯಕವಾಗುತ್ತವೆ. ಆದರೆ ಅವುಗಳ ಸಾಗುಗತಿ ಬಹಳ ನಿಧಾನ. ಸೂರ್ಯಗರ್ಭದಿಂದ ಹೊರಟ ಫೋಟಾನುಗಳು ಸೂರ್ಯನ ಮೈಯನ್ನು ತಲಪಲು ನಲುವತ್ತು ಸಾವಿರ ವರ್ಷಗಳೇ ಬೇಕಾಗಬಹುದಂತೆ. ಕ್ಷಿಪ್ರಗತಿಯ ನ್ಯೂಟ್ರಿನೊಗಳು ಆಂತರಿಕ ಮಾಹಿತಿಯನ್ನು ಬೇಗನೆ ತಲಪಿಸಬಲ್ಲುವು. ಅದಕ್ಕಾಗಿ ಅವನ್ನು ಪಳಗಿಸುವ ಸಾಧ್ಯತೆ ಮನುಕುಲದ ಮುಂದೆ ತೆರೆದಿದೆ.

ದ್ಯುತಿ ಸಂವಹನ, ರೇಡಿಯೊ ಸಂವಹನಗಳು ಇಂದು ನಾಗರಿಕತೆಯ ಅನಿವಾರ್ಯ ಮೆಟ್ಟಿಲುಗಳಾಗಿವೆ. ಆದರೆ ಎಷ್ಟೋ ಸನ್ನಿವೇಶಗಳಲ್ಲಿ – ಸಾಗರಾಂತರ್ಗತ ಚಟುವಟಿಕೆ ಅಥವಾ ಸಂಶೋಧನೆಯ ಸಂದರ್ಭಗಳಲ್ಲಿ ಚ್ಯುತಿ ಇರದ ಗತಿಯುಳ್ಳ ನ್ಯೂಟ್ರಿನೊಗಳು ಸಂವಹನಕ್ಕೆ ಒದಗಬಲ್ಲವೇನೊ !

ಜಗತ್ತಿನ ರಾಷ್ಟ್ರಗಳು ನ್ಯೂಟ್ರಿನೊ ಸಂಶೋಧನೆಯಲ್ಲಿ ವಹಿಸುತ್ತಿರುವ ಆಸಕ್ತಿ ಅಧಿಕ ಮಾಹಿತಿಗಳಿಗೂ ಅನ್ವಯಗಳಿಗೂ ಕಾರಣವಾಗಬಲ್ಲುದು.


**ಪ್ರೊ॥ ಅಡ್ಯನಡ್ಕ ಕೃಷ್ಣಭಟ್**
ಕೇರಾಫ್ : ನಿಪ್ಪಾಣಿ ಕಣ್ಣಿನ ಆಸ್ಪತ್ರೆ, ಮುಖ್ಯರಸ್ತೆ ಗೋಕಾಕ್ – ೫೯೧ ೩೦೭, ಬೆಳಗಾವಿ ಜಿಲ್ಲೆ

ಎಸ್. ಚಟರ್ಜಿ

# ಅಂತರರಾಷ್ಟ್ರೀಯ ಬೆಳಕಿನ ವರ್ಷ

ಅಂತರರಾಷ್ಟ್ರೀಯ ಬೆಳಕಿನ ವರ್ಷವನ್ನು ಪ್ಯಾರಿಸ್ ನಗರದಲ್ಲಿ ಜನವರಿ ೨೦೧೫, ೧೯-೨೦ರಂದು ಉದ್ಘಾಟಿಸಲಾಯಿತು. ಅದು ಫೆಬ್ರವರಿ ೨೦೧೬ರಲ್ಲಿ ಮುಕ್ತಾಯಗೊಳ್ಳುತ್ತದೆ. ೨೦೧೫ ಒಂದು ಮೈಲಿಗಲ್ಲು ಮತ್ತು ಬೆಳಕಿನತ್ತ ನಮ್ಮ ಪಯಣ ಮುಂದುವರಿಯುತ್ತಲೇ ಇದೆ. ಭಾರತದಲ್ಲಿ ನಮಗೆ ಇದು ವೈಜ್ಞಾನಿಕ ಮನೋಭಾವ ಮತ್ತು ಸ್ವಾವಲಂಬನೆಯ ಬಗ್ಗೆ ನಡೆಯುತ್ತಿರುವ ಚರ್ಚೆಯಲ್ಲಿನ ಪಯಣದ ಒಂದು ಭಾಗ. ಈ ಚರ್ಚೆಯಲ್ಲಿ ಮುಂಚೂಣಿಯಲ್ಲಿರುವುದು 'ಅಖಿಲ ಭಾರತ ಜನ ವಿಜ್ಞಾನ ಜಾಲ'. ಈ ಪ್ರಯತ್ನದ ಮೂಲಕ, ನಮ್ಮ ಕಾರ್ಯಕ್ರಮವನ್ನು 'ಅಂತರರಾಷ್ಟ್ರೀಯ ಬೆಳಕಿನ ದಶಕ'ವಾಗಿಯೂ ಆಚರಿಸಬಹುದು. ನಾವು ಶುರು ಮಾಡುವ ಅನೇಕ ಕಾರ್ಯಕ್ರಮಗಳು, ಈ ೨೦೧೫ರ ನಂತರವೂ ಮುಂದುವರಿಯುತ್ತವೆ. ಅಪೂರ್ಣವಾದ ಶ್ರಮವು, ವೃಥಾ ಶ್ರಮವೆಂಬುದನ್ನು ನೆನಪಿಸಿಕೊಂಡು, ಗಣನೀಯ ಫಲಿತಾಂಶ ನೋಡಬೇಕೆಂದರೆ, ಒಂದು ಸಂಪೂರ್ಣ ದಶಕದ ಪ್ರಯತ್ನವು ಅತಿ ಮುಖ್ಯವಾಗುತ್ತದೆ. ೧೦ ಲಕ್ಷ ಸದಸ್ಯರನ್ನು ಹೊಂದಿರುವ ಈ ಸಂಸ್ಥೆಯ ಸದಸ್ಯರ ಪ್ರಯತ್ನದಿಂದ, ದೇಶಾದ್ಯಂತ ವ್ಯಾಪಿಸುವ ಈ ದಶಕದ ಕಾರ್ಯಕ್ರಮದಲ್ಲಿ ಕೇಂದ್ರಬಿಂದುವಾಗಬಹುದು. ಮುಂಬರುವ ದಶಕದಲ್ಲಿ, ಬೆಳಕಿನ ಇತಿಹಾಸದ ಅನೇಕ ಮೈಲಿಗಲ್ಲುಗಳ ಶತಾಬ್ದಿಯನ್ನು ಆಚರಿಸುವ ಅವಕಾಶ ನಮಗೆ ಸಿಗುತ್ತದೆ. ಐನ್‌ಸ್ಟೈನ್‌ನ ರಿಲೆಟಿವಿಟಿಯ ಸಾಮಾನ್ಯ ಸಿದ್ಧಾಂತದ ಮುನ್ನೋಟವಾದ ಗುರುತ್ವ ಬೆಂಡಿಂಗ್ ಮತ್ತು ಗುರುತ್ವ ಶಿಫ್ಟಿಂಗಳಿಂದ (೧೯೧೫) ಈ ದಶಕದ ಆಚರಣೆ ಶುರು ಮಾಡಿ, ಬೋಸ್ – ಐನ್‌ಸ್ಟೈನ್ ಸಂಖ್ಯಾಶಾಸ್ತ್ರದಿಂದ ಈ ದಶಕದ ಕೆಲಸಗಳನ್ನು ಮುಗಿಸಬಹುದು (೧೯೨೪). ಈ ವರ್ಷವು (೨೦೧೫) 'ಕಾಸ್ಮಿಕ್ ಮೈಕ್ರೋವೇವ್ ಹಿನ್ನೆಲೆ ವಿಕಿರಣ' ಆವಿಷ್ಕಾರದ ಸುವರ್ಣ ಮಹೋತ್ಸವ. ೨೦೨೫ ಇಸವಿಯು ಈ ಆವಿಷ್ಕಾರದ ವಜ್ರಮಹೋತ್ಸವ. ಇದರ ಮಧ್ಯೆ ಆರ್ಥರ್ ಎಡಿಂಗ್ಟನ್‌ರವರ 'ರಿಲೆಟಿವಿಟಿಯ ಸಾಮಾನ್ಯ ಸಿದ್ಧಾಂತದ ವೀಕ್ಷಣಾ ಪರಿಶೀಲನೆ'ಯೂ (೧೯೧೯) ಇದೆ. ವಜ್ರ ಮಹೋತ್ಸವವಾಗುತ್ತಿರುವ ರೆಬ್ಕಾ – ಪೌಂಡ ಅವರ 'ಸ್ಪೆಕ್ಟ್ರಲ್ ರೇಖೆಗಳಲ್ಲಿರುವ ಗುರುತ್ವ ಶಿಫ್ಟ್ ಪರಿಶೀಲನೆ' (೧೯೫೯) ಇದೆ. ರಾಮನ್ ಮತ್ತು ಕೃಷ್ಣನ್ ಆವಿಷ್ಕರಿಸಿದ ರಾಮನ್ ಪರಿಣಾಮದ ೯೦ನೇ ವಾರ್ಷಿಕೋತ್ಸವವನ್ನು ಆಚರಿಸುವ ಅವಕಾಶವೂ ಸಿಗುತ್ತದೆ. ವಿಜ್ಞಾನದ ವಿವಿಧ ವಿಭಾಗಗಳಲ್ಲಿ ಬೆಳಕಿನ ಪಾತ್ರ ಲೆಕ್ಕಿಸುವುದು ಅಸಾಧ್ಯ. ಭೌತವಿಜ್ಞಾನದ ಕೆಲವು ಉದಾಹರಣೆಗಳನ್ನು ನನ್ನ ಸ್ವಂತ ತಿಳುವಳಿಕೆಯಿಂದ ಇಲ್ಲಿ ಕೊಟ್ಟಿದ್ದೇನೆ. ವಿಜ್ಞಾನ ಮತ್ತು ತಂತ್ರಜ್ಞಾನದ ತಿಳುವಳಿಕೆ ಇರುವ ಇತರರು ಈ ಉದಾಹರಣೆಗಳನ್ನು ವಿಸ್ತರಿಸಬೇಕು.

ಬೆಳಕು ಎಂದರೆ ನಮಗೆ ಅನಿಸುವುದೇನು ? ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು, ಬೆಳಕೇ ಇಲ್ಲದ ಒಂದು ಪ್ರಪಂಚವನ್ನು ಊಹಿಸಿಕೊಳ್ಳಿ. ದುರದೃಷ್ಟವಶಾತ್ ಪ್ರಪಂಚದಲ್ಲಿನ ೪ ಕೋಟಿ ಜನ ಹಾಗೂ ನಮ್ಮ ದೇಶದ ಅರ್ಧ ಕೋಟಿ ಜನಕ್ಕೆ ಕಣ್ಣು ಕಾಣುವುದಿಲ್ಲ. ಅವರು ಕುರುಡರು. ಒಳ್ಳೆಯ ಆಹಾರ ಮತ್ತು ವೈದ್ಯಕೀಯ ಸೌಲಭ್ಯಗಳಿಂದ ಈ ಕೊರತೆಯನ್ನು ನಿವಾರಿಸಬಹುದಾಗಿತ್ತು. ಸಾಮಾಜಿಕ ಬಾಧ್ಯತೆಯಿಂದ, ಅಂತಹ ಜನಕ್ಕೆ ಪುನರ್ವಸತಿ ಕಲ್ಪಿಸಿ, ಈ ನೋವನ್ನು ಸ್ವಲ್ಪ ಕಡಿಮೆ ಮಾಡಬಹುದಾಗಿತ್ತು. ಅಲ್ಲದೆ, ಪ್ರಪಂಚದ ೧.೫ ಬಿಲಿಯನ್‌ನಷ್ಟು ಜನ ಹಾಗೂ ನಮ್ಮ ಭಾರತದ ೩೦ ಕೋಟಿ ಜನ ರಾತ್ರಿ ವೇಳೆ ಕತ್ತಲಲ್ಲಿ ಬದುಕುತ್ತಾರೆ. ಅವರಿಗೆ ವಿದ್ಯುಚ್ಛಕ್ತಿಯ ಸೌಲಭ್ಯವಿಲ್ಲ. ಇದೇ ಕಾರಣಕ್ಕಾಗಿ, ಬೆಳಕಿನ ಹಬ್ಬವನ್ನು ಆಚರಿಸುವಾಗ, ಇಂತಹವರು ಅನುಭವಿಸುವ ಕತ್ತಲನ್ನೂ ಗಮನದಲ್ಲಿಟ್ಟುಕೊಳ್ಳಬೇಕು.



ಕವಿಗಳು ಇದನ್ನು "ಸ್ವರ್ಗದ ಮೊದಲ ಮಗುವಾದ ಓ ಪವಿತ್ರವಾದ ಬೆಳಕೇ" ಎಂದು ವರ್ಣಿಸಿರಲೂಬಹುದು. ಇಂತಹ ಅಪೂರ್ವ ಊಹೆಗಳಿಗೂ, ನಿಜಜೀವನಕ್ಕೂ ಇರುವ ವ್ಯತ್ಯಾಸ ನಮ್ಮ ಕತ್ತಲಿನಿಂದ ಬೆಳಕಿನೆಡೆಗೆ ಪಯಣದ ಒಂದು ಭಾಗವಾಗಿದ್ದು, 'ತಮಸೋಮಾ ಜ್ಯೋತಿರ್ಗಮಯ' ಎನ್ನುವುದರ ನಿಜವಾದ ಅರ್ಥವಾಗಿದೆ. ಈ ಕಲಿಕೆಯ ಪ್ರಕ್ರಿಯೆ ವೈಜ್ಞಾನಿಕ ಮನೋಭಾವದ ಅರ್ಥವನ್ನೂ ಕಲಿಸಿಕೊಡುತ್ತದೆ.

ವಿಶ್ವಸಂಸ್ಥೆಯು ೨೦೧೫ನೇ ಇಸವಿಯನ್ನು, 'ಅಂತರರಾಷ್ಟ್ರೀಯ ಬೆಳಕು ಮತ್ತು ಬೆಳಕಿನ ಉದ್ದಿಮೆಯ ವರ್ಷ'ವೆಂದು ಘೋಷಿಸಿದೆ. ಬೆಳಕಿನ ಉದ್ದಿಮೆ ನಮಗೆ ಏನು ಮಾಡಿದೆ ಎನ್ನುವುದನ್ನು ಎಲ್ಲರೂ ನೋಡಬಹುದು. ಇಂದು ಭಾರತವು, ಅಂತರ್ಜಾಲವನ್ನು ಉಪಯೋಗಿಸುವ ಮೂರನೆಯ ದೊಡ್ಡ ದೇಶ ಮತ್ತು ೨೦೧೮ರೊಳಗೆ ಈ ಸಂಖ್ಯೆ ದ್ವಿಗುಣವಾಗುತ್ತದೆ. ೯೩ ಕೋಟಿ ಮೊಬೈಲ್ ಫೋನುಗಳಿದ್ದು, ಅವುಗಳಲ್ಲಿ ಅರ್ಧ ಭಾಗ ಸ್ಮಾರ್ಟ್ ಫೋನುಗಳಾಗಿವೆ. ಇಂತಹ ೨೬.೫ ಮಿಲಿಯನ್ ಫೋನುಗಳನ್ನು, ೨೦೧೪ರ ಕಡೆಯ ಕೆಲವು ತಿಂಗಳುಗಳಲ್ಲಿ ಆಮದು ಮಾಡಿಕೊಳ್ಳಲಾಯಿತು. ಈ ಸಂಖ್ಯೆ ಅದರ ಹಿಂದಿನ ವರ್ಷಕ್ಕಿಂತ ೪೪% ಹೆಚ್ಚಳ. ಈ ಫೋನುಗಳು ತೆರೆಯಮೇಲೆ ಪ್ರದರ್ಶಿಸುವ ಬೆಳಕಿನ ಚಿತ್ರಗಳು, ಎರಡು ಫೋನುಗಳ ಮಧ್ಯೆ ಸಂದೇಶಗಳನ್ನು ರವಾನಿಸುವ ಬೆಳಕಿನ ತಂತಿಗಳು, ಇವೆಲ್ಲವೂ, ಜಗತ್ತಿನ ಅತಿ ದೊಡ್ಡ ಜಾಗತಿಕ ಉದ್ದಿಮೆಗಳಾಗಿದ್ದು, ಭಾರತಕ್ಕೆ ಅದರಲ್ಲಿ ಯಾವ ಪಾತ್ರವೂ ಇಲ್ಲ. ಬೆಳಕಿನ ವಿಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನದ ಸಹಾಯದಿಂದ ನಮ್ಮ ಭೂಮಿಯನ್ನು ಅಂತರಿಕ್ಷದಿಂದಲೇ ಚಿತ್ರೀಕರಿಸಬಹುದು. 'ಲಿಡಾರ್' ತಂತ್ರಜ್ಞಾನದಿಂದ ನಮ್ಮ ಅರಣ್ಯ ಸಂಪತ್ತು ಹಾಗೂ ಭೂಮಿಯ ವಿವಿಧ ಬಗೆಗಳನ್ನು ಚಿತ್ರೀಕರಿಸಬಹುದು. ಇವುಗಳನ್ನು ಚೀನಾ, ಯು.ಎಸ್.ಎ., ಸ್ಕಾಂಡಿನೇವಿಯ ದೇಶಗಳು, ಮತ್ತಿತರರು ಬಳಸುತ್ತಾರೆ. ಪ್ರಾಥಮಿಕ ದೃಗ್ವಿಜ್ಞಾನ ಕಲಿಸುವುದು ಈಗ ಬಹಳ ಸುಲಭ. ಅವರ ಕಡಿಮೆ ಬೆಲೆಯ ಲೇಸರ್ ಪಾಯಿಂಟರ್‌ಗಳನ್ನು ಬಳಸಿ ಇದನ್ನು ಮಾಡಬಹುದು. ಇವುಗಳನ್ನು ಬಹುತೇಕ ಚೀನಾದಲ್ಲಿ ತಯಾರಿಸುತ್ತಾರೆ. ಚೀನಾದ ಸರಕುಗಳು ನಮ್ಮ ಮಾರುಕಟ್ಟೆಯಲ್ಲಿ ಹೇರಳವಾಗಿ ಸಿಗುತ್ತವೆ ಎನ್ನುವ ದೂರು ಸಹಿತ ಇದೆ. ಆದರೆ, ಇಲ್ಲಿ ಗಮನಿಸಬೇಕಾದ ಮತ್ತು ಯೋಚಿಸಬೇಕಾದ ಇನ್ನೊಂದು ವಿಷಯವಿದೆ. ಚೀನಾದ ಲೇಖಕರು ಎಲ್ಲ ಅಂತರರಾಷ್ಟ್ರೀಯ ದೃಗ್ವಿಜ್ಞಾನ ಜರ್ನಲ್‌ಗಳಲ್ಲೂ ಕೂಡ ಹೇರಳವಾಗಿ ಬರೆಯುತ್ತಿದ್ದಾರೆ.

ಇನ್ನೊಂದು ಕಡೆ, ನಮ್ಮಲ್ಲಿ ಲೇಸರ್ ನಿರ್ದೇಶಿತ ಕ್ಷಿಪಣಿಗಳೂ ಇವೆ. ದೇಶಭಕ್ತರೆನ್ನುತ್ತ, ಬಾಂಬ್ ಹಾಕುವವರೂ ಇದ್ದಾರೆ. ಬೆಳಕಿನ ವರ್ಷ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಸರಣವಲ್ಲದೆ, ವಿಶ್ವಸಂಸ್ಥೆಯ ಸಹಸ್ರಮಾನದ ಗುರಿಗಳನ್ನೂ ಸೇರಿಸಿಕೊಂಡಿದೆ.

ಭವಿಷ್ಯದ ಹಾದಿಯನ್ನು ನಿಗದಿಪಡಿಸಬೇಕಾದರೆ, ಜ್ಞಾನ, ಕೌಶಲ ಮತ್ತು ಅದರ ಪ್ರಸರಣೆ ಹೇಗೆ ವಿಕಾಸಗೊಂಡಿತೆಂಬುದು ಗೊತ್ತಾಗಬೇಕಾಗುತ್ತದೆ. ಇದೇ ಪ್ರಾಮುಖ್ಯತೆಯನ್ನು ಗುರುತಿಸಿ ವಿಶ್ವಸಂಸ್ಥೆಯು ೨೦೧೫ ವರ್ಷವನ್ನು 'ಅಂತರರಾಷ್ಟ್ರೀಯ ಬೆಳಕಿನ ವರ್ಷ' ಎಂದು ಘೋಷಿಸಿದೆ. ಇದಕ್ಕೆ ಕಾರಣ, ಬೆಳಕಿನ ವಿಷಯದಲ್ಲಿ ಪ್ರಥಮ ಮುದ್ರಣವಾದ ಇಬನ್ ಅಲ್ ಹವತಮ್ ಅವರ 'ಕಿತಾಬ್ ಅಲ್ ಮನಜಾರ್', ಕೊಂಡಾಡುವುದು. ಇವರನ್ನು 'ಅಲ್ ಹಾಸನ್' ಎಂದೂ ಕರೆಯುತ್ತಾರೆ. ಈ ಪುಸ್ತಕವು ಬೆಳಕು, ಅದರ ಚಲನೆ, ಬಣ್ಣಗಳ ಪ್ರಾಮುಖ್ಯತೆ ಮತ್ತು ದೃಷ್ಟಿಯ ಬಗ್ಗೆ ಚರ್ಚಿಸಿ, ವಿಜ್ಞಾನದಲ್ಲಿನ ಪ್ರಾಯೋಗಿಕ ವಿಧಾನಕ್ಕೆ ತಳಪಾಯ ಹಾಕಿದೆ. ಪಾಶ್ಚಿಮಾತ್ಯ ದೇಶಗಳ ವಿಜ್ಞಾನಿಗಳಿಗೆ ಮತ್ತು ಗೆಲಿಲಿಯೋನ ಟೆಲಿಸ್ಕೋಪ್‌ಗೆ ಸಹಕರಿಸಿದವರೆಲ್ಲರಿಗೂ ಈ ಪುಸ್ತಕವು ಮೂಲ ಪಠ್ಯ ವಸ್ತುವಾಗಿತ್ತೆಂದು ಖಚಿತವಾಗಿ ಹೇಳಬಹುದು.

ಮನುಷ್ಯನ ಚರಿತ್ರೆಯು ಯಾವತ್ತೂ ಸರಳ ರೇಖೆಯಾಗಿ ಇರುವುದಿಲ್ಲ. ಅದಕ್ಕೇ ಕೊಪರ್ನಿಕಸ್‌ನ ಕ್ರಾಂತಿಯು ಇಬನ್ ಅಲ್ ಹವತಮ್ ಅವರ ದೇಶದಲ್ಲಾಗಲಿ, ಕಾಲದಲ್ಲಾಗಲಿ ಆಗಲಿಲ್ಲ. ದೂರದರ್ಶಕ ಮತ್ತು

ಸೂಕ್ಷ್ಮದರ್ಶಕಗಳೆರಡನ್ನೂ ನಮಗೆ ಕೊಟ್ಟ ದೃಗ್ವಿಜ್ಞಾನದ ಕ್ಷೇತ್ರದಲ್ಲಿ ಸಂಶೋಧಿಸುವ ಕಣ ಮತ್ತು ತರಂಗ ಸಿದ್ಧಾಂತಿಗಳಲ್ಲಿ ಗಂಭೀರ ಚರ್ಚೆ ಶುರುವಾಯಿತು. ಕಣ ಸಿದ್ಧಾಂತಿಗಳು ಐಸಾಕ್ ನ್ಯೂಟನ್‌ನ (೧೬೪೨ – ೧೭೨೬, 'ಆಪ್ಟಿಕ್' ಪುಸ್ತಕ ೧೭೦೪ನಲ್ಲಿ ಮುದ್ರಣವಾಯಿತು.) ಸಂಶೋಧನಾ ವಿಧಾನಗಳನ್ನು ಬೆಂಬಲಿಸಿದರು. ತರಂಗ ಸಿದ್ಧಾಂತಿಗಳು ಕ್ರಿಶ್ಚಿಯನ್ ಹೈಗೆನ್ಸನ (೧೬೨೯ – ೧೬೯೫) ವಿಧಾನವನ್ನು ಬೆಂಬಲಿಸಿದರು. ಅನೇಕ ಗಣನೀಯ ಆವಿಷ್ಕಾರಗಳನ್ನು ಮಾಡಿದ ನ್ಯೂಟನ್ – ಬೆಳಕನ್ನು ಪ್ರತಿಬಿಂಬಿಸುವ ದೂರದರ್ಶಕ (೧೬೭೧, ಈ ವಿನ್ಯಾಸವನ್ನು ಇವತ್ತಿಗೂ ಅನುಕರಿಸುತ್ತಾರೆ), ಸೌರ ಸ್ಪೆಕ್ಟ್ರಾ (೧೬೬೬) – ತುಂಬ ಪ್ರಭಾವಿಯಾಗಿದ್ದನು. ಅವನ ಗೋರಿಯ ಮೇಲೆ ಅಲೆಗ್ಸಾಂಡರ್ ಪೋಪ್ ಬರೆದದ್ದು ಈ ರೀತಿ ಪ್ರಕೃತಿ ಮತ್ತು ಪ್ರಕೃತಿ ಸೂತ್ರಗಳು ಕತ್ತಲಲ್ಲಿದ್ದವು. ದೇವರು ಹೇಳಿದ "ನ್ಯೂಟನ್ ಬರಲಿ", ಆಮೇಲೆ ಎಲ್ಲವೂ ಬೆಳಕು.

ನ್ಯೂಟನ್ನನ ಸಿದ್ಧಾಂತವನ್ನು ಸರಿಮಾಡಲು ನೂರು ವರ್ಷಗಳೇ ಬೇಕಾಯಿತು. ಬೆಳಕಿನ ರೇಖೆ, ಎರಡು ಸೀಳುಗಳಲ್ಲಿ ಹೇಗೆ ವಿವರ್ತನೆಗೊಳ್ಳುವುದೆಂಬ ಥಾಮಸ್ ಯಂಗ್‌ನ ಪ್ರಯೋಗದಿಂದ ಇದು ಸಾಧ್ಯವಾಯಿತು (೧೮೦೩). ಈ ಸಿದ್ಧಾಂತ ಗಳನ್ನು ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಫ್ರನ್ಹಾಫರ್, ಫ್ರನೆಲ್, ಬಯೋಟ್ ಮತ್ತು ಪೊಯಿಸಾನ್ ಮುಂತಾದ ವಿಜ್ಞಾನಿಗಳು ಪೂರ್ತಿಯಾಗಿ ನಿರೂಪಿಸಿದರು. ರಾಬರ್ಟ್ ಹುಕ್ ಸೂಕ್ಷ್ಮದರ್ಶಕದಲ್ಲಿ ಕಂಡ ದೋಷಗಳು (ಮೈಕ್ರೋಸ್ಕೋಪಿಯಾ, ೧೬೬೫) ಹಾಗೂ ಅವನ ಎದುರಾಳಿ ನ್ಯೂಟನ್ ದೂರದರ್ಶಕದಲ್ಲಿ ಕಂಡ ದೋಷಗಳು – ಇವೆರಡನ್ನೂ ಸರಿಪಡಿಸಲು, ಹೈಗೆನ್ಸನ ಸೈದ್ಧಾಂತಿಕ ತಿದ್ದುಪಡಿಗಳು ಬೇಕಾದವು. ನ್ಯೂಟನ್ನನ ಈ ಅತಿಯಾದ ಪ್ರಭಾವದಿಂದ ದೃಗ್ವಿಜ್ಞಾನದ ಪ್ರಗತಿ ನೂರು ವರ್ಷಗಳ ಕಾಲ ತಡವಾಯಿತು. ತರಂಗ ಸಿದ್ಧಾಂತದ ವಿಜ್ಞಾನಿಗಳಾದ ಬೆಂಜಮಿನ್ ಫ್ರಾಂಕ್ಲಿನ್ ಮತ್ತು ಲಿಯೋನಾರ್ಡ್ ಆಯ್ಲರ್ ಅವರ ಅಭಿಪ್ರಾಯ ಹೆಚ್ಚಿನ ವ್ಯತ್ಯಾಸವನ್ನೇನೂ ಮಾಡಲಿಲ್ಲ. ನ್ಯೂಟನ್ ವ್ಯತಿರೇಕಿಸಿದ ವಿಜ್ಞಾನದಲ್ಲಿ ಆಸಕ್ತಿಯುಳ್ಳ ಮಹಾನ್ ಕವಿ ಜರ್ಮನಿಯ ಗಾಯಟೆ (೧೭೪೯– ೧೮೩೨) ಕಾಳಿದಾಸನ ಅಭಿಮಾನಿ. ಆದರೆ ಇವನದು ತಪ್ಪು ಕಲ್ಪನೆಗಳು.

ಇವು ಯೂರೋಪಿನಲ್ಲಿನ ಕೈಗಾರಿಕಾ ಕ್ರಾಂತಿಯ ಸಮಯ. ಇದರಿಂದ ಉಷ್ಣದ ಎಂಜಿನ್, ರಾಸಾಯನಿಕ ವಸ್ತುಗಳು, ವಿದ್ಯುತ್ತು ಮತ್ತು ಕಾಂತತ್ವಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡಲಾಯಿತು. ಈ ಪ್ರಯತ್ನಗಳು ಬೆಳಕು, ಬಣ್ಣಗಳು, ಉಷ್ಣಶಕ್ತಿ, ಅಣು ಮತ್ತು ಪರಮಾಣುಗಳನ್ನು ಸೇರಿಸಲು ಅನುವಾದುವು. ಹೊಸದಾಗಿ ಶುರುವಾದ ಸ್ಪೆಕ್ಟ್ರೋಸ್ಕೋಪಿ



**ಹೆಸರು**

ಮಾಡದ ತಪ್ಪಿಗೆ
ಅಗ್ನಿ ಪ್ರವೇಶಕ್ಕೊಳಗಾದಳು –
ಸೀತೆ
ಹೆಸರು – 'ಪುನೀತೆ'

**ವ. ಉಮೇಶ್ ಕಾರಂತ್**
ಮಂಗಳೂರು – ೧

(ರೋಹಿತದರ್ಶಕ) ಕೂಡ ಈ ತರಂಗ ಸಿದ್ಧಾಂತದಿಂದ ಲಾಭ ಪಡೆಯಿತು (ವಿಲಿಯಮ್ ವೊಲಾಸ್ಟನ್ ೧೮೦೨ ಆವಿಷ್ಕಾರ, ಜೋಸೆಫ್ ಫಾನ್ ಫ್ರಾನ್ಹಾಯಿಫರ್‍ನ ಸರಣಿ ಆವಿಷ್ಕಾರಗಳು, ರಾಬರ್ಟ್ ಬುನ್ಸೆನ್ ಮತ್ತು ಗುಸ್ತವ್‌ನ ೧೮೫೦ ಆವಿಷ್ಕಾರಗಳು). ಈ ಆವಿಷ್ಕಾರಗಳು ನಮಗೆ ಕೊಟ್ಟ ಹೊಸ ಸಾಧನ ವಿವರ್ತನ ಜಾಲರಿ (ಡೇವಿಡ್ ರಿಟ್ಟೆನ್ಹೌಸ್ ೧೭೮೫ನಲ್ಲಿ ಮತ್ತು ಜೇಮ್ಸ್ ಗ್ರೆಗೊರಿ ೧೮೨೧). ಕಳೆದ ೧೫೦ ವರ್ಷಗಳಲ್ಲಿ, ಇದರ ಮೂಲ ಸೂತ್ರಗಳಲ್ಲಿ ಯಾವುದೇ ಬದಲಾವಣೆಯಾಗಿಲ್ಲ. ಈ ಸೂತ್ರಗಳ ಆಧಾರದ ಮೇಲೆ ಹೊಸದೊಂದು ಶಾಖೆ, 'ಕ್ಷ – ಕಿರಣ ಸ್ಫಟಿಕ ಶಾಸ್ತ್ರ' ೨೦ನೇ ಶತಮಾನದ ಶುರುವಾತಲ್ಲಿ ಹುಟ್ಟಿಕೊಂಡಿತು (ಮ್ಯಾಕ್ಸ್ ಫಾನ್ ಲವೆ ೧೯೧೨, ವಿಲಿಯಮ್ ಬ್ರಾಗ್ ಮತ್ತು ಲಾರೆನ್ಸ್ ಬ್ರಾಗ್ ೧೯೧೨ – ೧೯೧೪). ಇದು ಇನ್ನೊಂದು ರೀತಿಯ ವಿಕಿರಣವನ್ನು, ಅಂದರೆ ಇನ್ನೊಂದು ವಿದ್ಯುತ್ಕಾಂತೀಯ ವಿಕಿರಣವಾದ ಕ್ಷ – ಕಿರಣವನ್ನು ಉಪಯೋಗಿಸುತ್ತದೆ. ಇದರಲ್ಲಿರುವ ಮುಖ್ಯವಾದ ವ್ಯತ್ಯಾಸವೆಂದರೆ, ಸ್ಪೆಕ್ಟ್ರೋಸ್ಕೋಪಿಯ ಪ್ರಯೋಗಗಳು ೨–ಆಯಾಮದ ಜಾಲರಿಗಳನ್ನಿಟ್ಟು ಕೊಂಡರೆ, ಸ್ಫಟಿಕಶಾಸ್ತ್ರದ ಅಭ್ಯಾಸ ೩– ಆಯಾಮದ ಜಾಲರಿಗಳನ್ನು ಉಪಯೋಗಿಸುತ್ತಾರೆ. ಇದರಿಂದ ಸ್ಫಟಿಕಶಾಸ್ತ್ರವು ಅಪಾರ ವೈವಿಧ್ಯತೆ ಮತ್ತು ಸಂಕೀರ್ಣತೆಯನ್ನು ಕಂಡಿದೆ. ಪ್ರಸ್ತುತ, ಕೆಲವೊಂದು ಆಪ್ಟಿಕಲ್ ಗುಣಗಳನ್ನು ಕೂಡಿರುವುದಕ್ಕಾಗಿ, ೩–ಆಯಾಮದ ಸ್ಫಟಿಕವನ್ನು ಕೃತಕವಾಗಿ ಮಾಡುತ್ತಾರೆ. ಅವನ್ನು 'ಫೋಟಾನಿಕ್ ಕ್ರಿಸ್ಟಲ್' ಎಂದು ಕರೆಯುತ್ತಾರೆ.

ನ್ಯೂಟನ್‌ನ ಅಧ್ಯಯನಗಳು, ಸೌರ ಸ್ಪೆಕ್ಟ್ರಮ್‌ನಲ್ಲಿ ಗೋಚರಿಸುವ ಬಣ್ಣಗಳೆಲ್ಲವೂ ಇವೆಯೆಂದು ತೋರಿಸಿದರೂ, ವಿಲಿಯಮ್ ಹರ್ಷೆಲ್ (೧೮೦೦) ಇದು ಇನ್ಫ್ರಾರೆಡ್ ವ್ಯಾಪ್ತಿಯಲ್ಲಿಯೂ ಇದೆಯೆಂದು ತೋರಿಸಿದನು. ನಂತರ, ಅರ್ಥವಾಗಿದ್ದು ಬೆಳಕು ಒಂದು ವ್ಯತ್ಯಸ್ತ ವಿದ್ಯುತ್ಕಾಂತೀಯ ಏರಿಳಿತವಾದ್ದರಿಂದ, ಅದು ಎಲ್ಲ ತರಂಗಾಂತರಗಳನ್ನು ಹೊಂದಿ ಶೂನ್ಯಾಕಾಶದಲ್ಲಿಯೂ ಚಲಿಸಬಹುದೆಂದು. ಇದನ್ನು ಪ್ರಾಯೋಗಿಕವಾಗಿ ನಿರೂಪಿಸಿದ್ದು ಹಿಪ್ಪೊಲೈಟ್ ಫಿಜೂ (೧೮೪೯) ಮತ್ತು ಲಿಯಾನ್ ಫೂಕಾಲ್ಟ್ (೧೮೬೨). ಇವಿಷ್ಟೂ ಗೊತ್ತಾಗ ಬೇಕಾದರೆ ಇದರಲ್ಲಿ ಅನೇಕ ವಿಜ್ಞಾನಿಗಳ ಅಧ್ಯಯನಗಳು ಸೇರಿದೆ – ಕೂಲಂಬ್ (ವಿದ್ಯುತ್ತಿನ ಸೂತ್ರ, ೧೭೮೪), ಗೌಸ್ (ವಿದ್ಯುತ್ ಮತ್ತು ಕಾಂತೀಯ ಫ್ಲಕ್ಸ್, ೧೮೩೫ ಕಂಡು, ೧೮೬೭ ಪ್ರಕಟಣೆ), ಆಯರಸ್ಟೆಡ್ (ವಿದ್ಯುತ್ತಿನ ಕಾಂತೀಯ ಪರಿಣಾಮ, ೧೮೨೦), ಆಮ್ಪಿಯರ್ (ವಿದ್ಯುಚ್ಛಕ್ತಿಯ ಲೂಪ್ಪಿಂದ ಕಾಂತೀಯ ಫ್ಲಕ್ಸ್, ೧೮೨೬), ಫ್ಯಾರಡೇ ಮತ್ತು ಹೆನ್ರೀ (ವಿದ್ಯುತ್ಕಾಂತಿಯ ಉತ್ಪನ್ನ, ೧೮೩೧ ಮತ್ತು ೧೮೩೨, ಫ್ಯಾರಡೇ ಶಕ್ತಿ ಮತ್ತು ಫೀಲ್ಡಿನ ರೇಖೆಗಳ ಪರಿಕಲ್ಪನೆಯನ್ನೂ ಕೊಟ್ಟರು) ಮತ್ತು ಕಡೆಯದಾಗಿ ಮ್ಯಾಕ್ಸ್ವೆಲ್ (೧೮೬೪). (ಶೂನ್ಯದಲ್ಲಿ ಬೆಳಕಿನ ಶಕ್ತಿಯ ವೇಗ ಒಂದು ಸ್ಥಿರಸಂಖ್ಯೆಯಾಗಿದ್ದು, ಅದರ ಮೂಲವು ಸ್ಥಿರವಾದ ವೇಗದಲ್ಲಿ ಚಲಿಸುತ್ತಿದ್ದರೂ ಅದು ಬದಲಾಗುವುದಿಲ್ಲ (ಮೈಕೆಲ್ಸನ್ ಮತ್ತು ಮಾರ್ಲೀ, ೧೮೮೭). ೧೯ನೇ ಶತಮಾನದ ಕೊನೆಯಲ್ಲಿ, ಗೆಲಿಲಿಯೋ, ನ್ಯೂಟನ್, ಫ್ಯಾರಡೇ ಮತ್ತು ಮ್ಯಾಕ್ಸ್ವೆಲ್‌ರ ಶಾಸ್ತ್ರೀಯ ಭೌತಶಾಸ್ತ್ರ ಈ ಬಿಕ್ಕಟ್ಟನ್ನು ಎದುರಿಸಿತು. ಈಗ ಇದು ಐನ್‌ಸ್ಟೈನ್‌ನ ಸ್ಪೆಷಲ್ ರಿಲೆಟಿವಿಟಿ ಸಿದ್ಧಾಂತದ ಮೂಲವಾಗಿದೆ.

ತರಂಗ ಸಿದ್ಧಾಂತಕ್ಕೆ ಬೆಳಕಿನ ಚಲನೆಯನ್ನೇನೋ ವರ್ಣಿಸಲು ಸಾಧ್ಯವಾಯಿತು. ಆದರೆ, ಬೆಳಕು ಯಾವುದೇ ವಸ್ತುವಿನ ಜೊತೆ ವ್ಯವಹರಿಸುವ ರೀತಿಯನ್ನು ವರ್ಣಿಸಲು ಈ ಸಿದ್ಧಾಂತಕ್ಕೆ ಸಾಧ್ಯವಾಗಲಿಲ್ಲ. ವಿಕಿರಣಗಳ ಹೀರುವಿಕೆ ಮತ್ತು ಹೊರಸೂಸುವಿಕೆಯ ಬಗ್ಗೆ ಹೇಳಲು ಸಾಧ್ಯವಾಗಲಿಲ್ಲ. ಈ ಬಿಕ್ಕಟ್ಟು ೧೮೮೦ – ೧೯೩೦ರವರೆಗೂ ಇತ್ತು. ಕೆಂಪು ಬಣ್ಣಕ್ಕೆ ಇರುವ ಬಿಸಿ ವಸ್ತುಗಳನ್ನು ಮತ್ತೂ ಕಾಯಿಸಿದಾಗ, ಮೊದಲು ನೀಲಿ ಬಣ್ಣಕ್ಕೆ ತಿರುಗಿ ನಂತರ ಬಿಳಿ ಬಣ್ಣಕ್ಕೆ ತಿರುಗುತ್ತವೆ. ಇದರ ಕಾರಣ ಕೊಡಲು ಈ ಸಿದ್ಧಾಂತಕ್ಕೆ ಸಾಧ್ಯವಾಗಲಿಲ್ಲ. ಇದು ತಿಳಿಯಬೇಕಾದರೆ, ವಸ್ತುವಿನ ಸ್ಥಿತಿಯನ್ನು ಅಣು ಮತ್ತು ಪರಮಾಣು ಸ್ಥಾಯಿಯಲ್ಲಿ ತಿಳಿಯ ಬೇಕಾಯಿತು. ಇದರ ಬಗ್ಗೆ ಒಂದಿಷ್ಟು ಪ್ರಗತಿಯಾದ ಮೇಲೆ, ನಕ್ಷತ್ರಗಳಲ್ಲಿನ ಉಷ್ಣ ಅಯಾನೀಕರಣದ ಸಮತೋಲನದ ಬಗ್ಗೆ ಅರ್ಥವಾಯಿತು. ಈ ವಿಷಯಗಳೆಲ್ಲವೂ ಸೇರಿ ಕ್ವಾಂಟಮ್ ಪರಿಕಲ್ಪನೆಗಳು ಮತ್ತು ಕ್ವಾಂಟಮ್ ಮೆಕಾನಿಕ್ಸ್‌ನ್ನು ಹುಟ್ಟಿಸಿದವು. ಕ್ವಾಂಟಮ್ ಮೆಕಾನಿಕ್ಸ್ – ವಿಕಿರಣ ಹಾಗೂ ವಸ್ತು – ತರಂಗ ಮತ್ತು ಕಣ – ಇವೆರಡರ ಗುಣಗಳನ್ನೂ



ವಿವರಿಸುತ್ತದೆ. ಇದನ್ನು 'ಡುಯಾಲಿಟಿ' ಅನ್ನುತ್ತಾರೆ. ಅಂದರೆ ಒಂದಿಷ್ಟು 'ಕಣದ' ಗುಣ ಮತ್ತು ಸ್ವಲ್ಪ 'ತರಂಗದ' ಗುಣ ಅಲ್ಲ. ಇವುಗಳು ಕೆಲವೊಮ್ಮೆ ಕಣಗಳಾಗಿಯೂ, ಮತ್ತೆ ಕೆಲವೊಮ್ಮೆ ತರಂಗಗಳಾಗಿಯೂ ವರ್ತಿಸುತ್ತವೆ. ಈ ತರಹದ ಇಡೀ ಗುಂಪನ್ನು ತೆಗೆದುಕೊಂಡರೆ, ಅವುಗಳ ನಡುವೆ ಇರುವ ಸಂಬಂಧವು 'ಸ್ಪಿನ್' ಸ್ಥಿತಿಯಿಂದ ನಿರ್ಧರಿಸಲ್ಪಡುತ್ತವೆ. ಕ್ವಾಂಟಮ್ ಸ್ಥಿತಿಯು ಬೋಸ್ – ಐನ್‌ಸ್ಟೈನ್ (೧೯೨೪) ಅಥವಾ ಫರ್ಮಿ–ಡಿರಾಕ್ (೧೯೨೬) ಶಾಸ್ತ್ರವನ್ನು ಆಚರಿಸುತ್ತವೆ. ಮೊದಲನೆಯದನ್ನು ಬೆಳಕಿನ ಕ್ವಾಂಟಾ ಅನುಕರಿಸಿದರೆ, ಎರಡನೆಯದನ್ನು ಎಲೆಕ್ಟ್ರಾನ್, ಪ್ರೋಟಾನ್, ನ್ಯೂಟ್ರಾನ್‌ಗಳು ಅನುಸರಿಸುತ್ತವೆ.

ಬೆಳಕು ಮತ್ತು ಅದು ಆಕ್ರಮಿಸಿದ ವಿಶ್ವದ ಬಗೆಗಿನ ನಮ್ಮ ತಿಳುವಳಿಕೆ, ತಂತ್ರಜ್ಞಾನದ ಕೆಲವು ಸಾಧನೆಗಳಾದ ಛಾಯಾಗ್ರಹಣ ಮತ್ತು ಅಯನೀಕರಣದ ದೋಷಗಳಿಲ್ಲದೆ ಸಾಧ್ಯವಾಗುತ್ತಿರಲಿಲ್ಲ. ಇತ್ತೀಚಿನ ಆವಿಷ್ಕಾರಗಳಾದ ಲೇಸರ್, ಸಿ. ಸಿ. ಡಿ., ಲಿಕ್ವಿಡ್ ಕ್ರಿಸ್ಟಲ್ ಸಾಧನಗಳು ಮತ್ತು ಆಪ್ಟಿಕಲ್ ಫೈಬರ್‌ಗಳು ಇವೂ ಸಹಕರಿಸಿವೆ. ಮೊದಲ ಎರಡೂ ಸಾಧನಗಳು ೨೦ನೇ ಶತಮಾನದ ವಿಜ್ಞಾನ ಕ್ರಾಂತಿಗಳು. ಕಡೆಯ ಎರಡಕ್ಕೂ ಶಾಸ್ತ್ರೀಯ ಭೌತವಿಜ್ಞಾನದ ಬುನಾದಿ ಬೇಕಾಯಿತು, ಆದರೆ ಅವುಗಳ ಪ್ರಾಯೋಗಿಕ ಸಾಕ್ಷಾತ್ಕಾರಕ್ಕೆ, ೨೦ನೇ ಶತಮಾನದ ಎಲೆಕ್ಟ್ರಾನಿಕ್ಸ್ ಬೇಕಾಯಿತು. ಮುಂದಿನ ಲೇಖನದಲ್ಲಿ ಇವನ್ನು ಚರ್ಚಿಸೋಣ.

ಲೇಸರ್‌ನಲ್ಲಿ, ಸುತ್ತಲಿನ ಪದಾರ್ಥವು, ಅತಿ ಹೆಚ್ಚು ತೀವ್ರತೆಯುಳ್ಳ, ವಿದ್ಯುತ್ಕಾಂತೀಯ ಕ್ಷೇತ್ರಗಳಿಂದ ಸುತ್ತುವರಿದಿದೆ. ವಿದ್ಯುತ್ಕಾಂತೀಯ ಕ್ಷೇತ್ರದಲ್ಲಿರುವ ಪದಾರ್ಥಗಳನ್ನು ಕುರಿತು ೧೯೪೦ ಮತ್ತು ೧೯೫೦ರ ಮಧ್ಯೆ ಡಿ. ಎನ್. ಸೆನ್‌ಗುಪ್ತ, ಎಸ್. ಎನ್. ಬೋಸ್‌ನ ವಿದ್ಯಾರ್ಥಿ ಬಹಳ ಮುಖ್ಯವಾದ ಸಂಶೋಧನೆಯನ್ನು ಮಾಡಿದ್ದಾರೆ. ದೃಗ್ವಿಜ್ಞಾನದಲ್ಲಿ ಮೂಲಭೂತ ಸಂಶೋಧನೆಯನ್ನು ಮಾಡಿದ ಇತರ ಭಾರತೀಯರು ಇ. ಸಿ. ಜಿ. ಸುದರ್ಶನ್ (ಇವರ ಬಹುತೇಕ ಸಂಶೋಧನೆಯು ಯು.ಎಸ್.ನಲ್ಲಿ ಮಾಡಿ, ಅನೇಕರು ೨೦೦೫ನೇ ಸಾಲಿನ ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿ, ಗ್ಲೌಬರ್ ಜೊತೆ ಇವರಿಗೂ ಸಲ್ಲಬೇಕಿತ್ತೆಂದು ಭಾವಿಸುತ್ತಾರೆ) ಮತ್ತು ೧೯೬೦ನಲ್ಲಿ ಬೆಂಗಳೂರಿನಲ್ಲಿ ಪಂಚರತ್ನಂ. ೧೯೭೦ ದಶಾಬ್ದಿಯಲ್ಲಿ ದ್ರವಸ್ಫಟಿಕ ಸಂಶೋಧನೆ ನಡೆಸಿದ ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರಿನ ರಾಮನ್ ಸಂಶೋಧನಾ ಕೇಂದ್ರಗಳನ್ನು ಇಲ್ಲಿ ಹೆಸರಿಸಲೇಬೇಕು. ಇಷ್ಟೆಲ್ಲಾ ಮಾಡಿದಾಗಲೂ, ನಮ್ಮ ದೇಶದಲ್ಲಿ, ನಾವು ಉಪಯೋಗಿಸುವ ಪ್ರತಿಯೊಂದು ಲೇಸರ್ ಅಥವಾ ಪ್ರತಿಯೊಂದು ಎಲ್.ಸಿ.ಡಿ. ಸಾಧನವನ್ನು ಆಮದು ಮಾಡಿಕೊಳ್ಳಲಾಗುತ್ತಿದೆ. ಅದೇ ರೀತಿಯಲ್ಲಿ, ಸಿಲಿಕಾನ್ ಮೂಲದ ಪ್ರತಿಯೊಂದು ಡಿಟೆಕ್ಟರ್ ಅನ್ನೂ ಆಮದು ಮಾಡಿಕೊಳ್ಳಲಾಗುತ್ತಿದೆ. ವರ್ಷಕ್ಕೆ ೨೦ ಟನ್ನಿನ ಬಹುಸ್ಫಟಿಕ ಸಿಲಿಕಾನ್‌ನನ್ನು ತಯಾರಿಸುವ ಶಕ್ತಿ ನಮ್ಮಲ್ಲಿತ್ತು. ೧೯೮೦ ದಶಾಬ್ದಿಯಲ್ಲಿ, ಭಾರತೀಯ ವಿಜ್ಞಾನ ಸಂಸ್ಥೆಯ ಜಿ. ಸೂರ್ಯನ್ ಮತ್ತು ವಾಸುದೇವಮೂರ್ತಿ ಇದನ್ನು ಮೆಟ್ಟೂರ್ ಕೆಮಿಕಲ್ಸ್ ಜೊತೆ ಸೇರಿ




***ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರಿನ ರಾಮನ್ ಸಂಶೋಧನಾ ಕೇಂದ್ರ***

ಮಾಡಿದರು. ಈ ಸಹಯೋಗ ಶುರುವಾದಾಗ, ಐ.ಐ.ಎಸ್.ಸಿ. ಅಂದಿನ ನಿರ್ದೇಶಕರಾಗಿದ್ದ ಸತೀಶ್ ಧಾವನ್ನರು, ಈ ಸಂಶೋಧನೆಯ ಫಲಿತಾಂಶವನ್ನು ಉತ್ಪಾದನೆಯಲ್ಲಿ ತೊಡಗಿಸಬೇಕೆಂದೂ, ಬಹುರಾಷ್ಟ್ರೀಯ ಕಂಪೆನಿಗಳಿಗೆ ಮಾರಬಾರದೆಂದೂ ನಿಯಮ ವಿಧಿಸಿದರೆಂದು ದಾಖಲಾಗಿದೆ. ೧೦೦% ಶ್ರಮ ಮತ್ತು ಕಚ್ಚಾ ಪದಾರ್ಥಗಳು ಮತ್ತು ೯೦%ರಷ್ಟು ತಂತ್ರಜ್ಞಾನ ನಮ್ಮದಾಗಿದ್ದರೂ, ಈ ಉತ್ಪನ್ನವು ಈಗ ಕಳೆದುಹೋಗಿದೆ. ಇದಕ್ಕೆ ಪ್ರಭುತ್ವದ ಬೆಂಬಲವಿಲ್ಲದಿರುವುದು ಒಂದು ಕಾರಣವಾಗಿರಬಹುದು. ಆರ್.ಆರ್.ಐ. ಮತ್ತು ಬಿ.ಇ.ಎಲ್. ಸಹಯೋಗದ ದ್ರವಸ್ಫಟಿಕ ವಾಚುಗಳನ್ನು ಉತ್ಪಾದಿಸಲೇ ಆಗಲಿಲ್ಲ. ಉತ್ಪಾದನೆಗೆ ಬೇಕಾದ ಲೈಸೆನ್ಸು ೫ ವರ್ಷಗಳ ನಂತರ ಸಿಕ್ಕರೂ, ಜನರ ಬೇಡಿಕೆ ಅಷ್ಟರಲ್ಲಿ ಬದಲಾಗಿತ್ತು. ಇನ್ನೊಂದು ಉದಾಹರಣೆ, ನಮ್ಮ ಡಯೊಗ್ನಸ್ಟಿಕ್ ಕೇಂದ್ರಗಳು ಮತ್ತು ವಿಮಾನ ನಿಲ್ದಾಣಗಳಲ್ಲಿ ಅದೆಷ್ಟು ಸಿ. ಟಿ. ಯಂತ್ರಗಳಿವೆಯೋ ನನಗೆ ಗೊತ್ತಿಲ್ಲ. ಇದರ ಆವಿಷ್ಕಾರವು ಒಬ್ಬ ಭೌತಶಾಸ್ತ್ರಜ್ಞ ಅಲೆನ್ ಕೋರ್ಮಾಕ್ ಮತ್ತು ಇಂಜಿನಿಯರ್, ಜಾರ್ಜ್ ಹೌನ್ಸಿಲ್ಡ್ ಅವರ ಸಹಯೋಗದಿಂದ. ಈ ಕಾರಣಕ್ಕೆ ಇವರಿಬ್ಬರೂ ನೊಬೆಲ್ ಪ್ರಶಸ್ತಿಗೆ, (ಮೆಡಿಸಿನ್ ಮತ್ತು ಫಿಸ್ಸಿಯಾಲಜಿ) ೧೯೭೯ರಲ್ಲಿ ಆಯ್ಕೆಯಾದರು. ಇದೇ ಸೂತ್ರವನ್ನು, ಭಾರತದಲ್ಲಿ ಜಿ. ಎನ್. ರಾಮಚಂದ್ರನ್ ಮತ್ತು ಎ. ವಿ. ಲಕ್ಷ್ಮೀನಾರಾಯಣನ್, ಎಲೆಕ್ಟ್ರಾನ್ ಸೂಕ್ಷ್ಮದರ್ಶಕದ ವಿಷಯದಲ್ಲಿ ಸಂಶೋಧಿಸಿದರು. ಆದರೆ, ಈ ಸಂಶೋಧನೆಯಿಂದ ಯಾವುದೇ ಫಲಿತಾಂಶ ಹೊರಬರಲಿಲ್ಲ. ವೈದ್ಯಕೀಯ ರೋಗ ಶೈಲಿಯನ್ನು ಖಚಿತಪಡಿಸುವ ಉನ್ನತ ಕಾರ್ಯಕ್ಷಮತೆಯ ಸಿ.ಟಿ., ವಿಮಾನ ನಿಲ್ದಾಣಗಳಲ್ಲಿ ಉಪಯೋಗಿಸುವ ಮಧ್ಯಮ ಕಾರ್ಯಕ್ಷಮತೆಯ ಸಿ.ಟಿ., ಮುಂತಾದುವನ್ನೂ ಆಮದು ಮಾಡಿಕೊಳ್ಳುತ್ತೇವೆ. ಸಿ.ಎಸ್.ಆರ್.ಐ.ಆರ್. ಎಂಬ ಉದ್ಯಮದ ಸಹಯೋಗದಿಂದ ಸ್ಥಳೀಯ ಶ್ರಮದಿಂದಲೇ ಮಾಡಿದ ಕನ್ಫೋಕಲ್ ಸೂಕ್ಷ್ಮದರ್ಶಕದ ಬಗ್ಗೆ ಹೇಳಲು ನಮಗೆ ಹೆಮ್ಮೆಯಾಗುತ್ತದೆ. ಈ ಸಾಧನವು ಕೇಂದ್ರೀಯ ಗ್ಲಾಸ್ ಮತ್ತು ಸೆರಾಮಿಕ್ಸ್ (ಕೊಲಕತ್ತಾ) ಮತ್ತು ವಿನ್ವೇಶ್ ಟೆಕ್ನಾಲಜಿ (ತಿರುವನಂತಪುರಂ). ಅವರ ಸಹಯೋಗದಿಂದ ತಯಾರಾಯಿತು. ೨೦೧೪ ಇಸವಿಯಲ್ಲಿ ಮಾಡಲ್ಪಟ್ಟ ಈ ಸಾಧನದ ಬೆಲೆ ೧–೧.೨೫ ಕೋಟಿ ರೂಪಾಯಿಗಳು. ಇದನ್ನೇ ಆಮದು ಮಾಡಿಕೊಂಡರೆ ೪ ಕೋಟಿ ಖರ್ಚಾಗುತ್ತದೆ. ಕಡಿಮೆ ವೀಕ್ಷಣೆಯ ಸಂದರ್ಭದಲ್ಲೂ, ವಿಮಾನವು ಸುರಕ್ಷಿತವಾಗಿ ಭೂಮಿಗೆ ಇಳಿಯಬಹುದಾದಂತಹ ಸಾಧನ 'ದೃಷ್ಟಿ', ಬೆಂಗಳೂರಿನ ಎನ್.ಎ.ಎಲ್. ಅತಿ ಕಡಿಮೆ ವೆಚ್ಚದಲ್ಲಿ ಮಾಡಿದ್ದಾರೆಂದು ನಮಗೆ ತಿಳಿದಿದೆ. ಇಂತಹ ಸ್ಥಳೀಯ ಸಂಶೋಧನೆಗೆ ಸಾಕಷ್ಟು ಪ್ರೋತ್ಸಾಹ ಸಿಗಬೇಕೆಂದು ಬಯಸುತ್ತೇವೆ.

ಹೀಗೆ, ವೈಜ್ಞಾನಿಕ ಮನೋಭಾವ ಮತ್ತು ಸ್ವಯಂ ಅವಲಂಬನೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯವನ್ನು, ಐ. ವೈ. ಎಲ್. ವೇದಿಕೆಯಲ್ಲಿ ಪ್ರಶ್ನೋತ್ತರಗಳಾಗಬಹುದು. ಸಮಾಜ ಮತ್ತು ವೈಜ್ಞಾನಿಕ ಜ್ಞಾನ ಇವೆರಡರ ಮಧ್ಯೆ ಇರುವ ಪರಸ್ಪರಾವಲಂಬನೆಯನ್ನು ಅರ್ಥೈಸಿಕೊಳ್ಳುವುದೇ ನಮ್ಮ ಮುಖ್ಯ ಗುರಿ. ನಮ್ಮ ಇತರ ಆಶಯಗಳೆಂದರೆ ವಿಜ್ಞಾನ ಮತ್ತು ತಂತ್ರಜ್ಞಾನದ ರಕ್ಷಣೆ, ಕೌಶಲ್ಯ, ಮರು ಮಾನವ ಸಂಪನ್ಮೂಲ ಬೆಳವಣಿಗೆ, ಸ್ವಾವಲಂಬನೆ ಗಳಿಸಬೇಕಾದ ಇತರ ಕ್ಷೇತ್ರಗಳನ್ನು ಗುರುತಿಸುವುದು. ನಮಗೆ ಗೊತ್ತಿರುವಂತೆ ವರ್ಷಕ್ಕೆ ೧.೫ ಕೋಟಿಯಷ್ಟು ಕನ್ನಡಕದ ಗಾಜುಗಳು ಹಾಗೂ ಫ್ರೇಮುಗಳು ಬೇಕು. ಹಾಗಾದಲ್ಲಿ, ಇದರಲ್ಲಿ ೯೦% ಸಾಮಗ್ರಿಗಳನ್ನು ಆಮದು ಸಿ.ಎಸ್.ಐ.ಆರ್. ಸಂಸ್ಥೆಗಳಾದ 'ಕೇಂದ್ರೀಯ ಗ್ಲಾಸ್ ಮತ್ತು ಸೆರಾಮಿಕ್ ಸಂಸ್ಥೆ' ಹಾಗೂ 'ಭಾರತ್ ಅಪ್ತಾಲ್ಮಿಕ್ ಲಿಮಿಟೆಡ್'ಗಳ ಲಾಭ ಏನು? ಅವರ ಸಾಮರ್ಥ್ಯವನ್ನು ಕೆಲಸವಿಲ್ಲದೆ ಏಕೆ ವ್ಯರ್ಥಮಾಡುತ್ತಿದ್ದೇವೆ? ಇವು ನಿಜವಾಗಿಯೂ ಹೈಟೆಕ್ ಕೆಲಸಗಳಲ್ಲ. ಆಧುನಿಕ ವಸ್ತುಗಳೇ ಬೇಕಾದ್ದಲ್ಲಿ, ಉದಾಹರಣೆಗೆ ನಾವು ಪೊಲಿಸಿಲಿಕೊನ್ ಇನ್ನು ಐದು ವರ್ಷಗಳಲ್ಲಿ ತಯಾರಿಸಲು ಸಾಧ್ಯವೇ ಎಂದು ನಮ್ಮನ್ನೇ ನಾವೇ ಪ್ರಶ್ನಿಸಬೇಕಾಗಿದೆ. ಇಲ್ಲದಿದ್ದರೆ, ಅಂತಹುದೇ ಕಾರ್ಯಮಾಡುವ, ಕಡಿಮೆ ಪ್ರಯತ್ನದಲ್ಲಿ ತಯಾರಾಗುವ ವಸ್ತುವನ್ನು ಬಳಸಬಹುದಲ್ಲವೇ? ಪ್ರಭುತ್ವವು ನಮ್ಮ ಶ್ರಮವನ್ನು ವೃಥಾ ಮಾಡದೇ, ಪ್ರಗತಿಯ ಹಾದಿ ತೋರಿಸಲಿ. ಇಲ್ಲೊಂದು ಕಾಲ್ಪನಿಕ ಪ್ರಶ್ನೆ. ನಮ್ಮ ದೇಶವು ಉತ್ಪಾದನೆ ಮಾಡುವ ಅತಿ ದೊಡ್ಡ ಖನಿಜವೆಂದರೆ ಮೈಕಾ. ಮೈಕಾಗೆ ದ್ವಿವಕ್ರೀಭವನ ಗುಣವಿದೆ. ಈ ಗುಣದಿಂದ ಧ್ರುವೀಕರಣ–ವಿಶ್ಲೇಷಕ ಜೋಡಿಗಳನ್ನು ಮಾಡಬಹುದೇ? ಇಂತಹ ಆವಿಷ್ಕಾರವನ್ನು ಪ್ರೋತ್ಸಾಹಿಸಬೇಕೇ? ಈ ರೀತಿ ಹೇಳುವುದು ಏಕೆಂದರೆ, ದೃಗ್ವಿಜ್ಞಾನ ಉದ್ಯಮಗಳೆಂದರೆ, ಬರೀ ಸಿ.ಸಿ.ಡಿ. ತಯಾರಿಕೆಯಲ್ಲ. ಅಂತಹ ಉದ್ದಿಮೆ ಇವನ್ನೂ ಕೂಡಿರುತ್ತದೆ. ಉತ್ತಮ ಗುಣಮಟ್ಟದ ಗಾಜು, ಸಾಮಾನ್ಯ ಬೆಳಕಿನ ಮೂಲಗಳು, ಲೇಸರ್, ಕಿರಣ ವಿಭಜಕರು, ಲೆನ್ಸುಗಳು, ಫೇಸ್ ಶಿಫ್ಟರ್‌ಗಳು, ಪ್ರಿಸಮ್‌ಗಳು, ಮಾಡ್ಯುಲೇಟರ್, ಡಿಫ್ಯೂಸರ್ ಮತ್ತು ಒಳ್ಳೆಯ ಗುಣಮಟ್ಟದ ಎಲೆಕ್ಟ್ರಾನಿಕ್ಸ್. ಇವೆಲ್ಲದರಲ್ಲೂ, ಒಳ್ಳೆಯ ಗುಣಮಟ್ಟ ಬೇಕೆಂದರೆ ನಮಗಿರುವ ಒಂದೇ ದಾರಿ. ಅದು ಆಮದು ಮಾಡಿಕೊಳ್ಳುವುದು. ಅದೂ ಅಲ್ಲದೆ, ನಮ್ಮಲ್ಲಿ ಬೆಳಕಿನ ವಿಷಯದಲ್ಲಿ ಒಳ್ಳೆಯ ಪುಸ್ತಕಗಳ ಕೊರತೆ ಇದೆ. ಭಾರತೀಯರಿಂದಲೇ ಬರೆಯಲ್ಪಟ್ಟು, ಭಾರತೀಯರೇ ಪ್ರಕಾಶನ ಮಾಡಿದ್ದು. ಒಂದು ಕಾಲದಲ್ಲಿ ಎಮ್. ಎನ್. ಸಹಾ ಮತ್ತು ಬಿ. ಎನ್. ಶ್ರೀವಾತ್ಸವ ಬರೆದ 'ಎ ಟೆಕ್ಸ್ಟ್ ಬುಕ್ ಆಫ್ ಹೀಟ್' ಅಂತರರಾಷ್ಟ್ರೀಯ ಖ್ಯಾತಿ ಹೊಂದಿತ್ತು. ಅದಕ್ಕೆ ಸಮಾನವಾದುದು ಬೇರ್ಯಾವುದೂ ಬಂದಿಲ್ಲ.

ಮುಖ್ಯವಾದ ಪ್ರಶ್ನೆಗಳನ್ನು ಹಾಕುವುದಕ್ಕೂ, ಅದರ ಉತ್ತರವನ್ನು ವಿಶ್ಲೇಷಿಸಿ, ಮಾರ್ಗದರ್ಶನ ನೀಡುವುದಕ್ಕೂ, ಈ ಚರ್ಚೆಗಳಲ್ಲಿ ವೈಜ್ಞಾನಿಕವಾಗಿ ಖಚಿತವಾದ ವಿಷಯಗಳನ್ನು ಮಾತ್ರ ಮಂಡಿಸಬೇಕು. ಇದಕ್ಕೆ ಸೇರಿದಂತೆ, ವೈಜ್ಞಾನಿಕ ಆವಿಷ್ಕಾರಗಳ ಪುರಾವೆ ಸೇರಿಸಿ, ಅನೇಕರು ಕಾಲ್ಪನಿಕ ವಿಷಯಗಳನ್ನು ಸಮರ್ಥಿಸುತ್ತಾರೆ. ಅವನ್ನು ಎದುರಿಸಬೇಕು.

**ಎಸ್. ಚಟರ್ಜಿ**
ಅಧ್ಯಕ್ಷರು, ಎ.ಐ.ಪಿ.ಎಸ್.ಎನ್., ಬೆಂಗಳೂರು

# ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ

**ಕಾರ್ಮಿಕ ಕಲ್ಯಾಣ ಭವನ ನಂ. 48, 2ನೇ ಮಹಡಿ ಮತ್ತಿಕೆರೆ ಮುಖ್ಯರಸ್ತೆ, ಯಶವಂತಪುರ,**
**ಬೆಂಗಳೂರು–560022. ದೂರವಾಣಿ ಸಂಖ್ಯೆ : 080–23570266 ಫ್ಯಾಕ್ಸ್ 23475188**

## ಕಾರ್ಮಿಕರ ಸೇವೆಯಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಯೋಜನೆಗಳ ವಿವರ

Web site : www.klwb-kar.com E-mail : welfarecommissioner123@gmail.com

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ನೆರವು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ಒಂದು ನಿಧಿಯನ್ನು, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965ರಡಿಯಲ್ಲಿ ಸ್ಥಾಪಿಸಲಾಗಿದೆ. ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು, ಅವರ ಅವಲಂಬಿತರು, ಮತ್ತು ಕಾರ್ಮಿಕರ ಮಕ್ಕಳ ಕ್ಷೇಮಾಭಿವೃದ್ಧಿಗೆ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಈ ಕೆಳಗಿನ ಯೋಜನೆಗಳು ಜಾರಿಯಲ್ಲಿರುತ್ತದೆ.

ಸೂಚನೆ : ಪ್ರತಿ ವರ್ಷ ಜನವರಿ 15ರೊಳಗೆ ಕಾರ್ಮಿಕರು, ಮಾಲೀಕರು ರೂ. 6 : 12ರಂತೆ ಒಟ್ಟು ರೂ. 18/–ಗಳಂತೆ ಒಬ್ಬ ಕಾರ್ಮಿಕನಿಗೆ ವಂತಿಕೆಯನ್ನು ಕಾರ್ಮಿಕ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು.

### ಈ ಕೆಳಗಿನ ಯೋಜನೆಗಳಿಗೆ ಮಾಸಿಕ ಸಂಬಳ ರೂ. 15,000/–ಗಳಿಗೆ ಮೀರಿರಬಾರದು. ವಯೋಮಿತಿ 18– 60

1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ: ಪ್ರೌಢ ಶಾಲೆ (8ರಿಂದ 10ನೇ ತರಗತಿವರೆಗೆ) ರೂ. 1500/ ಪಿಯುಸಿ/ಡಿಪ್ಲೊಮಾ/ಐಟಿಐ/ಟಿಸಿಹೆಚ್ ಇತ್ಯಾದಿ ರೂ. 2000/–ಪದವಿ ತರಗತಿಗೆ ರೂ. 2200/ ಸ್ನಾತಕೋತ್ತರ ಪದವಿ ತರಗತಿಗಳಿಗೆ ರೂ. 3000/– ಇಂಜಿನೀಯರಿಂಗ್/ವೈದ್ಯಕೀಯ ರೂ. 5000/–ಗಳ ಪ್ರೋತ್ಸಾಹ ಧನ ನೀಡಲಾಗುವುದು.(ಅರ್ಜಿ ಸಲ್ಲಿಸಲು ಸಾಮಾನ್ಯ ವರ್ಗ ಶೇ. 50 ಪ.ಜಾ / ಪ.ಪಂ ಶೇ. 45ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು).
2. ಕಾರ್ಮಿಕರಿಗೆ ವೈದ್ಯಕೀಯ ನೆರವು : ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಕ್ಯಾನ್ಸರ್, ಆಂಜಿಯೋಪ್ಲಾಸ್ಟಿ, ಕಣ್ಣು, ಅರ್ಥೋಪೆಡಿಕ್, ಗರ್ಭಕೋಶದ ಶಸ್ತ್ರ ಚಿಕಿತ್ಸೆ, ಗಾಲ್ ಬ್ಲಾಡರ್ ತೊಂದರೆ, ಮೆದುಳಿನ ರಕ್ತಸ್ರಾವ ಚಿಕಿತ್ಸೆಗೆ ರೂ. 1,000/–ದಿಂದ ರೂ. 10,000/–ವರೆಗೆ ಮತ್ತು ಆರೋಗ್ಯ ತಪಾಸಣೆಗೆ ರೂ. 200/–ರಿಂದ ರೂ. 600/–ವರೆಗೆ ಧನ ಸಹಾಯ ನೀಡಲಾಗುವುದು.
3. ಕಾರ್ಮಿಕರು ಮತ್ತು ಅವರ ಅವಲಂಬಿತರಿಗೆ ಗಣಕಯಂತ್ರ ತರಬೇತಿ : ಉದ್ಯೋಗ ಮತ್ತು ತರಬೇತಿ ಇಲಾಖೆ ಸಹಯೋಗದೊಂದಿಗೆ ತರಬೇತಿ ನೀಡಲಾಗುವುದು. ಅಭ್ಯರ್ಥಿಯು ಕನಿಷ್ಠ SSLC ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ್ದು 18–40 ವಯೋಮಿತಿಯಲ್ಲಿರಬೇಕು. ಕುಟುಂಬದಲ್ಲಿ ಒಬ್ಬರಿಗೆ ಮಾತ್ರ ಒಂದು ಬ್ಯಾಚಿನಲ್ಲಿ ಅವಕಾಶ ನೀಡಲಾಗುವುದು. ಹಾಗೂ ಒಟ್ಟಾರೆ ಒಂದು ಕುಟುಂಬದಲ್ಲಿ ಇಬ್ಬರಿಗೆ ಮಾತ್ರ ಸೌಲಭ್ಯ ನೀಡಲಾಗುವುದು.
4. ಅಂಗವಿಕಲ ಕಾರ್ಮಿಕರಿಗೆ ತ್ರಿಚಕ್ರ ಸೈಕಲ್: ಅಂಗವಿಕಲ ಕಾರ್ಮಿಕರಿಗೆ ತ್ರಿಚಕ್ರ ಸೈಕಲ್ ಖರೀದಿಸಲು ರೂ. 5,000/–ಗಳ ಧನ ಸಹಾಯ ನೀಡಲಾಗುವುದು.
5. ಕಾರ್ಮಿಕರ ಅಪಘಾತ ಧನ ಸಹಾಯ : ಕಾರ್ಮಿಕರಿಗೆ ಕೆಲಸದ ವೇಳೆಯಲ್ಲಿ ಅಪಘಾತವಾದಲ್ಲಿ ಕನಿಷ್ಠ ರೂ. 1000/– ಗರಿಷ್ಠ ರೂ. 3000/– ವರೆಗೆ ಧನ ಸಹಾಯ ನೀಡಲಾಗುವುದು. ಸೌಲಭ್ಯ ಪಡೆಯುವ ಕಾರ್ಮಿಕರು ಅಪಘಾತವಾದ 3 ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.
6. ಅಂಗವಿಕಲ ಕಾರ್ಮಿಕರಿಗೆ ಕೃತಕ ಅಂಗಸಾಧನ ಖರೀದಿಸಲು ಧನ ಸಹಾಯ : E.S.I., ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅಥವಾ ಬೇರಾವುದೇ ಧನ ಸಹಾಯ ಪಡೆದಿರಬಾರದು. ಕೃತಕ ಅಂಗ ಸಾಧನ ಖರೀದಿಸಲು ರೂ. 1000/–ದಿಂದ ರೂ. 5,000/–ವರೆಗೆ ನೀಡಲಾಗುವುದು.

### ಈ ಕೆಳಗಿನ ಯೋಜನೆಗೆ ಮಾಸಿಕ ಸಂಬಳದ ಮಿತಿಯಿರುವುದಿಲ್ಲ. ವಯೋಮಿತಿ 18– 60

7. ವಾರ್ಷಿಕ ವೈದ್ಯಕೀಯ ತಪಾಸಣೆಯನ್ನು ನಡೆಸುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ : ನೋಂದಾಯಿತ ಕಾರ್ಮಿಕ ಸಂಘಟನೆಗಳು / ಸರ್ಕಾರೇತರ ಸಂಸ್ಥೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ನಡೆಸುವ ಶಿಬಿರದಲ್ಲಿ ಭಾಗವಹಿಸುವ ಕಾರ್ಮಿಕರ ಗರಿಷ್ಠ ಮಿತಿ ಹಾಗೂ ನೀಡುವ ಚಿಕಿತ್ಸಾ ಕ್ರಮವನ್ನು ಆಧರಿಸಿ ರೂ. 20,000/–ವರೆಗೆ ಧನ ಸಹಾಯ ನೀಡಲಾಗುವುದು. ಒಂದು ಸಂಘಟನೆಗೆ ವರ್ಷದಲ್ಲಿ ಒಂದು ಬಾರಿ ಮಾತ್ರ ಈ ಸೌಲಭ್ಯ ನೀಡಲಾಗುವುದು. (ಯಾವುದೇ ಮೂಲದಿಂದ ವೈದ್ಯಕೀಯ ಸೌಲಭ್ಯ ಪಡೆಯದಿರುವ ಉದ್ಯೋಗ ಸಂಸ್ಥೆಯ ಕಾರ್ಮಿಕರಿಗೆ ನಡೆಸುವ ಆರೋಗ್ಯ ತಪಾಸಣೆ ಶಿಬಿರಕ್ಕೆ ಧನ ಸಹಾಯ ನೀಡಲಾಗುವುದು)
8. ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ : ನೋಂದಾಯಿತ ಕಾರ್ಮಿಕ ಸಂಘಟನೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಂಡಲ್ಲಿ ರೂ. 40,000/– ದವರೆಗೆ ಧನ ಸಹಾಯ ನೀಡಲಾಗುವುದು. ವರ್ಷದಲ್ಲಿ ಒಂದು ಸಂಘಟನೆಗೆ ಒಂದು ಬಾರಿ ಮಾತ್ರ ಈ ಸೌಲಭ್ಯ ನೀಡಲಾಗುವುದು. (ಯಾವುದೇ ಮೂಲದಿಂದ ಕ್ರೀಡಾ ಚಟುವಟಿಕೆಗೆ ಧನ ಸಹಾಯ ದೊರೆಯದಿದ್ದಲ್ಲಿ ಅಂತಹ ಉದ್ಯೋಗ ಸಂಸ್ಥೆಯ ಕಾರ್ಮಿಕರಿಗೆ ನಡೆಸುವ ವಾರ್ಷಿಕ ಕ್ರೀಡಾ ಚಟುವಟಿಕೆಗೆ ಧನ ಸಹಾಯ ನೀಡಲಾಗುವುದು)

9 ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ : ಈ ಯೋಜನೆಯ ಸೌಲಭ್ಯ ಪಡೆಯಬೇಕಾದರೆ ಮೃತರ ಅವಲಂಬಿತರು ಕಾರ್ಮಿಕ ಮೃತ ಪಟ್ಟ 6 ತಿಂಗಳೊಳಗೆ ನಿಗದಿತ ಅರ್ಜಿ ನಮೂನೆಯಲ್ಲಿ ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸಿದಲ್ಲಿ, ಧನ ಸಹಾಯ ರೂ.5,000/–ಗಳನ್ನು RTGS ಮೂಲಕ ಫಲಾನುಭವಿಯ ಉಳಿತಾಯ ಖಾತೆಗೆ ನೇರವಾಗಿ ಜಮಾ ಮಾಡಲಾಗುವುದು.

10. ಹಿಮೋಫಿಲಿಯಾ ನ್ಯೂನತೆಯಿಂದ ಬಳಲುತ್ತಿರುವ ಕಾರ್ಮಿಕರು : ನೋಂದಾಯಿತ ಹಿಮೋಫಿಲಿಯಾ ಸೊಸೈಟಿಗಳಿಂದ ಚಿಕಿತ್ಸೆ ಪಡೆದುಕೊಂಡಲ್ಲಿ ಅಂತಹ ಸೊಸೈಟಿಗಳಿಗೆ ರೂ 5,000/–ಧನ ಸಹಾಯ ನೀಡಲಾಗುವುದು. ಇಂತಹ ಸೊಸೈಟಿಗಳು ಬೆಂಗಳೂರು, ಮಣಿಪಾಲ್ ಮತ್ತು ದಾವಣಗೆರೆಯಲ್ಲಿ ಲಭ್ಯವಿರುವುದು.
11. ಸಮುದಾಯ ಭವನ : ಪೀಣ್ಯ 1ನೇ ಹಂತ ಆಂಜನೇಯ ದೇವಸ್ಥಾನದ ಎದುರು ಬೆಂಗಳೂರು, ಮೈಸೂರು ರಸ್ತೆಯ ಬಾಪೂಜಿನಗರದ ಗಾಳಿ ಆಂಜನೇಯ ಸ್ವಾಮಿ ದೇವಸ್ಥಾನದ ಹಿಂಭಾಗದಲ್ಲಿರುವ ಸಮುದಾಯ ಭವನ, ಸಿಂದಗಿ ರಸ್ತೆ, ಬಿಜಾಪುರ ಮತ್ತು ಗದಗ್ ನಗರ ಸಟಲ್‌ಮೆಂಟ್ ಏರಿಯಾದಲ್ಲಿ ಇರುವ ಸಮುದಾಯ ಭವನಗಳನ್ನು ಕಾರ್ಮಿಕರು ಮತ್ತು ಅವರ ಮಕ್ಕಳ ವಿವಾಹ ಮತ್ತು ಇತರೆ ಸಮಾರಂಭಗಳಿಗೆ ರಿಯಾಯಿತಿ ದರದಲ್ಲಿ ಬಾಡಿಗೆಗೆ ನೀಡಲಾಗುವುದು.

**(ಇ. ಲಕ್ಷ್ಮಪ್ಪ)**
ಕಲ್ಯಾಣ ಆಯುಕ್ತರು

# ಹೊಸತು

ನೆಮ್ಮದಿಯ ನಾಳೆ ನಮ್ಮದು



ಹೊಸ ವರ್ಷದ ಹಾರ್ದಿಕ ಶುಭಾಶಯಗಳು

## ೨೦೧೬

### ಜನವರಿ

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಫೆಬ್ರವರಿ

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | |
| ಬುಧವಾರ | ೩ | ೧೦ | ೧೭ | ೨೪ | |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಮಾರ್ಚ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಮೇ

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ಜೂನ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | |
| ಶನಿವಾರ | ೪ | ೧೧ | ೧೮ | ೨೫ | |

### ಜುಲೈ

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಆಗಸ್ಟ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | |

### ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | ೩೧ | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

### ನವೆಂಬರ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

# ಭಯೋತ್ಪಾದನೆಯ ಮೂರ್ತ ಮತ್ತು ಅಮೂರ್ತ ಸ್ವರೂಪಗಳು

ಎಸ್. ಸುರೇಂದ್ರ

**ಭ**ಯೋತ್ಪಾದನೆ ಎಂಬುದು ಸಮಕಾಲೀನ ರಾಜಕೀಯ ಮಾತುಕತೆಗಳು, ಚರ್ಚೆಗಳಲ್ಲಿ ಚಿರಪರಿಚಿತವಾಗಿರುವ ಪದ. ಭಯೋತ್ಪಾದನೆ ಹಿಂದೆಂದೂ ಇಲ್ಲದಿದ್ದ ಹೊಸ ಸಂಗತಿಯೇನಲ್ಲ. ಈ ಪದ ಭಯ, ಬೆದರಿಕೆ, ಅತಿಯಾದ ಹಿಂಸೆ, ಆಕ್ರಮಣಶೀಲತೆ ಮತ್ತು ಅತಿರೇಕದಿಂದ ಕೂಡಿದ ವಿನಾಶಕಾರಿ ಕೃತ್ಯಗಳನ್ನು ಕುರಿತಂತಹ ಭಾವನೆಗಳನ್ನು ಜನಮನದಲ್ಲಿ ಹುಟ್ಟುಹಾಕುತ್ತಿದೆ. ಈ ಮಾನವ ವಿರೋಧಿ ಕೃತ್ಯಗಳಿಂದಾಗಿ ನೂರಾರು, ಸಾವಿರಾರು ಮುಗ್ಧಜನರು ಸಾವನ್ನಪ್ಪುವುದು, ಲೆಕ್ಕವಿಲ್ಲದಷ್ಟು ಆಸ್ತಿಪಾಸ್ತಿಗಳ ನಾಶವಾಗುವುದು ಸರ್ವೇಸಾಮಾನ್ಯವಾಗಿಬಿಟ್ಟಿದೆ. ಭಯೋತ್ಪಾದಕರು ಉಗ್ರವಾದಿ ಸಿದ್ಧಾಂತದಿಂದಲೋ ಅಥವಾ ಅತೀವ ಮತಧರ್ಮೀಯ ಅಂಧಶ್ರದ್ಧೆಯಿಂದಲೋ ಪ್ರಚೋದಿತರಾಗಿ ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳಲು ಪ್ರಾಣತ್ಯಾಗ ಮಾಡಲೂ ಸಿದ್ಧರಾಗಿರುತ್ತಾರೆ. ಇಂತಹ ಕೃತ್ಯಗಳಿಂದಾಗಿ ಸಂಕಷ್ಟಕ್ಕೊಳಗಾಗುವವರು ಜನಸಾಮಾನ್ಯರು. ಹೀಗೆ ಅವರು ಮಾನಸಿಕ ಆಘಾತಕ್ಕೆ ಒಳಗಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಎಂದೇ ಇದನ್ನು ಸಮರ್ಥವಾಗಿ ನಿಗ್ರಹಿಸಲು, ಇದರ ವಿರುದ್ಧ ಹೋರಾಡಲು ಸರ್ಕಾರಗಳು, ಪ್ರಭುತ್ವಗಳು, ಸಂಘಸಂಸ್ಥೆಗಳು ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು ಅಗತ್ಯ. ಕೆಲವು ರಾಷ್ಟ್ರಗಳು ತಮ್ಮ ಹಿತಾಸಕ್ತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅಲ್ಲಲ್ಲಿ ಜರುಗುವ ಹಿಂಸಾತ್ಮಕ ಕೃತ್ಯಗಳನ್ನು ಉತ್ಪ್ರೇಕ್ಷೆಗೊಳಿಸಿ ಅಥವಾ ಇಲ್ಲಸಲ್ಲದ ಆಪಾದನೆಗಳನ್ನು ಹೊರಿಸಿ ಭಯೋತ್ಪಾದನೆಯನ್ನು ನಿರ್ಮೂಲ ಗೊಳಿಸುತ್ತೇವೆಂಬ ನೆಪದಲ್ಲಿ ದುರಾಕ್ರಮಣದಂಥ ಅತ್ಯಂತ ವಿನಾಶಕಾರಿ ಕ್ರಮಗಳನ್ನು ಕೈಗೊಂಡಿರುವ ಉದಾಹರಣೆಗಳೂ ನಮ್ಮ ಮುಂದಿವೆ. "ಅಂತರರಾಷ್ಟ್ರೀಯ ಭಯೋತ್ಪಾದನೆ"ಯ ಹೆಸರಿನಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳು ಭಯೋತ್ಪಾದನೆ ಒಡ್ಡಿರುವ ಬೆದರಿಕೆಯ ವಿರುದ್ಧ ಕ್ರಮಗಳನ್ನು ತೆಗೆದುಕೊಳ್ಳುತ್ತಿವೆ. ಅಂತಹ ಕ್ರಮಗಳಿಗೆ ಇತರ ರಾಷ್ಟ್ರಗಳ ಸಮ್ಮತಿಯನ್ನು ಅಪೇಕ್ಷಿಸುತ್ತವೆ. ಭಯೋತ್ಪಾದನೆಯ ವಿರುದ್ಧದ ಇಂತಹ ಪ್ರಚಾರಕ್ಕೆ, ಪ್ರತೀಕಾರ ಕ್ರಮಗಳಿಗೆ ನಾಯಕತ್ವ ವಹಿಸಿ ತನ್ನೆಲ್ಲ ಮಿಲಿಟರಿ ಶಕ್ತಿಯನ್ನು ಬಳಸುತ್ತಿರುವ ರಾಷ್ಟ್ರವೆಂದರೆ ಅದು ಅಮೆರಿಕ ಎಂದು ಇಲ್ಲಿ ಒತ್ತಿ ಹೇಳುವ ಅವಶ್ಯಕತೆ ಇಲ್ಲ. ಆದರೆ ಭಯೋತ್ಪಾದನೆ ಒಡ್ಡುತ್ತಿರುವ ಬೆದರಿಕೆ ಎಷ್ಟರಮಟ್ಟಿಗೆ ವಾಸ್ತವವಾದುದು ? ಅದರ ಮೂಲಗಳು ಎಲ್ಲಿವೆ ? ಅದರ ಗುಣಲಕ್ಷಣಗಳೇನು ? ಭಯೋತ್ಪಾದನೆಯ ವಿರುದ್ಧ ಹೋರಾಡುವ ನೆಪದಲ್ಲಿ ಅಮೆರಿಕ ತನ್ನ ಯಾಜಮಾನ್ಯ ಮತ್ತು ಮಿಲಿಟರಿ ಪಾರಮ್ಯವನ್ನು ವಿಸ್ತರಿಸಿಕೊಳ್ಳಲು ಹವಣಿಸುತ್ತಿದೆಯೇ ? ಅಂತರರಾಷ್ಟ್ರೀಯ ರಾಜಕೀಯ ವ್ಯವಸ್ಥೆ ಮತ್ತು ಇತರ ರಾಷ್ಟ್ರಗಳ ಮೇಲೆ ಇದರಿಂದುಂಟಾಗುವ ಪರಿಣಾಮಗಳೇನು ? ಇಂದಿನ ಸಂದರ್ಭದಲ್ಲಿ ಇಂತಹ ಪ್ರಶ್ನೆಗಳನ್ನು ಆಳವಾಗಿ, ವಸ್ತುನಿಷ್ಠವಾಗಿ ವಿಶ್ಲೇಷಿಸುವ ಅಗತ್ಯವಿದೆ.

ಭಯೋತ್ಪಾದನೆಯು ಅನೇಕ ರಾಷ್ಟ್ರಗಳಿಗೆ ಒಂದು ಪಿಡುಗಾಗಿ ಕಾಡುತ್ತಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಅದರ ನಿರ್ಮೂಲನೆಗಾಗಿ ಎಲ್ಲ ರಾಷ್ಟ್ರಗಳು ಒಂದು ಜಾಗತಿಕ ಒಕ್ಕೂಟವನ್ನು ರಚಿಸಿಕೊಳ್ಳುವುದು ಅಗತ್ಯ. ವಿಶ್ವಸಂಸ್ಥೆ ಈಚೆಗೆ ಭಯೋತ್ಪಾದನೆಯ ವಿರುದ್ಧ ಒಂದುಗೂಡಿದ ಪ್ರಯತ್ನಕ್ಕೆ ಕರೆ ನೀಡಿದೆ. ಇತಿಹಾಸದಲ್ಲಿ ಮತ್ತು ರಾಜಕಾರಣದ ಹಿನ್ನೆಲೆಯಲ್ಲಿ





*ಮುಂಬೈನಲ್ಲಿ ಜರುಗಿದ ಬಾಂಬ್ ಸರಣಿಸ್ಫೋಟ*

ಭಯೋತ್ಪಾದನೆಯನ್ನು ಹೇಗೆ ಅರ್ಥೈಸಲಾಗಿದೆ ? ಭಯೋತ್ಪಾದನೆಯ ಗುಣಲಕ್ಷಣವನ್ನು ನಿಖರವಾಗಿ ವಿಷದೀಕರಿಸುವುದು ಕಷ್ಟಸಾಧ್ಯವೇ. ಅದಕ್ಕೆ ವಿವಿಧ ಆಯಾಮಗಳಿವೆ. ಇತಿಹಾಸದುದ್ದಕ್ಕೂ ಆಯಾ ಸಂದರ್ಭಕ್ಕೆ ತಕ್ಕಂತೆ ಅದನ್ನು ವಿವಿಧ ದೃಷ್ಟಿಕೋನಗಳಿಂದ ಅರ್ಥೈಸುವುದು ರೂಢಿಯಲ್ಲಿದೆ. ಒಟ್ಟಾರೆಯಾಗಿ ಅಂದಂದಿನ ಐತಿಹಾಸಿಕ, ಸೈದ್ಧಾಂತಿಕ ಮತ್ತು ಸಾಮಾಜಿಕ ಸ್ಥಿತಿಗಳ ಹಿನ್ನೆಲೆಯಲ್ಲಿ ಅದನ್ನು ಅರ್ಥೈಸುವುದು ಸೂಕ್ತ. ಇನ್ನೂ ವಿಸ್ತರಿಸಿ ಹೇಳುವುದಾದರೆ ಭಯೋತ್ಪಾದಕ ಚಟುವಟಿಕೆಗಳ ಕುರಿತು ಚರ್ಚಿಸುವಾಗ ರಾಷ್ಟ್ರ ಅಥವಾ ಪ್ರಭುತ್ವವೇ ಎಸಗುವ ಭಯೋತ್ಪಾದನೆಯೂ ಸೇರಿದಂತೆ ರಾಜಕೀಯ ಹಿಂಸಾಚಾರಗಳು, ಯುದ್ಧಗಳೂ ಮತ್ತಿತರ ಸಂಘರ್ಷಗಳನ್ನೂ ಗಣನೆಗೆ ತೆಗೆದುಕೊಳ್ಳುವ ಅಗತ್ಯವಿದೆ. ಇತಿಹಾಸದ ಪುಟಗಳನ್ನೊಮ್ಮೆ ತಿರುವಿ ಹಾಕಿದರೆ ಪ್ರಭುತ್ವಗಳೇ ಹಿಂಸಾತ್ಮಕ ಕ್ರಿಯೆಗಳಲ್ಲಿ ಸ್ವೇಚ್ಛಾನುಸಾರವಾಗಿ ತೊಡಗಿ ತಮ್ಮ ಪ್ರಜೆಗಳನ್ನು ಹತ್ಯೆಗೈದ ಅನೇಕ ಪ್ರಸಂಗಗಳು ನಮಗೆ ಕಾಣಸಿಗುತ್ತವೆ.



(ಭಯೋತ್ಪಾದನೆ ಎಂಬುದು ರಾಜಕೀಯ ಅಥವಾ ಸಾಮಾಜಿಕ ಶಕ್ತಿಯಲ್ಲ. ಅದು ತೀವ್ರವಾದ ರಾಷ್ಟ್ರೀಯ ದುರಭಿಮಾನ ಅಥವಾ ಮತಾಂಧತೆಯ ಉಗ್ರರ ತಂಡಗಳು ನಡೆಸುವ ದುಷ್ಕೃತ್ಯ. ಅಲ್ಲದೆ, ತಮ್ಮ ರಾಜಕೀಯ ಆರ್ಥಿಕ ಉದ್ದೇಶದ ಸಾಧನೆಗಾಗಿ ಮೊರೆಹೋಗುವ ಮಾನವ ವಿರೋಧಿ ಕೃತ್ಯ. ಆಧುನಿಕ ಇತಿಹಾಸದಲ್ಲಿ, ಎಂದರೆ ಎರಡನೆಯ ಜಾಗತಿಕ ಯುದ್ಧದ ನಂತರ ಭಯೋತ್ಪಾದನೆಯು ವಿವಿಧ ಆಯಾಮಗಳನ್ನು ಪಡೆದುಕೊಂಡಿದೆ. ಸಾಮ್ರಾಜ್ಯಶಾಹಿ ಶಕ್ತಿಗಳು ಇದನ್ನು ಉಪಯೋಗಿಸಿಕೊಂಡು ಇತರ ದೇಶಗಳ ಆಡಳಿತಗಳನ್ನು ಪದಚ್ಯುತಗೊಳಿಸಲು ನಡೆಸುವ ದುರಾಕ್ರಮಣವೂ ಭಯೋತ್ಪಾದನೆಯೆ. ಸಾಮ್ರಾಜ್ಯಶಾಹಿ ಅಮೆರಿಕ ಜಗತ್ತಿನಲ್ಲಿ ಎಸಗಿರುವ ಭಯೋತ್ಪಾದಕ ಕೃತ್ಯಗಳಿಗೆ ಎಣೆಯೇ ಇಲ್ಲ. ಲ್ಯಾಟಿನ್ ಅಮೆರಿಕಾದ ರಾಷ್ಟ್ರಗಳು, ವಿಯೆಟ್ನಾಂ, ಕೊರಿಯ ಮುಂತಾದ ದೇಶಗಳಲ್ಲಿ ನಡೆಸಿದ ದೌರ್ಜನ್ಯ ಅದಕ್ಕೆ ಉದಾಹರಣೆ. ಇತ್ತೀಚೆಗಂತೂ, ಎಂದರೆ ನ್ಯೂಯಾರ್ಕ್‌ನಲ್ಲಿರುವ ವಿಶ್ವ ವ್ಯಾಪಾರ ಸಂಸ್ಥೆಯ ಅವಳಿ ಗಗನಚುಂಬಿ ಕಟ್ಟಡಗಳ ಮೇಲೆ ಭಯೋತ್ಪಾದಕರ ದಾಳಿ ಜರುಗಿದ ನಂತರವಂತೂ ಆಧಾರರಹಿತ ಆಪಾದನೆಗಳನ್ನು ಮಾಡಿ ಅಮೆರಿಕ ಇರಾಕ್ ಮೇಲೆ ಉಗ್ರ ದಾಳಿ ನಡೆಸಿ ಸದ್ದಾಂ ಹುಸೇನ್‌ನನ್ನು ಹತ್ಯೆಗೈದದ್ದು, ಆ ಆಕ್ರಮಣದಲ್ಲಿ ಸಾವಿರಾರು ಇರಾಕಿಗಳು ಸಾವಿಗೀಡಾದದ್ದು, ಅದಕ್ಕೂ ಮುನ್ನ ಇಸ್ಲಾಮಿಕ್ ಉಗ್ರವಾದಿ ತಾಲಿಬಾನ್ ಆಡಳಿತವನ್ನು ನಿರ್ಮೂಲನೆ ಮಾಡುವ ನೆಪದಲ್ಲಿ ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಂಡದ್ದು – ಇವುಗಳ ಹಿಂದಿರುವ ಉದ್ದೇಶವಾದರೂ ಏನು ? ಈ ಹಿನ್ನೆಲೆಯಲ್ಲಿ ಇಡೀ ಪಶ್ಚಿಮ ಏಶಿಯ ಪ್ರದೇಶವನ್ನು ಪುನರ್‌ರಚಿಸಲು ಹೊರಟಿರುವ ಅಮೆರಿಕ ಈಗ ಒಂದು ಭಯೋತ್ಪಾದಕ ರಾಷ್ಟ್ರ ಎಂಬುದನ್ನು ಅದರ ಸಾಮ್ರಾಜ್ಯಶಾಹಿ ನೀತಿಗಳು, ಕೃತ್ಯಗಳೇ ಸಾಬೀತುಪಡಿಸುತ್ತವೆ.) ತನ್ನ ಪ್ರಭುತ್ವದ ಬೆನ್ನೆಲುಬಾದ ಮಿಲಿಟರಿ–ಇಂಡಸ್ಟ್ರಿಯಲ್ ಕಾಂಪ್ಲೆಕ್ಸ್‌ಅನ್ನು ಸುಭದ್ರಗೊಳಿಸುವ, ಎಲ್ಲೆಡೆ ತನ್ನ ಯಾಜಮಾನ್ಯವನ್ನು ಸ್ಥಾಪಿಸುವ ಸಲುವಾಗಿ ಅಮೆರಿಕ ಎಂತಹ ಹೇಯ ಕೃತ್ಯಗಳಲ್ಲಿ ತೊಡಗಲೂ ಹೇಸುವುದಿಲ್ಲ. ಅಲ್ಲದೆ, ತನ್ನ ಆರ್ಥಿಕ ಅಭಿವೃದ್ಧಿಗೆ ಅತ್ಯಗತ್ಯವಾದ ತೈಲದ ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಸಲುವಾಗಿ ಮಧ್ಯಪ್ರಾಚ್ಯದಲ್ಲಿರುವ ತನ್ನ ಕೈಗೊಂಬೆ ಆಡಳಿತೆಗಳನ್ನು ರಕ್ಷಿಸುತ್ತಲೇ ಬಂದಿದೆ. ಅಲ್ಲಿ ಪ್ರಜಾಪ್ರಭುತ್ವಕ್ಕೆ ಎಡೆಯೇ ಇಲ್ಲ. ರಾಜಶಾಹಿ ಆಡಳಿತವೇ ಇರಲಿ, ಸರ್ವಾಧಿಕಾರಿ ಆಡಳಿತವೇ ಇರಲಿ, ಅವುಗಳಿಗೆ ಅಮೆರಿಕಾದ ಆಶೀರ್ವಾದ ಸದಾ ಇದ್ದೇ ಇರುತ್ತದೆ. ತಾಲಿಬಾನ್, ಅಲ್‌ಖೈದಾ, ಇರಾಕ್–ಸಿರಿಯ ಇಸ್ಲಾಮಿಕ್ ಸ್ಟೇಟ್‌ನಂತಹ ಭಯೋತ್ಪಾದಕ ಸಂಘಟನೆಗಳ ಹುಟ್ಟಿಗೆ ಅಮೆರಿಕ ಕಾರಣ, ಒಂದು ಕಾಲಕ್ಕೆ ಅದರ ಯಾಜಮಾನ್ಯಕ್ಕೆ ಸವಾಲೊಡ್ಡುತ್ತಿದ್ದ ಸೋವಿಯತ್ ಒಕ್ಕೂಟವೂ ಈಗಿಲ್ಲ. ಪರಿಣಾಮವಾಗಿ ಎಲ್ಲೆಡೆ ಅಮೆರಿಕಾದ ನವ ಸಾಮ್ರಾಜ್ಯಶಾಹಿಯು ಯಾವ ಅಡೆತಡೆಯೂ ಇಲ್ಲದೆ ಜಗತ್ತನ್ನೇ ನಿಗ್ರಹಿಸಲು ಹೊರಟಿದೆ.

ಇಲ್ಲಿ ಇನ್ನೊಂದು ಪ್ರಮುಖವಾದ ವಿಷಯವನ್ನು ಪ್ರಸ್ತಾಪಿಸುವ ಅಗತ್ಯವಿದೆ. ಭಯೋತ್ಪಾದಕರೆಂದರೆ ಮುಸ್ಲಿಮರು ಮಾತ್ರ ಎಂಬ ಭಾವನೆಯನ್ನು ಹುಟ್ಟುಹಾಕಲಾಗಿದೆ. ಹಾಗೆ ನೋಡಿದರೆ ಶಿವಸೇನೆ, ಸಂಘಪರಿವಾರದ ಅಂಗಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್, ಭಜರಂಗದಳ, ಶ್ರೀರಾಮಸೇನೆ, ಹನುಮ ಸೇನೆ ಮೊದಲಾದುವು ಹಿಂದೂ ಭಯೋತ್ಪಾದಕ ಸಂಘಟನೆಗಳಲ್ಲವೇ ? ಪ್ರಮಾಣ ಮತ್ತು ವ್ಯಾಪ್ತಿ ಕಡಿಮೆ, ಆದರೆ ಇವುಗಳ ಲಕ್ಷಣದಲ್ಲಿ ಸಾಮ್ಯವಿದೆ. ಬಿಜೆಪಿಯ ಲಾಲ್ ಕೃಷ್ಣ ಅದ್ವಾನಿ ನಾಯಕತ್ವದಲ್ಲಿ ೧೯೯೨ರಲ್ಲಿ ಅಯೋಧ್ಯೆಯ ಬಾಬರಿ ಮಸೀದಿಯನ್ನು ನೆಲಸಮಗೊಳಿಸಿದ್ದು ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ಭಾರತದಲ್ಲಿ ಜರುಗಿದ ಮೊಟ್ಟಮೊದಲ, ರಾಜಕೀಯ ಉದ್ದೇಶ ಹೊಂದಿದ್ದ ಭಯೋತ್ಪಾದಕ ಕೃತ್ಯ ಎಂದರೆ ತಪ್ಪಾಗಲಾರದು.

ನಮ್ಮ ನೆರೆಯ ರಾಷ್ಟ್ರ ಮ್ಯಾನ್‌ಮಾರ್‌ನಲ್ಲಿ ಸರ್ಕಾರದ ನೆರವಿನಿಂದಲೇ ಬೌದ್ಧರು ಮುಸ್ಲಿಮರನ್ನು ಕೊಂದದ್ದೂ ಭಯೋತ್ಪಾದಕ ಕೃತ್ಯವೇ. ಶ್ರೀಲಂಕಾದಲ್ಲಿ ಆಡಳಿತಾರೂಢ ಸರ್ಕಾರವೇ ಎಲ್.ಟಿ.ಟಿ.ಯನ್ನು ಸದೆಬಡಿಯುವುದಕ್ಕಾಗಿ ತಮಿಳರ ಮೇಲೆ ಎಸಗಿದ ಹಿಂಸಾತ್ಮಕ ಕೃತ್ಯಗಳನ್ನು ಏನೆಂದು ಕರೆಯಬೇಕು ?

ಭಾರತೀಯರಾದ ನಮಗೆ ಭಯೋತ್ಪಾದನೆಯ ಅನುಭವ ಚೆನ್ನಾಗಿಯೇ ಇದೆ. ಭಾರತದ ಪಾರ್ಲಿಮೆಂಟಿನ ಮೇಲೆ, ಮುಂಬಯಿ ಸರಣಿ ಬಾಂಬು ಪ್ರಕರಣದಲ್ಲಿ,




*ಚಾರ್ಲಿ ಹೆಬ್ಡೊ ಪ್ಯಾರಿಸ್‌ನಲ್ಲಿ*

ಹಾಗೆಯೇ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ, ಚರ್ಚ್ ಸ್ಟ್ರೀಟ್ ಮುಂತಾದ ಕಡೆ ಬಾಂಬ್ ಸ್ಫೋಟಗಳಲ್ಲಿ ಜರುಗಿದ ಉಗ್ರರ ದಾಳಿಯಲ್ಲಿ ಸಾವು–ನೋವುಗಳು ಸಂಭವಿಸಿವೆ.

ಕಳೆದ ಒಂದೆರಡು ವರ್ಷಗಳಿಂದ ಬ್ರಸೆಲ್ಸ್, ಆಟವಾ, ಪ್ಯಾರಿಸ್‌ಗಳಂತಹ ನಗರಗಳಲ್ಲಿ ಜರುಗಿರುವ ಭಯೋತ್ಪಾದಕ ಕೃತ್ಯಗಳು ನೂರಾರು ಜನರ ಜೀವಗಳನ್ನು ಬಲಿ ತೆಗೆದುಕೊಂಡಿವೆ. ಚಾರ್ಲಿ ಹೆಬ್ಡೊ ಪ್ರಕರಣವನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು. ವಿಮಾನ ಮತ್ತು ಬಾಂಬು ದಾಳಿ ಎಲ್ಲವೂ ಇಡೀ ಮುಸ್ಲಿಮರ ವಿರುದ್ಧ ದ್ವೇಷದ ಭಾವನೆಗಳನ್ನು ಹುಟ್ಟುಹಾಕಲು ಕಾರಣವಾಗುವುದು ಸಹಜವೇ. ಅಂತಹ ಭಾವನೆಗಳಿಂದ ತಮ್ಮ ಬೇಳೆ ಬೇಯಿಸಿಕೊಳ್ಳಲು ಪಾಶ್ಚಿಮಾತ್ಯ ರಾಷ್ಟ್ರಗಳೂ ಇನ್ನಿಲ್ಲದ ತರಾತುರಿಯಲ್ಲಿವೆ. ಅದೇನೇ ಇರಲಿ, ಈ ಇಡೀ ಸಮಸ್ಯೆಯನ್ನು ಯಾವುದೇ ಪೂರ್ವಗ್ರಹವಿಲ್ಲದೆ ವಸ್ತುನಿಷ್ಠವಾಗಿ ವಿಶ್ಲೇಷಿಸುವ ಅಗತ್ಯವಿದೆ.

ಪ್ರಜಾಪ್ರಭುತ್ವದ ಸೋಗಿನಲ್ಲಿ ಪ್ರಾಯೋಜಿಸುವ ಹಿಂಸೆಯನ್ನು ಭಯೋತ್ಪಾದನೆ ಎಂದು ಪರಿಗಣಿಸದಿರುವುದು ಆಧುನಿಕತೆಯ ಅತ್ಯಂತ ಹೇಯ ದುರಂತ. ಆದ್ದರಿಂದ ತಮ್ಮ ತಥಾಕಥಿತ ಉದಾರವಾದಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪೋಷಿಸಿಕೊಳ್ಳುವ ದಿಶೆಯಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳು ಏನೆಲ್ಲ ಹಿಂಸಾತ್ಮಕ ಕೃತ್ಯಗಳಲ್ಲಿ ತೊಡಗಿದರೂ ಎಲ್ಲಿಯೂ ಅವುಗಳ ವಿರುದ್ಧ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗುವುದಿಲ್ಲ ಅಥವಾ ಅಂತಹ ಪ್ರಭುತ್ವಗಳು ತಮ್ಮ ನೀತಿಗಳಲ್ಲಿ ಬದಲಾವಣೆ ತರಬೇಕು ಎಂಬಂತಹ ಒತ್ತಡಗಳು ಬರುವುದೇ ಇಲ್ಲ. ಉದಾಹರಣೆಗೆ, ಒಸಾಮಾ ಬಿನ್ ಲಾಡೆನ್‌ಅನ್ನು ಮೊದಲು ಪೋಷಿಸಿದ್ದು, ನಂತರ ಆಫ್ಘಾನಿಸ್ತಾನದ ಮೇಲೆ ಆಕ್ರಮಣ ನಡೆಸಿದ್ದು ಅಮೆರಿಕ. ೨೦೦೩–೨೦೧೧ರ ಅವಧಿಯಲ್ಲಿ ಅಮೆರಿಕದ ನಾಯಕತ್ವ ಇರಾಕ್ ಮೇಲೆ ಶಸ್ತ್ರಸಜ್ಜಿತ ಆಕ್ರಮಣ ನಡೆಸಿದ್ದು, ಎಲ್ಲರಿಗೂ ಇವೆಲ್ಲವೂ ತಿಳಿದ ಸಂಗತಿಯೇ. ಆ ಸಂದರ್ಭದಲ್ಲಿ ಇರಾಕ್‌ನ ಸುಮಾರು ಐದು ಲಕ್ಷ ಜನರ ಬರ್ಬರ ಹತ್ಯೆಯಾಯಿತು. ಕಾರಣ ನ್ಯೂಯಾರ್ಕ್‌ನ ಅವಳಿ ಗೋಪುರಗಳ ಮೇಲೆ ಬಾಂಬು ದಾಳಿ ನಡೆಸಿದ್ದು ಇರಾಕ್ ಎಂಬ ಆರೋಪ. ಪ್ಯಾರಿಸ್‌ನಲ್ಲಿ ಸಂಭವಿಸಿದ ದುರ್ಘಟನೆಯ ಹಿನ್ನೆಲೆಯಲ್ಲಿ ಇಂದು ಇಡೀ ಪಾಶ್ಚಿಮಾತ್ಯ ಲೋಕ ಹತ್ತಿ ಉರಿಯುತ್ತಿದೆ. ಇದೇ ಜನರು ತಮ್ಮ ಸರ್ಕಾರಗಳು ಇತರೆಡೆ ವಿಧ್ವಂಸಕಕಾರಿ ಆಕ್ರಮಣಗಳನ್ನು ಎಸಗಿದಾಗ ಏಕೆ ಸಿಡಿದೇಳುವುದಿಲ್ಲ? ಮಾನವೀಯ ದೃಷ್ಟಿಯಿಂದಲಾದರೂ ಏಕೆ ಪ್ರತಿಭಟಿಸುವುದಿಲ್ಲ? ಕಳೆದ ೨–೩ ವರ್ಷಗಳಲ್ಲಿ ಮಧ್ಯಪ್ರಾಚ್ಯದ ಕೆಲವು ದೇಶಗಳಲ್ಲಿ ಮುಗ್ಧ ಮಹಿಳೆಯರೂ, ಪುಟ್ಟ ಮಕ್ಕಳೂ ಸೇರಿದಂತೆ ಸಾವಿರಾರು ಜನರು ಅಮೆರಿಕದ ಇತರ ನ್ಯಾಟೋ ರಾಷ್ಟ್ರಗಳ ಜೆಟ್ ವಿಮಾನಗಳು, ಡ್ರೋನ್‌ಗಳು ಉದುರಿಸುವ ಬಾಂಬು ದಾಳಿಗೆ ಗುರಿಯಾಗಿ ಸತ್ತಿದ್ದಾರೆ, ಕೋಟಿಗಟ್ಟಲೆ ಮೊತ್ತದ ಆಸ್ತಿಪಾಸ್ತಿಗಳು ಸರ್ವನಾಶಗೊಂಡಿವೆ. ಈ ಕುರಿತು ಅಮೆರಿಕಾದಲ್ಲಾಗಲಿ ಯೂರೋಪಿನ ಯಾವುದೇ ದೇಶದಲ್ಲಾಗಲಿ ಜನರಿಂದ ಯಾವುದೇ ವಿರೋಧ ವ್ಯಕ್ತವಾಗದಿರುವುದರಿಂದ ಅಲ್ಲಿನ ಜನರಿಗೆ ಇಂತಹ ಕೃತ್ಯಗಳ ಬಗ್ಗೆ ಒಪ್ಪಿಗೆ ಇದೆ ಎಂದೇ ಭಾವಿಸಬೇಕಾಗುತ್ತದೆ, ಅಲ್ಲವೇ? ಆ ಜನರ ದಿವ್ಯ ಮೌನವನ್ನು ಏನೆಂದು ಅರ್ಥೈಸಬೇಕು? ಅಲ್ಲಿನ ಜನರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ ಎಂದಾದರೆ ತಮ್ಮ ಸರ್ಕಾರದ ಇಂತಹ ಮಾನವ ವಿರೋಧಿ ನಡೆಗಳ ವಿರುದ್ಧ ಏಕೆ ಧ್ವನಿ ಎತ್ತುವುದಿಲ್ಲ? ಅಥವಾ ಹಾಗೊಮ್ಮೆ ಪ್ರತಿಭಟಿಸಿದರೆ ಉಗ್ರಶಿಕ್ಷೆ ಕಾದಿದೆ ಎಂಬ ಭಯವೇ? ಎಲ್ಲೋ ಒಮ್ಮೊಮ್ಮೆ, ಅಪರೂಪಕ್ಕೆ ನೋಮ್ ಚೋಮ್‌ಸ್ಕಿಯಂಥವರು ನಿರ್ಭಿಡೆಯಿಂದ ಅಮೆರಿಕನ್ ಸಾಮ್ರಾಜ್ಯಶಾಹಿಯ ನಿಜ ಬಣ್ಣವನ್ನು ಬಯಲುಗೊಳಿಸುತ್ತಿರುವುದು ಪ್ರಶಂಸನೀಯ.

ವಿಪರ್ಯಾಸವೆಂದರೆ, ಅಮೆರಿಕ ಮತ್ತು ಯೂರೋಪಿನ ಕೆಲವು ರಾಷ್ಟ್ರಗಳು 'ಆಧುನಿಕತೆ'ಯ ಹೆಸರಿನಲ್ಲಿ ಇಸ್ಲಾಂ ಧರ್ಮದಲ್ಲಿ ಸಾಕಷ್ಟು ಸುಧಾರಣೆಗಳಾಗಬೇಕಾದ ಅವಶ್ಯಕತೆ ಇದೆ ಎಂದು ಕರೆ ನೀಡುತ್ತ ತಮ್ಮ ದುರಹಂಕಾರದ ಮನೋಭಾವವನ್ನು ಪ್ರದರ್ಶಿಸುತ್ತಿವೆ. ಇದೊಂದು ನಾಟಕ, ಅಷ್ಟೆ. ಇದಕ್ಕೆ ಮೂಲ ಕಾರಣ ಅವರ ನೈಜ ಹಿತಾಸಕ್ತಿಗಳು ಇರುವುದು ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಹೇರಳವಾಗಿ ಲಭ್ಯವಿರುವ ತೈಲದಲ್ಲಿ. ಅದಕ್ಕಾಗಿ ಆ ರಾಷ್ಟ್ರಗಳು ಮಧ್ಯಪ್ರಾಚ್ಯದ ಅತೀ ಸಂಪ್ರದಾಯವಾದಿ ಹಾಗೂ ಮೂಲಭೂತವಾದಿ ಆಡಳಿತೆಗಳನ್ನು, ರಾಜಶಾಹಿಗಳನ್ನು ಹಾಗೂ ಸರ್ವಾಧಿಕಾರಿಗಳನ್ನು ಪೋಷಿಸಿಕೊಂಡು ಬರುತ್ತಲೇ ಇವೆ. ಇದಕ್ಕೆ ಉತ್ತಮ ಉದಾಹರಣೆ ಸೌದಿ ಅರೇಬಿಯ. ಪೆಟ್ರೋಡಾಲರುಗಳಿಂದ ಕೊಬ್ಬಿಹೋಗಿರುವ ಇಸ್ಲಾಂ ಧರ್ಮದವರೇ ಆದ ವಹಾಬ್‌ವಾದ ಪಂಥದವರು, ತಮ್ಮ ತೈಲದಾಹಕ್ಕಾಗಿ ಪಾಶ್ಚಿಮಾತ್ಯ ರಾಷ್ಟ್ರಗಳು ಇಸ್ಲಾಂ ಧರ್ಮದಲ್ಲೇ ಇರುವ ಸಮನ್ವಯವಾದಿ ಮತ್ತು ಸೌಮ್ಯವಾದಿ ಸಮುದಾಯದವರನ್ನು ನಿರ್ನಾಮಗೊಳಿಸಲು ಅಲ್ಲಿನ ಆಡಳಿತ ವರ್ಗಗಳಿಗೆ ಎಲ್ಲ ನೆರವನ್ನೂ ನೀಡುತ್ತವೆ. ಮಧ್ಯಪ್ರಾಚ್ಯದ ರಾಷ್ಟ್ರಗಳಲ್ಲಿ ವಸಾಹತುಶಾಹಿ ಕೊನೆಗೊಂಡ ನಂತರದ ಅವಧಿಯಲ್ಲಿ ಧರ್ಮನಿರಪೇಕ್ಷ ಮತ್ತು ಪ್ರಜಾಪ್ರಭುತ್ವವಾದಿ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರುವ ಪ್ರಯತ್ನಗಳು ಜರುಗಿವೆ, ಇಲ್ಲವೆಂದಲ್ಲ. ಆದರೆ ಅಂತಹ ಪ್ರಯತ್ನಗಳು ಯಾವುವೂ ಯಶಸ್ವಿಯಾಗದಂತೆ ನೋಡಿಕೊಳ್ಳುತ್ತವೆ ಪಾಶ್ಚಿಮಾತ್ಯ ರಾಷ್ಟ್ರಗಳು. ಉದಾಹರಣೆಗೆ, ಉಗ್ರರ, ಭಯೋತ್ಪಾದಕರ ತಾಣವಾಗಿರುವ ಸಿರಿಯಾ ಆ ಪ್ರದೇಶದಲ್ಲಿ ಮೊಟ್ಟಮೊದಲ ಬಾರಿಗೆ ಪ್ರಜಾಪ್ರಭುತ್ವವಾದಿ ಸರ್ಕಾರವೊಂದನ್ನು ಅಸ್ತಿತ್ವಕ್ಕೆ ತಂದ ರಾಷ್ಟ್ರ. ಆದರೆ ದಿಢೀರ್ ಮಿಲಿಟರಿ ಕಾರ್ಯಾಚರಣೆಯಿಂದಾಗಿ ಅಲ್ಲಿನ ಪ್ರಜಾಪ್ರಭುತ್ವ ಆಡಳಿತೆ ಕೊನೆಗೊಂಡಿದ್ದು ಈಗ ಇತಿಹಾಸ. ಹಾಗಾದದ್ದು ಅಮೆರಿಕಾದ ಕುಮ್ಮಕ್ಕಿನಿಂದಲೇ ಎಂಬುದು ಗುಟ್ಟಿನ ವಿಚಾರವೇನಲ್ಲ. ಇಂತಹುದೇ ದುಷ್ಕೃತ್ಯ ಇರಾನ್‌ನಲ್ಲಿಯೂ ಜರುಗಿತು (೧೯೫೩). ಇವೆಲ್ಲಕ್ಕೂ ಮೂಲ ಕಾರಣ ಆ ರಾಷ್ಟ್ರಗಳಲ್ಲಿ ಲಭ್ಯವಿರುವ ತೈಲದ ಸಂಪನ್ಮೂಲಗಳು.

ಚಾರ್ಲಿ ಹೆಬ್ಡೊ ಪ್ರಕರಣವಾದ ನಂತರ ಇಡೀ ಪಾಶ್ಚಾತ್ಯ ದೇಶಗಳು ಸಾಕಷ್ಟು ಅಬ್ಬರ ಮಾಡಿದುವು. ಪ್ರದರ್ಶನಗಳನ್ನು ನಡೆಸಿದುವು. ಆದರೆ ಬೋಕೋ ಹರಾಮ್ ಪ್ರಕರಣದಿಂದಾಗಿ ೨೦೦೦ ಜನರು ಹತ್ಯೆಯಾದದ್ದು ಪಾಶ್ಚಿಮಾತ್ಯ ಮಾಧ್ಯಮಗಳಲ್ಲಿ ಸುದ್ದಿಯೇ ಆಗಲಿಲ್ಲ. ಪಾಕಿಸ್ತಾನದ ಕರಾಚಿಯ ಸೈನಿಕ ಶಾಲೆಯಲ್ಲಿ ಮಕ್ಕಳ ಹತ್ಯೆ, ಅಮೆರಿಕದ ಡ್ರೋನ್ ದಾಳಿಯಿಂದಾಗಿ ೬೯ ಪುಟ್ಟ ಮಕ್ಕಳು ಅಸುನೀಗಿದ್ದು ಕೂಡ ಸುದ್ದಿಯಾಗಲಿಲ್ಲ. ಅಂತಹ ಕಾಲ ಬರಲಿದೆ ಎಂದು ಆಶಿಸೋಣವೇ? ಇಂತಹ ಘಟನೆಗಳ ಕುರಿತ ನಿಷ್ಕ್ರಿಯತೆ, ಮೌನ ಕೊನೆಗೊಂಡು ಸೌಹಾರ್ದತೆ–ಸಹಕಾರದ ಮನೋಭಾವವನ್ನು ಹುಟ್ಟುಹಾಕಲು ಸಂಬಂಧಪಟ್ಟ ರಾಷ್ಟ್ರಗಳು ಮುಂದೆ ಬರುವ ಅಗತ್ಯವಿದೆ. ಇಂದು ಜನರ ಪಾಲಿಗಿರುವ ಸ್ವಾತಂತ್ರ್ಯವನ್ನು ಅಥವಾ ಪಾಶ್ಚಿಮಾತ್ಯ ರಾಷ್ಟ್ರಗಳು ಆ ದಿಶೆಯಲ್ಲಿ ನೀಡಿರುವ ಕೊಡುಗೆಯನ್ನು ಅಲ್ಲಗಳೆಯಲಾಗದು. ಬದಲಿಗೆ ಆ ರಾಷ್ಟ್ರಗಳು ಅನುಸರಿಸುತ್ತಿರುವ ನೀತಿಗಳಲ್ಲಿರುವ ಹಿಂಸೆ, ಆಕ್ರಮಣ, ಅಸಂಬದ್ಧತೆ ಮತ್ತು ವ್ಯಂಗ್ಯಗಳು ಹಾಗೂ ಇಚ್ಛಾನುಸಾರ ಆಕ್ರಮಣ ನಡೆಸಿ ವಿಜೃಂಭಿಸುತ್ತ ಭಯೋತ್ಪಾದನೆಯ ವಿವಿಧ ಮುಖಗಳನ್ನು ಮರೆಮಾಚುವುದನ್ನು ಬಯಲಿಗೆಳೆಯುವುದಕ್ಕಾಗಿ. ಈ ಕ್ರಿಯೆ ನಿರಂತರವಾಗಿ ಎಲ್ಲೆಡೆ ನಡೆಯುತ್ತಿರಬೇಕು, ಗುರಿ ಮುಟ್ಟುವ ತನಕ. ಇಲ್ಲದಿದ್ದರೆ ಪ್ರಜಾಪ್ರಭುತ್ವ, ಸಮಾನತೆ ಎಂಬ ಮೌಲ್ಯಗಳೂ ಬರಿ ಕ್ಲೀಷೆಯಾಗಿ ಉಳಿದುಬಿಡುವ ಅಪಾಯವಿದೆಯೆಂಬ ಎಚ್ಚರ ಅಗತ್ಯ.

**ಎಸ್. ಸುರೇಂದ್ರ**
ನಂ. ೨೪, ೧ನೇ ಅಡ್ಡರಸ್ತೆ
ಕೆನರಾ ಬ್ಯಾಂಕ್ ಕಾಲನಿ, ೩ನೇ ಬ್ಲಾಕ್, ಜಯನಗರ ಪೂರ್ವ
ಬೆಂಗಳೂರು – ೫೬೦ ೦೧೧

ನಾನು ಓದಿದ ಪುಸ್ತಕ

## ಡಾ॥ ಎಚ್. ಎಸ್. ಗೋಪಾಲ ರಾವ್




ಕೃತಿ : ನೀಲಗಿರಿ : ಸಾಮಾಜಿಕ ಸಾಂಸ್ಕೃತಿಕ ಕಣ್ಣೋಟ
ಲೇಖಕರು : **ಪರಂಜ್ಯೋತಿ**
ಪುಟಗಳು : ೨೪೪, ಬೆಲೆ : ರೂ. ೭೫೦/-
ಪ್ರಕಾಶನ :
**ಇಂಚರ ಪ್ರಕಾಶನ**, ನಂ.೧೦, ೧ನೇ ಮಹಡಿ
೨೧ ಬಿ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು-೫೬೦ ೦೪೭

ನೀಲಗಿರಿ ಎಂದೊಡನೆ ಸಾಮಾನ್ಯವಾಗಿ ಹೆಚ್ಚು ಜನರಿಗೆ, ಅದರಲ್ಲೂ ಅರವತ್ತು ವರ್ಷ ದಾಟಿದವರಿಗೆ ನೆನಪಾಗುವುದು ನೀಲಗಿರಿ ತೈಲ. ಆ ತೈಲ ತಯಾರಾಗುವುದು ಯೂಕಲಿಪ್ಟಸ್ ಮರಗಳ ಎಲೆಗಳಿಂದ. ಆ ಮರಗಳು ಭಾರತದಲ್ಲಿ ಮೊದಲಿಗೆ ಬೆಳೆದದ್ದು ನೀಲಗಿರಿ ಬೆಟ್ಟಗಳ ಮೇಲೆ; ಆದ್ದರಿಂದ ಅಲ್ಲಿ ಉತ್ಪಾದನೆ ಆಗುತ್ತಿದ್ದ ನೋವು ನಿವಾರಕ, ವಿಶೇಷವಾಗಿ ತಲೆನೋವು, ನೆಗಡಿ ಇತ್ಯಾದಿ ಶೀತಸಂಬಂಧಿ ಕಾಯಿಲೆಗಳ ಶಮನಕ್ಕಾಗಿ ಬಳಸುತ್ತಿದ್ದ ತೈಲಕ್ಕೆ ನೀಲಗಿರಿ ತೈಲ ಎಂಬ ಹೆಸರೇ ಇತ್ತು. ಈಗಲೂ ಸಾಮಾನ್ಯವಾಗಿ ಉದಕಮಂಡಲ, ಎಂದರೆ ಊಟಿಗೆ ಹೋದವರು ನೀಲಗಿರಿ ತೈಲವನ್ನು ತರುತ್ತಾರೆ. ಈಗ ನೀಲಗಿರಿ ತೈಲದ ಬಳಕೆ ಕಡಿಮೆಯಾಗಿದ್ದರೂ, ನನ್ನ ಪೀಳಿಗೆಯವರಿಗೆ ಅದು ಅಪರಿಚಿತವಲ್ಲ. ನಾನು ಬಾಲ್ಯದಲ್ಲಿ ಕೇಳಿ ತಿಳಿದಿದ್ದ ನೀಲಗಿರಿ ಮತ್ತು ಊಟಿಯ ಬಗ್ಗೆ ಹೆಚ್ಚಿನ ಕುತೂಹಲವಿತ್ತು. ಆ ಸ್ಥಳಗಳ ಬಗ್ಗೆ ಯಾರು ಏನು ಹೇಳಿದರೂ ಆಸಕ್ತಿಯಿಂದ ಕೇಳುತ್ತಿದ್ದೆ; ನನ್ನ ಬಾಲ್ಯದ ಸಂದರ್ಭದಲ್ಲಿ ನಮ್ಮ ಹಿರಿಯ ಬಂಧು ಎನ್. ಲಕ್ಷ್ಮೀನಾರಾಯಣರಾಯರು, ಅಲ್ಲಿನ ಶಾಸನಶಾಸ್ತ್ರ ಇಲಾಖೆಯ ಕಚೇರಿಯಲ್ಲಿ ಮುಖ್ಯ ಶಾಸನತಜ್ಞರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅವರನ್ನು ಆಗಾಗ ಬೆಂಗಳೂರಿನಲ್ಲಿದ್ದ ನಮ್ಮ ಬಂಧುಗಳ ಮನೆಯಲ್ಲಿ ಕಾಣುವ ಅವಕಾಶ ಲಭಿಸುತ್ತಿತ್ತು. ನಮ್ಮ ಬಂಧು ವರ್ಗದಲ್ಲಿ ಅತಿಯಾದ ಶಿಸ್ತಿಗೆ ಹೆಸರಾಗಿದ್ದ ಅವರು ದೊಡ್ಡ ವಿದ್ವಾಂಸರೆಂದು ತಿಳಿದಿತ್ತಷ್ಟೇ ಹೊರತು, ಅವರ ಕಾರ್ಯಕ್ಷೇತ್ರ ಯಾವುದು ಎಂದು ಆಗ ನನಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ. ಮುಂದೆ ನಾನು ಸೃಜನಶೀಲ ಸಾಹಿತ್ಯಕ್ಷೇತ್ರದಿಂದ ಇತಿಹಾಸಶಾಸ್ತ್ರದ ಮೂಲಕ ಶಾಸನಶಾಸ್ತ್ರಕ್ಕೆ ಹೊರಳಿದ ನಂತರ, ಅವರ ಪರಿಣತಿಯ ಕ್ಷೇತ್ರದ ಬಗ್ಗೆ ಸ್ಪಷ್ಟವಾಗಿ ತಿಳಿದೆ. ಶಾಸನಶಾಸ್ತ್ರದ ವಿದ್ಯಾರ್ಥಿಯಾಗಿ ಅವರನ್ನು ಕುರಿತು ತಿಳಿಯಲು ಮತ್ತಷ್ಟು ಅವಕಾಶಗಳು ಸಿಕ್ಕಿದವು. ಆಗ ವಯಸ್ಸಾಗಿದ್ದರೂ, ಅವರು ಇನ್ನೂ ಕ್ರಿಯಾಶೀಲರಾಗಿದ್ದರು. ನಾನು ಪತ್ತೆ ಮಾಡಿದ ಒಂದು ಅಪ್ರಕಟಿತ ಶಾಸನವನ್ನು ಅವರೇ ಓದಿ ಪ್ರಕಟಿಸಿದರು. ಆ ಶಾಸನ ನನ್ನ ಶೋಧ ಎಂದೂ ದಾಖಲಿಸಿದ್ದರು. ನಾನು ಶಾಸನಶಾಸ್ತ್ರ ಕ್ಷೇತ್ರದಲ್ಲಿ ತೊಡಗಿಕೊಂಡ ನಂತರ ಊಟಿಯಲ್ಲಿದ್ದ ಶಾಸನಶಾಸ್ತ್ರ ಇಲಾಖೆಯ ಕಚೇರಿ ಮತ್ತು ಆ ಪರಿಸರದ ಬಗ್ಗೆ ಕುತೂಹಲ ಹೆಚ್ಚಿತು. ಆ ಬಗ್ಗೆ ಹೆಚ್ಚು ತಿಳಿಯುವ ಮನಸ್ಸಾಯಿತು. ಲಕ್ಷ್ಮೀನಾರಾಯಣರಾಯರ ಕೆಲವು ಟಿಪ್ಪಣಿಗಳು, ಅವರ ಲೇಖನಗಳ ಮುದ್ರಿತ ಆಫ್‌ಪ್ರಿಂಟ್‌ಗಳು ದೊರಕಿದಾಗ, ಅವುಗಳ ನಡುವೆ ಇದ್ದ ಒಂದು ಆಫ್‌ಪ್ರಿಂಟ್ ನೀಲಗಿರಿಯ ಬಗ್ಗೆ ನನ್ನ ಕುತೂಹಲವನ್ನು ಸ್ವಲ್ಪಮಟ್ಟಿಗೆ ತಣಿಸಿತಾದರೂ, ಆ ಅಧ್ಯಯನ ಇನ್ನೂ ಮುಂದುವರಿಯಬೇಕಾಗಿದೆ ಎನಿಸಿತು. ನನ್ನ ವೃತ್ತಿ ಜೀವನದ ನಡುವಿನ ಬಿಡುವು ಮತ್ತು ಸಂಶೋಧನೆಗೆ ಹಾಕಿಕೊಂಡಿದ್ದ ಪ್ರಾದೇಶಿಕ ಮಿತಿಯು ನೀಲಗಿರಿಯ ಬಗ್ಗೆ ನಾನೇ ಕಾರ್ಯಪ್ರವೃತ್ತನಾಗಲು ಅವಕಾಶ ನೀಡಲಿಲ್ಲ. ಯಾರಾದರೂ, ಅದೂ ನೀಲಗಿರಿಯನ್ನು ಹತ್ತಿರದಿಂದ ತಿಳಿದವರು ಅಥವಾ ಸ್ಥಳೀಯರು ಯಾರಾದರೂ ಈ ಕೆಲಸಕ್ಕೆ ಕೈಹಾಕಿದರೆ ಒಳಿತು ಎಂದು ಆಲೋಚಿಸುತ್ತಿದ್ದಾಗ, ನಾನು ಅಂತಹ ಒಬ್ಬ ವ್ಯಕ್ತಿಯನ್ನು ಗುರುತಿಸಿದ್ದು ಕೆ. ಪಿ. ಸ್ವಾಮಿ ಅರ್ಥಾತ್ ಪರಂಜ್ಯೋತಿ ಉರುಫ್ ನೀಲಾಂಬರಿ ಅವರಲ್ಲಿ. ನೋಡಲು ಸರಳ ಎನಿಸಿದರೂ, ಅರ್ಥವಾಗುತ್ತಾ ಹೋದಂತೆ ಬಹು ತೀಕ್ಷ್ಣ ಮನಸ್ಸಿನ ಮತ್ತು ಸೂಕ್ಷ್ಮ ಸಂವೇದನೆಯ ಸ್ವಾಮಿ ಅವರಲ್ಲಿ ಸದಾ ಒಬ್ಬ ಬರಹಗಾರ

# ಸಂಶೋಧನೆಗೊಂದು ಮಾದರಿ





**ಮೂವರು ಸಹೋದರಿಯರು – ಹೊನ್ನೆಮಂದೆ**

ಜಾಗೃತನಾಗಿರುತ್ತಾನೆ ಮತ್ತು ತಮ್ಮ ಬದುಕಿನ ಆರಂಭ ಕಾಲದ ಬಹು ಮುಖ್ಯ ಘಟ್ಟದಲ್ಲಿ ಸ್ವಾಮಿ ಅವರು ನೀಲಗಿರಿಯಲ್ಲೇ ಇದ್ದುದರಿಂದ, ಅವರಿಗೆ ಮಾಹಿತಿ ಸಂಗ್ರಹಣೆ ಸುಲಭ ಎಂಬ ಕಾರಣದಿಂದ ನೀಲಗಿರಿಯನ್ನು ಕುರಿತು ಅವರೇ ಬರೆದರೆ ಒಳಿತು ಎನಿಸಿತು. ಅವಕಾಶ ದೊರೆತಾಗಲೆಲ್ಲಾ ಅದನ್ನು ಅವರಿಗೆ ಸೂಚ್ಯವಾಗಿ ಸೂಚಿಸುತ್ತಿದ್ದೆ.

ಮೊದಲಿಗೆ ನನಗಿದ್ದಂತೆ, ಅವರಿಗೂ ಇದ್ದ ಒಂದು ಭಾವವೆಂದರೆ, 'ನಾನು ಅಕಾದೆಮಿಕ್ ಹಿನ್ನೆಲೆಯಿಂದ ಬಂದವನಲ್ಲ' ಎಂದು. ಅಕಾದೆಮಿಕ್ ಹಿನ್ನೆಲೆಯು ಒಂದು ಶಿಸ್ತನ್ನು ಬೆಳೆಸುವುದಕ್ಕೆ ಸಹಕಾರಿ ಎನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಸಂಶೋಧನೆಗೆ ಶಿಸ್ತಿನ ಜೊತೆಗೆ ವ್ಯುತ್ಪತ್ತಿ ಜ್ಞಾನವೂ ಮುಖ್ಯ ಮತ್ತು ಅವಶ್ಯಕವಾದಾಗ ಕ್ಷೇತ್ರಕಾರ್ಯದ ಶ್ರಮವೂ ಮುಖ್ಯ. ಅಕಾದೆಮಿಕ್ ವಲಯದಲ್ಲಿ ಸಂಶೋಧನೆ ಎನ್ನುವುದು ಒಂದು ಮುಖ್ಯ ಭಾಗ. ಅಲ್ಲೂ ಎಲ್ಲ ಅಕಾದೆಮಿಷಿಯನ್‌ಗಳೂ ಸಂಶೋಧನೆ ಮಾಡಿಯೇ ಮಾಡುತ್ತಾರೆಂದು ನಿರೀಕ್ಷಿಸುವಂತಿಲ್ಲ. ಕೆಲವರು ಮಾತ್ರ ಸಂಶೋಧನೆ ಮಾಡುತ್ತಾರೆ ಮತ್ತು ಮಾಡಿಸುತ್ತಾರೆ. ಅಕಾದೆಮಿಕ್ ವಲಯದ ಕೆಲವು ಪ್ರಾಧ್ಯಾಪಕರ ಪ್ರಕಾರ, ಪ್ರವೃತ್ತಿಪರ ಸಂಶೋಧಕರ ಸಂಶೋಧನ ಫಲಿತಗಳು ವಿಶ್ವಾಸಾರ್ಹವಲ್ಲ ಮತ್ತು ಮುಂದಿನ ಸಂಶೋಧಕರು, ವಿಶೇಷವಾಗಿ ಅಕಾದೆಮಿಕ್ ವಲಯದ ಸಂಶೋಧಕರು ಗಮನಿಸಬೇಕಾಗಿಲ್ಲ. ಅಕಾದೆಮಿಕ್ ವಲಯದಲ್ಲಿಲ್ಲದೆಯೂ ಸಂಶೋಧನೆ ಮಾಡಿರುವ ವಿದ್ವಾಂಸರು ಇದ್ದಾರೆ. ಅದು ಅವರ ಪ್ರವೃತ್ತಿಯಲ್ಲ; ಆಸಕ್ತಿ. ಅಂತಹವರ ಪೈಕಿ ಕೆ. ಪಿ. ಸ್ವಾಮಿ ಅವರೂ ಒಬ್ಬರು. ಅವರ 'ಮಂಜಿನೆಡೆಯ ಚಿತ್ರಗಳು' ಎಂಬ ಹೆಸರಿನ ಅನುಭವ ಕಥನದಲ್ಲೇ ಅದರ ಸುಳಿವಿದೆ. ತನ್ನ ಪರಿಸರ ಮತ್ತು ಸಹವಾಸಿಗಳ ಬಗ್ಗೆ ಇರುವ ಕುತೂಹಲ ಮತ್ತು ಪ್ರೀತಿಗಳೇ ಇಂತಹ ಕೆಲಸಗಳಿಗೆ ಅಗತ್ಯವಾದ ಶಕ್ತಿಯನ್ನು ಕೊಡುತ್ತವೆ. ಈ ಕೃತಿಯ ಮುಖಪುಟವನ್ನು ನೋಡುತ್ತಿದ್ದಂತೆಯೇ ನನಗೆ ಖುಷಿಯಾಯಿತು. ಅಲ್ಲಿರುವುದು ನೀಲಗಿರಿ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.

ಇದೊಂದು ಸಮಾಜಶಾಸ್ತ್ರೀಯ ಅಧ್ಯಯನ. ಈಗ ಆಧುನೀಕರಣ ಗೊಂಡಿದ್ದರೂ, ತಮ್ಮ ಸಾಂಸ್ಕೃತಿಕ ನೆಲೆಗಳ ಜೊತೆಗೆ ಸಂಪರ್ಕವಿರಿಸಿಕೊಂಡಿರುವ ಜನರ ಮತ್ತು ಅವರ ನೆಲೆಗಳ ಪರಿಚಯವನ್ನು ಮಾಡಿಕೊಡುವಲ್ಲಿ ಸ್ವಾಮಿ ಅವರು ಎಲ್ಲಿಯೂ ಕೃಪಣರಾಗಿಲ್ಲ. ವರ್ತಮಾನದಲ್ಲಿ ಇತಿಹಾಸವೂ ತಳಕುಹಾಕಿಕೊಂಡಿರುತ್ತದೆ. ಆ ಬಗ್ಗೆ ಕೃತಿ ಮತ್ತು ಕೃತಿಕಾರರನ್ನು ಕುರಿತು ಬರೆದಿರುವ ಡಾ॥ ಜಿ. ರಾಮಕೃಷ್ಣ (ಜಿ.ಆರ್.) ಅವರ ಬೆನ್ನುಡಿಯ ಮಾತುಗಳು ಸ್ಪಷ್ಟೀಕರಣ ನೀಡುತ್ತವೆ.

ಕೃತಿಯ ಪ್ರಸ್ತಾವನೆಯಲ್ಲಿ ಕೆ. ಪಿ. ಸ್ವಾಮಿ ಅವರು ತಾವು ಕೃತಿರಚನೆಗೆ ತೊಡಗಿಕೊಂಡ ಸಂದರ್ಭ, ಅಭ್ಯಾಸ ಮಾಡಿದ ಗ್ರಂಥಗಳು, ಮಾಡಿದ ಕ್ಷೇತ್ರಕಾರ್ಯ ಇತ್ಯಾದಿ ವಿವರಗಳನ್ನು ಒದಗಿಸಿದ್ದಾರೆ. ಇವು ಇಂತಹ ಕೆಲಸಗಳು ಎಷ್ಟು ಶ್ರಮದಾಯಕ ಎನ್ನುವುದನ್ನು ಸ್ಪಷ್ಟಪಡಿಸುತ್ತವೆ. ವೆರಿಯರ್ ಎಲ್ವಿನ್ನನ ಮಾತುಗಳನ್ನು ನೆನಪು ಮಾಡಿಕೊಳ್ಳುತ್ತಲೇ, **'ನಾನು ಪುಸ್ತಕಕ್ಕಾಗಿ ಮಾಹಿತಿ ಸಂಗ್ರಹಿಸುವಾಗ ಬುಡಕಟ್ಟು ಜನರಲ್ಲೊಬ್ಬನಾಗಿಯೇ ಇದ್ದೆ'** ಎಂದು ಇತಿಹಾಸ ಮತ್ತು ವರ್ತಮಾನಗಳ ಅವಿನಾಭಾವ ಸಂಬಂಧದ ಪರಿಚಯ ಮಾಡಿದ್ದಾರೆ. ಆ ಪರಿಸರದ ಮೂರು ಭಾಷೆಗಳ (ತಮಿಳು, ಮಲೆಯಾಳಂ ಮತ್ತು ಬಡಗು) ಪರಿಚಯ ಇರುವ ಸ್ವಾಮಿ ಅವರಿಗೆ ಜನಸಂಪರ್ಕ ಸಮಸ್ಯೆಯಾಗಿಲ್ಲ. ಸ್ವಾಮಿ ಅವರ ಮಾತುಗಳನ್ನೇ ನೆನಪು ಮಾಡಿಕೊಂಡರೆ, ಅಲ್ಲಿ ಒಂದು ಕಾಲಕ್ಕೆ ಕನ್ನಡಿಗರ ಸಂಖ್ಯೆ ಕಡಿಮೆ ಇರಲಿಲ್ಲ. ಈಗ ಅವರ ಸಂಖ್ಯೆ ಕಡಿಮೆಯಾಗಿದೆ.

ಭಾರತದಲ್ಲಿ ಬುಡಕಟ್ಟು ಜನರ ಪ್ರಮುಖ ನೆಲೆಗಳಲ್ಲಿ ಈಗಲೂ ಉಳಿದಿರುವುದು ಕೆಲವು ಮಾತ್ರ; ಅವುಗಳಲ್ಲಿ ನೀಲಗಿರಿಯೂ ಒಂದು. ಬುಡಕಟ್ಟು ಜನರ ಬದುಕು ಆಧುನಿಕಗೊಂಡರೂ, ಕೆಲವು ಆಚರಣೆಗಳನ್ನು ಇಂದಿಗೂ ಉಳಿಸಿಕೊಂಡಿರುವ ಅಂಶಗಳನ್ನು ಕೆ. ಪಿ. ಸ್ವಾಮಿ ದಾಖಲಿಸಿದ್ದಾರೆ. ಇತಿಹಾಸ ಮತ್ತು ವರ್ತಮಾನಗಳ ಬಿಟ್ಟೂಬಿಡದ ಸಂಬಂಧಕ್ಕೆ ಇವು ಉದಾಹರಣೆಗಳು.

೧೮೮೨ರಲ್ಲೇ ಮದರಾಸು ಪ್ರಾಂತ್ಯದ ಒಂದು ಜಿಲ್ಲೆಯಾಗಿ ರೂಪುಗೊಂಡ ನೀಲಗಿರಿ ಪ್ರದೇಶವು, ಇಂದಿಗೂ ಅದರ ಭಾಗವಾಗಿದೆ. ಭಾಷಾವಾರು ಪ್ರಾಂತ್ಯ ರಚನೆಯ ಕಾಲಕ್ಕೆ ನೀಲಗಿರಿ ಪ್ರದೇಶವನ್ನು ಕನ್ನಡ ಭಾಷಿಕ ಪ್ರದೇಶಗಳ ಜೊತೆಗೆ ಸೇರಿಸಬೇಕೆಂಬ ಒಂದು ಕ್ಷೀಣ ಬೇಡಿಕೆ ಇದ್ದುದನ್ನು ಇತಿಹಾಸ ದಾಖಲಿಸಿದೆ. ಆರು ತಾಲ್ಲೂಕುಗಳನ್ನು ಒಳಗೊಂಡ ನೀಲಗಿರಿ ಜಿಲ್ಲೆಯ ಇತಿಹಾಸವು ಕರ್ನಾಟಕದ ಇತಿಹಾಸದ ಜೊತೆಗೂ ತಳಕುಹಾಕಿಕೊಂಡಿದೆ. ಇಲ್ಲಿನ ಮೂಲನಿವಾಸಿಗಳ ಭಾಷೆಗಳಲ್ಲಿ ಕೆಲವು ಕನ್ನಡ ಭಾಷೆಯ ನೆನಪು ಮಾಡುತ್ತವೆ. ಒಟ್ಟಾರೆ ಇಲ್ಲಿಯ ಮೂಲನಿವಾಸಿಗಳ ಭಾಷೆಗಳು ದ್ರಾವಿಡ ಮೂಲಕ್ಕೆ ಸೇರುತ್ತವೆ ಎಂಬುದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಉದಕಮಂಡಲ ಅಥವಾ ಊಟಿಯು ನೀಲಗಿರಿ ಜಿಲ್ಲೆಯ ಜಿಲ್ಲಾ ಕೇಂದ್ರ. ಊಟಿಯ ಹೆಸರು ಪ್ರವಾಸಪ್ರಿಯರಿಗೆ ಚಿರಪರಿಚಿತ. ಬಯಲುನಾಡಿಗರಿಗೆ 'ನೀಲಗಿರಿ'ಯಾಗಿ

ಕಂಡದ್ದನ್ನು ಬ್ರಿಟಿಷರು ಬ್ಲೂಮೌಂಟನ್ ಎಂದು ಕರೆದರು. ಸ್ಟೋನ್ ಹೌಸ್ ಎಂಬ ಬಂಗಲೆ ಕಟ್ಟಿಸುವುದಕ್ಕಾಗಿ ಜಾನ್ ಸಲ್ಲಿವನ್ ಖರೀದಿಸಿದ 'ಒತ್ತೆಕಲ್‌ಮಂದೆ'ಯು ಮುಂದೆ ದಾಖಲೆಗಳಲ್ಲಿ ಊಟಿ ಎಂದಾಗಿದೆ. ತಮಿಳಿಗರು ಉದಕಮಂಡಲ ಎಂದು ಕರೆದದ್ದೂ ಅದೇ ಊಟಿಯನ್ನು. ಸ್ವಾಮಿ ಅವರ ಪ್ರಕಾರವೇ ಇಲ್ಲಿ ಇನ್ನೂ ಬೆಟ್ಟಗಳ ಜೊತೆಗೆ ಕಾಡುಗಳಿವೆ. ಕಾಡುಗಳಲ್ಲಿ ವನ್ಯಜೀವಿಗಳಿವೆ. ಇಲ್ಲಿನ ಮೂಲ ನಿವಾಸಿಗಳೆಂದರೆ ತೊದವ, ಬಡಗ, ಕೋತ, ಕುರುಂಬ, ಇರುಳ, ಕಾಡುನಾಯಕ, ಬೆಟ್ಟಕುರುಬ, ಮುಳ್ಳುಕುರುಬ ಮತ್ತು ಪನಿಯರು. ಕೃತಿಯ ಮೊದಲ ಅಧ್ಯಾಯವಾದ ಪಕ್ಷಿನೋಟವು ವಾಸ್ತವವಾಗಿ ನೀಲಗಿರಿ ಪ್ರದೇಶದ ಪಕ್ಷಿನೋಟವಾಗಿದೆ. ಅದನ್ನು ಓದಿದವರಿಗೆ ಸಹಜವಾಗಿಯೇ ನೀಲಗಿರಿಯ ಸ್ಥೂಲ ಪರಿಚಯವಾಗುತ್ತದೆ. ಮೊದಲಿನಿಂದ ಈವರೆಗಿನ ನೀಲಗಿರಿಯ ಬೆಳವಣಿಗೆಯನ್ನು ಸ್ವಾಮಿ ಅವರು ಸಂಗ್ರಾಹ್ಯವಾಗಿ ಪರಿಚಯಿಸಿದ್ದಾರೆ. 'ಬಯಲು ನಾಡಿನವರಿಗೆ ನೀಲಗಿರಿ ಸೀಮೆ ದುರ್ಗಮವಾದ ನಿಗೂಢ ಪ್ರದೇಶವಾಗಿತ್ತು. ಆದಿವಾಸಿಗಳಿಗೆ ಹೇಳಿ ಮಾಡಿಸಿದ ತಾಣ. ಕಡಿದಾದ ಬೆಟ್ಟದ ಸಾಲುಗಳು, ದಟ್ಟ ಕಾಡುಗಳು, ಕಾಡುಮೃಗಗಳು, ಕಾಡಿಸುವ ಮಳೆ, ಗಾಳಿ, ಚಳಿ, ಚುರುಕಿಲ್ಲದ ಬಿಸಿಲು, ಸದಾ ಮಂಕು ಕವಿದಂತಿರುವ ವಾತಾವರಣ. ಇವುಗಳ ಬಗ್ಗೆ ತಿಳಿದವರು ನೀಲಗಿರಿಯ ಸಹವಾಸವೇ ಬೇಡ ಎಂದು ದೂರದಿಂದಲೇ ನಮಸ್ಕಾರ ಹಾಕುವುದಿತ್ತು.' ಎಂದು ದಾಖಲಿಸುತ್ತಲೇ ಸ್ವಾಮಿ ಅವರು ಬಿಳಿಯರು ಬಂದ ನಂತರ ಈ ಪ್ರದೇಶ ಹೇಗೆ ಅಭಿವೃದ್ಧಿ ಹೊಂದಿತು ಎನ್ನುವುದನ್ನು ವಿವರವಾಗಿ ತಿಳಿಸಿದ್ದಾರೆ. ಕಾಫಿ, ಟೀ ತೋಟಗಳ ಅಭಿವೃದ್ಧಿಯೊಂದಿಗೆ ನೀಲಗಿರಿ ಬೆಳೆದಿದೆ ಎಂದು ಸ್ವಾಮಿ ಸ್ಪಷ್ಟಪಡಿಸಿದ್ದಾರೆ. ಬ್ರಿಟಿಷರ ಬೇಸಿಗೆಕಾಲದ ಆಡಳಿತ ಕೇಂದ್ರವಾಗಿದ್ದ ಕಾರಣವೂ ಈ ಪ್ರದೇಶದ ಪ್ರಗತಿಯಲ್ಲಿ ಪಾತ್ರ ವಹಿಸಿದೆ. ವಲಸಿಗರನ್ನು ಬಿಟ್ಟರೆ ಇಲ್ಲಿದ್ದವರು ಮೂಲ ನಿವಾಸಿಗಳು. ಈಗಲೂ ಅವರು ಇದ್ದಾರೆ. ಅವರ ಸಂಖ್ಯೆ ಕಡಿಮೆಯಾಗಿರುವುದನ್ನು ಜನಗಣತಿ ಸ್ಪಷ್ಟಪಡಿಸಿದೆ. ವಲಸಿಗರು ಇಲ್ಲವಾಗಿದ್ದಿದ್ದರೆ ನೀಲಗಿರಿ ಇಂದಿಗೂ ಬುಡಕಟ್ಟು ಜನಾಂಗದ ನೆಲೆಯೇ ಆಗಿ ಉಳಿಯುತ್ತಿತ್ತೇನೋ ಎನಿಸಿದರೆ ಆಶ್ಚರ್ಯವಿಲ್ಲ.

ನೀಲಗಿರಿ ಪ್ರದೇಶದ ಇತಿಹಾಸದ ಬಗೆಗೂ ಕೆ. ಪಿ. ಸ್ವಾಮಿ ಅವರು ಔಚಿತ್ಯಪೂರ್ಣ ಮತ್ತು ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ. ಇದಕ್ಕೆ ಅವರಿಗೆ ಆಧಾರವಾಗಿರುವುದು ಹಿಂದೆ ಪ್ರಸ್ತಾಪಿಸಲಾಗಿರುವ ಎನ್. ಲಕ್ಷ್ಮೀನಾರಾಯಣ ರಾಯರ ಲೇಖನ. ಆ ಹೊತ್ತಿಗೆ ದೊರೆತಿದ್ದ ಪಾಂಡವರ ಗುಡಿ ಎಂದು ಕರೆಸಿಕೊಳ್ಳುತ್ತಿದ್ದ ಬೃಹತ್ ಶಿಲಾಯುಗದ ಸಮಾಧಿಗಳು, ಶಾಸನೋಲ್ಲೇಖಗಳು, ಕ್ರಿ. ಶ. ೨ನೇ ಶತಮಾನದ್ದೆಂದು ಅನುಮಾನಿಸಲಾಗಿರುವ ಶಿಲಪ್ಪದಿಗಾರಂನಲ್ಲಿ ಪ್ರಸ್ತಾಪಿತವಾಗಿರುವ ನೀಲಗಿರಿ, ಅಲ್ಲಲ್ಲಿ ದೊರೆತಿರುವ ಆಯುಧಗಳು, ಆಭರಣಗಳು, ಮಡಕೆ, ಕುಡಿಕೆಗಳು, ಬೊಂಬೆಗಳು ಇತ್ಯಾದಿ ವಸ್ತುಗಳ ಪರಿಶೀಲನೆಯಿಂದ ಇದು ಇತಿಹಾಸಪೂರ್ವ ಕಾಲದಿಂದಲೂ ಜನವಸತಿಯಿದ್ದ ಪ್ರದೇಶ ಎಂದು ಖಚಿತವಾಗುತ್ತದೆ. ಬಹುತೇಕ ಗಂಗರ ಕಾಲದಿಂದಲೂ ಇಲ್ಲಿ ಖಚಿತವಾದ ಇತಿಹಾಸವಿದೆ. ಹೊಯ್ಸಳರೂ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿದ್ದರು ಎಂದು ಶಾಸನಾಧಾರಗಳಿಂದ ತಿಳಿಯುತ್ತದೆ. ನೀಲಾಚಲ ಎಂದೇ ಪ್ರಸಿದ್ಧವಾಗಿದ್ದ ನೀಲಗಿರಿಯನ್ನು ಕರ್ನಾಟಕವನ್ನಾಳಿದ ಬಹುತೇಕ ಎಲ್ಲ ರಾಜಮನೆತನಗಳೂ ಆಳಿವೆ. ಮೈಸೂರಿನ ಚಿಕ್ಕದೇವರಾಜ ಒಡೆಯರ ಕಾಲಕ್ಕೆ ನೀಲಗಿರಿ ಮೈಸೂರು ಸಂಸ್ಥಾನಕ್ಕೆ ಸೇರಿತ್ತು. ಟಿಪ್ಪು ಸುಲ್ತಾನ್ ತನ್ನ ರಾಜ್ಯದ ರಕ್ಷಣೆಗಾಗಿ ನೀಲಗಿರಿಯ ಮಲೆಕೋಟೆ ಮತ್ತು ಹುಲಿಕಲ್ ದುರ್ಗಗಳಲ್ಲಿ ಕೋಟೆಗಳನ್ನು ಕಟ್ಟಿಸಿ, ಅಲ್ಲಿ ತನ್ನ ಸೈನ್ಯವನ್ನು ಕಾವಲಿಗಿರಿಸಿದ್ದ ಎಂದು ತಿಳಿದಿದೆ. ಟಿಪ್ಪುವಿನ ಮರಣಾನಂತರ ನೀಲಗಿರಿ ಪ್ರದೇಶವು ಬ್ರಿಟಿಷರ ಪಾಲಾಗಿ ಮದ್ರಾಸ್ ಆಧಿಪತ್ಯಕ್ಕೆ ಸೇರಿತು. ಈಗ ನೀಲಗಿರಿ ಪ್ರದೇಶ ಅಭಿವೃದ್ಧಿ ಹೊಂದಿರುವ ಹಿನ್ನೆಲೆಯಲ್ಲಿ ಕ್ರಿ. ಶ. ೧೮೧೫ರಿಂದ ೧೮೩೦ರವರೆಗೆ ನೀಲಗಿರಿಯೂ ಸೇರಿದ್ದಂತೆ ಕೊಯಂಬತ್ತೂರಿನ ಕಲೆಕ್ಟರ್ ಆಗಿದ್ದ ಜಾನ್ ಸಲ್ಲಿವನ್‌ನ ಮುಂದಾಲೋಚನೆ ಮತ್ತು ಶ್ರಮವೇ ಕಾರಣ ಎಂಬುದನ್ನು ಸ್ವಾಮಿ ವಿವರವಾಗಿ ಸಂಗ್ರಹಿಸಿದ್ದಾರೆ. ಅಲ್ಲಿನ ಮೂಲನಿವಾಸಿಗಳಿಗೂ ಅನುಕೂಲಗಳನ್ನು ಕಲ್ಪಿಸಿ, ಊಟಿಯನ್ನು ಮರಿ ಲಂಡನ್ ಮಾಡಿದ, ಅಗತ್ಯವಾದ ಎಲ್ಲ ವಿಷಯಗಳನ್ನು ಯಾವುದೇ ಗೊಂದಲಕ್ಕೆ ಎಡೆಗೊಡದಂತೆ, ವೃತ್ತಿಪರ ಸಂಶೋಧಕನ ನಿಷ್ಠೆಯಿಂದಲೇ ಸ್ವಾಮಿ ಶ್ರಮಿಸಿದ್ದಾರೆ.

ಸಮಾಜಶಾಸ್ತ್ರೀಯ ಅಧ್ಯಯನದಲ್ಲಿ ಮುಖ್ಯವಾಗಿ ಅನಾವರಣಗೊಳ್ಳಬೇಕಾದ್ದು ಜನತೆಯ ಬದುಕು. ಅವರ ಬಗ್ಗೆ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸುವುದರಲ್ಲಿ, ದಾಖಲಿಸುವುದರಲ್ಲಿ ಮತ್ತು ಪ್ರಸ್ತುತಪಡಿಸುವಲ್ಲಿ ಸ್ವಾಮಿ ಅವರು ವಹಿಸಿರುವ ಅಸಾಧಾರಣ ಶ್ರಮ ಬೆರಗು ಹುಟ್ಟಿಸುತ್ತದೆ. ಯಾವುದೇ ಸಮಾಜಶಾಸ್ತ್ರೀಯ ಸಂಶೋಧಕನಿಗೂ ಇವುಗಳೆಲ್ಲ ಸವಾಲುಗಳೇ. ಜನರನ್ನು ಭೇಟಿ ಮಾಡುವುದು, ಅವರ ವಿಶ್ವಾಸ ಗಳಿಸಿಕೊಳ್ಳುವುದು, ಅವರ ಬದುಕಿನ ಕೆಲವು ಮಹತ್ವದ ಮಾಹಿತಿಗಳನ್ನು ಸಂಗ್ರಹಿಸುವುದು ಸುಲಭವಲ್ಲ. ಯಾರೂ ತಮ್ಮ ಸ್ವಂತದ್ದಿರಲಿ, ಕುಟುಂಬದ್ದಿರಲಿ, ಕುಲದ್ದಿರಲಿ ರಹಸ್ಯ ಎನಿಸಿಕೊಳ್ಳುವಂತಹ ಮಾಹಿತಿಗಳನ್ನು ಹಂಚಿಕೊಳ್ಳುವುದಿಲ್ಲ. ಮಾಹಿತಿಯನ್ನು ಕೇಳುತ್ತಿರುವವನ ಬಗ್ಗೆ ನಂಬಿಕೆ ಮತ್ತು ವಿಶ್ವಾಸಗಳು ಇದ್ದಾಗ ಮಾತ್ರ ಮಾಹಿತಿ ಸಂಗ್ರಹಣೆ ಸಾಧ್ಯ. ಸ್ವಾಮಿ ಅವರಿಗೆ ಮಾಹಿತಿ ನೀಡಿರುವ ಪ್ರತಿಯೊಬ್ಬರೂ ಅವರ ಬಗ್ಗೆ ವಿಶ್ವಾಸವಿರಿಸಿ ಕೊಂಡಿದ್ದಾರೆ. ಅಂತಹ ಸಂಪರ್ಕವನ್ನು ಮಾಹಿತಿ ಸಂಗ್ರಾಹಕ ಸಾಧಿಸಬೇಕು. ಅದೇ ಸಂಶೋಧನೆಯ ಮೊದಲ ಜಯ. ತಮ್ಮ ಬಾಲ್ಯದ ಜೀವನವನ್ನು ಅಲ್ಲೇ ಕಳೆದಿದ್ದ ಸ್ವಾಮಿ ಅವರಿಗೆ ಸ್ಥಳೀಯವಾದ ಕೆಲವು ಭಾಷೆಗಳ ಪರಿಚಯ ಚೆನ್ನಾಗಿಯೇ ಇದ್ದುದರಿಂದ ಮಾಹಿತಿ ಸಂಗ್ರಹಣೆಯ ಸಂದರ್ಭ ಜನರ ವಿಶ್ವಾಸ ಗಳಿಸುವುದು ಸುಲಭವಾಗಿದೆ. ನೀಲಗಿರಿಯ ಬಹುತೇಕ ಮೂಲನಿವಾಸಿಗಳನ್ನು ಕುರಿತು ಹಲವು ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗಿವೆ. ಅವುಗಳನ್ನಷ್ಟೇ ನಂಬಿ ಯಾವುದೇ



**ಬ್ಲೂಮೌಂಟನ್ ಎಕ್ಸ್‌ಪ್ರೆಸ್**



**ಮಹಿಳೆಯರ ಕುಣಿತ ಸೇವೆ**

ತೀರ್ಮಾನಕ್ಕೆ ಬರುವುದು ಹಿಂದಿನ ಬದುಕನ್ನು ತಿಳಿಸಲು ನೆರವಾಗಬಹುದಷ್ಟೇ ಹೊರತು ವರ್ತಮಾನದ ಬದುಕನ್ನು ತಿಳಿಸಲು ನೆರವಾಗುವುದಿಲ್ಲ; ಆದ್ದರಿಂದ ವರ್ತಮಾನದ ಬದುಕನ್ನು ತಿಳಿಯಲು ಕ್ಷೇತ್ರಕಾರ್ಯ ಮುಖ್ಯ, ಅದರಲ್ಲಿ ಮಾಹಿತಿ ಸಂಗ್ರಹಣೆ ಮತ್ತು ಹುಟ್ಟು, ಮದುವೆ, ಸಾವು ಇತ್ಯಾದಿ ಸಂದರ್ಭಗಳಲ್ಲಿ ಅನುಸರಿಸುವ ಆಚಾರ ವಿಚಾರಗಳನ್ನು ಖುದ್ದಾಗಿ ತಿಳಿಯಬೇಕು. ಆ ಕೆಲಸವನ್ನು ಸ್ವಾಮಿ ಅವರು ಮಾಡಿರುವುದರಿಂದ ಬಹುತೇಕ ಎಲ್ಲಾ ಮೂಲನಿವಾಸಿಗಳ ಬಗ್ಗೆ ಅಧಿಕೃತವಾಗಿ ತಿಳಿಯಲು ಸಾಧ್ಯವಾಗಿದೆ.

ಸಾಮಾನ್ಯವಾಗಿ ಮೂಲನಿವಾಸಿಗಳ ಹುಟ್ಟಿಗೆ ಸಂಬಂಧಿಸಿದಂತೆ ಪುರಾಣ ಎನಿಸಿಕೊಳ್ಳುವ ಒಂದು ಜಾನಪದ ಕಥೆ ಇರುತ್ತದೆ. ಅದರ ಹಿನ್ನೆಲೆಯಲ್ಲೇ ಅವರ ಕೆಲವು ಆಚಾರ ವಿಚಾರಗಳು ನಿರ್ಧರಿತವಾಗುತ್ತವೆ. ಹೆಣ್ಣು, ಗಂಡು ಪರಸ್ಪರ ಪ್ರೀತಿಸಿ ಓಡಿಹೋಗಿ, ಪತ್ತೆಯಾದ ನಂತರ ಹಿರಿಯರ ನಿರ್ಧಾರದಂತೆ ಮದುವೆಯಾಗುವುದು ಒಂದು ಕ್ರಮ. ಸೋದರಮಾವ ಅಥವಾ ಸೋದರತ್ತೆಯ ಮಗ ಅಥವಾ ಮಗಳೊಡನೆ ವಿವಾಹವಾಗುವುದು ಅಪೇಕ್ಷಣೀಯ, ಒಂದೇ ಗುಂಪಿಗೆ ಸೇರುವ ವರ್ಗದಲ್ಲಿ ಮತ್ತು ನಿಷೇಧಕ್ಕೊಳಗಾದ ಕೆಲವು ಗುಂಪುಗಳೊಡನೆ ವಿವಾಹ ನಿಷಿದ್ಧ. ಮದುವೆಯ ಸಂದರ್ಭದಲ್ಲಿ ಎಮ್ಮೆಗಳ ರೂಪದಲ್ಲಿ ಹೆಣ್ಣಿಗೆ ತೆರ ಮತ್ತು ಗಂಡಿಗೆ ವರದಕ್ಷಿಣೆ ಕೊಡುವ ಪದ್ಧತಿ ತೊದವರಲ್ಲಿದೆ. ಸಾಮರಸ್ಯ ಇಲ್ಲದ ಸಂದರ್ಭಗಳಲ್ಲಿ ಗುಂಪಿನ ಮುಖ್ಯಸ್ಥರ ಸಮ್ಮುಖದಲ್ಲಿ ವಿಚ್ಛೇದನ ಪಡೆದುಕೊಂಡಾಗ ತೆರ ಅಥವಾ ವರದಕ್ಷಿಣೆಯ ರೂಪದಲ್ಲಿ ಪಡೆದಿದ್ದ ಎಮ್ಮೆಗಳನ್ನು ಹಿಂತಿರುಗಿಸಬೇಕು.



ಅನ್ನ ಭಾಗ್ಯ ಅಕ್ಕಿಯಲ್ಲಿ ಹುಳು ಇರದೆ ಇರುತ್ತಾ ? ೫೦ ರೂಪಾಯಿ ಕೊಟ್ಟು ಇದು ತಗೊಂಡು ಹೋಗು, ಎಲ್ಲಾ ಸರಿಹೋಗುತ್ತೆ !!

ವಿಚ್ಛೇದನದ ನಂತರ ಪುನರ್ವಿವಾಹಕ್ಕೆ ಅಡ್ಡಿಯಿಲ್ಲ. ತೊದವರಲ್ಲಿ ಬಹುಪತ್ನಿತ್ವವಷ್ಟೇ ಅಲ್ಲದೆ ಬಹುಪತಿತ್ವವೂ ರೂಢಿಯಲ್ಲಿತ್ತು ಎಂಬ ವಿಚಾರವು ಆ ಜನಾಂಗದ ಬದುಕಿನ ಆರಂಭವನ್ನು ಬಹಳ ಪ್ರಾಚೀನ ಕಾಲಕ್ಕೆ ಕೊಂಡೊಯ್ಯುತ್ತದೆ. ವಿದ್ಯಾಭ್ಯಾಸವು ಬಹುತೇಕ ಆಚರಣೆಗಳಿಗೆ ಕಡಿವಾಣ ಹಾಕಿದೆ ಎಂಬುದನ್ನು ಸ್ವಾಮಿ ದಾಖಲಿಸಿದ್ದಾರೆ. ಇಲ್ಲಿನ ಬಹುತೇಕ ಮೂಲನಿವಾಸಿಗಳು ನಿಸರ್ಗದೊಂದಿಗೆ ಹೊಂದಿ ಕೊಂಡು ಬಾಳಿದವರು ಮತ್ತು ಬಾಳುತ್ತಿರುವವರು. ಅವರ ವಾಸದ ಸ್ಥಳಗಳಿಗೆ ಮಂದ್ ಅಥವಾ ಮಂದೆ ಎಂಬ ಹೆಸರಿರುತ್ತದೆ. ತೊದವ ಗಂಡಸರು ಮತ್ತು ಹೆಂಗಸರು ಮೈಮೇಲೆ 'ಪುತ್ಕುಳಿ' ಎಂಬ ಮೇಲುಹೊದಿಕೆಯನ್ನು ಹೊದೆಯುತ್ತಾರೆ. ಆ ಸಂಪ್ರದಾಯ ಈಗಲೂ ಉಳಿದಿರುವುದು ವಿಶೇಷ. ಅವರ ಕುಲಗಳು, ದೇವತೆಗಳು, ದೇವತೆಗಳ ದೇವಾಲಯಗಳು, ಆಡುವ ಭಾಷೆ, ಸಂಪ್ರದಾಯಗಳು, ಶಿಕ್ಷಣದಿಂದ ಆಗಿರುವ ಬದಲಾವಣೆಗಳು ಇತ್ಯಾದಿ ಗಳನ್ನು ವಿವರವಾಗಿ ದಾಖಲಿಸಲಾಗಿದೆ. ನೀಲಗಿರಿಯಲ್ಲಿ ಈಗಲೂ ಇರುವ ತೊದವರು, ಕೋತರು, ಬಡಗರು, ಇರುಳರು, ಕಾಡುನಾಯಕರು, ಪಣಿಯರು, ಹಾಲುಕುರುಬರು, ಬೆಟ್ಟಕುರುಬರು ಮತ್ತು ಮುಳ್ಳುಕುರುಬರಿಗೆ ಸಂಬಂಧಿಸಿದಂತೆ ಅವರ ಮೂಲದ ಇರುವ ನಂಬಿಕೆಗಳು, ಆಚಾರ-ವಿಚಾರಗಳು, ಆಚರಣೆಗಳು, ಜೀವನಶೈಲಿ ಆಡುವ ಭಾಷೆ, ಪೂಜಿಸುವ ದೇವರುಗಳು, ಗುರುವರ್ಗ ಇತ್ಯಾದಿ ಎಲ್ಲ ವಿವರಗಳನ್ನೂ ಸ್ವಾಮಿ ಅವರು ದಾಖಲಿಸಿದ್ದಾರೆ.

ಪ್ರತಿಯೊಂದು ಪಂಗಡದ ಪಾರಂಪರಿಕ ಉಡುಪು, ಕೆಲವು ವಿಶೇಷ ಸಂದರ್ಭಗಳಲ್ಲಿನ ಸಾಮೂಹಿಕ ನೃತ್ಯ, ಕೋತರಲ್ಲಿ ಪೂಜಾರಿಯ ಆಯ್ಕೆ, ಇತ್ಯಾದಿಗಳು ಪರಂಪರೆಯ ನೆನಪುಗಳಾಗಿವೆ.

ನೀಲಗಿರಿಗೆ ಕೊನೆಯವರಾಗಿ ಬಂದ ಬಡಗರ ಭಾಷೆ ಕನ್ನಡಕ್ಕೆ ಸಮೀಪ ವಾಗಿರುವ ಭಾಷೆ. ಇದಕ್ಕೆ ಸ್ವಾಮಿ ಅವರು ಹಲವು ಉದಾಹರಣೆಗಳನ್ನು ನೀಡಿದ್ದಾರೆ. ಪ್ರತಿಯೊಂದು ಪಂಗಡದಲ್ಲಿನ ದೇವರುಗಳು, ಸಂಬಂಧಿಸಿದ ಆಚರಣೆಗಳು, ಮದುವೆಗಳು, ಹುಟ್ಟು ಮತ್ತು ಸಾವಿನ ಸಂದರ್ಭದ ಸೂತಕ, ವಿಚ್ಛೇದನ, ಬಹುಪತಿತ್ವ ಮತ್ತು ಬಹುಪತ್ನಿತ್ವ, ಆಹಾರ ಪದ್ಧತಿ, ವೃತ್ತಿ ಮತ್ತು ಪ್ರವೃತ್ತಿಗಳು ಶಿಕ್ಷಣ ಮತ್ತು ಪ್ರಗತಿ ಇತ್ಯಾದಿ ಬಹುತೇಕ ಒಂದು ಜನಾಂಗಕ್ಕೆ ಸಂಬಂಧಿಸಿದಂತೆ ತಿಳಿಯಲೇಬೇಕಾದ ಎಲ್ಲ ವಿವರಗಳನ್ನೂ ಸ್ವಾಮಿ ತಿಳಿಸಿದ್ದಾರೆ. ಬಡಗರ 'ಹೆತ್ತೆಹಬ್ಬ'ದ ಆಚರಣೆಯ ವಿವರಗಳು ಎಂತಹವರನ್ನೂ ಮುದಗೊಳಿಸುತ್ತವೆ.

ಬಡಗರ ಪ್ರಗತಿಗೆ ಶ್ರಮಿಸಿದ ಆಂಡಿ ಧರ್ಮಲಿಂಗಂ, ನೀಲಗಿರಿಯ ಜನರ ಆರೋಗ್ಯದ ವಿಷಯದಲ್ಲಿ ಕಾಳಜಿ ವಹಿಸಿದ ಡಾ॥ ಎಸ್. ನರಸಿಂಹನ್, ನೀಲಗಿರಿಯನ್ನು ಕುರಿತು ಹೆಚ್ಚಾಗಿ ಬರೆದ ಪತ್ರಕರ್ತ ಡಾ॥ ಫಿಲೋ ಹೃದಯನಾಥ್, ನೀಲಗಿರಿಯ ಕೆಲವು ಪ್ರಮುಖ ಕನ್ನಡಿಗರು, ಇವರುಗಳ ಪರಿಚಯಾತ್ಮಕ ಬರಹಗಳು ಆ ಭಾಗದಲ್ಲಿನ ಪ್ರಗತಿಯ ವಿವರಗಳನ್ನು ಸೂಚ್ಯವಾಗಿ ಒದಗಿಸಿವೆ.

ಈ ಕೃತಿಯಲ್ಲಿ ವಿಶೇಷವಾಗಿ ಗಮನ ಸೆಳೆಯುವ ಲೇಖನವೆಂದರೆ 'ಬ್ಲೂಮೌಂಟನ್ ಎಕ್ಸ್‌ಪ್ರೆಸ್' ಕುರಿತದ್ದು. ಊಟಿ-ಚೆನ್ನೈ, ಚೆನ್ನೈ-ಊಟಿ ನಡುವೆ ಓಡಾಡುವ ರೈಲನ್ನು ಯುನೆಸ್ಕೋ ಸಂಸ್ಥೆಯು ಈಗ 'ಹೆರಿಟೇಜ್ ಟ್ರೈನ್' ಎಂದು ಘೋಷಿಸಿದೆ. ಚೆನ್ನೈನಿಂದ ಮೇಟುಪಾಳ್ಯದವರೆಗೆ ಬ್ರಾಡ್‌ಗೇಜ್‌ನಲ್ಲಿ ಬಂದು, ಅಲ್ಲಿಂದ ಮೀಟರ್ ಗೇಜಿನಲ್ಲಿ ನಲವತ್ತಾರು ಕಿ.ಮೀ. ದೂರದ ಪ್ರಯಾಣಕ್ಕೆ ಸುಮಾರು ಐದೂವರೆ ಘಂಟೆಗಳಷ್ಟು ಕಾಲ ತೆಗೆದುಕೊಳ್ಳುವ ಬ್ಲೂಮೌಂಟನ್ ಎಕ್ಸ್‌ಪ್ರೆಸ್ ಟ್ರೈನ್ ಆರಂಭವಾದದ್ದು ೧೮೯೮ರಲ್ಲಿ. ಅದು ೨೫೦ ಸೇತುವೆಗಳು ಮತ್ತು ೧೬ ಸುರಂಗಗಳ ಮೂಲಕ ಸಮುದ್ರಮಟ್ಟದಿಂದ ೧೭೦೦ ಅಡಿಗಳ ಎತ್ತರದಿಂದ ಸಮುದ್ರಮಟ್ಟದಿಂದ ೭೫೦೦ ಅಡಿಗಳ, ಅಂದರೆ ೫೮೦೦ ಅಡಿಗಳಷ್ಟು ಎತ್ತರಕ್ಕೆ ಏರುವಾಗ

ನಡುವೆ ಕಾಣುವ ಬೆಟ್ಟಗುಡ್ಡಗಳು, ಅವುಗಳ ನಡುವಿನ ಕಣಿವೆಗಳು ಮತ್ತು ಹರಿಯುವ ನದಿಗಳು, ವನರಾಶಿ, ಎಲ್ಲವೂ ಮನಸ್ಸಿಗೆ ನೀಡುವ ಮುದವನ್ನು ಕಂಡು ಅನುಭವಿಸುವುದರ ಬದಲು, ಸ್ವಾಮಿ ಅವರ ವಿವರಣೆಗಳಿಂದಲೇ ಅನುಭವಿಸಬಹುದು. ಈ ರೈಲಿನ ಇತಿಹಾಸವು ವಿಶೇಷ ಅಧ್ಯಯನಕ್ಕೆ ಯೋಗ್ಯವಾಗಿದೆ. ಈ ಬೆಟ್ಟದ ರೈಲಿನ ಹಳಿಗಳನ್ನು ಹಾಕುವಲ್ಲಿ ಅಳವಡಿಸಿರುವ ತಂತ್ರಜ್ಞಾನ ಮತ್ತು ಅದನ್ನು ಕುರಿತಾಗಿಯೇ ಇರುವ ತೊದವ ಭಾಷೆಯ ಹಾಡು ಜನಪ್ರಿಯವಾಗಿರುವುದನ್ನು ಸ್ವಾಮಿ ಅವರು ಮರೆತಿಲ್ಲ.

ಬೆಟ್ಟಗಳ ನಡುವೆ ಹರಿಯುವ ನದಿಗಳು, ಅವುಗಳಿಗೆ ಅಡ್ಡಲಾಗಿ ಕಟ್ಟಿರುವ ಅಣೆಕಟ್ಟೆಗಳು ಹಾಗೂ ಬೆಟ್ಟದ ನಡುವೆ ಕಾಣುವ ಜಲಪಾತಗಳ ವೈಭವವನ್ನು ನೋಡಿಯೇ ಆನಂದಿಸಬೇಕು ಎನಿಸಿದರೆ ಆಶ್ಚರ್ಯವಿಲ್ಲ. ನೀಲಗಿರಿಗೆ ಕನ್ನಡಿಗರ ವಲಸೆ ಕುರಿತ ಮಾಹಿತಿಗಳೂ ಕುತೂಹಲಕಾರಿಯಾಗಿವೆ. ಅವರಲ್ಲಿ ಕೆಲವು ಕನ್ನಡಿಗರ ಪರಿಚಯ ಈ ಕೃತಿಯ ಮೂಲಕ ಆಗುತ್ತದೆ.

ನೀಲಗಿರಿಯು ತನ್ನ ಪ್ರಕೃತಿ ಸಂಪತ್ತಿನ ಜೊತೆಗೆ ಟೀ ತೋಟಗಾರಿಕೆಗೂ ಹೆಸರಾಗಿದೆ. ನೀಲಗಿರಿ ಪ್ರದೇಶವು ಬ್ರಿಟಿಷರ ಆಡಳಿತಕ್ಕೆ ಸೇರಿ, ಅಲ್ಲಿ ಅವರು ನೆಲೆ ಕಂಡುಕೊಳ್ಳುವ ವೇಳೆಗೆ ಅಲ್ಲಿನ ಬೆಟ್ಟದ ಸಾಲುಗಳು ಮತ್ತು ಅರಣ್ಯ ಪ್ರದೇಶವು ಕಾಫಿ ತೋಟಗಳಿಗೆ ಆಸರೆ ನೀಡಿದುವಾದರೂ, ಕ್ರಮೇಣ ಕಾಫಿಗಿಂತ ಆ ಪ್ರದೇಶವು ಟೀ ತೋಟಗಳಿಗೆ ಸರಿಯಾದ ಸ್ಥಳ ಎಂದು ಅರಿವಾಗಿದೆ. ಟೀ ತೋಟಗಳು ಊರ್ಜಿತಗೊಂಡಂತೆಲ್ಲಾ, ಅಲ್ಲಿ ದುಡಿಯಲು ಬೇಕಾದ ಜನರನ್ನು ಬೇರೆಡೆಯಿಂದ ಕರೆತರುವ ಕೆಲಸ ಆರಂಭವಾಗಿದೆ. ಜೊತೆಜೊತೆಗೇ ಅದರ ಉಸ್ತುವಾರಿಗೆ ಬೇಕಾದ ಜನರೂ ಅಲ್ಲಿ ನೆಲೆ ಕಂಡುಕೊಂಡಿದ್ದಾರೆ. ಬೆಟ್ಟಗಳೇ ಪ್ರಧಾನವಾಗಿರುವ ಪ್ರದೇಶದಲ್ಲಿ ಬಯಲುನಾಡಿನ ಮಾದರಿಯ ಬೇಸಾಯ ಸಾಧ್ಯವಿಲ್ಲ ಎಂದು ಮನಗಂಡ ಜನರು ಹೆಚ್ಚು ವಿಸ್ತೀರ್ಣದ ಪ್ರದೇಶಗಳಿಗೆ ಕೈಹಚ್ಚದೆ ಕಡಿಮೆ ವಿಸ್ತೀರ್ಣದ ಭೂಮಿಯನ್ನು ಕೃಷಿಗೆ ಅಣಿಮಾಡಿಕೊಂಡಿದ್ದಾರೆ. ತೋಟಗಳು ಹೆಚ್ಚಿದಂತೆ ರಸ್ತೆಗಳು ರೂಪುಗೊಂಡಿವೆ. ಅಲ್ಲಿನ ಕೃಷಿಗೆ ಸರ್ಕಾರವೂ ನೆರವು ನೀಡಿದೆ.

ಬಿತ್ತನೆಗಾಗಿ ಆಫ್ರಿಕಾದಿಂದ ಕಾಫಿ ಬೀಜ ಮತ್ತು ಚೈನಾ, ಸಿಲೋನ್ ಮತ್ತು ಅಸ್ಸಾಂಗಳಿಂದ ಟೀ ಬೀಜಗಳನ್ನು ತರಿಸಿ, ಕೃಷಿಯನ್ನು ಅಭಿವೃದ್ಧಿಪಡಿಸಲಾದ ವಿವರಗಳನ್ನು ಸ್ವಾಮಿ ಚೆನ್ನಾಗಿಯೇ ಬಲ್ಲರಾದ್ದರಿಂದ ಆ ಭಾಗವು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಅಲ್ಲಿ ಮಲೇರಿಯಾ ಎಂಬ ರೋಗದ ಮದ್ದು 'ಕ್ವಿನೈನ್'ನ ತಯಾರಿಕೆಗೆ ಬಳಕೆಯಾಗುತ್ತಿದ್ದ ಚಿಂಕೋನಾ ಮರಗಳು ಬೆಳೆಯುತ್ತಿದ್ದವು. ಇವೆಲ್ಲವೂ ಈಗ ಇತಿಹಾಸ; ಅಂದಿಗೆ ವರ್ತಮಾನ. ಭಾರತಕ್ಕೆ ೧೭ನೇ ಶತಮಾನದಲ್ಲಿ ಬಂದಿದ್ದರೂ, ನೀಲಗಿರಿ ಪ್ರದೇಶಕ್ಕೆ ೧೮೨೦ರ ದಶಕದಲ್ಲಿ ಬಂದ ಆಲೂಗಡ್ಡೆ ಒಂದು ಕಾಲಕ್ಕೆ ಇಲ್ಲಿಯ ಪ್ರಮುಖ ಬೆಳೆಯಾಯಿತು. ಬಹುತೇಕ ವಿದೇಶೀ ತರಕಾರಿಗಳನ್ನು ನೀಲಗಿರಿ ಪ್ರದೇಶದಲ್ಲಿ ಬೆಳೆಯಲಾಗುತ್ತದೆ. ಜೊತೆಗೆ, ಇಲ್ಲಿ ಬೆಳೆಯಲಾಗುವ ಹೂವುಗಳೂ ವಿಶೇಷವಾಗಿ ಆಕರ್ಷಿಸುತ್ತವೆ.

ಇಲ್ಲಿನ ೧೯೦೪ರಲ್ಲಿ ಆರಂಭವಾದ ಸಿಡಿಮದ್ದು ಕಾರ್ಖಾನೆ ಇಂದಿಗೂ ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದೆ ಎಂಬ ಮಾತು ಅಲ್ಲಿನ ಜನರ ಉದ್ಯಮಪ್ರೀತಿಗೆ ಉದಾಹರಣೆಯಾಗಿದೆ. ವಿವಿಧ ಕಾರ್ಯಗಳಿಗೆ ಬಳಸಲಾಗುವ ಸೂಜಿಗಳು, ಈಗ ರೋಗಗ್ರಸ್ತ ಎನಿಸಿಕೊಂಡಿದ್ದರೂ, ಒಂದು ಕಾಲಕ್ಕೆ ಭಾರತದ ಹೆಮ್ಮೆಯ ಉದ್ಯಮಗಳಲ್ಲೊಂದಾಗಿದ್ದ ಹಿಂದೂಸ್ತಾನ್ ಫೋಟೋ ಫಿಲ್ಮ್ಸ್, ಯೂಕಲಿಪ್ಟಸ್ ಮರದಿಂದ ಉತ್ಪಾದಿಸುವ 'ನೀಲಗಿರಿ' ತೈಲದ ಉತ್ಪಾದನೆ ಇತ್ಯಾದಿ ಉದ್ಯಮಗಳು ನೀಲಗಿರಿ ಪ್ರದೇಶವನ್ನು ಆರ್ಥಿಕವಾಗಿ ಮಾತ್ರವಲ್ಲದೆ, ಉದ್ಯೋಗ ಸೃಷ್ಟಿಯ ಕಾರಣದಿಂದಲೂ ಶ್ರೀಮಂತಗೊಳಿಸಿವೆ.

ಬೆಟ್ಟಗಳು ಮತ್ತು ಕಾಡುಗಳಲ್ಲಿ ಔಷಧಿ ಸಸ್ಯಗಳು ಸಹಜವಾಗಿಯೇ ಬೆಳೆಯುತ್ತವೆ ಮತ್ತು ಅವುಗಳ ನಡುವೆ ವನ್ಯಪ್ರಾಣಿಗಳೂ ಇರುತ್ತವೆ. ಇವುಗಳನ್ನು ಕಾಪಾಡಿಕೊಳ್ಳುವುದು ನಾಗರಿಕರ ಕರ್ತವ್ಯ. ಸ್ವಾಮಿ ಅವರು ನೀಲಗಿರಿ ಪ್ರದೇಶದಲ್ಲಿರುವ ವಿವಿಧ ಬಗೆಯ ಪುಷ್ಪಗಳ ಬಗ್ಗೆ ಮಾತ್ರವಲ್ಲದೆ, ಅಲ್ಲಿನ ವನ್ಯಜೀವಿಗಳ ಬಗ್ಗೆಯೂ ತಿಳಿಸಿದ್ದಾರೆ. ತಮಿಳಿನ ಪ್ರಾಚೀನ ಸಾಹಿತ್ಯದಲ್ಲಿ ಕಾಣುವ ಕುರಿಂಜಿ ಹೂವು ಈಗಲೂ ನೀಲಗಿರಿ ಪ್ರದೇಶದಲ್ಲಿ ಕಾಣಬರುತ್ತದೆ ಎಂಬುದು ವಿಸ್ಮಯದ ಸಂಗತಿ.

## ನಮನ



ಸುಮಾರು ಎರಡು ದಶಕಗಳಿಂದ ನವಕರ್ನಾಟಕ ಪ್ರಕಾಶನ ಸಂಸ್ಥೆಯೊಂದಿಗೆ ನಿಕಟ ಸಂಬಂಧ ಹೊಂದಿದ್ದ, 'ಹೊಸತು' ಪತ್ರಿಕೆ ಪ್ರಾರಂಭವಾದಾಗಿನಿಂದ ಆಗಾಗ ಲೇಖನಗಳನ್ನು ಬರೆಯುತ್ತಿದ್ದ ಶ್ರೀ ಎಂ. ಕೆ. ರಾಜಗೋಪಾಲ್ ೨೦೧೫ರ ನವೆಂಬರ್ ೨೪ರಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಅವರಿಗೆ ನವಕರ್ನಾಟಕ ಹಾಗೂ ಹೊಸತು ನಮನ ಸಲ್ಲಿಸುತ್ತದೆ ಹಾಗೂ ಕುಟುಂಬ ವರ್ಗದವರಿಗೆ ಸಂತಾಪ ಸೂಚಿಸುತ್ತದೆ.

ಭೂ ವಿಜ್ಞಾನದಲ್ಲಿ ಸ್ನಾನಕೋತ್ತರ ಪದವೀಧರರಾದ ರಾಜಗೋಪಾಲ್ ಪರಮಾಣು ಖನಿಜ ಇಲಾಖೆಯಲ್ಲಿ ಸಂಶೋಧಕರಾಗಿ ನಿವೃತ್ತರಾದವರು. ಅವರು ಇಂಡಿಯನ್ ರೇರ್ ಅರ್ತ್ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದರು. ಫ್ರಾನ್ಸ್ ದೇಶದ ಪರಮಾಣು ಶಕ್ತಿ ಆಯೋಗದಲ್ಲಿ ಯುರೋ ನಿಯಮ ಪರಿಶೋಧನೆಯ ಬಗ್ಗೆ ಹೆಚ್ಚಿನ ತರಬೇತಿ ಪಡೆದಿದ್ದರು. ನವಕರ್ನಾಟಕ ಜ್ಞಾನ – ವಿಜ್ಞಾನಕೋಶಕ್ಕೆ 'ಸಾಗರ ವಿಜ್ಞಾನ' ಕುರಿತು ಲೇಖನ ಬರೆದಿದ್ದಾರೆ. ನವಕರ್ನಾಟಕ ವಿಜ್ಞಾನ ಪದವಿವರಣಾ ಕೋಶ ಮತ್ತು ವಿಜ್ಞಾನ – ತಂತ್ರಜ್ಞಾನ ಪದಸಂಪದ ಗ್ರಂಥಗಳ ರಚನೆಯಲ್ಲಿ ತೊಡಗಿಕೊಂಡಿದ್ದರು. ಮೃದು ಭಾಷಿ, ಸಜ್ಜನಿಕೆ, ಮೈತ್ರಿಗೆ ಹೆಸರಾಗಿದ್ದ ರಾಜಗೋಪಾಲ್ ಸದಾ ನಮ್ಮ ನೆನಪಿನಲ್ಲಿರುತ್ತಾರೆ.

ಇತಿಹಾಸ ಮತ್ತು ಸಮಾಜಶಾಸ್ತ್ರದ ವಿದ್ಯಾರ್ಥಿಗಳಿಗೆ ಉಪಯುಕ್ತ ಮಾಹಿತಿಗಳೂ ಈ ಕೃತಿಯಲ್ಲಿವೆ. ನೀಲಗಿರಿಯ ಇತಿಹಾಸ, ನಿಸರ್ಗ ಸೌಂದರ್ಯ, ಮೌಖಿಕ ಸಾಹಿತ್ಯ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಈವರೆಗೆ ಆಗಿರುವ ಅಧ್ಯಯನಗಳು ಮತ್ತು ಅಧ್ಯಯನ ಮಾಡಿದವರ ವಿವರಗಳು ಇಲ್ಲಿ ದಾಖಲಾಗಿರುವುದರಿಂದ ಇದು ಒಂದು ಪರಿಚಯಾತ್ಮಕ ಪುಸ್ತಕ ಮಾತ್ರವಾಗಿರದೆ, ಆಕರ ಗ್ರಂಥವೂ ಆಗಿದೆ. ನೀಲಗಿರಿಯಲ್ಲಿ ಈಗಿರುವ ತಾಲ್ಲೂಕುಗಳ ಬಗ್ಗೆ ಗೆಜೆಟಿಯರ್ ಮಾದರಿಯ ಪರಿಚಯಾತ್ಮಕ ವಿವರಗಳು ಇಲ್ಲಿ ನಮೂದಾಗಿವೆ. ಇಲ್ಲಿ ಬಳಸಲಾಗಿರುವ ಛಾಯಾಚಿತ್ರಗಳು ಪುಸ್ತಕದ ಸೌಂದರ್ಯವನ್ನು ಹೆಚ್ಚಿಸಿವೆ. ಮುಖಪುಟದ ಚಿತ್ರವಂತೂ ನೀಲಗಿರಿ ಎಂಬ ಹೆಸರಿಗೆ ಅನ್ವರ್ಥಕವಾಗಿದೆ. ಒಳಗಿನ ಛಾಯಾಚಿತ್ರಗಳೂ ಪಠ್ಯಕ್ಕೆ ಪೂರಕವಾಗಿರುವುದರ ಜೊತೆಗೆ ಸ್ವವಿವರಣಾತ್ಮಕವಾಗಿವೆ.

ಮುಖ್ಯ ಪಠ್ಯದ ನಡುವೆ ಅಲ್ಲಲ್ಲಿ ಟಿಪ್ಪಣಿಯ ರೂಪದಲ್ಲಿ ದಾಖಲಾಗಿರುವ ಜಾನಪದ ಕಥೆಗಳು, ಆಚರಣೆಯ ವೈಶಿಷ್ಟ್ಯಗಳು ಕೃತಿಯ ಮಹತ್ವವನ್ನು ಹೆಚ್ಚಿಸಿವೆ. ಇತಿಹಾಸವು ಕಳೆದ ಕಾಲದಲ್ಲಿ ಘಟಿಸಿದ ವಾಸ್ತವ ವಿಚಾರಗಳು. ಯಾವುದೇ ಸಮಾಜಕ್ಕೆ ಇತಿಹಾಸವಿರುತ್ತದೆ; ವರ್ತಮಾನವಿರುತ್ತದೆ; ಭವಿಷ್ಯವೂ ಇರುತ್ತದೆ. ಅವು ಒಂದನ್ನೊಂದು ಬಿಟ್ಟಿರಲು ಸಾಧ್ಯವಿಲ್ಲ. ಇತಿಹಾಸದಲ್ಲಿ ವರ್ತಮಾನ ಮುಖ್ಯವಲ್ಲ. ಭವಿಷ್ಯವನ್ನು ರೂಪಿಸುವುದೇ ಭೂತದ ಹಿನ್ನೆಲೆಯಲ್ಲಿ ಬೆಳೆದ ವರ್ತಮಾನ. ಈ ಅರಿವು ಇಲ್ಲದಿದ್ದರೆ ಯಾವುದೇ ಪ್ರದೇಶದ, ಯಾವುದೇ ಪಂಗಡದ, ಯಾವುದೇ ಕುಟುಂಬದ, ಯಾವುದೇ ವ್ಯಕ್ತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಪರಿಚಯ ಆಗುವುದಿಲ್ಲ. ಈ ಮಾತುಗಳ ಹಿನ್ನೆಲೆಯಲ್ಲಿ ಪರಂಜ್ಯೋತಿ ಅರ್ಥಾತ್ ಕೆ. ಪಿ. ಸ್ವಾಮಿ ಅವರ 'ನೀಲಗಿರಿ : ಸಾಮಾಜಿಕ ಸಾಂಸ್ಕೃತಿಕ ಕಣ್ನೋಟ' ಕೃತಿಯು ಸಮಾಜಶಾಸ್ತ್ರೀಯ ಅಧ್ಯಯನಕ್ಕೊಂದು ಆಕರ ಗ್ರಂಥವಾಗಿ ದೊರೆತಿದೆ.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ. ವೈ. ಡಿ. ೨ನೇ ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩

# ಹೊಸ ಪ್ರಕಟಣೆಗಳು















































## ಸಾಹಿತ್ಯ ಅಕಾದೆಮಿ

**ದಕ್ಷಿಣ ಪ್ರಾದೇಶಿಕ ಕಛೇರಿ, ಸೆಂಟ್ರಲ್ ಕಾಲೇಜ್ ಆವರಣ**
**ಡಾ. ಬಿ. ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560 001**
**ದೂ : 22245152 / ಫ್ಯಾಕ್ಸ್ : 22121932**
**email : sahityakademi@gmail.com**







ಡಾ॥ ರಾಮಲಿಂಗಪ್ಪ ಟಿ. ಬೇಗೂರು

# ಕುವೆಂಪು ನಾಟಕಗಳಲ್ಲಿ ಪ್ರಮಾಣ ನಿರಾಕರಣೆಯ ನೆಲೆಗಳು

ಪ್ರಮಾಣ ಎಂದರೇನು ಎಂಬ ಬಗ್ಗೆ ಮೊದಲಿಗೆ ಒಂದೆರಡು ಪ್ರಾಥಮಿಕ ಸಂಗತಿಗಳನ್ನು ತಿಳಿದುಕೊಂಡು ಅನಂತರ ಈ ಬಗ್ಗೆ ಮಾತನಾಡೋಣ. ಪ್ರಮೆ ಎಂದರೆ ಯಥಾರ್ಥ ಜ್ಞಾನ. ಅದನ್ನು ಉಂಟುಮಾಡುವ ಜ್ಞಾನವೆ ಪ್ರಮಾಣ. ಅಂದರೆ ವಾಸ್ತವದಲ್ಲಿ ಜ್ಞಾನವನ್ನು ಉಂಟುಮಾಡುವ ಸಾಧನವೆ ಪ್ರಮಾಣ. ಇದೆ ನಿಜ, ಸತ್ಯ ಮತ್ತು ಸರಿ; ಇದನ್ನು ನಂಬು ಮತ್ತು ಅನುಸರಿಸು ಎಂದು ಸೂಚಿಸುವ ಮತ್ತು ನಂಬಿಸುವ ಸಲಕರಣೆಗಳೇ ಪ್ರಮಾಣಗಳು. ಲೋಕರಚನೆಯ ಬಗ್ಗೆ, ಸಮಾಜ ವ್ಯವಸ್ಥೆಯ ಬಗ್ಗೆ ಮನುಷ್ಯರಲ್ಲಿ ಕೆಲವು ತಿಳಿವುಗಳನ್ನು ಉಂಟುಮಾಡುವ ಸಂಗತಿಗಳನ್ನೆ ಪ್ರಮಾಣಗಳು ಎನ್ನಬಹುದು. ನಮ್ಮ ಗ್ರಹಿಕೆಗಳನ್ನು, ನಂಬಿಕೆಗಳನ್ನು ರೂಪಿಸುವ ಮತ್ತು ಆ ಮೂಲಕ ನಮ್ಮ ತಿಳುವಳಿಕೆ ಮತ್ತು ನಡವಳಿಕೆಗಳನ್ನು ನಿಯಂತ್ರಿಸುವ ಯಾವುದೇ ರೀತಿಯ ಸಾಧನಗಳನ್ನು ಪ್ರಮಾಣಗಳು ಎನ್ನಬಹುದು.

ಸಾವಿರಾರು ವರ್ಷಗಳಿಂದ ನಮ್ಮ ಅನೇಕ ದರ್ಶನಗಳು, ತತ್ವಜ್ಞಾನಗಳು ಜನಸಮುದಾಯದ ಆಚಾರಗಳನ್ನು ನಿರಂತರ ರೂಪಿಸುತ್ತ ಬರುತ್ತಿವೆ. ಹಾಗೆ ರೂಪಿಸುವಲ್ಲಿ ತಮ್ಮದೆ ನಿರ್ದಿಷ್ಟ ಲೋಕಗ್ರಹಿಕೆಗಳನ್ನು ನಂಬಿಸುತ್ತ , ಸ್ಥಾಪಿಸುತ್ತ ಬಂದಿವೆ. ಹಾಗೆ ಮಾಡುವಾಗ ಧರ್ಮ, ದೇವರು, ಸ್ವರ್ಗ, ನರಕ, ವಿಧಿ, ಆತ್ಮ, ಬ್ರಹ್ಮಸೃಷ್ಟಿ, ಗ್ರಹಚಾರ ಇತ್ಯಾದಿ ನಂಬಿಕೆಗಳನ್ನು ಉತ್ಪಾದಿಸುತ್ತ ಲೋಕಘಟನೆ, ಲೋಕರಚನೆಗಳ ಕಾರಣ-ಪರಿಣಾಮಗಳನ್ನು ವಿವರಿಸುತ್ತಲೂ ಮತ್ತು ಭೂತ ಭವಿಷ್ಯತ್ತುಗಳನ್ನು ತಮ್ಮದೆ ಬಗೆಯಲ್ಲಿ ನಂಬಿ, ನಂಬಿಸುತ್ತಲೂ ಬಂದಿವೆ. ಇಂತಹ ಕ್ರಿಯೆಯ ಹಿಂದೆ ಕೆಲವೊಮ್ಮೆ ಜನನಂಬಿಕೆಯನ್ನು ತಮ್ಮ ತಮ್ಮ ಸಮುದಾಯದ ಅನುಕೂಲಕ್ಕೆ ತಕ್ಕಂತೆ ಕೆಲವೊಮ್ಮೆ ತಮ್ಮ ತಮ್ಮ ಜ್ಞಾನ, ತಿಳುವಳಿಕೆಯ ಮಿತಿಗೆ ಅನುಸಾರವಾಗಿ ಉತ್ಪಾದಿಸುವ



ಕುಲದ ಕಾರಣಕ್ಕೆ ಶಿಕ್ಷಣ ವಂಚಿತರಾದ ಎರಡು ಪುರಾಣ ಪಾತ್ರಗಳೆಂದರೆ ಏಕಲವ್ಯ ಮತ್ತು ಕರ್ಣ. ಬೆರಳ್‌ಗೆ ಕೊರಳ್‌ನಲ್ಲಿ ಏಕಲವ್ಯನಿಗೆ ವಿದ್ಯೆ ಕಲಿಸಲು ದ್ರೋಣ ನಿರಾಕರಿಸುವುದಿಲ್ಲ. ಅಲ್ಲಿ ಅಶ್ವತ್ಥಾಮನ ಓರಗೆಯವನಾಗಿ ಏಕಲವ್ಯ ದ್ರೋಣನ ಮನೆಯಲ್ಲೆ ವಿದ್ಯೆ ಕಲಿಯುತ್ತಾನೆ. ಹಾಗೆಯೇ ಕಾನೀನದಲ್ಲಿ ಕರ್ಣನನ್ನು ಪರಶುರಾಮ ಸೂತನೆಂದೇ ಭಾವಿಸುತ್ತಾನೆ ಮತ್ತು ಅವನಿಗೆ ಕೊನೆಯಲ್ಲಿ ಕಲಿತ ವಿದ್ಯೆಯೆಲ್ಲ ಮರೆತುಹೋಗಲಿ ಎಂದು ಶಾಪ ನೀಡುವುದಿಲ್ಲ. ಇಂತಹ ದೊಡ್ಡ ಬದಲಾವಣೆಗಳ ಮೂಲಕ ಈ ನಾಟಕಗಳು ಉನ್ನತ ಮಟ್ಟದ ಗುರುಕಲ್ಪನೆಯನ್ನು ಕಟ್ಟಿಕೊಡುತ್ತವೆ. ಬೆರಳ್‌ಗೆ ಕೊರಳ್ ಪ್ರಕಾರ ದ್ರೋಣ ಏಕಲವ್ಯನ ಬೆರಳನ್ನು ಕೇಳುವುದು ತನ್ನ ವಚನವನ್ನು ಉಳಿಸಿಕೊಳ್ಳಲಿಕ್ಕಾಗಿ ಮತ್ತು ಅದು ವಿಧಿನಿಯಾಮಕ. ಆತ ತನ್ನ ಕೊರಳನ್ನು ಕಳೆದುಕೊಳ್ಳುವುದು ಕೂಡ ವಿಧಿಯಿಂದ. ಹಲವು ಪ್ರಮಾಣಗಳನ್ನು ಒಡೆಯುವ ಕುವೆಂಪು ನಾಟಕಗಳು ವಿಧಿ, ಪುನರ್ಜನ್ಮ, ಕರ್ಮಫಲ ಇತ್ಯಾದಿ ನಿರರ್ಥಕ ಪ್ರಮಾಣಗಳನ್ನು ಪ್ರತಿಪಾದಿಸುತ್ತವೆ ಕೂಡ. ಪರಂಪರೆಯ ಅನೇಕ ಪ್ರಮಾಣಗಳನ್ನು ಒಡೆಯುವ ಇವರ ನಾಟಕಗಳನ್ನು ಓದುವಾಗ ಇಂತಹ ಕೆಲವು ನಿರರ್ಥಕ ಪ್ರಮಾಣಗಳನ್ನು 'ಕುವೆಂಪು ಹೇಳಿದ್ದಾರೆ' ಎಂಬ ಕಾರಣಕ್ಕೆ ಒಪ್ಪಬೇಕು ಎಂದೇನಿಲ್ಲ.

ಕೆಲಸವನ್ನು ಇವು ಮಾಡುತ್ತ ಬಂದಿವೆ. ಅವುಗಳೆಲ್ಲವೂ ಕೆಲವೊಮ್ಮೆ ವಾಸ್ತವ ಎಂಬಂತೆ ತೋರುತ್ತವೆಯಾದರೂ ಅವು ವರ್ಗಪಕ್ಷಪಾತಿ ಆಗಿಯೂ, ತಾರತಮ್ಯವಾದಿ ಆಗಿಯೂ ಇರಬಲ್ಲುವು. ಇಂತಹ ಕೆಲವು ಪ್ರಮಾಣಗಳನ್ನು ಕುವೆಂಪು ನಾಟಕಗಳಲ್ಲಿ ನಂಬಿ ಪ್ರತಿಪಾದಿಸುವಂತೆ ಕಾಣುತ್ತದೆ. ಕೆಲವನ್ನು ನಿರಾಕರಿಸಿ ಹೊಸ ಬಗೆಯ ತಿಳಿವನ್ನು ಪ್ರತಿಪಾದಿಸಿರುವುದೂ ಕಾಣುತ್ತದೆ.

ವೈದಿಕ – ಮೀಮಾಂಸಾ ದರ್ಶನ (ಪೂರ್ವಮೀಮಾಂಸೆ–ವೇದ : ಉತ್ತರ ಮೀಮಾಂಸಾ–ಉಪನಿಷತ್ತು) ಮತ್ತು ಕುಮಾರಿಲ ಪಂಥಗಳು ೬ ಬಗೆಯ ಪ್ರಮಾಣಗಳು ಇವೆ ಎನ್ನುತ್ತವೆ. ಅವುಗಳೆಂದರೆ : ೧. ಪ್ರತ್ಯಕ್ಷ ಪ್ರಮಾಣ, ೨. ಅನುಮಾನ ಪ್ರಮಾಣ, ೩. ಉಪಮಾನ ಪ್ರಮಾಣ, ೪. ಶಬ್ದ ಪ್ರಮಾಣ, ೫. ಅರ್ಥಾಪತ್ತಿ ಪ್ರಮಾಣ, ೬. ಅನುಪಲಬ್ಧಿ ಪ್ರಮಾಣ. ಸಾಂಖ್ಯ, ವೈಶೇಷಿಕ ಮತ್ತು ಜೈನ ದರ್ಶನಗಳು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಪ್ರಮಾಣಗಳನ್ನು ಒಪ್ಪುತ್ತವೆ. ಜೈನವು ಅನಾತ್ಮವಾದಿಯೂ, ಅನೇಕಾಂತವಾದಿ (ಸ್ಯಾದ್ವಾದಿ)ಯೂ ಆಗಿದೆ. ನ್ಯಾಯ ದರ್ಶನವು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದಪ್ರಮಾಣ ಈ ನಾಲ್ಕನ್ನು ಒಪ್ಪುತ್ತದೆ. ಚಾರ್ವಾಕ (ಲೋಕಾಯತ)ವು ಈ ಯಾವ ಪ್ರಮಾಣಗಳನ್ನೂ ಒಪ್ಪುವುದಿಲ್ಲ. ಅದು ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ಒಪ್ಪುತ್ತದೆ. ಬೌದ್ಧವು ನೈರಾತ್ಮವಾದ, ವಿಜ್ಞಾನವಾದ, ಶೂನ್ಯವಾದಗಳನ್ನು ಮಂಡಿಸುತ್ತದೆ. ಆದರೆ ಮಿಕ್ಕ ಯಾವ ಪ್ರಮಾಣಗಳನ್ನೂ ಒಪ್ಪುವುದಿಲ್ಲ.

ಅನುಭವವನ್ನು ಆಧರಿಸಿದ ನಂಬಿಕೆಯೆ ಅಂದರೆ ಸ್ಮೃತಿ ಮತ್ತು ಸ್ವಾನುಭವಗಳನ್ನು ಆಧರಿಸಿದ ನಂಬಿಕೆಯೆ ಪ್ರತ್ಯಕ್ಷ ಪ್ರಮಾಣ. ಇದರಲ್ಲಿ ಇಂದ್ರಿಯಗಮ್ಯ, ಜ್ಞಾನಗಮ್ಯ ಮತ್ತು ಯೋಗದೃಷ್ಟಿ (ಯೋಗಿಗಳ ಜ್ಞಾನ) ಎಂದು ಮೂರು ಬಗೆ. ಪ್ರತ್ಯಕ್ಷವಲ್ಲದ್ದನ್ನು ಊಹಿಸಿ, ತರ್ಕಿಸಿ ಸಿದ್ಧಮಾಡುವುದು ಅನುಮಾನ ಪ್ರಮಾಣ. ಅಂದರೆ ಹೊಗೆ ಕಾಣುತ್ತಿದೆ, ಆದ್ದರಿಂದ ಬೆಂಕಿ ಇದೆ ಅಥವಾ ಮೋಡ ಆಡುತ್ತಿದೆ ಆದ್ದರಿಂದ ಮಳೆ ಬರುತ್ತದೆ ಎಂದು ನಂಬುವುದು ಅನುಮಾನ ಪ್ರಮಾಣ. ಯಾವುದಾದರೂ ಸಂಗತಿಗಳನ್ನು ಹೋಲಿಕೆಯ ಮೂಲಕ ತಿಳಿಯುವುದು ಸಾದೃಶ್ಯ ಪ್ರಮಾಣ. ವೇದ, ಉಪನಿಷತ್ತು ಅಥವಾ ಯಾವುದೇ ಬಗೆಯ ಹಿರಿಯರ ಮಾತು, ನುಡಿರಚನೆಗಳ ಮೊತ್ತವನ್ನು ಶಬ್ದಪ್ರಮಾಣ ಎನ್ನಲಾಗುತ್ತದೆ. ಎಲ್ಲ ಜಾತಿ, ಧರ್ಮಗಳಲ್ಲೂ ಅವರದ್ದೆ ಆದ ಸಾಹಿತ್ಯ ಇರುತ್ತದೆ. ಇದೆಲ್ಲವೂ ಶಬ್ದಪ್ರಮಾಣಗಳೆ. ಈ ಶಬ್ದಪ್ರಮಾಣಗಳನ್ನು ದೈವವಾಕ್ಕು (ವೇದ), ಲೋಕವಾಕ್ಕು (ಆಪ್ತರ ಮಾತು) ಎಂದು ಎರಡು ಬಗೆಯಾಗಿ ವಿಂಗಡಿಸಲಾಗುತ್ತದೆ.

ಬೌದ್ಧವು ನೈರಾತ್ಮವಾದಿ ಆಗಿದ್ದು ಶೂನ್ಯವಾದ ಅಥವಾ ಮಾಧ್ಯಮಿಕ ವಾದವನ್ನು ಪ್ರತಿಪಾದಿಸುತ್ತದೆ. ಶಬ್ದಪ್ರಮಾಣಗಳನ್ನು ಇದು ನಂಬುವುದಿಲ್ಲ. ಅತಿಯತಿಯೂ ಅಲ್ಲದ ಅತಿಭೋಗಿಯೂ ಅಲ್ಲದ ಮಧ್ಯಮ ಮಾರ್ಗವೆ ಮಾಧ್ಯಮಿಕವಾದ. ಶೂನ್ಯತತ್ವವನ್ನು ಇದು ಅವಲಂಬಿಸಿದೆ. ಶೂನ್ಯತತ್ವ ಎಂದರೆ ಏನೂ ಇಲ್ಲದ್ದು ಎಂದಲ್ಲ, ವರ್ಣನೆಗೆ ನಿಲುಕದ್ದು ಎಂದರ್ಥ. ಶೂನ್ಯ ಎಂಬುದು ಭಾವವೂ ಅಲ್ಲ, ಅಭಾವವೂ ಅಲ್ಲ; ಅನಿರ್ವಚನೀಯ. ವಸ್ತುನಿರ್ಣಯವು (ಲೋಕಸಂಗತಿಯು) ಅಸ್ತಿ (ಅಂದರೆ ಇದೆ) ಮತ್ತು ತದ್ ಉಭಯ (ಅಂದರೆ ಇಲ್ಲ) ಹಾಗೂ ನ ಅಸ್ತಿ, ನಚನಾಸ್ತಿ (ಅಂದರೆ ಇದೆ ಮತ್ತು ಇಲ್ಲ ಎಂಬ ಎರಡೂ ಅಲ್ಲದ್ದು) ಎಂಬ ಮೂರೂ ಬಗೆಯಲ್ಲಿ ಇರುತ್ತದೆ. ಆದರೆ ಅಂತಿಮವಾಗಿ ಲೋಕಸಂಗತಿಯು ಅನಿರ್ವಚನೀಯ ಆದುದು ಎಂದೆ ಶೂನ್ಯವಾದ ಪ್ರತಿಪಾದಿಸುತ್ತದೆ.

ಕುವೆಂಪು ನಾಟಕಗಳ ವೈಚಾರಿಕತೆ ಈ ಯಾವ ಶಬ್ದಪ್ರಮಾಣಗಳನ್ನೂ ಸಂಪೂರ್ಣವಾಗಿ ಒಪ್ಪುವುದಿಲ್ಲ. ಆದರೆ ಇಲ್ಲಿ ನೈರಾತ್ಮವಾದಿ ತಿಳುವಳಿಕೆ ಇಲ್ಲ. ಆತ್ಮವಾದಿ, ವಿಧಿವಾದಿ, ಪ್ರಕೃತಿವಾದಿ ಮತ್ತು ಬ್ರಹ್ಮವಾದಿ ತಿಳುವಳಿಕೆಗಳಿವೆ. ವೈದಿಕದ ಕೆಲವು ನಂಬಿಕೆಗಳಾದ ವಿಧಿ, ಕರ್ಮಫಲ, ಪುನರ್ಜನ್ಮ, ಆತ್ಮ, ಪರಮಾತ್ಮ, ಯೋಗದೃಷ್ಟಿ ಇತ್ಯಾದಿಗಳನ್ನು ನಂಬುವ ಮತ್ತು ಪ್ರತಿಪಾದಿಸುವ ಬರವಣಿಗೆ ಇಲ್ಲಿದೆ. ಪ್ರಾಚೀನ ಶಬ್ದ ಪ್ರಮಾಣಗಳನ್ನು ಇಡಿಯಾಗಿ ಒಪ್ಪದ ಮತ್ತು ಇಡಿಯಾಗಿ ನಿರಾಕರಿಸದ ದೃಷ್ಟಿ ಇಲ್ಲಿದೆ. ನಮ್ಮ ಹಳೆಯ ಚಿನ್ನದ ಒಡವೆಯನ್ನು ಅದು ಹಳೆಯದು ಎಂಬ ಕಾರಣಕ್ಕೆ ಬಿಸಾಡದೆ ಹೊಸ ಕಾಲಕ್ಕೆ ತಕ್ಕಂತೆ ಅದನ್ನು ಮುರಿಸಿ ಬೇರೆ ರೀತಿಯಲ್ಲಿ ಮಾಡಿಸಿಕೊಳ್ಳುವ ಹಾಗೆ ನಮ್ಮ ಸಂಪ್ರದಾಯಗಳನ್ನೂ (ಶಬ್ದಪ್ರಾಣಗಳನ್ನು ಮತ್ತು ಅವು ಉಂಟುಮಾಡುವ ಯಥಾರ್ಥ ಜ್ಞಾನವನ್ನೂ) ಮುರಿದು ಕಟ್ಟಿಕೊಳ್ಳಬೇಕು ಎಂಬ ನಂಬುಗೆಯನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಅದ್ವೈತ ತತ್ವ, ಅಖಂಡತೆ, ಪೂರ್ಣತತ್ವ, ಸರ್ವೋದಯ, ವಿಶ್ವಮಾನವತೆ ಈ ತತ್ವಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಈ ನೆಲೆಯಲ್ಲಿ ತಾತ್ವಿಕವಾಗಿ ಕುವೆಂಪು ಚಿಂತನೆಯನ್ನು ವೈದಿಕ ಮಧ್ಯಮವಾದ ಎನ್ನಬಹುದು.

**ಶಬ್ದಪ್ರಮಾಣ ನಿರಾಕರಣೆ**

ಯಾವುದೇ ಪುರಾಣ ಅಥವಾ ಸಾಹಿತ್ಯ ನಿರೂಪಣೆಯನ್ನು ಇವರ ನಾಟಕಗಳು ಚರಿತ್ರೆಯ ದಸ್ತಾವೇಜು ಎಂದು ಭಾವಿಸುವುದಿಲ್ಲ. ಅವು ಎಲ್ಲ ಕಾಲಕ್ಕೂ ಸಲ್ಲುವ ವ್ಯಕ್ತಿಯ ಅಥವಾ ಸಮುದಾಯದ ಸಂವಿಧಾನ ಕೂಡ ಅಲ್ಲ ಎಂಬುದು ಇಲ್ಲಿನ ನಿಲುವು. ವೇದ, ಶಾಸ್ತ್ರ, ಮಹಾಕಾವ್ಯ ಯಾವುದೇ ಇರಲಿ ಅದರಲ್ಲಿ ಅಸಮಾನತೆ, ವರ್ಗತಾರತಮ್ಯ ಇದ್ದಲ್ಲಿ ಅದನ್ನು ಮರುಪರಿಶೀಲನೆಗೆ ಗುರಿಪಡಿಸಬೇಕು; ಯಾವುದೇ ಶಾಬ್ದಿಕ ರಚನೆಯನ್ನು ಅಪೌರುಷೇಯವೆಂದೊ, ದೈವವಾಣಿ ಎಂದೊ, ಪವಿತ್ರವೆಂದೊ, ಪ್ರಶ್ನಾತೀತವೆಂದೊ ಸಂಪೂರ್ಣವಾಗಿ ಒಪ್ಪಕೂಡದು; ವೇದವಾಗಿರಲಿ, ಶಾಸ್ತ್ರವಾಗಿರಲಿ ಎಲ್ಲವೂ ಮನುಷ್ಯ ರಚನೆ : ಅವನ್ನು ರಚಿಸಿರುವ ವ್ಯಕ್ತಿಗಳು ಸೇರಿದ ವರ್ಗ ಮತ್ತು ಕಾಲದ ಅನುಕೂಲಕ್ಕೆ ಮತ್ತು ಹಿತಾಸಕ್ತಿಗೆ ಅವು ನಿರ್ಮಾಣ ಆಗಿರುತ್ತವೆ. ಹಾಗಾಗಿ ಪವಿತ್ರ ಎಂದು ನಂಬಿಸಲಾಗಿರುವ ಎಲ್ಲ ಪಠ್ಯಗಳನ್ನೂ ಕಾಲಕಾಲಕ್ಕೆ ಮರುಪರಿಶೀಲನೆಗೆ, ಪರಿಷ್ಕರಣಕ್ಕೆ ಗುರಿಮಾಡಬೇಕು ಮತ್ತು ಅವು ಸಾಗಿಸುವ ಸಾಂಸ್ಕೃತಿಕ ರಾಜಕಾರಣ ಇಲ್ಲವೆ ಯಥಾಸ್ಥಿತಿವಾದಿ ರಾಜಕಾರಣವನ್ನು ಒಡೆಯಬೇಕು ಎಂಬುದು ಇವರ ನಾಟಕಗಳ ನಿಲುವು. ಈ ಹಿನ್ನೆಲೆಯಲ್ಲಿ ಕುವೆಂಪು ನಾಟಕಗಳು ಶಬ್ದ ಪ್ರಮಾಣದ ನಿರಾಕರಣೆಗಳು ಎನ್ನಬಹುದು.

ಇವರ ಶೂದ್ರತಪಸ್ವಿ, ಬೆರಳ್‌ಗೆ ಕೊರಳ್, ಕಾನೀನ ಈ ಯಾವ ನಾಟಕಗಳೂ ಪುರಾಣದ ಗಿಳಿಪಾಠಗಳಲ್ಲ. ಇವೆಲ್ಲವನ್ನೂ ಕುವೆಂಪು ವರ್ತಮಾನದ ಅಗತ್ಯಕ್ಕೆ

ತಕ್ಕಂತೆ ಮಾರ್ಪಡಿಸಿದ್ದಾರೆ. ಅಲ್ಲದೆ ಈಗಾಗಲೆ ಇರುವ ಪುರಾಣ ಪಠ್ಯದ ಎದುರು ನಿರ್ಮಿತವಾಗಿರುವ ಪ್ರತಿಪಠ್ಯಗಳಿವು. ಚಂದ್ರಹಾಸ, ವಾಲ್ಮೀಕಿಯ ಭಾಗ್ಯ, ಮಹಾರಾತ್ರಿ, ಯಮನ ಸೋಲು ನಾಟಕಗಳು ಕೂಡ ಪ್ರತಿಪಠ್ಯ ನಿರ್ಮಾಣಗಳೇ. ನಿರ್ದಿಷ್ಟ ದರ್ಶನಧ್ವನಿ ಶರೀರಗಳಂತೆ, ನಿರ್ದಿಷ್ಟ ವೈಚಾರಿಕ ಪ್ರತಿಮೆಗಳಂತೆ ಈ ಪಠ್ಯಗಳನ್ನು ನಿರ್ಮಿಸಲಾಗಿದೆ. ಇನ್ನು ಇವರ ಸ್ಮಶಾನ ಕುರುಕ್ಷೇತ್ರ, ನನ್ನ ಗೋಪಾಲ, ಬಲಿದಾನ, ಜಲಗಾರ, ಮೋಡಣ್ಣನ ತಮ್ಮ ನಾಟಕಗಳು ವರ್ತಮಾನದ ಪುರಾಣೀಕರಣಗಳೆ ಆಗಿವೆ. ನವಪುರಾಣ ನಿರ್ಮಾಣಗಳೆಂದೂ ಇವನ್ನು ಕರೆಯಬಹುದು. ಇಲ್ಲೆಲ್ಲ ಈಗಾಗಲೆ ಇರುವ ಸ್ಥಾಪಿತ ಸಂಕಥನಗಳನ್ನು ನಿರಾಕರಿಸುವ ಮತ್ತು ತಮ್ಮದೆ ತತ್ವಶರೀರವನ್ನು ನಿರ್ಮಿಸುವ ಕೆಲಸವನ್ನು ನೋಡಬಹುದು. ಇವರ ಎಲ್ಲ ನಾಟಕಗಳೂ ಈ ಹಿನ್ನೆಲೆಯಲ್ಲಿ ಶಬ್ದಪ್ರಮಾಣಗಳ ನಿರಾಕರಣೆಗಳೆ. ಹಾಗೆಯೇ ಹೊಸ ಶಬ್ದಪ್ರಮಾಣಗಳ ನಿರ್ಮಾಣಗಳೆ.

**ಲೋಕಾಕಾರ ಪ್ರಮಾಣ ನಿರಾಕರಣೆ**

ಲೋಕರಚನೆ, ಸಮಾಜರಚನೆಯ ಬಗೆಗೆ ನಮ್ಮಲ್ಲಿ ಈಗಾಗಲೆ ಕೆಲವು ನಂಬಿಕೆಗಳನ್ನು ಜಾರಿಗೊಳಿಸಲಾಗಿದೆ ಮತ್ತು ಅವನ್ನು ಬದಲಿಸದಂತೆ ಕೆಲವು ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ನಮ್ಮ ಸಮಾಜವು ವರ್ಣಪದ್ಧತಿಯಿಂದ ಕೂಡಿದೆ, ಇದನ್ನು ಮಾಡಿರುವವನು ದೇವರೆ. ಮಾನವರನ್ನು ಸೃಷ್ಟಿಸುವಾಗ ದೇವರು ಕೆಲವರನ್ನು ತನ್ನ ಮುಖದಿಂದಲೂ ಕೆಲವರನ್ನು ತನ್ನ ಭುಜ ಗಳಿಂದಲೂ, ಪಾದದಿಂದಲೂ ಸೃಷ್ಟಿಸಿದ್ದಾನೆ. ಇಂತಹ ವಿಧಿಸಲಾದ ಮತ್ತು ಬದಲಿಸಲಾಗದ ಕಟ್ಟುಪಾಡುಗಳಲ್ಲಿ ನಮ್ಮ ಸಮಾಜವನ್ನು ಬಂಧಿಸಿರುವುದನ್ನು ಕುವೆಂಪು ನಾಟಕಗಳು ವಿರೋಧಿಸುತ್ತವೆ. ಲೋಕದ ರಚನೆಯ ಬಗ್ಗೆ ವಿಜ್ಞಾನ ನೀಡಿರುವ ತಿಳುವಳಿಕೆಯ ಮೇಲೆ ಪುರಾಣವು ಸವಾರಿ ಮಾಡುವುದನ್ನು ಮತ್ತು ಅದೇ ಅಂತಿಮ ಸತ್ಯವೆಂದು ನಂಬಿಸುವ ಆಚಾರಗಳನ್ನು ಇಲ್ಲಿ ನಿರಾಕರಿಸಲಾಗಿದೆ. ವರ್ಣ, ಕುಲ, ಜಾತಿಪದ್ಧತಿಗಳ ನಿರಾಕರಣೆ ಇಲ್ಲಿ ಮುಖ್ಯವಾದುದು. 'ಜಾತಿಗರ್ವಾಂಧತೆ' ಮತ್ತು 'ಶಾಸ್ತ್ರ ಸಂಮೂಢತೆ'ಗಳ ನಿರಾಕರಣೆ; ವೃತ್ತಿ ಆಧಾರಿತ ಶ್ರೇಣೀಕರಣದಲ್ಲೆ ಸಮಾಜವನ್ನು ಗ್ರಹಿಸುವುದರ ನಿರಾಕರಣೆ ಇಲ್ಲಿದೆ.

ಕೆಲವು ಜಾತಿಗಳಲ್ಲಿ ಹುಟ್ಟಿದರೆ ಸಾಕು ಗುಣವೂ, ಸಂಸ್ಕಾರವೂ, ಜ್ಞಾನವೂ ರಕ್ತಗತವಾಗಿ ಬಂದುಬಿಡುತ್ತದೆ ಎಂದು ನಮ್ಮಲ್ಲಿ ಜೋರಾಗಿ ನಂಬಿಸಲಾಗಿದೆ. ಈ ಮೂಲಕ ಸಾವಿರಾರು ವರ್ಷಗಳಿಂದ ಜನರನ್ನು ಕೆಲವು ಜಾತಿಗಳಿಗೆ ಗೌರವ ಕೊಡುವಂತೆ ತಯಾರು ಮಾಡುತ್ತಲೂ ಬರಲಾಗಿದೆ. ಜ್ಞಾನ, ಗುಣ, ಸಾಮರ್ಥ್ಯಗಳು ನಿರಂತರ ಕಲಿಕೆ, ಪರಿಶ್ರಮಗಳಿಂದ ಒದಗುವಂತಹವು, 'ಕುಲವು ಜನನದೊಳಿಲ್ಲ ಗುಣದೊಳಿಹುದು' ಎಂಬುದು ಇಲ್ಲಿನ ತತ್ವ. "ಶೂದ್ರರೊಳ್ ಕವಿವರ್ಯರುದಿಸುವರೆ? ಹುಟ್ಟುವರೆ ಪಂಡಿತರ್? ಜನಿಸುವರೆ ಶಿಲ್ಪಿಗಳ್? ಗಾಯಕರ್, ಯೋಗಿಗಳ್?" ಎಂಬ ಮಾತು ಜಲಗಾರದಲ್ಲಿ ಬರುತ್ತದೆ. ಕೆಲವು ಜಾತಿಗಳಲ್ಲಿ ಇಂಥವರು ಹುಟ್ಟಲು ಸಾಧ್ಯವಿಲ್ಲ ಎಂಬ ನಂಬಿಕೆಯನ್ನು ಸಾವಿರಾರು ವರ್ಷಗಳಿಂದ ಅದು ಸುಳ್ಳೆಂದು ಗೊತ್ತಿದ್ದು ನಂಬಿಸುತ್ತ ಬರಲಾಗಿದೆಯಲ್ಲ! "ಹಾಲನು ಮಾರುವ ಹೆಣ್ಣುಗಳೊಲ್ಮೆಯೆ ಮೀರದೆ ಯೋಗಿಯ ಸಾಧನೆಯ?" ಎಂಬ ಮಾತು ನನ್ನ ಗೋಪಾಲದಲ್ಲಿ ಬರುತ್ತದೆ. ತಪಸ್ವಿಗಳು, ಯೋಗಿಗಳು ಪಡೆದ ತಿಳುವಳಿಕೆ ಮೇಲು ಮತ್ತು ಒಬ್ಬ ಸಾಮಾನ್ಯ ಹಾಲು ಮಾರುವ ಮಹಿಳೆಯ ಲೋಕಪ್ರೀತಿ ಕೀಳು ಎಂದು ನಮ್ಮನ್ನು ನಂಬಿಸುತ್ತ ಬರಲಾಗಿದೆಯಲ್ಲ! ಶಾಸ್ತ್ರ, ತಂತ್ರ ಬಲ್ಲವರು ಮೇಲು ಕೃಷಿ, ಹೈನು ಬಲ್ಲವರು ಕೀಳು ಎಂದು ನಂಬಿಸಲಾಗಿದೆಯಲ್ಲ! ವೈಟ್ ಕಾಲರ್ ಮತ್ತು ಬ್ಲೂ ಕಾಲರ್ ಎಂದು ಸಮಾಜವನ್ನು ತರತಮವಾಗಿ ನೋಡುವ ದೃಷ್ಟಿ ಈಗಲೂ ಇದೆಯಲ್ಲ! ಸಮಾಜವನ್ನು ನಾವು ಅರ್ಥಮಾಡಿಕೊಳ್ಳುವಾಗ ಅಲ್ಲಿನ ತಾರತಮ್ಯ ಧೋರಣೆ ಮತ್ತು ಮೌಢ್ಯಗಳನ್ನು ಗ್ರಹಿಸದೆ ಹೋದರೆ ಧರ್ಮದ, ದೇವರ ಹೆಸರಿನಲ್ಲಿ ಅಸಮಾನತೆ, ಶೋಷಣೆಗಳನ್ನೇ ದೈವನಿಯಾಮಕ ಎಂದು ನಂಬುವ ಮತ್ತು ನಂಬಿಸುವ ಕೆಲಸವನ್ನು ನಾವು ಮಾಡುತ್ತಿರುತ್ತೇವೆ. ಅದು ಕೂಡದು ಎಂಬುದು ಈ ನಾಟಕಗಳ ತಾತ್ವಿಕತೆ.

ರಾಮಾಯಣವನ್ನು ಕುವೆಂಪು ತಿದ್ದಿ ಕೆಡಿಸಿದ್ದಾರೆ, ಪುರಾಣವನ್ನು ಅಗೌರವಿಸಿದ್ದಾರೆ ಎಂಬ ಕೂಗು ಈ ಮೊದಲೆ ಕನ್ನಡ ವಿಮರ್ಶೆಯಲ್ಲಿ ಎದ್ದಿದೆ. ಅಂದರೆ ಕರ್ಣ, ಏಕಲವ್ಯ ಪ್ರತಿನಿಧಿಸುವ ಜಾತಿಯ ಜನ ವಿದ್ಯೆ ಕಲಿಯಲು ಮತ್ತು ಪ್ರಯೋಗಿಸಲು ಅರ್ಹರಲ್ಲ ಎಂದು ಇಂದೂ ನಂಬಬೇಕು ಎಂದು ಹೇಳುವ ಪುರಾಣಕಥನಗಳನ್ನು ನಾವೇಕೆ ಒಪ್ಪಬೇಕು? ಯಾವುದು ಅಸಮಾನತೆಯನ್ನು ಪ್ರತಿಪಾದಿಸುತ್ತದೊ ಅದನ್ನು ನಾವೇಕೆ ಪವಿತ್ರ ಅಥವಾ ಪೂಜ್ಯ ಎಂದು ಗೌರವಿಸಬೇಕು? ಇಂತಹ ಪ್ರಶ್ನೆಗಳನ್ನು ಇವರ ನಾಟಕಗಳು ಕೇಳುತ್ತವೆ. ಇಂಥ ಪ್ರಶ್ನೆಗಳು ಪರಶುರಾಮ, ದ್ರೋಣ, ಅರ್ಜುನರು ಪ್ರತಿನಿಧಿಸುವ ಜನಾಂಗದ ಮೇಲೆ ದ್ವೇಷ ಉಂಟುಮಾಡುವ ಪ್ರಶ್ನೆಗಳಲ್ಲ. ಮೀರಲಾಗದ ಪ್ರಮಾಣವೆಂದು ನಂಬಿಸುವ ವಿಚಾರವನ್ನು ನಿರಾಕರಿಸುವ ವಿಚಾರಗಳು.

**ಕಲಿಕೆ, ಶಾಲೆ, ಗುರು, ಜ್ಞಾನ ಪ್ರಮಾಣಗಳ ನಿರಾಕರಣೆ**

ಕುವೆಂಪು ನಾಟಕಗಳ ಪ್ರಕಾರ ಕಲಿಕೆ ಎಂಬುದು ನಿರ್ದಿಷ್ಟ ಸಮಯದಲ್ಲಿ ಮಾತ್ರ ನಡೆಯುವ ಒಂದು ಪಾರ್ಟ್ ಟೈಂ ಚಟುವಟಿಕೆ ಅಲ್ಲ. ಕಲಿಕೆಗೆ ಒಂದು ನಿರ್ದಿಷ್ಟ ಸ್ಥಳ ಮತ್ತು ಕಾಲ ಎನ್ನುವುದು ಇರುವುದಿಲ್ಲ. ನನ್ನ ಗೋಪಾಲ ನಾಟಕದಲ್ಲಿ ಇಂತಹ ನಿತ್ಯ ಶಿಕ್ಷಣದ ಕಲ್ಪನೆಯನ್ನು ಕಾಣಬಹುದು. ಹಾಗೆಯೇ ಶಾಲೆ ಎಂಬುದಕ್ಕೂ ನಾಲ್ಕು ಗೋಡೆಯ ನಡುವಿನ ಜಾಗಕ್ಕೂ ಸಂಬಂಧವಿಲ್ಲ. ಗುರು ಕೂಡ ಸಂಬಳಕ್ಕೆ ದುಡಿಯುವ ಕಾರ್ಮಿಕ ಅಲ್ಲ. ತಾಯಿ, ಕುಟುಂಬ, ಮನೆ, ಬನ, ದೈವ, ಅಂತರಾತ್ಮ, ಅರಿವು ಎಲ್ಲವೂ ಗುರುಗಳೆ. ಎಲ್ಲವೂ ಶಾಲೆಗಳೆ. ಇಡೀ ಲೋಕವೇ ಒಂದು ದೊಡ್ಡ ಶಾಲೆ ಮತ್ತು ಜೀವಮಾನವೆಲ್ಲವೂ ನಿರಂತರ ಕಲಿಕೆಯ ಕಾಲವೆ. ಕಟ್ಟಿದ ಶಾಲೆಗಳಲ್ಲಿ ಪದವಿ ಪಡೆದವರು ಮಾತ್ರ ಜ್ಞಾನಿಗಳು ಮಿಕ್ಕವರು ಅಜ್ಞಾನಿಗಳು ಎಂದೇನಲ್ಲ. ಜ್ಞಾನಕ್ಕೂ ಜಾತಿಗೂ ಹೇಗೆ ಸಂಬಂಧ ಇಲ್ಲವೋ ಹಾಗೆಯೇ ಜ್ಞಾನಕ್ಕೂ ಮತ್ತು ಶಾಲೆಗೂ ಸಂಬಂಧವಿಲ್ಲ. ಜ್ಞಾನ ಎಂಬುದು ಯಾವುದೇ ವ್ಯಕ್ತಿಯು ತನ್ನ ಪರಿಶ್ರಮದಿಂದ ಪಡೆದುಕೊಳ್ಳಬಹುದಾದ ಅರಿವು. ಅದನ್ನು ಯಾರಿಗೇ ಆಗಲಿ ಯಾವುದೇ ಕಾರಣಕ್ಕೆ ಆಗಲಿ ನಿರಾಕರಿಸುವಂತಿಲ್ಲ. ಜ್ಞಾನವು ಯಾವುದೇ ಜಾತಿಯ, ವಂಶದ ಸ್ವತ್ತಲ್ಲ. ಶಾಸ್ತ್ರ, ಶಸ್ತ್ರಜ್ಞಾನ ಮಾತ್ರವೆ ಜ್ಞಾನ ಅಲ್ಲ. ಮಾನವೀಯತೆ ಇಲ್ಲದ ಜ್ಞಾನಕ್ಕೆ ಬೆಲೆ ಇಲ್ಲ. ಇಂತಹ ಹಲವು ಚಿಂತನೆಗಳು ಕುವೆಂಪು ನಾಟಕಗಳಲ್ಲಿ ಇವೆ. ಇಲ್ಲಿ ಶಿಕ್ಷಣ, ಜ್ಞಾನ, ಶಾಲೆ ಇವುಗಳಿಗೆ ಇರುವ ಕಾಲ, ಸ್ಥಳ, ಕುಲ ಸಂಬಂಧಿ ಪ್ರಮಾಣಗಳನ್ನೆಲ್ಲ ಒಡೆದುಹಾಕಲಾಗಿದೆ.



ಕುವೆಂಪು ನಾಟಕಗಳಲ್ಲಿ ಗುರುವಿನ ಬಗ್ಗೆ ಅಪಾರವಾದ ಗೌರವ ಇದೆ. ಹಾಗಾಗಿಯೇ ಬೆರಳ್‌ಗೆ ಕೊರಳ್ ಮತ್ತು ಕಾನೀನಗಳಲ್ಲಿ ಎರಡು ಮುಖ್ಯ ಬದಲಾವಣೆಗಳನ್ನು ಮಾಡಲಾಗಿದೆ. ಕುಲದ ಕಾರಣಕ್ಕೆ ಶಿಕ್ಷಣ ವಂಚಿತರಾದ ಎರಡು ಪುರಾಣ ಪಾತ್ರಗಳೆಂದರೆ ಏಕಲವ್ಯ ಮತ್ತು ಕರ್ಣ. ಬೆರಳ್‌ಗೆ ಕೊರಳ್‌ನಲ್ಲಿ ಏಕಲವ್ಯನಿಗೆ ವಿದ್ಯೆ ಕಲಿಸಲು ದ್ರೋಣ ನಿರಾಕರಿಸುವುದಿಲ್ಲ. ಅಲ್ಲಿ ಅಶ್ವತ್ಥಾಮನ ಓರಗೆಯವನಾಗಿ ಏಕಲವ್ಯ

ದ್ರೋಣನ ಮನೆಯಲ್ಲೆ ವಿದ್ಯೆ ಕಲಿಯುತ್ತಾನೆ. ಹಾಗೆಯೇ ಕಾನೀನದಲ್ಲಿ ಕರ್ಣನನ್ನು ಪರಶುರಾಮ ಸೂತನೆಂದೇ ಭಾವಿಸುತ್ತಾನೆ ಮತ್ತು ಅವನಿಗೆ ಕೊನೆಯಲ್ಲಿ ಕಲಿತ ವಿದ್ಯೆಯೆಲ್ಲ ಮರೆತುಹೋಗಲಿ ಎಂದು ಶಾಪ ನೀಡುವುದಿಲ್ಲ. ಇಂತಹ ದೊಡ್ಡ ಬದಲಾವಣೆಗಳ ಮೂಲಕ ಈ ನಾಟಕಗಳು ಉನ್ನತ ಮಟ್ಟದ ಗುರುಕಲ್ಪನೆಯನ್ನು ಕಟ್ಟಿಕೊಡುತ್ತವೆ. ಬೆರಳ್‌ಗೆ ಕೊರಳ್ ಪ್ರಕಾರ ದ್ರೋಣ ಏಕಲವ್ಯನ ಬೆರಳನ್ನು ಕೇಳುವುದು ತನ್ನ ವಚನವನ್ನು ಉಳಿಸಿಕೊಳ್ಳಲಿಕ್ಕಾಗಿ ಮತ್ತು ಅದು ವಿಧಿನಿಯಾಮಕ. ಆತ ತನ್ನ ಕೊರಳನ್ನು ಕಳೆದುಕೊಳ್ಳುವುದು ಕೂಡ ವಿಧಿಯಿಂದ. ಹಲವು ಪ್ರಮಾಣಗಳನ್ನು ಒಡೆಯುವ ಕುವೆಂಪು ನಾಟಕಗಳು ವಿಧಿ, ಪುನರ್ಜನ್ಮ, ಕರ್ಮಫಲ ಇತ್ಯಾದಿ ನಿರರ್ಥಕ ಪ್ರಮಾಣಗಳನ್ನು ಪ್ರತಿಪಾದಿಸುತ್ತವೆ ಕೂಡ. ಪರಂಪರೆಯ ಅನೇಕ ಪ್ರಮಾಣಗಳನ್ನು ಒಡೆಯುವ ಇವರ ನಾಟಕಗಳನ್ನು ಓದುವಾಗ ಇಂತಹ ಕೆಲವು ನಿರರ್ಥಕ ಪ್ರಮಾಣಗಳನ್ನು 'ಕುವೆಂಪು ಹೇಳಿದ್ದಾರೆ' ಎಂಬ ಕಾರಣಕ್ಕೆ ಒಪ್ಪಬೇಕು ಎಂದೇನಿಲ್ಲ.



ಭಕ್ತಿ, ದೈವ, ಪೂಜೆ, ಗುಡಿ ಸಂಬಂಧಿ ಪ್ರಮಾಣಗಳ ನಿರಾಕರಣೆ.

ಭಕ್ತಿ, ದೈವ, ಪೂಜೆ, ಗುಡಿಗಳ ಸ್ಥಾಪಿತ ಕಲ್ಪನೆ ಮತ್ತು ಇವುಗಳ ಮೂಲಕ ಸೃಷ್ಟಿಯಾಗಿರುವ ಶೋಷಕ ದೇಗುಲಾಚಾರಗಳನ್ನೆಲ್ಲ ಕುವೆಂಪು ನಾಟಕಗಳು ನಿರಾಕರಿಸುತ್ತವೆ. ಜಲಗಾರ ನಾಟಕದಲ್ಲಿ ಒಂದು ಚಲನಶೀಲ ಶಿವಸಂಸ್ಕೃತಿಯನ್ನೂ ನನ್ನ ಗೋಪಾಲ ನಾಟಕದಲ್ಲಿ ಒಂದು ಚಲನಶೀಲ ಗೋಪಸಂಸ್ಕೃತಿಯನ್ನೂ ಪ್ರತಿಪಾದಿಸಲಾಗಿದೆ. ಜಾತ್ರೆಗೆ ಹೋಗಿ ಶಿವಗುಡಿಯ ಶಿವನನ್ನು ಪೂಜಿಸುವ ರೈತನಿಗೆ ಜಲಗಾರ ನನ್ನ ಶಿವ ಈ ಮಣ್ಣಿನಲ್ಲಿಹನು, ನನ್ನ ಶಿವ ಕೊಳೆತ ಕಸದಲ್ಲಿಹನು ಎಂದು ಹೇಳುತ್ತಾನೆ. ಅಲ್ಲದೆ ಜಾತ್ರೆಯಿಂದ ಹಣ್ಣು, ಕಾಯಿ ಎಲ್ಲ ತಂದ ನೀನು ಶಿವನನ್ನು ತರಲಿಲ್ಲವೆ ? ಎಂದು ಕೇಳುತ್ತಾನೆ. ಇಲ್ಲಿ ಪ್ರಕೃತಿಯನ್ನೇ ದೈವ ಎಂದು ನಂಬುವ ಮತ್ತು ದೇಗುಲದಲ್ಲಿನ ಮೂರ್ತಿಯನ್ನು ದೈವ ಎಂದು ನಂಬದೆ ಇರುವ ಚಿಂತನೆ ಇದೆ. ಹಾಗೆಯೇ ಇಲ್ಲಿ 'ಕರ್ಮಾವಾರಧನೆ, ಸೇವೆಯೇ ಪೂಜೆ, ಪೊರಕೆ ಆರತಿ ಗುಡಿಸುವುದೇ ನನ್ನ ದೇವರ ಪೂಜೆ' ಎಂದೂ ಜಲಗಾರ ಹೇಳುತ್ತಾನೆ. ಇಲ್ಲಿ ಬರುವ ಭಿಕ್ಷುಕ 'ಗುಡಿಗಳಿವು ಭೋಗಿಗಳ ಗೂಡುಗಳು, ಪೂಜೆಯೆಂಬುದು ಧರ್ಮಬುದ್ಧಿಯನು ಜೋಗುಳದಿ ಮಲಗಿಸುವ ಕಾಳಮಂತ್ರವು' ಎಂದು ಹೇಳುತ್ತಾನೆ. ಇಲ್ಲೆಲ್ಲ ಸ್ಪಷ್ಟವಾಗಿ ಪೂಜೆ, ದೈವ ಮತ್ತು ಗುಡಿ ಹಾಗೂ ಅದರ ಸುತ್ತ ಹಬ್ಬಿಕೊಂಡಿರುವ ಆಚಾರ ಪ್ರಮಾಣಗಳ ದೊಡ್ಡ ಲೋಕವನ್ನೇ ನಿರಾಕರಿಸಲಾಗುತ್ತಿದೆ. ಕಾಯಕವೇ ಪೂಜೆ ಆಗಬೇಕಾದ ಕಡೆ ಪೂಜೆಯೇ ಕಾಯಕ ಆಗಿರುವ ತಿರುಮಂತ್ರವನ್ನು ಇಲ್ಲಿ ವಿಡಂಬಿಸಲಾಗಿದೆ ಮತ್ತು ಆ ಮೂಲಕ ಹೊಸ ರೀತಿಯ ಭಕ್ತಿ, ಪೂಜೆ, ದೈವಗಳ ಕಲ್ಪನೆಯನ್ನು ಬಿಂಬಿಸಲಾಗಿದೆ.

**ಪ್ರಯೋಗನಾಟಕವೆಂಬ ಪ್ರಮಾಣ ನಿರಾಕರಣೆ**

ನಮ್ಮಲ್ಲಿ ಪ್ರಯೋಗನಾಟಕ ಪ್ರಕಾರವೇ ಬೇರೆ, ಸಾಹಿತ್ಯನಾಟಕದ ಪ್ರಕಾರವೇ ಬೇರೆ. ಓದಲು ರಚಿಸಿದ ನಾಟಕಗಳನ್ನೆಲ್ಲ ಹಾಗಾಗೇ ಪ್ರಯೋಗಿಸಲು ಬರುವುದಿಲ್ಲ. ರಚಿತ ನಾಟಕ ಪಠ್ಯ ಸ್ಥಿರವಾದುದು. ಪ್ರಯೋಗನಾಟಕದ ಪಠ್ಯ ಚಲನಶೀಲವಾದುದು. ಹಾಗೆ ನೋಡಿದರೆ ಒಂದೊಂದು ನಾಟಕ ಪ್ರಯೋಗವೂ ಒಂದೊಂದು ಭಿನ್ನ ಪಠ್ಯಗಳೇ. ಒಂದೊಂದು ಪ್ರಯೋಗವೂ ಒಂದೊಂದು ಹೊಸ ಬಗೆಯ ರಚಿತ ಪಠ್ಯದ ಓದುಗಳೇ. ಹೀಗಿರುವಾಗ ನಮ್ಮಲ್ಲಿ ನಾಟಕವನ್ನು ಸಾಹಿತ್ಯದಲ್ಲಿರುವ ಒಂದೇ ಪ್ರಕಾರವೆಂದು ನಂಬಿ ಹವ್ಯಾಸಿ ರಂಗಭೂಮಿಯ ಪ್ರಯೋಗನಾಟಕದ ಕಲ್ಪನೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅದನ್ನೇ ಎಲ್ಲ ಲೇಖಕರೂ ಬರೆಯಬೇಕು ಎಂದು ವಾದಿಸುತ್ತ ಬರಲಾಗಿದೆ. ಕುವೆಂಪು ನಾಟಕಗಳಲ್ಲಿ ಮೋಡ, ಮರಗಳೂ ಮಾತಾಡುತ್ತವೆ. ಮೃತ್ಯು, ವೃಕ್ಷಭೈರವ ಕಲ್ಪನೆಗಳು ಬರುತ್ತವೆ; ಫ್ಯಾಂಟಸಿ ಬರುತ್ತದೆ, ಇವನ್ನೆಲ್ಲ ರಂಗದ ಮೇಲೆ ತರಲು ಆಗುವುದಿಲ್ಲ ಎನ್ನಲಾಗಿದೆ. ಪ್ರಯೋಗನಾಟಕ ಎಂಬ ಅಳತೆಗೋಲಿನಿಂದ ಇವರ ಸಾಹಿತ್ಯನಾಟಕಗಳನ್ನು ಅಳೆದು ಅವು ಪ್ರಯೋಗ ಸಾಧ್ಯ ಅಲ್ಲ ಎಂದು ವಾದಿಸಲಾಗಿದೆ. ಆದರೆ ಇವೆರಡೂ ಬೇರೆ ಬೇರೆ ಆಗಿರುವಾಗ ಇವನ್ನು ಒಂದೇ ಎಂದು ಭಾವಿಸುವುದೇಕೆ ?

ಕುವೆಂಪು ನಾಟಕಗಳು ಪ್ರಯೋಗನಾಟಕವೆಂಬ ಪ್ರಮಾಣವನ್ನೇ ನಿರಾಕರಿಸುತ್ತವೆ. ೧. ಸಾಹಿತ್ಯದಲ್ಲಿ ಪ್ರತಿಮಾ ೨. ನಾಟಕ ಕಲೆಯಲ್ಲಿ ಪ್ರತಿಕೃತಿ ಮತ್ತು ಪ್ರತಿಮಾ ವಿಧಾನಗಳು ಎಂಬ ತಮ್ಮ ಎರಡು ಲೇಖನಗಳಲ್ಲಿ ಕುವೆಂಪು ತಮ್ಮದೇ ನಾಟಕದ ಕಲ್ಪನೆಯನ್ನು ನೀಡುತ್ತಾರೆ. ಆದರೆ ಅವರ ನಾಟಕಕಲ್ಪನೆಯ ಮೂಲಕವೇ ಅವರ ನಾಟಕಗಳನ್ನು ನಾವು ಓದಬೇಕು / ನೋಡಬೇಕು ಎಂದೇನಿಲ್ಲ. ಅವರ ನಾಟಕಗಳು ನಮ್ಮ ಪ್ರಯೋಗಸಾಧ್ಯತೆಯ ಪ್ರಮಾಣಗಳನ್ನು ನಿರಾಕರಿಸುವ ನಾಟಕಗಳು ಎಂದು ತಿಳಿದರೆ ಸಾಕು. ಪ್ರಕಾರದ ಬಗೆಗಿನ ಪ್ರಮಾಣವನ್ನು ಇವರ ನಾಟಕಗಳು ಒಡೆದಿದ್ದರೂ ನಾವು ಒಡೆದುಕೊಳ್ಳಲು ಸಿದ್ಧರಿಲ್ಲ ಅಷ್ಟೆ. ಸಾಹಿತ್ಯ–ನಾಟಕಗಳ ವ್ಯಾಕರಣವೇ ಬೇರೆ, ಪ್ರಯೋಗನಾಟಕಗಳ ವ್ಯಾಕರಣವೇ ಬೇರೆ. ಕೆಲವರು ಪ್ರಯೋಗಕ್ಕೆಂದೇ ನಾಟಕ ಬರೆದರೂ ಬರೆದಂತೆಯೇ ಪ್ರಯೋಗಗಳು ಇರುವುದಿಲ್ಲ, ಅವು ನಿರ್ದೇಶಕ–ನಟ–ಬೆಳಕು–ಪ್ರಸಾಧನ–ಸಂಗೀತ ಇತ್ಯಾದಿ ನಾಟಕಾಂಗಗಳಿಂದ ಹೊಸದೇ ಪಠ್ಯ (ಅರ್ಥಸಾಧ್ಯತೆ)ಗಳನ್ನು ಪಡೆಯುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ.

**ನಾಟಕಭಾಷೆ ಎಂಬ ಪ್ರಮಾಣಭಾಷೆಯ ನಿರಾಕರಣೆ**

ಪುರಾಣಕಥನವೆ ಒಂದು ಜನ ಬಲ್ಲ ಭಾಷೆ. ಅಂತಹ ಭಾಷೆಯಲ್ಲಿ ನಾಟಕ ರಚನೆ ಮಾಡುವುದೆಂದರೆ ಜನರನ್ನು ಸುಲಭವಾಗಿ ತಲುಪುವ ಸಾಧ್ಯತೆಯನ್ನು

ಮುಡಿಸಿಕೊಂಡಂತೆ. ಕುವೆಂಪು ನಾಟಕಗಳು ಈ ಕೆಲಸವನ್ನು ಚೆನ್ನಾಗಿ ಮಾಡಿವೆ. ಇವರ ನಾಟಕಗಳು ರಂಗಭಾಶೆ, ರಂಗಸಂಭಾಶಣೆ ಇರುವ ನಾಟಕಗಳಲ್ಲ ಎಂಬ ಆರೋಪವೂ ಕನ್ನಡ ವಿಮರ್ಶೆಯಲ್ಲಿ ಬಂದಿದೆ. ರಂಗಕ್ಕೆ ಒಂದು ಭಾಶೆ ಇದೆ ಎಂಬುದೇ ಒಂದು ಮಿಥ್. ಅದು ಇರುವುದಲ್ಲ, ಸದಾ ಆಗುತ್ತಿರುವುದು. ಅಂತಹ ಆಗುವ ಕೆಲಸ ಪ್ರಯೋಗಗಳಿಂದ ಪ್ರಯೋಗಗಳಿಗೆ ಆಗುತ್ತಿರುತ್ತದೆ. ಹೀಗಿರುವಾಗ ನಾಟಕದ ಭಾಶೆಯನ್ನು ಸದಾ ನಿರ್ಮಿಸುವ ನಿರ್ದೇಶಕನ, ನಟರ ಜವಾಬ್ದಾರಿಯನ್ನು ನಾಟಕಕಾರನಿಗೆ ಹೊರಿಸಿದರೆ ಹೇಗೆ? ಸಂಸ್ಕೃತ, ಇಂಗ್ಲಿಶಿನ ಅಹಂನ್ನು ಮುರಿಯುವ ಹೊಸ ಭಾಶೆಯನ್ನು ಧರಿಸುವ ಮೂಲಕ ಕುವೆಂಪು ನಾಟಕಗಳು ನಾಟಕ ಭಾಶೆ ಎಂಬ ಒಂದು ಪ್ರಮಾಣಭಾಶೆಯನ್ನು ನಿರಾಕರಿಸುತ್ತವೆ.



ಸಾಹಿತ್ಯವು ಭಾಶೆಯನ್ನು ಸಂಗೋಪಿಸುವ ಹಾಗೆಯೆ ಹೊಸ ಭಾಶೆಗಳನ್ನು ಸೃಷ್ಟಿಸುವ ಸಾಧನ ಕೂಡ ಎಂಬುದನ್ನು ನಾವೆಲ್ಲ ಬಲ್ಲೆವು. ಈ ದೃಷ್ಟಿಯಲ್ಲಿ ಕುವೆಂಪು ನಾಟಕಗಳ ಭಾಶೆಯು ಕನ್ನಡದ ಚಾರಿತ್ರಿಕ ಪ್ರಭೇದಗಳಿಗೆ ಹೊಸದಾಗಿ ಸೇರಿಕೊಂಡ ಭಾಶೆಯಾಗಿದೆ. ಇವರ ಕಾದಂಬರಿ, ಕಾವ್ಯ, ಮಹಾಕಾವ್ಯ ಪ್ರಬಂಧಗಳೂ ಕೂಡ ಇಂತಹ ನವೀನ ಭಾಶೆಗಳನ್ನು ಕನ್ನಡಕ್ಕೆ ಕೊಡುವ ಕೆಲಸವನ್ನು ಮಾಡಿವೆ. ನಮ್ಮಲ್ಲಿ ಶಾಸ್ತ್ರಸಂಮೂಢತೆ, ಜಾತಿಗರ್ವಾಂಧತೆ ಇರುವಂತೆಯೆ ಭಾಶಾಸಂಮೂಢತೆ, ಭಾಶಾಗರ್ವಾಂಧತೆಯೂ ಇದೆ. ಕುವೆಂಪು ಕನ್ನಡಗಳ ನಿರ್ಮಾಣ ಇಂತಹ ಗರ್ವಾಂಧತೆಗಳ ನಿರಾಕರಣೆಯೂ ಹೌದು. (ಈ ಪ್ಯಾರಾದಲ್ಲಿ 'ಷ' ಅಕ್ಷರಕ್ಕೆ ಬದಲಾಗಿ 'ಶ' ಅಕ್ಷರವನ್ನು ಬಳಸಿದ್ದೇನೆ. ವರ್ಣಮಾಲೆಯ ಭಾರವನ್ನು ಕಡಿತಗೊಳಿಸುವ ಉದ್ದೇಶದಿಂದ).

**ವೈರತ್ವ ಪ್ರಮಾಣ, ಸಮೀಕೃತ ಪ್ರಮಾಣಗಳ ನಿರಾಕರಣೆ**

ವಿವೇಕಾನಂದ, ಅರವಿಂದ, ಪರಮಹಂಸ, ರವೀಂದ್ರನಾಥ ಟ್ಯಾಗೋರ್, ಅಂಬೇಡ್ಕರ್, ಗಾಂಧಿ ಮೊದಲಾದವರ ಆಲೋಚನೆಗಳನ್ನು ಅರಿತಿದ್ದ ಕುವೆಂಪು ಬರವಣಿಗೆಯಲ್ಲಿ ಅದ್ವೈತತೆ, ಅಖಂಡತೆ, ಪೂರ್ಣತತ್ವ, ಸರ್ವೋದಯ, ವಿಶ್ವಮಾನವತೆ ತತ್ವಗಳ ಪ್ರತಿಪಾದನೆಯನ್ನು ಕಾಣಬಹುದು. ಲೋಕಗ್ರಹಿಕೆಯಲ್ಲಿ ಪ್ರಾಚೀನ ವೈದಿಕಶಾಹಿ–ಪುರೋಹಿತಶಾಹಿ ನಿರ್ಮಿಸಿದ ಪ್ರಮಾಣಗಳು, ವಸಾಹತುಶಾಹಿ–ಆಡಳಿತಶಾಹಿ ನಿರ್ಮಿಸಿದ ಪ್ರಮಾಣಗಳು ಮತ್ತು ಆಧುನಿಕತೆಯ ವಿಕಾರ ಹಾಗೂ ವಿದ್ಯಾಪದ್ಧತಿ ನಿರ್ಮಿಸಿದ ಪ್ರಮಾಣಗಳನ್ನೆಲ್ಲ ಇವರ ಬರವಣಿಗೆ ನಿರಾಕರಿಸುತ್ತದೆ. ಇವರ ನಾಟಕಗಳು ಆಧುನಿಕ ವಿದ್ಯೆಯು ನಿರ್ಮಿಸಿದ ಹಲವು ರೀತಿಯ ಒಡಕುಗಳು ಮತ್ತು ಸಮೀಕರಣಗಳನ್ನು ನಿರಾಕರಿಸುತ್ತವೆ.

ನಮ್ಮಲ್ಲಿ ಹಲವು ರೀತಿಯ ಒಡಕುಗಳು ಉಂಟಾಗಿವೆ. ೧. ಕಲಿಕೆ ಮತ್ತು ಬದುಕುಗಳ ನಡುವಿನ ಒಡಕು ೨. ಪೂಜೆ ಮತ್ತು ಕಾಯಕ ಇವುಗಳ ನಡುವಿನ ಒಡಕು ೩. ಶಾಲೆ, ಮನೆ, ಬನ ಇವುಗಳ ನಡುವಿನ ಒಡಕು ಹೀಗೆ ಹಲವು ರೀತಿಯ ದ್ವಿಮಾನ, ತ್ರಿಮಾನ ಹಾಗೂ ಬಹುಮಾನ ಒಡಕುಗಳು ನಮ್ಮಲ್ಲಿಂದು ಒಡೆದು ಕಾಣುತ್ತಿವೆ. ನಮ್ಮೆಲ್ಲ ಕಲಿಕೆಗೂ ಮತ್ತು ಬದುಕಿಗೂ ಸಂಬಂಧವೇ ಇಲ್ಲವಾಗಿದೆ. ಪೂಜೆಗೂ ಮತ್ತು ನಾವು ಮಾಡುವ ದುಡಿಮೆಗೂ ಸಂಬಂಧವೇ ಇಲ್ಲವಾಗಿದೆ. ಹಾಗೆಯೇ ಶಾಲೆ ಎಂದರೆ ನಾಲ್ಕು ಗೋಡೆಗಳ ನಡುವಣ ಜಾಗ ಎಂದೂ ನಾವು ಭಾವಿಸಿದ್ದೇವೆ. ಮನೆ, ಬನಗಳೆಲ್ಲ ಶಾಲೆಗಳೇ ಅಲ್ಲ ಎಂಬ ಭಾವ ಕೂಡ ನಮ್ಮಲ್ಲಿ ಮನೆ ಮಾಡಿದೆ. ಇವುಗಳನ್ನೆಲ್ಲ ಕುವೆಂಪು ನಾಟಕಗಳು ನಿರಾಕರಿಸುತ್ತವೆ.




ಜನರನ್ನು ವಿದ್ಯಾವಂತ ಮತ್ತು ಅವಿದ್ಯಾವಂತ ಎಂದು ಒಡೆದು ವಿಂಗಡಿಸುವ ದೃಷ್ಟಿ ಕೂಡ ನಮ್ಮಲ್ಲಿಂದು ಹೆಚ್ಚಾಗಿದೆ. ಈ ಮೂಲಕ ನಾವು ೧. ಜ್ಞಾನ ಮತ್ತು ವಿದ್ಯೆ ಇವುಗಳ ನಡುವೆ ಒಂದು ಸಮೀಕರಣವನ್ನು ಮಾಡಿಕೊಂಡಿದ್ದೇವೆ. ವಿದ್ಯಾವಂತರೆಲ್ಲ ಜ್ಞಾನಿಗಳು ಎಂದು ಭಾವಿಸುವ ಮತ್ತು ನಂಬುವ ಜನ ನಾವಾಗಿದ್ದೇವೆ. ಅಲ್ಲದೆ ಈ ಮೂಲಕವೇ ಜಾತಿ ಮತ್ತು ಜ್ಞಾನಗಳ ನಡುವಣ ಸಮೀಕರಣವನ್ನೂ ಮಾಡಿಕೊಂಡಿದ್ದೇವೆ. 'ಮೇಲು' ಜಾತಿಯಲ್ಲಿ ಹುಟ್ಟಿದವರು ಜ್ಞಾನಿಗಳು 'ಕೀಳು' ಜಾತಿಯಲ್ಲಿ ಹುಟ್ಟಿದವರೆಲ್ಲ ಬುದ್ಧಿಹೀನರು ಎಂಬ ಮೂಢನಂಬಿಕೆಯೂ ನಮ್ಮಲ್ಲಿದೆ. ಹಾಗೆಯೇ ಸಮಾಜವನ್ನು ಗ್ರಾಮ ಮತ್ತು ನಗರ ಎಂದು ಒಡೆಯುವ ಮೂಲಕ ನಾಗರಿಕ, ಅನಾಗರಿಕ ಎಂದು ವಿಂಗಡಿಸುವ ಮೂಲಕ ಹಲವು ಬಗೆಯ ಸಮೀಕರಣಗಳನ್ನೂ ಸೃಷ್ಟಿಸಿಕೊಂಡಿದ್ದೇವೆ. ೨. ಅನಾಗರಿಕತೆ ಮತ್ತು ಗ್ರಾಮ್ಯತೆಗಳ ನಡುವಣ ಸಮೀಕರಣ ಅಂಥದ್ದು. ಗ್ರಾಮೀಣರೆಲ್ಲ ಅನಾಗರಿಕರು ನಗರಿಗರೆಲ್ಲ ನಾಗರಿಕರು ಎಂಬ ಕುರುಡುನಂಬಿಕೆ ನಮ್ಮಲ್ಲಿ ಚಾಲ್ತಿಯಲ್ಲಿದೆ. ದೇಶಿ ಮತ್ತು ವಿದೇಶಿ ಎಂದು ಜನ–ಆಚಾರ–ಚಿಂತನೆ–ಸಂಸ್ಕೃತಿಗಳನ್ನು ಒಡೆಯುವ ಮೂಲಕ ೩. ಶೋಷಣೆ ಮತ್ತು ವಿದೇಶಿತನದ ನಡುವಣ ಸಮೀಕರಣವನ್ನೂ ನಾವು ಮಾಡಿಕೊಂಡಿದ್ದೇವೆ. ನಮ್ಮ ಮತ್ತು ಅನ್ಯವೆಂದು ಸಮಾಜವನ್ನು ಒಡೆಯುವ ಮೂಲಕ ೪. ದಾಳಿ–ಧರ್ಮಗಳ ನಡುವಣ ಮತ್ತು ಹಿಂಸೆ–ಕೋಮುಗಳ ನಡುವಣ (ಭಯೋತ್ಪಾದನೆ ಜನಾಂಗೀಯತೆಗಳ ನಡುವಣ) ಸಮೀಕರಣವನ್ನೂ ನಾವು ಸೃಷ್ಟಿಸಿಕೊಂಡಿದ್ದೇವೆ. ಕುವೆಂಪು ನಾಟಕಗಳು ಈ ಎಲ್ಲ ರೀತಿಯ ಸಮೀಕರಣ ಮತ್ತು ಒಡಕುಬಗೆ ವೈರತ್ವದ ಪ್ರಮಾಣಗಳನ್ನು ನಿರಾಕರಿಸುತ್ತವೆ.

ನಮ್ಮ ನಿತ್ಯದ ಬದುಕು ಮತ್ತು ಮೌಲ್ಯಪ್ರಜ್ಞೆ ಹೇಗಿರಬೇಕು ಎಂದು ಕೆಲವು ಶಬ್ದಪ್ರಮಾಣಗಳು ಮತ್ತು ಆಚಾರ ಪ್ರಮಾಣಗಳು ನಮ್ಮ ಮನಸ್ಸನ್ನು ತಯಾರಿಸುವ ಕೆಲಸವನ್ನು ಪ್ರತ್ಯಕ್ಷವಾಗಿಯೊ ಪರೋಕ್ಷವಾಗಿಯೊ ಸದಾ ಮಾಡುತ್ತಿರುತ್ತವೆ. ಲೋಕಗ್ರಹಿಕೆ ಮತ್ತು ತಿಳುವಳಿಕೆಗಳನ್ನು ರೂಪಿಸುವಲ್ಲಿ, ಜ್ಞಾನರಚನೆಯನ್ನು ರೂಪಿಸುವಲ್ಲಿ ನಮ್ಮ ಜಾತಿ, ಧರ್ಮ, ದೇವರು, ದರ್ಶನ (ತತ್ವಜ್ಞಾನ), ಇತ್ಯಾದಿ ಕಲ್ಪನೆಗಳು ಹೇಗೆ ಕೆಲಸ ಮಾಡುತ್ತವೆ ಎಂಬ ಬಗ್ಗೆ ಒಂದು ನಿರ್ದಿಷ್ಟವಾದ ತಿಳುವಳಿಕೆಯನ್ನು ಕುವೆಂಪು ನಾಟಕಗಳು ಹುಟ್ಟಿಸುತ್ತವೆ. ಇಂತಹ ಹುನ್ನಾರಗಳಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂದು ನಿರ್ದೇಶಿಸುವ ದೃಷ್ಟಿಯಿಂದ ಕುವೆಂಪು ನಾಟಕಗಳು ಇಂದಿಗೂ ಪ್ರಸ್ತುತವಾಗಿವೆ.

**ಡಾ|| ರಾಮಲಿಂಗಪ್ಪ ಟಿ. ಬೇಗೂರು**
'ಗುಣ', ನಂ. ೩೯, ೩ನೇ ಅಡ್ಡರಸ್ತೆ
೧೦ನೇ ಮುಖ್ಯರಸ್ತೆ
ಉಲ್ಲಾಳ ಮುಖ್ಯರಸ್ತೆ, ಮುನೇಶ್ವರ ನಗರ
ಬೆಂಗಳೂರು – ೫೬೦ ೦೫೬

ಪತ್ರಿಕೆ ಮುದ್ರಣಕ್ಕೆ ಹೋಗುವ ಕೊನೆಯ ಕ್ಷಣದಲ್ಲಿ ದೇಶದ ಹಿರಿಯ ಹೋರಾಟಗಾರ ಎ. ಬಿ. ಬರ್ಧನ್ ಅವರ ನಿಧನದ ವಾರ್ತೆ ಬಂದಿದೆ. ತಮ್ಮ ಇಡೀ ಬದುಕನ್ನೇ ದೇಶಕ್ಕಾಗಿ, ದುಡಿವ ವರ್ಗಕ್ಕಾಗಿ ಸವೆಸಿದ ಆ ಹಿರಿಯ ಚೇತನದ ಸಾವು ದೇಶದ ದುಡಿವ ವರ್ಗಕ್ಕೆ, ಜಾತ್ಯತೀತ, ಪ್ರಜಾಸತ್ತಾತ್ಮಕ ಮನಸ್ಸುಗಳಿಗೆ ಆಘಾತವನ್ನುಂಟುಮಾಡಿದೆ. ೧೯೨೪ರಲ್ಲಿ ಜನಿಸಿ ೧೯೪೦ರಲ್ಲಿ ತಮ್ಮ ೧೫ನೇ ವಯಸ್ಸಿನಲ್ಲಿ ವಿದ್ಯಾರ್ಥಿ ಚಳುವಳಿಯ ಮೂಲಕ ಅಸಮಾನ ಸಮಾಜ ವ್ಯವಸ್ಥೆಯ ವಿರುದ್ಧ ಹೋರಾಟಕ್ಕಿಳಿದ ಎ. ಬಿ. ಬರ್ಧನ್ ೭.೧೨.೨೦೧೫ರಂದು ಅನಾರೋಗ್ಯಕ್ಕೆ ತುತ್ತಾಗುವವರೆಗೆ ವಿಶ್ರಮಿಸಲಿಲ್ಲ. ದಿನಾಂಕ ೨.೧.೨೦೧೬ರಂದು ತಮ್ಮ ಕೊನೆಯುಸಿರೆಳೆದರು. ಬಹುಶಃ ಕೊನೆಯುಸಿರಿನವರೆಗೆ ಹೋರಾಟವೆಂದರೆ ಇದೇ. ಇಂಥ ಧೀಮಂತ ನಾಯಕನಿಗೆ 'ಹೊಸತು' ಬಳಗ ನೋವಿನಿಂದ ನಮನಗಳನ್ನು ಸಲ್ಲಿಸುತ್ತದೆ.

# ಎ. ಬಿ. ಬರ್ಧನ್

# ದಣಿವರಿಯದ ಹೋರಾಟಗಾರ

ದೇಶದ ಜನಪರ ಚಳುವಳಿಯ ರಾಜಕಾರಣಿ, ಸ್ವಾತಂತ್ರ್ಯ ಹೋರಾಟಗಾರ, ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕ, ಪರ್ಯಾಯ ರಾಜಕೀಯರಂಗದ ಕನಸುಗಾರ ಅರ್ಧೇಂದು ಭೂಷಣ ಬರ್ಧನ್ ನಿಧನರಾಗಿದ್ದಾರೆ. ೯೨ ವರ್ಷದ ಬರ್ಧನ್ ೨.೧.೨೦೧೬ರಂದು ದೆಹಲಿಯ ಜಿ. ಬಿ. ಪಂಥ್ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದರು. ದಿನಾಂಕ ೭.೧೨.೨೦೧೫ರಂದು ಮೆದುಳಿನ ಬಲಭಾಗದಲ್ಲಿ ರಕ್ತಸಂಚಲನ ಸ್ಥಗಿತವಾಗಿ ಅಪ್ರಜ್ಞಾವಸ್ಥೆಗೆ ಜಾರಿ ಆಸ್ಪತ್ರೆ ಸೇರಿದ ಈ ಹಿರಿಯ ಜೀವ ಹಿಂತಿರುಗಿ ಬರಲಿಲ್ಲ. ಈ ಹಿಂದೆ ಮೂರು ಸಲ ತೀವ್ರವಾದ ಅನಾರೋಗ್ಯಕ್ಕೆ ಈಡಾದಾಗಲೂ ತಕ್ಷಣ ಗುಣಮುಖರಾಗಿ ಮತ್ತೆ ದೇಶಾದ್ಯಂತ ಸಂಚರಿಸಿ ಜನಪರ ಚಳುವಳಿ, ಸಮಾವೇಶಗಳಲ್ಲಿ ಭಾಗವಹಿಸಿದ್ದರು. ಆದರೆ ಈ ಬಾರಿ ಹಾಗಾಗಲಿಲ್ಲ. ಬದುಕಿನುದ್ದಕ್ಕೂ ದೇಶ, ಜನತೆ, ಪಕ್ಷಕ್ಕಾಗಿ ದುಡಿದು, ದಣಿದ ದೇಹ ಹೊಸ ವರ್ಷದ ಆರಂಭದಲ್ಲಿಯೇ ವಿದಾಯ ಹೇಳಿತು.

೧೯೨೪ರ ಸೆಪ್ಟೆಂಬರ್ ೨೫ರಂದು ಬ್ರಿಟಿಷ್ ವಸಾಹತುವಾದಿ ಆಡಳಿತ ಸಂದರ್ಭದಲ್ಲಿ ಬಂಗಾಲ ಪ್ರೆಸಿಡೆನ್ಸಿಯ ಸಿಲ್ಹೆಟ್‌ನಲ್ಲಿ ಬರ್ಧನ್ ಜನಿಸಿದರು. ಈಗ ಅವರ ಜನನ ಸ್ಥಳ ಬಾಂಗ್ಲಾ ದೇಶದಲ್ಲಿದೆ. ನಂತರ ಕುಟುಂಬದೊಡನೆ ಮಹಾರಾಷ್ಟ್ರದ ನಾಗಪುರಕ್ಕೆ ಬಂದ ಇವರು ಅಲ್ಲಿಯೇ ತಮ್ಮ ವಿದ್ಯಾಭ್ಯಾಸ ಆರಂಭಿಸಿದರು. ವಿದ್ಯಾರ್ಥಿ ಬದುಕಿನಲ್ಲಿಯೇ ಅನ್ಯಾಯದ ವಿರುದ್ಧ ಪ್ರತಿಭಟನಾ ಮನೋಭಾವ ಬೆಳೆಸಿಕೊಂಡಿದ್ದ ಬರ್ಧನ್ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿದ್ದ, ೧೯೩೬ರಲ್ಲಿ ಸ್ಥಾಪನೆಯಾಗಿದ್ದ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ (ಎ.ಐ.ಎಸ್.ಎಫ್) ಎಂಬ ವಿದ್ಯಾರ್ಥಿ ಸಂಘಟನೆಗೆ ೧೯೪೦ರಲ್ಲಿ ಸೇರಿದರು. ವಿದ್ಯಾರ್ಥಿ ಚಳವಳಿಯ ಮೂಲಕ ತಮ್ಮ ೧೫ನೇ ವಯಸ್ಸಿನಲ್ಲಿ ಹೋರಾಟಕ್ಕಿಳಿದ ಎ. ಬಿ. ಬರ್ಧನ್ ಹಿಂತಿರುಗಿ ನೋಡಲಿಲ್ಲ. ಮನೆ ತ್ಯಜಿಸಿಯಾಗಿತ್ತು. ಮುಂದೆ ಬ್ರಿಟಿಷ್ ಸರಕಾರದ ವಿರುದ್ಧ ಭೂಗತವಾಗಿ ಹೋರಾಡುತ್ತಿದ್ದ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರಾದರು. ೧೯೪೧ರಲ್ಲಿ ಪಕ್ಷದ ಪೂರ್ಣಾವಧಿ ಕಾರ್ಯಕರ್ತರಾಗಿ ವಿದ್ಯಾರ್ಥಿ ಸಂಘಟನೆಯ ಹೋರಾಟವನ್ನು ಮುನ್ನಡೆಸಿದರು. ಆಗಲೇ ಅವರು ತಮ್ಮ ಕ್ರಿಯಾಶೀಲತೆ, ಧೈರ್ಯ, ಬುದ್ಧಿಮತ್ತೆಯಿಂದಾಗಿ ವಿದ್ಯಾರ್ಥಿಗಳ ನೆಚ್ಚಿನ ನಾಯಕರಾಗಿದ್ದರು. ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್‌ನ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿದ ಬರ್ಧನ್, ನಾಗಪುರ ವಿಶ್ವವಿದ್ಯಾಲಯದ ವಿದ್ಯಾರ್ಥಿ ಒಕ್ಕೂಟದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಬಂಧಿತರಾಗಿ ಜೈಲು ಸೇರಿದರು. ಆ ಸಂದರ್ಭದಲ್ಲಿ ಹಲವು ಸಲ ಬಂಧಿತರಾಗಿ ನಾಲ್ಕೂವರೆ ವರ್ಷ ಜೈಲುವಾಸ ಅನುಭವಿಸಿದರು. ಎರಡು ವರ್ಷ ಭೂಗತರಾಗಿ ಪಕ್ಷದ ಕೆಲಸ ಮಾಡಿದರು. ಭೂಗತರಾಗಿದ್ದಾಗ ಮಹಾರಾಷ್ಟ್ರದಿಂದ ಪಶ್ಚಿಮ ಬಂಗಾಲಕ್ಕೆ ಹೋಗಿ ಅಲ್ಲಿ ಕಾರ್ಮಿಕ, ರೈತ ಹೋರಾಟಗಳಲ್ಲಿ ಭಾಗವಹಿಸಿದರು. ಈ ಎಲ್ಲದರ ಮಧ್ಯೆಯೂ ಅವರು ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ, ಕಾನೂನಿನಲ್ಲಿ ಸ್ನಾತಕ ಪದವಿ ಪಡೆದರು. ಸ್ವಾತಂತ್ರ್ಯಾನಂತರವೂ ತಮ್ಮ ಹೋರಾಟ ಮುಂದುವರೆಸಿದರು. ಪಡೆದ ಸ್ವಾತಂತ್ರ್ಯವನ್ನು ದುಡಿವ ವರ್ಗಕ್ಕೆ ಜನಸಾಮಾನ್ಯರಿಗೆ ತಲುಪಿಸುವುದು ಅವರ ಆಶಯವಾಗಿತ್ತು. ಇದೇ ಸಂದರ್ಭದಲ್ಲಿ ರೈತ–ಕಾರ್ಮಿಕರು ಐಕ್ಯಹೋರಾಟದ ಮೂಲಕ ಎಡ ಮತ್ತು ಪ್ರಜಾಸತ್ತಾತ್ಮಕ ಕ್ರಾಂತಿಯೆಡೆಗೆ ಸಾಗಿ ಪ್ರಭುತ್ವವನ್ನು ಪಡೆಯಬೇಕೆನ್ನುವುದು ಅವರ ಧ್ಯೇಯವಾಗಿತ್ತು. ೧೯೫೭ರಲ್ಲಿ ಮಹಾರಾಷ್ಟ್ರ ರಾಜ್ಯ ಶಾಸನಸಭೆಗೆ ಆಯ್ಕೆಯಾದ ಬರ್ಧನ್ ಉತ್ತಮ ಶಾಸಕರಾಗಿಯೂ ಕೆಲಸ ಮಾಡಿದರು.

ಡಾ॥ ಸಿದ್ದನಗೌಡ ಪಾಟೀಲ

ಮಹಾರಾಷ್ಟ್ರದ ಏಕೀಕರಣಕ್ಕೂ ಹೋರಾಡಿದ ಬರ್ಧನ್ ನಂತರದ ದಶಕಗಳಲ್ಲಿ ಕಾರ್ಮಿಕ

ನಾಯಕರಾಗಿ ಬೆಳೆದರು. ವಿದ್ಯುತ್ ಮಂಡಳಿ ನೌಕರರು, ರೈಲ್ವೇ ನೌಕರರು, ನೂಲಿನ ಗಿರಣಿ ಕಾರ್ಮಿಕರು, ಮುದ್ರಣ ಕೆಲಸಗಾರರು, ಇಂಜಿನಿಯರಿಂಗ್ ನೌಕರರು, ರಕ್ಷಣಾ ಇಲಾಖೆ ನೌಕರರು ಇಂಥ ಹಲವಾರು ಕ್ಷೇತ್ರಗಳ ನೌಕರರನ್ನು ಸಂಘಟಿಸಿ ಅವರಿಗೆ ಸಮರ್ಥ ನಾಯಕತ್ವ ಕೊಟ್ಟ ಬರ್ಧನ್ ೧೯೮೦ರ ನಂತರ ಅಖಿಲ ಭಾರತ ಕಾರ್ಮಿಕ ನಾಯಕರಾಗಿ ಬೆಳೆದರು. ೧೯೯೪ರಲ್ಲಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾದರು. ೧೯೯೬ರಲ್ಲಿ ಬರ್ಧನ್ ಭಾರತ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾದರು. ಅಂದು ಈ ದೇಶದಲ್ಲಿ ತೃತೀಯ ರಂಗ ಆಡಳಿತಕ್ಕೆ ಬಂದ ಸಂದರ್ಭ. ಅಂದಿನ ತೃತೀಯ ರಂಗದ ಸರಕಾರದಲ್ಲಿ ಸಿಪಿಐನ ಇಂದ್ರಜಿತ್ ಗುಪ್ತಾ ಗೃಹಮಂತ್ರಿಯಾಗಿ, ಚತುರಾನ್ ಮಿಶ್ರಾ ಕೃಷಿಮಂತ್ರಿಯಾಗಿದ್ದರು. ಆ ಸರಕಾರದ ರಚನೆಯ ಸಂದರ್ಭದಲ್ಲಿಯೂ ಬರ್ಧನ್ ಪ್ರಮುಖ ಪಾತ್ರ ವಹಿಸಿದ್ದರು. ಮುಂದೆ ಕಾಂಗ್ರೆಸ್ ನಾಯಕತ್ವದ ಯುಪಿಎ-೧ ಸರಕಾರಕ್ಕೆ ಎಡಪಕ್ಷಗಳು ಬಾಹ್ಯಬೆಂಬಲ ನೀಡಿದವು. ಈ ಬೆಂಬಲಕ್ಕೆ ಸಾಮಾನ್ಯ ಕನಿಷ್ಠ ಕಾರ್ಯಕ್ರಮ ಆಧಾರವಾಗಿತ್ತು. ಈ ಸಾಮಾನ್ಯ ಕನಿಷ್ಠ ಕಾರ್ಯಕ್ರಮ ರೂಪಿಸುವಲ್ಲಿ ಬರ್ಧನ್ ಅವರ ಪಾತ್ರ ಮಹತ್ವದ್ದಾಗಿತ್ತು. ಅಂದು ಕಾಂಗ್ರೆಸ್ ಹೆಚ್ಚು ಸ್ಥಾನ ಪಡೆದು ಆಯ್ಕೆಯಾದಾಗ ಶ್ರೀಮತಿ ಸೋನಿಯಾ ಗಾಂಧಿಯವರು ಪ್ರಧಾನಿಯಾಗುವ ಸಾಧ್ಯತೆಗಳು ಹೆಚ್ಚಾಗಿದ್ದವು. ಆದರೆ ಬಿ.ಜೆ.ಪಿ. ಸೋನಿಯಾ ಅವರ ವಿದೇಶೀ ಮೂಲವನ್ನು ಕೆದಕಿ ದೇಶದಾದ್ಯಂತ ಕೋಮು ಗಲಭೆ ಸೃಷ್ಟಿಸುವ ಸಂಚು ರೂಪಿಸಿತ್ತು. ಅಂಥ ಸಂದಿಗ್ಧ ಸ್ಥಿತಿಯಲ್ಲಿ ಸೋನಿಯಾ ಗಾಂಧಿಯವರು ಬರ್ಧನ್ ಅವರ ಅಭಿಪ್ರಾಯವನ್ನು ಪಡೆದಿದ್ದರು. ದೇಶದ ಎಲ್ಲ ರಾಜಕೀಯ ಪಕ್ಷಗಳು ಅಪಾರವಾಗಿ ಗೌರವಿಸುತ್ತಿದ್ದ ವ್ಯಕ್ತಿತ್ವ ಎ. ಬಿ. ಬರ್ಧನ್ ಅವರದು.



ಮಂತ್ರಿಯಾಗದಿದ್ದರೆ ಮುಖ ತೋರಿಸಲ್ಲಾಂತ ಹೇಳಿ ಹೋದರು, ಈ ಬಾರಿಯು ಕೊಡಲಿಲ್ಲಾಂತ ಕಾಣುತ್ತೆ ಅದಕ್ಕೆ ಈ ರೀತಿ....!

ಎ. ಬಿ. ಬರ್ಧನ್ ಈ ದೇಶದ ಎಡಶಕ್ತಿಗಳು ಒಂದಾಗಬೇಕೆಂದು ನಿರಂತರ ಶ್ರಮಿಸಿದರು. ಅದರಲ್ಲೂ ೧೯೬೪ರಲ್ಲಿ ಸಿಪಿಐನಿಂದ ಸಿಡಿದುಹೋದ ಎಲ್ಲ ಕಮ್ಯುನಿಸ್ಟ್ ಪಕ್ಷಗಳು, ಗುಂಪುಗಳು ಮತ್ತೆ ಒಂದಾಗಬೇಕು ಎಂಬುದು ಅವರ ತೀವ್ರವಾದ ತುಡಿತವಾಗಿತ್ತು. ಎಡಪಕ್ಷಗಳ ಐಕ್ಯಹೋರಾಟಕ್ಕೆ ನಾಯಕತ್ವ ಕೊಡುತ್ತಲೇ ಎಡ ಮತ್ತು ಜಾತ್ಯತೀತ, ಪ್ರಜಾಸತ್ತಾತ್ಮಕ ಶಕ್ತಿಗಳು ಸೇರಿ ಒಂದು ಪರ್ಯಾಯ ರಾಜಕೀಯ ರಂಗ ರಚಿಸಬೇಕೆನ್ನುವುದು ಅವರ ಕಾಳಜಿ ಯಾಗಿತ್ತು. ೨೦೦೯ರ ಲೋಕಸಭಾ ಚುನಾವಣೆಯ ಮುಂಚಿನ ದಿನಗಳಲ್ಲಿ ಬೆಂಗಳೂರು ಹತ್ತಿರದ ದಾಬಸಪೇಟೆಯಲ್ಲಿ ಪರ್ಯಾಯ ರಂಗ ರಚಿಸುವ ಯೋಜನೆಗಾಗಿ ಬೃಹತ್ ಸಮಾವೇಶ ಜರುಗಿತು. ಜನತಾ ದಳದ ದೇವೇಗೌಡರು ಸಮಾವೇಶದ ಜವಾಬ್ದಾರಿ ಹೊತ್ತಿದ್ದರೆ, ಎ. ಬಿ. ಬರ್ಧನ್ ಮತ್ತು ಸಿಪಿಎಂನ ಪ್ರಕಾಶ ಕಾರಟ್ ಅವರು ದೇಶದ ಜಾತ್ಯತೀತ, ಪ್ರಾದೇಶಿಕ ಪಕ್ಷಗಳ ಭಾಗವಹಿಸುವಿಕೆಗಾಗಿ ಶ್ರಮಿಸಿದರು. ಸಮಾವೇಶವೇನೋ ಯಶಸ್ವಿಯಾಯಿತು. ಆದರೆ ಪರ್ಯಾಯ ರಂಗ ರೂಪಗೊಳ್ಳಲಿಲ್ಲ. ಆದರೆ ಪಟ್ಟುಬಿಡದ ಬರ್ಧನ್ ಕನಿಷ್ಠ ಎಡಪಕ್ಷಗಳಾದರೂ ಒಂದಾಗಿ ಎಡರಂಗ ವಿಸ್ತರಿಸಿಕೊಳ್ಳಲಿ ಎಂದು ಆ ನಿಟ್ಟಿನಲ್ಲಿ ಪ್ರಯತ್ನಿಸಿ ಸಫಲತೆ ಕಂಡರು. ಇಂದು ದೇಶದಲ್ಲಿ ಎಡರಂಗ ವಿಸ್ತರಿಸಿ ಐಕ್ಯಹೋರಾಟ ನಡೆಯುತ್ತಿದೆ. ಇದು ಬರ್ಧನ್ ತಮ್ಮ ಕೊನೆಯುಸಿರಿನವರೆಗೂ ನಡೆಸಿದ ಪ್ರಯತ್ನಕ್ಕೆ ಸಿಕ್ಕ ಫಲ.

ನಡೆಯ ಮೂಲಕವೇ ಒಂದು ಮಾದರಿಯನ್ನು ರೂಪಿಸಿದ ನಾಯಕ ಎ. ಬಿ. ಬರ್ಧನ್ ಅವರು ರಾಷ್ಟ್ರೀಯ ನಾಯಕತ್ವ ವಹಿಸಿಕೊಂಡು ದೆಹಲಿಗೆ ಹೋದ ದಿನದಿಂದಲೂ ಕೊನೆಯುಸಿರಿನವರೆಗೆ ಪಕ್ಷದ ಕೇಂದ್ರ ಕಾರ್ಯಾಲಯ ಅಜಯ ಭವನದ ಒಂದು ಕೊಠಡಿಯಲ್ಲಿಯೇ ವಾಸವಾಗಿದ್ದರು. ದಶಕದ ಹಿಂದೆಯೇ ಪತ್ನಿ ತೀರಿಹೋಗಿದ್ದರು. ಅವರ ಮಗ, ಸೊಸೆ ಅಮೆರಿಕದ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕ ಹುದ್ದೆಯಲ್ಲಿದ್ದಾರೆ. ಮಗಳೂ ಸ್ಥಿತಿವಂತರೇ ಆದರೂ ಬರ್ಧನ್ ಎಲ್ಲೂ ಹೋಗದೆ ಪಕ್ಷದ ಕಾರ್ಯಾಲಯದಲ್ಲಿಯೇ ಉಳಿದು ಈ ಇಳಿವಯಸ್ಸಿನಲ್ಲಿಯೂ ಕ್ರಿಯಾಶೀಲ ರಾಗಿದ್ದರು. ಅವರ ೯೦ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ನಾಗಪುರದ ಸಂಗಾತಿಗಳು, ಹಿತೈಷಿಗಳು ಅವರಿಗೆ ೯೦ ಲಕ್ಷ ರೂಪಾಯಿಗಳ ಕಾಣಿಕೆ ಕೊಟ್ಟರು. ಬರ್ಧನ್ ಆ ಹಣವನ್ನು - ಪಕ್ಷದ ಮಹಾರಾಷ್ಟ್ರ ಘಟಕಕ್ಕೂ, ಕೇಂದ್ರ ಸಮಿತಿಗೂ ಕೊಟ್ಟು ಕೈಬೀಸಿಕೊಂಡು ನಡೆದರು. ಇದೇ ರೀತಿ ತಮಿಳುನಾಡಿನ ಹಿರಿಯ ಕಮ್ಯುನಿಸ್ಟ್ ನಾಯಕ ನಲ್ಲಕಣ್ಣು ತಮ್ಮ ಅಭಿನಂದನಾ ಸಮಾರಂಭದಲ್ಲಿ ಕೊಟ್ಟ ಒಂದು ಕೋಟಿ ರೂಪಾಯಿ ಮತ್ತು ಒಂದು ಹೊಸ ಕಾರನ್ನು ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿಯವರಿಗೆ ಕೊಟ್ಟು ಕೈ ಮುಗಿದಿದ್ದರು. ಇಂಥ ಮಹಾನ್ ತ್ಯಾಗಿಗಳಿಂದಾಗಿಯೇ ಎಂಥ ಬಿರುಗಾಳಿ ಬಂದರೂ, ಪ್ರತಿಕೂಲ ವಾತಾವರಣದಲ್ಲಿಯೂ ೧೯೨೫ರಲ್ಲಿ ಸ್ಥಾಪನೆಯಾದ ಕಮ್ಯುನಿಸ್ಟ್ ಪಕ್ಷ ಇಂದಿಗೂ ಉಳಿದು ಬೆಳೆದು ಬಂದಿದೆ.

ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯಲ್ಲಿಯೂ ವಿವಿಧ ದೇಶಗಳ ಕಮ್ಯುನಿಸ್ಟ್ ನಾಯಕರಿಂದಲೂ ಅಪಾರ ಗೌರವ ಪಡೆದಿದ್ದ ಬರ್ಧನ್ ಮಹಾನ್ ಮೇಧಾವಿಯಾಗಿದ್ದರು. ತಮ್ಮ ೧೫ನೇ ವರ್ಷದಿಂದ ಹೋರಾಟಕ್ಕಿಳಿದು ೯೨ನೇ ವರ್ಷದವರೆಗೂ ದೇಶಕ್ಕಾಗಿ, ದುಡಿವ ವರ್ಗಕ್ಕಾಗಿ ದುಡಿದು ನಿರ್ಗಮಿಸಿದ ಈ ಮಹಾನ್ ನಾಯಕ ದೇಶದಲ್ಲಿ ಲಕ್ಷಾಂತರ ಜನರಿಗೆ ಸ್ಫೂರ್ತಿ ನೀಡಿದ್ದಾರೆ. ಹಲವಾರು ದೇಶಗಳಲ್ಲಿ ಅಭಿಮಾನಿಗಳನ್ನು ಹೊಂದಿದ್ದಾರೆ. ಅವರ ಆಶಯಗಳೊಂದಿಗೆ ಅವರು ತೋರಿದ ಗುರಿಯತ್ತ ಸಾಗಿ ಶೋಷಣಾಮುಕ್ತ ಸಮಾಜ ನಿರ್ಮಿಸುವುದೇ ಅವರನ್ನು ಪ್ರೀತಿಸುವ, ಗೌರವಿಸುವ ಎಲ್ಲರ ಗುರಿಯಾಗಬೇಕು. ಅದುವೇ ಅವರಿಗೆ ಸಲ್ಲಿಸುವ ಸೂಕ್ತ ಗೌರವ.

---

**ಡಾ॥ ಸಿದ್ದನಗೌಡ ಪಾಟೀಲ**
ಸಂಪಾದಕ
ಹೊಸತು ಪತ್ರಿಕೆ



# ‘ವಂಶವೃಕ್ಷ’ ಮತ್ತು ‘ಸಂಸ್ಕಾರ’ಗಳ ಮುಖಾಮುಖಿ




ಡಾ॥ ಎಸ್. ಎಲ್. ಭೈರಪ್ಪನವರ ‘ವಂಶವೃಕ್ಷ’ ಮತ್ತು ಡಾ॥ ಯು.ಆರ್. ಅನಂತಮೂರ್ತಿಯವರ ‘ಸಂಸ್ಕಾರ’ – ಈ ಎರಡೂ ಕಾದಂಬರಿಗಳು ಪ್ರಕಟವಾದದ್ದು ಒಂದೇ ವರ್ಷದಲ್ಲಿ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಪ್ರಾತಿನಿಧಿಕ ಸ್ಥಾನ ಪಡೆದಿರುವ ಇಂಥ ಕಾದಂಬರಿಗಳು ನಿರಂತರವಾಗಿ ಪ್ರವಹಿಸುವ ಸಾಂಸ್ಕೃತಿಕ ಇತಿಹಾಸದ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಮೈದಾಳುತ್ತವೆ; ಒಂದರೊಡನೊಂದು ಸಂಮಿಳನಗೊಳ್ಳುವುದುಂಟು; ಸಂಘರ್ಷಿಸುವುದುಂಟು. ಹಾಗೆಂದು ಒಂದು ಕೃತಿಯು ಮತ್ತೊಂದರ ಮೇಲೆ ಪ್ರಭಾವ ಬೀರಿದೆಯೆಂದು ತಿಳಿಯಬೇಕಾಗಿಲ್ಲ. ಪ್ರಕಟಣೆಯ ಮುಂಚೆ ಒಬ್ಬರ ರಚನೆಯನ್ನು ಮತ್ತೊಬ್ಬರು ನೋಡಿರುವ ಸಂಭವವಿಲ್ಲ. ಆಳವಾಗಿ ಪರಿಶೀಲಿಸಿದರೆ, ಎರಡೂ ಕೃತಿಗಳು ಮನುಷ್ಯ ಜೀವನದ ಕೆಲವು ಸಾರಭೂತ ತುಡಿತಗಳನ್ನೊಳಗೊಂಡಿವೆಯೆಂಬುದನ್ನು ಕಂಡುಕೊಳ್ಳಬಹುದು. ಆದರೆ ಒಂದೊಂದು ಕೃತಿಯೂ ತನ್ನ ವಸ್ತುವನ್ನು ಕಾದಂಬರಿಯಾಗಿ ವಿನ್ಯಾಸಗೊಳಿಸುವ ಮೂಲಕ ತನ್ನ ಪ್ರತ್ಯೇಕತೆಯನ್ನು, ಅನನ್ಯತೆಯನ್ನು ಸಾಬೀತುಗೊಳಿಸುತ್ತದೆ.

‘ವಂಶವೃಕ್ಷ’ವು ಮೂರು ತಲೆಮಾರಿನ ಪಾತ್ರಗಳನ್ನೊಳಗೊಂಡು, ಸಾವಕಾಶವಾಗಿ ಸಾಗುವ ದೊಡ್ಡ ಗಾತ್ರದ (೩೪೬ ಪುಟಗಳು) ಕಾದಂಬರಿ. ಕೃತಿಯ ಸ್ಥೂಲರೂಪವು ಸಿದ್ಧವಾದ ಮೇಲೆಯೂ ಅದನ್ನು ಕೆಲವು ಕಾಲ ಶೈತ್ಯಾಗಾರದಲ್ಲಿಟ್ಟು, ಮತ್ತೆ ಮತ್ತೆ ಪರಿಶೀಲಿಸಿ, ಅಗತ್ಯವಿದ್ದ ಕಡೆಗಳಲ್ಲಿ ವೇದ, ವೇದಾಂತ, ಸ್ಮೃತಿ. ಪುರಾಣಗಳಿಂದ ಉದ್ಧರಣಗಳನ್ನು ಜೋಡಿಸಿ, ತಮ್ಮ ಉದ್ದೇಶಕ್ಕೆ ತಕ್ಕಂತೆ ಅವುಗಳನ್ನು ವ್ಯಾಖ್ಯಾನಿಸಿ ಅಂತಿಮರೂಪವನ್ನು ಪ್ರಕಟಿಸುವುದು ಭೈರಪ್ಪನವರ ಬರವಣಿಗೆಯ ಧಾಟಿ. (ಈ ಅಭಿಪ್ರಾಯವನ್ನು ಲೇಖಕರೇ ಹಲವು ಕಡೆ ಸ್ಪಷ್ಟಪಡಿಸಿದ್ದಾರೆ) ವಂಶವೃಕ್ಷವು ಈ ಮಾತಿಗೆ ಹೊರತಾಗಿಲ್ಲ. ೧೯೬೨ರಲ್ಲಿ ಆರಂಭವಾಗಿ ೧೯೬೫ರಲ್ಲಿ ಮೊದಲಿಗೆ ಪ್ರಕಟವಾದ ವಂಶವೃಕ್ಷವು ೨೦೧೫ರ ವೇಳೆಗೆ ೧೪ ಮರುಮುದ್ರಣಗಳನ್ನು ಕಂಡಿದೆ. ಇದಕ್ಕೆ ಹೋಲಿಸಿದರೆ, ಅನಂತಮೂರ್ತಿಯವರು ವಿದೇಶದಲ್ಲಿದ್ದಾಗ (ಬರ್ಮಿಂಗ್ ಹ್ಯಾಂ), ಒಂದೇ ರಾತ್ರಿ ಪಟ್ಟಾಗಿ ಕುಳಿತು ರಚಿಸಿದರೆನ್ನಲಾದ ‘ಸಂಸ್ಕಾರ’ವು ೧೧೫ ಪುಟಗಳ ಕಿರು ಕಾದಂಬರಿ. ೨೦೧೫ರ ವರೆಗೆ ಸಂಸ್ಕಾರವು ೧೩ ಬಾರಿ ಮರುಮುದ್ರಣಗೊಂಡಿದೆ.




ವಂಶವೃಕ್ಷ ಮತ್ತು ಸಂಸ್ಕಾರಗಳ ನಡುವೆ ಸಾಮ್ಯ ಮತ್ತು ವೈರುಧ್ಯಗಳೆರಡೂ ಇವೆ. ಹೀಗಿರುವುದರಿಂದ ಎರಡೂ ಕಾದಂಬರಿಗಳು ಮುಖಾಮುಖಿಯಾಗಿ ಕುಳಿತು, ವಾದವಿವಾದಗಳಲ್ಲಿ, ಜಿಜ್ಞಾಸೆಯಲ್ಲಿ ತೊಡಗಿರುವಂತೆ ಭಾವಿಸಿ ಪರಿಶೀಲಿಸಬಹುದು. ಎರಡೂ ಕಾದಂಬರಿಗಳ ನಾಯಕ ಪಾತ್ರಗಳು ಪ್ರಕೃತಿ ಸಹಜವಾದ ಸ್ತ್ರೀ ಸುಖದಿಂದ ವಂಚಿತರಾಗಿ, ದೇಹ ಮತ್ತು ಮನಸ್ಸುಗಳ ದ್ವಂದ್ವದಲ್ಲಿ ವಿಕ್ಷಿಪ್ತತೆಗೆ ಒಳಗಾದವರು.

ನಂಜನಗೂಡಿನ ನಂಜುಂಡ ಶ್ರೌತಿಗಳ ಮಗ ಶ್ರೀನಿವಾಸ ಶ್ರೌತಿಗಳು ಚಿಕ್ಕ ವಯಸ್ಸಿನಲ್ಲಿಯೇ ಭಾಗೀರತಮ್ಮನನ್ನು ಮದುವೆಯಾಗಿ, ಮೂರು ವರ್ಷ ಕಳೆದಮೇಲೆ ಮೊದಲ ಪುತ್ರ ಸಂತಾನವನ್ನು ಪಡೆದು ನೆಂಟರಿಷ್ಟರೊಡನೆ ಕೂಡಿ ಸಂಭ್ರಮಿಸಿದರು. ಆದರೆ ಈ ಸಂಭ್ರಮವು ಹೆಚ್ಚು ದಿನ ಮುಂದುವರಿಯಲಿಲ್ಲ.

ಹೆರಿಗೆಯು ತುಂಬ ಕಷ್ಟಕರವಾಗಿದ್ದು, ಆಪರೇಷನ್ ಮಾಡಿ ಮಗುವನ್ನು ಹೊರತೆಗೆಯಬೇಕಾಯಿತು. ಮಗು ಬಾಣಂತಿಯನ್ನು ಆಸ್ಪತ್ರೆಯಿಂದ ಮನೆಗೆ ಕಳಿಸುವಾಗ, ಆಪರೇಷನ್ ಮಾಡಿದ ವೈದ್ಯರು ಶ್ರೌತಿಗಳನ್ನು ಪ್ರತ್ಯೇಕವಾಗಿ ಕರೆದು “ನಿಮ್ಮದು ದೈಹಿಕವಾಗಿ ಅಸಮದಾಂಪತ್ಯ(?), ನಿಮ್ಮ ಪತ್ನಿ ಮತ್ತೊಮ್ಮೆ ಗರ್ಭಿಣಿಯಾದರೆ ಅವರ ಸಾವು ಖಂಡಿತ; ನೀವು ಇನ್ನು ಮೇಲೆ ದೈಹಿಕ ಸಂಬಂಧವನ್ನು ನಿಲ್ಲಿಸಬೇಕು”– ಎಂದು ಹೇಳಿದ್ದರು. ಮಹಿಳಾ ವೈದ್ಯರು ಭಾಗೀರತಮ್ಮನಿಗೂ ಇದೇ ಮಾತು ಹೇಳಿದ್ದರಂತೆ.

ಅಂದಿನಿಂದ ಶ್ರೌತಿಗಳು ಹೆಂಡತಿಯೊಂದಿಗೆ ದೇಹಸಂಬಂಧವನ್ನು ತ್ಯಜಿಸಿದ್ದು ಮಾತ್ರವಲ್ಲದೆ, ಹೆಂಡತಿಯ ಹತ್ತಿರ ಕುಳಿತು, ಸರಸದ ಮಾತುಗಳನ್ನಾಡಿದರೆ, ಆಕೆಯನ್ನು ಸಂತೈಸಹೋದರೆ, ಆಕೆಯ ಮೈಮುಟ್ಟಿದರೆ ಎಲ್ಲಿ ತಮ್ಮ ವ್ರತಕ್ಕೆ ಭಂಗ ಬರುತ್ತದೆಯೊ ಎಂದು ಅಂಜಿದವರಂತೆ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ವರ್ತಿಸತೊಡಗಿದರು. ತಮ್ಮ ಯಜಮಾನರು ಹೆಣ್ಣಿನ ಸಂಗವಿಲ್ಲದೆ, ದೇಹದ ಬಯಕೆಯನ್ನು ಹತ್ತಿಕ್ಕಲು ಒದ್ದಾಡುತ್ತಿರುವುದನ್ನು ಸಹಿಸಲಾರದೆ ಭಾಗೀರತಮ್ಮ ಸಾಮಾನ್ಯವಾಗಿ ಯಾವ ಹೆಂಡತಿಯೂ ಯೋಚಿಸದ – ಒಂದು ಅಪರೂಪದ ಉಪಾಯವನ್ನು ಯೋಚಿಸಿದರು.

ತಮ್ಮ ಜೊತೆಗೇ ಮಲಗುತ್ತಿದ್ದ ಮನೆಗೆಲಸದ ಒಕ್ಕಲಗಿತ್ತಿ ಲಕ್ಷ್ಮಿಯನ್ನು ಉಪಾಯದಿಂದ ಒಂದು ರಾತ್ರಿ, ಮಹಡಿಯ ಮೇಲೆ, ತನ್ನ ಗಂಡನ ಕೋಣೆಯಲ್ಲಿ ಮಲಗುವಂತೆ ಪುಸಲಾಯಿಸಿ ಒಪ್ಪಿಸಿದರು. "ಲಕ್ಷ್ಮಿ ಇದಕ್ಕೆ ಒಪ್ಪಿರುವಳೆಂದೂ, ತಾನೇ ಇಷ್ಟಪಟ್ಟಿರುವಳೆಂದೂ" ಸುಳ್ಳು ಹೇಳಿ ಲಕ್ಷ್ಮಿಯನ್ನು ಮಹಡಿಯ ಮೇಲೆ ಕಳಿಸಿದರು.

ಆ ರಾತ್ರಿ ಒಂದುಕಡೆ, ತಮ್ಮ ಕೋಣೆಯಲ್ಲಿ ಕುಳಿತು ಅಧ್ಯಯನದಲ್ಲಿ ತೊಡಗಿದ್ದ ಶ್ರೌತಿಗಳು ಮತ್ತೊಂದು ಕಡೆ ಬಾಗಿಲ ಬಳಿ ಹಾಸಿಗೆ ಹಾಕಿಕೊಂಡು ಮಲಗಿದ್ದ ಲಕ್ಷ್ಮಿ ಇವರ ಅಂತರಂಗದ ವಿಕಾರಗಳನ್ನು ಕಾದಂಬರಿಯಲ್ಲಿ ಸುಮಾರು ಆರು ಪುಟಗಳ ತುಂಬ ವರ್ಣಿಸಲಾಗಿದೆ. ಅಂತಿಮವಾಗಿ "ಧರ್ಮೋ ರಕ್ಷತಿ ರಕ್ಷಿತಃ" (ಧರ್ಮ ಗ್ರಂಥಗಳ ಅಧ್ಯಯನ ಮತ್ತು ದೇವರಪೂಜೆ ಗಾಯತ್ರಿ ಮಂತ್ರ ಜಪ ಇತ್ಯಾದಿ ಬ್ರಾಹ್ಮಣ ಮತಧಾರ್ಮಿಕ ಆಚರಣೆಗಳು – ಎಂದು ಓದಿಕೊಳ್ಳಬೇಕು). ಎಂಬ ವಾಕ್ಯದಲ್ಲಿ ಮಾನಸಿಕ ಮತ್ತು ದೈಹಿಕ ಸಂವೇದನೆಗಳಿಗೆ ಪರಿಹಾರವನ್ನು ಕಂಡುಕೊಂಡರು. ಹೀಗೆ ಶ್ರೌತಿಗಳಲ್ಲಿ ಕಾಮಾಸಕ್ತಿಯು ಅಂತರಂಗದ ತತ್ವ ಜಿಜ್ಞಾಸೆ ಮತ್ತು ನೈತಿಕತೆಯ ಪ್ರಶ್ನೆ ಮಾತ್ರವಾಗಿದೆ. ಆದರೆ ಶ್ರೌತಿಗಳು ನಿಜವಾಗಿಯೂ ವಿಚಲಿತರಾಗುವುದು ತಮ್ಮ 'ವಂಶಶುದ್ಧಿ'ಯ ಪ್ರಶ್ನೆಯನ್ನೆದುರಿಸುವ ಸಂದರ್ಭ ಬಂದಾಗ. ('ವಂಶವೃಕ್ಷ'ವೆಂಬ ಹೆಸರಿಗೂ ಇದು ಕಾರಣವಾಗಿರಬಹುದು).

ಶ್ರೀನಿವಾಸ ಶ್ರೌತಿಗಳು ಪ್ರತಿವರ್ಷವೂ ಪಿತೃಶ್ರಾದ್ಧ ಶ್ರಾದ್ಧ ಪ್ರಯೋಗಸರಿ ಮೊದಲಾದ ಬ್ರಾಹ್ಮಣ್ಯದ ಆಚರಣೆಗಳನ್ನು ಬಹು ಶ್ರದ್ಧೆಯಿಂದ ಆಚರಿಸುತ್ತಿದ್ದರು. ಅವರೊಬ್ಬ ಕರ್ಮಠ ಬ್ರಾಹ್ಮಣ. ಶ್ರೌತಿಗಳ ದೃಷ್ಟಿಯಲ್ಲಿ ಪಿತೃಶ್ರಾದ್ಧವೆಂಬುದು ವಂಶದ ಸಾತತ್ಯವನ್ನು, ಪಾವಿತ್ರ್ಯವನ್ನು ಆಚರಿಸಿ ತೋರಿಸುವ ಮಹತ್ವದ ಕರ್ಮಕಾಂಡ. ಅವರು ತಮ್ಮ 'ಕಾಶ್ಯಪ ಗೋತ್ರದ ವಂಶಶುದ್ಧಿ'ಯನ್ನು ಬಹಳ ಹೆಮ್ಮೆಯಿಂದ ಹೇಳಿ ಕೊಳ್ಳುತ್ತಿದ್ದರು. ಆ ವರ್ಷ ತಂದೆಯ ಶ್ರಾದ್ಧದ ಹಿಂದಿನ ರಾತ್ರಿ ಶ್ರಾದ್ಧಕರ್ಮದ ಒಂದು ನಿರ್ದಿಷ್ಟ ಆಚರಣೆಯ ಬಗೆಗೆ ಸ್ವಲ್ಪ ಸಂದೇಹವುಂಟಾಯಿತು. ಇದಕ್ಕೆ ಸಂಬಂಧಪಟ್ಟ ವಿವರಗಳನ್ನು 'ಗೋಭಿಲಸ್ಮೃತಿ'ಯಿಂದ, ಕೈಬರಹದಲ್ಲಿ ಪ್ರತಿಮಾಡಿಟ್ಟಿದ್ದ ಕಾಗದವು ಎಲ್ಲಿಯೋ ಕಣ್ಮರೆಯಾಗಿದ್ದು, ಹಳೆಯ ಪೆಟಾರಿಯಲ್ಲಿ ಅದನ್ನು ಹುಡುಕಲು ತೊಡಗಿದರು. ಹಳೆಯ ಕಾಗದಗಳ ನಡುವೆ, ಬಹು ಹಿಂದೆಯೆ ತಮ್ಮ ಕುಟುಂಬವನ್ನು ತೊರೆದುಹೋಗಿದ್ದ, ತಮ್ಮ ಚಿಕ್ಕಪ್ಪನಾದ ಕಿಟ್ಟಪ್ಪನು ತನ್ನ ಅಣ್ಣನಿಗೆ (ನಂಜುಂಡ ಶ್ರೌತಿಗಳಿಗೆ) ಬರೆದ ಒಂದು ಕಾಗದ ಅಚಾನಕ್ಕಾಗಿ ಕೈಗೆ ಸಿಕ್ಕಿ, ಅದನ್ನು ಓದಿದಾಗ ತಾವು ಇದುವರೆಗೂ ತಮ್ಮ ತಂದೆಯೆಂದು ತಿಳಿದಿದ್ದ ನಂಜುಂಡ ಶ್ರೌತಿಗಳ ಬೀಜಕ್ಕೆ ಹುಟ್ಟಿದ ಮಗನೇ ಅಲ್ಲವೆಂದೂ, ಆಗಾಗ ಮನೆಗೆ ಬಂದು ಬಿಡಾರ ಹೂಡುತ್ತಿದ್ದ, ಶ್ಯಾಮದಾಸನೆಂಬ ಹರಿಕಥೆದಾಸನ ಬೀಜಕ್ಕೆ ಹುಟ್ಟಿದವರೆಂದೂ ತಿಳಿದು ದೊಡ್ಡ ಆಘಾತವಾಯಿತು. ಈ ವಿಚಾರವು ಖಚಿತವಾದ ಮೇಲೆ ಮಾರನೆ ದಿನ ತಾವು 'ಪಿತೃವೆಂದುಕೊಂಡಿದ್ದ ಪಿತೃವಲ್ಲದ ನಂಜುಂಡ ಶ್ರೌತಿಯ ಶ್ರಾದ್ಧ ಮಾಡಬೇಕೇ ಬೇಡವೇ' ಎಂದು ಶ್ರೌತಿಗಳಿಗೆ ಗೊಂದಲವಾಯಿತು.

ಈ ಹಂತದಲ್ಲಿ ಕಾದಂಬರಿಯು ಕೊನೆಗೊಳ್ಳ ಬಹುದಿತ್ತು ಅಥವಾ ಬಹು ಮುಖ್ಯವಾದ ತಿರುವನ್ನು ಪಡೆಯಬಹುದಾಗಿತ್ತು. ಆದರೆ ಅದಾವುದೂ ಆಗುವುದಿಲ್ಲ. ಅಡುಗೆ ಕೆಲಸಕ್ಕೆ ಬಂದಿದ್ದ ಕುಪ್ಪಯ್ಯನನ್ನು ಮುಂದಿಟ್ಟು ಕೊಂಡು ಅಂತೂ ಶ್ರಾದ್ಧಕಾರ್ಯವನ್ನು ಮುಗಿಸಿದರು (ಪಿಂಡಪ್ರದಾನ ಮಾಡುವಾಗ ಶ್ರೌತಿಗಳಿಗೆ ಬವಳಿಬಂದಂತಾಗಿ, ಪಿಂಡವು ನೆಲಕ್ಕುರುಳುವುದು – ಶ್ರೌತಿಗಳ ವಂಶಪ್ರಜ್ಞೆಗೆ ತಗುಲಿದ ಆಘಾತದ ಸೂಚಕವಾಗಿರಬಹುದು). ಅಂದರೆ ಶ್ರೌತಿಗಳಿಗೆ ಸತ್ಯಕ್ಕೆ ಮುಖಾಮುಖಿಯಾಗುವುದಕ್ಕಿಂತ ಕರ್ಮಾಚರಣೆಯು ಮುಖ್ಯವಾಯಿತು!

ಘನವಿದ್ವಾಂಸರೂ, ಸಂಭಾವಿತರೂ ಆಗಿದ್ದ

ಶ್ರೌತಿಗಳು, ಮೊಮ್ಮಗ ಚೀನಿಯನ್ನು ತಮ್ಮ ತದ್ರೂಪವಾಗಿ ಕರ್ಮಶ್ರದ್ಧೆಯಿಂದ ಬೆಳೆಸುವವರಾದರೂ, ಅವನಲ್ಲಿ ಹೆತ್ತ ತಾಯಿಯ ಬಗೆಗೆ ಜಿಗುಪ್ಸೆಯನ್ನು ಮಾತ್ರವಲ್ಲದೆ, ಅವನು ತಾಯಿಯ ಮುಖ ನೋಡಲು, ಅವಳೊಡನೆ ಎರಡು ಮಾತಾಡಲು ಕೂಡ ಹೇಸುವಂತೆ, ತಾಯಿಯನ್ನು ದ್ವೇಷಿಸುವಂತೆ ಬೆಳೆಸಲು ಹಿಂಜರಿಯುವುದಿಲ್ಲ. (ಶ್ರೌತಿಗಳು ನೇರವಾಗಿ, ಬಾಯಿಬಿಟ್ಟು ಹೇಳದಿದ್ದರೂ, ಅವರ ಪತ್ನಿ ಭಾಗೀರತಮ್ಮ ಮಾತ್ರ "ನಿನ್ನ ಅಮ್ಮ ಯಾರನ್ನೋ ಕಟ್ಟಿಕೊಂಡು, ಓಡಿಹೋದಳು" ಇತ್ಯಾದಿ ಹೇಯವಾಗಿ ಬೈದು ಅವನಲ್ಲಿ ತಾಯಿಯ ಬಗೆಗೆ ಕ್ರೋಧವನ್ನು ಬೆಳೆಸಿ ಪೋಷಿಸುತ್ತಾರೆ.)

ಸೊಸೆ ಕಾತ್ಯಾಯಿನಿ, ಇನ್ನೇನು ಕಡೆಯುಸಿರೆಳೆಯುತ್ತಿರುವಾಗ, ಶ್ರೌತಿಗಳು ಸಂಸಾರ ಜೀವನವನ್ನು ಸಂಪೂರ್ಣವಾಗಿ ತ್ಯಜಿಸಿ, ಕಾವಿಬಟ್ಟೆಯುಟ್ಟು, ಸಂನ್ಯಾಸ ದೀಕ್ಷೆ ತೊಟ್ಟು ದೇಶಾಂತರ ಪ್ರಯಾಣದ ನಡುವೆ ಮೈಸೂರಿಗೆ ಬಂದು ಕಾತ್ಯಾಯಿನಿಯನ್ನು, ನೋಡಿಕೊಂಡು ಅಲ್ಲಿಂದ ಮುಂದೆ ಹೊರಟಾಗ, ತಾಯಿಯನ್ನು ನೋಡಲು ಕಡೆ ಗಳಿಗೆಯಲ್ಲಿ ಬಂದಿದ್ದ ಚೀನಿ ಕಾತ್ಯಾಯಿನಿಯ ಉಸಿರು ನಿಂತುಹೋದ ವಿಷಯ ತಿಳಿಸಿದ. ಆಗ ಅವರು ತಾಯಿಯ ಉತ್ತರಕ್ರಿಯಾದಿಗಳನ್ನು ಶ್ರದ್ಧಾಭಕ್ತಿಗಳಿಂದ ಮಾಡುವಂತೆ ಮಾತಾಪಿತೃಗಳ ಶ್ರಾದ್ಧಕರ್ಮಗಳನ್ನು ವಿಧ್ಯುಕ್ತವಾಗಿ ನಡೆಸುತ್ತ ಬದುಕುವಂತೆ ಉಪದೇಶ ಮಾಡಿ, ತಮ್ಮ ಅಂತಿಮಗುರಿಯ ಕಡೆಗೆ ವೇಗವಾಗಿ ಹೆಜ್ಜೆ ಹಾಕಿದರು.

"ಶ್ರೌತಿಗಳು ಸನಾತನಧರ್ಮವನ್ನು ಬದುಕು (ಕಿಸು ?)ತಿದ್ದರು" ಎಂಬ ವಾಕ್ಯದಿಂದಲೆ ಭೈರಪ್ಪನವರು ಕಾದಂಬರಿಯ ಒಂದು ಪರಿಚ್ಛೇದವನ್ನು ಆರಂಭಿಸುತ್ತಾರೆ! ಈ ಅಭಿಪ್ರಾಯವನ್ನು ಶ್ರೌತಿಗಳ ಬದುಕಿನ ಮೂಲಕ ಮತ್ತೆ ಮತ್ತೆ ಶ್ರುತಪಡಿಸುತ್ತಾರೆ. ಆದರೆ, ಶ್ರೌತಿಗಳ ವ್ಯಕ್ತಿತ್ವವನ್ನು ವಿಶ್ಲೇಷಿಸಿದಾಗ "ಸನಾತನ ಧರ್ಮವೆಂದರೆ ಇಷ್ಟೇನೇನೇಯೆ ?" – ಎಂಬ ಪ್ರಶ್ನೆ ಓದುಗರ ಮನಸ್ಸಿನಲ್ಲಿ ಸುಳಿದರೆ ಆಶ್ಚರ್ಯವಿಲ್ಲ.

ಡಾ॥ ಯು. ಆರ್. ಅನಂತಮೂರ್ತಿಯವರ 'ಸಂಸ್ಕಾರ', ಕಿರು ಕಾದಂಬರಿ (೧೦೮ ಪುಟಗಳು)ಯ ನಾಯಕ ಪಾತ್ರವಾದ ದೂರ್ವಾಸಪುರ ಅಗ್ರಹಾರದ ಪ್ರಾಣೇಶಾಚಾರ್ಯ ಮದುವೆಯಾದಾಗ ಆತನಿಗೆ ಹದಿನಾರು ವರ್ಷ; ಹೆಂಡತಿ ಭಾಗೀರತಿಗೆ (ವಂಶವೃಕ್ಷದ ಶ್ರೀನಿವಾಸ ಶ್ರೌತಿಗಳ ಹೆಂಡತಿಯ ಹೆಸರೂ ಇದೇ ಆಗಿರುವುದು ಕೇವಲ ಆಕಸ್ಮಿಕ) ಹನ್ನೆರಡು ವರ್ಷ. ಸಂನ್ಯಾಸಿಯಾಗಬೇಕು ಇಲ್ಲವೆ ತ್ಯಾಗದ ಬಾಳನ್ನು ನಡೆಸಬೇಕೆಂಬ ಛಲದ ಬಾಲಕ ಬೇಕೆಂದೇ, ಹುಟ್ಟಿನಿಂದ ರೋಗಿಷ್ಠೆಯಾಗಿದ್ದ ಹೆಣ್ಣನ್ನು ಮದುವೆಯಾಗಿದ್ದ. (ಕಥಾ ನಿರೂಪಣೆಯ ಸೌಕರ್ಯಕ್ಕಾಗಿಯೆ, ಈ ಕಲ್ಪನೆ ಮೂಡಿರಬಹುದೆ ?) ಹೆಂಡತಿಯನ್ನು ಮಾವನ ಮನೆಯಲ್ಲೆ ಬಿಟ್ಟು ಕಾಶಿಗೆ ಹೋಗಿ ವೇದವೇದಾಂತ ಶಿಖಾಮಣಿಯಾಗಿ ದೂರ್ವಾಸಪುರಕ್ಕೆ ಬಂದು, ಮಾಧ್ವ ಸಂಪ್ರದಾಯದವರ ಆಚಾರ್ಯ ಪೀಠವನ್ನಲಂಕರಿಸಿ, ಮತಧಾರ್ಮಿಕ ವಿಚಾರಗಳಲ್ಲಿ ಅಗ್ರಹಾರದ ಮಾಧ್ವರಿಗೆ ಮಾರ್ಗದರ್ಶಿಯಾಗಿದ್ದ.




ಅದ್ಯಾಕೆ ಹಾಗೆ ಅಳ್ತೀರ ? ನಾನು ಒಂದು ಒಡವೇನೂ ಮುಟ್ಟಿಲ್ಲ. ಬರೀ ಬೇಳೆ ಮಾತ್ರ ತಗೊಂಡು ಹೋಗ್ತಿದೀನಿ ! ಅಷ್ಟೇ !!

ನಿಷ್ಕಾಮ ಕರ್ಮಜೀವನ ನಡೆಸಲಿಕ್ಕೆ ತಮಗೆ ತಾಕತ್ತುಂಟೋ ಇಲ್ಲವೊ ಎಂದು ಪರೀಕ್ಷಿಸಲಿಕ್ಕೆಂದೇ ಭಗವಂತ ರೋಗಿಷ್ಠೆಯಾದ ಹೆಂಡತಿಯನ್ನು ತಮ್ಮ ಕೈಲಿಟ್ಟಿದ್ದಾನೆಂದು ಭಾವಿಸಿ ಪ್ರಾಣೇಶಾಚಾರ್ಯರು ಹೆಂಡತಿಯ ಸೇವೆಯಲ್ಲಿ ತೊಡಗಿದರು. ತಾವೇ ಅಡುಗೆ ಮಾಡಿ, ಹೆಂಡತಿಗೆ ರವೆ ಗಂಜಿ ಕುಡಿಸಿ, ಮದ್ದು ಕೊಟ್ಟು, ಆಮೇಲೆ ಹೊಳೆದಾಟಿ, ಮಾರುತಿ ದೇವಸ್ಥಾನದ ಪೂಜೆಗೆ ಹೋಗುತ್ತಿದ್ದರು.

ಆ ದಿನ, ಪ್ರಾಣೇಶಾಚಾರ್ಯರು ಪೂಜೆ ಮುಗಿಸಿ ಬಂದು, ಭಾಗೀರತಿಗೆ ದೇವರ ಪ್ರಸಾದದ ಹೂ ಮುಡಿಸಿ, ಅವಳಿಂದ ಕಾಲು ಮುಟ್ಟಿಸಿಕೊಂಡು ಆಶೀರ್ವದಿಸಿ, ಒಳಗೆ ಹೋಗಿ ರವೆ ಗಂಜಿ ತಂದರು.

"ಮೊದಲು ನಿಮ್ಮ ಊಟವಾಗಲಿ" ಎಂದಳು ಭಾಗೀರತಿ ಕ್ಷೀಣ ಸ್ವರದಲ್ಲಿ.

"ಇಲ್ಲ, ಮೊದಲು ನಿನ್ನ ಗಂಜಿಯಾಗಲಿ" ಎಂದರು ಆಚಾರ್ಯರು. ಇದು ಇಪ್ಪತ್ತು ವರ್ಷಗಳಿಂದ ಒಬ್ಬರಿಗೊಬ್ಬರು ಆಡಿಕೊಂಡು ಬಂದು ಪರಿಪಾಠವಾಗಿದ್ದ ಮಾತು.

"ನನ್ನನ್ನು ಕಟ್ಟಿಕೊಂಡು ನಿಮಗೇನು ಸುಖ ? ಮನೆಗೊಂದು ಮಗು ಬೇಡವೆ ? ಇನ್ನೊಂದು ಮದುವೆಯಾಗಿ."

"ನನ್ನಂಥ ವೃದ್ಧನಿಗೆ ಮದುವೆ!" – ಎಂದು ನಕ್ಕರು ಪ್ರಾಣೇಶಾಚಾರ್ಯರು.

ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡು – ಎನ್ನಲಿಲ್ಲವೆ ಭಗವಂತ! – ಮುಕ್ತಿಮಾರ್ಗದಲ್ಲಿರುವ ತಮ್ಮನ್ನು ಪರೀಕ್ಷಿಸಲೆಂದೇ ಬ್ರಾಹ್ಮಣ ಜನ್ಮಕೊಟ್ಟು ಇಂತಹ 'ಸಂಸ್ಕಾರ'ಕ್ಕೆ (ಇದು'ಸಂಸ್ಕಾರ' ಶಬ್ದದ ಒಂದು ಅರ್ಥ) ತೊಡಗಿಸಿದ... "ಇವಳು ರೋಗಿಯಾಗಿದ್ದರಿಂದ ನಾನು ಇನ್ನಷ್ಟು ಹದವಾದೆ" ಎಂದು ತಮ್ಮಷ್ಟಕ್ಕೇ ಹೇಳಿಕೊಂಡರು. ಅವರು ಹೀಗೆ ಹೇಳಿಕೊಂಡದ್ದು ಅದೆಷ್ಟನೆಯ ಬಾರಿಗೋ!

ಊಟಕ್ಕೆ ಕೂರುವ ಮುನ್ನ ಗೋಗ್ರಾಸ ಕೊಡುವುದಕ್ಕಾಗಿ ಜಗಲಿಗೆ ಬಂದಾಗ "ಆಚಾರ್ಯರೆ, ಆಚಾರ್ಯರೆ, ...ಎಂದು ಕರೆಯುವ ಧ್ವನಿ ಕೇಳಿಸಿತು. ಬಂದಿದ್ದವಳು ನಾರಣಪ್ಪನ ಸೂಳೆ ಚಂದ್ರಿ.

ಅವಳು ನಾರಣಪ್ಪ ತೀರಿಕೊಂಡ ಸುದ್ದಿ ತಂದಿದ್ದಳು. ಶಿವಮೊಗ್ಗದಿಂದ ಬರುವಾಗಲೆ ಪ್ಲೇಗ್ ರೋಗ ಅಂಟಿಸಿಕೊಂಡು ಬಂದಿದ್ದ ನಾರಣಪ್ಪ, ಜ್ವರ ಏರಿ ಕಂಕುಳಲ್ಲಿ ಬಾವು ಕಾಣಿಸಿಕೊಂಡು ಕಡೆಯುಸಿರೆಳೆದಿದ್ದ.

ಮೊದಲು ನಾರಣಪ್ಪನ 'ಶವಸಂಸ್ಕಾರ'ವಾಗಬೇಕು; (ಇದು ಸಂಸ್ಕಾರದ ಮತ್ತೊಂದು ಅರ್ಥ) ಅಲ್ಲಿಯವರೆಗೆ ಅಗ್ರಹಾರದ ಬ್ರಾಹ್ಮಣರ್‍ಯಾರೂ ಊಟ ಮಾಡುವಂತಿಲ್ಲ. ನಾರಣಪ್ಪನಿಗೆ ಮಕ್ಕಳಿಲ್ಲ; ಅವನ ಶವಸಂಸ್ಕಾರವನ್ನು, 'ಬೊಜ್ಜ' (ತಿಥಿ)ವನ್ನು ಯಾರು ಮಾಡಬೇಕು ?

ಈ ಪ್ರಶ್ನೆಗೆ ಉತ್ತರ ಹುಡುಕುವ ಜವಾಬ್ದಾರಿ, ಅಗ್ರಹಾರದ ಮಾಧ್ವ ಬ್ರಾಹ್ಮಣರಿಗೆಲ್ಲ ಆಚಾರ್ಯರೂ, ಧರ್ಮಶಾಸ್ತ್ರಗಳಲ್ಲಿ ಅಸಮಾನ ಪಂಡಿತರೂ ಆಗಿದ್ದ ಪ್ರಾಣೇಶಾಚಾರ್ಯರ ಹೆಗಲೇರಿತು.

ನಾರಣಪ್ಪ ಹುಟ್ಟಿನಿಂದ ಬ್ರಾಹ್ಮಣನಾದರೂ, ತಾಳಿಕಟ್ಟಿದ ಹೆಂಡತಿಯನ್ನು ಬಿಟ್ಟು, ಕುಂದಾಪುರದಿಂದ 'ಸಾಕ್ಷಾತ್ ವಾತ್ಸಾಯನ ಕಾಮ ಸೂತ್ರದಲ್ಲಿ ವರ್ಣಿಸಿದಂಥ, 'ಚಿತ್ತಿನಿ' ರೂಪದ ಚಂದ್ರಿಯನ್ನು ಕರೆದುಕೊಂಡು ಬಂದು, ಅವಳ ಜೊತೆಗೂಡಿದ್ದ. ತುರುಕರನ್ನು ಅಗ್ರಹಾರಕ್ಕೆ ಕರೆದುಕೊಂಡು ಬಂದು, ಮನೆಯ ಅಂಗಳದಲ್ಲಿ ಅವರ ಜೊತೆ ಅಭಕ್ಷ ಭೋಜನ, ಅಪೇಯಪಾನ ಮಾಡಿದ್ದ. ಯಾರಾದರೂ ಬುದ್ಧಿ ಹೇಳಲು ಹೋದರೆ ಹೀನಾಮಾನ ಬೈದುಬಿಡುತ್ತಿದ್ದ. ಸ್ವತಃ ಪ್ರಾಣೇಶಾಚಾರ್ಯರು, (ಸಾಯುವ ಗಳಿಗೆಯಲ್ಲಿ ಅವನ ತಾಯಿಗೆ ಮಾತುಕೊಟ್ಟಿದ್ದಂತೆ) – ನಾರಾಣಪ್ಪನನ್ನು ಸರಿದಾರಿಗೆ ತರಲು ಪ್ರಯತ್ನಿಸಿ ವಿಫಲರಾಗಿದ್ದರು. ಹೀಗೆ ಬದುಕಿರುವಷ್ಟು ಕಾಲವೂ ಪ್ರಾಣೇಶಾಚಾರ್ಯರಿಗೆ ನಾರಣಪ್ಪ ಸವಾಲಾಗಿದ್ದಂತೆ ಈಗ ಸತ್ತಮೇಲೂ ಸವಾಲಾಗಿದ್ದಾನೆ.

"ನಾರಾಣಪ್ಪ ಬ್ರಾಹ್ಮಣ್ಯವನ್ನು ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಡಲಿಲ್ಲ" ಎಂಬ ಮಾತು ಕಾದಂಬರಿಯಲ್ಲಿ ಮತ್ತೆ ಮತ್ತೆ ಪ್ರತಿಧ್ವನಿಸುತ್ತದೆ.

ನಾರಣಪ್ಪನ ಹತ್ತಿರದ ಬಂಧುಗಳಾದ ಗರುಡಾಚಾರ್ಯ, ದಾಸಾಚಾರ್ಯ ಇವರು ತಮಗೂ ಅವನಿಗೂ ಹಿಂದೆಯೇ ಆಣೆ ಭಾಷೆಗಳಾಗಿ, ತಮ್ಮ ಸಂಬಂಧ ಕಡಿದು ಹೋಗಿರುವುದರಿಂದ ಶವಸಂಸ್ಕಾರ ಮಾಡುವುದು ತಮ್ಮ ಜವಾಬ್ದಾರಿಯಲ್ಲವೆಂದು ಕೈಚೆಲ್ಲಿದರು.

ಜಾತಿಗೆಟ್ಟವನ ಶವಸಂಸ್ಕಾರ ಮಾಡುವುದರಿಂದ ಬರುವ ಪಾಪವನ್ನು, ಗೋದಾನ ಮೊದಲಾದ ಶಾಂತಿಕರ್ಮಗಳ ಮೂಲಕ ಪರಿಹರಿಸಿಕೊಳ್ಳಬಹುದೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆಯೆಂಬ ಮಾತು ಬಂದಾಗ ಇದಕ್ಕೆಲ್ಲ ತಗಲುವ ಖರ್ಚುವೆಚ್ಚಗಳನ್ನು ಯಾರು ಕೊಡುತ್ತಾರೆಂಬ ಪ್ರಶ್ನೆಯೆದ್ದಿತು.

ಈ ಮಧ್ಯೆ ಚಂದ್ರಿ ತನ್ನ ಕೊರಳಲ್ಲಿದ್ದ ನಾಲ್ಕೆಳೆ ಬಂಗಾರದಸರ, ಕಡಗ, ಬಳೆಗಳನ್ನು ಬಿಚ್ಚಿ 'ಸಂಸ್ಕಾರ'ದ ಖರ್ಚಿಗೆ ಎಂದು ಪ್ರಾಣೇಶಾಚಾರ್ಯರ ಮುಂದಿಟ್ಟಳು. ಚಿನ್ನದ ಒಡವೆಗಳನ್ನು ಕಂಡಾಗ

ದಾಸಾಚಾರ್ಯ, ಗರುಡಾಚಾರ್ಯರ ಬಾಯಲ್ಲಿ ನೀರೂರಿತು. ಆದರೂ ಅಗ್ರಹಾರದ ಜನರು ತಮಗೆ ಬಹಿಷ್ಕಾರ ಹಾಕಬಹುದೆಂಬ ಭಯದಿಂದ ಅವರು ಹಿಂಜರಿದರು.

ಶವಸಂಸ್ಕಾರಕ್ಕೆ ಪರಿಹಾರ ಕಾಣುವ ಸಲುವಾಗಿ ಪ್ರಾಣೇಶಾಚಾರ್ಯರು, ತಾಳೆಗರಿ ಗ್ರಂಥಗಳನ್ನು ಬಿಚ್ಚಿ, ಧರ್ಮಶಾಸ್ತ್ರಗಳನ್ನು ಶೋಧಿಸುತ್ತ ಕುಳಿತರು. ನಾರಣಪ್ಪ ಬದುಕಿದ್ದಾಗಲೂ, ಸತ್ತಮೇಲೆಯೂ ಪ್ರಾಣೇಶಾಚಾರ್ಯರಿಗೆ ಒಂದು ಸಮಸ್ಯೆಯಾಗಿಯೇ ಉಳಿದಿದ್ದ. ಪ್ರಾಣೇಶಾಚಾರ್ಯರು ಅವನಿಗೆ ಬ್ರಾಹ್ಮಣ್ಯದ ಬಗ್ಗೆ ಉಪದೇಶ ಮಾಡಿದಾಗೆಲ್ಲ "ನಿಮ್ಮ ಬ್ರಾಹ್ಮಣ ಧರ್ಮ ನಿಮಗೇ ಇರಲಿ; ಇರೋದು ಒಂದು ಆಯುಷ್ಯ; ಅದರಲ್ಲಿ ಆದಷ್ಟು ಸುಖವನ್ನನು ಭವಿಸಬೇಕು – ಎಂಬ ಚಾರ್ವಾಕವಾದದವ ನಾನು" ಎನ್ನುತ್ತಿದ್ದ. ಕೊನೆಗೂ ಗೆಲ್ಲುವುದು ತಮ್ಮ ಅಗ್ರಹಾರದ ಸನಾತನಧರ್ಮ ಮತ್ತು ತಮ್ಮ ತಪಸ್ಸೋ ಅಥವಾ ನಾರಣಪ್ಪನ ಚಾರ್ವಾಕವಾದವೋ ನೋಡಿಯೇ ಬಿಡಬೇಕೆಂಬುದು ಪ್ರಾಣೇಶಾಚಾರ್ಯರ ಹಟ.

ಎಲ್ಲ ತಾಳೆಗರಿ ಗ್ರಂಥಗಳನ್ನು ಆಮೂಲಾಗ್ರವಾಗಿ ಶೋಧಿಸಿದರೂ ಆಚಾರ್ಯರಿಗೆ ಒಪ್ಪಿಗೆಯಾಗುವಂಥ ಉತ್ತರ ಸಿಗಲಿಲ್ಲ. ...ಸನಾತನ ಧರ್ಮದಲ್ಲಿ ತಮ್ಮ ಪ್ರಶ್ನೆಗೆ ಉತ್ತರ ಸಿಗಲಿಲ್ಲವೆಂದಮೇಲೆ ನಾರಣಪ್ಪನೇ ಗೆದ್ದಂತಾಯಿತು – ಎಂದು ಪ್ರಾಣೇಶಾಚಾರ್ಯರು ನಿಟ್ಟುಸಿರುಬಿಟ್ಟರು.

ಕಡೆಯದಾಗಿ, ಪ್ರಾಣೇಶಾಚಾರ್ಯರಿಗೆ ತಾವು ನಿತ್ಯವೂ ಶ್ರದ್ಧಾಭಕ್ತಿಗಳಿಂದ ಪೂಜೆ ಮಾಡುತ್ತಿದ್ದ, ಮಾರುತಿ ಎದುರಿಗೆ ಕುಳಿತು ಇಂಥ ಸಂದಿಗ್ಧದಲ್ಲಿ ಯಾವುದು ಸರಿ ಎಂಬ ಬಗೆಗೆ ಮಾರುತಿಯ ಅಪ್ಪಣೆ ಕೇಳುವ ಉಪಾಯ ಹೊಳೆಯಿತು.

ನಾರಣಪ್ಪನ ಶವಸಂಸ್ಕಾರಕ್ಕೆ, ಪ್ರಾಣೇಶಾಚಾರ್ಯರು ಧರ್ಮಶಾಸ್ತ್ರಗಳಲ್ಲಿ ಏನಾದರೂ ಪರಿಹಾರ ಹುಡುಕಿರ ಬಹುದೆಂಬ ನಿರೀಕ್ಷೆಯಲ್ಲಿ ಆಚಾರ್ಯರ ಮನೆಯ ಜಗಲಿಯಲ್ಲಿ ನಿಂತಿದ್ದ ಅಗ್ರಹಾರದ ಬ್ರಾಹ್ಮಣರನ್ನು ಕುರಿತು ಇಡೀ ರಾತ್ರಿ ಧರ್ಮಗ್ರಂಥಗಳನ್ನೆಲ್ಲ ತಡಕಾಡಿದರೂ ಶವಸಂಸ್ಕಾರದ ಸಮಸ್ಯೆ ಬಗೆಹರಿಯಲಿಲ್ಲ ವಾದ್ದರಿಂದ, ಕಡೆಯದಾಗಿ, ಮಾರುತಿಯ ಅಪ್ಪಣೆ ಕೇಳುವ ತಮ್ಮ ನಿರ್ಧಾರವನ್ನು ಅವರಿಗೆ ತಿಳಿಸಿದರು.

ಆಯ್ತು, ತಾವು ಮಾರುತಿಯ ಅಪ್ಪಣೆ ತರುವವರೆಗೂ ನಾವು ಊಟಮಾಡದೆ ಕಾಯುತ್ತೇವೆ – ಎಂದರು ಅಗ್ರಹಾರದ ಬ್ರಾಹ್ಮಣರು. ಆಚಾರ್ಯರು "ಮಕ್ಕಳಿಗೆ ಅಡ್ಡಿಯಿಲ್ಲ; ಊಟಮಾಡಬಹುದು" – ಎಂದು ಸೂಚಿಸಿ ಮನೆಯಿಂದ ಹೊರಟರು.

ಬಗೆಬಗೆಯ ಹೂವುಗಳಿಂದ ಮಾರುತಿಯ ಪೂಜೆ ಮಾಡಿದ, ಆಚಾರ್ಯರು "ಸಂಸ್ಕಾರವಿಲ್ಲದೆ ಶವ ಕೊಳೆಯುತ್ತಿದೆ; ಮಾರುತಿ, ಎಷ್ಟು ಹೊತ್ತು ನಿನ್ನ ಈ ಪರೀಕ್ಷೆ?" ಎಂದು ಯಾಚಿಸಿದರು. "ಕೂಡದು ಎಂದು ನಿನ್ನ ಮತವಾದರೆ, ಎಡಪ್ರಸಾದವನ್ನಾದರೂ ದಯಮಾಡು" ಎಂದು ಬೇಡಿದರು, ಕಾಡಿದರು, ಗೋಗರೆದರು. ಮಾರುತಿ ಜಗ್ಗಲಿಲ್ಲ, ಎಡಪ್ರಸಾದವನ್ನೂ ಕೊಡಲಿಲ್ಲ, ಬಲಪ್ರಸಾದವನ್ನೂ ಕೊಡಲಿಲ್ಲ. ತಮ್ಮ ಹೆಂಡತಿಗೆ ಔಷಧ ಕೊಡುವ ನೆನಪಾಗಿ ಆಚಾರ್ಯರು ಮೇಲೆದ್ದರು. ಕೂತುಕೂತು ಮರಗಟ್ಟಿದ ಕಾಲು ಗಳನ್ನೆಳೆಯುತ್ತ, ಕೃಷ್ಣಪಕ್ಷದ ಕತ್ತಲ ರಾತ್ರಿಯಲ್ಲಿ ಕಾಡಿನಲ್ಲಿ ಕ್ಷೀಣವಾಗಿ ಕಾಲು ಹಾಕಿದರು.

ಸ್ವಲ್ಪ ದೂರ ನಡೆಯುವಾಗ ಹಿಂದಿನಿಂದ ಕೈಬಳೆಗಳ ಸದ್ದು ಕೇಳಿ, ಯಾರು ಎಂದು ನೋಡಲು ಹಿಂತಿರುಗಿದರು. ಅದೇ ಸಮಯಕ್ಕೆ 'ನಾನು' ಎನ್ನುತ್ತ, ಆಚಾರ್ಯರ ಕಾಲುಮುಟ್ಟಿದ ಚಂದ್ರಿಯನ್ನು ಮೇಲೆತ್ತಲು ಬಾಗಿದಾಗ ಚಂದ್ರಿಯ ಪುಷ್ಟವಾದ ಮೊಲೆಗಳು ಕೈಗೆ ತಾಗಿದವು... ಚಂದ್ರಿಗೂ ಆವೇಗವಾಗಿ, ಅವರ ಕೈಗಳನ್ನು ಭದ್ರವಾಗಿ ಹಿಡಿದು ಎದ್ದುನಿಂತು, ಪಾರಿವಾಳದ ಹಾಗೆ ಡವಗುಡುತ್ತಿದ್ದ ತನ್ನ ಎದೆಗೆ ಆಚಾರ್ಯರನ್ನು ಆನಿಸಿಕೊಂಡಳು. ಬೆಳಗಿನಿಂದ ಆಚಾರ್ಯರು ಏನೂ ತಿಂದಿಲ್ಲವೆಂದು ಗೊತ್ತಿದ್ದುದರಿಂದ, ಮಡಿಲಿನಲ್ಲಿ ಕಟ್ಟಿಕೊಂಡು ಬಂದಿದ್ದ ಬಾಳೆಹಣ್ಣುಗಳನ್ನು ತೆಗೆದು ತಿನ್ನಿಸಿದಳು. ಸೀರೆಯನ್ನು ಬಿಚ್ಚಿ ಹಾಸಿ, ಬೆತ್ತಲೆಯಾಗಿ ಆಚಾರ್ಯರನ್ನು ತಬ್ಬಿ ಮಲಗಿದಳು.

ಆಚಾರ್ಯರಿಗೆ ಎಚ್ಚರವಾದಾಗ ಅವರ ತಲೆ ಚಂದ್ರಿಯ ತೊಡೆಯ ಮೇಲಿತ್ತು; ಕೆನ್ನೆ ಅವಳ ಕಿಬ್ಬೊಟ್ಟೆಗೆ ಅಂಟಿಕೊಂಡಿತ್ತು. ಬೆರಗಿನಿಂದ ನೋಡಿದರು "ಗರಿ ಬಿಚ್ಚಿದ ನವಿಲಿನಂತಹ ಅಕ್ಷಯ ನಕ್ಷತ್ರದ ರಾತ್ರಿ; ಸಪ್ತರ್ಷಿ ಮಂಡಲ; ವಸಿಷ್ಠರ ಪಕ್ಕದಲ್ಲಿ ನಾಚಿ ಮಿರುಗುವ ಅರುಂಧತಿ. ಕೆಳಗೆ ಹುಲ್ಲಿನ, ಹಸಿ ಮಣ್ಣಿನ, ವಿಷ್ಣುಕಾಂತಿಯ, ಸುಗಂಧಿಯ, ಹೆಣ್ಣಿನ ಬೆವರಿನ ಮೈಯ ವಾಸನೆ. ಕತ್ತಲು ಆಕಾಶ, ನೆಮ್ಮದಿಯಿಂದ ನಿಂತ ವೃಕ್ಷಗಳು. ಕನಸೋ! – ಎಂದು ಕಣ್ಣುಜ್ಜಿಕೊಂಡರು..."

ಪ್ರಾಣೇಶಾಚಾರ್ಯರು ಬಹಳ ಹೊತ್ತು ಮಾತಾಡಲಿಲ್ಲ. ಆಮೇಲೆ ಎದ್ದುನಿಂತು, "ಚಂದ್ರಿ, ಏಳು ಹೋಗುವ; ನಾಳೆ ಬೆಳಗ್ಗೆ ಅಗ್ರಹಾರದ ಬ್ರಾಹ್ಮಣರು ಸೇರಿದಾಗ, ಹೀಗಾಯಿತೆಂದು ಹೇಳಿಬಿಡೋಣ. ನೀನೇ ಹೇಳಿಬಿಡು. ಅಗ್ರಹಾರಕ್ಕೆ ಬಂದು ನಿಶ್ಚಯವಾಗಿ ಹೇಳುವ ಅಧಿಕಾರವನ್ನು ನಾನು ಕಳೆದುಕೊಂಡಿದ್ದೇನೆ. ನೀನೇ ಹೇಳಿಬಿಡು. ನನ್ನ ಮಟ್ಟಿಗೆ ನಾರಣಪ್ಪನ ಶವಸಂಸ್ಕಾರವನ್ನು ಮಾಡಲು ನಾನು ಸಿದ್ಧ, ಆದರೆ ಉಳಿದ ಬ್ರಾಹ್ಮಣರಿಗೆ ಹೇಳುವ ಅಧಿಕಾರ ನನಗಿಲ್ಲ, ಅಷ್ಟೆ."




ಇಷ್ಟು ಮಾತಾಡಿದ ಮೇಲೆ ಹೊತ್ತಿದ್ದ ಭಾರವನ್ನೆಲ್ಲ ಕಳೆದುಕೊಂಡಂತೆ ಆಚಾರ್ಯರ ಮನಸ್ಸು ಹಗುರಾಯಿತು. ಹೊಳೆಯಲ್ಲಿ ಈಜುಬಿದ್ದು, ಮನಸ್ಸು ತೃಪ್ತಿಯಾಗುವ ವರೆಗೆ ಈಜಾಡಿ, ಬಿಸಿಲಲ್ಲಿ ತಲೆ ಒಣಗಿಸಿಕೊಂಡು, ಹೆಂಡತಿಗೆ ಗಂಜಿಕೊಡುವ ಸಲುವಾಗಿ ಬೇಗಬೇಗ ಮನೆಗೆ ಬಂದರು.

ಇತ್ತ ಚಂದ್ರಿ ಮನೆಯ ಹತ್ತಿರ ಬಂದಾಗ ಒಳಗಿನಿಂದ ಗಬ್ಬುವಾಸನೆ ಮೂಗಿಗೆ ಬಡಿಯಿತು. ಮೊದಲು ಈ ಹೆಣವನ್ನು ಸುಟ್ಟುಹಾಕಬೇಕು. ಈಗ ಅವನು ಬ್ರಾಹ್ಮಣನೂ ಅಲ್ಲ, ಶೂದ್ರನೂ ಅಲ್ಲ. ಅದೊಂದು ಕೊಳೆಯುತ್ತಿರುವ ಹೆಣ, ಅದನ್ನು ಸುಟ್ಟು ಊರೊಳಗೆಲ್ಲ ದುರ್ವಾಸನೆ ಹರಡುವುದನ್ನು ತಪ್ಪಿಸಬೇಕು. ಬ್ರಾಹ್ಮಣರಂತೂ ಅದನ್ನು ಸುಡಲು ಒಪ್ಪುವುದಿಲ್ಲವೆಂದು ಗೊತ್ತಿದ್ದುದರಿಂದ ಬಂಗಡೆ ಮೀನಿನ ವ್ಯಾಪಾರಕ್ಕೆ ಆಗಾಗ ತನ್ನಿಂದ ಸಾಲ ಪಡೆಯುತ್ತಿದ್ದ, ಅಹಮ್ಮದ್ ಬ್ಯಾರಿಯ ಸಹಾಯ ಪಡೆದಳು. ಅವನು ನಾರಣಪ್ಪನ ಹಿತ್ತಲಿನಲ್ಲಿದ್ದ ಕಟ್ಟಿಗೆಯನ್ನೂ ಶವವನ್ನೂ ಒಟ್ಟಿಗೆ ಗಾಡಿಯಲ್ಲಿ ತುಂಬಿಕೊಂಡು ಮಸಣಕ್ಕೊಯ್ದು, ಕತ್ತಲರಾತ್ರಿಯಲ್ಲಿ ಧಗಧಗ ಬೆಂಕಿ ಹೊತ್ತಿಸಿ ಸುಟ್ಟು ಬೂದಿ ಮಾಡಿಬಿಟ್ಟ.

ಚಂದ್ರಿ, ಎರಡು ಹನಿ ಕಣ್ಣೀರು ಹಾಕಿ, ಮನೆಗೆ ಬಂದು ಪೆಟ್ಟಿಗೆಯಲ್ಲಿಟ್ಟಿದ್ದ ಸೀರೆಗಳು, ಹಣ, ಉಳಿದಿದ್ದ ಒಡವೆಗಳನ್ನು ಗಂಟು ಕಟ್ಟಿಕೊಂಡು ಕುಂದಾಪುರದ ಕಡೆಗೆ ಹೆಜ್ಜೆ ಹಾಕಿದಳು.

ರಾತ್ರಿ ಬಹಳ ಹೊತ್ತು ಕಾದರೂ ಪ್ರಾಣೇಶಾಚಾರ್ಯರು ಹಿಂತಿರುಗಿ ಬರದಿದ್ದಾಗ, ತೂಕಡಿಸುತ್ತ ತಮ್ಮ ತಮ್ಮ ಮನೆಗಳಿಗೆ ಹೋಗಿದ್ದ ಅಗ್ರಹಾರದ ಬ್ರಾಹ್ಮಣರು ಬೆಳಗ್ಗೆ ಚಾವಡಿಗೆ ಬಂದು ಸೇರಿದಾಗ ಒಳಗಿನಿಂದ ಬಂದ ಆಚಾರ್ಯರು, "...ನಾನು ಸೋತೆ; ಮಾರುತಿಯ ಅಪ್ಪಣೆ ದೊರೆಯಲಿಲ್ಲ. ನನಗೆ ಏನೂ ತಿಳಿಯದು ನಿಮ್ಮ ಮನಸ್ಸಿಗೆ ಅನಿಸಿದಂತೆ ಮಾಡಿ" ಎಂದು ಪುನಃ ಒಳಗೆ ಹೋದರು.

ಪ್ರಾಣೇಶಾಚಾರ್ಯರು ಹೆಂಡತಿಗೆ ಸ್ನಾನ ಮಾಡಿಸಿ, ಗಂಜಿ ಕುಡಿಸುವುದೆಂದು, ಅವಳನ್ನು ಎತ್ತಲು ಹೋದಾಗ ಅವಳಿಗೂ ಜ್ವರವೇರಿ, ಕಂಕುಳಲ್ಲಿ ಬಾವು ಬರತೊಡಗಿತ್ತು. ಸ್ವಲ್ಪ ಹೊತ್ತಿನಲ್ಲಿ ಭಾಗೀರತಿಯೂ ಕಡೆಯುಸಿರೆಳೆದಳು. ಹೆಂಡತಿಯ ಶವವನ್ನು ಸ್ಮಶಾನಕ್ಕೆ ಸಾಗಿಸಿ ಚಿತೆಯ ಮೇಲಿಟ್ಟು ಅಗ್ನಿಸ್ಪರ್ಶ ಮಾಡಿದ್ದಾಯಿತು.

ತಮ್ಮ ತಪೋಭೂಮಿಯಾಗಿದ್ದ, ಒಂದು ಹಿಡಿ ಜೀವವಾದ ಹೆಂಡತಿ, ಧಗಧಗ ಉರಿಯುವುದನ್ನು ನೋಡುತ್ತ, ಬಂದ ಕಣ್ಣೀರನ್ನು ತಡೆಯಲೆತ್ನಿಸದೆ, ಆಯಾಸವೆಲ್ಲ ಪರಿಹಾರವಾಗುವಷ್ಟು ಅತ್ತುಬಿಟ್ಟರು – ಪ್ರಾಣೇಶಾಚಾರ್ಯರು.

ಹೆಂಡತಿಯ ಶವಸಂಸ್ಕಾರವಾದ ಮೇಲೆ ಪ್ರಾಣೇಶಾಚಾರ್ಯರು ಅಗ್ರಹಾರದ ಕಡೆಗೆ ಮುಖ ಹಾಕದೆ, ಉಟ್ಟಬಟ್ಟೆಯಲ್ಲಿ ಕಾಲು ಕೊಂಡಲ್ಲಿಗೆ ಹೋಗುವದೆಂದು ನಡೆದುಬಿಟ್ಟರು.

ಕಾಡು ದಾರಿಯಲ್ಲಿ ಪೂರ್ವಾಭಿಮುಖವಾಗಿ ನಡೆಯುತ್ತಿದ್ದ ಪ್ರಾಣೇಶಾಚಾರ್ಯರು ತಮ್ಮಲ್ಲಿಯೇ, ತಾವು ಚಂದ್ರಿಯನ್ನು ಕೂಡಿದ ಬಗೆಗೆ ಯೋಚಿಸುತ್ತಾರೆ. – ಆ ಸಂದರ್ಭ ಅಕಸ್ಮಾತ್ತಾಗಿ ಕೂಡಿಬಂತೆಂಬುದೂ, ತಾವು

ಬಯಸಿ ಅದನ್ನು ಪಡೆಯಲಿಲ್ಲವೆಂಬುದೂ ನಿಜ. ಚಾಚಿದ ಕೈಗಳು ಅವಳ ಮೊಲೆಗಳನ್ನು ಮುಟ್ಟಿದವು; ಮತ್ತೆ ಆಸೆ ಹುಟ್ಟಿತು; ಅಲ್ಲಿದೆ ಗುಟ್ಟು. ನನ್ನ ಬಾಳು ಇತ್ತಲೋ ಅತ್ತಲೋ ಎಂಬುದು ನಿರ್ಧಾರವಾಗಬೇಕಿದ್ದ ಕ್ಷಣ ಅದು. ನಾನು ನಿರ್ಧಾರ ಮಾಡಬಹುದಾಗಿದ್ದ ಗಳಿಗೆ ಅದು. ನನ್ನ ದೇಹಕ್ಕೆ ಅದು ಒಪ್ಪಿತು ಎಂಬುದೂ ಸಮಾಧಾನವಲ್ಲ. ಚಂದ್ರಿಯ ಜೊತೆಯಲ್ಲಿ ಸಂಭೋಗ ವಾಗಿಬಿಟ್ಟಿತು. ಸ್ವಾಧೀನ ತಪ್ಪಿದರೂ ನಿಶ್ಚಯಮಾಡುವ ಜವಾಬ್ದಾರಿ ನನ್ನ ಮೇಲಿತ್ತು. ಮನುಷ್ಯನ ನಿಶ್ಚಯಕ್ಕೆ ಬೆಲೆಯಿರುವುದು ಹೀಗೆ ಸ್ವಾಧೀನ ತಪ್ಪುವುದು ಸಾಧ್ಯವಿರುವುದರಿಂದಲೇ ಹೊರತಾಗಿ ನಿಶ್ಚಯ ವೆಂಬುದು ನೀರು ಕುಡಿದಷ್ಟು ಸರಾಗವಾಗಿದ್ದರಿಂದಲ್ಲ. ನಮ್ಮ ನಿಶ್ಚಯದ ಮೂಲಕ ನಾವು ನಮ್ಮನ್ನು ರೂಪಿಸಿಕೊಳ್ಳುತ್ತೇವೆ. ಈ ಘಟ್ಟಕ್ಕೆ ಒಂದು ವ್ಯಕ್ತಿತ್ವದ ರೂಪ ಕೊಡುತ್ತೇವೆ. ಹೇಗಾಗಬೇಕೆಂದು ನಾರಣಪ್ಪ ನಿಶ್ಚಯಿಸಿದನೋ ಅದರಂತೆಯೇ ಬದುಕಿದ ವ್ಯಕ್ತಿ ಅವನಾದ. ನಾನು ಇನ್ನೊಂದಾಗಬೇಕೆಂದು ನಿಶ್ಚಯಿಸಿದೆ. ಘಟ್ಟನೊಂದು ತಿರುವಿನಲ್ಲಿ ತಿರುಗಿಬಿಟ್ಟೆ. ತಿರುಗಿಬಿಟ್ಟದ್ದರಿಂದ ಏನಾಯಿತು ? ದ್ವಂದ್ವ ಜೀವನಕ್ಕೆ ನುಗ್ಗಿ ಬಂತು. ಎರಡು ಸತ್ಯಗಳ ನಡುವೆ ತ್ರಿಶಂಕುವಾದೆ...

ಹೀಗೆ ತಮ್ಮ ಅಂತರಂಗವನ್ನು ಶೋಧಿಸುತ್ತ ಕಾಡುದಾರಿಯಲ್ಲಿ ನಡೆಯುತ್ತಿದ್ದ ಪ್ರಾಣೇಶಾಚಾರ್ಯರಿಗೆ ಹಿಂದಿನಿಂದ ಓಡೋಡುತ್ತಲೇ ಬಂದ ಮಾಲೇರ ಪುಟ್ಟ (ಒಗಬಿನಪುಟ್ಟ )ಒಗಟಿನ ಪುಟ್ಟ ಗಂಟುಬೀಳುತ್ತಾನೆ. ಮೊದಮೊದಲಿನಲ್ಲಿ 'ಇದೊಂದು ಪೀಡೆ' ಎಂದುಕೊಂಡು, ಅವನಿಂದ ಬಿಡಿಸಿಕೊಳ್ಳಲೆಣ್ಣಿಸಿದ ಪ್ರಾಣೇಶಾಚಾರ್ಯರು ಬರಬರುತ್ತ ಅವನನ್ನು ಇಷ್ಟಪಡುತ್ತಾರೆ; ಹೆಗಲಮೇಲೆ ಕೈ ಹಾಕುತ್ತಾರೆ : 'ನನಗೆ ಮಾತಾಡಲು ಜನ ಬೇಕಪ್ಪ' ಎನ್ನುವ ಪುಟ್ಟನ ಜೊತೆಯಾಗಿ ನಡೆಯುವಾಗ ಕಾಮದ ದುರ್ದಮ್ಯ ಶಕ್ತಿ ಮತ್ತು ಗಂಡುಹೆಣ್ಣಿನ ಸಂಬಂಧಗಳ ಬಗ್ಗೆ ಹೊಸ ಹೊಸ ಪಾಠಗಳನ್ನು ಕಲಿಯುತ್ತಾರೆ. ಪುಟ್ಟನ ಜೊತೆಯಾಗಿ ಮೇಳಿಗೆಯ ಜಾತ್ರೆಯಲ್ಲಿ ಅಲೆದಾಡಿ, ದೇವಸ್ಥಾನದ ಸಂತರ್ಪಣೆಯಲ್ಲಿ, ತಾವು ದೂರ್ವಾಸಪುರದ ಪ್ರಾಣೇಶಾಚಾರ್ಯರೆಂಬುದು ಯಾರಿಗೂ ಗೊತ್ತಾಗದಂತೆ ಅಂಗವಸ್ತ್ರದಿಂದ ಮುಖ ಮುಚ್ಚಿಕೊಂಡು ಬ್ರಾಹ್ಮಣರ ಪಂಕ್ತಿಯಲ್ಲಿ ಕುಳಿತು ಊಟಮಾಡುತ್ತಾರೆ. ಪುಟ್ಟನ ಮೂಲಕ ದ್ವಂದ್ವರಹಿತವಾದ, ನಿರಾಳವಾಗಿ ಬದುಕುವುದರ ನೆಮ್ಮದಿಯನ್ನು ಅರಿಯುತ್ತ ಹೋಗುತ್ತಾರೆ. ಕಡೆಯಲ್ಲಿ ದೂರ್ವಾಸಪುರದ ಕಡೆಗೆ ಹೋಗುತ್ತಿದ್ದ ಎತ್ತಿನಗಾಡಿ ಯೊಂದರಲ್ಲಿ ಕುಳಿತು, ಮುಂದಿನ ಮೂರ್‍ನಾಲ್ಕು ಗಂಟೆಗಳಲ್ಲಿ ದೂರ್ವಾಸಪುರವನ್ನು ತಲುಪುವ, ಆಮೇಲಿನ ಆತಂಕವನ್ನು ನಿರೀಕ್ಷಿಸುತ್ತಾರೆ. ಸ್ಥೂಲವಾಗಿ ಹೇಳುವುದಾದರೆ, ಮೇಲಿನ ಎರಡು ವಾಕ್ಯವೃಂದ ಗಳಲ್ಲಿ ವ್ಯಕ್ತವಾಗುವ ಆಶಯಗಳು, (ಶ್ರೀನಿವಾಸ ಶ್ರೌತಿಗಳು ಜನಸಮುದಾಯದಿಂದ ವಿಮುಖರಾಗಿ 'ಅಂತಿಮ ಗುರಿ'ಯ ಕಡೆಗೆ ಸಾಗುವುದು ಮತ್ತು ಪ್ರಾಣೇಶಾಚಾರ್ಯರು ಜನಸಮ್ಮುಖರಾಗಲು ಪ್ರಯಾಣ ಮಾಡುವುದು) ವಂಶವೃಕ್ಷ ಮತ್ತು ಸಂಸ್ಕಾರಗಳ ಸಾಮೀಪ್ಯ ಮತ್ತು ಅಂತರಗಳೆರಡನ್ನೂ ಸೂಚಿಸುತ್ತವೆ. ಹೀಗಿರುವುದರಿಂದ ಎರಡೂ ಕೃತಿಗಳು ಎದುರಾಎದುರು ಕುಳಿತು, ಜಿಜ್ಞಾಸೆಯಲ್ಲಿ ತೊಡಗಿರುವಂತೆ ಭಾವಿಸಿಕೊಂಡು ಪರಿಶೀಲಿಸಬಹುದು. ಎರಡೂ ಕಾದಂಬರಿಗಳ ನಾಯಕರು ಪ್ರಕೃತಿಸಹಜವಾದ ಸ್ತ್ರೀ ಸುಖದಿಂದ ವಂಚಿತರಾಗಿ, ವಿಕ್ಷಿಪ್ತತೆಗೆ ಒಳಗಾದವರು.

ಶ್ರೌತಿಗಳ ಧರ್ಮಪತ್ನಿಯ ಪ್ರೇರಣೆಯಿಂದಲೇ ಲಕ್ಷ್ಮಿಯು ಅವರ ಅಧ್ಯಯನದ ಕೋಣೆಯ ಬಾಗಿಲಲ್ಲಿ ಹಾಸಿಗೆ ಹಾಕಿಕೊಂಡು ಮಲಗಿದ್ದಾಗ ಶ್ರೌತಿಗಳು ಕ್ಷಣಕಾಲದ ದ್ವಂದ್ವಕ್ಕೆ ಒಳಗಾಗಿರಬಹುದು. ಆದರೆ ಅವರ ದ್ವಂದ್ವವು ಅಷ್ಟೇನು ಪ್ರಕ್ಷುಬ್ಧವೆನಿಸುವುದಿಲ್ಲ. ಸಾಂಖ್ಯಕಾರಿಕೆಗಳಲ್ಲಿನ ಪ್ರಕೃತಿಪುರುಷ ತತ್ವದ ಪಠಣ. ಅವರು ತಮ್ಮ ದ್ವಂದ್ವಕ್ಕೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ; ಅವರು ಸ್ವಾಧೀನ ತಪ್ಪುವುದಿಲ್ಲ. ಏಕೆಂದರೆ ಅವರಿಗೆ 'ಸ್ವಾಧೀನವೆಂಬುದು ನೀರು ಕುಡಿದಷ್ಟು ಸುಲಭವಾಗಿದೆ.'

ಶ್ರೌತಿಗಳನ್ನು ಹೆಣ್ಣಿನ ಸಂಗಕ್ಕಿಂತಲೂ ತೀವ್ರವಾಗಿ ಕಾಡುವುದು 'ವಂಶಪಾವಿತ್ರ್ಯದ ಪ್ರಜ್ಞೆ.' 'ವಂಶಪಾವಿತ್ರ್ಯ' ವನ್ನು ಮುಂದಿಟ್ಟುಕೊಂಡು ವಿಧವೆಯಾದ ತಮ್ಮ ಸೊಸೆ ಮತ್ತೆ ಮದುವೆಯಾಗುವುದನ್ನು ಮಾತ್ರವಲ್ಲದೆ, ಅವಳ ಮಗನನ್ನು ಆಕೆ ತನ್ನೊಡನೆ ಕರೆದುಕೊಂಡು ಹೋಗುವುದಕ್ಕೆ ಕೂಡ – ತಮ್ಮ ತರ್ಕದ ಮೂಲಕ ಅಡ್ಡಿದೂಡುತ್ತಾರೆ. ಶ್ರೌತಿಗಳ ಪ್ರಕಾರ "ಮಕ್ಕಳು, ಮೊಮ್ಮೊಕ್ಕಳು ವಂಶಕ್ಕೆ ಸೇರಿದವು" ಗಂಡ ಹೆಂಡತಿ ಕೂಡುವುದು ವಂಶವನ್ನು ಮುಂದುವರಿಸಬಲ್ಲ ಮಕ್ಕಳನ್ನು ಪಡೆಯುವುದಕ್ಕಾಗಿ ! (ತಮ್ಮ ಹೆಂಡತಿ ಭಾಗೀರತಮ್ಮ ಇನ್ನು ಮಕ್ಕಳನ್ನು ಹೆರುವುದು ಅಸಾಧ್ಯವೆಂದಾದ ಮೇಲೆ, ಇನ್ನೇಕೆ ಆಕೆಯ ದೇಹಸಂಪರ್ಕವೆಂದು ಆಕೆಯಿಂದ ದೂರವೇ ಉಳಿದಿರಬೇಕು, ಸಂಸ್ಕಾರದ ಪ್ರಾಣೇಶಾಚಾರ್ಯರು ಕಡೆಯವರೆಗೂ ರೋಗಿಷ್ಠೆಯಾದ ಹೆಂಡತಿಯ ಸೇವೆ ಮಾಡುತ್ತಾರೆ). ತಾಯಿ ಕಾತ್ಯಾಯಿನಿ ಮತ್ತು ಆಕೆಯ ಮಗನನ್ನು ದೂರಮಾಡುವ ಸಲುವಾಗಿ ಶ್ರೌತಿಗಳು ಬಳಸುವ ತರ್ಕವು ಕುತರ್ಕವಾಗಿದೆ – ಎನ್ನದೆ ವಿಧಿಯಿಲ್ಲ.

ವಂಶವೃಕ್ಷ ಕಾದಂಬರಿಯ ಉದ್ದಕ್ಕೂ ಶ್ರೀನಿವಾಸ ಶ್ರೌತಿಗಳ ಅಗಾಧ ಪಾಂಡಿತ್ಯ, ಸಂಭಾವಿತ ನಡೆನುಡಿ, ಋಜು ಸ್ವಭಾವಗಳ ಪ್ರಸ್ತಾಪವು ವಿಜೃಂಭಿಸಿದೆ. ಕಾದಂಬರಿಯ ಎಲ್ಲ ಪಾತ್ರಗಳೂ – ಸೊಸೆ ಕಾತ್ಯಾಯನಿಯೂ ಸೇರಿದಂತೆ – ಶ್ರೌತಿಗಳ ವಿದ್ವತ್ತು, ಕರ್ಮನಿಷ್ಠೆ , ಸಂಯಮಗಳ ಮೋಡಿಗೆ ಒಳಗಾದವರೇ. ಪ್ರಾಯಶಃ ಇವರ ವ್ಯಕ್ತಿತ್ವದ ಮತ್ತೊಂದು ಮುಖವನ್ನು ಗುರುತಿಸಿದಾಕೆ, ಅನ್ಯದೇಶೀಯಳೂ, ಅನ್ಯಧರ್ಮೀಯಳೂ ಆದ ಕರುಣಾರತ್ನೆ ಮಾತ್ರ ಎಂದು ತೋರುತ್ತದೆ. "ಶ್ರೌತಿಗಳ ಶಾಸ್ತ್ರಜ್ಞಾನ, ಸ್ಥಿತಪ್ರಜ್ಞೆ, ಮಾರ್ದವ ವ್ಯಕ್ತಿತ್ವದ ಮೂಲೆಯಲ್ಲಿ ಅವ್ಯಕ್ತವಾದ ಕಠಿಣಭಾವ ಇದೆ ಎನಿಸುತ್ತೆ" – ಎಂಬುದು ಕರುಣಾರತ್ನೆಯ ಟಿಪ್ಪಣಿ.

ಜನಪ್ರಿಯ ಕಾದಂಬರಿಕಾರರಾದ ಭೈರಪ್ಪನವರು, ಕಥನಕಲೆಯ ವ್ಯಾಕರಣವನ್ನು ಬಲ್ಲವರು; ಓದುಗರು ಭಾವಪೂರ್ಣವಾಗಿ ಪ್ರತಿಕ್ರಿಯಿಸುವಂತೆ, ಕೃತಿಯ ಪಾತ್ರ ಪೋಷಣೆ ಮಾಡುವುದರಲ್ಲಿ ನಿಷ್ಣಾತರು. ಆದರೆ, ವಂಶವೃಕ್ಷದಲ್ಲಿ ಕ್ವಚಿತ್ತಾಗಿ ಬರುವ ರೂಪಕಗಳು ಅಷ್ಟೇನೂ ಧ್ವನಿಪೂರ್ಣವಾಗದೆ, ಹೆಚ್ಚೆಂದರೆ ಲಕ್ಷಣಾರ್ಥದ ನೆಲೆಯಲ್ಲಿ ನಿಂತುಬಿಡುತ್ತವೆ. (ಉದಾಹರಣೆ : ಕಪಿಲಾ ನದಿಯ ಪ್ರವಾಹಕ್ಕೆ ಹೆದರಿ, ನದಿತೀರದ ಜನರೆಲ್ಲ ಎತ್ತರವಾದ ಸ್ಥಳದಲ್ಲಿ ವಾಸಿಸತೊಡಗಿದ ಮೇಲೆಯೂ, ಶ್ರೌತಿಗಳು ಮಾತ್ರ ಸಂಸಾರ ಸಮೇತರಾಗಿ 'ಪೂರ್ವಿಕರು ಕಟ್ಟಿಸಿದ' ಮನೆಯಲ್ಲೆ ನೆಲೆ ನಿಲ್ಲುತ್ತಾರೆ; ಬಾಡಿಹೋಗಿದ್ದ ಮಲ್ಲಿಗೆ ಬಳ್ಳಿಯು ಹೊಸದಾಗಿನೆಟ್ಟ (ಕೊಂಡಮಾವು ಎಂಬುದು ಬಳ್ಳಿಗಳನ್ನು ಹಬ್ಬಿಸುವ ಒಂದು ಜಾತಿಯ ಮರ.) ಮಾವಿನಮರಕ್ಕೆ ಹಬ್ಬಿ ಬೆಳೆದು ಹೂ ಅರಳಿಸುವುದನ್ನು ನೋಡಿ, ಮದುವೆಯಾದ ಮೂರು ವರ್ಷಕ್ಕೇ ಗಂಡನನ್ನು ಕಳೆದುಕೊಂಡಿದ್ದ ಕಾತ್ಯಾಯಿನಿಯ ಮನಸ್ಸಿನಲ್ಲಿ (ಪ್ರೇಮ) ಭಾವಸಂಚಾರವಾಗುತ್ತದೆ – ಇತ್ಯಾದಿ).

ಎಲ್ಲಕ್ಕಿಂತ ಹೆಚ್ಚಾಗಿ ವಂಶವೃಕ್ಷದ ವಸ್ತುವಿನ್ಯಾಸವು ಜಾತಿಮತವಿಭಜನೆ, ಸಾಂಪ್ರದಾಯಕ ಮತಾಚಾರಗಳ ನಿಷ್ಠೆಗಳ ವಿಜೃಂಭಣೆಯಾಗಿದ್ದು ಕಾದಂಬರಿಯು ವೈಚಾರಿಕತೆಗೆ ತೆರೆದುಕೊಳ್ಳುವುದಿಲ್ಲ, ಶ್ರೌತಿಗಳು ತಮ್ಮ ವೈಯಕ್ತಿಕ ನಂಬಿಕೆಯ ಆಚೆಗಿನ ಜನರ ಬದುಕನ್ನು ಸಂಪರ್ಕಿಸುವುದಿಲ್ಲ. ಮೌಲ್ಯಗಳ ಶೋಧನೆಯಲ್ಲಿ ತೊಡಗುವುದಿಲ್ಲ. ಹೀಗಾಗಿ ಕಾದಂಬರಿಯು ಒಂದು ಬಗೆಯ ಹುಸಿ ಸಂಸ್ಕೃತಿಯ ವಿಜೃಂಭಣೆಯೆಂಬ ಟೀಕೆಗೆ ಆಸ್ಪದವಾಗುತ್ತದೆ.

ಅನಂತಮೂರ್ತಿ ಅವರ 'ಸಂಸ್ಕಾರ'ವು ಆತ್ಮವಂಚನೆಯ, ಹುಸಿ ಸಾಂಪ್ರದಾಯಕತೆಯ ವಿರುದ್ಧ ಸಿಡಿದು ನಿಂತು ದೇಹ ಮನಸ್ಸುಗಳ ದ್ವಂದ್ವಕ್ಕೆ ಮುಖಾಮುಖಿಯಾಗುತ್ತದೆ; ಲೈಂಗಿಕತೆಯ ಮೂಲಕ ಅಸ್ತಿತ್ವವಾದದ ಸತ್ಯವನ್ನು ಶೋಧಿಸುತ್ತದೆ.

ಮೂರ್ತಿಯವರ ಕಾವ್ಯಾತ್ಮಕ, ರೂಪಕಗಳ ಭಾಷೆ, ವಾಕ್ಚಿತ್ರಗಳ ಶೈಲಿಯು ಆಧುನಿಕ ಮನೋಭಾವದ ಓದುಗರಿಗೆ ಹುಚ್ಚು ಹಿಡಿಸಿತೆಂಬುದು ಸುಳ್ಳಲ್ಲ. (ಉದಾಹರಣೆ : ಚಂದ್ರಿಯನ್ನು ತಬ್ಬಿ ಮಲಗಿ, ಎಚ್ಚರ ಗೊಂಡ ಪ್ರಾಣೇಶಾಚಾರ್ಯರ ಸ್ವಗತದಲ್ಲಿ ಬರುವ ನಡುರಾತ್ರಿಯ ಆಕಾಶದ ವರ್ಣನೆಯನ್ನು ಗಮನಿಸಬಹುದು). ಹಾಗೆಂದು ಕನ್ನಡ ಓದುಗರೆಲ್ಲ, ಸಂಸ್ಕಾರ ಕಾದಂಬರಿಯನ್ನು ತೆರೆದ ಮನಸ್ಸಿನಿಂದ ಸ್ವಾಗತಿಸುವರೆಂದು ಭಾವಿಸಬೇಕಾಗಿಲ್ಲ. ಕೆಲವರ ದೃಷ್ಟಿಯಲ್ಲಿ ಇಂದಿಗೂ ಬ್ರಾಹ್ಮಣ್ಯವನ್ನು, ಅದರಲ್ಲೂ ಒಂದು ಪಂಗಡದವರನ್ನು ವಿಡಂಬನೆ ಮಾಡುವ ಸಲುವಾಗಿಯೆ ಅನಂತಮೂರ್ತಿ ಈ ಕಾದಂಬರಿ ಬರೆದರೆಂಬ ಅಭಿಪ್ರಾಯವು ನೆಲೆಯೂರಿದೆ.

ವಿಮರ್ಶಕರ ಭಿನ್ನಾಭಿಪ್ರಾಯಗಳು ಏನೇ ಇರಲಿ; ಭಾರತೀಯ ಸಂಸ್ಕೃತಿಯಲ್ಲಿ ಎಂದಿನಿಂದಲೂ ಪ್ರಭಾವಶಾಲಿಗಳಾಗಿರುವ ಅನುರಕ್ತಿ ಮತ್ತು ವಿರಕ್ತಿಗಳೆಂಬ ಎರಡು ದೃಷ್ಟಿಕೋನಗಳನ್ನು ಈ ಎರಡು ಕೃತಿಗಳು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಪ್ರತಿಬಿಂಬಿಸುತ್ತವೆಯೆಂದು ತಿಳಿಯಲಡ್ಡಿಯಿಲ್ಲ.

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ತಿರುವು, ಕೆ. ಆರ್. ರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦

# ಫ್ರೆಡರಿಕ್ ಏಂಗೆಲ್ಸ್‌ನ ಹುಟ್ಟೂರಾದ 'ವುಪ್ಪರ್ತಾಲ್'ಗೊಂದು ಭೇಟಿ

**ಬಿ. ಮೈತ್ರಿ**

ಜರ್ಮನಿ ದೇಶವು ಅನೇಕ ಕ್ರಾಂತಿಕಾರಿಗಳ, ಚಿಂತಕರ, ಬುದ್ಧಿಜೀವಿಗಳ ನಾಡು. ನಾನು ನನ್ನ ಹೆಚ್ಚಿನ ಓದಿಗೆಂದು ಜರ್ಮನಿಯನ್ನು ಆಯ್ದು ಕೊಂಡಾಗ ಚರಿತ್ರೆಯ ರೋಮಾಂಚಕಾರಿ ಪುಟಗಳೇ ನನ್ನ ಕಣ್ಣ ಮುಂದೆ ಹರಿದಾಡಿದ್ದವು. ಜರ್ಮನಿಯ ಹಿಂದಿನ ರಾಜಧಾನಿಯಾಗಿದ್ದ ಬಾನ್ ನಗರದ ಬಾನ್ ವಿಶ್ವವಿದ್ಯಾಲಯದಲ್ಲಿ ಓದಲು ನನಗೆ ಅವಕಾಶ ಸಿಕ್ಕಾಗ ಅದರ ಬಗ್ಗೆ ಹೆಚ್ಚಿನ ಮಾಹಿತಿಯೇನೂ ಮೊದಲು ಗೊತ್ತಿರಲಿಲ್ಲ. ಆದರೆ ಈ ವಿಶ್ವವಿದ್ಯಾಲಯದಲ್ಲೇ ಕಾರ್ಲ್ ಮಾರ್ಕ್ಸ್ ಕೂಡ ಹಿಂದೊಮ್ಮೆ ಹಳೆಯ ವಿದ್ಯಾರ್ಥಿಯಾಗಿದ್ದ ಎಂದು ಓದಿದಾಗ ಆಶ್ಚರ್ಯ ಮತ್ತು ಸಂತೋಷ ವಾಗಿತ್ತು. ನಾನು ಜರ್ಮನಿಯಲ್ಲಿದ್ದ ಮೂರು ವರ್ಷಗಳ ಅವಧಿಯಲ್ಲಿ ರಜೆಯ ದಿನಗಳಲ್ಲಿ ಸಾಕಷ್ಟು ಊರು ಸುತ್ತುತ್ತಿದ್ದೆ. ಕೆಲವೊಮ್ಮೆ ಸ್ನೇಹಿತರು ಬರುತ್ತಿದ್ದರಾದರೂ, ಮತ್ತೆ ಕೆಲವೊಮ್ಮೆ ನನ್ನ ಆಸಕ್ತಿಯ ಸಂಗತಿಗಳು ಅವರದಾಗಿರದಿದ್ದರೆ, ನಾನು ಒಂಟಿಯಾಗಿಯೇ ಸುತ್ತುತ್ತಿದ್ದೆ. ಹೀಗೆ ವಾರಾಂತ್ಯದಲ್ಲೊಮ್ಮೆ ನಾನು ಸುತ್ತಲೆಂದು ಆಯ್ದು ಕೊಂಡದ್ದು ನಾರ್ದ್ ರೈನ್ ವೆಸ್ಟ್‌ಫಾಲಿಯಾ ರಾಜ್ಯದ ರಾಜಧಾನಿಯಾದ ಡ್ಯುಸೆಲ್‌ಡಾರ್ಫ್ ನಗರದ ಸಮೀಪದಲ್ಲಿರುವ ಈಗಿನ ವುಪ್ಪರ್ತಾಲ್. ಅದು ಫ್ರೆಡರಿಕ್ ಏಂಗೆಲ್ಸ್‌ನ ಹುಟ್ಟೂರು.

ನಾರ್ದ್ ರೈನ್ ವೆಸ್ಟ್‌ಫಾಲಿಯಾ ರಾಜ್ಯದ ರಾಜಧಾನಿಯಾದ ಡ್ಯುಸೆಲ್‌ಡಾರ್ಫ್ ನಗರದಿಂದ ೪೦ ಕಿ.ಮೀ. ದೂರದಲ್ಲಿ ವುಪ್ಪರ್ತಾಲ್ ಇದೆ. ೧೯೨೯ರಲ್ಲಿ ಹಳೆಯ ಕೈಗಾರಿಕಾ ನಗರಗಳಾದ ಬಾರ್ಮೆನ್, ಎಲ್ಬರ್‌ಫೆಲ್ಡ್‌ಗಳನ್ನು ಕೆಲವು ಚಿಕ್ಕ ಪ್ರದೇಶಗಳೊಂದಿಗೆ ಒಗ್ಗೂಡಿಸಿದ ನಂತರ ಜನ್ಮ ತಳೆದ ಊರಿದು. ಏಂಗೆಲ್ಸ್ ಹುಟ್ಟಿದ್ದು ೧೮೨೦ರ ಹಳೆಯ ಬಾರ್ಮೆನ್ ನಗರದಲ್ಲಿ, ನವಂಬರ್ ೨೦ರಂದು. ಈ ಊರಿನ ಮಧ್ಯೆ ವುಪ್ಪರ್ ನದಿ ಹರಿಯುವುದನ್ನು ನೋಡುವುದೇ ಒಂದು ಸಂತಸ. ಹಾಗೆಯೇ ಅಲ್ಲಿನ ಮತ್ತೊಂದು ಆಕರ್ಷಣೆಯೆಂದರೆ 'ಶ್ವೆಬೆಬಾನ್'. ಸಾಮಾನ್ಯವಾಗಿ ಎಲ್ಲೆಡೆಯೂ ನೆಲದ ಮೇಲೆ ಚಲಿಸುವ ರೈಲುಬಂಡಿಗಳನ್ನು ನೋಡಿದ್ದೇವೆ. ಆದರೆ ವುಪ್ಪರ್ತಾಲ್‌ನಲ್ಲಿ ರೈಲುಗಾಡಿಗಳು ಉಕ್ಕಿನ ಕಂಬಿಗಳಿಂದ ಜೋತು ಬಿದ್ದಿದ್ದು ಗಾಳಿಯಲ್ಲಿ ಸಂಚರಿಸುತ್ತಿರುತ್ತವೆ. ಇವುಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಇನ್ನು ಈ ರೈಲಿನಲ್ಲಿ ಸಂಚರಿಸುವುದಂತೂ ಮತ್ತಷ್ಟು ಖುಷಿ ಕೊಡುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ವುಪ್ಪರ್ತಾಲ್‌ಗೆ ಹೋಗಲು ನನ್ನನ್ನು ಸೆಳೆದದ್ದು ಫ್ರೆಡರಿಕ್ ಏಂಗೆಲ್ಸ್. ಏಂಗೆಲ್ಸ್‌ನ ಜಾಡನ್ನು ಹಿಡಿದು ಹೊರಟ ನಾನು ಇಂದಿನ ಆಧುನಿಕ ಊರಿನಲ್ಲಿ ಏಂಗೆಲ್ಸ್‌ನ ಕುರುಹುಗಳು ಸಿಗಬಹುದೇನೋ ಎಂದು ಹುಡುಕಿದೆ. ತನ್ನ ಊರಿನ ಹೆಮ್ಮೆಯ ಮಗನ ಮನೆಯನ್ನು ನಗರಾಡಳಿತ ಇನ್ನೂ ಉಳಿಸಿ ಕೊಂಡಿದೆ. ವುಪ್ಪರ್ ನದಿಯ ಸಮೀಪವೇ ಇರುವ ಏಂಗೆಲ್ಸ್ ನಿವಾಸವನ್ನು ಸಂಗ್ರಹಾಲಯವನ್ನಾಗಿ ಮಾರ್ಪಡಿಸಲಾಗಿದೆ. ಊರಿನ ಮಧ್ಯದಿಂದ ಜೋತಾಡುವ ರೈಲಿನಲ್ಲಿ ಏಂಗೆಲ್ಸ್ ನಿವಾಸದತ್ತ ಹೊರಟೆ. ಏಂಗೆಲ್ಸ್ ಜನ್ಮ ತಳೆದ ಮನೆ ಇಂದಿಲ್ಲ. ಅದು ದ್ವಿತೀಯ ಮಹಾಯುದ್ಧದ ವೇಳೆ ನೆಲಸಮಗೊಂಡಿತು. ಮನೆಯಿದ್ದ ಜಾಗದಲ್ಲಿ ಒಂದು ದೊಡ್ಡ ಕಲ್ಲಿಟ್ಟಿದ್ದಾರೆ. ಅದರ ಮೇಲೆ ಬರಹವೊಂದು ಹೀಗಿದೆ: "ನಮ್ಮ ಊರಿನ ಹೆಮ್ಮೆಯ ಮಗನಾದ ಫ್ರೆಡ್ರಿಕ್ ಏಂಗೆಲ್ಸ್ ಹುಟ್ಟಿದ ಮನೆ ಇದ್ದ ಜಾಗವಿದು. ಆತ ವೈಜ್ಞಾನಿಕ ಸಮಾಜವಾದದ ಸಹ ಸಂಸ್ಥಾಪಕ".

ಏಂಗೆಲ್ಸ್ ನಿವಾಸದ ಹಿಂದೆ ಕೈಗಾರಿಕಾ ವಸ್ತು ಸಂಗ್ರಹಾಲಯವಿದೆ. ಅದನ್ನೊಮ್ಮೆ ಸುತ್ತಿ ಬಂದರೆ ಆ ಕಾಲದ ನೇಯ್ಗೆಯ ಇತಿಹಾಸವು ನಮ್ಮ ಕಣ್ಣ ಮುಂದೆ ಬಿಚ್ಚಿಕೊಳ್ಳುತ್ತದೆ. ಆ ಚರಿತ್ರೆಯ ವಿವಿಧ ಹಂತಗಳನ್ನು ಇಲ್ಲಿ ಸವಿವರವಾಗಿ ನಿರೂಪಿಸಿದ್ದಾರೆ. ಮೊದಲು ಕೈಮಗ್ಗಗಳೇ ಅಸ್ತಿತ್ವದಲ್ಲಿದ್ದ ಕಾಲದಲ್ಲಿ ಹೇಗೆ ತಾಂತ್ರಿಕ ಬದಲಾವಣೆಗಳು ಉಂಟಾಗಿ

ಏಂಗೆಲ್ಸ್ ನಿವಾಸದಲ್ಲಿನ ಫ್ರೆಡರಿಕ್ ಏಂಗೆಲ್ಸ್‌ನ ಪ್ರತಿಮೆ

ಊರಿನ ಮಧ್ಯೆ ವುಪ್ಪರ್ ನದಿ ಹರಿಯುವುದನ್ನು ನೋಡುವುದೇ ಒಂದು ಸಂತಸ. ಹಾಗೆಯೇ ಅಲ್ಲಿನ ಮತ್ತೊಂದು ಆಕರ್ಷಣೆಯೆಂದರೆ 'ಶ್ವೆಬೆಬಾನ್'. ಸಾಮಾನ್ಯವಾಗಿ ಎಲ್ಲೆಡೆಯೂ ನೆಲದ ಮೇಲೆ ಚಲಿಸುವ ರೈಲುಬಂಡಿಗಳನ್ನು ನೋಡಿದ್ದೇವೆ. ಆದರೆ ವುಪ್ಪರ್ತಾಲ್‌ನಲ್ಲಿ ರೈಲುಗಾಡಿಗಳು ಉಕ್ಕಿನ ಕಂಬಿಗಳಿಂದ ಜೋತು ಬಿದ್ದಿದ್ದು ಗಾಳಿಯಲ್ಲಿ ಸಂಚರಿಸುತ್ತಿರುತ್ತವೆ. ಇವುಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಇನ್ನು ಈ ರೈಲಿನಲ್ಲಿ ಸಂಚರಿಸುವುದಂತೂ ಮತ್ತಷ್ಟು ಖುಷಿ ಕೊಡುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ವುಪ್ಪರ್ತಾಲ್‌ಗೆ ಹೋಗಲು ನನ್ನನ್ನು ಸೆಳೆದದ್ದು ಫ್ರೆಡರಿಕ್ ಏಂಗೆಲ್ಸ್.



ಕೈಮಗ್ಗದ ಹಂತದಲ್ಲಿ



ಕೈಮಗ್ಗದಿಂದ ಯಾಂತ್ರೀಕರಣದತ್ತ

ಕಾರ್ಖಾನೆಯ ಉತ್ಪತ್ತಿಯನ್ನು ೨೦೦ ಪಟ್ಟು ವೃದ್ಧಿಗೊಳಿಸಿತು ಎಂಬುದನ್ನಿಲ್ಲಿ ತಿಳಿಸಿದ್ದಾರೆ. ನಂತರದ ಹಂತದಲ್ಲಿ ಹತ್ತಿಯಲ್ಲದೆ ಉಣ್ಣೆ, ರೇಷ್ಮೆಯ ನೂಲುಗಳನ್ನು ತಯಾರಿಸಿ ಅವುಗಳಿಂದ ಬಣ್ಣ ಬಣ್ಣದ ಬಟ್ಟೆಗಳನ್ನು ತಯಾರಿಸಲಾಯಿತು. ಇಂಗ್ಲೆಂಡ್, ಫ್ರಾನ್ಸ್, ಬೆಲ್ಜಿಯಂ ಮುಂತಾದ ದೇಶಗಳಲ್ಲಿ ಆಗುತ್ತಿದ್ದ ತಾಂತ್ರಿಕ ಸುಧಾರಣೆಗಳು ವುಪ್ಪರ್ ಕಣಿವೆಗೂ ಬಂದು, ಅಲ್ಲಿನ ಜನಜೀವನ ಮತ್ತು ಕಾರ್ಮಿಕರ ಸ್ಥಿತಿಗತಿಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದವು. ಸಂಗ್ರಹಾಲಯದಲ್ಲಿ ಮೊದಲ ಕೈಮಗ್ಗಗಳಿಂದ ಹಿಡಿದು ನಂತರದ ಇದ್ದಿಲು ಹಾಗೂ ಆವಿಯಿಂದ ಚಾಲಿತವಾದಂತಹ ಮಗ್ಗಗಳನ್ನು ಮತ್ತು ಉಪಕರಣಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ.

ಈ ಸಂಗ್ರಹಾಲಯವು ಆ ಕಾಲದ ಕೈಗಾರಿಕಾ ತಾಂತ್ರಿಕತೆಯನ್ನಷ್ಟೇ ಬಿಂಬಿಸುವುದಿಲ್ಲ, ಆ ಕಾಲದ ಜನಜೀವನ ಹಾಗೂ ಸಾಮಾಜಿಕ ಪರಿಸರವನ್ನೂ ಪರಿಚಯಿಸುತ್ತದೆ. ೧೯ನೆಯ ಶತಮಾನದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಯಿಂದ ಉಂಟಾದ ಕೈಗಾರಿಕಾ ಕ್ರಾಂತಿ ಕಾರ್ಮಿಕರ ಬದುಕನ್ನು ಅಸಹನೀಯಗೊಳಿಸಿದ ಚಿತ್ರಣವನ್ನು ಈ ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ. ಕರಕುಶಲತೆಯಿಂದ ಕೈಗಾರೀಕರಣದತ್ತ ಸಾಗಿದ ಬದಲಾವಣೆಯಿಂದಾಗಿ ನಗರದಲ್ಲಿ ಹೆಚ್ಚಿದ ಕಾರ್ಮಿಕರು ಬಡತನದ ಬೇಗೆಯಿಂದ ನರಳುತ್ತಿದ್ದು, ತಿನ್ನಲು ಆಹಾರವಿಲ್ಲದೆ ಸೊರಗಿಹೋಗಿದ್ದರು. ಪೂರ್ವದಿಂದ ಬಂದ ವಲಸೆಗಾರರಿಗೆ ವಾಸಿಸಲು ಮನೆಯಿಲ್ಲದೆ ಬದುಕು ದುರ್ಭರವಾಗಿತ್ತು. ಈ ಸನ್ನಿವೇಶದಲ್ಲಿ ಬಾಲ ಕಾರ್ಮಿಕರೂ ಹೆಚ್ಚಿನ ಸಂಖ್ಯೆಯಲ್ಲಿ ಈ ಗುಂಪಿಗೆ ಸೇರ್ಪಡೆಯಾಗಿ ದುಡಿಮೆಗಾರರ ಬದುಕು ಶೋಚನೀಯವಾಗಿತ್ತು.

ಇಂತಹ ಹೃದಯ ವಿದ್ರಾವಕ ಸ್ಥಿತಿಯನ್ನು ಕಟ್ಟಿಕೊಡುವ ಅನುಭವವುಳ್ಳ ಕವಿತೆಯೊಂದನ್ನು ಈ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ. ಒಟ್ಟೊ ಹೌಸ್‌ಮನ್ ಎಂಬ ಕವಿಯ ಈ ಕವಿತೆಯ ನಾಯಕಿ ಮಿನಾ ಕ್ನಾಲೆನ್‌ಫಾಲ್ಸ್. ಈಕೆ ನೇಕಾರರ ಬಡ ಕುಟುಂಬವೊಂದರಲ್ಲಿ ಜನಿಸಿ, ತನ್ನ ಇಡೀ ಜೀವನವನ್ನು ಬಡತನದಲ್ಲೇ ಕಳೆಯುತ್ತಾಳೆ. ಸಣ್ಣ ವಯಸ್ಸಿನಲ್ಲಿಯೇ ಕಾರ್ಖಾನೆಯೊಂದರಲ್ಲಿ ಕೆಲಸಕ್ಕೆ ಸೇರುವ ಮಿನಾ ದಿನಕ್ಕೆ ೧೬ ಗಂಟೆಗಳ ಕೂಲಿ ಕೆಲಸದಿಂದ ಸೋತು ಸುಣ್ಣವಾಗುತ್ತಾಳೆ. ಹರೆಯಕ್ಕೆ ಬಂದಾಗ ಕಾರ್ಖಾನೆಯಲ್ಲಿ ಎದುರಾಗುವ ಲೈಂಗಿಕ ಕಿರುಕುಳಗಳ ಮಧ್ಯೆಯೂ ಅವಳು ಕಾರ್ಲ್ ಎಂಬುವನನ್ನು ಪ್ರೀತಿಸಿ ಮದುವೆಯಾಗುತ್ತಾಳೆ. ಕಾರ್ಲ್ ಕುಡಿತದ ಚಟವನ್ನು ಅಂಟಿಸಿಕೊಂಡು ಮನೆಯ ಜವಾಬ್ದಾರಿಗಳೆಲ್ಲವನ್ನೂ ಅವಳ ಮೇಲೆಯೇ ಹಾಕಿದಾಗ ದುರ್ಭರ ಬದುಕು ಸವೆಸುತ್ತಾ ಕಾಲ ಕಳೆಯುತ್ತಾಳೆ. ೧೯ನೆಯ ಶತಮಾನದಲ್ಲಿ ಇಂತಹ ಸಾವಿರಾರು ಮಿನಾಗಳಿದ್ದರು. ಅವರೆಲ್ಲರ ಬದುಕನ್ನು ಸಂಕೇತಿಸುವ ಮಿನಾ ಬಡ ಕಾರ್ಮಿಕರ ರೂಪಕವಾಗುತ್ತಾಳೆ; ಸಾಹಿತ್ಯಾಸಕ್ತರಿಗೆ ಪ್ರಿಯವಾಗುತ್ತಾಳೆ. ಮಿನಾ ಕ್ನಾಲೆನ್‌ಫಾಲ್ಸ್‌ಳ ನೆನಪಿನಲ್ಲಿ ಊರಿನ ಮಧ್ಯಭಾಗದಲ್ಲಿ ಅವಳ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಲಾಗಿದೆ.



ಊರಿನ ಮಧ್ಯಭಾಗದಲ್ಲಿ
ಮಿನಾ ಕ್ನಾಲೆನ್‌ಫಾಲ್ಸ್‌ಳ ಪ್ರತಿಮೆ

ಇಂತಹ ಸಾಮಾಜಿಕ ಕಾಲಘಟ್ಟದಲ್ಲಿ ಏಂಗೆಲ್ಸ್ ಹುಟ್ಟಿ, ಬೆಳೆದದ್ದು. ನಂತರ ಅವನು ತನ್ನ ತಂದೆಯ ಕಾರ್ಖಾನೆಗಳಲ್ಲಿ ಕೆಲಸ ಮಾಡತೊಡಗಿದ. ಅಲ್ಲದೆ ಇಂಗ್ಲೆಂಡ್‌ನ ಮ್ಯಾಂಚೆಸ್ಟರ್‌ಗೂ ತೆರಳಿ ತನ್ನ ಕುಟುಂಬದ ವ್ಯವಹಾರಗಳ ಉಸ್ತುವಾರಿಯಲ್ಲಿ ತೊಡಗಿಕೊಂಡ.

ಕೈಗಾರಿಕಾ ವಸ್ತುಸಂಗ್ರಹಾಲಯದ ಬದಿಯಲ್ಲೇ ಇರುವುದು ಫ್ರೆಡರಿಕ್ ಏಂಗೆಲ್ಸ್‌ನ ಮನೆ. ಅದನ್ನು ನೋಡಲು ತೆರಳಿದಾಗ, ಮನೆಗೆ ಬೀಗ ಜಡಿದದ್ದು ಕಂಡುಬಂತು. ಅಲ್ಲಿ ವಿಚಾರಿಸಿದಾಗ ತಿಳಿದುಬಂದ ವಿಷಯವೆಂದರೆ, ಏಂಗೆಲ್ಸ್ ಮನೆಯನ್ನು ಪ್ರದರ್ಶನಕ್ಕೆಂದು ಸದಾ ತೆರೆದಿಡುವುದಿಲ್ಲ; ಆಸಕ್ತ ಪ್ರವಾಸಿಗರು ಬಂದಾಗ ಮಾತ್ರ ಆ ವಸ್ತು ಸಂಗ್ರಹಾಲಯದಲ್ಲಿ ಕೆಲಸ ಮಾಡುವ ಮಹಿಳೆಯೊಬ್ಬಳು ಬಂದು ಏಂಗೆಲ್ಸ್ ಮನೆಯ ಬಾಗಿಲು ತೆರೆದು ತೋರಿಸುತ್ತಾಳೆ ಎಂಬುದು. ನಾನು ಬಾನ್ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ಭಾರತೀಯ ವಿದ್ಯಾರ್ಥಿಯೆಂದು ಪರಿಚಯಿಸಿಕೊಂಡಾಗ ಅವಳು ಆಶ್ಚರ್ಯಚಕಿತಳಾದಳು. ಈ ಹಿಂದೆ ಚೀನಾ ದೇಶದ ವಿದ್ಯಾರ್ಥಿಗಳು ಏಂಗೆಲ್ಸ್‌ನ ಮನೆಗೆ ಭೇಟಿ ನೀಡಲೆಂದು ಬಂದಿರುವರಾದರೂ ಯಾವುದೇ ಭಾರತದ ವಿದ್ಯಾರ್ಥಿ ಇಲ್ಲಿಯವರೆಗೆ ಬಂದಿಲ್ಲವೆಂದು ಆಶ್ಚರ್ಯ ವ್ಯಕ್ತಪಡಿಸಿದಳು. ಏಂಗೆಲ್ಸ್‌ನ ಮನೆಯೊಳಗೆಲ್ಲಾ ಸಲೀಸಾಗಿ ಓಡಾಡಲು ಬಿಡುವುದಿಲ್ಲ. ಕೆಳ ಮಹಡಿಯ ಕೊಠಡಿಗಳನ್ನು ಹೊರಗೆ ನಿಂತು ಇಣುಕಿ ನೋಡಬಹುದಷ್ಟೆ. ಹಾಗೆ ಮಾಡಿದಾಗ ಕಂಡದ್ದು ಕೊಠಡಿಗಳೊಳಗಿದ್ದ ಹಳೆಯ ಕಾಲದ ಪೀಠೋಪಕರಣಗಳು ಮಾತ್ರ. ಮೇಲಿನ ಕೊಠಡಿಯಲ್ಲಿ ಏಂಗೆಲ್ಸ್‌ನ ಕೆಲವು ಪತ್ರಗಳು, ಪುಸ್ತಕಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ. ವಿಶ್ವದಾದ್ಯಂತ ತನ್ನ ಸ್ಫೋಟಕ ವಿಚಾರಗಳಿಂದಾಗಿ ಖ್ಯಾತನಾದ ಏಂಗೆಲ್ಸ್‌ನ ಮನೆಯಲ್ಲಿ ಮಾತ್ರ ನೀರವ ಮೌನ. ಈ ಮನೆಯನ್ನು ಭೇಟಿ ಮಾಡಲು ಬರುವವರ ಸಂಖ್ಯೆಯೂ ಕಡಿಮೆ. ಆದ್ದರಿಂದ ತನ್ನ ಕೆಲಸವನ್ನು ಬೇಗ ಮುಗಿಸಿ ಮನೆಗೋಡುವ ಅವಸರದಲ್ಲಿದ್ದ ಆ ಮನೆಯ ನಿರ್ವಾಹಕಿ ನನಗೂ ಅಲ್ಲಿ ಹೆಚ್ಚಿನ ಸಮಯ ಕಳೆಯಲು ಬಿಡದೆ ಅವಸರಿಸಿದಳು. ನೋಡಬೇಕಾದ್ದನ್ನು ಅವಸರದಲ್ಲಿ ನೋಡಿ, ಕೆಲವು ಫೋಟೊಗಳನ್ನು ತೆಗೆದುಕೊಂಡು ಭಾರವಾದ ಮನಸ್ಸಿನಿಂದ ಹೊರಬಂದೆ.

ಬಾನ್ ನಗರಕ್ಕೆ ಹಿಂದಿರುಗುವಾಗ ದಾರಿ ಯುದ್ದಕ್ಕೂ ಏಂಗಲ್ಸ್ ತನ್ನ ಬಾಲ್ಯಾವಸ್ಥೆಯಲ್ಲಿ ಬಾರ್ಮೆನ್ ಮತ್ತು ವುಪ್ಪರ್ತಾಲ್ ನಗರಗಳಲ್ಲಿ ಕಳೆದಿದ್ದ ದಿನಗಳನ್ನು ಮೆಲುಕುಹಾಕುತ್ತಾ ಹೊರಟೆ. ಅವನ ತಂದೆ ಪ್ರತಿ ಭಾನುವಾರ ಇಗರ್ಜಿಗೆ ಹೋಗುತ್ತಿದ್ದುದುಂಟು. ಏಂಗೆಲ್ಸ್ ಅದರಲ್ಲಿ ಅಷ್ಟು ಆಸಕ್ತಿ ತೋರುತ್ತಿರಲಿಲ್ಲ. ದುಡಿಯುವ ಜನರ ಜೀವನವನ್ನು ಅವನು ಹೆಚ್ಚು ಆಳವಾಗಿ ತಿಳಿಯುತ್ತಾ ಹೋದಂತೆ ಅವರ ಬಗ್ಗೆ ಅವನಲ್ಲಿ ಅನುಕಂಪ ಮೂಡುತ್ತಿತ್ತು. ಉದ್ಯಮಿಗಳೇಕೆ ಕೆಲಸಗಾರರ ಜೀವನವನ್ನು ಹಸನುಗೊಳಿಸಲು ಮುಂದಾಗುವುದಿಲ್ಲವೆಂದು ಅವನು ರೋಸಿ ಹೋಗುತ್ತಿದ್ದ. ಅವನಿಗಿನ್ನು ಹದಿನೆಂಟು ವರ್ಷಗಳು


ಜೋತಾಡುವ ರೈಲು

ತುಂಬಿರಲಿಲ್ಲ. ಆಗ ೧೮೩೯ರ ಮಾರ್ಚ್–ಏಪ್ರಿಲ್ ತಿಂಗಳ ಒಂದು ಪತ್ರಿಕೆಯಲ್ಲಿ ಎರಡು ಲೇಖನಗಳನ್ನು ಪ್ರಕಟಿಸಿದ್ದ. ಅದಕ್ಕೆ ತನ್ನ ಹೆಸರನ್ನು ಹಾಕಿಕೊಂಡಿರಲಿಲ್ಲ. ಉದ್ಯಮಿಗಳ ಖೋಟಾ ಧಾರ್ಮಿಕ ನಂಬಿಕೆಗಳನ್ನು ಕಟುವಾಗಿ ಟೀಕಿಸಿ ನಗರದಲ್ಲಿ ಕಾಣಬರುತ್ತಿದ್ದ ಸಾಮಾಜಿಕ ಸಂಬಂಧಗಳ ಬಗ್ಗೆ ವಿಮರ್ಶೆಯೊಂದನ್ನು ನೀಡಿದ್ದ. ಮಕ್ಕಳನ್ನು ದುಡಿಮೆಗೆ ಹಚ್ಚಿ ವಿದ್ಯೆಗೆ ಅವಕಾಶವಿಲ್ಲದಂತೆ ಮಾಡಿದ್ದುದು ವಿಶೇಷವಾಗಿ ಅವನಿಗೆ ತಾಪ ಉಂಟುಮಾಡಿತ್ತು. ಲೇಖನದ ಒಂದು ಭಾಗ ಹೀಗಿದ್ದಿತು: "ಬಾರ್ಮೆನ್ನಿನ ಕಾರ್ಖಾನೆಗಳಲ್ಲಿ ದುಡಿಯುವ ಕೆಲಸಗಾರರ ಹೀನಾಯ ಬಡತನಕ್ಕೆ ಮಿತಿಯಿಲ್ಲ. ಶ್ವಾಸಕೋಶದ ರೋಗಗಳು ಅಗಾಧವಾಗಿ ಹಬ್ಬಿವೆ. ಸಿಫಿಲಿಸ್‌ಗೇನೂ ಕೊರತೆಯಿಲ್ಲ. ಎಲ್ಬರ್‌ಫೆಲ್ಡ್ ಒಂದರಲ್ಲೇ ಶಾಲೆಗೆ ಹೋಗಬೇಕಾದ ವಯಸ್ಸಿನ ೨೫೦೦ ಮಕ್ಕಳಲ್ಲಿ ೧೨೦೦ ಮಂದಿ ಶಾಲೆಗೆ ಹೋಗುವಂತಿಲ್ಲ. ಅವರ ವಿದ್ಯಾಭ್ಯಾಸವೆಲ್ಲಾ ಕಾರ್ಖಾನೆಗಳಲ್ಲೇ ಆಗುತ್ತಿದೆ. ... ಧರ್ಮಭೀರುಗಳಂತೆ ತೋರುವ ಶ್ರೀಮಂತ ಮಾಲೀಕರು ತಮ್ಮ ಅಂತಃಸಾಕ್ಷಿಯನ್ನು ಹೇಗೆ ಬೇಕಾದರೂ ತಿರುಚಿಕೊಳ್ಳುತ್ತಾರೆ. ಒಂದೋ ಎರಡೋ ಮಕ್ಕಳ ಸಾವಿಗೆ ಕಾರಣರಾದರೆ ನರಕಕ್ಕೆ ಹೋಗಬೇಕೆಂದು ಭಯ ಅವರನ್ನು ಕಾಡುವುದಿಲ್ಲ. ಪ್ರತಿ ಭಾನುವಾರವೂ ಎರಡು ಬಾರಿ ಚರ್ಚಿಗೆ ಹೇಗೂ ಹೋಗುತ್ತಾರಲ್ಲಾ, ಇನ್ನೇನು ಭಯ! ತಮ್ಮ ಕೆಲಸಗಾರರನ್ನು ಹೇಗೆ ನಡೆಸಿಕೊಂಡರೂ ಅಡ್ಡಿಯಿಲ್ಲವೆಂಬ ಪ್ರಜ್ಞೆ ಅವರದು." ಇಂದೂ ಸಹ ಇವು ಪ್ರಸ್ತುತವೆನಿಸುವ ಮಾತುಗಳು.

**ಬಿ. ಮೈತ್ರಿ**
ನಂ.೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡನಗರ, ಗವೀಪುರಂ
ಬೆಂಗಳೂರು – ೫೬೦ ೦೧೯

---

# ಸಾದರ ಸ್ವೀಕಾರ

**ಹೋರಾಟದ ಹಾದಿಗೆ ಹಣತೆ ಹಿಡಿದವರು**
**ಭಾಗ – ೧** (ನಾನು ಮತ್ತು ನನ್ನ ಹೋರಾಟ)
*ಪ್ರಧಾನ ಸಂ : ಪ್ರೊ॥ ಕೆ. ಅಭಯ್ ಕುಮಾರ್*
***ಪುಟ : xxxii + ೧೮೮ ಬೆಲೆ : ರೂ. ೧೭೫***

**ಹೋರಾಟದ ಹಾದಿಗೆ ಹಣತೆ ಹಿಡಿದವರು**
**ಭಾಗ – ೨** (ನಾನು ಮತ್ತು ನನ್ನ ಹೋರಾಟ)
*ಪ್ರಧಾನ ಸಂ : ಪ್ರೊ॥ ಕೆ. ಅಭಯ್ ಕುಮಾರ್*
***ಪುಟ : xxxii + ೧೭೪ ಬೆಲೆ : ರೂ. ೧೭೫***

**ಮಹಿಳಾ ಚಳುವಳಿಗಳು ಮತ್ತು ಹೋರಾಟಗಳು**
(ವಿಚಾರ ಸಂಕಿರಣ ಮಾಲಿಕೆ)
*ಪ್ರಧಾನ ಸಂ : ಪ್ರೊ॥ ಕೆ. ಅಭಯ್ ಕುಮಾರ್*
***ಪುಟ : xxxii + ೧೩೨ ಬೆಲೆ : ರೂ. ೧೬೦***
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಮಂಗಳೂರು ವಿಶ್ವವಿದ್ಯಾನಿಲಯ**
ಎಸ್. ವಿ. ಪಿ. ಕನ್ನಡ ಅಧ್ಯಯನ ಸಂಸ್ಥೆ, ಮಂಗಳಗಂಗೋತ್ರಿ – ೫೭೪ ೧೯೯

**ನನ್ನ ಮಸೀದಿಯ ಧ್ವಂಸಗೈದವರಿಗೆ ಕೃತಜ್ಞ...**
ಸೂಫಿಯ ಕಣ್ಣಲ್ಲಿ ಹನಿಗಳು *ಬಿ. ಎಂ. ಬಶೀರ್*
***ಪುಟ : ೬೮ ಬೆಲೆ : ರೂ. ೭೫***

**ಅಮ್ಮ ಹಚ್ಚಿದ ಒಲೆ** (ಕವಿತೆಗಳು) *ಬಿ. ಎಂ. ಬಶೀರ್*
***ಪುಟ : ೧೦೮ ಬೆಲೆ : ರೂ. ೧೦೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಇರುವೆ ಪ್ರಕಾಶನ,** ಮಾರ್ವೆಲ್ ಅಪಾರ್ಟ್‌ಮೆಂಟ್, ನಂ. ೩೦೧, ಮೊದಲ ತಿರುವು, ಶಿವನಗರ, ಶ್ರೀನಿವಾಸ್ ಕಾಲೇಜು ಎದುರು ರಸ್ತೆ, ಪಾಂಡೇಶ್ವರ, ಮಂಗಳೂರು – ೫೭೫೦೦೧

**ಕಾವ್ಯ ಬೋಧಿ – ಮಹಿಳಾ ಕಾವ್ಯ – ೨೦೧೪**
*ಸಂ. : ಡಾ॥ ಎಚ್. ಎಸ್. ಅನುಪಮಾ*
***ಪುಟ : ೨೫೬ ಬೆಲೆ : ರೂ. ೧೭೦***
**ಕವಿ ಪ್ರಕಾಶನ,** ಕವಲಕ್ಕಿ, ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ, ಪಿನ್ – ೫೮೧ ೩೬೧

**ಸಹಗಮನ**(ಕವಿತೆಗಳು) *ಡಾ॥ ಎಚ್. ಎಸ್. ಅನುಪಮಾ*
***ಪುಟ : ೧೧೨ + ೪ = ೧೧೬ ಬೆಲೆ : ರೂ. ೧೦೦***
**ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ – ೫೮೧ ೩೧೪, ಉತ್ತರ ಕನ್ನಡ ಜಿಲ್ಲೆ

**ಮುತ್ತು ಮಲ್ಲಿಗೆ** (ಚುಟುಕುಗಳು) *ಸದಾನಂದ ನಾರಾವಿ*
***ಪುಟ : xiv + ೩೨ ಬೆಲೆ : ರೂ. ೬೫***
**ಅರೆಹೊಳೆ ಪ್ರತಿಷ್ಠಾನ,** ಸೌರನಿಧಿ, ಬಿಜೈ, ಮಂಗಳೂರು – ೫೭೫೦೦೪

**ಪುಟ್ಟನ ಹಾಡು** (ಮಕ್ಕಳ ಕವನ ಸಂಕಲನ)
*ಎಸ್. ಎಸ್. ಹಳ್ಳೂರ*
***ಪುಟ : ೬೨ ಬೆಲೆ : ರೂ. ೮೦***
**ಶ್ರೀಧರ ಪ್ರಕಾಶನ,** ಸೆಕ್ಟರ್ ನಂ.೨೭, ಪ್ಲಾಟ್ ನಂ.೫೦, ನವನಗರ, ಬಾಗಲಕೋಟೆ – ೫೮೭೧೦೧.

**ಗಾಯದ ಹೂವುಗಳು** (ಕವಿತೆಗಳು)ಕಾಜೂರು ಸತೀಶ್
***ಪುಟ : ೧೨೦ ಬೆಲೆ : ರೂ. ೭೫***
**ಪಲ್ಲಗಣಿ ಪುಸ್ತಕ,** ನಂ.೧೩/೧, ೧ನೇ ದೇವಸ್ಥಾನ ಬೀದಿ, *೯ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–೩*

**ಒಂದು ರೋಚಕ ಪಯಣ** (ಕಿರು ಆತ್ಮವೃತ್ತಾಂತ)
ಆರ್. ವಿ. ಭಂಡಾರಿ ನೆನಪಿನ ಪುಸ್ತಕ ಮಾಲೆ – ೨೬
*ಡಾ॥ ಎಂ. ಅಕಬರ ಅಲಿ*
***ಪುಟ : iv + ೫೬ ಬೆಲೆ : ರೂ. ೩೫***

**ಉಯಿಲಿಗೆ ಸಹಿ ಹಾಕಿ** ಡಾ॥ ಆರ್. ವಿ. ಭಂಡಾರಿ ನೆನಪಿನ ಪುಸ್ತಕ ಮಾಲೆ – ೨೫
– ಯಮುನಾ ಗಾಂವ್ಕರ್, ಜೋಯಿಡಾ
***ಪುಟ : ೪+೮೮ ಬೆಲೆ : ರೂ. ೫೦***

**ಯಕ್ಷಗಾನ ಕೈಪಿಡಿ** ಆರ್. ವಿ. ಭಂಡಾರಿ ನೆನಪಿನ ಪುಸ್ತಕ ಮಾಲೆ – ೨೨ *ಕೃಷ್ಣ ಭಂಡಾರಿ, ಸೋಂದಾ*
***ಪುಟ : ೪ + ೧೩೪ ಬೆಲೆ : ರೂ. ೯೦***
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ ಅರೇ ಅಂಗಡಿ, ಹೊನ್ನಾವರ, ಉ. ಕ. – ೫೮೧ ೩೩೪

**ಸಂಶೋಧನೆ** (ಸಂಯುಕ್ತ ನೆನಪಿನ ಸಂಪುಟ)
*ಸಂಪಾದಕರು : ಡಾ॥ ಜಾಜಿ ದೇವೇಂದ್ರಪ್ಪ*
***ಪುಟ : ೬೦+೨೧೦=೨೭೦ ಬೆಲೆ : ರೂ. ೧೫೦***
**ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,** ಕೊಪ್ಪಳ ಜಿಲ್ಲೆ, ಕೊಪ್ಪಳ

**ಕೆಂಡದ ಬೆಳಕು** (ಮಹಾಸತಿ ವೀರ ಹನುಮಕ್ಕನ ಸತ್ಯಕಥೆ ಆಧರಿತ) *ಮಾಯಣ್ಣಸ್ವಾಮಿ ಕಿರಂಗೂರು*
***ಪುಟ : xxiv + ೧೯೨ ಬೆಲೆ : ರೂ. ೧೨೫***
**ಸತ್ತಿಗೆ ಪ್ರಕಾಶನ,** ನಂ. ೧೩, ಸತ್ತಿಗೆ, ೮ನೇ ಅಡ್ಡರಸ್ತೆ, ಕೌನ್ಸಿರಾಂ ನಗರ, ಲಕ್ಷ್ಮೀಪುರ ಬಡಾವಣೆ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು – ೫೬೦೦೯೭

**ಕಾರುಣ್ಯ** (ತ್ರಿಪದಿಗಳ ಸಂಗ್ರಹ) *ಸಾ. ಹು. ದ್ಯಾಮಪ್ಪ*
***ಪುಟ : xii + ೩೪೭ ಬೆಲೆ : ರೂ. ೨೫೦***
**ರಾಘವೇಂದ್ರ ಪ್ರಕಾಶನ,** ಸಾಸ್ವಿಹಳ್ಳಿ, ದಾವಣಗೆರೆ

**ಕೋಲ್ಕತ್ತೆಯ ಕನ್ನಡಿಗ** *ಸಂ. : ನಾಗರಾಜ ಸಿರಿಗೆರೆ*
***ಪುಟ : xx+೩೦೦+೧೬=೩೩೬ ಬೆಲೆ : ರೂ. ೨೨೫***
**ಕಣ್ವ ಪ್ರತಿಷ್ಠಾನ,** ನಂ. ೨೩/ಎ, ಮೊದಲ ಮಹಡಿ, ೧೦ನೇ ಕ್ರಾಸ್, ಒಂದನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦

**ಅನುಸೃಷ್ಟಿ** (ಜಿ. ಕುಮಾರಪ್ಪನವರ ಅನುವಾದಿತ ಕೃತಿಗಳ ಅವಲೋಕನ) *ಸಂ. : ನಾಗರಾಜ ಸಿರಿಗೆರೆ*
***ಪುಟ : viii + ೧೯೭ = ೨೦೪ ಬೆಲೆ : ರೂ. ೧೫೦***
**ನಿವೇದಿತ ಪ್ರಕಾಶನ,** ನಂ. ೩೪೩೭, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ, ೨ನೇ ಹಂತ, ಬೆಂಗಳೂರು – ೨೮

**ಬಿಡಿಗಾಳು... ಹಿಡಿಗಾಳು ...** (ಆಧುನಿಕ ತ್ರಿಪದಿಗಳು)
*ಚಂದ್ರಗೌಡ ಕುಲಕರ್ಣಿ*
***ಪುಟ : xx + ೧೨೪ = ೧೪೪ ಬೆಲೆ : ರೂ. ೬೦***
**ಸಂಗಾತಿ ಪ್ರಕಾಶನ,** ಕಡದಳ್ಳಿ, ಚಿಲಿಪಿಲಿ, ಖಾಸ್ಗತ ನಗರ, ತಾಳಿಕೋಟೆ – ೫೮೬ ೨೧೪

# ಜಿಡಿಪಿಯ ಮೋಹಕ ಮೋಡಿ

ಆಡಳಿತ ಹದಗೆಟ್ಟಾಗ ಸರ್ಕಾರಗಳು ಜನತೆಯ ಗಮನವನ್ನು ಬೇರೆಡೆಗೆ ಎಳೆಯಲು ಯತ್ನಿಸುತ್ತಾರೆ. ನೆರೆರಾಜ್ಯದ ಮೇಲೆ ಯುದ್ಧಕ್ಕೆ ಹೋಗುತ್ತಾರೆ; ಇಲ್ಲವೆ, ಮತಧರ್ಮ ಜಾತಿಜಗಳ, ದೇಶಭಕ್ತಿ ಮುಂತಾದ ಭಾವುಕ ವಿಷಯಗಳನ್ನು ಮುಂದಿಟ್ಟು ಗಲಭೆ ಎಬ್ಬಿಸುತ್ತಾರೆ. ಪ್ರಜಾಪ್ರಭುತ್ವದ ಈ ಕಾಲದಲ್ಲೂ ಇವು ಬೇರೆ ಬೇರೆ ಸೋಗಿನಲ್ಲಿ ನಡೆಯುತ್ತಲೇ ಇರುತ್ತವೆ. ಮೋದಿ ಪಕ್ಷ ದೇಶದ ಮುಂದೆ ಚುನಾವಣೆಗೆ ಮುಂಚೆ, ತಾನು ಸಾಧಿಸುತ್ತೇನೆ ಎನ್ನುವ ಆರ್ಥಿಕ ಪ್ರಗತಿಯ ದೊಡ್ಡ ಚಿತ್ರವನ್ನೇ ಜನತೆಯ ಮುಂದೆ ಇಟ್ಟಿತ್ತು. ಆರ್ಥಿಕ ತಜ್ಞರಿಗೆ ಅದೇನೂ ವಿಶಿಷ್ಟವಾಗಿ ಕಾಣದಿದ್ದರೂ, ಚುನಾವಣೆಯ ಪ್ರಚಾರದಲ್ಲಿ ಜನರನ್ನು ನಂಬಿಸುವುದು ಮತ ಪಡೆಯುವುದು ಬೇರೆಯೇ ವಿಷಯ. ಕೇವಲ ಉದ್ಯಮಿಗಳ ಬೆಳವಣಿಗೆಗೆ ಒತ್ತುಕೊಟ್ಟು, ಎಷ್ಟು ಜನ ಬಿಲಿಯನ್ ಅಧಿಪತಿಗಳಾದರು ಎಂದು ಲೆಕ್ಕಹಾಕಿ ಹಿಗ್ಗುತ್ತಾ, ಕಾರ್ಪೊರೇಟ್ ಲಾಭವನ್ನು ಜನತೆಯ ಕ್ಷೇಮವೆಂದು ಬಿಂಬಿಸುತ್ತಾ ಆಳಿದ ಯುಪಿಎ ಸರ್ಕಾರ ಅಧಿಕಾರ ಕಳೆದು ಕೊಂಡಿತು. ಅದಲ್ಲದಿದ್ದರೆ ಇದು ಎನ್ನುವ ಆಯ್ಕೆಯಾಗಿ ಮೋದಿ ಸರ್ಕಾರ ಅಧಿಕಾರದ ಕೈಹಿಡಿಯಿತು. ಅದಕ್ಕೆ ಬಂದಿದ್ದೂ ಕೇವಲ ಶೇ. ೩೧ ಮತವಷ್ಟೇ ಆದರೂ ನಮ್ಮ ಚುನಾವಣೆಯ ವ್ಯವಸ್ಥೆಯಲ್ಲಿನ ದೋಷದಿಂದಾಗಿ ಹತ್ತಿರ ಹತ್ತಿರ ಮೂರರಲ್ಲಿ ಎರಡರಷ್ಟು ಸ್ಥಾನಗಳನ್ನು ಗಳಿಸಿದ ಭಾಜಪ ಸರ್ಕಾರ ಇದು ತನ್ನ ತತ್ವಗಳಿಗೇ ದೊರೆತ ಮತವೆಂದುಕೊಂಡಿದ್ದು ಸಹಜವೇ. ವಾಸ್ತವದಲ್ಲಿ ಯುಪಿಎ ಮತ್ತು ಭಾಜಪಗಳ ನಡುವೆ ಕಾರ್ಪೊರೇಟ್ ವ್ಯವಸ್ಥೆಯನ್ನು ಓಲಾಡಿಸುವುದರಲ್ಲಿ ಪೈಪೋಟಿಯೇ ವಿನಾ ಜನಸಾಮಾನ್ಯರ ಜೀವನಕ್ಕೆ ಒಂದಿಷ್ಟು ಸುವ್ಯವಸ್ಥೆ ಮಾಡುವಲ್ಲಿ ರಾಜಕೀಯದ ದೃಷ್ಟಿ ಬಿದ್ದರೆ, ವಾಸ್ತವವಾದ ಆಸಕ್ತಿ ಏನೂ ಇಲ್ಲ. ಒಂದು ವ್ಯತ್ಯಾಸವೆಂದರೆ ಭಾಜಪ, ಮತಧರ್ಮ, ದೇಶಭಕ್ತಿ ಕೋಮುವಾದಗಳನ್ನು ಪ್ರಯೋಗಿಸಿ ಜನರಿಗೆ ಮಂಕುಬೂದಿ ಎರಚಿ, ಎಚ್ಚರ ತಪ್ಪಿಸುವುದರಲ್ಲಿ, ದಾರಿ ತಪ್ಪಿಸುವುದರಲ್ಲಿ ಈ ಹಿಂದಿನ ಪ್ಯಾಸೀವಾದಿಗಳಿಗಿಂತ ಸಮರ್ಥರು. ಈಗ ದೇಶದ ಆರ್ಥಿಕ ಪ್ರಗತಿಯ ವಿಷಯದಲ್ಲಿ ಆಗಿರುವುದಂತೂ ಇಷ್ಟೇ. ಯುಪಿಎ ಸರ್ಕಾರದ ಕಾರ್ಪೊರೇಟ್ ಪರ ನೀತಿಗಳನ್ನೇ ಇನ್ನೂ ಆಳವಾಗಿ ವ್ಯಾಪಕವಾಗಿ ಮಾಡಹೊರಟಿದೆ, ಈ ಸರ್ಕಾರ. ಆದರೆ ಕಾರ್ಪೊರೇಟ್‌ಗಳೇ ನಮ್ಮ ನಾಡಿನಲ್ಲಿ ಯಾವಾಗಲೂ ಸರ್ಕಾರದ ಕೃಪಾಕಟಾಕ್ಷ, ಅನುದಾನ, ಧನಬಲದಿಂದ ನಡೆಯುವ ಉಪಜೀವಿವರ್ಗವಾಗಿದ್ದು ನಮಗೆ ಪಶ್ಚಿಮದ ಬಂಡವಾಳ ವ್ಯವಸ್ಥೆ ದಕ್ಕಲೇ ಇಲ್ಲ. ಅದೇ ಸಮಯ ನಮ್ಮದೇ ಆದ ಸಮಾಜವಾದೀಯ ಜನಪರ ಆರ್ಥಿಕ ಅಭಿವೃದ್ಧಿಯೂ ಆಗಲಿಲ್ಲ. ಆರ್ಥಿಕ ಅಭಿವೃದ್ಧಿಯೊಂದಿಗೆ ಮೇಳೈಸಿ ಪ್ರಜಾಪ್ರಭುತ್ವ ಜನರಿಗೆ ಕನಿಷ್ಠ ಜೀವನ ಮಟ್ಟವನ್ನು ದೊರಕಿಸಲು ವಿಫಲವಾಗಿರುವುದು ಇಂತಹ ರಾಜಕೀಯ ಪರಿಸ್ಥಿತಿಯಲ್ಲಿ ಆಶ್ಚರ್ಯವೇನಲ್ಲ. ಯೋಜನಾ ಆಯೋಗವನ್ನು ಮುಚ್ಚುವುದನ್ನೇ ನೀತಿಯಾಗಿಸಿಕೊಂಡ ಈ ಸರ್ಕಾರದಿಂದ ಕಾರ್ಪೊರೇಟ್ ಲೋಕಕ್ಕೂ ಏನೂ ಒಳ್ಳೆಯದಾಗಿಲ್ಲ. ಈಗಾಗಲೇ ದೇಶದ ಉದ್ಯಮಿಗಳ ಛೇಂಬರುಗಳು ಮೋದಿಯನ್ನು ಟೀಕಿಸಲು ಆರಂಭಿಸಿವೆ. ಕೆಲವು ತಿಂಗಳುಗಳಿಂದ ನಡೆಯುತ್ತಿರುವ ಜಿಎಸ್‌ಟಿ ವ್ಯವಸ್ಥೆ ಕುರಿತ ಟೀಕೆ–ಟಿಪ್ಪಣಿಗಳು, ಅದನ್ನು ಕಾನೂನಾಗಿ ಮಾಡಲು ವಿಫಲವಾದ ಸರ್ಕಾರ, ಅದರ ವಿರುದ್ಧದ ರಾಜಕೀಯ ಇವೆಲ್ಲ, ಅದರ ನೇರಸಂಬಂಧ ಇರದ ಜನತೆಗೆ ಗೊಂದಲವಾದರೆ, ಉದ್ಯಮಲೋಕಕ್ಕೆ ತೀರ ನಿರಾಶೆಯಾಗಿ, ಮೋದಿ ವಿರುದ್ಧ ಅತೃಪ್ತಿ ಎದ್ದಿದೆ. ಕಾರ್ಪೊರೇಟ್ ವಲಯ ತನ್ನೆಲ್ಲ ವೈಫಲ್ಯಗಳಿಗೂ ಮೋದಿ ಸರ್ಕಾರವೇ ಕಾರಣ ಎಂದು ಹೇಳಲಾರಂಭಿಸಿದೆ. ಅವರಿಗೆ ಬೇಕಾದ ಸುಧಾರಣೆಗಳನ್ನು ಮಾಡಿಕೊಡಲು ಮೋದಿ ವಿಫಲರಾಗಿದ್ದಾರೆ ಎನ್ನುವುದು ಅವರ ಪುಕಾರು. ಯೋಜನೆಯ ಮಾರ್ಗದಲ್ಲೂ, ಖಾಸಗಿಗೆ ಮಹತ್ತರ ಪಾತ್ರವಿತ್ತು. ಈಗ ಯಾರಿಗೂ ಯಾವುದೇ ನಿರ್ದೇಶನವಿಲ್ಲದಂತಾಗಿದೆ.

ಈ ಸಂದರ್ಭದಲ್ಲಿ ದಿನ ಬೆಳಗಾದರೆ ಎಲ್ಲ ಮಾಧ್ಯಮಗಳೂ ಜನರ ಕಿವಿ ಗಡಚಿಕ್ಕುವಂತೆ ಕೂಗಾಡುತ್ತಿರುವ ಒಂದು ವಿಷಯ ಅಂದರೆ ಜಿಡಿಪಿ. ವಾರ್ಷಿಕ ಶೇಕಡ ಎಷ್ಟು ಜಿಡಿಪಿ ದರದಲ್ಲಿ ಅಭಿವೃದ್ಧಿಯಾಗುತ್ತಿವೆ ಎನ್ನುವುದು ವಿಷಯ. ಜಿಡಿಪಿ ಅಂದರೆ ಇಂಗ್ಲಿಷಿನಲ್ಲಿ ಗ್ರಾಸ್ ಡೊಮೆಸ್ಟಿಕ್ ಪ್ರಾಡ್ಯೂಸ್ – ದೇಶದ ಆಂತರಿಕ ಅರ್ಥವ್ಯವಸ್ಥೆಯಲ್ಲಿ ವಾರ್ಷಿಕ ಆಗುವ ಒಟ್ಟು ಉತ್ಪಾದನೆಗಳ ರೂಪಾಯಿ ಮೌಲ್ಯ. ಇದು ವಾರ್ಷಿಕ ೭ ಅಥವಾ ೭.೫ರಷ್ಟು ವಿಕಾಸವಾಗುತ್ತಿದೆ. ಇದು ಚೀನವನ್ನು ಹಿಂದಿಕ್ಕಿದ ಬೆಳವಣಿಗೆ; ಅವರದು ಕೇವಲ ೬–೬.೫. ಪಶ್ಚಿಮದ ರಾಷ್ಟ್ರಗಳದ್ದು ೨–೩ರಷ್ಟು ಮಾತ್ರ. ಇದನ್ನು ಇನ್ನಷ್ಟು ವಿಸ್ತಾರವಾಗಿ ಅರ್ಥಮಾಡಿಕೊಳ್ಳಲು ಮೊದಲಿಗೆ ಕೆಲವು ಅಂಕಿ ಅಂಶಗಳನ್ನು ಗಮನಿಸಿ :

**ಕೆಲವು ಅಂಕಿ ಅಂಶಗಳು**

೨೦೦೪–೧೨ರ ಮಧ್ಯೆ, ಕೃಷಿಕಾರ್ಮಿಕರು ಹಳ್ಳಿಬಿಟ್ಟು ಉದ್ಯೋಗ ಅರಸಿ ನಗರಪ್ರದೇಶಗಳಿಗೆ ವಲಸೆಹೋದರು. ಅದು ಕಾರಣವಾಗಿ, ಹಳ್ಳಿಗಾಡಿನಲ್ಲಿ ಕೂಲಿಯ ದರದಲ್ಲಿ ಶೇ. ೧೫–೨೦ರಷ್ಟು ಪ್ರತಿವರ್ಷವೂ ಹೆಚ್ಚಾಗುತ್ತಾ ಬಂತು. ಇದರ ಪರಿಣಾಮವೆಂದರೆ ಹಳ್ಳಿಗಾಡಿನ ಗ್ರಾಹಕರ ಬೇಡಿಕೆಯಲ್ಲಿ ಗಮನಾರ್ಹ ಹೆಚ್ಚಳ ಉಂಟಾಯ್ತು. ಪ್ರಸಕ್ತ ಹವಾಮಾನ ವೈಪರೀತ್ಯ ಮುಂತಾದ ಕಾರಣಗಳಿಂದಾಗಿ ಕೃಷಿ ಕ್ಷೇತ್ರ ಸೊರಗಿದೆ. ಅದೇ ಸಮಯ ಪಟ್ಟಣದಲ್ಲೂ ಉದ್ಯೋಗಾವಕಾಶಗಳು ಕುಸಿದಿದ್ದು ವಲಸೆಹೋದವರು ಹಿಂದಿರುಗುತ್ತಿದ್ದಾರೆ. ಪರಿಣಾಮವೆಂದರೆ ಹಳ್ಳಿಗಾಡಿನ ಕೂಲಿಯ ದರ ವರ್ಷದಿಂದ ವರ್ಷಕ್ಕೆ ಶೇ. ೬ರಷ್ಟು ಮಾತ್ರ ವೃದ್ಧಿಯಾಗುತ್ತಿದೆ. ಅಂದರೆ ಗ್ರಾಮೀಣ ಪ್ರದೇಶದ ಗ್ರಾಹಕರ ಬೇಡಿಕೆ ಗಮನಾರ್ಹವಾಗಿ ಕಡಿಮೆಯಾಗಿದೆ. ಈ ಬೆಳವಣಿಗೆಗಳ ನೇರ ಪರಿಣಾಮ ಹಳ್ಳಿಗಾಡಿಗೆ ಸರಕು ಪೂರೈಸುವ ಕೈಗಾರಿಕೆಗಳು ಬೇಡಿಕೆ ಇಲ್ಲದೆ ಸೊರಗಿ, ಅದು ನಿರುದ್ಯೋಗವನ್ನೂ ಸೃಷ್ಟಿಸುವುದು, ಮರದೊಳಗೆ ಮರ ಹುಟ್ಟಿ ಅನ್ನುವಂತೆ ಸಮಸ್ಯೆ ಯಾವುದು ಪರಿಣಾಮ ಯಾವುದು ಅನ್ನುವಂಥದು ಇದು. ಇಂದಿನ ಬಂಡವಾಳ ವ್ಯವಸ್ಥೆಯಲ್ಲಿ ಕಾರ್ಪೊರೇಟ್ ಲೋಕಕ್ಕೆ ವಾರ್ಷಿಕ ಲಾಭ ಬಹಳ ಮುಖ್ಯ. ಜಿಡಿಪಿಯ ಶೇಕಡ ಎಷ್ಟು ಎಂದು ಲಾಭವನ್ನು ಎಣಿಕೆ ಹಾಕಿದರೆ, ಪ್ರಸಕ್ತ ವರ್ಷ ನಿರೀಕ್ಷಿಸಿರುವ ಆ ಲಾಭ ಶೇ. ೩.೯ರಷ್ಟು ಇದ್ದು, ಅದು ಕಳೆದ ಹತ್ತು ವರ್ಷದಲ್ಲಿ ಅತ್ಯಂತ ಕನಿಷ್ಠ ಮಟ್ಟದ್ದಾಗಿದೆ. ಈ ವಲಯದ ಒಟ್ಟಾರೆ ಲಾಭ ಸುಮಾರು ನಾಲ್ಕು ಲಕ್ಷ ಕೋಟಿಯಷ್ಟು ಇದ್ದು, ಅದು ಬೆಳವಣಿಗೆಯಿಲ್ಲದೆ ಮೂರು ವರ್ಷಗಳಿಂದ ಅದೇ ಮಟ್ಟದಲ್ಲಿ ಸ್ಥಗಿತಗೊಂಡಿದೆ. ಅದು ಕಾರಣ ವರ್ತಕರು ಹೂಡಿಕೆ ಮಾಡಲು ಹಿಂಜರಿಯುತ್ತಾರೆ.

ರಾಷ್ಟ್ರದ ಒಟ್ಟಾರೆ ಉಳಿತಾಯ ೨೦೦೮ರಲ್ಲಿ ಜಿಡಿಪಿಯ ಶೇ. ೩೮.೧ರಷ್ಟು ಇದ್ದದ್ದು, ಅದು




(ಸಂಖ್ಯಾಶಾಸ್ತ್ರ ಮತ್ತು ಕಾರ್ಯಕ್ರಮ ಜಾರಿ ಇಲಾಖೆ, ಭಾರತ ಸರ್ಕಾರ)

**ಕೆ. ಎಸ್. ಪಾರ್ಥಸಾರಥಿ**

ಕಡಿಮೆಯಾಗುತ್ತಾ, ಈಗ ಶೇ. ೨೮ಕ್ಕೆ ಇಳಿದಿದೆ. ಅಂದರೆ ಉಳಿಕೆ ಮಾಡಲಾರದಷ್ಟು ಸಾಧಾರಣ ಜೀವನ ಬೆಲೆ ಏರಿಕೆಯಿಂದಾಗಿ ದುರ್ಭರವಾಗಿದೆ. ಅಂದರೆ ಹೂಡಿಕೆಗೆ ದೊರೆಯುವ ಹಣ ಕಡಿಮೆಯಾಗಿದೆ. ೨೦೦೮ ಜಾಗತಿಕವಾಗಿ ಆರ್ಥಿಕ ಬಿಕ್ಕಟ್ಟು ಉಂಟಾದ ವರ್ಷ. ಅಲ್ಲಿಂದ ಜಗತ್ತಿನ ಎಲ್ಲ ಕಡೆ ಚೇತರಿಕೆ ಕಂಡುಬಂದಿದ್ದರೂ ನಮ್ಮಲ್ಲಿ ಅದು ಆಗಿಲ್ಲ. ಆರ್ಥಿಕ ಕ್ಷೇತ್ರವನ್ನು ಪ್ರಮುಖವಾಗಿ ಹಲವು ವಿಭಾಗಗಳ ಪ್ರಗತಿಯನ್ನು ಗಮನಿಸಿ, ವಿಮರ್ಶಿಸಬಹುದು. ಈ ಕ್ಷೇತ್ರಗಳು ಸಾಲ ಪಡೆದು ಹೂಡಿಕೆ ಮಾಡುತ್ತವೆ. ಸಾಲ ಪಡೆಯುವುದು ಕಡಿಮೆಯಾದರೆ ಹೂಡಿಕೆಯೂ ಕಡಿಮೆ ಎಂದು ಸಾಮಾನ್ಯವಾಗಿ ಹೇಳಬಹುದು. ಕಳೆದ ವರ್ಷ ಮತ್ತು ಈ ವರ್ಷದ ಅಂಕಿಗಳು ಹೀಗಿವೆ.

**ಹೂಡಿಕೆಯಲ್ಲಿ ಆಗಿರುವ ಶೇಕಡ ಹೆಚ್ಚಳ**

| | ೨೦೧೪–೧೫ ಏಪ್ರಿಲ್–ಸೆಪ್ಟೆಂಬರ್ | ೨೦೧೫–೧೬ ಏಪ್ರಿಲ್–ಸೆಪ್ಟೆಂಬರ್ |
|---|---|---|
| ತಯಾರಿಕಾ ಕ್ಷೇತ್ರ | ಶೇ. ೨೧ | ಶೇ. ೭.೧ |
| ನಿರ್ಮಾಣ ಕ್ಷೇತ್ರ | ಶೇ. ೨೭.೪ | ಶೇ. ೪.೧ |
| ಗಣಿಗಾರಿಕೆ | ಶೇ. ೧೭.೧ | ಶೇ. ೮.೨ |
| ವಿದ್ಯುತ್ ಉತ್ಪಾದನೆ | ಶೇ. ೧೩.೭ | ಶೇ.೧೨.೭ |
| ಕೈಗಾರಿಕೆ | ಶೇ. ೯.೬ | ಶೇ. ೫.೨ |

ಉಳಿತಾಯವೂ ಕಡಿಮೆ; ಆದರೆ ಅದಕ್ಕೂ ಬೇಡಿಕೆ ಇಲ್ಲದ ಪರಿಸ್ಥಿತಿ ಆರ್ಥಿಕತೆ ಹದಗೆಟ್ಟಿರುವ ಸೂಚನೆ. ಹಣದುಬ್ಬರ ಲೆಕ್ಕ ಹಾಕಿದರೆ ಇಂದಿನ ಬಡ್ಡಿದರ ಋಣಾತ್ಮಕವಾಗಿದ್ದು, ಉಳಿತಾಯ ಮಾಡಿದರೆ ಅಸಲಿಗೇ ಮೋಸ ವಾಗುತ್ತದೆ. ದೇಶದ ರಫ್ತು ಕಳೆದ ಒಂದು ವರ್ಷದಿಂದ ಒಂದೇ ಸಮನೆ ಕಡಿಮೆಯಾಗುತ್ತಿದೆ. ಇದಕ್ಕೆ ಅಂತರರಾಷ್ಟ್ರೀಯ ಪರಿಸ್ಥಿತಿ ಒಂದು ಕಡೆ ಕಾರಣ ಆದರೆ, ನಮ್ಮ ಸರಕುಗಳು ಪೈಪೋಟಿಯಲ್ಲಿ ನಿಲ್ಲಲಾಗದೆ ಹೋಗುವುದು ಮತ್ತೊಂದು ಕಾರಣ. ಏತನ್ಮಧ್ಯೆ, ರಫ್ತು ಮಾಡಲೆಂದೇ ಸ್ಥಾಪಕವಾಗುವ ಕೈಗಾರಿಕೆಗಳಿಗೆ ಪ್ರೋತ್ಸಾಹವಾಗಿ ತೆರಿಗೆಯಲ್ಲಿ ಕಡಿತ ಮಾಡಲಾಗಿತ್ತು. ಆದರೆ ಈ ಪ್ರೋತ್ಸಾಹ ನೀತಿಯನ್ನು ೨೦೧೧ರಿಂದ ನಿಲ್ಲಿಸಲಾಯ್ತು. ಇದರ ಪರಿಣಾಮವೆಂದರೆ ಈ ಕೈಗಾರಿಕಾ ಘಟಕಗಳು ಕದ ಮುಚ್ಚುತ್ತಿರುವುದು. ಮಾರ್ಚ್ ೨೦೧೫ರಲ್ಲಿ ಇಂಥ ಘಟಕಗಳು ೨೧೦೦ ಇದ್ದದ್ದು ಈಗ ಅದು ೧೯೭೫ಕ್ಕೆ ಇಳಿದಿದೆ. ೨೦೧೩–೧೪, ಮತ್ತು ೨೦೧೪–೧೫ರಲ್ಲಿ ಕ್ರಮವಾಗಿ ೫೦ ಮತ್ತು ೧೪೦ ಘಟಕಗಳು ಮುಚ್ಚಿದವು. ಪ್ರಸಕ್ತ ವರ್ಷ ಈಗಾಗಲೇ ೧೨೫ ಘಟಕಗಳು ಕದ ಮುಚ್ಚಿವೆ.

೨೦೧೩–೨೦೧೪ರಲ್ಲಿ ನಾವು ಮಾಡಿದ ರಫ್ತಿನ ಮೌಲ್ಯ ೩೧೦ ಬಿಲಿಯ ಡಾಲರು. ಕಳೆದ ವರ್ಷ ಇದು ಕೇವಲ ೨೬೦ ಬಿಲಿಯ ಡಾಲರುಗಳು. ರಫ್ತು ವಹಿವಾಟು, ಆರ್ಥಿಕ ಬಿಕ್ಕಟ್ಟಿನ ವರ್ಷ ೨೦೦೮–೯ಕ್ಕಿಂತ ಕೆಳಗಿನ ಮಟ್ಟ ತಲಪಿದೆ. ಅಂತರರಾಷ್ಟ್ರೀಯ ಪರಿಸ್ಥಿತಿ ಮಾತ್ರ ಇದಕ್ಕೆ ಕಾರಣವಲ್ಲ. ಇದರ ಬೆನ್ನಿಗೇ ನಾವು ಮಾಡಿಕೊಳ್ಳುವ ಆಮದು ಮಟ್ಟವೂ ಕಡಿಮೆಯಾಗಿದೆ. ಈಗಿರುವ ಆಮದು ಸರಕುಗಳಲ್ಲಿ ಚಿನ್ನದ್ದೇ ಸಿಂಹಪಾಲಾದರೂ, ಈ ಸಾರಿ ಅದರಲ್ಲೂ ಗಮನಾರ್ಹ ಇಳಿಕೆಯಾಗಿದೆ. ಅಂದರೆ ಚಿನ್ನದ ಸಿದ್ಧ ಒಡವೆಗಳ ರಫ್ತಿನಲ್ಲೂ ಕುಸಿತವಾಗಿದೆ. ದೇಶದ ಹೊಸ ಕೈಗಾರಿಕೆಗಳಿಗೆ ಬೇಕಾಗುವ ಯಂತ್ರತಂತ್ರ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುವಲ್ಲೂ ಇಳಿಕೆಯಾದಾಗ, ರಫ್ತು ಮತ್ತು ಆಮದಿನ ಚಿತ್ರ ಆರ್ಥಿಕ ಪ್ರಗತಿಯ ಹಿನ್ನಡೆಯ ಚಿತ್ರವಾಗುತ್ತದೆ.

ಬಡ್ಡಿ ದರ ತೀರ ಕಡಿಮೆ ಮಾಡಲಾಗಿದೆ. ಇದಕ್ಕೆ ನೀಡುವ ಕಾರಣ ಕೈಗಾರಿಕೆಗಳಿಗೆ ಕಡಿಮೆ ದರದಲ್ಲಿ ಸಾಲ ಕೊಡಬೇಕು, ಅವರು ಹೂಡಿಕೆ ಮಾಡುತ್ತಾರೆ, ಉದ್ಯೋಗ ಉಂಟಾಗುತ್ತದೆ, ಮುಂತಾಗಿ. ಆದರೆ ಸಾಲ ನೀಡಲು, ಮಾಡಲು ಹಣದ ಕೊರತೆ ಅಥವಾ ಬಡ್ಡಿಯ ದರ ಕಾರಣವಾಗಿಲ್ಲ. ಬ್ಯಾಂಕುಗಳಲ್ಲೂ, ಉದ್ಯಮಿಗಳ ಸ್ವಂತ ಖಾತೆಯಲ್ಲೂ ನಗದು ತುಂಬಿದೆ. ಆದರೆ ಸ್ಥಗಿತಗೊಂಡ ಆರ್ಥಿಕ ಚಟುವಟಿಕೆಯಿಂದಾಗಿ ಬಡ್ಡಿ ನೀಡಿ ಹಣ ಪಡೆಯುವವರೇ ಇಲ್ಲ. ಮತ್ತೊಂದೆಡೆ ಹಣವನ್ನು ಉಳಿತಾಯ ಮಾಡುವುದು ವ್ಯರ್ಥ ಎನ್ನುವಂತೆ ಆಗಿದೆ. ಬಡ್ಡಿಯಿಂದಲೇ ಬದುಕುವ ಪಿಂಚಣಿ ಜನಕ್ಕೆ ಜೀವನ ನಿರ್ಧರಿಸುವುದೇ ಕಷ್ಟವಾಗಿದೆ. ಇನ್ನು ತೆರಿಗೆಯ ಭಾರ ಹೆಚ್ಚು, ಉದ್ಯಮ ನಡೆಸಲು ಆಗುವುದಿಲ್ಲ ಎನ್ನುವ ಮಾತು; ನಮ್ಮ ತೆರಿಗೆಯ ದರ ವಿಶ್ವದಲ್ಲೇ ಹೆಚ್ಚು ಎಂದು ಸುಳ್ಳು ಹೇಳುತ್ತಾರೆ. ಶೇ. ೭೦ರಷ್ಟು ತೆರಿಗೆ ವಿಧಿಸುವ ಸ್ಕಾಂಡಿಗೇವಿಯನ್ ದೇಶಗಳಿವೆ. ಯೂರೋಪಿನ ಎಲ್ಲ ಉದ್ಯಮಿಗಳೂ ನಮಗಿಂತ ಹೆಚ್ಚು ತೆರಿಗೆ ನೀಡುತ್ತಾರೆ. ಈ ಸಲ ಇಲ್ಲಿಯವರೆಗೂ ವಸೂಲಿ ಆದ ತೆರಿಗೆ ಕೇವಲ ೪೭%. ಕಳೆದ ಎರಡು ವರ್ಷಗಳಲ್ಲಿ ಉದ್ಯಮಿಗಳಿಗೆ ಸುಮಾರು ೬ ಲಕ್ಷ ಕೋಟಿಯಷ್ಟು ತೆರಿಗೆ ವಿನಾಯ್ತಿ, ಕಡಿತ ದೊರಕಿದೆ. ಇದೇ ಉದ್ಯಮಿಗಳು ಪರದೇಶದಲ್ಲಿ ವರ್ಷ ವರ್ಷ ೨–೩ ಬಿಲಿಯ ಡಾಲರ್ ಹೂಡಿಕೆ ಮಾಡುತ್ತಿದ್ದಾರೆ. ಅಂದರೆ ನಮ್ಮ ಉದ್ಯಮ ಲೋಕ ಈ ಎಲ್ಲ ಸೌಲಭ್ಯಗಳ ಮಧ್ಯೆಯೂ ಉತ್ಪಾದನೆ ಹೆಚ್ಚಿಸಲು ಉದ್ಯೋಗ ನೀಡಲು ಅಸಮರ್ಥವಾಗಿವೆ. ಹೀಗಾಗಿ ಬೆಳವಣಿಗೆಯ ದರ ೭–೮–೯ ಅಂದು ಹೇಳುವುದನ್ನು ನಂಬಲಾಗುತ್ತಿಲ್ಲ. ಕೆಲವು ಪರಿಣತರ ಪ್ರಕಾರ ಈ ದರಗಳ ಲೆಕ್ಕ ಹಾಕುವ ರೀತಿಯಲ್ಲಿ ದೋಷವಿದೆ; ಬೇಕೆಂತಲೇ ಹೆಚ್ಚು ಅಂತ ಹೇಳಿಕೊಳ್ಳಲಾಗುತ್ತಿದೆ. ಹಣ ದುಬ್ಬರವನ್ನು ಪರಿಗಣಿಸಿದರೆ ಇದು ಶೇ. ೫·೩ಕ್ಕಿಂತ ಹೆಚ್ಚಿಲ್ಲ ಅನ್ನುತ್ತಾರೆ. ಅವರು ಸಗಟು ಬೆಲೆ ಸೂಚ್ಯಂಕ ಈಗ ಋಣಾತ್ಮಕ ಹಣ ದುಬ್ಬರವಾಗಿ, (–) ೨·೫ ಅಂತ ಹೇಳುತ್ತಾರಾಗಿ, ೭·೫ರಲ್ಲಿ ಇದನ್ನು ಕಳೆದು ಜಿಡಿಪಿಯ ವೃದ್ಧಿಯನ್ನು ೫ ಅಂತಲೇ ಹೇಳಬೇಕಾಗುತ್ತದೆ.

ಭಾರತದ ಒಟ್ಟಾರೆ ಜಿಡಿಪಿ ೨೦೦೦ರ ವೇಳೆಗೆ ಒಂದು ಟ್ರಿಲಿಯನ್ ಡಾಲರಷ್ಟಿತ್ತು. ಅಂದರೆ ಸ್ವಾತಂತ್ರ್ಯ ಬಂದ ಮೇಲೆ ೬೦ ವರ್ಷಗಳ ಆರ್ಥಿಕ ಯೋಜನಾ ಮಾರ್ಗದಲ್ಲಿ ವಾರ್ಷಿಕ ೫ರಿಂದ ೬ ಶೇಕಡ ಅಭಿವೃದ್ಧಿ ಆಗುತ್ತಲೇ ಇತ್ತು. ಈಗ ೧೫ ವರ್ಷದಲ್ಲಿ ಇದು ೨·೨ ಟ್ರಿಲಿಯನ್ ಡಾಲರಷ್ಟಿದೆ. ಆದರೆ ಇದನ್ನು ಆರ್ಥಿಕವಾಗಿ ಉದಾರೀಕರಣದಿಂದ ಆದದ್ದೂ ಎಂದು ಹೇಳುವುದು ಸರಿಯಲ್ಲ. ಇಪ್ಪತ್ತು ವರ್ಷದಲ್ಲಿ ಶೇ. ೫ರಷ್ಟು ವಾರ್ಷಿಕ ಅಭಿವೃದ್ಧಿಯಾದರೂ ಒಂದು ಟ್ರಿಲಿಯನ್‌ಗೆ ಎರಡಾಗುವುದು ಸಹಜ.

ಅಂದರೆ ಆರ್ಥಿಕ ಉದಾರೀಕರಣದಿಂದ ಪ್ರಗತಿ ಏನೂ ಹೆಚ್ಚಲಿಲ್ಲ; ಆದದ್ದು ಸಾರ್ವಜನಿಕವನ್ನು ಮುಚ್ಚಿ ಎಲ್ಲವನ್ನು ಖಾಸಗಿಗೆ ನೀಡುವ ಪ್ರಕ್ರಿಯೆ ಅಷ್ಟೆ. ಈ ಲಿಬರಲೈಸೇಷನ್ ಕಾಲದಲ್ಲಿ ಅಂಕಿ ಸಂಖ್ಯೆಗಳನ್ನು ಬಳಸುವ ರೀತಿಯಲ್ಲಿ ಬೇರೆ ಬೇರೆ ತೀರ್ಮಾನಗಳಿಗೆ ಬರಬಹುದು. ಸಂಖ್ಯಾಶಾಸ್ತ್ರವಿಲ್ಲದೆ ಇಂದು ಬೇರಾವ ಶಾಸ್ತ್ರವೂ ತನ್ನ ಕೆಲಸ ನಿರ್ವಹಿಸಲಾರದು. ಆದರೂ ಈ ಶಾಸ್ತ್ರದ ಬಗ್ಗೆ ಒಂದು ಹಾಸ್ಯ ಚಟಾಕಿ ಹಾರಿಸುತ್ತಾರೆ. ಸುಳ್ಳು, ಮಹಾಸುಳ್ಳು, ಸಂಖ್ಯಾಶಾಸ್ತ್ರ ಅಂದರೆ ಸೂಪರ್‌ಲೇಟಿವ್ ಸುಳ್ಳು ಸಂಖ್ಯಾಶಾಸ್ತ್ರ ಅಂತ! ಸಂಖ್ಯಾಶಾಸ್ತ್ರ ಬೆಳವಣಿಗೆ ಯಾಗದ ಮುನ್ನಾದಿನಗಳಲ್ಲಿ ಅರ್ಥಶಾಸ್ತ್ರಿಗಳು ಊಹೆ, ಅಂದಾಜಿನ ಮೇಲೆ ತೀರ್ಮಾನಕ್ಕೆ ಬರಬೇಕಿತ್ತು. ಇಂದು ಹೆಚ್ಚು ನಿಖರವಾದ ಮಾಹಿತಿಗಳೊಡನೆ ಹೊಂದಿಸಿ ವಾದಮಂಡಿಸಲು ಸಾಧ್ಯವಾಗಿದೆ. ಸಂಖ್ಯಾಶಾಸ್ತ್ರ ಗಣಿತಶಾಸ್ತ್ರದ ಒಂದು ಭಾಗವಾಗಿ, ಅಳತೆಮಾಡುವ ಎಡೆಯಲ್ಲೆಲ್ಲ ಅಗತ್ಯ. ಸಂಖ್ಯಾಶಾಸ್ತ್ರವನ್ನು ಬಳಸಿ ಅಭ್ಯಸಿಸುವ ಅರ್ಥಶಾಸ್ತ್ರ ಈಗ ಎಕನಾಮಿಟ್ರಿಕ್ಸ್ ಆಗಿದೆ. ಆಡಳಿತ ಮಾಡುವವರಿಗೆ ತಮ್ಮ ಅಲ್ಪಸಾಧನೆಗಳನ್ನು ವಿಪರೀತವೆಂದು ಹೇಳಿಕೊಳ್ಳುವ ಹಂಬಲ. ಹಾಗೆಯೇ, ಆಗಿರುವ ಪ್ರಮಾದವನ್ನು, ಮಾಹಿತಿಗಳನ್ನು ಬಚ್ಚಿಟ್ಟು ತಿರುಚಿ, ಮುಚ್ಚಿಡುವ, ದಾರಿತಪ್ಪಿಸುವ ಪ್ರಯತ್ನವನ್ನು ಮಾಡುತ್ತಾರೆ. ಇಂದು ದೇಶದ ಜಿಡಿಪಿ ವೃದ್ಧಿಯ ಬಗ್ಗೆ ಬಹಳಷ್ಟು ವಾಸ್ತವ ಮುಚ್ಚಿಡುವ ಪ್ರಚಾರ ನಡೆಯುತ್ತಿರುವ ಕಾಲ. ತಮ್ಮ ಸರ್ಕಾರದ ಆಡಳಿತದಿಂದಾಗಿ ಹೆಚ್ಚು ಬೆಳವಣಿಗೆಯಾಗಿದೆ ಎಂದು ಹೇಳಿಕೊಳ್ಳುವುದು ಒಂದು ಚಟ; ಆಗಿರುವ ತಪ್ಪುಗಳನ್ನು ಮುಚ್ಚಿಡುವುದು ಇನ್ನೊಂದು 'ಹಾಗೆಯೇ ವಿದೇಶೀ ವಾಣಿಜ್ಯವನ್ನು, ವರ್ತಕರನ್ನು, ನಮ್ಮೊಳಗೆ ಹೂಡಿಕೆ ಮಾಡಲು ಅರಸುವಾಗ ಆಂತರಿಕ ಸ್ಥಿತಿಯನ್ನು ವೈಭವೀಕರಿಸಿ ಹೇಳಿಕೊಳ್ಳುವುದು ಹೀಗೆಲ್ಲ ನಡೆಯುತ್ತಿದೆ. ಈಗ ಸುಮಾರು ಒಂದು ವರ್ಷದಿಂದ ಆಳುವ ಪಕ್ಷ ಮತ್ತು ಸರ್ಕಾರ ನಮ್ಮ ದೇಶದ ಜಿಡಿಪಿ ಬಗ್ಗೆ, ಆರ್ಥಿಕ ವಿಕಾಸದ ದರದ ಬಗ್ಗೆ ವಿವಾದಾತ್ಮಕ ಅಂಕಿ ಸಂಖ್ಯೆಗಳನ್ನು ನೀಡುತ್ತಾ ಗೊಂದಲ ಉಂಟಾಗಿದೆ. ಒಂದಂತೂ ನಿಜ. ವಿದೇಶೀ ಹೂಡಿಕೆದಾರರು ಇವರ ಮಾಹಿತಿಗಳನ್ನು ನಂಬುತ್ತಿಲ್ಲ. ಷೇರುಪೇಟೆಯಲ್ಲಿ ಹೀಗೆ ಹೊಕ್ಕು ಹಾಗೆ ಹೊರಗೆ ಹೋಗುವ, ಪಿ–ನೋಟ್ ಎನ್ನುವ ದಾರಿಯ ಹಣ ದೀರ್ಘಕಾಲದ ಹೂಡಿಕೆ ಆಗುವುದಿಲ್ಲ. ಷೇರುಪೇಟೆ ಸಟ್ಟಾ ಲಾಟರಿ ಎನಿಸಿಕೊಂಡಿದೆ. ಕಳೆದ ಒಂದು ವರ್ಷ ಸುಮಾರಿನಲ್ಲಿ ನಮ್ಮ ಮುಖ್ಯವಾದ ಷೇರು ಸೂಚಕಗಳು ಶೇ. ೨೦ರಷ್ಟು ಮೌಲ್ಯ ಕಳೆದುಕೊಂಡಿವೆ. ಸಣ್ಣ ಹಣ, ಸಣ್ಣ ಉಳಿತಾಯದವರಿಗೆ ಅಪಾರ ಪೆಟ್ಟು ಆಗಿದೆ. ಮಾರುಕಟ್ಟೆ ವಿಶ್ವಾಸ ಕಳೆದುಕೊಂಡಿದೆ. ಬಂಡವಾಳಶಾಹಿಯ ತತ್ವಕ್ಕೆ ಇದು ಆಘಾತಕಾರಿ. ಇನ್ನು ಸಾರ್ವಜನಿಕ ಬ್ಯಾಂಕುಗಳ ವ್ಯವಹಾರದಲ್ಲಿ, ಅಷ್ಟೇಕೆ, ಸಾರ್ವಜನಿಕ ಉದ್ಯಮಗಳಲ್ಲೆಲ್ಲ, ಅವಕ್ಕೆ ಸ್ವಾಯತ್ತತೆ ನೀಡದೆ, ಸರ್ಕಾರ ಪ್ರತಿಹಂತದಲ್ಲೂ ಮೂಗು ತೂರಿಸುತ್ತದೆ. ಅಧಿಕಾರಿಗಳು ಹಾಗೂ ರಾಜಕೀಯ ನಾಯಕರು ಬ್ಯಾಂಕುಗಳಿಂದ ಖಾತರಿಯಿಲ್ಲದ ಉದ್ಯಮ, ಉದ್ಯಮಿಗಳಿಗೆ ಸಾಲ ಕೊಡಿಸುತ್ತಾರೆ. ಸದ್ಯದಲ್ಲಿ ಇಂಥ ಕೆಟ್ಟ ಸಾಲಗಳು ವಿಪರೀತವಾಗಿ ಬೆಳೆದು ಬ್ಯಾಂಕುಗಳ ಅಸಲಿಗೇ ಮೋಸವಾಗುವ ಸ್ಥಿತಿ ಉಂಟಾಗಿದೆ. ಇವಕ್ಕೆ ಎನ್‌ಪಿಎ – ನಾನ್ ಪರ್‌ಫಾರ್ಮಿಂಗ್ ಅಸೆಟ್ಸ್ ಅನ್ನುತ್ತಾರೆ. ಅಂದರೆ ಆದಾಯ ನೀಡದ ಆಸ್ತಿ ಅಂತ. ಸಾಲ ಹಿಂದಿರುಗಿಸದ ಮಲ್ಯ ಅಂಥವರು ವಿಪರೀತ ಸಾಲ ಪಡೆಯುವುದು ಹೇಗೆ ಸಾಧ್ಯವಾಗುತ್ತದೆ? ಹಾಗೆಯೇ ಕಾನೂನು ವಿಚಿತ್ರವಾಗಿದೆ. ಆತನ ವಿಮಾನಯಾನ ಉದ್ಯಮದಲ್ಲಿ ನಷ್ಟವಾಗಿದೆ; ಆದರೆ ಆತನ ಬಳಿ ಹೆಂಡದ ಇನ್ನಿತರ ಆಸ್ತಿಗಳು ವಿಪರೀತ ಇವೆ. ಆದರೂ ಆತನ ಸಾಲಕ್ಕೆ ಅವನ್ನು ಮುಟ್ಟುಗೋಲು ಹಾಕಿಕೊಳ್ಳುವಂತಿಲ್ಲ! ಸಾಧಾರಣ ವ್ಯಕ್ತಿಯೊಬ್ಬ ಒಂದಿಷ್ಟು ಸಾಲ ತೆಗೆದುಕೊಂಡು ಪಡುವ ಕಷ್ಟ ನೋಡಿ. ಬಡರೈತ ಬ್ಯಾಂಕುಗಳ ಪೀಡೆ ತಾಳ ಲಾರದೆ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ನೋಡಿ.



(ಸಂಖ್ಯಾಶಾಸ್ತ್ರ ಮತ್ತು ಕಾರ್ಯಕ್ರಮ ಜಾರಿ ಇಲಾಖೆ, ಭಾರತ ಸರ್ಕಾರ)

ಬಂಡವಾಳದ ಅರ್ಥಶಾಸ್ತ್ರ ಇಂಥ ಹುಸಿ ಉದ್ಯಮಗಳನ್ನು ಸಮರ್ಥಿಸುವುದಿಲ್ಲ. ಅದು ಮುಕ್ತ ಮಾರುಕಟ್ಟೆ, ಎಲ್ಲ ಹಂತದಲ್ಲೂ ಪಾರದರ್ಶಕ, ಮುಕ್ತಚಲನೆ ಅನ್ನುತ್ತದೆ. ವಾಸ್ತವದಲ್ಲಿ ಈ ಶಬ್ದ ಬಂಡವಾಳದ ಅರ್ಥಶಾಸ್ತ್ರದ ಮಾದರಿಯದಲ್ಲ. ಪ್ರಸಕ್ತ ಭಾರತದ ಬಂಡವಾಳ ವ್ಯವಸ್ಥೆಯನ್ನು ಕ್ರೋನಿ ಕ್ಯಾಪಿಟಲಿಸಂ – ಸುಳ್ಳು, ತೋರಿಕೆಯ, ಪರದೆ ಹಿಂದಿನ ಕಳ್ಳಸಂತೆ ಅಂತ ಹೇಳದೆ ವಿಧಿಯಿಲ್ಲ. ಬೆಳವಣಿಗೆಯೇನೂ ದಾಪುಗಾಲು ಹಾಕಲಿಲ್ಲ. ಆದರೆ ಸಾರ್ವಜನಿಕ ವ್ಯವಸ್ಥೆಯನ್ನು ಲೂಟಿಮಾಡಿ, ಖಾಸಗಿಗೆ ಒಪ್ಪಿಸುವ ಕೆಲಸ ಆಯ್ತು. ಹಾಗೆಯೇ ಮೂಲಭೂತ ಸೌಕರ್ಯಗಳು, ಶಿಕ್ಷಣ, ಆರೋಗ್ಯ ಕ್ಷೇತ್ರಗಳು ಮೂಲೆಗುಂಪಾದುವು. ಅವುಗಳಲ್ಲಿ ಸರ್ಕಾರ ಹೂಡಿಕೆ ಮಾಡಲಿಲ್ಲ. ಖಾಸಗೀ ಬಂಡವಾಳವೂ ಬರಲಿಲ್ಲ. ಯೋಜನೆಯ ಮಾದರಿಯನ್ನು ಕೈಬಿಡಲಾಯಿತು. ವಿತ್ತೀಯ ಕೊರತೆಯನ್ನು ಶೇ. ೩ರೊಳಗೆ ಮಿತಿಗೊಳಿಸಬೇಕು ಎನ್ನುವ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ತಾಕೀತಿಗೆ ತಲೆಬಾಗಿ, ಸರ್ಕಾರ ಸಾರ್ವಜನಿಕ ವೆಚ್ಚವನ್ನು ಕಡಿಯಿತು. ಅಂದರೆ ದೇಶದ ಬಡತನ ಹೆಚ್ಚಿತು. ಬೆಳವಣಿಗೆಯ ಲಾಭ ಸಾರ್ವಜನಿಕರಿಗೆ ಹಂಚಿಕೆಯಾಗಲಿಲ್ಲ.

ಸೀಮೆಎಣ್ಣೆ, ಪೆಟ್ರೋಲ್, ರಸಗೊಬ್ಬರ, ಅಡುಗೆ ಅನಿಲ, ರೇಷನ್ ಮುಂತಾದ ಎಲ್ಲ ಕ್ಷೇತ್ರಗಳಲ್ಲು ಸಬ್ಸಿಡಿ ಕಡಿತವಾಗಿ ಸರ್ಕಾರಕ್ಕೆ ಅಪಾರವಾದ ಹಣ ಮಿಗುತಾಯವಾಗಿದೆ. ಉದ್ಯಮಿಗಳಿಗೆ ತೆರಿಗೆ ಕಡಿತ ಮಾಡಲು ಇದರಿಂದ ಸಾಧ್ಯವಾಯಿತು. ಬಂಡವಾಳ ವ್ಯವಸ್ಥೆಯ ಅರ್ಥಶಾಸ್ತ್ರಿ ಆದ ಕೀನ್ಸ್, ಮೂಲಸೌಕರ್ಯಗಳು, ಶಿಕ್ಷಣ ಆರೋಗ್ಯ ಕ್ಷೇತ್ರಗಳ ವೆಚ್ಚವನ್ನು ಹೂಡಿಕೆ ಎನ್ನುತ್ತಾನೆ. ಹಾಗೆಯೇ ಈ ಸೌಕರ್ಯಗಳನ್ನು ಸೃಷ್ಟಿಸಲು, ತೆರಿಗೆ ವಸೂಲಿ ಅಥವಾ ಹೆಚ್ಚು ಹಣವನ್ನು ಅಚ್ಚು ಹಾಕಿಸಿ ಖರ್ಚು ಮಾಡಿದರೂ ಅದು ಹಣದುಬ್ಬರವಾಗುವುದಿಲ್ಲ ಅನ್ನುತ್ತಾನೆ. ಆದರೆ ಇಂದಿನ ಷೇರುಪೇಟೆ ಹಣಕಾಸು ಅರ್ಥಶಾಸ್ತ್ರ ಇದನ್ನು ವಿರೋಧಿಸುತ್ತದೆ. ಈ ಕ್ಷೇತ್ರಗಳು ಸೊರಗಿ, ಅಲ್ಲಿ ಖಾಸಗಿ ಪ್ರವೇಶ ಮಾಡಿ, ಲಾಭಗಳಿಸುವ ತವಕ ಅವಕ್ಕೆ. ಒಟ್ಟಾರೆ ಸಮಾಜದ ಕ್ಷೇಮ ಮತ್ತು ಪ್ರಜಾಪ್ರಭುತ್ವದ ರಕ್ಷಣೆ ಅವರ ಗುರಿ ಅಲ್ಲ. ಈಗಾಗಲೇ ಅರ್ಥವ್ಯವಸ್ಥೆಯಲ್ಲಿ ಸಾಕಷ್ಟು ಹಿಂಜರಿಕೆ ಆಗಿರುವುದನ್ನು ಚರ್ಚಿಸಿದ್ದೇವೆ. ಯೋಜನೆಯನ್ನು ಕೈಬಿಟ್ಟಮೇಲೆ, ಬರುವ ವರ್ಷಗಳಲ್ಲಿ ಇದೇ ರೀತಿಯ ಜಿಡಿಪಿಯ ಬೆಳವಣಿಗೆ ಸಾಧ್ಯವಾಗುವುದಿಲ್ಲ. ಬೇರೆ ದೇಶದ ಅರ್ಥವ್ಯವಸ್ಥೆಗಳು ನಮ್ಮನ್ನ ಹಿಂದೆಬಿಟ್ಟು ಮುಂದುವರಿಯುತ್ತವೆ. ಅಷ್ಟೇ ಅಲ್ಲ ಆರ್ಥಿಕ ಕ್ಷೇತ್ರದ ಬೆಳವಣಿಗೆ ಸರ್ಕಾರದ ಹೊಣೆಗಾರಿಕೆಯೇ ಅಲ್ಲ ಅನ್ನುವುದು ಇಂದಿನ ನೀತಿ. ಈ ದಿನಕ್ಕಾಗಿ ಚಿದಂಬರಂ ಕಾಯುತ್ತಿದ್ದರು. ಅದರ ಹಿನ್ನೆಲೆಯಲ್ಲೇ ಯೋಜನಾ ಆಯೋಗವನ್ನು ಮುಚ್ಚಿದ್ದು. ಈ ಬೆಳವಣಿಗೆಯ ಇನ್ನೊಂದು ಪರಿಣಾಮವೆಂದರೆ ಯೋಜನೆಯ ಹಾದಿಯೂ ಇಲ್ಲ; ಸರ್ಕಾರದ ಹೂಡಿಕೆಯೂ ಇಲ್ಲ; ಬಲಪಂಥೀಯ ರಾಜಕೀಯದಿಂದಾಗಿ ಅದು ಹರಡುವ ಸಾಮಾಜಿಕ ಕ್ಷೋಭೆಯಿಂದಾಗಿ ದೇಶದ ಆಂತರಿಕ ಪರಿಸ್ಥಿತಿ ವಿದೇಶೀ ಹೂಡಿಕೆಗೆ ಸರಿಯಾದ ವಾತಾವರಣ ನೀಡುವುದಿಲ್ಲ. ತೆರಿಗೆಯ ಸಂಗ್ರಹವೂ ಇಲ್ಲದೆ ಸಾರ್ವಜನಿಕ ಸೇವೆಗಳೂ ಸೊರಗಬಹುದು. "ಕಾಗೆಯ ನಡಿಗೆ ಮರೆಯಿತು; ಹಂಸದ ನಡಿಗೆ ಬರಲಿಲ್ಲ" ಅಂತ ಡಿವಿಜಿ ಹೇಳುವ ಪರಿಸ್ಥಿತಿ ಆಗಬಹುದು. ಯೋಜನೆಯ ಮಾರ್ಗ ಕೈಬಿಟ್ಟಾಯ್ತು, ಬಂಡವಾಳ ಮಾರ್ಗ ಕೈ ನೋಡಲಿಲ್ಲ. ಆರ್ಥಿಕತೆಯಲ್ಲೇ ಅಂತರ್ಗತವಾದ ಅಭಿವೃದ್ಧಿಶೀಲತೆಯಿಂದಾಗಿ ಒಂದಷ್ಟು ವಿಕಾಸ ಆಗುತ್ತಿರುತ್ತದೆ. ಅದಕ್ಕೆ ಈ ಹಿಂದಿನ ೬–೭ ದಶಕಗಳ

ಯೋಜನೆಯ ಕಾಲದಲ್ಲಿ ಮಾಡಿದ ಹೂಡಿಕೆಗಳು ನಿಧಾನವಾಗಿ ಫಲಕೊಡುತ್ತಿರುವುದು. ಕಾರಣ ಈಗಷ್ಟೆ ವಿಶ್ವ ಬ್ಯಾಂಕ್ ಹೇಳಿದೆ: ನಮ್ಮ ಸರ್ಕಾರ ನೀಡುವ ಜಿಡಿಪಿ ಸಂಖ್ಯೆ ಸಂದೇಹಾಸ್ಪದವಾಗಿದ್ದು ಅದನ್ನು ಅದು ಒಮ್ಮೆ ಅವಲೋಕಿಸುತ್ತದಂತೆ. ಕನಿಷ್ಠ ವೇತನವೂ ಇಲ್ಲದ ಅಗಾಧ ಶೋಷಣೆಯ ಸ್ವರೂಪದ ಉದ್ಯೋಗಗಳೂ ಅಸಂಘಟಿತ ವಲಯದಲ್ಲಿ ಉಂಟಾಗಿದೆ. ಅಲ್ಲಿಯ ಅತೃಪ್ತಿ ಭುಗಿಲೆದ್ದು ರಾಜಕೀಯವಾಗುವ ಕಾಲ ಸನ್ನಿಹಿತವಾಗಿದೆ. ಜಿಡಿಪಿ ಪದ ಈಗ ಮೋಹಕವೂ ಅಲ್ಲ; ಇದರಿಂದ ಮೋದಿಯ ಮೋಡಿ ಅವರಿಗೇ ತಿರುಗೇಟು ನೀಡೀತು.

ಜಾಗತಿಕವಾಗಿ ಅಮೆರಿಕಾದ್ದು ಬಿಟ್ಟು ಮಿಕ್ಕೆಲ್ಲ ಅರ್ಥವ್ಯವಸ್ಥೆಗಳೂ ಅವುಗಳ ಜಿಡಿಪಿಯಲ್ಲಿ ಬರುವ ವರ್ಷ ಕುಗ್ಗುತ್ತವೆ. ಭಾರತದ್ದು ಇದೇ ಮಟ್ಟದಲ್ಲಿ ಅಥವಾ ಸ್ವಲ್ಪ ಕೆಳಗೆ ಇಳಿದರೂ ನಮ್ಮದೇ ಎಲ್ಲರಿಗಿಂತ ಹೆಚ್ಚು ಅಂತ ಹೇಳಿಕೊಳ್ಳಬಹುದು. ಸುತ್ತಲಿನ ಕುಬ್ಜರಮಧ್ಯೆ ಯಾರು ಎತ್ತರದವರು ಅನ್ನುವಂತೆ ಆಗುತ್ತದೆಯೇ ವಿನಾ ಅದನ್ನು ನಾವು ಮಾತ್ರ ಅಭಿವೃದ್ಧಿ ಹೊಂದುತ್ತಿದ್ದೇವೆ ಅಂತ ಬಣ್ಣಿಸುವುದು ಜನರನ್ನು ಮರುಳು ಮಾಡಿದರೂ ತಿಳಿದವರು ಮೋಸಹೋಗುವುದಿಲ್ಲ. ಅಭಿವೃದ್ಧಿ ಜಾರುತ್ತಿರುವುದಕ್ಕೆ ಮೂಲಭೂತ ಸೌಕರ್ಯಾಭಿವೃದ್ಧಿಯಲ್ಲಿ ಯಾರೂ ಬಂಡವಾಳ ಸಾಕಷ್ಟು ತೊಡಗಿಸುತ್ತಿಲ್ಲ. ಅಭಿವೃದ್ಧಿಗೆ ಮಾರಕವಾಗುವ ಕಾರ್ಮಿಕ ವಿರೋಧಿಯಾಗುವ ಹಾಗೂ ಸಣ್ಣ ಉದ್ಯಮಿಗಳಿಗೆ ಮಾರಕವಾಗುವ ನೀತಿಗಳನ್ನು ರೂಪಿಸುತ್ತಿರುವುದು ಕಾರಣ. ಈಗಲೂ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ಹೆಚ್ಚು ರಫ್ತು ಮಾಡುತ್ತಿದ್ದು, ಅವುಗಳು ಉತ್ತೇಜನವಿಲ್ಲದೆ ಸೊರಗುತ್ತಿವೆ. ಹಣವುಳ್ಳ ಹಿರಿಯ ಉದ್ದಿಮೆಗಳು ವಿದೇಶದಲ್ಲಿ ಹೂಡಿಕೆ ಮಾಡುತ್ತಿದ್ದಾರೆ. ಕೈಗಾರಿಕೆ ಹಿಂದೆ ಬಿದ್ದಿದೆ, ಮಾಹಿತಿ ತಂತ್ರ ಮತ್ತು ಸೇವಾ ಉತ್ಪಾದನೆಗಳ ರಫ್ತು ಈಗ ಅಂತರರಾಷ್ಟ್ರೀಯ ಪೈಪೋಟಿ ಎದುರಿಸುತ್ತಿದ್ದು, ಅವು ಬಹಳ ಬೆಳೆಯುವುದು ಸಂದೇಹ. ಕೃಷಿ ಮೂಲೆಗುಂಪಾಗಿದೆ. ಸಮಾಜದಲ್ಲಿ ನಗದು ಸಾಕಷ್ಟು ಇಲ್ಲದೆ, ಸರಕು ಕೊಳ್ಳುವ ಸಾಮರ್ಥ್ಯ ಕುಗ್ಗಿದೆ. ಈ ಸಲದ ಹಬ್ಬದ ದಿನಗಳ ಬಳಕೆದಾರರ ನಗರಗಳ ಮಾರುಕಟ್ಟೆಯಲ್ಲಿ ನಡೆದ ವ್ಯಾಪಾರ ತೀರ ನಿರಾಶಾದಾಯಕವಾಗಿತ್ತು. ಯೋಜಿತ ಅರ್ಥನೀತಿ ಮತ್ತು ಸರ್ಕಾರದ ಹೂಡಿಕೆ ಇಲ್ಲದೆ ಅರ್ಥವ್ಯವಸ್ಥೆಯಲ್ಲಿ ಏರಿಕೆ ಕಂಡುಬರದಿರುವುದು ಅಚ್ಚರಿಯೇನೂ ಅಲ್ಲ. ಯಾವುದೇ ಯಕ್ಷಿಣಿ ವಿದ್ಯೆ ಅಲ್ಲ ಇದು. ಖಚಿತ ಲೆಕ್ಕದ ಬಾಬತ್ತು. ಆರ್ಥಿಕ ಬೆಳವಣಿಗೆ ಅನ್ನುವುದು ಚುನಾವಣೆಯ ಭಾಷಣಗಳ ಮೋಡಿ ಅಲ್ಲ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು – ೫೬೨ ೧೫೭

ಕಾವ್ಯಲೋಕ

# ಪಂಜರದ ಪಕ್ಷಿ



ನೀನೋ ಗಾಳಿಯ ಬೆನ್ನೇರಿ ಸ್ವಚ್ಛಂದ ಹಾರುವೆ
ಝರಿ ಜಲಪಾತಗಳಲ್ಲಿ ಸುಯ್ಯನೆ ಜಾರಿ
ದಡ ದಡಗಳ ನಡುವೆ ಉಯ್ಯಾಲೆ ಆಡುವೆ
ಕೆಂಪು ಸೂರ್ಯನ ಬೆಳಕಲ್ಲಿ ಮೀಯುವೆ
ಆಕಾಶವೇ ನನ್ನದೆನ್ನುವೆ

ನಾನೋ ಪಂಜರದ ಪಕ್ಷಿ
ಈ ಕಠೋರ ಕಬ್ಬಿಣದ ಸರಳುಗಳಾಚೆ
ಏನು ನೋಡಲಿ ಹೇಳು
ಕತ್ತರಿಸಲಾಗಿದೆ ನನ್ನ ರೆಕ್ಕೆಗಳನ್ನು
ಕಟ್ಟಿ ಬಿಗಿಯಲಾಗಿದೆ ಕಾಲುಗಳನ್ನೂ
ಬಾಯ್ತೆರೆದು ಹಾಡುವುದಲ್ಲದೆ ನನಗೇನಿದೆ ವಿಧಿ ಇನ್ನು

ನಿನಗೋ ಹೊಸಗಾಳಿಯ ತೆವಲು
ಮರಗಳ ಮೇಲು ನಿಟ್ಟುಸಿರ ಮೂಲಕವೇ
ಹಾರುವೆ ಆಗಸಕೆ
ಮುಂಜಾವಿನ ಹಸಿರು ಹುಲ್ಲಿನ ಮೇಲೆ
ಕೊಬ್ಬಿದ ಹುಳವೊಂದು ಕಾಯುತ್ತದೆ ನಿನಗೆ
ಈಗ ಆಗಸವೇ ನಿನ್ನದಾಗಿದೆ

ನಾನೂ ಹಾಡುವೆ
ಭಯ ನಡುಕಗಳಿಂದ
ಕಾಣದ ಲೋಕಗಳ ಕನಸಿನ ಹಿಂದೆ
ನನ್ನ ಹಾಡಿನ ಮರುದನಿ
ಬಡಿಯುತ್ತದೆ ದೂರ ಬೆಟ್ಟಕ್ಕೆ
ನಾನು ಪಂಜರದ ಪಕ್ಷಿ
ಹಾಡುವೆ ಹಂಬಲಿಸಿ ಬಿಡುಗಡೆಗೆ
ಹಪಹಪಿಸಿ ಕಠೋರ ಸರಳುಗಳ ಒಳಗೆ

ನಾನು ಕನಸುಗಳ ಗೋರಿಯ ಮೇಲೆ ನಿಂತಿರುವೆ
ನನ್ನ ನೆರಳೇ ಸಿಂಹಸ್ವಪ್ನವಾಗಿದೆ ನನಗೆ
ಧಿಗ್ಗನೆದ್ದು ಚೀರುತ್ತೇನೆ.

ನಾನು ಪಂಜರದ ಪಕ್ಷಿ
ಕತ್ತರಿಸಲಾಗಿದೆ ನನ್ನ ರೆಕ್ಕೆಗಳನ್ನು
ಕಟ್ಟಿ ಬಿಗಿಯಲಾಗಿದೆ ಕಾಲುಗಳನ್ನೂ
ಬಾಯ್ತೆರೆದು ಹಾಡುವುದಲ್ಲದೆ ನನಗೇನಿದೆ
ವಿಧಿ ಇನ್ನು
ಹಾಡುತ್ತೇನೆ ನಲುಗುತ್ತಲೇ
ಕಠೋರ ಸರಳುಗಳ ಒಳಗಿಂದಲೇ

ಮೂಲ : **ಮಾಯಾ ಏಂಜಲೋ,** ಕನ್ನಡಕ್ಕೆ : **ಗಿರಿಜಾಶಾಸ್ತ್ರಿ,** # ೧೬೦೮, ಇ–೩, ಲೋಕ್‌ಧಾರಾ, ಫೇಸ್–೩ ಕಲ್ಯಾಣ್(ಪೂರ್ವ) ೪೨೧೩೦೬, ಥಾಣೆ, ಮಹಾರಾಷ್ಟ್ರ

# ನಮಗೆ ನಮ್ಮ ಬಗ್ಗೆ ಆತ್ಮಗೌರವ ಇರಬೇಕು

**– ಡಾ॥ ಎಂ. ಎಸ್. ಆಶಾದೇವಿ**




ಸಂದರ್ಶಕಿ
**ಗಾಯಿತ್ರಿ ಟಿ. ಪಾಂಚಜನ್ಯ**

ಕನ್ನಡದ ಚಿಂತಕರೂ, ಸಾಹಿತ್ಯ ವಿಮರ್ಶಕರೂ ಆದ ಡಾ॥ ಎಂ. ಎಸ್. ಆಶಾದೇವಿಯವರು ಸ್ತ್ರೀವಾದವನ್ನು ಪರಂಪರೆಯ ಮೂಲಕ ಕಟ್ಟಿಕೊಡುವವರು. ಭಾರತೀಯ ಪುರಾಣಗಳು ಮತ್ತು ಇತಿಹಾಸವನ್ನು ವಿಶ್ಲೇಷಿಸುತ್ತಾ ಸ್ತ್ರೀವಾದವು ಹೇಗೆ ಆದಿಮವಾದುದು ಎಂದು ಮಂಡಿಸುವವರು. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ, ವೈದಿಕಶಾಹಿ, ಆಧುನೀಕರಣ ಮತ್ತು ಜಾಗತೀಕರಣಗಳು ಹೇಗೆ ಹೆಣ್ಣಿನ ಬಿಡುಗಡೆಯ ಛದ್ಮವೇಷ ಧರಿಸಿದ ಪುರುಷವಾದಿ ಹುನ್ನಾರಗಳಾಗಿವೆ ಎಂಬ ತಾತ್ವಿಕ ಚರ್ಚೆಗಳನ್ನು ಮಾಡುವವರು. ಆಶಾದೇವಿ ಅವರ 'ಸ್ತ್ರೀಮತವನ್ನುತ್ತರಿಸಲಾಗದೇ?', 'ನಡುವೆ ಸುಳಿವ ಆತ್ಮ' ಎಂಬ ಕೃತಿಗಳು ಈಗಾಗಲೇ ಪ್ರಕಟವಾಗಿವೆ. ಪ್ರಜಾವಾಣಿ ಪತ್ರಿಕೆಯಲ್ಲಿ ಅವರ 'ನಾರಿ ಕೇಳಾ' ಅಂಕಣ ಬರಹಗಳು ಪ್ರಕಟವಾಗುತ್ತಿವೆ. ಇವು ಸ್ತ್ರೀವಾದಿ ಚಿಂತನೆಯನ್ನು ಬೇರೆಬೇರೆ ಬಗೆಯಲ್ಲಿ ವಿಸ್ತರಿಸುವ ಕೆಲಸ ಮಾಡಿವೆ. ಅವರು ಸ್ತ್ರೀಯರು ಘನತೆಯಿಂದ ಬದುಕುವ ಸಮಾಜ ಕಟ್ಟುವುದನ್ನೇ ತಮ್ಮ ಚಿಂತನೆಯ ವಸ್ತು ಮತ್ತು ಆಶಯವಾಗಿಸಿಕೊಂಡಿರುವ ಲೇಖಕಿ. ಕನ್ನಡ ವಿಚಾರ ಸಾಹಿತ್ಯದಲ್ಲಿ ಸ್ತ್ರೀ ಅಸ್ಮಿತೆಯ ನೆಲೆಗಳನ್ನು ತಿಳಿಯುವ ಹಿನ್ನೆಲೆಯಿಂದ ಆಶಾದೇವಿಯವರನ್ನು ಸಂದರ್ಶನ ಮಾಡಲಾಯಿತು. ಅವರು ಈ ಸಂದರ್ಶನದಲ್ಲಿ ಸ್ತ್ರೀ ಅಸ್ಮಿತೆಯ ವಿವಿಧ ಸ್ತರಗಳ ಕುರಿತು ಮಾತನಾಡಿದ್ದಾರೆ.

**ಸಂದರ್ಶಕಿ : ಮೇಡಂ, ನಿಮ್ಮ ವಿದ್ಯಾಭ್ಯಾಸ ಹೇಗಾಯ್ತು ಎಂಬುದರ ಮೂಲಕ ಮಾತು ಆರಂಭಿಸೋಣವೇ?**

**ಆಶಾದೇವಿ :** ಅಯ್ಯೋ! ನನ್ನ ವಿದ್ಯಾಭ್ಯಾಸ ನನ್ನ ತಂದೆಯವರಿಗೆ ಎಲ್ಲೆಲ್ಲಿಗೆ ವರ್ಗಾವಣೆಯಾಯ್ತೋ ಅಲ್ಲೆಲ್ಲಾ ನಡೆದಿದೇರೀ. ಚನ್ನಗಿರಿ, ಶಿವಮೊಗ್ಗ, ಹಿರೇಕೋಗಲೂರು, ಚಳ್ಳಕೆರೆ, ಚಿತ್ರದುರ್ಗ ಹೀಗೇ...

**ಸಂ : ನಿಮ್ಮ ಈ ಚಿಂತನೆಗಳ ಹಿಂದಿನ ಪ್ರಭಾವವನ್ನು ಕುರಿತು ಸ್ವಲ್ಪ ಹೇಳ್ತೀರಾ?**

**ಆಶಾ :** ನಮ್ಮ ಮನೆಯಲ್ಲಿ ಬಹುಮುಖ್ಯವಾಗಿ ಓದಿನ ವಾತಾವರಣವಿತ್ತು. ನನಗೆ ಹೆಚ್ಚು ಪ್ರಭಾವಿಸಿದ್ದು ಅಂದ್ರೆ ನಾನಿದ್ದ ಪರಿಸರ ಮತ್ತು ನನ್ನ ತಂದೆಯವರು. ನಾನು ನಾಟಕಗಳನ್ನು ನೋಡುತ್ತಾ ಬೆಳೆದವಳು. ನನ್ನನ್ನು ನಾಟಕಗಳೂ ಪ್ರಭಾವಿಸಿವೆ. ಹಾಗೆಯೇ ನನ್ನ ಗುರುಗಳಾದ ಡಿ. ಆರ್. ನಾಗರಾಜ್, ಕಿ. ರಂ. ನಾಗರಾಜ್ ಅವರ ಪ್ರಭಾವವೂ ಇದೆ. ಜೊತೆಗೆ ಯು. ಆರ್. ಅನಂತಮೂರ್ತಿ, ಎಂ. ಎಂ. ಕಲಬುರ್ಗಿ, ಕೆ. ವಿ. ನಾರಾಯಣರಂತಹ ಅನುಭವಿ ಚಿಂತಕರ ಚಿಂತನೆಗಳೂ ನನ್ನ ಬರಹಗಳನ್ನು ಪ್ರಭಾವಿಸಿವೆ.

**ಸಂ : ಸ್ತ್ರೀವಾದಿ ವಿಮರ್ಶಕಿಯಾಗಿರುವ ನೀವು 'ಸ್ತ್ರೀ ಅಸ್ಮಿತೆ' ಎಂಬುದನ್ನು ಹೇಗೆ ವ್ಯಾಖ್ಯಾನಿಸುತ್ತೀರಿ?**

**ಆಶಾ :** ನಾನು 'ಸ್ತ್ರೀ ಅಸ್ಮಿತೆ' ಎನ್ನುವುದನ್ನು ಹೆಣ್ಣು ತನ್ನನ್ನು ಸ್ವಾಯತ್ತತೆಯಿಂದ ನೋಡುವ ಕ್ರಮವೆಂದು ಗ್ರಹಿಸುತ್ತೇನೆ. ಇಲ್ಲಿ 'ಸ್ವಾಯತ್ತತೆ' ಎಂದರೆ, ತನ್ನ ಕುಟುಂಬದಿಂದ ಬಿಡುಗಡೆ, ಬಿರುಕು ಎಂದಲ್ಲ ಸ್ತ್ರೀವಾದ, ಸ್ತ್ರೀ ಅಸ್ಮಿತೆ ಎಂದರೆ ಕುಟುಂಬ ದಿಂದ ಬಿಡುಗಡೆ ಎಂಬ ತಪ್ಪು ಗ್ರಹಿಕೆ ಇದೆ. ಅದನ್ನ ನಾನು ಒಪ್ಪೋದಿಲ್ಲ. ಹೆಣ್ಣಿನ ಅಸ್ಮಿತೆಗೆ ಯಾವೆಲ್ಲ ಗುಣ ಗಳನ್ನು ಮಿತಿ ಎಂದು ಗುರುತಿಸಲಾಗುತ್ತದೊ ಆ ಗುಣಗಳನ್ನೆ ಶಕ್ತಿಯನ್ನಾಗಿಸಿಕೊಳ್ಳುವುದು; ಇತರರಿಗೆ ಅವುಗಳನ್ನು ಮನದಟ್ಟು ಮಾಡುವುದು. ಆದರೆ ಒಮ್ಮೊಮ್ಮೆ ಅದನ್ನೂ ಮನದಟ್ಟು ಮಾಡಿಕೊಡುವುದು ಬೇಕಿಲ್ಲವೆಂತಲೂ ಎನಿಸುತ್ತದೆ.

**ಸಂ: ೨೦ನೇ ಶತಮಾನದ ಆರಂಭದ ಕಾಲಘಟ್ಟವು ರಾಷ್ಟ್ರೀಯವಾದಿ ಚಳುವಳಿಯ ಕಾಲವಾಗಿತ್ತು. ರಾಷ್ಟ್ರೀಯತಾ ಚಿಂತನೆಗಳು ವಿಚಾರ ಸಾಹಿತ್ಯದಲ್ಲಿ ಬಹುಮುಖ್ಯ ಭಾಗವಾಗಿವೆ. ಈ ಕಾಲಘಟ್ಟದಲ್ಲಿ ಮಹಿಳಾ ಪ್ರಶ್ನೆಗಳು ಏನಾಗಿದ್ದವು?**

**ಆಶಾ :** ತುಂಬ ಒಳ್ಳೆಯ ಪ್ರಶ್ನೆ ಇದು. ನಿಮ್ಮ ಈ ಪ್ರಶ್ನೆಯನ್ನು ನಾನು ೨೦ನೇ ಶತಮಾನದ ಆರಂಭದ ರಾಷ್ಟ್ರೀಯತೆಯ ಚಳುವಳಿಯ ಹಂತ ಹಾಗೂ ಆಧುನಿಕತೆಯ ಸಮಕಾಲೀನ ಹಂತ ಎಂಬ ನೆಲೆಯಲ್ಲಿ ವಿಸ್ತರಿಸಿಕೊಳ್ಳುತ್ತೇನೆ. ರಾಷ್ಟ್ರೀಯತೆಯ ಪ್ರಶ್ನೆಯಾಗಿ ಮಹಿಳಾ ಪ್ರಶ್ನೆಗಳು ಮುಖ್ಯವಾಗಿರಲಿಲ್ಲ. ಇದಕ್ಕೆ ಎರಡು ಕಾರಣಗಳಿವೆ ಎನಿಸುತ್ತದೆ. ಒಂದು – ಬಿಡುಗಡೆ ಎನ್ನುವಂತಹದ್ದು ಭಾರತೀಯ ಸಮಾಜದಲ್ಲಿ ಪುರುಷ ಮೂಲದಿಂದ ನೋಡಿರುವ ಒಂದು ವಿಲಕ್ಷಣ ಮಾದರಿಯದ್ದಾಗಿರುವುದು. ಎರಡು – ಹೆಣ್ಣಿನ ಪ್ರಶ್ನೆಯನ್ನು ಹೀಗೆ ವಿಭಜಿಸಿ ಅಥವಾ ಬಿಡಿಸಿ ಗಂಡಿನ ಪಕ್ಕದಲ್ಲಿಟ್ಟುಕೊಂಡು ಸವಾಲನ್ನಾಗಿ ನೋಡುವುದನ್ನು ಮರೆತರು ಎನಿಸುತ್ತದೆ. ಹಾಗೆಯೇ ರಾಷ್ಟ್ರೀಯ ಚಳುವಳಿಗಾರರು ಹೆಣ್ಣಿನ ವಿಷಯಕ್ಕೆ ಬಂದಾಗ ತೆರೆದುಕೊಳ್ಳಲು ಬಯಸಲಿಲ್ಲ. ಇದಕ್ಕೆ ಕಾರಣ ಚಾರಿತ್ರಿಕ ಕಾಲಘಟ್ಟದ ಪ್ರಭಾವ. ಇದನ್ನು ವ್ಯಕ್ತಿಗತ ಸವಾಲಾಗಿ ನೋಡಬೇಕೊ ಅಥವಾ ಸಮಷ್ಟಿ ನೆಲೆಯಲ್ಲಿ ನೋಡಬೇಕೊ ಎಂಬಂತಹ ಸಂಕೀರ್ಣ ಪ್ರಶ್ನೆಯಿದೆ. ಅವರು ಪಿತೃಸಂಸ್ಕೃತಿಯ ಹಿಡಿತ ಮುಂದುವರೆಯುವುದನ್ನು ಬಯಸಿದ್ದರು, ಮಹಿಳೆಯ ಬಿಡುಗಡೆ ಎನ್ನುವುದು ಅವರಿಗೆ ಬೇಕಿರಲಿಲ್ಲ ಎನಿಸುತ್ತದೆ. ಹೆಣ್ಣನ್ನು ಅವಳ ಬೌದ್ಧಿಕ ನೆಲೆಯಲ್ಲಿ ಗುರುತಿಸುವುದರಲ್ಲಿ ಅವರಿಗೆ ಗೊಂದಲ ಇದೆ. ಆದರೆ ಅವಳನ್ನು ಪ್ರಕೃತಿಯ ನೆಲೆಯಲ್ಲಿ ಗುರುತಿಸುವುದರಲ್ಲಿ ಯಾವ ತೊಡಕುಗಳೂ ಇಲ್ಲ... ಆದರೆ ಬೌದ್ಧಿಕತೆಯ ಪ್ರಶ್ನೆ ಬಂದಾಗಲೇ ತೊಡಕು ಕಾಣುತ್ತದೆ. ಹಾಗಾಗಿಯೇ ಸ್ತ್ರೀ ಪ್ರಶ್ನೆಗಳು ಕಥೆ, ಕಾದಂಬರಿಗಳಲ್ಲಿ ಚರ್ಚಿತವಾದಂತೆ ವಿಚಾರ ಸಾಹಿತ್ಯದಲ್ಲಿ ಚರ್ಚಿತವಾಗಿಲ್ಲ ಎನಿಸುತ್ತದೆ.

ರಾಷ್ಟ್ರೀಯವಾದಿಗಳಿಗೆ ಹೊಸ ರಾಷ್ಟ್ರೀಯತೆಯ ಪರಿಚಯವನ್ನು ಜನರಿಗೆ ಮಾಡಿಕೊಡಬೇಕಾಗಿತ್ತು. ಅದು ಪಶ್ಚಿಮದ ರಾಷ್ಟ್ರೀಯತೆಗೆ ಸಂವಾದಿಯಾಗಿರ ಬೇಕಾಗಿತ್ತು. ಆದರೆ ಈ ಅಂಶವನ್ನು ಒಪ್ಪಿಕೊಳ್ಳುವ ಹಂತಕ್ಕೆ ಜನರು ಇರಲಿಲ್ಲ. ಏಕೆಂದರೆ, ಭಾರತ ಸಂಪ್ರದಾಯವಾದಿ ರಾಷ್ಟ್ರವಾಗಿತ್ತು. ಹೀಗಾಗಿ ರಾಷ್ಟ್ರೀಯವಾದಿಗಳಿಗೆ ಪ್ರತಿಯಾಗಿ ಒಂದು

ರಾಷ್ಟ್ರೀಯತೆಯನ್ನು ಕಟ್ಟುವ ಅಗತ್ಯತೆ ಇತ್ತು. ಹಾಗಾಗಿ "ಕಟ್ಟುವೆವು ನಾವು ಹೊಸ ನಾಡೊಂದನು" ಎಂದು ಹೇಳುವಾಗ ಅವರು ಹೊಸ ನಾಡಿನಲ್ಲಿ ಅನಿವಾರ್ಯವಾಗಿ ಹೆಣ್ಣನ್ನು ಸೇರಿಸಿಕೊಂಡರೇ ವಿನಾ, ಹೆಣ್ಣಿನ ಪ್ರಶ್ನೆಗಳು ಅವರ ಆದ್ಯತೆಯ ಪಟ್ಟಿಯಲ್ಲಿದ್ದವು ಎಂದಲ್ಲ. ಈ ವಿಷಯದಲ್ಲಿ ಅವರು ಗಾಂಧೀಜಿಯವರ ವಿಚಾರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಏಕೆಂದರೆ ನನ್ನ ಪ್ರಕಾರ ಗಾಂಧಿ ಮೂಲಭೂತವಾಗಿ ಸ್ತ್ರೀವಾದಿ. ಆದರೆ ಆ ಕಾಲದ ರಾಜಕೀಯದಿಂದ ಗಾಂಧಿಯವರ ಈ ಸ್ತ್ರೀವಾದಿ ಚಿಂತನೆಗೆ ಬೇಕಾದ ಮನ್ನಣೆ ಸಿಗಲಿಲ್ಲ. ಗಾಂಧೀಜಿಯವರ ಅಸ್ಮಿತೆಯ ಪ್ರಶ್ನೆ ಅಥವಾ ಭಾರತೀಯತೆಯ ಪ್ರಶ್ನೆಗಳು ಇವತ್ತಿನವರೆಗೂ ಚರ್ಚೆಗೆ ಬಂದಿವೆ ಎಂದು ನಮಗೆ ಅನ್ನಿಸ್ತಾ ಇಲ್ಲ. ಎಲ್ಲೋ ಒಂದು ನೆಲೆಯಲ್ಲಿ ಗಾಂಧೀಜಿಯವರ ರಾಷ್ಟ್ರೀಯತೆಯ ಪ್ರಶ್ನೆಗಳನ್ನು ಹಿನ್ನೆಲೆಗೆ ತಳ್ಳಿ, ಅದರ ಸಾಮಾಜಿಕ ಮತ್ತು ರಾಜಕೀಯ ನೆಲೆಗಳನ್ನು ಮಾತ್ರ ಮುನ್ನೆಲೆಗೆ ತರಲಾಯಿತು. ಹಾಗಾಗಿಯೇ ಸತಿಶಿರೋಮಣಿಯಾಗಿದ್ದ ಹೆಣ್ಣು ಸಹಧರ್ಮಿಣಿಯಾದಳು. ಈ ಎಲ್ಲಾ ವಿಚಾರಗಳು ರಾಷ್ಟ್ರೀಯತೆಯ ಚಳುವಳಿಯ ಸಂದರ್ಭದ ಬೆಳವಣಿಗೆಗಳು. ಆದರೆ ಸಮಕಾಲೀನ ವಿಮರ್ಶಕರ ಬರಹಗಳಲ್ಲಿಯೂ ಸ್ತ್ರೀ ದಾಖಲೀಕರಣದ ಅಸ್ಮಿತೆಯ ಕೊರತೆಯನ್ನು ಗುರುತಿಸಬಹುದು. ಹೊಸ ಬದಲಾವಣೆಗೆ ತೆರೆದುಕೊಂಡಿರುವ ಗಿರಡ್ಡಿ ಗೋವಿಂದರಾಜು, ರಹಮತ್ ತರೀಕೆರೆ, ವಿಕ್ರಮ್ ವಿಸಾಜಿಯಂತಹ ಲೇಖಕರು ಕೂಡ ಮಹಿಳಾ ಲೇಖಕಿಯರ ದಾಖಲೀಕರಣದ ವಿಷಯದಲ್ಲಿ ಹಿಂದೆ ಸರಿಯುತ್ತಿದ್ದಾರೆ. ಲೇಖಕಿಯರ ಮೇಲೆ ಅಗಾಧವಾದ ಗೌರವದ ಮಾತುಗಳನ್ನಾಡುವ ಈ ಲೇಖಕರು ಮಾಸಿಹೋಗುವ ನೂರು ಮಾತುಗಳನ್ನಾಡುತ್ತಾರೆ. ಆದರೆ ದಾಖಲಿಸಲು ಯಾಕೆ ಮನಸ್ಸು ಮಾಡುತ್ತಿಲ್ಲ ಎಂಬ ಪ್ರಶ್ನೆ ನಮ್ಮಲ್ಲಿ ಇನ್ನೂ ಉಳಿದಿದೆ. ಇಲ್ಲಿ ನಾನು ಏನನ್ನು ಹೇಳೋಕೆ ಬಯಸ್ತಿದ್ದೀನಿ ಅಂದ್ರೆ ಆರಂಭದಿಂದ ಸಮಕಾಲೀನದವರೆಗಿನ ಚಿಂತಕರು ಹೆಣ್ಣಿನ ಬೌದ್ಧಿಕತೆಯ ವಿಷಯಕ್ಕೆ ಬಂದಾಗ ಅವರು ಹೆಜ್ಜೆ ಹಿಂದಿಡುವ ಪರಿಪಾಠವಿದೆ. ಯಾಕೆ ಹೀಗೆ ಎಂಬುದು ನಮ್ಮ ಪ್ರಶ್ನೆ ಕೂಡ ಆಗಿದೆ.



**ಸಂ : ನೀವು ಹೇಳುವ ಪ್ರಕಾರ ಕಾವ್ಯ, ಕತೆ ಕಾದಂಬರಿಗಳಲ್ಲಿ ಮಹಿಳಾ ಪ್ರಶ್ನೆಗಳಿವೆ. ಆದರೆ ವಿಚಾರ ಸಾಹಿತ್ಯದಲ್ಲಿ ಸ್ತ್ರೀಪ್ರಶ್ನೆಗಳು ಮುಂಚೂಣಿಗೆ ಬಂದಿಲ್ಲ. ಮೇಲೆ ಹೇಳಿದ ಪ್ರಕಾರಗಳನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ ವಲಯದಲ್ಲಿ 'ಸೃಜನಶೀಲ' ಹಾಗೂ 'ಸೃಜನೇತರ' ಎಂಬ ವರ್ಗೀಕರಣಗಳಿವೆ.**

**ಆಶಾ :** 'ಸೃಜನಶೀಲ' ಹಾಗೂ 'ಸೃಜನೇತರ' ಎಂಬ ವರ್ಗೀಕರಣವನ್ನು ನಾನು ಒಪ್ಪುವುದಿಲ್ಲ. ಅಂತಹ ಒಂದು ವಿಭಾಗ ಕ್ರಮ ಜಗತ್ತಿನಲ್ಲಿಯೇ ಇಲ್ಲ. ಹಾಗೆ ನೋಡಿದ್ರೆ ಬರವಣಿಗೆಯಲ್ಲಿ ಇರೋದು ಒಂದು ಉತ್ತಮ ಬರವಣಿಗೆ, ಇನ್ನೊಂದು ಕೆಟ್ಟ ಬರವಣಿಗೆ, ಅಷ್ಟೆ.

**ಸಂ : ನಿಮ್ಮ ಬಹುತೇಕ ಚಿಂತನೆಗಳು ಸ್ತ್ರೀವಾದವನ್ನು ಒಡೆದು ಕಟ್ಟುವುದಕ್ಕಿಂತ ವಿಸ್ತರಿಸುವ ಕೆಲಸವನ್ನು ಮಾಡುತ್ತವೆ. ನಿಮ್ಮನ್ನು ಸಾಂಸ್ಕೃತಿಕ ಸ್ತ್ರೀವಾದಿ ಎಂದು ನಾನು ಕರೆಯುತ್ತೇನೆ.**

**ಆಶಾ :** ಖಂಡಿತಾ ನಾನು ಅದನ್ನೇ ಹೇಳ್ತೇನೆ. ಅದರಲ್ಲಿ ನನಗೆ ತುಂಬ ನಂಬಿಕೆ ಇದೆ. ಯಾವ ಕುಟುಂಬವನ್ನು ಅವಳ ವಿಶ್ವ ಅಂತ ನೋಡಲಾಗಿ ಬಂಧಿಸಲಾಗುತ್ತಿತ್ತೋ ಆ ಕುಟುಂಬವೇ ಅಂತಹ ವಿಶ್ವವಾಗಿದೆ. ಈಚೆಗೆ ಅವಳನ್ನು ಆ ಬಂಧನದಿಂದ ಒಡೆದು ನೋಡಲಾಗುತ್ತಿದೆ. ಇಂದಿನ ಸ್ತ್ರೀವಾದ ಬಿಚ್ಚಿಕೊಳ್ಳು ವಂತಹದ್ದಲ್ಲ, ಒಳಗೊಳ್ಳುವಂತಹದ್ದು. ಸ್ತ್ರೀವಾದ ಎನ್ನುವುದು ಯಾರದೋ ವಿರುದ್ಧ ಹೂಡಿರುವ ಯುದ್ಧವಲ್ಲ. ಅದು ಎಲ್ಲರನ್ನು ಒಳಗೊಳ್ಳಲು ನಡೆಸುತ್ತಿರುವ ಅಸಾಧಾರಣ ಪ್ರಯತ್ನ. ಎದುರಾಳಿಯನ್ನು ಎದುರಾಳಿ ಎಂದು ನೋಡುವುದು ಸ್ತ್ರೀವಾದ ಅಲ್ಲವೇ ಅಲ್ಲ ಎಂಬುದು ನನ್ನ ನಿಲುವು.

**ಸಂ : ಸ್ತ್ರೀವಾದದಲ್ಲಿ ವಿವಿಧ ಮಾದರಿಗಳು ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಯಾವುದು ಸರಿಯಾದ ಮಾದರಿ?**

**ಆಶಾ :** ಸ್ತ್ರೀವಾದಿ ಅಧ್ಯಯನದಲ್ಲೇ ತೊಡಕಿದೆ. ಕಪ್ಪು ಸ್ತ್ರೀವಾದ, ಉದಾರವಾದಿ ಸ್ತ್ರೀವಾದ – ಸಬಾಲ್ಟ್ರನ್ ಸ್ತ್ರೀವಾದ, ಅಮೇರಿಕನ್ ಸ್ತ್ರೀವಾದ, ಸಾಂಸ್ಕೃತಿಕ ಸ್ತ್ರೀವಾದ, ವೈಚಾರಿಕ ಸ್ತ್ರೀವಾದ – ಹೀಗೆ ಇರುವ ವಿವಿಧ ಸೈದ್ಧಾಂತಿಕ ಮಾದರಿಗಳಲ್ಲಿ ಯಾವುದಾದರೂ ಒಂದನ್ನು ನಮ್ಮ ದಾರಿಯಾಗಿ ಆಯ್ಕೆ ಮಾಡಿಕೊಳ್ಳುವ ಸ್ಥಿತಿಯಲ್ಲಿದ್ದೀವಿ ಅಂತ ನನಗೆ ಅನ್ನಿಸ್ತಿಲ್ಲ. ಸ್ತ್ರೀವಾದವನ್ನು ಭದ್ರಗೊಳಿಸುವ ಕವಲುಗಳಿವು. 'ಕಲ್ಚರಲ್ ಫೆಮಿನಿಸಂ' ಎನ್ನುವುದು 'ರ್‍ಯಾಶನಲ್ ಫೆಮಿನಿಸಂ'ನ ವಿರುದ್ಧವಾದದ್ದು ಎಂದೂ ತಿಳಿದುಕೊಳ್ಳುವಂತಿಲ್ಲ. ಹಾಗಾಗಿ ನಾನು 'ಕಲ್ಚರಲ್ ಫೆಮಿನಿಸಂ'ನ ನಂಬುತ್ತೇನೆ. ಇದು ಒಂದು ಪರಿಸರ, ಸಮುದಾಯವನ್ನು ಹಿಡಿದಿಡುವ ಶಕ್ತಿಕೇಂದ್ರ.

**ಸಂ : ಹೆಣ್ಣಿನ ಅಸ್ಮಿತೆಗಾಗಿ ನಡೆಸುವ ಹೋರಾಟವನ್ನು ಪುರುಷ ಪ್ರಧಾನ ಸಮಾಜವು ಭಕ್ತಿ, ಅಧ್ಯಾತ್ಮ, ಆರಾಧನೆ ಎಂಬ ಹೆಸರಿನಲ್ಲಿ ಕಟ್ಟಿಹಾಕಲಾಗಿದೆ ಅನ್ಸುತ್ತಲ್ವಾ?**

**ಆಶಾ :** ಕಟ್ಟಿಹಾಕಲಾಯಿತು ಎಂಬುದಕ್ಕಿಂತ ಮುಚ್ಚಿಹಾಕಲಾಯಿತು ಅಂತ ಅನ್ಸುತ್ತೆ. ಹಾಗಾಗಿಯೇ ರಾಧೆ, ಮೀರಾ, ಅಕ್ಕಮಹಾದೇವಿ, ಮೊದಲಾದವರ ಪ್ರಯತ್ನವನ್ನು ಅಧ್ಯಾತ್ಮದ ಹೆಸರಿನಲ್ಲಿ ದಿಗಂಬರತ್ವ, ಭಕ್ತಿಯ ಹೆಸರಿನಲ್ಲಿ ಕಾವಿ ಬಟ್ಟೆ ಹಾಕಿ ಮುಚ್ಚಲಾಗಿದೆ. ಹಾಗಾಗಿಯೇ ಇದನ್ನು ನಾವು ಮರುಮೌಲ್ಯಮಾಪನ ಮಾಡಬೇಕಿದೆ.

**ಸಂ : ನೀವು ಆದಿಮ ಸ್ತ್ರೀವಾದಿಗಳು ಅಂತ ಯಾರನ್ನ ಗುರುತಿಸುತ್ತೀರಾ?**

**ಆಶಾ :** ಆದಿಮ ಸ್ತ್ರೀವಾದಿಗಳು ಅಂತ ಸೀತೆ, ದ್ರೌಪದಿ, ಅಕ್ಕಮಹಾದೇವಿಯನ್ನು ಕರೆಯುತ್ತೇನೆ. ಇನ್ನೂ ಮುಂದುವರಿದು ಹೇಳೋದಾದ್ರೆ 'ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ' ಎನ್ನುವ ಅಲ್ಲಮ ನನಗೆ ನಿಜವಾದ ಆದಿಮ ಸ್ತ್ರೀವಾದಿಯಾಗಿ ಕಾಣ್ತಾನೆ.

**ಸಂ : ಅಕ್ಕನನ್ನು ಆದಿಮ ಸ್ತ್ರೀವಾದಿ ಅಂತ ಗುರುತಿಸುವ ನಿಮ್ಮ ಬರಹಗಳು ಆಕೆಯ ಹೋರಾಟ ವೈಯಕ್ತಿಕ ಅಸ್ಮಿತೆಯ ಪ್ರತೀಕ ಎಂದೂ ಹೇಳುತ್ತವೆ. ಇದರ ಹಿಂದಿನ ತಾತ್ತ್ವಿಕತೆ ಏನು?**



**ಆಶಾ :** ಇದು ನನಗೆ ತುಂಬಾ ಮುಖ್ಯ ಅಂತ ಅನ್ಸುತ್ತೆ. ಅಕ್ಕಮಹಾದೇವಿಯ ಸಾಧನೆಯನ್ನು ಇಡೀ ವಚನಕಾರರಿಗೆ ಕೊಟ್ಟುಬಿಡ್ತೀವಲ್ವಾ? ಆ ಕ್ರೆಡಿಟ್ಟನ್ನ ಕಿತ್ತುಕೊಳ್ಳಬೇಕಿತ್ತು. ಯಾಕಂದ್ರೆ ಅವಳು ವಚನಕಾರರನ್ನು ಭೇಟಿಮಾಡುವ ಮೊದಲೇ ತನ್ನ ಜೀವನದ ಮುಖ್ಯವಾದ ನಿರ್ಧಾರಗಳನ್ನು ತೆಗೆದುಕೊಂಡಿದ್ದಳು. ಇಲ್ಲಿ ನಾನು ಏನು ಹೇಳೋಕೆ ಬಯಸ್ತಿದ್ದೀನಂದ್ರೆ, ಎಲ್ಲಾ ಹೆಣ್ಮಕ್ಕಳೂ ಸ್ತ್ರೀವಾದಿಗಳೇ ಆಗಿರುತ್ತಾರೆ. ಆದರೆ ಅದನ್ನು ಅಭಿವ್ಯಕ್ತಿಗೊಳಿಸುವ ಸ್ಥಳಾವಕಾಶಗಳು ಬೇರೆ ಬೇರೆಯಾಗಿವೆ. ಒಂದು ಮಾತೂ ಆಡದ ಹೆಣ್ಣೂ ಸ್ತ್ರೀವಾದೀನೇ. ಹಾಗಾಗಿ ಅಕ್ಕಮಹಾದೇವಿಯದು ವೈಯಕ್ತಿಕತೆಗಾಗಿ ನಡೆಸಿದ ಹೋರಾಟವೆಂದು ನಾನು ಗುರುತಿಸುತ್ತೇನೆ. ಇದರ ಹಿಂದಿನ ಉದ್ದೇಶ ಅಸ್ಮಿತೆಯ ಹೋರಾಟ ಎನ್ನುವುದು ಹಿಂದೆಯೇ ಇತ್ತು. ಅದು ಅಕ್ಕಮಹಾದೇವಿಯ ಮೂಲಕ ಆಸ್ಫೋಟಗೊಂಡಿತು. ಆದ್ದರಿಂದ ವಚನಕಾರರಿಂದಲೇ ಅಕ್ಕಮಹಾದೇವಿ ರೂಪಗೊಂಡಳು ಎಂದು ಹೇಳಬೇಕಾಗಿಲ್ಲ. ವಚನಕಾರರಿಂದ ಸಿಕ್ಕಿದ್ದು ನೈತಿಕ ಬೆಂಬಲವಷ್ಟೆ. ಬೌದ್ಧಿಕತೆಯ ಹೋರಾಟ ಮಾತ್ರ ಅಕ್ಕಮಹಾದೇವಿಯದು. ಅದಕ್ಕಾಗಿಯೇ ಅವಳನ್ನು ನಾನು ಸ್ವಯಂಭು ಎಂದು ಕರೆಯುತ್ತೇನೆ.

**ಸಂ : ಲಿಂಗ ತಾರತಮ್ಯ ಮುಕ್ತವಾದ ಸಮಾಜದ ನಿರ್ಮಾಣಕ್ಕೆ ಚಳುವಳಿಗಳು ಅಗತ್ಯ, ಅಂತಹ ಚಳುವಳಿಗಳು ಕೂಡುನೆಲೆಯಲ್ಲಿರಬೇಕು ಎನ್ನುವುದು ನಿಮ್ಮ ತಾತ್ತ್ವಿಕತೆಗಳಲ್ಲೊಂದು. ಇದು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ?**

**ಆಶಾ :** ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ ಅಂತ ಬಹುಶಃ ಹೇಳಲಾರೆ. ಆದ್ರೆ ಹಾಗಾಗದೆ ಹೋದ್ರೆ ನಿಜವಾದ ಅರ್ಥದಲ್ಲಿ ಬದಲಾವಣೆಯಾಗಲಾರದು ಎಂದು ಹೇಳಬಲ್ಲೆ. ಹಾಗೆ ಬದಲಾಗಬೇಕು ಎಂದು ನಾನು ಹೇಳುತ್ತಿರುವಾಗ ಅವರನ್ನು ತೊಡಗಿಸಿಕೊಳ್ಳಬೇಕು ನೀವು ಬನ್ನಿ, ನೀವು ಬನ್ನಿ, ಅಂತ ಹೇಳುವುದಕ್ಕಿಂತ ನಾವು ಹೇಗಿದ್ದೀವಿ, ನಾವು ಇರುವ ಕ್ರಮ ಇದು ಎಂದು ಹೇಳುವ ಮೂಲಕ ಅವರಲ್ಲಿ ಒಂದು 'ಶಿಫ್ಟ್' ಅನ್ನು ತರಬೇಕು.

**ಸಂ : ಇತ್ತೀಚೆಗೆ ವೇಶ್ಯಾವಾಟಿಕೆ ಕಾನೂನಾತ್ಮಕ ಗೊಳಿಸುವುದರ ಬಗ್ಗೆ ಚರ್ಚೆಗಳು ಬಂದವು. ಇದರ ಪರ ಹಾಗೂ ವಿರೋಧವಾಗಿ ಸಾಕಷ್ಟು ಚರ್ಚೆಗಳು ಆಗುತ್ತಿವೆ. ಈ ವಿಷಯದ ಬಗ್ಗೆ ನಿಮ್ಮ ಅಭಿಮತವೇನು?**

**ಆಶಾ :** ವೇಶ್ಯಾವಾಟಿಕೆಗೆ ಹೋಗುವ ಪುರುಷರೂ 'ರಿಜಿಸ್ಟರ್' ಮಾಡಿಸಿಕೊಳ್ಳಬೇಕು ಅಂತ ನಾನು ಹೇಳ್ತೀನಿ. ಅದೂ ಭಾವಚಿತ್ರ ಸಮೇತವಾಗಿ. ಹೆಣ್ಣು ದುರ್ಬಲಳು, ಅವಳ ಮೇಲೆ ಆಕ್ರಮಣ ನಡೀತಿದೆ ಅಂತ ಹೇಳ್ತಾರೆ. ಅರೇ, ಅದು ಸುಳ್ಳು ರೀ, ಅವಳು ದುರ್ಬಲಳಲ್ಲ. ಅವನು ದುರ್ಬಲನು. ಅತ್ಯಾಚಾರಕ್ಕೆ ಒಳಗಾದವಳ ಬಗ್ಗೆ ಕರುಣೆ ಬೇಡ. ಅವನನ್ನು ಬಹಿಷ್ಕರಿಸಿ.

**ಸಂ : ನಿಮ್ಮ ಈ ಬೌದ್ಧಿಕ ಚಟುವಟಿಕೆಗೆ, ಚಿಂತನೆಗೆ, ಸಾಧನೆಗಳಿಗೆ ನಿಮ್ಮ ಕುಟುಂಬದವರ ಸಹಕಾರ ಹೇಗಿದೆ?**

**ಆಶಾ :** ನಿರ್ಬಂಧ ರಹಿತವಾದ ಬೆಂಬಲವನ್ನು ಪಡೆಯುವ ಪ್ರಯತ್ನವನ್ನು ನಾನು ಮೊದಲಿನಿಂದಲೂ ಮಾಡಿದೆ. ಇದು ನನ್ನ ಕ್ಷೇತ್ರ. ಇಲ್ಲಿ ಯಾರ ಹಸ್ತಕ್ಷೇಪ, ಅಧಿಕಪ್ರಸಂಗ ನಡೆಯಬೇಕಾಗಿಲ್ಲ. ಆದ್ರೆ ಈಗ ಅದು ಬದುಕಿನ ಕ್ರಮವಾಗಿದೆ. ಎಲ್ಲಾ ಮನೆಗಳಲ್ಲಿಯೂ ಇರುವಂತೆ ನಮ್ಮಲ್ಲಿಯೂ ಸಣ್ಣ ಪುಟ್ಟ ಭಿನ್ನಾಭಿಪ್ರಾಯಗಳು ಇವೆ. ಆದ್ರೆ ವೆನ್ ವಿ ಆರ್ ಕನ್ವಿನ್ಸಿಡ್ ದೆ ಆರ್ ಆಲ್ಸೊ ಕನ್ವಿನ್ಸಿಡ್. ಬಟ್ ಎವ್ವೆರಿ ಮಾರ್‍ಯೇಜ್ ಈಸ್ ಎ ಸ್ಟ್ರಗಲ್ ಅಂತ ಅನ್ಸುತ್ತೆ.

**ಸಂ : ಮಹಿಳೆಯರು ಮದುವೆಯ ನಂತರ ಗಂಡನ ಹೆಸರನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುತ್ತಾರೆ. ಈ ಬದಲಾವಣೆ ಬಗ್ಗೆ ನೀವೇನು ಹೇಳ್ತೀರಾ?**

**ಆಶಾ :** ಇದು ನಾನ್ಸೆನ್ಸ್ ಅನ್ಸುತ್ತೆ. ಒಂದು ಕಾಲದಲ್ಲಿ ಇದು ಅವ್ಯೆಹಾರಿಕ ಪ್ರಕ್ರಿಯೆಯಾಗಿತ್ತು. ಅನುಪಮಾ ನಿರಂಜನ ಅವರು ಗಂಡನ ಹೆಸರನ್ನು ಹಾಗೆ ಸೇರಿಸಿಕೊಳ್ಳಬಾರದು ಅಂತ ಹೇಳಿದ್ರು. 'ಆದ್ರೆ ನೀವೇ ಸೇರಿಸಿಕೊಂಡ್ರಲ್ವಾ ಮೇಡಂ' ಅಂತ ಕೇಳಿದಾಗ ಅವರು, "ನನ್ನ ಗಂಡನ ಸಾಧನೆಯ ಹೆಸರಿನ ಮೂಲಕ ನನ್ನನ್ನು ಗುರುತಿಸಿಕೊಳ್ಳಬೇಕಿತ್ತು, ಅದು ನನಗೆ ಹೆಮ್ಮೆಯ ವಿಷಯವೂ ಆಗಿತ್ತು. ನಾನು ಆ ಕಾಲದವಳು ರೀ..." ಅಂತ ಹೇಳ್ತಾರೆ. ಆದ್ರೆ ಪ್ರಸ್ತುತ ದಿನಗಳಲ್ಲಿ ಇದು ನಾನ್ಸೆನ್ಸ್ ಪ್ರಕ್ರಿಯೆಯಾಗಿದೆ. ಒಂದು ಸಾರಿ ನನ್ನ ಗಂಡ ಬಳ್ಳಾರಿಯಲ್ಲಿದ್ದಾಗ 'ಆಶಾದೇವಿ ರವಿಶಂಕರ್' ಅಂತ ಪತ್ರ ಕಳುಹಿಸಿದ್ರು. ನಾನು ಅದನ್ನು ಓಪನ್ ಸಹ ಮಾಡದೆ ವಾಪಸ್ ಕೊಟ್ಟು 'ನನ್ನ ಹೆಸರು ಮಾತ್ರ ಬರೆದರೆ ಓದ್ತೀನಿ' ಅಂತ ಹೇಳಿದೆ. ನಮಗೆ ನಮ್ಮ ಬಗ್ಗೆ ಆತ್ಮಗೌರವ ಇರಬೇಕು.

**ಗಾಯಿತ್ರಿ ಟಿ. ಪಾಂಚಜನ್ಯ**
ಸಂಶೋಧನ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ



# ಜೋಗಿಮಟ್ಟಿಯ ಗವಿಬಾಗಿಲು ಪ್ರದೇಶದಲ್ಲಿ ಚಾರಣ ತಂಡ

## ವನ್ಯಜೀವಿಧಾಮ ಕುರಿತು ವಿದ್ಯಾರ್ಥಿಗಳಲ್ಲಿ ಪರಿಕಲ್ಪನೆ ಮತ್ತು ಚಾರಣದ ಮಹತ್ವ

ಅನನ್ಯ ಪ್ರಕೃತಿಯ ರಮ್ಯ ತಾಣ ಚಿತ್ರದುರ್ಗದ ಜೋಗಿಮಟ್ಟಿ ಅರಣ್ಯ ಪ್ರದೇಶವೀಗ ಭಾರತದ ವನ್ಯಜೀವಿಧಾಮಗಳ ಪಟ್ಟಿಯಲ್ಲಿ ತನ್ನನ್ನೂ ಗುರುತಿಸಿಕೊಳ್ಳಲು ಸಜ್ಜಾಗಿದೆ. ಸದ್ಯ ಈ ಪ್ರಸ್ತಾವನೆಯು ಸರ್ಕಾರದ ಮುಂದಿದ್ದು, ಅಧಿಕೃತ ಘೋಷಣೆಗಾಗಿ ಹವಣಿಸುತ್ತಿದೆ. ಇನ್ನೇನಿದ್ದರೂ ಅಧಿಸೂಚನೆಯೊಂದೇ ಬಾಕಿ. ನಮ್ಮ ತಂಡವು ಸರ್ಕಾರದ ಈ ಸದುದ್ದೇಶವನ್ನು ಶ್ಲಾಘಿಸುತ್ತ ಈ ಮಹತ್ತರ ವಿಷಯ ಕುರಿತಾಗಿ ವಿದ್ಯಾರ್ಥಿಗಳಲ್ಲಿ ಪರಿಕಲ್ಪನೆ ಮೂಡಿಸುವ ಸಲುವಾಗಿ ೨೦-೦೯-೨೦೧೫ರಂದು ನಗರದ 'ಬಡ್ಡಿಂಗ್ ಆರ್ಟ್ ಗ್ಯಾಲರಿ' ವತಿಯಿಂದ ವಿವಿಧ ಶಾಲಾಕಾಲೇಜು ಮಕ್ಕಳಿಗೆ ಚಾರಣ ಶಿಬಿರವನ್ನು ಆಯೋಜಿಸಲಾಗಿತ್ತು. ಚಾರಣದಲ್ಲಿ ಪಾಲ್ಗೊಂಡ ೧೫ ವಿದ್ಯಾರ್ಥಿಗಳ ಕುತೂಹಲಕ್ಕೆ ಪೂರಕವಾಗಿ ಹೆಚ್ಚು ಜೈವಿಕ ಸಂಪನ್ಮೂಲಗಳಿಂದ ಆವೃತವಾದ ಜೋಗಿಮಟ್ಟಿಯ ಗವಿಬಾಗಿಲು ಪ್ರದೇಶವನ್ನು ಆಯ್ಕೆ ಮಾಡಲಾಗಿತ್ತು.

ಈ ಪ್ರದೇಶವು ಆಡುಮಲ್ಲೇಶ್ವರದಿಂದ ಉತ್ತರ ದಿಕ್ಕಿನೆಡೆಗೆ ಹಬ್ಬಿರುವ ಬೃಹತ್ ಗುಡ್ಡ. ಇಲ್ಲಿ

**ಡಿ. ಎನ್. ರವಿಕುಮಾರ್**

ಸುಮಾರು ೨೦ಕ್ಕೂ ಹೆಚ್ಚು ಗುಹೆಗಳಿದ್ದು, ವನ್ಯಜೀವಿಗಳ ಆವಾಸಕ್ಕೆ ಯೋಗ್ಯತಾಣವಾಗಿದೆ. ಇದರಿಂದಾಗಿಯೇ ಈ ಪ್ರದೇಶವನ್ನು ಗವಿಬಾಗಿಲು ಎಂದು ಗುರುತಿಸಲಾಗಿದೆ. ಇಲ್ಲಿನ ಎತ್ತರ ಪ್ರದೇಶವು ಕರಡಿ, ಚಿರತೆ, ಮುಳ್ಳುಹಂದಿ ಮತ್ತು ಬೃಹತ್ ಹೆಬ್ಬಾವುಗಳಿಗೆ ಆಶ್ರಯ ಕಲ್ಪಿಸಿಕೊಟ್ಟಿರುವುದರ ಕುರಿತು ವಿದ್ಯಾರ್ಥಿಗಳಿಗೆ ಪ್ರಾಯೋಗಿಕವಾಗಿ ಮನವರಿಕೆ ಮಾಡಿಕೊಡಲಾಯಿತು. ಗುಡ್ಡದ ಸೀಳುದಾರಿಯಲ್ಲಿ ಗೋಚರಿಸುವ ಮುಳ್ಳುಹಂದಿಗಳ ಬಿಲರೂಪದ ಗೂಡುಗಳನ್ನು ತೋರಿಸಲಾಯಿತು. ಅದೇ ಸ್ಥಳದ ಗುಹೆಗಳನ್ನು ಹೊಕ್ಕಿ ಪೊಟರೆ ಅವಲಂಬಿತ ಜೀವಿಗಳ ಕುರಿತು ಮಾಹಿತಿ ನೀಡಲಾಯಿತು. ಈ ಬೃಹತ್ ಗುಹೆಗಳು ಸೈಬೀರಿಯಾದ ಸ್ವಾಲೋ ಹಕ್ಕಿಗಳಿಗೆ ಸಂತಾನೋತ್ಪತ್ತಿಗಾಗಿ ನೆಲೆ ಕಲ್ಪಿಸಿ ಕೊಟ್ಟಿವೆ. ಮತ್ತು ಸ್ವಿಫ್ಟ್ ಎಂಬ ಇದೇ ಹಕ್ಕಿಯನ್ನು ಹೋಲುವ ಇನ್ನೊಂದು ಪ್ರಭೇದಕ್ಕೂ ಆಶ್ರಯ ಕಲ್ಪಿಸಿವೆ. ಕೇವಲ ಸೈಬೀರಿಯಾದಲ್ಲಿ ಸಂತಾನೋತ್ಪತ್ತಿ ನಡೆಸುವ ಸ್ವಾಲೋ ಹಕ್ಕಿಗಳ ಗೂಡುಗಳು

ಪರಿಸರ ಪ್ರಿಯರು, ಮಾಧ್ಯಮಗಳು ಮತ್ತು ಸ್ಥಳೀಯ ವಿದ್ಯಾರ್ಥಿಗಳ ನಿರಂತರ ಹೋರಾಟದ ಫಲದಿಂದಾಗಿ ಫಲ, ಇನ್ನೆಂದೂ ಜೋಗಿಮಟ್ಟಿಯಲ್ಲಿ ಖಾಸಗೀಕರಣಕ್ಕೆ ಅವಕಾಶವಿರದೆಂಬ ವಿಷಯವನ್ನು ಸ್ಮರಿಸಿಕೊಡಲಾಯಿತು. ಒಮ್ಮೆ ವನ್ಯಜೀವಿಧಾಮವೆಂದು ಘೋಷಿಸಿದರೆ ಈ ಅರಣ್ಯದಲ್ಲಿ ಪವನ ಯಂತ್ರಗಳ ನೆರಳು ಮತ್ತೆಂದೂ ಬೀಳಲು ಸಾಧ್ಯವಾಗದೆಂಬುದರ ಕುರಿತು ಶಿಬಿರಾರ್ಥಿಗಳಿಗೆ ಮನವರಿಕೆ ಮಾಡಿಕೊಡಲಾಯಿತು.



ಜೋಗಿಮಟ್ಟಿಯಲ್ಲಿ ಕಂಡುಬಂದಿದ್ದು ವಿಶೇಷವಾಗಿತ್ತು. ಇಂತಹ ಪ್ರದೇಶವನ್ನು ವನ್ಯಜೀವಿಧಾಮವೆಂದು ಘೋಷಿಸಲು ಬೇಕಾದಂತಹ ಜೈವಿಕ ಕುರುಹುಗಳು ಅತ್ಯಂತ ಪಾರದರ್ಶಕವಾಗಿದ್ದವು.

ಪರಿಸರ ಪ್ರಿಯರು, ಮಾಧ್ಯಮಗಳು ಮತ್ತು ಸ್ಥಳೀಯ ವಿದ್ಯಾರ್ಥಿಗಳ ನಿರಂತರ ಹೋರಾಟದ ಫಲದಿಂದಾಗಿ ಇನ್ನೆಂದೂ ಜೋಗಿ ಮಟ್ಟಿಯಲ್ಲಿ ಖಾಸಗೀಕರಣಕ್ಕೆ ಅವಕಾಶವಿರದೆಂಬ ವಿಷಯವನ್ನು ಸ್ಮರಿಸಿ ಕೊಡಲಾಯಿತು. ಒಮ್ಮೆ ವನ್ಯಜೀವಿಧಾಮವೆಂದು ಘೋಷಿಸಿದರೆ ಈ ಅರಣ್ಯದಲ್ಲಿ ಪವನ ಯಂತ್ರಗಳ ನೆರಳು ಮತ್ತೆಂದೂ ಬೀಳಲು ಸಾಧ್ಯವಾಗದೆಂಬುದರ ಕುರಿತು ಶಿಬಿರಾರ್ಥಿಗಳಿಗೆ ಮನವರಿಕೆ ಮಾಡಿಕೊಡಲಾಯಿತು. ಕಾಯ್ದಿಟ್ಟ ಅರಣ್ಯಕ್ಕೂ ಮತ್ತು ವನ್ಯಜೀವಿಧಾಮಗಳ ನಡುವಿನ ಅಂತರವನ್ನು ವಿವರಿಸಲಾಯಿತು. ವನ ಮತ್ತು ವನ್ಯಜೀವಿಗಳ ವೃದ್ಧಿಯ ಬಗ್ಗೆ ಹಲವು ಮಹತ್ತರ ವಿಷಯಗಳ ಕುರಿತು ವಿದ್ಯಾರ್ಥಿಗಳಲ್ಲಿ ಪರಿಕಲ್ಪನೆ ಮೂಡಿಸಲಾಯಿತು. ಜೋಗಿಮಟ್ಟಿ ಅರಣ್ಯ ಪ್ರದೇಶವನ್ನು 'ವನ್ಯಜೀವಿಧಾಮ'ವಾಗಿ ಘೋಷಿಸಲು ಹೊರಟಿರುವ ಸರ್ಕಾರದ ಈ ಪರಿಸರ ಕಾಳಜಿಯನ್ನು ರಾಜ್ಯದ ಖ್ಯಾತ ಪರಿಸರ ತಜ್ಞರು, ಅಪಾರ ವಿದ್ಯಾರ್ಥಿಗಳು ಮತ್ತು ಸ್ಥಳೀಯರು ಸ್ವಾಗತಿಸಿದ್ದಾರೆ. ಇನ್ನೆಂದಿಗೂ ಜೋಗಿಮಟ್ಟಿಯಲ್ಲಿ ಪವನ ಯಂತ್ರಗಳ ಸ್ಥಾಪನೆ ಕೂಡದು ಎಂಬ ಬಲವಾದ ಸಂದೇಶವನ್ನು ನೀಡಿದ್ದಾರೆ. ಸುಮಾರು ಮೂರ್‍ನಾಲ್ಕು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಈ ಪ್ರಸ್ತಾವನೆಯು ೨೦೧೫ರಲ್ಲಾದರೂ 'ವನ್ಯಜೀವಿಧಾಮ' ಎಂಬ ಪಟ್ಟಕ್ಕೆ ಭಾಜನವಾಗುವುದೇ ಎಂಬ ನಿರೀಕ್ಷೆಯು ಸಾರ್ವಜನಿಕರಲ್ಲಿ ದಟ್ಟವಾಗಿದೆ. ಇದು ಪರಿಸರ ಪ್ರಿಯರ ಅಭಿಲಾಷೆಯನ್ನೂ ಗರಿಗೆದರುವಂತೆ ಮಾಡಿದೆ.

ಜೊತೆಗೆ, ಒಮ್ಮೆ ನಡೆಸಿದ ಚಾರಣ ನಮಗೇನೆಲ್ಲಾ ಕೊಡಲು ಸಾಧ್ಯ ಎಂಬುದನ್ನು ವಿದ್ಯಾರ್ಥಿಗಳಿಗೆ ತಿಳಿಸುತ್ತಾ, ಪ್ರಕೃತಿ ನೀಡುವ ನೈಸರ್ಗಿಕ ಚಿಕಿತ್ಸೆ, ಮನೋಚೈತನ್ಯ, ಸದೃಢ ದೇಹ, ಆಕರ್ಷಕ ಛಾಯೆ, ಮುಂದಿನ ಕಾರ್ಯಗಳಲ್ಲಿನ ಉತ್ಸಾಹ ಹಾಗೂ ಅರಣ್ಯ ವನ್ಯಜೀವಿಗಳ ಕುರಿತು ಜ್ಞಾನ ಸಂಪಾದನೆಯಂತಹ ಉಪಯೋಗ, ಚಾರಣದಿಂದ ಸಾಧ್ಯ ಎಂಬುದರ ಅರಿವನ್ನು ವಿದ್ಯಾರ್ಥಿಗಳಲ್ಲಿ ಮೂಡಿಸಲಾಯಿತು. ಈ ತಂಡದಲ್ಲಿ ಆಯೋಜಕ ಹಾಗೂ ಪಕ್ಷಿ ಪ್ರಿಯ ಡಿ. ಎನ್. ರವಿಕುಮಾರ್, ಪರಿಸರ ಪ್ರಿಯ ಮಂಜುನಾಥ್ ಎಂ. ತಿಮ್ಲಾಪುರ್ ಮತ್ತು ಹವ್ಯಾಸಿ ಚಾರಣಿಗರಾದ ಯೋಗೀಶ್ ಸಹ್ಯಾದ್ರಿ, ಆರ್. ಹಾಲೇಶ್ ಮತ್ತು ಬಿ. ಎಂ. ಸಂತೋಷ್ ಪಾಲ್ಗೊಂಡಿದ್ದರು.



ಚಿತ್ರಲೇಖನ : **ಡಿ. ಎನ್. ರವಿಕುಮಾರ್**
ಚಿತ್ರಕಲಾ ಉಪನ್ಯಾಸಕರು, ನಂ. ೨೧೯
'ಪವನ' ನಿಲಯ, ೬ನೇ ಕ್ರಾಸ್ ವೆಸ್ಟ್
ಜೆ. ಸಿ. ಆರ್. ಬಡಾವಣೆ, ಚಿತ್ರದುರ್ಗ



# ಮರಣದಂಡನೆ ಶಿಕ್ಷೆ ಇರಬೇಕೆ–ಬೇಡವೆ?

## ಓದುಗರ ವೇದಿಕೆ

'ಮರಣದಂಡನೆ' ಇರಬೇಕೆ, ಇರಬಾರದೆ ಎಂಬ ವಿಷಯದಲ್ಲಿ ವಿಶ್ವದಾದ್ಯಂತ ಚರ್ಚೆ ನಡೆಯುತ್ತಿದೆ. ಹೊಸತು ವಿಶೇಷ ಸಂಚಿಕೆಯ ಓದುಗರ ವೇದಿಕೆಗೆ ಇದೇ ವಿಷಯ ಕೊಟ್ಟು ಓದುಗರು ತಮ್ಮ ಅಭಿಪ್ರಾಯ ಕಳಿಸಲು ಕೇಳಲಾಗಿತ್ತು. 'ಹೊಸತು'ವಿನ ಮನವಿಗೆ ಸ್ಪಂದಿಸಿ ಹಲವಾರು ಚಿಂತಕರು ತಮ್ಮ ಅಭಿಪ್ರಾಯಗಳನ್ನು ಕಳಿಸಿದ್ದಾರೆ. ಅವರಿಗೆಲ್ಲ ಧನ್ಯವಾದಗಳು.

ಮರಣದಂಡನೆ ಹೀನಕೃತ್ಯ ಎಸಗಿರುವವರಿಗೆ ಸೂಕ್ತವಾದ ಶಿಕ್ಷೆ ಮತ್ತು ಹೀನಕೃತ್ಯದಲ್ಲಿ ತೊಡಗುವ ಮನಸ್ಸುಗಳಿಗೆ ಎಚ್ಚರಿಕೆ ಎಂಬುದು ಕೆಲವರ ಅಭಿಪ್ರಾಯವಾದರೆ, ಕೊಲ್ಲುವ ಹಕ್ಕು ಯಾರಿಗೂ ಇಲ್ಲ, ಪ್ರಭುತ್ವಕ್ಕೂ ಸಹ, ಅಪರಾಧಿ ಮನೋಭಾವ ಸಾಮಾಜಿಕ ವಾತಾವರಣದ ಪರಿಣಾಮವಾದ ಕಾರಣ, ಮರಣದಂಡನೆ ಬದಲಾಗಿ ಜೀವಾವಧಿ ಶಿಕ್ಷೆ ಇರಲಿ ಎಂಬುದು ಕೆಲವರ ವಾದ. ಎರಡು ವಾದದಲ್ಲಿಯೂ ಮಾನವೀಯ ಮೌಲ್ಯ ಪ್ರಮುಖವಾಗಿದೆ. ಮುಂದಿನ ದಿನಗಳಲ್ಲಿ ಹೊಸತು ಈ ವಿಷಯ ಕುರಿತು ವಿವರವಾದ ಲೇಖನಗಳನ್ನು ಪ್ರಕಟಿಸಲಿದೆ. ಮತ್ತೊಮ್ಮೆ ಓದುಗರ ವೇದಿಕೆಯ ಭಾಗಿದಾರರಿಗೆ ವಂದನೆಗಳು.

– ಸಂ.

## ಪ್ರಚಂಡರಿಗೆ ಕೊನೆಯ ಅಸ್ತ್ರ ಮರಣದಂಡನೆ

**ಮಾ**ನವ ಒಂಟಿಯಾಗಿ ಬಾಳಲಾರ. ಆದ್ದರಿಂದಲೇ ಸಂಘ–ಸಮಾಜ ಜೀವಿಯಾಗಿದ್ದಾನೆ. ಈ ಕಾರಣದಿಂದಲೇ ರಾಷ್ಟ್ರ ಮತ್ತು ರಾಜ್ಯದ ನಿರ್ಮಾಣವಾಗಿದೆ. ಸಮಾಜ ಜೀವನದಲ್ಲಿ ರೂಢಿ–ಸಂಪ್ರದಾಯ–ನೀತಿ–ನಿಯಮಗಳು, ಕಟ್ಟು ಕಟ್ಟಳೆಗಳು ಜನರನ್ನು ಒಂದುಗೂಡಿಸುತ್ತಿದ್ದವು ಮತ್ತು ನಿಯಂತ್ರಿಸುತ್ತಿದ್ದವು. ಹೀಗಾಗಿ ಸಂಘ ಜೀವನ ಸುವ್ಯವಸ್ಥಿತ ವಾಗಿತ್ತು. ಇಂಥ ಜೀವನದಲ್ಲಿಯೂ ತಪ್ಪು ಮಾಡುವವರು ಇದ್ದೇ ಇರುತ್ತಿದ್ದರು. ಇಂಥವರನ್ನು ಹದ್ದುಬಸ್ತಿನಲ್ಲಿಡಲು, ಸಮಾಜದಿಂದ ಬಹಿಷ್ಕಾರ ಹಾಕಿ, ಸಮಾಜದಿಂದ ಹೊರಹಾಕುತ್ತಿದ್ದರು. ನೀರು–ಬೆಂಕಿ ಕೊಡದೆ ದೂರ ಇಟ್ಟಿರುತ್ತಿದ್ದರು. ಶಿಕ್ಷೆ ವಿಧಿಸಿ ಜನರನ್ನು ನಿಯಂತ್ರಿಸುತ್ತಿದ್ದರು. ಇದಕ್ಕಾಗಿ ಸಮಾಜದ ಹಿರಿಯರ ವೇದಿಕೆ ಇತ್ತು.

ಇಂದು ಸಮಾಜ ದೊಡ್ಡದಾಗಿ ಬೆಳೆದು ರಾಜ್ಯದ ನಿರ್ಮಾಣವಾಗಿದೆ. ರಾಜ್ಯವೆಂದಮೇಲೆ ಆ ರಾಜ್ಯಕ್ಕೆ ನಿರ್ದಿಷ್ಟವಾದ ಭೂಭಾಗ, ಶಾಸಕಾಂಗ–ಕಾರ್ಯಾಂಗ–ನ್ಯಾಯಾಂಗವನ್ನು ಒಳಗೊಂಡ ಸರ್ಕಾರ, ಪರಮಾಧಿಕಾರ ಇರಲೇಬೇಕು. ಜನತೆಯ ನಿಯಂತ್ರಣಕ್ಕಾಗಿ ಶಾಸಕಾಂಗ ಶಾಸನಗಳನ್ನು ಮಾಡುತ್ತದೆ. ಇವುಗಳಲ್ಲಿ ನಾಗರಿಕ ಕಾನೂನುಗಳು, ಸಿವಿಲ್ ಪ್ರೊಸೀಜರ್ ಕೋಡ್, ಕ್ರಿಮಿನಲ್ ಪ್ರೊಸೀಜರ್ ಕೋಡ್‌ಗಳಿವೆ. ರಾಷ್ಟ್ರ ನಿರ್ಮಾಣದ ಸೂತ್ರವಾಗಿ ಸಂವಿಧಾನಾತ್ಮಕವಾದ ಕಾನೂನುಗಳಿವೆ. ಕಾರ್ಯಾಂಗ, ಈ ಶಾಸನಗಳೂ ಅನುಷ್ಠಾನಕ್ಕೆ ಬರುವಂತೆ ಮಂತ್ರಿಮಂಡಲದ ಮೂಲಕ ಜಾರಿಗೆ ತರುತ್ತದೆ. ಅದಕ್ಕಾಗಿ ನೌಕರವರ್ಗ–ಸಿವಿಲ್ ಸೇವಕರು ಎಂಬ ದೊಡ್ಡ ವರ್ಗವೇ ಇದೆ. ರಾಷ್ಟ್ರದ ಒಳಗಡೆ ನಿಯಂತ್ರಣಕ್ಕಾಗಿ ಪೊಲೀಸ್ ವ್ಯವಸ್ಥೆ ಇದೆ. ಹಾಗೆಯೇ ರಾಷ್ಟ್ರ ಕಾಯಲು ಗಡಿಗಳಲ್ಲಿ ಮಿಲಿಟರಿ ಇದೆ. ಕಾನೂನನ್ನು ಅರ್ಥೈಸಲು ಮತ್ತು ಅನ್ವಯಿಸಿ ನ್ಯಾಯದಾನ ಮಾಡಲು ಸ್ವತಂತ್ರವಾದ ನ್ಯಾಯಾಂಗದ ವ್ಯವಸ್ಥೆ ಇದೆ. ನ್ಯಾಯಾಂಗ, ಜನತೆಯ ಹಕ್ಕುಗಳ ಸಂರಕ್ಷಕ ಹಾಗೂ ಕರ್ತವ್ಯ ಚ್ಯುತಿ ಮಾಡಿದವರಿಗೆ ಶಿಕ್ಷೆ ವಿಧಿಸುವ ಅಧಿಕಾರವನ್ನು ಹೊಂದಿದೆ. ಜನತೆಯ ನಿಯಂತ್ರಣಕ್ಕಾಗಿ ರಾಷ್ಟ್ರೀಯ ಕಾನೂನುಗಳಲ್ಲದೆ ಅಂತರರಾಷ್ಟ್ರೀಯ ಕಾನೂನುಗಳೂ ಇವೆ.

ಮಾನವ ತಪ್ಪು ಮಾಡುವುದು ಸಹಜ. ನಡೆಯುವವನು ಎಡವುತ್ತಾನೆಯೇ ಹೊರತು ನಡೆಯದೇ ಇರುವವನು ಎಡವುದಿಲ್ಲ. ಒಂದೆರಡು ಸಾರಿ ಬಿದ್ದು ಎದ್ದಾಗ, ಮುಂದೆ ಬೀಳದಂತಹ ಎಚ್ಚರಿಕೆಯನ್ನು ವಹಿಸಿ ನಡೆಯಬೇಕು. ಇಲ್ಲದಿದ್ದರೆ ಬೀಳುತ್ತಲೇ ಇರುತ್ತಾನೆ ಬಿದ್ದು ಅನಾಹುತಗಳನ್ನು ಮಾಡಿಕೊಳ್ಳುತ್ತಲೇ ಇರುತ್ತಾನೆ. ಇದರ ಪರಿಣಾಮವಾಗಿ ದೇಹ–ಮನಸ್ಸಿಗೆ ತೊಂದರೆಯಾಗುವುದು ನಿಶ್ಚಯ.

ತಪ್ಪು ಮಾಡಿದ ವ್ಯಕ್ತಿ, ಮೊದಲು ತನ್ನನ್ನು ತಾನು ತಿದ್ದಿಕೊಳ್ಳಬೇಕು ಅಥವಾ ಬೇರೆಯವರಿಂದಲೂ ತಿದ್ದಿಸಿಕೊಳ್ಳ ಬಹುದು. ಸಮಾಜ ಜೀವಿಯಾದ ಮಾನವನಿಗೆ ಪರಸ್ಪರ ಸಹಾಯ–ಸಹಕಾರ ಅತ್ಯಗತ್ಯವಾಗಿ ಬೇಕಾಗುತ್ತದೆ. ಇಲ್ಲಿ ತಾನೂ ಜೀವಿಸಿ, ತನ್ನ ಸಹಚರರೂ ಜೀವಿಸುವಂತಹ ರೀತಿಯಲ್ಲಿ ವರ್ತಿಸಬೇಕು. ಪರಸ್ಪರ ಹಕ್ಕುಗಳನ್ನು ಗೌರವಿಸಬೇಕು. ಕರ್ತವ್ಯಗಳನ್ನು ತಪ್ಪದೆ ಪಾಲಿಸಬೇಕು. ಆಗ ಮಾತ್ರ ಮಾನವಸಮಾಜ ಸುಖದಿಂದ ಇರಲು ಸಾಧ್ಯವಾಗುತ್ತದೆ.

ಮನುಷ್ಯನಲ್ಲಿ ಕಾಮ–ಕ್ರೋಧ–ಲೋಭ–ಮೋಹ–ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳು ಮನೆ

### ಅಭಿಪ್ರಾಯ

ಅತ್ಯಂತ ಕ್ರೂರಿಯಾಗಿರುವ ವ್ಯಕ್ತಿ ಬದುಕಿದ್ದರೆ ಸಮಾಜಕ್ಕೆ ಕಂಟಕ ಎಂದೆನಿಸಿದ ಸಂದರ್ಭಗಳಲ್ಲಿ ಗಲ್ಲುಶಿಕ್ಷೆ ವಿಧಿಸಲೇಬೇಕು. 'ಜೈಲಿನಿಂದ ಹೊರಕ್ಕೆ ಬರುತ್ತೇನೆ' ಎಂದು ಒಬ್ಬ ಕ್ರೂರಿಗೆ ತಿಳಿದರೆ, ಆತ ಹೊರಬಂದ ಮೇಲೆ ಯಾವ ದುಷ್ಕೃತ್ಯ ಎಸಗಬಹುದು ಎಂದು ಸಂಚು ಹಾಕುತ್ತಲೇ ಇರುತ್ತಾನೆ. ಈ ರೀತಿ ಸಂಭವಿಸಬಾರದು ಎಂಬ ಕಾರಣಕ್ಕಾಗಿಯೇ ಸುಪ್ರೀಂ ಕೋರ್ಟ್ ಅಪರೂಪದ ಪ್ರಕರಣಗಳಲ್ಲಿ ಗಲ್ಲು ಶಿಕ್ಷೆ ವಿಧಿಸಬೇಕು ಎಂದು ಅಭಿಪ್ರಾಯಪಟ್ಟಿದೆ. ಇದು ನಿಜ ಕೂಡ.

– **ಬಿ. ವಿ. ಆಚಾರ್ಯ** (ರಾಜ್ಯ ಮಾಜಿ ಅಡ್ವೋಕೇಟ್ ಜನರಲ್)




ಮಾಡಿಕೊಂಡಿವೆ. ಇದರ ಫಲವಾಗಿ ಸ್ವೇಚ್ಛೆಯಾಗಿ ವರ್ತಿಸುವವರು ಇದ್ದೇ ಇರುತ್ತಾರೆ. ಇವರು ತಮ್ಮ ಸುಖ ಸಂತೋಷಗಳನ್ನು ಮಾತ್ರ ನೋಡಿಕೊಳ್ಳುತ್ತಾರೆಯೇ ವಿನಾ ಇತರರ ಸುಖ ಸಂತೋಷಗಳನ್ನು ಗಮನಿಸದೆ ವರ್ತಿಸುವುದರಿಂದ ಸಮಾಜದಲ್ಲಿ ಅಶಾಂತಿ ಉಂಟಾಗುತ್ತದೆ. ಇರುವವರು – ಇಲ್ಲದಿರುವವರು ಎಂಬ ಅಸಮಾನತೆ ಉಂಟಾಗುತ್ತದೆ. ಈ ಅಸಮಾನತೆ ಸಮಾಜದ ಹಿತಕ್ಕೆ ಧಕ್ಕೆಯಾಗುತ್ತದೆ. ಅಹಂಕಾರಿಗಳಿಂದಲೇ ಸಹಪಾಠಿಗಳಿಗೆ ತೊಂದರೆಯಾಗಬಹುದು. ಈ ರೀತಿ ಉಂಟಾದ ತೊಂದರೆಗಳಿಂದ ದ್ವೇಷ ಅಸೂಯೆಗಳು ಮನೆಮಾಡುತ್ತವೆ. ಕೊನೆಗೆ ತನಗೆ ನೋವನ್ನು ಉಂಟುಮಾಡಿದವರಿಗೆ ನೋವು ಮಾಡಬೇಕೆಂಬ ಸಿದ್ಧಾಂತಕ್ಕೆ ಬರುತ್ತಾರೆ. ಇತಿಹಾಸದಲ್ಲಿ ಹಿಂದೆ ಇದ್ದ ಹಮ್ಮುರಾಬಿ ಶಾಸನವನ್ನು ಗಮನಿಸಬಹುದು: "ಹಲ್ಲಿಗೆ ಹಲ್ಲು, ಕಣ್ಣಿಗೆ ಕಣ್ಣು." ಸ್ವಾರ್ಥಿಗಳು ಹಾಗೂ ಅಹಂಕಾರಿಗಳಿಂದ ಸಮಾಜದಲ್ಲಿ ಹೊಡೆದಾಟ–ಬಡಿದಾಟ–ಹಿಂಸೆ–ಸಾವು–ನೋವುಗಳು ಉಂಟಾಗುತ್ತವೆ. ಇಂಥವರನ್ನು ಹದ್ದುಬಸ್ತಿನಲ್ಲಿಡಲು ನ್ಯಾಯಾಲಯಗಳಿವೆ. ತಪ್ಪಿಗೆ ತಕ್ಕ ಶಿಕ್ಷೆಗಳಿವೆ. ಜೈಲುಗಳಲ್ಲಿ ಶಿಕ್ಷೆಯನ್ನು ಅನುಭವಿಸಿ ಹೊರಬಂದು ನಂತರ ಪುನಃ ಪುನಃ ತಪ್ಪು ಮಾಡುತ್ತಲೇ ಇರುತ್ತಾರೆ. ಜೈಲುಗಳಿಗೆ ಸೇರುತ್ತಲೇ ಇರುತ್ತಾರೆ. ಇಂಥ ದುಷ್ಕರ್ಮಿಗಳಿಂದ ಸಮಾಜದಲ್ಲಿ ಶಾಂತಿ ಕದಡುತ್ತಲೇ ಇರುತ್ತದೆ. ಕೊಲೆ–ಸುಲಿಗೆ–ದರೋಡೆ–ಭಯೋತ್ಪಾದನೆ ಮುಂತಾದ ಸಮಾಜ ದ್ರೋಹಿ – ರಾಷ್ಟ್ರ ದ್ರೋಹಿ ಚಟುವಟಿಕೆಗಳು ಹೆಚ್ಚಾಗಿ ಶಾಂತಿಯುತವಾದ ಜೀವನಕ್ಕೆ ತೊಂದರೆಯಾಗುತ್ತದೆ. ಇಂಥ ಅಪರಾಧಿಗಳನ್ನು ಜೀವಾವಧಿ ಶಿಕ್ಷೆಯ ಮೂಲಕ ಶಿಕ್ಷಿಸಬೇಕು. ಇಷ್ಟಾದರೂ ಕೆಲವು ಖದೀಮರು ನ್ಯಾಯಾಲಯಕ್ಕೆ–ಜೈಲಿಗೆ–ಪೊಲೀಸ್‌ಗೆ ಯಾವುದಕ್ಕೂ ಹೆದರದೆ, ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳದೆ ಗಂಭೀರವಾದ ಅಪರಾಧಗಳಲ್ಲಿ ತೊಡಗುತ್ತಾರೆ. ಸುಲಭವಾದ ದುಡಿಮೆಯಾದ ಕಳ್ಳತನ, ದರೋಡೆ, ಸುಲಿಗೆ ಮತ್ತು ಕೊಲೆಗಳ ಮೂಲಕ ಜೀವಿಸಲು ತೊಡಗುತ್ತಾರೆ. ಇಂಥವರನ್ನು ಹೀಗೇ ಬಿಟ್ಟರೆ ದುಷ್ಕರ್ಮಿಗಳ ಸಂಖ್ಯೆ ಜಾಸ್ತಿಯಾಗಿ ಸಮಾಜದ ಶಾಂತಿ ನಾಶವಾಗುತ್ತದೆ. ನಮ್ಮದು ಕೊಲೆಗಡುಗರ ರಾಜ್ಯವಾಗುತ್ತದೆ. ಈ ಕಾರಣದಿಂದಾಗಿ ಉಗ್ರಶಿಕ್ಷೆಯ ಭಯವಿರಲೇಬೇಕು. ಹೀಗಾಗಿ ಕೊನೆಯ ಅಸ್ತ್ರವಾಗಿ ಮರಣದಂಡನೆಯ ಶಿಕ್ಷೆ ಇರಲೇಬೇಕು. ಮಾನವೀಯತೆಯನ್ನು ತೋರಿಸದವರಿಗೆ ಮಾನವೀಯತೆಯನ್ನು ತೋರಿಸುವುದು ಸೂಕ್ತವಲ್ಲ. ಮರಣದಂಡನೆ ಶಿಕ್ಷೆಯೇ ಸೂಕ್ತ.

■ **ಎಸ್. ಸಿ. ರಂಗನಾಥ್**, ಬೆಂಗಳೂರು



## ಮರಣದಂಡನೆ ಶಿಕ್ಷೆ ಮುಂದೆಯೂ ಇರಬೇಕು

ಇಂದು ಈ ಭಾರತ ದೇಶದಲ್ಲಿ ಜಾತಿವಾದಿಗಳು, ಕೋಮುವಾದಿಗಳು, ಧರ್ಮಾಂಧರು, ಪಟ್ಟಭದ್ರ ಹಿತಾಸಕ್ತಿಗಳು ಮುಗ್ಧ ಜನರನ್ನು ವಂಚಿಸಿ, ಶೋಷಿಸಿ ಬದುಕುತ್ತಿದ್ದಾರೆ. ಈ ಸಮಾಜದಲ್ಲಿ ಇಂತಹ ಜನರು ಎಂತಹುದೇ ಅಪರಾಧ ಎಸಗಿದರೂ ಜೀವ ತೆಗೆಯುವ ಕಾನೂನು ಇರಬಾರದು ಎಂದು ಹೇಳುವರು.

ಏಕೆಂದರೆ ಅಂತಹ ಕಾನೂನು ಜಾರಿಗೆ ಬಂದರೆ ಅವರೇ ಅಪರಾಧಿಗಳಾಗಿರುತ್ತಾರೆ. ಅದಕ್ಕಾಗಿ ಮರಣದಂಡನೆ ಬೇಡವೆಂದು ಹೇಳುವರು. ಅಪರಾಧವೆಸಗಿದವರಿಗೆ ಮರಣ ದಂಡನೆಯೇ ಸೂಕ್ತ ಎನ್ನುವುದು ಸತ್ಯವಾದ ಮಾತು. ನಮ್ಮ ದೇಶದ ಕಾನೂನು ವ್ಯವಸ್ಥೆಯಲ್ಲಿ ಈಗಿರುವ ಮರಣ ದಂಡನೆಯ ಶಿಕ್ಷೆ ಮುಂದೆಯೂ ಇರಬೇಕು. ಈ ಕಾನೂನನ್ನು ಎಂದಿಗೂ ತೆಗೆಯಬಾರದು. ಅಪರಾಧ ಮಾಡಿದವನಿಗೆ ಮರಣದಂಡನೆ ನೀಡುವುದೇ ಸೂಕ್ತವಾದ ನ್ಯಾಯ. ಇದೇ ಕಾನೂನು ಮುಂದುವರಿಯಬೇಕು.

ಇಂದು ನಾವೆಲ್ಲರೂ ಬೆಳಕಿನತ್ತ ನಡೆಯಬೇಕಾಗಿದೆ, ಕತ್ತಲಿನ ಕಡೆಗೆ ನಾವು ನಡೆಯಬೇಕಾಗಿಲ್ಲ. ಸತ್ಯದ ಕಡೆಗೆ ನಾವು ಹೋಗಬೇಕಾಗಿದೆ, ಮಿಥ್ಯದ ಕಡೆಗೆ ನಾವು ಹೋಗಬೇಕಾಗಿಲ್ಲ. ಅಜ್ಞಾನದ ಕಡೆಗೆ ನಾವು ಧಾವಿಸಬೇಕಾಗಿಲ್ಲ, ವಿಜ್ಞಾನದ ಕಡೆಗೆ ನಾವು ಧಾವಿಸಬೇಕಾಗಿದೆ.

ಇಂದು ದೇಶದಲ್ಲಿ ಅಸಹಿಷ್ಣುತೆಯನ್ನು ಸೃಷ್ಟಿಸಿದ್ದಾರೆ. ದೇಶಕ್ಕೆ ಅಪಾಯವಾಗಿ ಬಿಟ್ಟಿದೆ. ಅದು ಮಾನವ ವಿರೋಧಿಯಾಗಿ, ನಾಗರಿಕ ವಿರೋಧಿಯಾಗಿ ಬೆಳೆಯುತ್ತಿದೆ. ಮಾನವ ಹಕ್ಕುಗಳನ್ನು ಕಸಿದುಕೊಳ್ಳುತ್ತಿದ್ದಾರೆ. ಸಾಹಿತಿಗಳ ಅಭಿವ್ಯಕ್ತಿಗೆ ಭಂಗ ಉಂಟಾಗಿದೆ, ಶಾಂತಿಭಂಗವಾಗಿದೆ. ಧರ್ಮಾಂಧತೆ, ಅಂಧಶ್ರದ್ಧೆ, ಕಂದಾಚಾರ, ಮೌಢ್ಯ, ಮೂಢನಂಬಿಕೆಗಳನ್ನು ಜನರ ತಲೆಯಲ್ಲಿ ತುಂಬಿ ತುಂಬಿ ಧಾರ್ಮಿಕ ಬಂದೀಖಾನೆಯಲ್ಲಿ ಈ ಸಮಾಜವನ್ನು ತಳ್ಳುವ ಪ್ರಯತ್ನ ಮಾಡುತ್ತಿದ್ದಾರೆ.

ಜನರು ತಮ್ಮ ಜೀವನದ ಬಿಕ್ಕಟ್ಟುಗಳಿಗೆ ಬಂಡವಾಳವಾದ ಮತ್ತು ಸರಕಾರಗಳೇ ಕಾರಣ ಎಂದು ತಿಳಿಯುವ ಬದಲಿಗೆ ಎಲ್ಲರೂ ವಿಧಿವಿಲಾಸ, ಪೂರ್ವಜನ್ಮದ ಶಾಪ, ಹಣೆಬರಹ, ದೈವನಿರ್ಣಯಗಳೇ ಕಾರಣ ಎಂದುಕೊಳ್ಳಲಿ ಎಂದು ಮೂಢನಂಬಿಕೆಗಳಿಗೆ, ಮೌಢ್ಯಗಳಿಗೆ, ಅಂಧಶ್ರದ್ಧೆಗಳಿಗೆ, ಕಂದಾಚಾರಗಳಿಗೆ, ಸತ್ತ ಸಂಪ್ರದಾಯಗಳಿಗೆ, ಕೊಳಕು ಸಂಪ್ರದಾಯಗಳಿಗೆ, ನಿರ್ಜೀವ ಅಂಶಗಳಿಗೆ ಶಾಸ್ತ್ರಗಳಿಂದ ಹೊರತೆಗೆದು ಪುನರ್‌ಜೀವ ಕೊಡುತ್ತಿದ್ದಾರೆ. ಹಾಗಾದಾಗ ಪ್ರತಿಭಟನಾ ಹೋರಾಟಗಳೇ ಇರುವುದಿಲ್ಲ. ಅಂತಹ ಸಮಾಜ ನಿರ್ಮಾಣ ಮಾಡಲು ಅಸಹಿಷ್ಣುತೆಯನ್ನು ಸೃಷ್ಟಿಸಿದ್ದಾರೆ.

ಭಾರತ ದೇಶದ ಎಲ್ಲ ಜನರು ಆಧುನಿಕ ವಿಜ್ಞಾನದ ನಂಟಿನಿಂದ ವೈಜ್ಞಾನಿಕ ಮನೋಧರ್ಮವನ್ನು ಬೆಳೆಸಿಕೊಳ್ಳಬಾರದು, ವೈಚಾರಿಕತೆಯ ಬೆನ್ನು ಹತ್ತಬಾರದೆಂದು ವೈಜ್ಞಾನಿಕ ಪ್ರಜ್ಞೆ ಮೂಡಿಸುವ ರೂವಾರಿಗಳನ್ನು, ಮೌಢ್ಯಗಳನ್ನು ಮೂಢನಂಬಿಕೆಗಳನ್ನು ಕಂದಾಚಾರಗಳನ್ನು ಅಂಧಶ್ರದ್ಧೆಗಳನ್ನು ತೊಡೆದುಹಾಕಲು ತೊಡೆ ತಟ್ಟಿ ಟೊಂಕ ಕಟ್ಟಿ ಹೋರಾಡುವ ಹುರಿಯಾಳುಗಳನ್ನು ಹತ್ಯೆ ಮಾಡುತ್ತಿದ್ದಾರೆ. ಹತ್ಯೆಮಾಡಲು ನಿಂತ ಇಂತಹ ಹಂತಕರಿಗೆ ಮರಣದಂಡನೆ ನೀಡಲೇಬೇಕು. ವಿರೋಧಕ್ಕೆ ವಿರೋಧವಾಗಬೇಕು. ಇದು ನನ್ನ ಅಭಿಪ್ರಾಯ.

ವಿಧಿವಿಲಾಸ, ಹಣೆಯಬರಹ, ಪೂರ್ವಜನ್ಮದ ಶಾಪ ಎನ್ನುವ ಹೆಸರಿನಲ್ಲಿ ತಾಂಡವವಾಡುತ್ತಿದೆ ಬೌದ್ಧಿಕ ಗುಲಾಮಗಿರಿ. ಈ ಭಾರತ ದೇಶದಲ್ಲಿ ಈ ಬೌದ್ಧಿಕ ಗುಲಾಮಗಿರಿಯಿಂದ ಬಿಡುಗಡೆ ಮಾಡಲು ಹೋರಾಡುವ ಹೋರಾಟಗಾರರ ಹತ್ಯೆ ಮಾಡುವ ಹಂತಕರಿಗೆ ಮರಣದಂಡನೆ ನೀಡಬೇಕು. ಆಗ ಇನ್ನುಳಿದ ರಾಕ್ಷಸರಿಗೆ ಪಾಠಕಲಿಸಿದಂತಾಗುವುದು. ತಾವು ಮಾಡುವ ಹೀನ ಕೆಲಸಗಳಿಗೆ, ಹೀನ ಕೃತ್ಯಗಳಿಗೆ ಯಾರೂ ಅಡ್ಡಿಯಾಗಬಾರದೆಂದು ಎಂತಹ ಅಪರಾಧ ಮಾಡಿದರೂ

ಮರಣದಂಡನೆ ಶಿಕ್ಷೆ ಕೊಡಬಾರದೆಂದು ಕಾನೂನು ತರುತ್ತಿದ್ದಾರೆ. ಅವರ ಎಲ್ಲ ಕಾನೂನುಗಳನ್ನು ಬದಿಗೊತ್ತಿ ಅವರಿಗೆ ಮರಣದಂಡನೆ ನೀಡಬೇಕು.

ನಾವು ಅಣುಬಾಂಬ್ ತಯಾರಿಸುವ ತನಕ ಪ್ರಗತಿ ಸಾಧಿಸಿದ್ದೇವೆ. ಆದರೆ ನಮ್ಮ ಸಮಾಜದ ನಡುವೆ ಭಾವೈಕ್ಯ ಬೆಳೆಸುವಲ್ಲಿ ಸೋತಿದ್ದೇವೆ. ಈಗ ನಾವು ಭಾವೈಕ್ಯ ಬೆಳೆಸುವ ಪಾಠ ಕಲಿಯಬೇಕಾಗಿದೆ, ಕಲಿಸಬೇಕಾಗಿದೆ. ಈ ಸಮಾಜವನ್ನು ಕತ್ತಲೆಯತ್ತ ಒಯ್ಯುವ ದುಷ್ಟಶಕ್ತಿಗಳಿಗೆ. ಮಾನವ ಹಕ್ಕುಗಳನ್ನು ಕಸಿದುಕೊಳ್ಳುವ ಕೋಮುವಾದಿಗಳಿಗೆ ನಮ್ಮನ್ನು ಬೌದ್ಧಿಕ ಗುಲಾಮರಾಗಿ ನೋಡುವ ಪುರೋಹಿತಶಾಹಿಗಳಿಗೆ ನಾವು ಒದ್ದು-ಒದ್ದು ವೈಜ್ಞಾನಿಕ, ವೈಚಾರಿಕ ಪಾಠ ಕಲಿಸಬೇಕು. ಇಂತಹ ಕೊಲೆಗಡುಕರಿಗೆ, ಅಪರಾಧಿಗಳಿಗೆ ಮರಣ ದಂಡನೆಯ ಶಿಕ್ಷೆ ಮುಂದೆಯೂ ಇರಬೇಕು ಎಂದು ಒತ್ತಿ ಒತ್ತಿ ಹೇಳುತ್ತೇನೆ.

■ **ಸಂಗಣ್ಣ ಚಂದ್ರಾಮಪ್ಪ ಹೊಸಮನಿ**, ಕಲಬುರಗಿ

## ಮರಣದಂಡನೆ ಶಿಕ್ಷೆ ಅಗತ್ಯ

ಇತ್ತೀಚಿನ ದಿನಗಳಲ್ಲಿ ಮರಣದಂಡನೆ ಕುರಿತು ವ್ಯಾಪಕವಾದ ಚರ್ಚೆಗಳಾಗುತ್ತಿವೆ. ಎಂಥದೇ ಅಪರಾಧವಿದ್ದರೂ ಜೀವತೆಗೆಯುವ ಕಾನೂನು ಇರಬಾರದು ಎನ್ನುವುದು ದುರ್ಬಲ ಮನಸ್ಸು ಇದ್ದವರು, ಶಿಕ್ಷೆಯ ಬಗ್ಗೆ ಭಯಭೀತಿಯಿದ್ದವರು, ಮಾನವೀಯತೆಯ ಮೇಲೆ ದಯೆ, ಕರುಣೆ, ಕ್ಷಮೆ ಇದ್ದವರು; ಸತ್ಯ, ಅಹಿಂಸೆ, ನ್ಯಾಯ ಪಾಲಿಸದೆ ಇದ್ದವರು; ಶಿಸ್ತು, ಶಾಂತಿ, ತಾಳ್ಮೆ ಇಲ್ಲದವರು, ಉತ್ತಮ ಗುಣ, ನಡತೆ, ಸ್ವಭಾವ ಇಲ್ಲದವರು, ಮೂಢನಂಬಿಕೆ ಇದ್ದವರು, ಅನೈತಿಕ ಆಚಾರ-ವಿಚಾರ ಉಳ್ಳವರು, ಭ್ರಷ್ಟ - ಕ್ರಿಮಿನಲ್ ಹಿನ್ನೆಲೆ ಇದ್ದವರು, "ಮರಣದಂಡನೆಯ ಶಿಕ್ಷೆಯ ಕಾನೂನು ಸಡಿಲಿಸಿ, ಎಂಥದೇ ಅಪರಾಧವಿದ್ದರೂ ಜೀವ ತೆಗೆಯುವ ಕಾನೂನು ಇರಬಾರದು" ಎನ್ನುವುದು ಸರಿಯೇ ? ಇನ್ನು ಮುಂದೆ ಮರಣದಂಡನೆಯ ಶಿಕ್ಷೆ ರದ್ದಾದರೆ ನಮ್ಮ ದೇಶದಲ್ಲಿ ಹೀನ ಕೃತ್ಯಗಳು, ಹೀನ ಅಪರಾಧಗಳು, ಹೆಚ್ಚಾಗಿ ಸಮಾಜ ಮಾತ್ರವಲ್ಲ, ವ್ಯಕ್ತಿಗಳೂ ಅಧೋಗತಿಗೆ ಸಾಗುತ್ತಾರೆ. ಅದಕ್ಕಾಗಿ ನಮ್ಮ ದೇಶದ ಕಾನೂನು ವ್ಯವಸ್ಥೆಯಲ್ಲಿ ಈಗಿರುವ ಮರಣದಂಡನೆಯ ಶಿಕ್ಷೆಯನ್ನು ಮುಂದುವರಿಸುವುದು ಸೂಕ್ತ.

ಭಾರತ ದೇಶದಲ್ಲಿ ಅನೇಕ ಧರ್ಮಗಳಿವೆ. ಅನೇಕ ಜಾತಿಗಳಿವೆ. ಎಲ್ಲ ಧರ್ಮ ಮತ್ತು ಜಾತಿಗಳಿಗಿಂತ ಮಾನವ ಜಾತಿ, ಧರ್ಮ ದೊಡ್ಡದು. ಎಲ್ಲ ಧರ್ಮತತ್ವಗಳ ಉಪದೇಶಗಳು, ಹೀನಕೃತ್ಯ ಅಪರಾಧ ಮಾಡಿದವರಿಗೆ ಮರಣದಂಡನೆ ಶಿಕ್ಷೆ ನೀಡುವುದು ಸೂಕ್ತವೆಂದು ಸಾರಿ ಹೇಳುತ್ತಾರೆ. ಎಲ್ಲ ಧರ್ಮಗಳ ಗುರಿ ಒಂದೇ ಆಗಿದೆ. ತಪ್ಪು ಮಾಡಿದವನು ಶಿಕ್ಷೆ ಅನುಭವಿಸಬೇಕು. "ಉಪ್ಪು ತಿಂದವನು ನೀರು ಕುಡಿಯಲೇಬೇಕು". ಹೀನಕೃತ್ಯ ಮಾಡಿದ ಅಪರಾಧಿಗಳಿಗೆ ಮರಣದಂಡನೆ ಶಿಕ್ಷೆ ಸೂಕ್ತ.

ಮರಣದಂಡನೆ ಶಿಕ್ಷೆಯಲ್ಲಿ ನಿರಪರಾಧಿಗಳಿಗೆ ಅನ್ಯಾಯವಾಗಬಾರದು. ನ್ಯಾಯ ಮುಕ್ತವಾಗಿರಬೇಕು. ಅವರ ಪೂರ್ವಾಪರ ವಿಚಾರಗಳು, ಉತ್ತಮ ಗುಣ ನಡತೆಗಳು ಅವರ ಮೂಲ ಸ್ವಭಾವ ಗಮನಿಸಿ ನ್ಯಾಯ-ಅನ್ಯಾಯ ಅರಿತು ಕ್ರಮಕೈಗೊಳ್ಳಬೇಕು. ಸೂಕ್ತ ದಾಖಲೆಗಳು, ಪುರಾವೆಗಳು, ಸಾಕ್ಷಿಗಳು ಎಲ್ಲವನ್ನು ಪರಿಗಣಿಸಿ ಸೂಕ್ತ ತೀರ್ಪು ನೀಡುವುದೊಂದೇ ಗುರಿಯಾಗಿದೆ.

ಒದುಗರ ವೇದಿಕೆ

ಕಾವ್ಯಲೋಕ






## ಸತ್ತ ಶಾಂತಿಯನ್ನುಡುಕುತ್ತಾ

ಹುಟ್ಟುಟ್ಟು ಸಾವುಗಳು
ಎತ್ತೆತ್ತಲೋ ಸಾಗುವವು
ಬೆತ್ತಲ ಪರಿಧಿಯ
ಕತ್ತಲೆಯೊಳಗೆ.
ಸತ್ತವರು ಇದ್ದವರ ಹಾಗೆ.
ಇದ್ದವರು ಸತ್ತವರ ಹಾಗೆ.
ಇದ್ದು ಗೆದ್ದವರಿಲ್ಲ.
ಗೆದ್ದು ಇದ್ದವರ್ಯಾರು ಇಲ್ಲಿಲ್ಲ,
ದ್ವೇಷ ಅಸೂಯೊಡಲಲಿ. !

ಶಾಂತಿ ಸತ್ತು ಅಶಾಂತಿ
ಗರಿ ಬಿಚ್ಚಿ ತನ್ನ ಅಸ್ತಿತ್ವವ
ತೋರಿದೆ.
ಗಾಂಧಿತಾತನ
ಒಲವು ನೋಟಿನಲಿ
ಮರಗಟ್ಟಿವೆ.
ಅವನ ತತ್ವಗಳೆದುರು
ಮುಖವಾಡದ
ಜನಗಳ ಮನಗಳ
ಒಳಗಡೆ ಹಳಸಿದ
ಭಾವಗಳೊಳಗೆ...

ಮಸಣದಲಿ ಕುರಿ
ಕೋಳಿಗಳಿಗೆ
ಜಾಗವಿಲ್ಲ,
ಕೊಳಕು ಮನದ
ಮನುಷ್ಯನ
ಸಾವಿನಾದಿಗೆ
ಪ್ರಕೃತಿ ಒಣಮಣ್ಣ
ಹಾಸಿ ಕಾಯುತಿದೆ.

ಕೊಳಕು ಮನದ
ಹುಳುಕು ದೇಹದಲಿ
ಶಾಂತಿ ಎಂಬುವಸ್ತುವ
ಹುಡುಕುತ್ತಾ...

**ರಾಜುಗೌಡ**, ನಂ. ೪೦, ಗಾಂಧೀ ಬಜಾರ್ ಸರ್ಕಲ್, ಬಸವನಗುಡಿ, ಬೆಂಗಳೂರು ೫೬೦ ೦೦೪




ನ್ಯಾಯಮುಕ್ತ ತೀರ್ಪು ಎಂದರೂ ಕೆಲವೊಮ್ಮೆ ನಿರಪರಾಧಿಗಳಿಗೆ ಅನ್ಯಾಯ ವಾಗುತ್ತದೆ. ಕಾರಣ ಶಿಕ್ಷೆಗೆ ಒಳಪಡದಂತೆ ಸೂಕ್ತ ದಾಖಲೆಗಳು ಮತ್ತು ಸಾಕ್ಷಿಗಳು ದೊರೆಯದೆ ಇರುವುದರಿಂದ. ಅದಕ್ಕಾಗಿ ನ್ಯಾಯಾಲಯದಲ್ಲಿ "ನ್ಯಾಯದೇವತೆಗೆ ಕಣ್ಣಿಗೆ ಕಪ್ಪು ಬಟ್ಟೆ ಮತ್ತು ಕೈಯಲ್ಲಿ ತಕ್ಕಡಿ" ಸಂಕೇತವಾಗಿ ರುತ್ತದೆ. ಅನಿವಾರ್ಯತೆಯಿಂದ ಮರಣದಂಡನೆ ಶಿಕ್ಷೆ ಮುಜುಗರವೆನಿಸಿದರೂ, ನ್ಯಾಯದೇವತೆಯ ಘನತೆಗೆ, ಪ್ರಜಾಪ್ರಭುತ್ವಕ್ಕೆ ಮತ್ತು ಉತ್ತಮ ಆಡಳಿತದ ನಿದರ್ಶನಕ್ಕೆ ಕಾರಣವಾಗುತ್ತದೆ.

ಮರಣದಂಡನೆ ಶಿಕ್ಷೆಗೆ ಒಳಪಡಿಸುವಾಗ ಕೆಲವು ಅಂಶಗಳನ್ನು ಗಮನಿಸಬೇಕು:

೧. ೧೮೨೪ರಲ್ಲಿ ಬ್ರಿಟಿಷರ ವಿರುದ್ಧ ಕಿತ್ತೂರು ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ದೇಶಾಭಿಮಾನಿ, ರಾಷ್ಟ್ರಭಕ್ತ ವೀರ ಸಂಗೊಳ್ಳಿ ರಾಯಣ್ಣನಿಗೆ ಮರಣದಂಡನೆ ಶಿಕ್ಷೆ ವಿಧಿಸಿರುವುದು ಅನರ್ಹವಾಗಿದೆ. ಸೂಕ್ತ ದಾಖಲೆಗಳು ಇಲ್ಲದ ನಿರಪರಾಧಿಗೆ ಶಿಕ್ಷೆಯಾಗಬಾರದು.

೨. ಭಾರತ ದೇಶದ ವಾಣಿಜ್ಯ ನಗರ ಮುಂಬಯಿಯಲ್ಲಿ ಭಯೋತ್ಪಾದಕರು ಗುಂಡಿನ ದಾಳಿಯಲ್ಲಿ ಸುಮಾರು ೧೮೦ ಜನರು ಸಾವನ್ನಪ್ಪಿದರು. ಈ ಘಟನೆಯ ಭಯೋತ್ಪಾದಕ ಕಸಬ್‌ನನ್ನು ಸೆರೆ ಹಿಡಿದು ಮರಣದಂಡನೆ ಶಿಕ್ಷೆ ವಿಧಿಸಿರುವುದು ಸೂಕ್ತವಾಗಿದೆ. ಇನ್ನುಮುಂದೆ ಅಹಿತಕರ ಘಟನೆಗಳಿಗೆ ಅವಕಾಶವಿರುವುದಿಲ್ಲ.

೩. ಕರ್ನಾಟಕದ ದಟ್ಟ ಅರಣ್ಯದಲ್ಲಿ ಕಾಡುಗಳ್ಳ ವೀರಪ್ಪನ್ ಮತ್ತು ಅವನ ಸಹಚರರು ಹೀನ ಕೃತ್ಯವೆಸಗಿದರೂ, ಹೀನ ಅಪರಾಧ ಮಾಡಿದರೂ, ಮರಣದಂಡನೆ ಶಿಕ್ಷೆಗೆ ಒಳಪಡದೆ ಇರುವುದು, ಹಿಂಸೆಗೆ ಒಳಗಾದ ಕುಟುಂಬಗಳಿಗೆ ಅನ್ಯಾಯವಾಗಿದೆ.

೪. ಚಿಕ್ಕ ತಪ್ಪು ಮಾಡಿದವರಿಗೆ, ನಿರಪರಾಧಿ ಕ್ರಿಮಿನಲ್‌ಗಳಿಗೆ ಮರಣದಂಡನೆ ಶಿಕ್ಷೆ ಅನರ್ಹ.

೫. ದರೋಡೆಕೋರರು, ಕೊಲೆಗಾರರು, ಅತ್ಯಾಚಾರಿಗಳು, ಮಕ್ಕಳ ಅಪಹರಣ ಮಾಡುವವರು, ಭಯೋತ್ಪಾದಕರು, ಮುಂತಾದ ಹೀನ ಅಪರಾಧ ಮಾಡಿದವರಿಗೆ ಮರಣದಂಡನೆ ಶಿಕ್ಷೆ ಅರ್ಹವಾಗಿದೆ.

೬. ಹೀನ ಕೃತ್ಯ ಅಪರಾಧಿಗಳ ಸೂಕ್ತ ದಾಖಲೆಗಳು, ಪುರಾವೆಗಳು ಮತ್ತು ಸಾಕ್ಷ್ಯಗಳು ಸಾಬೀತಾದರೆ ಮರಣದಂಡನೆ ಶಿಕ್ಷೆ ಅರ್ಹವಾಗಿದೆ.

೭. ಬಾಂಬು ದಾಳಿ, ಗುಂಡಿನ ದಾಳಿ, ದೇಶದ್ರೋಹ, ಭ್ರಷ್ಟಾಚಾರ, ಸಮಾಜ ಘಾತುಕ ಮುಂತಾದ ಹೀನ ಅಪರಾಧಿಗಳಿಗೆ ಮರಣದಂಡನೆ ಶಿಕ್ಷೆ ಅವಶ್ಯಕ.

೮. ಹೀನ ಕೃತ್ಯ ಅಪರಾಧಿಗಳಿಗೆ ಐ.ಪಿ.ಸಿ. – ೩೦೨, ೩೦೩, ೩೦೪, ೩೦೫ ಮತ್ತು ೩೦೬ರ ವಿಧಿಯ ಪ್ರಕಾರ ಮರಣದಂಡನೆ ಶಿಕ್ಷೆಗೆ ಅವಕಾಶವಿದೆ.

೯. ಮರಣದಂಡನೆ ಶಿಕ್ಷೆ ವಿಧಿಸುವುದರಿಂದ ಅಪರಾಧ ಕೃತ್ಯ ಮಾಡುವವರ ಸಂಖ್ಯೆ ಕಡಿಮೆಯಾಗಿ, ಸಮಾಜ ಸುಧಾರಿಸಿ ಅರಿವು ಜಾಗ್ರತೆ ಮೂಡುತ್ತದೆ.

೧೦. ಮರಣದಂಡನೆ ಶಿಕ್ಷೆಯನ್ನು ಇನ್ನೂ ಮುಂದುವರಿಸುವುದರಿಂದ ಉತ್ತಮ ಸಮಾಜ ನಿರ್ಮಾಣಕ್ಕೆ ಸಹಾಯವಾಗುತ್ತದೆ.

ಹೀನ ಅಪರಾಧ ಮಾಡಿದವರಿಗೆ "ಮರಣದಂಡನೆಯೇ ಸೂಕ್ತ" ಎನ್ನುವುದು ನನ್ನ ಅಭಿಪ್ರಾಯ.

■ ಮರಿದೇವರ ಸಿದ್ದಪ್ಪ, ಬಳ್ಳಾರಿ

## ಮರಣದಂಡನೆ ಸಾಮಾಜಿಕ ನ್ಯಾಯ ನೀಡದು

ಮನುಷ್ಯನು ಎಷ್ಟೆಂದರೂ ಸಂಘಜೀವಿ. ತಾನು ಹುಟ್ಟಿ ಬಂದಂದಿನಿಂದ ಬೆಳೆದು ಬಂದ ಪರಿಸರ, ತನ್ನ ಒಡನಾಡಿಗಳೊಂದಿಗೆ ತನ್ನನ್ನು ತೊಡಗಿಕೊಂಡ ವಿಧಾನಗಳು ಹಾಗೂ ಹೊರಜಗತ್ತಿನ ವಿದ್ಯಮಾನಗಳಿಂದ ತನಗಾಗುತ್ತಿರುವ ಪ್ರಭಾವ ಈ ಎಲ್ಲ ಅಂಶಗಳು ಆತನ ಮನುಷ್ಯತ್ವವನ್ನು ಅಳೆಯುವ ಮಾನದಂಡ ಗಳಾಗುತ್ತವೆ. ಇಂತಹ ಮನುಷ್ಯನೊಬ್ಬ ಅತಿ ಕ್ರೂರಿಯಾಗಿ ಪಾಶವೀಕೃತ್ಯಗಳಲ್ಲಿ ತೊಡಗಿಸಿಕೊಂಡು ಸಮಾಜದ ಸ್ವಾಸ್ಥ್ಯಕ್ಕೆ ಕಂಟಕಪ್ರಾಯನಾದಾಗ ಅಂತಹವನನ್ನು ಇನ್ನಿಲ್ಲವಾಗಿಸಬೇಕಾದ ಅನಿವಾರ್ಯತೆಯು ಸಮಾಜಕ್ಕೆ ಒದಗಿಬರುತ್ತದೆ. ಹಾಗಾಗಿ ಮರಣದಂಡನೆಯೆಂಬ ಅತಿಹೀನವೂ ಅಂತಿಮ ಅಸ್ತ್ರವೂ ಆದ ಆಯುಧವು ಸರಕಾರದ ಬತ್ತಳಿಕೆಯಿಂದ ಹೊರಬಂದು ಸಮಾಜದ್ರೋಹಿಯ ಬದುಕಿಗೆ ತೆರೆ ಎಳೆದುಬಿಡುತ್ತದೆ. ಆದರೆ, ನಿಜಕ್ಕೂ ಈ ಮರಣದಂಡನೆಯೆಂಬ, ಬದುಕನ್ನು ಅಂತ್ಯಗೊಳಿಸುವ ಶಿಕ್ಷೆಯು ನಾಗರಿಕ ಸಮಾಜದಲ್ಲಿ ಎಷ್ಟು ಪ್ರಸ್ತುತ ಎಂಬುದನ್ನು ಹಲವಾರು ಕೋನಗಳಿಂದ ಚಿಂತಿಸಬೇಕಾಗುತ್ತದೆ.

ಹುಟ್ಟಿನಿಂದ ಯಾರೂ ಅಪರಾಧಿಯಲ್ಲ, ಪರಿಸರದ ವಿದ್ಯಮಾನಗಳು ಆತನಲ್ಲಿ ಮೃಗತ್ವವನ್ನು ಬೆಳೆಸಿತು ಎಂದಾದರೆ ಆತನನ್ನು ಸುಸಂಸ್ಕೃತನನ್ನಾಗಿ, ನಾಗರಿಕನನ್ನಾಗಿ ಬೆಳೆಸದ ಹೊಣೆ ಸಮಾಜದ್ದಾಗಿರುತ್ತದೆ. ಆತನಲ್ಲಿರುವ ಪೈಶಾಚಿಕತೆಯನ್ನು ಎಳವೆಯಲ್ಲಿಯೇ ತಿದ್ದದೆ, ಅದು ಬೆಳೆದು ತನ್ನ ಕಬಂಧ ಬಾಹುಗಳನ್ನು ಚಾಚತೊಡಗಿದಾಗ ಸಮಾಜವು ತನ್ನ ಜವಾಬ್ದಾರಿಯಿಂದ ನುಣುಚಿಕೊಂಡು ಆತನ ಕೊರಳಿಗೆ ಕುಣಿಕೆಯನ್ನು ಕಾಣಿಸುವುದು ಎಷ್ಟು ಸಮಂಜಸ? ಒಬ್ಬ ವ್ಯಕ್ತಿಯು ಅದೆಷ್ಟೇ ದುರುಳನಾದರೂ ಆತನಲ್ಲಿ ತುಸುವಾದರೂ ಒಳ್ಳೆಯ ಗುಣಗಳಿರುತ್ತವೆಯಂತೆ. ಅಂತಹ ಗುಣಗಳ ಯಾವುದೊ ಕ್ರಿಯೆಯಿಂದ ಯಾವಾಗಲೋ ಸಮಾಜಕ್ಕೆ ತುಸುವಾದರೂ ಲಾಭವಾಗಿದೆಯೆಂದಾದರೆ ಸಮಾಜಕ್ಕೆ ಆತನ ಬದುಕಿನ ಋಣವು ಇದ್ದೇ ಇರುತ್ತದೆ. ಆ ಋಣವು ಸಂದಾಯವಾಗದೆ ಆತನನ್ನು ಮೃತ್ಯುವಿನ ವಶಕ್ಕೊಪ್ಪಿಸುವುದು ಎಷ್ಟಕ್ಕೂ ಸರಿಯಲ್ಲ.

ಮರಣದಂಡನೆ ಶಿಕ್ಷೆಯು ಇತರರನ್ನು ಘೋರ ಅಪರಾಧವನ್ನು ಮಾಡಲು ಹೆದರಿಕೆ ಹುಟ್ಟಿಸುತ್ತದೆ, ಅದು ತಡೆಗೋಡೆಯಾಗಿಬಿಡುತ್ತದೆ ಎನ್ನುವ ಅಂಶವೂ ಒಂದಿದೆ. ಆದರೆ ವಿಶ್ವದ ಅದೆಷ್ಟೋ ರಾಷ್ಟ್ರಗಳಲ್ಲಿ ನೂರಾರು ವರ್ಷ ಗಳಿಂದಲೂ ಮರಣದಂಡನೆಯ ಶಿಕ್ಷೆಯು ಜಾರಿಯಲ್ಲಿದ್ದರೂ ಅಪರಾಧಗಳ ಸಂಖ್ಯೆಯಲ್ಲೇನೂ ಇಳಿಮುಖವಾಗಿಲ್ಲ. ಹಾಗಾಗಿ, ಮರಣದಂಡನೆಯು ಇತರ

ಅಪರಾಧಿಗಳಲ್ಲಿ ಭಯಹುಟ್ಟಿಸಿ ಅವರನ್ನು ಕ್ರೌರ್ಯಕ್ಕಿಳಿಸದು ಎನ್ನುವ ವಾದದಲ್ಲಿ ಹುರುಳಿಲ್ಲ.

ಎಲ್ಲಕ್ಕಿಂತ ಪ್ರಮುಖ ಅಂಶವೆಂದರೆ, ಮರಣದಂಡನೆಯು ಮತ್ತೆಂದೂ ತಿರುಗಿಸಲಾಗದ ಶಿಕ್ಷೆಯಾಗಿದೆ. ಆರೋಪಿಗೆ ತಾನು ಅಪರಾಧಿಯಲ್ಲ ಎಂದು ನಿರೂಪಿಸಲು ಅವಕಾಶವೇ ಇಲ್ಲವಾಗುತ್ತದೆ. ಕಾಲಚಕ್ರವು ಉರುಳಿದಂತೆ ಘಟನೆಗಳು ಹೊಸ ತಿರುವುಗಳನ್ನು ಪಡೆದು ನಿಜಹೂರಣವು ಹೊರಬಂದಾಗ ಆತನು ನಿರಪರಾಧಿ ಎಂಬ ಅಂಶವು ಸ್ಪಷ್ಟಗೊಂಡರೂ ಮರಣದಂಡನೆಯೆಂಬ ಶಿಕ್ಷೆಯು ಆರೋಪಿಗೆ ಮತ್ತೆ ಪ್ರಾಣ ನೀಡದು. ಹಾಗಾಗಿ ಮರಣದಂಡನೆಯೆಂಬ ಶಿಕ್ಷೆಯು ತರವಲ್ಲ.

ಕೊನೆಯದಾಗಿ ಬಹುತೇಕ ರಾಷ್ಟ್ರಗಳಲ್ಲಿ, ಅದರಲ್ಲೂ ಮುಖ್ಯವಾಗಿ ಭಾರತದಲ್ಲಿ ಅನೇಕ ಸ್ತರದ ನ್ಯಾಯಾಲಯಗಳಲ್ಲಿ ಹಲವಾರು ವರ್ಷಗಳವರೆಗೆ ವಾದವಿವಾದಗಳು ನಡೆದು ಮರಣದಂಡನೆಯನ್ನು ಘೋಷಿಸಿದ್ದರೂ ಅದನ್ನು ಅಮಲುಗೊಳಿಸಲು ದಶಕಗಳೇ ಕಳೆದಿರುತ್ತವೆ. ಈ ಅವಧಿಯಲ್ಲಿ ಅಪರಾಧಿಯು ಮಾನಸಿಕವಾಗಿ ಕುಗ್ಗಿ ಪ್ರತಿಕ್ಷಣವೂ ಅಂತಕನ ದರ್ಶನವನ್ನು ಅತಿ ದಯನೀಯವಾಗಿ ಕಾಯುತ್ತಾ ಕುಳಿತಿರುತ್ತಾನೆ. ಕ್ಷಣಕ್ಷಣಕ್ಕೂ ಭಯಭೀತನಾಗಿ ಬದುಕಿರುವಾಗಲೇ ಜೀವಚ್ಛವವಾಗಿರುವ ಅಪರಾಧಿಗೆ ಪುನಃ ಮರಣದಂಡನೆ ವಿಧಿಸಿದರೆ ಅದು ಎರಡನೆಯ ಶಿಕ್ಷೆಯಾಗುವುದಿಲ್ಲವೇ ? ಒಂದೇ ಅಪರಾಧಕ್ಕೆ ಒಂದಕ್ಕಿಂತ ಹೆಚ್ಚು ಬಾರಿ ಶಿಕ್ಷೆ ಕೊಡುವುದು ಸಾಧ್ಯವಿಲ್ಲ, ಸಾಧುವೂ ಅಲ್ಲ ಎಂದು ಕಾನೂನಿನ ಪುಸ್ತಕಗಳಲ್ಲಿ ಬರೆದಿರುವಾಗ ಅದನ್ನು ಆಚರಣೆಗೆ ತರುವಲ್ಲಿ ವ್ಯತ್ಯಯವಾದರೂ ಏಕೆ ?

ಹೀಗೆ, ಒಬ್ಬನು ಅದೆಷ್ಟೇ ಅಪರೂಪದಲ್ಲಿ ಅಪರೂಪದ ಹೇಯಕೃತ್ಯವನ್ನು ಎಸಗಿದ್ದರೂ ಮರಣದಂಡನೆಯೆಂಬ ಬ್ರಹ್ಮಾಸ್ತ್ರದಿಂದ ಆತನನ್ನು ಅಳಿಸಿಹಾಕಿ ಸಮಾಜಕ್ಕೆ ನ್ಯಾಯವನ್ನು ಒದಗಿಸಿಕೊಡುವುದು ಎಂದಿಗೂ ನ್ಯಾಯ ಸಮ್ಮತವಾಗಲಾರದು.

■ಕಿಗ್ಗಾಲು ಎಸ್. ಗಿರೀಶ್, ಕೊಡಗು

## ಘೋರ ಅಪರಾಧ ಮಾಡಿದವರಿಗೆ ಮರಣದಂಡನೆಯೇ ಸೂಕ್ತ

**ಸ**ಮಾಜದಲ್ಲಿ ಹೀನ ಅಪರಾಧ ಎಸಗಿದ ಅಂದರೆ ಒಬ್ಬ ವ್ಯಕ್ತಿಯನ್ನು ಕೊಂದ ಪಾಪಿಗೆ ಮರಣದಂಡನೆಯನ್ನು ವಿಧಿಸಬೇಕೇ, ಬೇಡವೇ, ಎಂತಹ ಅಪರಾಧ ಎಸಗಿದ್ದರೂ ಜೀವ ತೆಗೆಯುವ ಕೆಲಸ ಸರಿಯೇ ಎಂಬ ವಿಚಾರವಾಗಿ ಬಹಳ ಸಮಯದಿಂದ ಪರ–ವಿರೋಧ ಅಭಿಪ್ರಾಯಗಳು ಮಾಧ್ಯಮಗಳ ಮೂಲಕ ವ್ಯಕ್ತವಾಗುತ್ತಿವೆ.

ಹೀಗೆ ಅಭಿಪ್ರಾಯ ಪಡುವವರಲ್ಲಿ ಸಾಹಿತಿಗಳಿದ್ದಾರೆ. ನ್ಯಾಯಾಧೀಶರಿದ್ದಾರೆ, ನ್ಯಾಯವಾದಿಗಳಿದ್ದಾರೆ, ಸಮಾಜ ಚಿಂತಕರಿದ್ದಾರೆ, ಸಮಾಜ ಸುಧಾರಕರೂ ಇದ್ದಾರೆ. ರಾಜಕಾರಣಿಗಳಂತೂ ಇದ್ದೇ ಇದ್ದಾರೆ. ಆದರೆ ಸಾಕಷ್ಟು ಚರ್ಚೆ, ವಾದ ಪ್ರತಿವಾದ ನಡೆದರೂ ಇಂದಿನತನಕ, ಇದಮಿತ್ಥಂ ಎಂಬ ನಿರ್ಧಾರಕ್ಕೆ ಬರಲು ಸಾಧ್ಯವಾಗಿಲ್ಲ. ಯಾಕೆಂದರೆ ನಿರ್ಧಾರ ಸೂಚಿಸುವಲ್ಲಿ, ಇದು ಒಬ್ಬ ವ್ಯಕ್ತಿಯ ಸ್ವಭಾವ ಅಥವಾ ಮನಃಸ್ಥಿತಿಯನ್ನು ಹೊಂದಿರುತ್ತದೆ. ಸ್ವಭಾವ, ವ್ಯಕ್ತಿವ್ಯಕ್ತಿಗಳಲ್ಲಿ ಭಿನ್ನವಾಗಿರುವುದು ಸಹಜವಷ್ಟೆ!

ಯುರೋಪಿನ ಕೆಲವು ದೇಶಗಳಲ್ಲಿ ಮರಣದಂಡನೆ ರದ್ದಾಗಿದ್ದರೂ ಇನ್ನು ಕೆಲವು ದೇಶಗಳಲ್ಲಿ ಈಗಲೂ ಜಾರಿಯಲ್ಲಿದೆ.

ನಮ್ಮಲ್ಲಿ ರದ್ದಾಗಬೇಕೆಂದು ಹಲವರು ಹಲವು ಸಮಯದಿಂದ ವಾದಿಸುತ್ತಿದ್ದರೂ, ಇನ್ನೂ ರದ್ದಾಗದೆ ಉಳಿದುಕೊಂಡಿದೆ. ವಿರೋಧಿಸುವವರೂ ಬೇಕಾದಷ್ಟು ಮಂದಿ ಇದ್ದಾರೆ. ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಇಬ್ಬರ ವಾದದಲ್ಲೂ ಹುರುಳಿಲ್ಲದೆ ಇಲ್ಲ.

ಪ್ರಪಂಚದಲ್ಲಿ ಮುಖ್ಯವಾಗಿ ಭಾರತದಲ್ಲಿ ಅತ್ಯಾಚಾರ, ಬಲಾತ್ಕಾರ, ಕೊಲೆ, ಸುಲಿಗೆ, ಹಿಂಸೆ, ಮಹಿಳೆಯರ ಮೇಲೆ ಲೈಂಗಿಕ ಅತ್ಯಾಚಾರ, ಭ್ರೂಣಹತ್ಯೆ, ನಿಧಿಗಾಗಿ ಮುಗ್ಧ ಹಸುಳೆಗಳ ಬಲಿದಾನ ಇತ್ಯಾದಿ, ಇತ್ಯಾದಿ... ಸಮಾಜ ವಿರೋಧೀ ಚಟುವಟಿಕೆಗಳು ಹೆಚ್ಚಾಗಿ ನಡೆಯುತ್ತಿರುವುದರಿಂದ ಕೊಂದ ಅಪರಾಧಿಗೆ ಮರಣದಂಡನೆಯನ್ನು ವಿಧಿಸದೆ ರದ್ದು ಪಡಿಸುವಂತಹ ವಾತಾವರಣ ಇನ್ನೂ ನಿರ್ಮಾಣವಾಗಿಲ್ಲ. ಆದರೂ ಅತ್ಯಂತ ಅಪರೂಪ ಪ್ರಕರಣಗಳಲ್ಲಿ ಮಾತ್ರ ಮರಣ ದಂಡನೆ ವಿಧಿಸಲ್ಪಡುತ್ತದೆ.




ದಿಲ್ಲಿಯಲ್ಲಿ ಎರಡು ತಿಂಗಳ ಹಿಂದೆ ದಲಿತರ ಇಬ್ಬರು ಚಿಕ್ಕಮಕ್ಕಳನ್ನು ಬೆಂಕಿಹಚ್ಚಿ ಕೊಂದುಹಾಕಿದರು. ಪರಪುರುಷನೊಂದಿಗೆ ತಾನು ಲೈಂಗಿಕ ಕ್ರಿಯೆ ನಡೆಸುತ್ತಿರುವುದನ್ನು ತನ್ನ ಮಗ ನೋಡಿದನೆಂದು ಸಿಟ್ಟಿನಿಂದ ತಾಯಿಯಾದವಳು ಆತನ ಕತ್ತನ್ನು ಸೀಳಿ ಕೊಂದುಹಾಕಿದಳು. ಅವನು ಅವಳಿಗೆ ಒಬ್ಬನೇ ಮಗನಾಗಿದ್ದ.

ಅತ್ಯಾಚಾರಿಯೊಬ್ಬ ಒಂಟಿ ಹೆಂಗಸಿನ ಮೇಲೆ ಬಲಾತ್ಕಾರದ ಲೈಂಗಿಕ ಅತ್ಯಾಚಾರ ನಡೆಸಿ, ಆಮೇಲೆ ಆಕೆಯ ಅಂಗಾಂಗಗಳನ್ನು ಕತ್ತರಿಸಿ ಚೀಲದಲ್ಲಿ ತುಂಬಿಸಿ, ಪೊದೆಯಲ್ಲಿ ಎಸೆದುಹೋದನು.

ರಸ್ತೆಯಲ್ಲಿ ನಡೆದು ಹೋಗುತ್ತಿದ್ದ ಯುವತಿಯನ್ನು ನಾಲ್ಕು ಮಂದಿ ರೌಡಿಗಳು ಹಿಡಿದೆಳೆದು ಒಬ್ಬೊಬ್ಬರಾಗಿ ಅತ್ಯಾಚಾರ ನಡೆಸಿ ಆಮೇಲೆ ಕಲ್ಲಿನಿಂದ ಆಕೆಯ ತಲೆಯನ್ನು ಜಜ್ಜಿ ಕೊಂದು ಕಾಡಿನಲ್ಲಿ ಬಿಸಾಡಿದರು.

ಅಪಾರ್ಟ್‌ಮೆಂಟಿನಲ್ಲಿ ಒಬ್ಬಳೇ ವಾಸಿಸುತ್ತಿದ್ದ ವಿಧವೆ ಹೆಂಗಸನ್ನು ಕೊಂದು ಚಿನ್ನಾಭರಣಗಳನ್ನು ಕಳ್ಳ ದೋಚಿಕೊಂಡು ಹೋದನು.

ಸ್ಕೂಲಿಗೆ ಕುಡಿದು ಬಂದ ಶಿಕ್ಷಕ ಸ್ಕೂಲು ಬಿಟ್ಟಮೇಲೆ ಒಂದನೇ ತರಗತಿಯ ಹುಡುಗಿಯನ್ನು ಕೋಣೆಗೆ ಪುಸಲಾಯಿಸಿಕೊಂಡು ಹೋಗಿ ಬಾಯಿಗೆ ವಸ್ತ್ರ ತಳ್ಳಿ ತನ್ನ ಕಾಮಪಿಪಾಸೆಯನ್ನು ತೀರಿಸಿಕೊಂಡ. ಎಚ್ಚರ ತಪ್ಪಿಬಿದ್ದ ಹುಡುಗಿಯ ಆರ್ತನಾದವನ್ನು ಕೇಳಿ ಹತ್ತಿರದವರು ಬಂದು ಆಸ್ಪತ್ರೆಗೆ ಸೇರಿಸಿ ಬಂದರು.

ಕೇಳಿದಷ್ಟು ವರದಕ್ಷಿಣೆ ತರಲಿಲ್ಲವೆಂದು ಡಾಕ್ಟರನಾದ ಗಂಡ ಮಡದಿಗೆ ಸೀಮೆಎಣ್ಣೆ ಸುರಿದು ಬೆಂಕಿಹಚ್ಚಿ ಕೊಂದುಹಾಕಿದ.

ಇವೆಲ್ಲಾ ಇತ್ತೀಚೆಗೆ ನಮ್ಮ ದೇಶದಲ್ಲಿ ನಡೆದ ಅತ್ಯಂತ ಭಯಾನಕ ಘಟನೆಗಳ ಕೆಲವು ತುಣುಕುಗಳು. ಇಂತಹ ಹತ್ಯಾಕಾಂಡಕ್ಕೆ ಅಥವಾ ಚಿತ್ರಹಿಂಸೆಗೆ ಕಾರಣರಾದ ರಾಕ್ಷಸರಿಗೆ ೧೦–೧೫ ವರ್ಷಗಳ ಅಥವಾ ಜೀವಿತಾವಧಿ ಶಿಕ್ಷೆ ವಿಧಿಸಿದರೆ ಸಾಕೇ ? ಖಂಡಿತಾ ಸಾಲದು.

ಇಂತಹ ಅಪರಾಧಿಗಳಿಗೆ ಅಲ್ಪ ಪ್ರಮಾಣದ ಶಿಕ್ಷೆ ವಿಧಿಸುವಂತಾದರೆ ಅಪರಾಧಿ ಶಿಕ್ಷೆಯನ್ನು ಮುಗಿಸಿ ಜೈಲಿನಿಂದ ಹೊರಬಂದಮೇಲೆ ಮತ್ತೆ ಅದೇ ಪಾಪಕೃತ್ಯಕ್ಕೆ ಮುಂದಾಗುತ್ತಾನೆ. ಇದು ಸಮಾಜದಲ್ಲಿ ಕಂಡುಬರುತ್ತಿರುವ ಪ್ರತ್ಯಕ್ಷ ಪ್ರಮಾಣ. ಕೆಲವು ಅಪವಾದಗಳು ಇರಲೂಬಹುದು. ಜೈಲಿಂದ ಹೊರಬಂದವರಲ್ಲಿ ಶೇ. ೧೦ ಮಂದಿ ತಮ್ಮ ನಡತೆಯನ್ನು ತಿದ್ದಿಕೊಂಡವರು ಇರಲೂಬಹುದು. ಇನ್ನು ಮಹಾಪರಾಧಿಗೆ ಮರಣದಂಡನೆ ವಿಧಿಸದೆ ಅಲ್ಪ ಪ್ರಮಾಣದ ಅಥವಾ ಜೀವಿತಾವಧಿ ಶಿಕ್ಷೆ ವಿಧಿಸಿಬಿಟ್ಟರೆ, ಅನ್ಯಾಯವಾಗಿ ಸತ್ತ ವ್ಯಕ್ತಿಯ ಆತ್ಮಕ್ಕೆ ನಾವು ಮಾಡುವ ಅನ್ಯಾಯವೂ ಹೌದು.

ಬೇರೆಯವರ ಪ್ರಾಣಹರಣ ಮಾಡಿದರೆ ತನ್ನ ಪ್ರಾಣಹರಣವೂ ಆಗಲಿದೆ ಎಂಬ ಭೀತಿ ಕೊಲೆ ಮಾಡಲು ಹೊರಟವರನ್ನು, ಎಲ್ಲರನ್ನೂ ಅಲ್ಲದಿದ್ದರೂ ಕೆಲವನ್ನಾದರೂ ತಡೆಯಬಹುದು.

ಆದುದರಿಂದ ಹೀನ ಅಪರಾಧ ಮಾಡಿದವರಿಗೆ ಮರಣದಂಡನೆಯೇ ಸೂಕ್ತ ಎಂಬುದರಲ್ಲಿ ಎರಡು ಮಾತಿಲ್ಲ. ಇಂದು ಏನಾಗಿದೆ ಅಂದರೆ ಎಂತಹ ಅಪರಾಧ ಮಾಡಿದರೂ, ಎಂತಹ ಭ್ರಷ್ಟಾಚಾರ ಎಸಗಿದರೂ ಏನೂ ಆಗುವುದಿಲ್ಲವೆಂಬ ಧೈರ್ಯ, ವಿಶ್ವಾಸ ಕೊಲೆ, ಸುಲಿಗೆ ಮುಂತಾದ ಹೀನ ಕೆಲಸಕ್ಕೆ ಮುಂದಾಗುವವರಲ್ಲಿ ಮನೆಮಾಡಿದೆ. ಹೆಚ್ಚೆಂದರೆ ಒಬ್ಬ ಸಮರ್ಥ ಕ್ರಿಮಿನಲ್ ಲಾಯರನ್ನು ಗೊತ್ತು ಮಾಡಿಕೊಂಡರಾಯಿತು. ಲಂಚ ಪ್ರಭಾವಗಳನ್ನು ಬಳಸಿ ಶೇ. ೭೫ರಷ್ಟು ಕ್ರಿಮಿನಲ್ ಕೇಸುಗಳು ಬರಖಾಸ್ತು ಆಗುತ್ತಿರುವುದನ್ನು ನೋಡುತ್ತಿದ್ದೇವೆ.




ಕೆಲವು ದೇಶಗಳಲ್ಲಿ ಮುಖ್ಯವಾಗಿ ಅರಬ್ ದೇಶಗಳಲ್ಲಿ ಕ್ರಿಮಿನಲ್ ಅಪರಾಧಗಳು "ನಿಲ್" ಅಂದರೂ ಹೆಚ್ಚಲ್ಲ. ಯಾಕೆಂದರೆ ಅಲ್ಲಿ ಕೊಲೆ ಇತ್ಯಾದಿ ಘೋರ ಅಪರಾಧಗಳನ್ನು ಮಾಡಿದ ಅವರನ್ನು ಚಿತ್ರಹಿಂಸೆಗೆ ಗುರಿಪಡಿಸಿ ಆಮೇಲೆ ಗಲ್ಲಿಗೇರಿಸುವ ಸಂಪ್ರದಾಯ ಜಾರಿಯಲ್ಲಿದೆ. ಉದಾಹರಣೆಗೆ, ಲೈಂಗಿಕ ಅತ್ಯಾಚಾರ ಎಸಗಿದವರ ಲಿಂಗವನ್ನು ಕತ್ತರಿಸಿ ಆಮೇಲೆ ಗಲ್ಲಿಗೇರಿಸುತ್ತಾರೆ. ಹೆಂಗಸರು ಪರಪುರುಷನ ಸಂಗ ಬೆಳೆಸಿದರೆ ಸಾರ್ವಜನಿಕ ಸ್ಥಳದಲ್ಲಿ ಕಲ್ಲೆಸೆದು ಅವರನ್ನು ಕೊಲ್ಲುತ್ತಾರೆ. ಇನ್ನು ಅಪರಾಧದ ಮಾನದಂಡಕ್ಕೆ ಅನುಸಾರವಾಗಿ ಅಪರಾಧಿಯ ತಲೆ ಕತ್ತರಿಸುವುದು, ಕೈ ಕಾಲು ಕಡಿದುಹಾಕುವುದು ಇದ್ದೇ ಇದೆ.

ಬುದ್ಧ, ಗಾಂಧೀ ಹುಟ್ಟಿದ ಈ ನಾಡಿನಲ್ಲಿ ಇದೆಲ್ಲಾ ಸಂಭವ ಅಲ್ಲದಿದ್ದರೂ ನಿರಪರಾಧಿ ವ್ಯಕ್ತಿಯನ್ನು ಕೊಂದ ಪಾತಕಿಗೆ ಮರಣದಂಡನೆಯೇ ಸೂಕ್ತ ಎಂಬುದರಲ್ಲಿ ಯಾರಿಗೂ ಭಿನ್ನಾಭಿಪ್ರಾಯ ಬೇಡ. ಮರಣದಂಡನೆಯ ಭಯದಿಂದ ಕನಿಷ್ಠ ಕೆಲವರಾದರೂ ಕೊಲೆ ಮಾಡಲು ಹಿಂಜರಿದಾರು. ಮರಣದಂಡನೆ ವಿಧಿಸದೆ ಬಿಟ್ಟುಬಿಟ್ಟರೆ ಕೊಲೆ ಪಾತಕಿ ಮುಂದೆ ಸುಧಾರಿಸಿಯಾನೆಂಬ ಭ್ರಮೆ ಯಾರಿಗೂ ಬೇಡ.

ಆದುದರಿಂದ ಹೀನ ಅಪರಾಧ ಮಾಡಿದವರಿಗೆ ಮರಣದಂಡನೆಯೇ ಸೂಕ್ತ ಎನ್ನುವುದನ್ನು ಮತ್ತೆ ಮತ್ತೆ ಹೇಳಬೇಕಾದ ಅವಶ್ಯಕತೆ ಖಂಡಿತಾ ಇಲ್ಲ.

■**ಎಂ. ವಿ. ಭಟ್**, ಬೆಂಗಳೂರು

## ಗಲ್ಲು ಶಿಕ್ಷೆ ಅಪರಾಧಕ್ಕೆ ಇರಲಿ, ಅಪರಾಧಿಗಲ್ಲ

**ಮೂ**ಲತಃ ಎರಡು ಪ್ರಶ್ನೆಗಳು ಉದ್ಭವಿಸುತ್ತವೆ. ಮೊದಲನೆಯದಾಗಿ ಒಂದು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ, ಮಾನವೀಯ ಕಾಳಜಿಯುಳ್ಳ ಸಮಾಜದಲ್ಲಿ ಮರಣದಂಡನೆಯ ಶಿಕ್ಷೆ ಉಚಿತವೇ ? ಎರಡನೆಯ ಪ್ರಶ್ನೆಯೆಂದರೆ ಸಮಾಜದ ಸ್ವಾಸ್ಥ್ಯವನ್ನು ಕದಡುವ, ದೇಶ ವಿದ್ರೋಹಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ, ಒಂದು ವ್ಯವಸ್ಥಿತ ಸಮಾಜದ ಬುನಾದಿಯನ್ನೇ ನೈತಿಕವಾಗಿ ಭ್ರಷ್ಟಗೊಳಿಸುವಂತಹ ಘೋರ ಅಪರಾಧ ಎಸಗಿದ ವ್ಯಕ್ತಿಗೆ ಮರಣದಂಡನೆಯೊಂದೇ ಸೂಕ್ತ ಶಿಕ್ಷೆಯೇ ? ಅಥವಾ ಅಪರಾಧಿ ವ್ಯಕ್ತಿ ತನ್ನ ಅಪರಾಧವನ್ನು ಅರ್ಥಮಾಡಿಕೊಂಡು ಮತ್ತೆ ಸಮಾಜದಲ್ಲಿ ಬಾಳುವ ಅವಕಾಶವನ್ನು ನೀಡಬೇಕಾಗಿರುವುದು ಒಂದು ಪ್ರಬುದ್ಧ ಸಮಾಜದ ಕರ್ತವ್ಯವಲ್ಲವೇ ? ಈ ಪ್ರಶ್ನೆಗಳು ದೇಶದ ಕಾನೂನು ವಲಯಗಳಲ್ಲಿ, ಬುದ್ಧಿಜೀವಿಗಳಲ್ಲಿ, ಮಾನವ ಹಕ್ಕು ಸಂಘಟನೆಗಳಲ್ಲಿ ಚರ್ಚೆಯಾಗುತ್ತಲೇ ಇವೆ. ಗಲ್ಲುಶಿಕ್ಷೆಗೆ ಗುರಿಯಾಗಿರುವ ಹಲವು ಅಪರಾಧಿಗಳು ಹಲವಾರು ವರ್ಷಗಳಿಂದ ಶಿಕ್ಷೆಯ ನಿರೀಕ್ಷೆಯಲ್ಲಿರುವಂತೆಯೇ ಮರಣದಂಡನೆಯ ಬಗ್ಗೆ ಚರ್ಚೆಗಳೂ ನಡೆಯುತ್ತಿವೆ. ಇತ್ತೀಚಿನ ದಿನಗಳಲ್ಲಿ ಈ ವಿವಾದ ರಾಜಕೀಯ ಮತ್ತು ಪ್ರಾದೇಶಿಕ ಸ್ವರೂಪ ಪಡೆದಿದ್ದು, ಸಮಾಜದಲ್ಲಿ ಒಡಕು ಮೂಡಿಸುತ್ತಿದೆ. ಯಾವುದೇ ನಾಗರಿಕ ಸಮಾಜದಲ್ಲಿ ಮರಣದಂಡನೆ ಶಿಕ್ಷೆ ಇರಕೂಡದು ಎಂಬ ಹಿನ್ನೆಲೆಯಲ್ಲಿ ಸರ್ಕಾರ ಈ ಕೂಡಲೇ ಈ ಶಿಕ್ಷೆಯನ್ನೇ ರದ್ದುಪಡಿಸಬೇಕಾಗಿದೆ. ಯಾವುದೇ ರೀತಿಯ ಹಿಂಸೆಯನ್ನು ತಿರಸ್ಕರಿಸುವ ನಾಗರಿಕತೆಯ ಉನ್ನತ ಹಂತದಲ್ಲಿ ನಾವಿದ್ದೇವೆ. ಮಾನವ ಸಮಾಜ ನಾಗರಿಕತೆಯ ಮೆಟ್ಟಿಲುಗಳನ್ನು ಏರುತ್ತಿರುವಂತೆಯೇ ಸಮಾಜದಲ್ಲಿನ ಹಿಂಸೆಯೂ ಕ್ಷೀಣಿಸುತ್ತಿದೆ. ಹಾಗಾಗಿ ಮರಣದಂಡನೆ ರೂಪದಲ್ಲಿ ನಡೆಸಲಾಗುವ ಕಾನೂನು ಸಮ್ಮತ ಹತ್ಯೆಯನ್ನು ನಿಷೇಧಿಸುವುದು ಮಹತ್ವದ ಸಂಕೇತವಾಗುತ್ತದೆ. ತತ್ಪರಿಣಾಮವಾಗಿ ಸಮಾಜದ ಇತರ ಕ್ಷೇತ್ರಗಳಲ್ಲಿನ ಹಿಂಸೆಯೂ ಕ್ಷೀಣಿಸಬಹುದು. ವಿಶ್ವದ ಅನೇಕ ರಾಷ್ಟ್ರಗಳು ಮರಣದಂಡನೆಯನ್ನು ನಿಷೇಧಿಸಿವೆ. ಯೂರೋಪ್‌ನಲ್ಲಿ ಬೆಲಾರಸ್ ಮರಣದಂಡನೆಯನ್ನು ವಿಧಿಸುವ ಏಕೈಕ ರಾಷ್ಟ್ರವಾಗಿದ್ದರೆ, ಅಮೆರಿಕದ ಎಲ್ಲ ಪ್ರಾಂತ್ಯಗಳಲ್ಲಿ ಈ ಶಿಕ್ಷೆಯನ್ನು ವಿಧಿಸಲಾಗುತ್ತದೆ.

ಭಯೋತ್ಪಾದನೆ ಅಥವಾ ಉಗ್ರ ಕೃತ್ಯಗಳಲ್ಲಿ ತೊಡಗಿರುವ ಯಾವುದೇ ವ್ಯಕ್ತಿಗಳಿಗೆ, ಸಂಘಟನೆಗಳಿಗೆ ಸಾವು ಎನ್ನುವುದು ಸಹಜವಾಗಿ ಅಪ್ಪಿಕೊಳ್ಳಬಹುದಾದ ವಿದ್ಯಮಾನವಾಗಿರುತ್ತದೆ. ಯಾವುದೇ ನಿರ್ಬಂಧಕ ಕಾಯ್ದೆಗಳೂ ಅವರನ್ನು ಧೃತಿಗೆಡಿಸಲಾರವು. ಹಾಗೆಂದ ಮಾತ್ರಕ್ಕೆ ಶಿಕ್ಷೆ ನೀಡುವುದೇ ಬೇಡವೆಂದಲ್ಲ. ಮರಣದಂಡನೆಯಂತಹ ಅಮಾನವೀಯ, ಅನಾಗರಿಕ ಪದ್ಧತಿಯನ್ನು ಆಧುನಿಕ ಸಮಾಜ ಒಪ್ಪಿಕೊಳ್ಳುವುದು ಆಭಾಸ ಎನಿಸುತ್ತದೆ. ಎಂತಹ ಪಾತಕಿಯಾದರೂ ಒಂದು ಕಾಲಘಟ್ಟದಲ್ಲಿ ತನ್ನ ತಪ್ಪಿನ ಅರಿವಾಗಿ ತಿದ್ದಿಕೊಳ್ಳುವ ಸಾಧ್ಯತೆ ಇರುತ್ತದೆ. ಪಾತಕಿಗಳ ಮನಃಪರಿವರ್ತನೆಗೆ ಅವಕಾಶ ನೀಡುವುದು ಒಂದು ಪ್ರಬುದ್ಧ ಪ್ರಜಾಸತ್ತಾತ್ಮಕ ಸಮಾಜದ ಆದ್ಯತೆಯಾಗಿರಬೇಕು. ಈ ನಿಟ್ಟಿನಲ್ಲಿ ಆರೋಪಿಗಳಿಗೆ ಜೀವಾವಧಿ ಶಿಕ್ಷೆ ನೀಡುವುದು ಸೂಕ್ತ ಎನಿಸುತ್ತದೆ. ವಿಪರ್ಯಾಸವೆಂದರೆ ದೇಶದ ಸುಶಿಕ್ಷಿತ ಜನರಲ್ಲೂ ಸಹ ಮರಣದಂಡನೆಯ ಬಗ್ಗೆ ಸಕಾರಾತ್ಮಕ ನಿಲುವೇ ಕಂಡುಬರುತ್ತದೆ.

ಮಾನವೀಯ ನೆಲೆಗಟ್ಟಿನಲ್ಲಿ ನೋಡಿದಾಗ ಮರಣದಂಡನೆ ಶಿಕ್ಷೆ ನೀಡುವುದೇ ಅಪರಾಧವೆನಿಸುತ್ತದೆ. ಬಲವಂತ್ ಸಿಂಗ್ ಪ್ರಕರಣ ಈ ನಿಟ್ಟಿನಲ್ಲಿ ನಿದರ್ಶನವಾಗಿ ನಿಲ್ಲುತ್ತದೆ. ಪಾತಕಿಗಳು ಜನಿಸುವುದಿಲ್ಲ, ಸಮಾಜವೇ ಪಾತಕಿಗಳನ್ನು ಸೃಷ್ಟಿಸುತ್ತದೆ ಎಂಬ ನಾಣ್ನುಡಿಯ ಹಿನ್ನೆಲೆಯಲ್ಲಿ ಯೋಚಿಸಿದಾಗ ಸಮಾಜದಲ್ಲಿ ಕಂಡುಬರುತ್ತಿರುವ ಪಾತಕಿ ಕೃತ್ಯಗಳನ್ನು ತಡೆಗಟ್ಟಲು ಒಂದು ಮಾನವೀಯ ಮೌಲ್ಯಗಳುಳ್ಳ ಮಾರ್ಗವನ್ನು ಅನುಸರಿಸುವುದು ಸೂಕ್ತ ಎನಿಸುತ್ತದೆ. ಮರಣದಂಡನೆ ಈ ಚೌಕಟ್ಟಿಗೆ ಒಳಪಡುವುದಿಲ್ಲ. ಶಿಕ್ಷೆಯಾಗಬೇಕಿರುವುದು ಅಪರಾಧ ಮತ್ತು ಅಪರಾಧ ಪ್ರಜ್ಞೆಗೇ ಹೊರತು ಅಪರಾಧಿಗಲ್ಲ.

■**ನಾ. ದಿವಾಕರ**, ಮೈಸೂರು

## ನೇಣಿನೊಳಗಿಲ್ಲ ಪ್ರಾಯಶ್ಚಿತ್ತ, ಮಾನವೀಯತೆಯಲ್ಲಿದೆ

ಅಕ್ಷಮ್ಯ ಅಪರಾಧಗಳಿಗೆ ವಿಧಿಸಿದ ಗಲ್ಲುಶಿಕ್ಷೆ ಪ್ರಸ್ತುತ ಕಾನೂನು ರೀತಿಯಿಂದ ಮಾನ್ಯವಾಗಿದ್ದರೂ ಇದರಲ್ಲಿ ಪ್ರಾಯಶ್ಚಿತ್ತಕ್ಕೆ ಅವಕಾಶವಿಲ್ಲ. ಮಾನವ ಒಬ್ಬನಿಗೆ ಜೀವ ಕೊಡಬಹುದೇ ಹೊರತು ಜೀವ ತೆಗೆಯುವ ಹಕ್ಕು ಯಾರಿಗೂ ಇಲ್ಲ. ಗಲ್ಲುಶಿಕ್ಷೆಯ ಅಂತಿಮ ಕ್ಷಣಗಳನ್ನು ಕಲ್ಪಿಸಿಕೊಂಡಾಗ ಮಾನವೀಯತೆಯುಳ್ಳವರ ಕಣ್ಣು ಅರೆಕ್ಷಣ ತೇವವಾಗುತ್ತದೆ. ಈ ನಾಡಿನಲ್ಲಿ ಘನಘೋರ ಕೃತ್ಯ ಮಾಡಿದ ಎಷ್ಟೆಷ್ಟೋ ಪಾಪಿಗಳು ಕಾನೂನಿನ ಕಣ್ಣಿಗೆ ಮಣ್ಣೆರಚಿ ಪಾರಾಗಿಲ್ಲವೇ ! ಅವರಿಗಿಲ್ಲದ ಗಲ್ಲು ಶಿಕ್ಷೆ ಕೆಲವರಿಗೆ ಮಾತ್ರ ಏಕೆ ? ಅಪರಾಧ ಸಾಬೀತಾಗಿದ್ದರೂ ಕಣ್ಣಿಗೆ ಕಣ್ಣು, ಕೊಲೆಗೆ ಕೊಲೆ, ಏಟಿಗೆ ಎದುರೇಟು ಎಂಬ ತತ್ವ ಎಷ್ಟು ಸೂಕ್ತ ? ಅಹಿಂಸೆ, ಕ್ಷಮಾ ಗುಣಗಳನ್ನು ಜನಮಾನಸದ ಉಸಿರುಸಿರಲ್ಲೂ ಬಿಂಬಿಸುತ್ತಾ ವಿದೇಶಿಯರಿಗೆ ಮಾದರಿಯಾದಂತಹ ನೆಲದಲ್ಲಿ ಈ ರೀತಿಯ ಕ್ಷಮಾರಹಿತ 'ಗಲ್ಲುಬಲಿ' ಎಷ್ಟು ಸಮಂಜಸ?

ಅತ್ಯಾಚಾರ ಮಾಡಿ ಕೊಲೆ ಮಾಡಿದವನಿಗೆ ಗಲ್ಲು ಶಿಕ್ಷೆ ವಿಧಿಸಿದರೆ ಬಲಿಯಾದಾಕೆ ಬದುಕಿಬರಬಲ್ಲಳೆ ? ಮನೆಯವರ ದುಃಖಕ್ಕೆ, ನೋವಿಗೆ ಸಾಂತ್ವನ ಸಿಗುತ್ತದೆಯೇ ? ಇದರೊಂದಿಗೆ ಅಪರಾಧಿಯ ಕುಟುಂಬವನ್ನು ಸಹ ದುಃಖ ಸಾಗರದಲ್ಲಿ ಮುಳುಗಿಸಿದಂತಾಗುತ್ತದೆ. ಅಪರಾಧಿಗೆ ಗಲ್ಲುಶಿಕ್ಷೆಯಾದ ನಂತರವೂ ಇಂತಹ ಕೃತ್ಯಗಳಿಗೆ ಕಡಿವಾಣ ಬೀಳುವುದೇ? ಖಾತ್ರಿಯಿಲ್ಲ. ಒಂದು ವೇಳೆ ಅಕ್ಷಮ್ಯ ಅಪರಾಧಿ ಎಂದೇ ಭಾವಿಸಿದರೆ ಅವನಿಗೆ ಗಲ್ಲು ಶಿಕ್ಷೆಯಿಂದ ಸುಖವಾದ ಮರಣ ಪ್ರಾಪ್ತಿಯಾಗಿ ಅವನು ಪಾಪದಿಂದ ಮುಕ್ತಿ ಹೊಂದುತ್ತಾನೆ. ಇದರಿಂದ ಅವನಿಗೆ ಶಿಕ್ಷೆ ವಿಧಿಸಿದಂತಾಗದು. ಬದಲಿಗೆ ಆತ ಬದುಕಿನುದ್ದಗಲಕ್ಕೂ ನರಳಿನರಳಿ ನೋವಿನಿಂದ, ಒಂಟಿತನದ ಭಾವದಿಂದ ಜೀವನ ಪೂರ್ತಿ ಜೈಲಿನಲ್ಲಿ ಕೊಳೆಯುವಂತೆ ಮಾಡಿ ಜೀವಾವಧಿ ಶಿಕ್ಷೆ ನೀಡುವುದೇ ಸೂಕ್ತ. ಅಥವಾ ಸಮಾಜದ ಮುಖ್ಯ ವಾಹಿನಿಯಲ್ಲಿ ಅವನು ತಲೆ ತಗ್ಗಿಸುವಂತೆ ಹೀನಾಯವಾಗಿ ತೇಜೋವಧೆ ಮಾಡಿ ಎಲ್ಲಾ ಮೂಲಭೂತ ಸೌಲಭ್ಯಗಳಿಂದ ವಂಚಿತನಾಗುವಂತೆ ನೋಡಿಕೊಳ್ಳಬೇಕು. ಆಗ ಅವನ ಪಾಪಕೃತ್ಯದಿಂದ ಬಲಿಯಾದವರ ಆತ್ಮಕ್ಕಾದರೂ ಸಮಾಧಾನವಾಗ ಬಹುದೇನೋ ? ಮುಂದೆ ಇಂತಹ ಕೃತ್ಯ ಎಸಗುವ ಪಾಪಿಗಳಿಗೆ ಇದೊಂದು ಎಚ್ಚರಿಕೆಯ ಪಾಠವಾಗಿ ಅಪರಾಧ ಪ್ರಕರಣಗಳು ಕಡಿಮೆಯಾಗ ಬಹುದೇನೊ ! ಇದರಿಂದ ಮಾನವೀಯತೆಗೆ ಬೆಲೆಕೊಡುವ ಭಾರತದಂತಹ ನಾಡಿನಲ್ಲಿ ಅಹಿಂಸೆಯ ಮೌಲ್ಯವನ್ನು ಎತ್ತಿ ಹಿಡಿದಂತಾಗುತ್ತದೆ. ಹೀಗಾಗಿ ಗಲ್ಲು ಶಿಕ್ಷೆಗೆ ಬದಲಾಗಿ ಜೀವಾವಧಿ ಶಿಕ್ಷೆ ಜಾರಿ ಮಾಡಿ ಇಂಥ ವಿಕೃತ ಮನಸ್ಸುಗಳಲ್ಲಿ ಅನುಕಂಪ, ಮಮತೆ, ಒಂದಿಷ್ಟು ಮಾನವೀಯತೆಯ ಮಮಕಾರಗಳನ್ನು ಬಿತ್ತಬೇಕಾಗಿದೆ. ಹಾಗಾದಾಗ ಮಾತ್ರ ಇಂತಹ ವಿಕೃತ ಪ್ರಕರಣಗಳು, ವಿಕೃತ ಮನಸ್ಸುಗಳು ಮತ್ತು ವಿಕೃತ ವಿಚಾರಗಳು ನಾಶವಾಗಿ ಪಾಪ ಕೃತ್ಯಗಳು ಇಲ್ಲವಾಗುತ್ತವೆ. ಆಗ ಗಲ್ಲು ಶಿಕ್ಷೆ ವಿಧಿಸಬೇಕೆಂದರೂ ಅರ್ಹ ಅಪರಾಧಿಗಳು ಸಿಗದೇ ಹೋಗಬಹುದು. ಹೀಗಾಗಲು ಸಕಲ ಜೀವರಾಶಿಗಳಿಗೂ ಲೇಸನ್ನೇ ಬಯಸುವ ಮನಸ್ಸುಗಳನ್ನು ಎಲ್ಲೆಡೆ ಹರಡಿಸಲು ಪ್ರಯತ್ನಿಸಬೇಕಾಗಿದೆ.

■ **ವೆಂಕಟೇಶ ಕೆ. ಜನಾದ್ರಿ**, ಕಲಬುರಗಿ

## ಮರಣದಂಡನೆ ಬೇಕು

ದಿನನಿತ್ಯ ಮುಂಜಾನೆ ದಿನಪತ್ರಿಕೆ ಓದಲು ತೆಗೆದುಕೊಂಡರೆ ಕೊಲೆ, ಸುಲಿಗೆ, ಅತ್ಯಾಚಾರ, ರಸ್ತೆ ದರೋಡೆ, ಆಗಾಗ ಉಗ್ರರ ದಾಳಿ ಈ ಸುದ್ದಿಗಳನ್ನು ತಪ್ಪದೆ ನೋಡುತ್ತೇವೆ. ಅಪರಾಧದ ಪ್ರಮಾಣ ಈ ರೀತಿ ಹೆಚ್ಚುತ್ತಿರುವ ಈ ದಿನಗಳಲ್ಲಿ ಮರಣದಂಡನೆ ರದ್ದುಪಡಿಸುವ ಪ್ರಯೋಗ ನಮ್ಮ ದೇಶಕ್ಕೆ ಅಪಾಯಕಾರಿ ಎನಿಸುತ್ತದೆ. ಮರಣದಂಡನೆಯನ್ನು ರದ್ದುಗೊಳಿಸಬೇಕೆ ಎಂಬ ವಿಷಯವನ್ನು ಭಾರತೀಯ ಕಾನೂನು ಆಯೋಗವು ಕೂಲಂಕಷವಾಗಿ ವಿಚಾರಿಸಿ ತನ್ನ ವರದಿಯಲ್ಲಿ ಹೀಗೆ ಹೇಳಿದೆ : "ಭಾರತದಲ್ಲಿರುವ ಸ್ಥಿತಿ–ಗತಿ, ನೈತಿಕ ಮತ್ತು ವಿದ್ಯಾಮಟ್ಟದಲ್ಲಿರುವ ಅಸಮತೆ, ಈ ದೇಶದ ವಿಶಾಲತೆ, ಭಿನ್ನತೆ, ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವುದರ ಪ್ರಾಮುಖ್ಯತೆ ಇವೆಲ್ಲವುಗಳನ್ನು ಗಮನದಲ್ಲಿಟ್ಟು ಕೊಂಡು ಇಂದಿನ ಸ್ಥಿತಿಯಲ್ಲಿ ಭಾರತವು ಮರಣದಂಡನೆಯನ್ನು ರದ್ದುಗೊಳಿಸುವ ಅಪಾಯಕಾರಿ ಪ್ರಯೋಗ ಮಾಡುವುದು ಸೂಕ್ತವಲ್ಲ" ಎಂದು ಹೇಳಿದೆ.

**ಓದುಗರ ವೇದಿಕೆ**

ಅಸ್ಪೃಶ್ಯತೆಯ ಅನಿಷ್ಟವನ್ನು ತೊಡೆದುಹಾಕಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಗಾಂಧಿ, ಅಂಬೇಡ್ಕರ್ ನಡುವೆ ಭಿನ್ನಾಭಿಪ್ರಾಯವಿದ್ದರೂ, ಮರಣದಂಡನೆ ರದ್ದುಗೊಳಿಸಬೇಕೆನ್ನುವ ಅಭಿಪ್ರಾಯದಲ್ಲಿ ಇಬ್ಬರೂ ಒಮ್ಮತ ಹೊಂದಿದ್ದರು. ಆದರೆ ಈ ಮಹಾನ್ ನಾಯಕರ ಆಶಯಗಳು ಈ ನೆಲದ ಕಾನೂನಿನಲ್ಲಿ ಮಿಳಿತವಾಗಿಲ್ಲ ಎನ್ನುವುದು ದುರದೃಷ್ಟಕರ. ಆ್ಯಮ್ನೆಸ್ಟಿ ಅಂತರರಾಷ್ಟ್ರೀಯ ವರದಿಯಲ್ಲಿ "ಮರಣದಂಡನೆ ಶಿಕ್ಷೆಯು ಪ್ರತಿವಾದಿ ವಕೀಲರ ಸಾಮರ್ಥ್ಯ ಹಾಗೂ ನ್ಯಾಯಾಧೀಶರ ವೈಯಕ್ತಿಕ ಒಲವು–ನಿಲುವಿನ ಮೇಲೆ ನಿಂತಿರುತ್ತವೆ. ಮರಣದಂಡನೆ ಪ್ರಶ್ನೆಯು ವ್ಯಕ್ತಿನಿಷ್ಠ ಅಂಶಗಳಿಂದ ಮುಕ್ತವಾಗಿಲ್ಲ" ಎಂದು ವ್ಯಾಖ್ಯಾನಿಸಿದೆ.

ಗಲ್ಲು ಶಿಕ್ಷೆ ವಿರುದ್ಧ ಮೇಲ್ಮನವಿ ಸಲ್ಲಿಸಲು ಭಾರತದಲ್ಲಿ ವಿವಿಧ ಹಂತಗಳ ಅವಕಾಶವಿದೆ. ವಿಚಾರಣಾ ನ್ಯಾಯಾಲಯ ಮರಣದಂಡನೆ ಶಿಕ್ಷೆ ವಿಧಿಸಿದರೆ ಅದನ್ನು ಹೈಕೋರ್ಟಿನಲ್ಲಿ ಪ್ರಶ್ನಿಸಬಹುದು. ಹೈಕೋರ್ಟ್ ಶಿಕ್ಷೆಯನ್ನು ಎತ್ತಿಹಿಡಿದರೆ ಸುಪ್ರೀಂ ಕೋರ್ಟಿಗೆ ಹೋಗಬಹುದು. ಸುಪ್ರೀಂ ಕೋರ್ಟ್ ತೀರ್ಪು ಗಲ್ಲು ಶಿಕ್ಷೆಯನ್ನು ಸ್ವೀಕರಿಸಿದರೆ, ರಾಷ್ಟ್ರಪತಿಗೆ ಕ್ಷಮಾದಾನ ಅರ್ಜಿ ಸಲ್ಲಿಸಬಹುದು. ರಾಷ್ಟ್ರಪತಿ ನಿರ್ಧಾರವೇ ಅಂತಿಮ. ಆದರೆ ಇದಕ್ಕೆ ನಿರ್ದಿಷ್ಟ ಕಾಲಮಿತಿ ನಿಗದಿ ಪಡಿಸಿಲ್ಲ. ಆದ್ದರಿಂದ ರಾಷ್ಟ್ರಪತಿಗಳ ಮುಂದಿರುವ ಅಪರಾಧಿಗಳ ಮನವಿಯ ಪತ್ರಗಳು ಧೂಳು ತಿನ್ನುತ್ತಿವೆ. ದಶಕಗಳು ಕಳೆದರೂ ಇನ್ನೂ ಇತ್ಯರ್ಥವಾಗದ ಹಲವು ಪ್ರಕರಣಗಳು ಇವೆ. ಇದು ಈಗ ಕಾನೂನು ವಲಯದಲ್ಲಿ ವ್ಯಾಪಕ ಚರ್ಚೆಗೆ ಗ್ರಾಸವಾಗಿದೆ. ಈ ರೀತಿ ವಿಳಂಬವಾದಲ್ಲಿ ಶಿಕ್ಷೆಗೆ ಒಳಗಾದ ಅಪರಾಧಿಯನ್ನು ತೀವ್ರ ಲಕ್ಷ್ಯ ವಹಿಸಿ ಜೈಲಿನಲ್ಲಿ ಇಡಬೇಕಾಗುತ್ತದೆ. ಆತ ಬೇರೊಬ್ಬ ಕೈದಿಯ ಜೊತೆ ಸಂಪರ್ಕ ಬೆಳೆಸದ ಹಾಗೆ ವಿಶೇಷ ಗಮನ ನೀಡಬೇಕಾಗುತ್ತದೆ. ಇದರಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚು ಖರ್ಚು ಬೀಳುತ್ತದೆ. ತಾಜ್ ಹೋಟೆಲ್ ಬಾಂಬ್ ಸ್ಫೋಟ ರೂವಾರಿ ಕಸಬ್ ಇದಕ್ಕೆ ಉತ್ತಮ ಉದಾಹರಣೆ.

ಮರಣದಂಡನೆಯು ಅತ್ಯುತ್ತಮ ವಿಧಾನ ಹೊಂದಿರಬೇಕಾದ ಪ್ರಮುಖ ಅಂಶಗಳನ್ನು ಸುಪ್ರೀಂ ಕೋರ್ಟ್ ಪಟ್ಟಿ ಮಾಡಿದೆ. ಆ ಅಂಶಗಳು :

೧. ಮರಣದಂಡನೆ ವಿಧಾನ ಸರಳವಾಗಿದ್ದು, ತ್ವರಿತವಾಗಿ ಜೀವ ಹಾರಬೇಕು.
೨. ಮರಣದಂಡನೆ ವಿಧಾನ ಪ್ರಾರಂಭವಾದ ತಕ್ಷಣ ಅಪರಾಧಿಯ ಪ್ರಜ್ಞೆ ತಪ್ಪಿಸಬೇಕು.
೩. ಯಾವ ಹಂತದಲ್ಲೂ ಅಪರಾಧಿಗೆ ಅವಮಾನ ಆಗಬಾರದು.
೪. ದೇಹದ ಯಾವುದೇ ಅಂಗ ಊನವಾಗಬಾರದು.

ಇದರ ಜೊತೆಗೆ ಯುನೆಸ್ಕೋ 'ಮರಣದಂಡನೆ ವಿಧಾನ ಅತಿ ಕಡಿಮೆ ನೋವಿನೊಂದಿಗೆ ಜಾರಿಯಾಗಬೇಕು' ಎಂದು ಸೇರಿಸಿದೆ.

ಜಗತ್ತಿನಲ್ಲಿ ೧೨೭ ದೇಶಗಳು ಗಲ್ಲು ಶಿಕ್ಷೆ ರದ್ದುಮಾಡುವುದಕ್ಕೆ ಒಪ್ಪಿವೆ. ಈಗಾಗಲೇ ೧೧೦ ರಾಷ್ಟ್ರಗಳು ರದ್ದುಗೊಳಿಸಿವೆ. ಆದರೆ ಭಾರತ, ಚೀನಾ, ಅಮೆರಿಕ ಸೇರಿದಂತೆ ೭೦ ರಾಷ್ಟ್ರಗಳಲ್ಲಿ ಈ ಶಿಕ್ಷೆ ಇನ್ನೂ ಚಾಲ್ತಿಯಲ್ಲಿದೆ.

ಮರಣದಂಡನೆ ಶಿಕ್ಷೆಯಲ್ಲಿ ಸಮಾಜದ ಘಟನೆಗಳನ್ನು ಸಂದರ್ಭದ ನೆಲಗಟ್ಟಿನಲ್ಲಿ

"ಜೀವ ಕೊಡುವವನು ದೇವರು. ಅದು ಮನುಷ್ಯನಿಂದ ಸಾಧ್ಯವಿಲ್ಲ. ಹಾಗಿದ್ದ ಮೇಲೆ ಜೀವ ಕಸಿದುಕೊಳ್ಳಲು ಅವನಾರು ? ಹೀನಕೃತ್ಯ ಮಾಡಿದಂತಹ ಸಂದರ್ಭಗಳಲ್ಲೂ ಗಲ್ಲು ಶಿಕ್ಷೆ ಕೊಡುವುದು ಉಚಿತವಲ್ಲ. ಅಪರಾಧಿಗೆ ಆತನ ತಪ್ಪು ತಿದ್ದಿಕೊಳ್ಳಲು ಅವಕಾಶ ಕೊಡಬೇಕು. ಅತಿ ಕ್ರೂರವಾದ ಕೃತ್ಯ ಎಸಗಿದ ಸಂದರ್ಭಗಳಲ್ಲಿ "ಜೀವನಪರ್ಯಂತ ಜೈಲಿನಲ್ಲಿ ಇರುವಂತಹ" ಜೀವಾವಧಿ ಶಿಕ್ಷೆ ನೀಡಬಹುದು.

■ **ರವಿ ಬಿ. ನಾಯಕ್** (ಹೈಕೋರ್ಟು ಮಾಜಿ ನ್ಯಾಯಮೂರ್ತಿಗಳು)




ನೋಡಲಾಗುತ್ತದೆ. ಮಾನವನ ಯಾವುದೇ ನಡವಳಿಕೆಯನ್ನು ಸಂದರ್ಭವನ್ನು ಹೊರತು ಪಡಿಸಿ ವಿವರಿಸಲು ಸಾಧ್ಯವಿಲ್ಲ. ಆದ್ದರಿಂದ ಅಪರಾಧ ಘಟಿಸಿದ ಸಂದರ್ಭಕ್ಕನುಸಾರವಾಗಿ ನ್ಯಾಯ ತೀರ್ಮಾನ ಆಗಬೇಕು. ರಾಜಕೀಯ ಕೊಲೆಗಳು ನಡೆದಾಗ ಗಲ್ಲಿಗೇರಿದವರು ಅವರ ಹಿಂಬಾಲಕರಿಗೆ ಹುತಾತ್ಮರೇ. ಗೋಡ್ಸೆ, ಗಾಂಧಿವಾದಿಗಳಿಗೆ ಕೊಲೆಗಡುಕನಾದರೆ ಗಾಂಧಿ ವಿರೋಧಿಗಳಿಗೆ ರಾಷ್ಟ್ರ ರಕ್ಷಕ. ಭಗತ್ ಸಿಂಗ್ ಮತ್ತಿತರರು ಬ್ರಿಟಿಷರಿಗೆ ಕೊಲೆಗಡುಕರು. ಭಾರತೀಯರಿಗೆ ನಾಯಕರು, ಹುತಾತ್ಮರು. ವ್ಯಕ್ತಿಯೊಬ್ಬನ ಪ್ರತೀಕ ಸಾಂದರ್ಭಿಕವಾಗಿ ಬದಲಾಗುತ್ತ ಹೋಗುತ್ತದೆ.

ದೇಶದ್ರೋಹ, ರಾಜ್ಯ ರಹಸ್ಯಗಳನ್ನು ಬಯಲು ಮಾಡುವ ವ್ಯಕ್ತಿಗಳಿಗೆ ಮರಣದಂಡನೆ ಬೇಕೇಬೇಕು. ಆದಷ್ಟು ವಿಚಾರಣೆ ಮಾಡಿ ಮೇಲಿನವುಗಳಿಗೆ ಹೊರತಾಗಿದ್ದರೆ, ದೀರ್ಘಾವಧಿ ಅಥವಾ ಆ ವ್ಯಕ್ತಿ ಜೀವಂತ ಇರುವವರೆಗೂ ಕಾರಾಗೃಹ ಬಂಧಿಯಾಗಿರಬೇಕು. ಅದನ್ನು ಅನುಭವಿಸುವ ಮಾನಸಿಕ ತೊಳಲಾಟವೇ ಅವನಿಗೆ ಶಿಕ್ಷೆ. ಆ ವ್ಯಕ್ತಿ ಅವಧಿ ಮುಗಿಯುವುದರೊಳಗೆ ಮಾನಸಿಕ ಪರಿವರ್ತನೆ ಹೊಂದಬಹುದು.

ಅಪರಾಧಗಳನ್ನು ತಡೆಯುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿರುವ ಮರಣದಂಡನೆಯ ಶಿಕ್ಷೆಯನ್ನು ನಮ್ಮ ಸುಪ್ರೀಂ ಕೋರ್ಟ್ ನೀಡಿದ ಸಲಹಾ ಸೂತ್ರದಂತೆ ಸಾಮಾನ್ಯವಾಗಿ ಜೀವಾವಧಿ ಶಿಕ್ಷೆ ಕೊಡಬೇಕು. ಅತ್ಯಂತ ಕ್ರೂರ, ಅಮಾನುಷ, ಹಿಂಸಾಕೃತ್ಯದ ಅಪರಾಧಕ್ಕೆ ಮರಣದಂಡನೆಯನ್ನು ವಿಧಿಸಬೇಕು. ಭಾರತ ದಲ್ಲಿಯ ಕೆಲ ಹಿಂಸಾತ್ಮಕ ಚಟುವಟಿಕೆಗಳನ್ನು ಗಮನಿಸಿದಾಗ ಮರಣದಂಡನೆ ಶಿಕ್ಷೆಯನ್ನು ಕಾನೂನು ಪುಸ್ತಕದಲ್ಲಿ ಉಳಿಸುವುದು ಅನಿವಾರ್ಯ.

■ **ಯು. ಎಸ್. ಸಂಗನಾಳಮಠ**, ಹೊನ್ನಾಳಿ

## ಮರಣದಂಡನೆ ಏಕೆ, ಹೇಗೆ ?

'ಮರಣದಂಡನೆ' ಎಂಬುದರ ಅರ್ಥ ಕಲ್ಪನೆಯೇ ಭಯಾನಕವಾದುದು, ಮಾನವೀಯತೆಯಿಂದ ದೂರವಾದುದು. ಏನಿದು ಮರಣದಂಡನೆ ? ಸಾಯಿಸುವ ಅಪರಾಧಿಗೆ ಸಾಯುವ ಶಿಕ್ಷೆ. ಅಪರಾಧಿ ಕೊಲ್ಲುವ, ಮಾಡಬಾರದ ಹೇಯ ಕೆಲಸ ಮಾಡಿದ್ದಾನೆ, ಹೀಗಾಗಿ ಅವನನ್ನು ಕೊಂದುಬಿಟ್ಟರೆ ಎಲ್ಲ ಸರಿಹೋಗುತ್ತದೆಯೇ ? ಇದರಿಂದ ಅಪರಾಧಿ ನಿಜಕ್ಕೂ ಶಿಕ್ಷೆ ಅನುಭವಿಸುತ್ತಾನೆಯೇ, ಇನ್ನುಮುಂದೆ ಆ ತರಹದ ಅಪರಾಧಗಳು ಕಡಿಮೆಯಾಗುತ್ತವೆಯೇ ಎಂಬುದನ್ನು ನೋಡಿದರೆ ಇಲ್ಲವೆನಿಸುತ್ತದೆ.

ಮನುಷ್ಯ ಮನುಷ್ಯನನ್ನು ಕೊಲ್ಲುವುದು ಘೋರ. ಅದರಲ್ಲೂ, ನಾಗರಿಕ, ವಿದ್ಯಾವಂತ ಜಗತ್ತು ಒಂದು ಜೀವವನ್ನು ನಿರ್ದಯದಿಂದ ಕೊಲ್ಲುವುದು ಘೋರ. ಅಂಥವನು ಅವಿವೇಕಿ. ಆತ ಮಾಡಿದ್ದನ್ನೇ ನಾವು ಮಾಡಿದರೆ ಅದು ತಪ್ಪಾಗುತ್ತದೆ, ಅಷ್ಟಕ್ಕೂ ಆತ ತಾನು ಮಾಡಿದ ಅಪರಾಧಕ್ಕಾಗಿ ಶಿಕ್ಷೆಯನ್ನು ಪೂರಾ ಅನುಭವಿಸುವುದೇ ಇಲ್ಲ. ಆತ ತನ್ನ ಅಪರಾಧಕ್ಕಾಗಿ ಶಿಕ್ಷೆಯನ್ನು ಅನುಭವಿಸಬೇಕಾದರೆ ಆತನಿಗೆ ದೈಹಿಕವಾಗಿ ಶ್ರಮದಾಯಕ ಕೆಲಸಗಳನ್ನು ಕೊಟ್ಟು ಬೆವರು ಕೀಳಿಸಬೇಕು, ಅಯ್ಯೋ ! ಸಾಕಪ್ಪ ಸಾಕು, ಈ ಕೆಲಸ ಎಂದು ಮೇಲೆ ನೋಡಬೇಕು. ಹಾಗೆ ಇಂತಹವರ ಕೊಬ್ಬು ಕರಗಿಸಬೇಕು. ಎತ್ತುಗಳ ಬದಲಿಗೆ ಇಂತಹ ಗೂಳಿಗಳನ್ನು ಕಟ್ಟಿ ನನ್ನಂತಹ ರೈತ ಚಾಟಿಯಿಂದ ಬಾರಿಸಬೇಕು, ಆತ ನೋವುಣ್ಣಬೇಕು, ದಾಹವಾಗಿ 'ಅಣ್ಣಾ ನೀರು ನೀರು' ಎನ್ನಬೇಕು, ಹಸಿವಾಗಿ 'ಊಟ ಊಟ' ಎನ್ನಬೇಕು, ಆಗ ಉಣಿಸಬೇಕು – ಇದು ನಿಜವಾದ ಶಿಕ್ಷೆ. ಹೆಡೆಮುರಿ ಕಟ್ಟಿ ಹೆಗಲಿಗೆ ನೊಗ ಹೊತ್ತು ಚಾಟಿಯಿಂದ ಹೊಡೆಸಿಕೊಂಡು ಇವರು ಮಾಡಿದ ಘನಕಾರ್ಯವನ್ನು ನೆನಪಿಸುತ್ತಾ ಹಿಂಬದಿಗಳಿಗೆ ಜಾಡಿಸಿ ಒದೆಯಬೇಕು. ಅವರು ಅವಮಾನ ಅನುಭವಿಸಬೇಕು. ಅದುವೇ ನಿಜವಾದ ಶಿಕ್ಷೆ. ಆಗ ಗುಟುಕು ನೀರಿನ ಬೆಲೆ, ಅಗುಳು ಅನ್ನದ ಬೆಲೆ ಏನೆಂದು ತಿಳಿಯುತ್ತದೆ.

ಸರ್ಕಾರವು ವಿಚಾರಣೆಯ ನೆಪದಲ್ಲಿ ಕೋಟಿಗಟ್ಟಲೆ ಹಣವನ್ನು 'ಘನಂದಾರಿ' ಕೆಲಸ ಮಾಡಿದ ಉಗ್ರರನ್ನು ರಕ್ಷಿಸಲು ಬಳಸುತ್ತಲ್ಲಾ ? ಯಾರಿತ್ತರು ಈ ಹಕ್ಕು? ಇಂತಹವರನ್ನು ಬೇಗ ವಿಚಾರಣೆ ನಡೆಸಿ, ಉಪವಾಸ ಕೆಡವಿ, ನೀರು ಕೊಡದೆ ಮಾಡಿದ ಹೇಯ ಕೆಲಸವನ್ನು ಅವನಿಗೆ ಜ್ಞಾಪಿಸುತ್ತಾ, ಬೆನ್ನಿಗೆ ಬಲವಾಗಿ ಬಾರಿಸುತ್ತಾ ನೀರು ಕೊಡಬೇಕು. ಆದರೆ ರಕ್ಷಣೆಯ ನೆಪದಲ್ಲಿ ನ್ಯಾಯಾಲಯದಿಂದ ಮರಣದಂಡನೆಗೆ ಗುರಿಯಾದವರಿಗೆ ತಿಂಗಳುಗಟ್ಟಲೆ, ಕೆಲವೊಮ್ಮೆ ವರ್ಷಗಟ್ಟಲೆ ಅವರಿಗೆ ರಕ್ಷಣೆ ನೆಪದಲ್ಲಿ ಸುಖ ಸವಲತ್ತುಗಳು ಮುಂದುವರಿಯುತ್ತವೆ. ಕೊನೆಗೊಮ್ಮೆ ಒತ್ತಾಯಕ್ಕೆ ಮಣಿದು ಅವನನ್ನು ಸಾಯಿಸಲಾಗುತ್ತದೆ. ಆ ಉಗ್ರ ಎಷ್ಟರಮಟ್ಟಿಗೆ ಶಿಕ್ಷೆ ಅನುಭವಿಸಿದ ? ಮರಣದಂಡನೆ ಆತನಿಗೆ ಸುಖಕರವಾಗಿ ಕಂಡು ನಮ್ಮ ತೆರಿಗೆ ಹಣ ನೀರಿನಂತೆ ಪೋಲಾಯಿತು, ಅಷ್ಟೆ.

ದೇಶ ವಿದೇಶಗಳಲ್ಲಿ ವಿಚಿತ್ರವಾದ ಮರಣ ದಂಡನೆಗಳಿವೆ, ಆದರೆ ಚರ್ಚಿಸಬೇಕಾದ ವಿಷಯವೇನೆಂದರೆ ಮರಣದಂಡನೆ ಸೂಕ್ತವೇ ಎನ್ನುವುದು. ಸರ್ಕಾರ ಉಗ್ರರನ್ನು, ಕೈದಿಗಳನ್ನು, ವರ್ಷಗಟ್ಟಲೆ ಕೂಡಿಹಾಕಿ ಕೊನೆಗೊಮ್ಮೆ ಕೊಂದುಬಿಡುವ ಶಿಕ್ಷೆಯಿಂದ ಸರ್ಕಾರಕ್ಕೆ ನಷ್ಟವೇ ಹೊರತು ಲಾಭವೇನಿಲ್ಲ, ಸರ್ಕಾರ ಇಂತಹವರಿಂದ ಮೈಮುರಿದು ದುಡಿಸಿಕೊಳ್ಳಬೇಕು, ಬೆವರಿಳಿಸಬೇಕು, ಅನ್ನ ನೀರಿನ ಬೆಲೆಯನ್ನು ಬಳಲಿಸಿ ತೋರಿಸಬೇಕು, ಮರಣ ಹೊಂದುವವರೆಗೂ ಇಂತಹವರಿಂದ ಮೈ ಮುರಿಯುವಂತೆ ದುಡಿಸಿಕೊಳ್ಳಬೇಕು, ಇವರಿಗೆ ಸಂಗೀತ, ಕಲೆ, ಮಂತ್ರೋಚ್ಚಾರಗಳನ್ನು ಕಲಿಸಬೇಕು, ಆತ ಎಷ್ಟರಮಟ್ಟಿಗೆ ದುರಹಂಕಾರಿಯೋ ಅಷ್ಟೇ ವಿಧಗಳಲ್ಲಿ ಪರಿಪರಿಯಾಗಿ ಬಾರಿಸಿ ಕೂಲಿಗೆ ಹಾಕಬೇಕು, ಮಣ್ಣು ಹೊರಲಿ, ಜಲ್ಲಿ–ಸಿಮೆಂಟ್ ಹೊರಲಿ, ಇಟ್ಟಿಗೆ ಹೊರಲಿ, ಅದೇ ನಿಜವಾದ ದಂಡನೆ.

ಪರಿವರ್ತನೆಯಿಲ್ಲದೆ ಸಾಯಿಸುವ ಕ್ರಿಯೆಯಲ್ಲಿ ಏನೇನೂ ಅರ್ಥವಿಲ್ಲ. ಸರ್ಕಾರ ಇಂತಹವರಿಂದ ಕೂಲಿ ಮಾಡಿಸಿ, ವ್ಯಕ್ತಿತ್ವ ಬದಲಿಸಿದರೆ ನಿಜವಾದ ದಂಡನೆ, ಜೀವಾವಧಿ ದಂಡನೆಯಾಗಬೇಕು. ಸಾಯಿಸಿಬಿಟ್ಟರೆ ಇಂತಹವರು ಹುಟ್ಟುತ್ತಲೇ ಇರುತ್ತಾರೆ, ಒಬ್ಬನನ್ನು ಬದಲಿಸಿದರೆ ಹಲವರನ್ನು ಬದಲಿಸುತ್ತಾನೆ, ಆತನಿಗೆ ವಿದ್ಯೆ ಜ್ಞಾನ ವಿವೇಕ ನೀಡುವ ಕೆಲಸವಾಗಬೇಕು.

■ **ಶಿವಪ್ರಸಾದ್**, ನೆಲಮಂಗಲ

## ಮರಣದಂಡನೆ ಸರಿಯಾದ ಶಿಕ್ಷೆ

ಕ್ಷುಲ್ಲಕ ಕಾರಣಗಳಿಗೆ ಕೊಲೆ, ಸುಲಿಗೆ, ದರೋಡೆಗಳು ನಡೆಯುತ್ತಿರುವ ಇಂದಿನ ದಿನಗಳಲ್ಲಿ ಮರಣದಂಡನೆಯಂಥ ಶಿಕ್ಷೆ ಅಗತ್ಯವಾಗಿ ಬೇಕಾಗಿದೆ.

ಸಮಾಜದಲ್ಲಿ ಮಾನವೀಯ ಮೌಲ್ಯಗಳು ಕುಸಿದು, ಸಮಾಜದ ಸ್ವಾಸ್ಥ್ಯವೇ ಕೆಡುತ್ತಿದೆ. ಹಣ–ಅಧಿಕಾರಕ್ಕಾಗಿ, ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುವುದಕ್ಕಾಗಿ 'ಏನು ಮಾಡಿದರೂ ನಡೆದೀತು' ಎಂಬಂತಹ ದಿಕ್ಕಿನಲ್ಲಿ ಸಮಾಜ ಸಾಗುತ್ತಿದೆ. ಇದಕ್ಕೆಲ್ಲ ಕಾರಣ ಬಿಗಿ ಇಲ್ಲದ ಆಡಳಿತ ಮತ್ತು ಕಾನೂನು ವ್ಯವಸ್ಥೆ. ನಮ್ಮ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳಲ್ಲಿ ಸೇವಾ ಮೌಲ್ಯಗಳ ಕುಸಿತವಾಗಿರುವುದರಿಂದ ಯಾವುದೇ ಅಪರಾಧಗಳು ಪತ್ತೆಯಾಗುವುದು ಕಷ್ಟವಾಗುತ್ತಿದೆ. ಪತ್ತೆಯಾದವು ಕೂಡ ಮುಚ್ಚಿಹೋಗುತ್ತಿವೆ. ಹಾಗೂ ಸಿಕ್ಕಿಬಿದ್ದ ಅಪರಾಧಿಗಳು ಜೈಲಿನ ಅಧಿಕಾರಿಗಳ ಸಹಾಯದಿಂದ ಆರಾಮ ಜೀವನ ನಡೆಸುವವರೂ ಪರಾರಿಯಾಗುವವರೂ ಇದ್ದಾರೆ.

ಇಲಾಖೆಗಳ ಇಂಥ ಭ್ರಷ್ಟ ವ್ಯವಸ್ಥೆಗಳಲ್ಲಿ, ಎಂಥಾ ಕ್ರೂರ ಅಪರಾಧಗಳನ್ನು ಮಾಡಿದವರಿಗೂ ಕೇವಲ 'ಜೀವಾವಧಿ' ಶಿಕ್ಷೆ ಎಂಬುದು ಅರ್ಥಹೀನ. ಎಷ್ಟೋ ಜನ ಅಪರಾಧಿಗಳು ಜಾಮೀನಿನ ಮೇಲೆ ಇಲ್ಲವೆ ಪರೋಲ್ ಮೇಲೆ ಹೊರಗಡೆ ಬಂದಾಗ ಮತ್ತೊಂದೆರಡು ಕೊಲೆಗಳನ್ನು ಮಾಡಿರುತ್ತಾರೆ. ಇಂಥವರಿಗೆ ಜೀವಾವಧಿ ಶಿಕ್ಷೆಯಿಂದ ಮನಃಪರಿವರ್ತನೆ ಮಾಡಲು ಸಾಧ್ಯವಿಲ್ಲ.

ಉತ್ತರ ಕನ್ನಡ ಜಿಲ್ಲೆಯ ೨೦ರ ತರುಣಿ ಅರುಣಾ ಶಾನ್‌ಭಾಗ್ ಮುಂಬೈನ ಆಸ್ಪತ್ರೆಯೊಂದರಲ್ಲಿ ನರ್ಸ್ ಆಗಿ ಕೆಲಸ ಮಾಡುತ್ತಿರುವಾಗ ಅಲ್ಲಿನ ಒಬ್ಬ ವಾರ್ಡ್‌ಬಾಯ್ ಎಸಗಿದ ಅತ್ಯಾಚಾರ, ಕ್ರೂರ ಹಲ್ಲೆಯಿಂದ ನಲವತ್ತೆರಡು ವರ್ಷ ಕೋಮದಲ್ಲಿದ್ದು, ಇತ್ತೀಚೆಗೆ ತೀರಿಕೊಂಡಿದ್ದು ಭಯಾನಕವಾದದ್ದು. ಆ ಅತ್ಯಾಚಾರಿಗೆ ಏಳು ವರ್ಷ ಮಾತ್ರ ಶಿಕ್ಷೆಯಾಗಿ ಅನಂತರ ಬಿಡುಗಡೆಯಾಗಿ ಬೇರೊಂದು ಮದುವೆಯಾಗಿದ್ದ. ಈ ಕೃತ್ಯವನ್ನೇ ಮರೆತು ಆರಾಮವಾಗಿದ್ದ. ಆದರೆ ಉಸಿರಿರುವವರೆಗೆ ಶಿಕ್ಷೆ ಅನುಭವಿಸಿದವಳು ಅರುಣಾ ಶಾನ್‌ಭಾಗ್. ಹುಟ್ಟಿದ ಪ್ರತಿಯೊಬ್ಬರಿಗೂ ಜೀವಿಸುವ ಹಕ್ಕಿದೆ ಎಂದು ಸಾರುವ 'ಮಾನವ ಹಕ್ಕುಗಳು' ಈ ರೀತಿಯ ದೌರ್ಜನ್ಯಕ್ಕೆ ಒಳಗಾದವರಿಗೂ ಇದ್ದವು. ಅದನ್ನು ಉಲ್ಲಂಘಿಸಿ ಕ್ರೂರ ಕೃತ್ಯಗಳನ್ನು ಎಸಗುವ ಕೊಲೆಗಡುಕರಿಗೆ ಮರಣದಂಡನೆಯೇ ಸರಿಯಾದ ಶಿಕ್ಷೆ.

■ **ಕೆ. ಎಸ್. ಪ್ರಭಾ**, ದೊಡ್ಡಬಳ್ಳಾಪುರ

# OUR ADVERTISERS



# ಬಹುಮುಖ ಪ್ರತಿಭೆಯ ಕಲಾವಿದೆ

## ರೂಪಶ್ರೀ ಕಲ್ಲಿಗನೂರ್





ಇಲ್ಲಸ್ಟ್ರೇಷನ್ ಹಾಗೂ ಚಿತ್ರಕಲೆಯಲ್ಲಿ ಪರಿಣತಿ ಹೊಂದಿರುವ ರೂಪಶ್ರೀ ಕಲ್ಲಿಗನೂರ್ ಬಹುಮುಖ ಪ್ರತಿಭೆಯ ಕಲಾವಿದೆ. ಬೆಂಗಳೂರಿನ ಕಲಾಮಂದಿರ ಕಲಾ ಶಾಲೆಯಲ್ಲಿ ಬಿವಿಎ ಹಾಗೂ ಮೈಸೂರಿನ ಡಿ.ಎಂ.ಎಸ್. ಕಲಾಶಾಲೆಯಲ್ಲಿ ಎಂ.ವಿ.ಎ. (ಚಿತ್ರಕಲೆ) ಪದವಿ ಪಡೆದಿದ್ದಾರೆ. ಟ್ರಯೋವರ್ಲ್ಡ್ ಶಾಲೆಯಲ್ಲಿ ಕಲೆ ಹಾಗೂ ವಿನ್ಯಾಸದ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ನಾಟಕ, ಕಾವ್ಯರಚನೆ, ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ವಿಶೇಷ ಆಸಕ್ತಿ ಹೊಂದಿದ ಇವರು ಬರಹಗಾರ್ತಿಯಾಗಿ ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಪ್ರಜಾವಾಣಿ ಪತ್ರಿಕೆಯಲ್ಲಿ ಕಲಾವಿದೆಯಾಗಿ ಹಾಗೂ ಶಾಸ್ತ್ರೀಯ ಸಂಗೀತದ ವರದಿಗಾರ್ತಿಯಾಗಿ ಕೆಲಸ ಮಾಡಿದ್ದಾರೆ. ಪ್ರಸ್ತುತ ಫ್ರೀಲಾನ್ಸ್ ಕಲಾವಿದೆಯಾಗಿ ಕ್ರಿಯಾಶೀಲರಾಗಿದ್ದಾರೆ.

– *ಚಿತ್ರಲೇಖ*















Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

